# ವಿಭೂತಿ

ಹಾನಗಲ್ಲ ಲಿಂ|| ಶ್ರೀ ನಿ. ಪ್ರ. ಕುಮಾರ ಶಿವಯೋಗಿ ಸ್ಮಾರಕ
ಶಿವಾದ್ವೈತ ತತ್ತ್ವಪ್ರಚಾರಕ ಸಮಿತಿಯ

ದ್ವಾದಶ ಮಹೋತ್ಸವ

ಮತ್ತು

ಸಂಸ್ಥಾಪಕರ ಷಷ್ಟ್ಯಬ್ಧ ಮಹೋತ್ಸವ ಗ್ರಂಥ



ಗಿರಿಯಾಪುರ

೧೯೬೧

# ವಿಭೂತಿ





ಹಾನಗಲ್ಲ ಲಿಂ|| ಶ್ರೀ ನಿ. ಪ್ರ. ಕುಮಾರ ಶಿವಯೋಗಿ ಸ್ಮಾರಕ
ಶಿವಾದ್ವೈತ ತತ್ತ್ವಪ್ರಚಾರಕ ಸಮಿತಿಯ

## ದ್ವಾದಶ ಮಹೋತ್ಸವ

ಮತ್ತು

## ಸಂಸ್ಥಾಪಕರ ಷಷ್ಠ್ಯಬ್ಧ ಮಹೋತ್ಸವ ಗ್ರಂಥ



ಗಿರಿಯಾಪುರ,
೧೯೬೧.

ಪ್ರಕಾಶಕರು:
**ಶಿವಾದ್ವೈತ ತತ್ತ್ವ ಪ್ರಚಾರಕ ಸಮಿತಿ**
ಗಿರಿಯಾಪುರ, ಚಿಕ್ಕಮಗಳೂರು ಜಿಲ್ಲೆ.







ಪ್ರತಿಗಳು : ೨,೦೦೦

**ಬೆಲೆ: ಎಂಟು ರೂಪಾಯಿ**



ಮುದ್ರಕರು:
ಶ್ರೀ ಸತ್ಯನಾರಾಯಣ ಪ್ರೆಸ್,
ಅರಳೆಪೇಟೆ : : ಬೆಂಗಳೂರು-೨

# ವಿಭೂತಿ

★

ನಡೆನುಡಿಯೊಂದಾಗಿ ಬೆಳಗಿ
ನಾಡವರಿಗೆ ಬೆಳಗನೀಯುತ್ತಿರುವ
ಶೀಲಸಂಪನ್ನ ತಪೋನಿಷ್ಪನ್ನ
ಭಾಷ್ಯಾಚಾರ್ಯ ಗುರುವರ್ಯ

ಷ. ಬ್ರ. ಶ್ರೀ.

## ಸದಾಶಿವ ಶಿವಾಚಾರ್ಯ

ಮಹಾಸನ್ನಿಧಿ[illegible]

# ಮೊರೆ



೧

ಓ ಗುರುವರ್ಯ ಗುಣಗಾಂಭೀರ್ಯ,
ನೀನು ಕಲಾಗುರು, ಕೈವಲ್ಯ ಕಲ್ಪತರು.
ಓ ಸದಾಶಿವ, ಸದಾಚಾರ ಪರಶಿವ,
ನಿನ್ನ ಚಿತ್ಕಳಾಸಂಜಾತರಾದ
ನಿನ್ನ ಚಿತ್ಪ್ರಸಾದ ಪರಿಪೂತರಾದ
ನಾವು ನಿನ್ನ ಸನ್ನಿಧಿಯಲ್ಲಿ ಪ್ರಾರ್ಥಿಸುವೆವು,
ಆಲಿಸು ಓ ಗುರುವರ್ಯ, ಗುಣಗಾಂಭೀರ್ಯ,
ನಮ್ಮ ಹೃದಯ ಹೂವ ಅರಳಿಸು. ಹದನಕಂಪು ಹರಡಿಸು
ಹದುಳದಿಂದಿರಿಸು, ಎದೆಯ ಹೊಂಪುಳಿಸು.

೨

ಓ ಗುರು ತಂದೆ, ನೀನೀ ಇಳೆಗೈತಂದೆ!
ನಿನಗಿಂದಿಗಾಯ್ತು ಅರವತ್ತು, ನಮಗಿದೆ ಸವಿದುತ್ತು.
ನಮ್ಮ ಬಾಳಿಗೆ ತಂದಿದೆ ಅಣಿಮುತ್ತು
ಓ ತಂದೆ! ಏಳೇಳು ಜನ್ಮದೊಳು ಬಂದು
ನಿನ್ನ ಮಣಿಹವನೆ ಮಾಡುವಂತೆ, ನಿನ್ನ ಮರೆಯದಂತೆ
ನಿನ್ನ ಘನತರಾನಂದಕೆ ಮನನಿಡುವಂತೆ.
ಕರುಣಿಸು, ನಿನ್ನ ಅಮೃತ ಕರಕಂಜಾತರಾಗಿಸು.

# ವಿಭೂತಿ



ನಡೆ ನುಡಿಯೊಂದಾಗಿ ಬೆಳಗಿ

ನಾಡವರಿಗೆ ಬೆಳಗನೀಯುತ್ತಿರುವ

ಶೀಲಸಂಪನ್ನ ತಪೋನಿಷ್ಪನ್ನ

**ಭಾಷ್ಯಾಚಾರ್ಯ ಗುರುವರ್ಯ**

**ಷ. ಬ್ರ. ಶ್ರೀ.**

## ಸದಾಶಿವ ಶಿವಾಚಾರ್ಯ

ಮಹಾಸನ್ನಿಧಿಯಲ್ಲಿ ಸಮರ್ಪಿಸಿದ

**ಕಿರುಕಾಣಿಕೆ.**

# ‘ ವಿಭೂತಿ ’ ಗ್ರಂಥ ಪ್ರಕಟನಾ ಶಾಖೆ

**ಅಧ್ಯಕ್ಷರು :**

ಶ್ರೀ ಸೂರ್ಯಸಿಂಹಾಸನಾಧೀಶ್ವರ ಶ್ರೀಮನ್ನಿಡುಮಾಮಿಡಿ ಶ್ರೀ ಶೈಲ
**ಜ. ಪ. ಚನ್ನಬಸವರಾಜ ದೇಶಿಕೇಂದ್ರ ಮಹಾನ್ನಿಧಿಯವರು,**
ಗೂಳೂರು.

**ಉಪಾಧ್ಯಕ್ಷರು :**

ಶ್ರೀ ಎ. ಸಿ. ಚಂದ್ರೇಗೌಡರು
ಶ್ರೀ ಜಿ. ಎಸ್. ಶಾಂತವೀರಪ್ಪನವರು
ಶ್ರೀ ಸಿದ್ದಪ್ಪ ಶಿವನಾಗಪ್ಪಶೆಟ್ಟರು

**ಸಲಹೆಗಾರರು :**

ಶ್ರೀ ಜಿ. ಕೆ. ಶಿವಲಿಂಗಪ್ಪನವರು
ಶ್ರೀ ಕೆ. ಆರ್. ಲಿಂಗಪ್ಪ, ಬಿ.ಎ., ಎಲ್.ಎಲ್.ಬಿ
ಶ್ರೀ ಜಿ. ಮಹಲಿಂಗಪ್ಪ, ಬಿ.ಕಾಂ.

**ಕೋಶಾಧ್ಯಕ್ಷರು :**

ಶ್ರೀ ಜಿ. ಸಿ. ಶಿವರುದ್ರಪ್ಪನವರು

**ಪ್ರಧಾನ ಕಾರ್ಯದರ್ಶಿಗಳು :**

ಶ್ರೀ ಗೊ. ರು. ಚನ್ನಬಸವಪ್ಪನವರು

**ಸಹಕಾರ್ಯದರ್ಶಿಗಳು :**

ಶ್ರೀ ಜಿ. ಸಿ. ಸಿದ್ದಪ್ಪನವರು

**ಸದಸ್ಯರು :**

ಶ್ರೀ ಎ ಎಂ. ಬಸವೇಗೌಡರು, ಬಿ.ಎ., ಎಂ ಎಲ್.ಎ.
ಶ್ರೀ ಟಿ. ಸಿ. ಮಂಜಪ್ಪಶೆಟ್ಟರು
ಶ್ರೀ ಟಿ. ಸಿ. ಶಾಂತಪ್ಪನವರು
ಶ್ರೀ ಎಸ್. ಸಿದ್ಧಪ್ಪನವರು
ಶ್ರೀ ಸಿ.ಆರ್. ಸದಾಶಿವ ಶಾಸ್ತ್ರಿಗಳು
ಶ್ರೀ ಸುರಗಿಹಳ್ಳಿ ಹಾಲಪ್ಪನವರು
ಶ್ರೀ ಬಿ.ಎಸ್. ಶಂಕರಪ್ಪಶೆಟ್ಟರು
ಶ್ರೀ ವೈ. ಎಂ. ಚಂದ್ರಶೇಖರಯ್ಯನವರು
ಶ್ರೀ ಹೆಚ್.ಎಂ. ಹಾಲಾರಾಧ್ಯರು
ಶ್ರೀ ವೇದಮೂರ್ತಿ ಸ್ವಾಮಿಗಳು, ಬಿ.ಎ., ಎಲ್.ಎಲ್.ಬಿ.
ಶ್ರೀ ಗುರುಶಾಂತಪ್ಪ ಕುಬುಸದ
ಶ್ರೀ ಚನ್ನಪ್ಪ ಮಾಸ್ತರ

# ಸಂಪಾದಕ ಮಂಡಲಿ

**ಅಧ್ಯಕ್ಷರು :**

**ಶ್ರೀ ಸೂರ್ಯಸಿಂಹಾಸನಾಧೀಶ್ವರ ಜ. ಚ. ನಿ. ಸನ್ನಿಧಿ,**

ಗೂಳೂರು.

**ಸದಸ್ಯರು :**

ಡಾ|| ಎಸ್. ಸಿ. ನಂದೀಮಠ, ಎಂ.ಎ., ಪಿ.ಹೆಚ್.ಡಿ.

ಆಸ್ಥಾನ ವಿದ್ವಾನ್ ಶ್ರೀ ಎಂ.ಜಿ. ನಂಜುಂಡಾರಾಧ್ಯ

ಶ್ರೀಮತಿ ಜಯದೇವಿ ತಾಯಿ ಲಿಗಾಡೆ

ಶ್ರೀ ಗ. ಶಿ. ಹುರುಳಿ

ಶ್ರೀ ಜಿ. ಎಂ. ಉಮಾಪತಿಶಾಸ್ತ್ರಿ, ಎಂ.ಎ.

ಶ್ರೀ ಪಂಚಾಕ್ಷರಿ ಹಿರೇಮಠ

**ಪ್ರಧಾನ ಕಾರ್ಯದರ್ಶಿ :**

ಶ್ರೀ ಗೊ. ರು. ಚನ್ನಬಸವಪ್ಪ

# ಮೊದಲ್ನುಡಿ



**ನಾ**ಡು ನುಡಿಗಳ ಸೇವೆಯಲ್ಲಿ, ಸಮಾಜ ಸಂಸ್ಕೃತಿಗಳ ಪ್ರಗತಿಯಲ್ಲಿ, ಶೀಲ-ಸಂಯಮಾದಿ ನೈತಿಕಾಚಾರ ಪಥದಲ್ಲಿ ಹೆಜ್ಜೆ ಹಾಕಿ ಮುಂದುವರಿದ ಜೀವನ ಅದೊಂದು ಮಹಾಜೀವನ. ಆ ಆದರ್ಶ ಜೀವನದ ಸಾಧನ ಸಂಪತ್ತಿ ಸಾಕಷ್ಟಿರುತ್ತದೆ. ಅದನ್ನು ಸಾಹಿತ್ಯ ಭಾಂಡಾಗಾರದಲ್ಲಿಟ್ಟು ಉಳಿಸಿ ಬೆಳೆಸಿಕೊಳ್ಳದಿದ್ದರೆ ಸಾಧಕ ಜನತೆಯ ಬಾಳಿಗೆ ಬೆಳಗಿಲ್ಲದಂತಾಗುತ್ತದೆ, ಬದುಕುವ ಕಣ್ಣಿಲ್ಲದಂತಾಗುತ್ತದೆ.

ಮಾನವ ಜೀವನ ಶೋಧನ ಅಗತ್ಯವೆಂದು ಒಪ್ಪುವುದಾದರೆ ಮಹಾನುಭಾವಿಗಳ ಸಾಧನ ಜೀವನಸಾಹಿತ್ಯ ಅತ್ಯಗತ್ಯ. ಆ ಸಾಹಿತ್ಯಾಭ್ಯಾಸದಿಂದ ಆತ್ಮನಲ್ಲಿ ಅಂತ ರಂಗದಲ್ಲಿ ಆಚಾರ-ವಿಚಾರಗಳ ಸಮನ್ವಯದ ಬೆಳೆ ಬೆಳೆಯಬಹುದಾಗಿದೆ. ಇದರಿಂದ ಬಾಳಿನ ಬಡತನ ತೀರುತ್ತದೆ. ಲೋಪದೋಷಗಳ ಸೆಳೆತ ಕಡಿಮೆಯಾಗುತ್ತದೆ. ಪಾಪತಾಪಗಳ ಸಂಕೋಲೆಗೆ ಸಿಕ್ಕದಂತಾಗುತ್ತದೆ. ಜಡತೆಯಿಂದ ಜೀವಂತತೆಗೆ, ಅಜ್ಞತೆಯಿಂದ ಸುಜ್ಞತೆಗೆ, ಕ್ಷಣಿಕತೆಯಿಂದ ಶಾಶ್ವತತೆಗೆ ನಿಲುಕುವಂತಾಗುತ್ತದೆ.

ಅಂತಹ ಉಜ್ಜೀವನಕ್ಕೆ ಬೇಕಾಗುವ ಉದಾತ್ತ ಚರಿತೆಯನ್ನು ಎಲ್ಲ ನಾಡು ಗಳಲ್ಲಿ ಎಲ್ಲ ದೇಶಗಳಲ್ಲಿ ಅನೇಕ ಮಹಾನುಭಾವರು ಅನುಗ್ರಹಿಸಿದ್ದಾರೆ; ಅನು ಗ್ರಹಿಸುತ್ತಿದ್ದಾರೆ. ಇಂಥವರಲ್ಲಿ **ಷ. ಬ್ರ. ಶ್ರೀ. ಸದಾಶಿವ ಶಿವಾಚಾರ್ಯ**ರೊಬ್ಬರು. ಇವರು ತಮ್ಮ ನಡೆ-ನುಡಿಗಳಿಂದ ತಮ್ಮನ್ನು ಮಾತ್ರ ಶೋಧಿಸಿಕೊಂಡಿಲ್ಲ; ನಾಡಿನ ಅನೇಕರನ್ನು ಶೋಧಿಸಿದ್ದಾರೆ; ಶುದ್ಧವಿಸಿದ್ದಾರೆ. ಇವರ ಶುದ್ಧನಡೆಗೆ ನಾನಾ ಮುಖಗಳಿದ್ದಂತೆ ಇವರ ಶುದ್ಧನುಡಿ ಸೇವೆಗೂ ನಾನಾ ಮುಖಗಳಿವೆ. ಭಕ್ತಜನ ಕೋಟಿಯ ಉದ್ಧಾರಕ್ಕಾಗಿ, ಶೀಲ ಸಂಸ್ಕೃತಿಗಳಿಗಾಗಿ ಶ್ರೀಗಳವರು ಸಲ್ಲಿಸಿರುವ ಸೇವೆ ಅನುಪಮವಾದುದು. ಅವರ ಬಾಳೊಂದು ವೃಕ್ಷವಲ್ಲ; ಕಲ್ಪವೃಕ್ಷ. ಆ ವೃಕ್ಷದ ಆಶ್ರಯ ಪಡೆದ ಭಕ್ತಜನ ತಮ್ಮ ಜೀವನವನ್ನೂ ಧರ್ಮಬದ್ಧವಾಗಿ ನಡೆಸಿದ್ದಾರೆ. ಶ್ರೀಗಳಿಂದ ಸ್ಥಾಪಿತವಾದ ಈ ಶಿವಾದ್ವೈತ ತತ್ತ್ವ ಪ್ರಚಾರಕ ಸಮಿತಿ ಅವರ ಸಾಧನೆಯ ಹಾದಿಯಲ್ಲಿ ಹಿರಿಯ ಗುರುತು.

ಹನ್ನೊಂದು ವರ್ಷಗಳ ಕಾಲ ಸತತವಾಗಿ ಶಿವಾನುಭವ ಸಮ್ಮೇಳನಗಳನ್ನು ನಡೆಸಿಕೊಂಡು ಬಂದ ಸಮಿತಿ ತನ್ನ ಹನ್ನೆರಡನೆಯ ವಾರ್ಷಿಕ ಮಹೋತ್ಸವವನ್ನು

ಆಚರಿಸುವ ಕಾಲಕ್ಕೆ ಸರಿಯಾಗಿ ಸಂಸ್ಥಾಪಕರಿಗೆ ಅರುವತ್ತು ತುಂಬಿರುವುದು ವಿಶೇಷವೇ ಸರಿ. ಶ್ರೀಗಳು ಸಮಿತಿಯ ಕಾರ್ಯ ಚಟುವಟಿಕೆಗಳಿಗಾಗಿ ಪಡುತ್ತಿರುವ ಶ್ರಮ ಅಷ್ಟಿಷ್ಟಲ್ಲ. ಧರ್ಮ ಮತ್ತು ಸಂಸ್ಕೃತಿಗಳು ಜನಮನದಲ್ಲಿ ಜಾಗೃತಿಯನ್ನುಂಟು ಮಾಡುತ್ತವೆಂಬ ಮಾತಿನ ಸತ್ಯವನ್ನು ಅವರ ಶ್ರಮ ನಮಗೆ ತೋರಿಸಿಕೊಟ್ಟಿದೆ.

ಇಂತು ಸತ್ಯದ ಮಹಾಬೆಳಗನ್ನು ಭಕ್ತಜನಕ್ಕೆ ತೋರಿಸುತ್ತಿರುವ ಈ ನಿತ್ಯ ನಿರ್ಮಲ ಜ್ಯೋತಿಗೆ ಭಕ್ತಿಯ ಕಾಣಿಕೆಯನ್ನು ಸಮರ್ಪಿಸುವುದು ಆದ್ಯ ಕರ್ತವ್ಯವೆಂದು ತಿಳಿದ ಮಹಾಜನರು ಕಳೆದ ವರ್ಷದ ಸಮ್ಮೇಳನದಲ್ಲಿ ಅಂತೆಯೇ ಸಂಕಲ್ಪಿಸಿದರು; '**ವಿಭೂತಿ**' ಗ್ರಂಥ ಪ್ರಕಟಿಸುವ ದೀಕ್ಷೆ ವಹಿಸಿದರು.

ಕಾಲಚಕ್ರದ ತಿರುಗಣೆಯಲ್ಲಿ ಏನೆಲ್ಲ ಸಂಪತ್ತುಗಳು ಸಿಡಿದೊಡೆದು ನಾಮಾವಶೇಷವಾಗಿವೆ. ಆದರೆ ಸಾಹಿತ್ಯದ ಶಕ್ತಿ ಮಾತ್ರ ಅವಿನಾಶಿಯಾಗಿ ದಿನದಿನಕ್ಕೆ ಹೊಸ ಬೆಳಕನ್ನು ಚೆಲ್ಲುತ್ತ ಬಂದಿದೆ. ನಿನ್ನೆ ಇದ್ದ ದ್ರವ್ಯರಾಶಿ, ಭವ್ಯದೇಹ ಇಂದಿಲ್ಲ. ಆದರೆ ನಿನ್ನೆ ಸೃಷ್ಟಿಯಾದ ಸಾಹಿತ್ಯದ ಸ್ಫೂರ್ತಿ, ಕೀರ್ತಿಗಳು ಇಂದೂ ಇವೆ. ಎಂದೆಂದಿಗೂ ಇರುತ್ತವೆ. ಆದುದರಿಂದ ಸ್ಥಿರ ಸತ್ಯವಾದ ಸಾಹಿತ್ಯದ ಕಾಣಿಕೆಯನ್ನು ಶ್ರೀಗಳಿಗೆ ಅರ್ಪಿಸುವುದು ಹೆಚ್ಚು ಸಮರ್ಪಕವೆಂದು ಕಾಣುತ್ತದೆ. ಅಂತೆಯೇ ಶ್ರೀಗಳವರ ಅಪೂರ್ವ ಸಾಧನಾಶಕ್ತಿಗೆ, ಬೆಳಗಿದ ಬಾಳಿಗೆ ಇದು ಅವಶ್ಯಕ. ಶ್ರೀಗಳಾದರೂ ಹಿರಿಯ ಸಾಹಿತಿ! ಸಮಿತಿಯ ಕಿರುಕಾಣಿಕೆ ಈ 'ವಿಭೂತಿ.'

ಕಾಣಿಕೆ ಅರ್ಪಿಸುವ ಅವಕಾಶ ಒದಗಲೂ ಪುಣ್ಯ ಬೇಕು. ಆ ಪುಣ್ಯ ಸಮಿತಿಗೆ ಒದಗಿ ಬಂದುದು ವಿಶೇಷ. ಅದರಲ್ಲೂ ಧರ್ಮಮೂರ್ತಿಗಳೂ, ಮಹಾವಿದ್ವಾಂಸರೂ, ಪ್ರಜಾಪ್ರೇಮಿಗಳೂ ಆದ ಮೈಸೂರು ರಾಜ್ಯಪಾಲರಾದ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ., ಎಲ್.ಎಲ್.ಡಿ. ಅವರ ಸಮ್ಮುಖದಲ್ಲಿ ಶ್ರೀಗಳವರಿಗೆ ಈ ಕಾಣಿಕೆಯನ್ನು ಸಮರ್ಪಿಸಲವಕಾಶವಾದುದು ಸುಯೋಗ. ನಮ್ಮ ಕಾಣಿಕೆ ಸಾರ್ಥಕವೆಂದು ನಮ್ಮ ನಂಬುಗೆ.

'ವಿಭೂತಿ'ಗೆ ಬೇಕಾದ ಸಾಧನ ಸಾಮಗ್ರಿಗಳನ್ನು ಕನ್ನಡ ನಾಡಿನ ಅನೇಕ ಲೇಖಕರು ಸಾಹಿತ್ಯ ರೂಪದಲ್ಲಿಯೂ, ಧರ್ಮಾಭಿಮಾನಿಗಳು ಹಣದ ರೂಪದಲ್ಲಿಯೂ ಒದಗಿಸಿದ್ದಾರೆ. ಆ ಮಹನೀಯರನ್ನೆಲ್ಲ ಹೃದಯಾರೆ ಸ್ಮರಿಸಿ ಕೃತಜ್ಞತೆ ಅರ್ಪಿಸುತ್ತೇವೆ.

ಸಂಪತ್ತು ಸಂಗ್ರಹಕ್ಕಿಂತ ಸಾಹಿತ್ಯ ಸಂಗ್ರಹ ಸಾಕಷ್ಟು ಶ್ರಮ ಕೊಡುತ್ತದೆ. ಆ ಶ್ರಮ ವಹಿಸಲು ಶಕ್ತಿ ಬೇಕು. ಸಾಹಿತ್ಯಶಕ್ತಿಯೇ ಮೈವೆತ್ತು ಬಂದಂತಿರುವ ಸಮಿತಿಯ ಮಹಾಪೋಷಕರಾದ ಶ್ರೀ ಸೂರ್ಯಸಿಂಹಾಸನಾಧೀಶ್ವರ **ಶ್ರೀಶೈಲ ಜ.ಪ. ಚನ್ನಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳವರ** ಅನಂತ ಶ್ರಮದ ಫಲವಾಗಿ

ನಮಗಿಂದು 'ವಿಭೂತಿ' ಧರಿಸಲು ಅವಕಾಶವಾಯಿತೆಂದು ಹೇಳಬೇಕು. ಮಹಾಸನ್ನಿಧಿಯವರಿಗೆ ಹೃತ್ಪೂರ್ವಕ ಪ್ರಣಾಮಗಳು.

ಸಂಪಾದನೆಯ ಕಾರ್ಯದಲ್ಲಿ ಹೆಚ್ಚಿನ ಶ್ರಮ ವಹಿಸಿದ ಧಾರವಾಡ ತಾರಾ ಗ್ರಂಥ ಪ್ರಕಾಶನದ ಶ್ರೀ ಪಂಚಾಕ್ಷರಿ ಹಿರೇಮಠ, ಅಂತೆ ನೆರವಾದ ಬಾಗಲಕೋಟಿ ಬಸವೇಶ್ವರ ಕಾಲೇಜಿನ ಶ್ರೀ ಜಿ. ಎಂ. ಉಮಾಪತಿಶಾಸ್ತ್ರಿ, ಎಂ.ಎ. ಅವರಿಗೂ ತುಂಬಾ ಕೃತಜ್ಞತೆಗಳು. ಸಾಹಿತ್ಯ ಸಂಗ್ರಹಕಾರ್ಯದಲ್ಲಿ ಸೇವೆ ಸಲ್ಲಿಸಿದ ಶ್ರೀ ಚ. ಸುಂದರೇಶ, ಬಿ.ಎ. (ಆನರ್ಸ್), ಧರ್ಮಕಾರ್ಯನಿರತ ಶ್ರೀ ಹೆಚ್. ನಂಜುಂಡಯ್ಯನವರು, ಶ್ರೀ ಈಶ್ವರಯ್ಯನವರು ಎಕ್ಕುಂಡಿಮಠ ಮುಂತಾದವರನ್ನೂ ನೆನೆಯದಿರಲಾರೆವು.

ಒಂದು ವ್ಯಸನದ ಸಂಗತಿ, ನಮ್ಮ ಸಂಪಾದಕ ಮಂಡಲಿಯಲ್ಲಿದ್ದ ಶ್ರೀ ಗ. ಶಿ. ಹುರುಳಿಯವರೂ, ಲೇಖಕ ಬಳಗದ ಡಾ|| ಬಿ. ಎಸ್. ಗದ್ದಿಗೀಮಠರವರೂ ಇಂದು ನಮ್ಮ ಕಣ್ಣುಮುಂದಿಲ್ಲ. ಶಿವೈಕ್ಯರಾದ ಅವರ ಆತ್ಮಕ್ಕೆ ಚಿರಶಾಂತಿ ಕೋರುತ್ತೇವೆ.

ಸಾಮಗ್ರಿಗಳ ಸಂಗ್ರಹವೆಷ್ಟಾದರೂ ಕಟ್ಟಡದ ಕಾರ್ಯ ಅತಿ ಮುಖ್ಯ. ಅಂತೇ ಈ 'ವಿಭೂತಿ'ಯನ್ನು ಸಕಾಲದಲ್ಲಿ ಸುಂದರವಾಗಿ ಸಿದ್ಧಮಾಡಿಕೊಟ್ಟ ಶ್ರೀ ಸತ್ಯನಾರಾಯಣ ಪ್ರೆಸ್ ಮಾಲಿಕರಿಗೆ ವಂದಿಸುತ್ತೇವೆ.

ಉಳ್ಳವರ ಮತ್ತು ಬಲ್ಲವರ ಭಕ್ತಿಯಿಂದ ಸಿದ್ಧವಾಗಿರುವ ಈ **'ವಿಭೂತಿ'** ನಾಡಿನ ಮಹಾಜನರ ಮಸ್ತಕದಲ್ಲಿ ರಾರಾಜಿಸಲಿ.

ಪ್ರಧಾನ ಕಾರ್ಯದರ್ಶಿ,
**ಗ್ರಂಥ ಪ್ರಕಟನಾ ಶಾಖೆ.**

ಗಿರಿಯಾಪುರ,
೫-೨-೬೧.

**ಸೂಚನೆ :**

ಪುಟ ೫೩೦ರಲ್ಲಿ ಲೇಖಕರ ಹೆಸರು ಮಠಾದ್ ಎಂದಿದೆ. ಅದನ್ನು ಮಠದ ಎಂದೂ, ಪುಟ ೬೭೫ರಲ್ಲಿ ಶ್ರೀ ಪಿ. ಸಿಂಗಾರುವೇಲು ಎಂಬುದಕ್ಕೆ ಬದಲಾಗಿ ಶ್ರೀ ಪಿ. ಸಿಂಗಾರುವೇಲು ಮೊದಲಿಯಾರ್ ಎಂದೂ ಓದಿಕೊಳ್ಳಬೇಕು.

# ಪರಿವಿಡಿ

●

## ದಳವೊಂದು
(ಸಂದರ್ಶನ)

## ದಳವೆರಡು

### ( ಸಾಮಾಜಿಕ ದರ್ಶನ )

## ದಳ ಮೂರು

### (ಸಾಹಿತ್ಯ ದರ್ಶನ)

——::——

## ದ್ವಾದಶ ವಾರ್ಷಿಕ ಮಹೋತ್ಸವದ ಉದ್ಘಾಟಕರು



ಕರ್ನಾಟಕ ರತ್ನ ಸಿಂಹಾಸನಾಧೀಶ್ವರ
ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜ ಒಡೆಯರ್
ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ., ಎಲ್.ಎಲ್.ಡಿ.
ಮೈಸೂರು ರಾಜ್ಯಪಾಲರು

॥ ಓಂ ॥

# ವಿಭೂತಿ

❖

## ಷ॥ ಬ್ರ॥ ಶ್ರೀ ಸದಾಶಿವ ಶಿವಾಚಾರ್ಯ ಮಹಾಸ್ವಾಮಿಗಳು

---

ಯದ್ಯದ್ವಿಭೂತಿಮತ್ಸತ್ವಂ ಶ್ರೀಮದೂರ್ಜಿತಮೇವ ವಾ ।
ತತ್ತದೇವಾವಗಚ್ಛ ತ್ವಂ ಮಮ ತೇಜೋಂಽಶಸಂಭವಂ ॥

—ಗೀತೆ.

### ಮುನ್ನೋಟ

" ಕಾನನದಿ ಮಲ್ಲಿಗೆಯು ಮೌನದಿಂ ಬಿರಿದು
ನಿಜ ಸೌರಭವ ಸೂಸಿ, ತಾನೆಲೆಯಃ ಪಿಂದಿರ್ದು
ದೀನತೆಯ ತೋರಿ ಅಭಿಮಾನವನು ತೊರೆದಿದೆ "

—ಕವಿವಾಣಿ ಕೈ ಬೀಸಿ ಕರೆಯುತ್ತಿದೆ ತನ್ನ ಸತ್ಯವನ್ನು ತೋರಿಸಲು. ಬನ್ನಿ ಹೋಗುವ. ಆ ಸತ್ಯ ದರ್ಶನದ ದಿವ್ಯ ತಾಣಕ್ಕೆ !

ಇಗೋ, ಇದೇ ಆ ತಾಣ. ಶ್ರೀ ಗುರು ಕುಮಾರಾಶ್ರಮ. ಪ್ರಶಾಂತ ವಾತಾವರಣ ! ಪವಿತ್ರ ಆವರಣ !

ಸುತ್ತಲೂ ನೆಲದ ಮಕ್ಕಳ ಶ್ರಮ !
ನಟ್ಟ ನಡುವೆ ಈ ದಿವ್ಯಾಶ್ರಮ !
ಶುದ್ಧ ಬಯಲು ; ಸಿದ್ಧ ಸ್ಥಲ !

ಆಶ್ರಮದ ಸಂಸ್ಥಾಪಕರಾದ ಷ॥ ಬ್ರ॥ ಸದಾಶಿವ ಶಿವಾಚಾರ್ಯರು ಸ್ಥಳವನ್ನು ಆರಿಸಿರುವುದರಲ್ಲೇ ದಿವ್ಯದೃಷ್ಟಿಯಿದೆ. ಗೊಂದಲಮಯ ಜಗತ್ತನ್ನು ಬಿಟ್ಟು ಗಿರಿಗಹ್ವರಗಳನ್ನು ಆರಿಸಬಹುದಿತ್ತು. ಆದರೆ ಬಯಲನ್ನು ಆರಿಸಿದ್ದಾರೆ. ಬಯಲನ್ನು ಆರಿಸಿರುವುದರಲ್ಲಿ ತುಂಬ ಅರ್ಥವಿದೆ; ಸತ್ಯವಿದೆ. ಬಯಲಿಗಿಂತ ಶಾಶ್ವತವಾದ, ಸತ್ಯವಾದ ತತ್ತ್ವ ಮತ್ತೊಂದಿಲ್ಲವೆಂತಲೇ ಬಯಲನ್ನು ಆರಿಸಿದ್ದಾರೆ. 'ಆಶ್ರಮ' ಶಬ್ದದ ಅರ್ಥ ನಿಜಕ್ಕೂ ಅನ್ವರ್ಥವಾಗಿದೆ; ಸಾರ್ಥಕವಾಗಿದೆ.

ಆಶ್ರಮದ ಆವರಣವನ್ನು ಪ್ರವೇಶಿಸುತ್ತಿದ್ದಂತೆಯೇ ಅವರ್ಣನೀಯ ಭಕ್ತಿಭಾವನೆಯೊಂದು ಮೈತುಂಬಿಕೊಳ್ಳುತ್ತದೆ. ಅದೆಷ್ಟು ನಿಶ್ಶಬ್ಧ ವಾತಾವರಣ! ಕೇಳಿದರೆ ಆಗೊಮ್ಮೆ ಈಗೊಮ್ಮೆ ಭಕ್ತರು ಬಾಜಿಸುವ ಗಂಟೆಯ ಓಂಕಾರ ನಿನಾದ! ಕೇಳುತ್ತಿದ್ದಂತೆ ವ್ಯಕ್ತಿಯ ಉನ್ಮಾದ!

ಆವರಣವಿದ್ದಂತೆ ಅಂತಃಕರಣ!
ಅಂತಃಕರಣವಿದ್ದಂತೆ ಆವಿಷ್ಕರಣ!
ಅಂತೇ ಈ ಆಶ್ರಮ, ಇಲ್ಲಿರುವ ಮಹಾಸ್ವಾಮಿಗಳು.

ಮಮತಾಮಯಿ ಮಾತೆಯ ಕರುಳು ಭಕ್ತರನ್ನು ಒಳಗೆ ಬರಮಾಡಿಕೊಳ್ಳುವಾಗ. ಆಶೀರ್ವಾದದ ಅಭಯಹಸ್ತ! ಮೈಮೇಲೆ ನಿರಾಡಂಬರ ಶುಭ್ರಕಾವಿವಸ್ತ್ರ! ಏನು ತೇಜಸ್ಸು ಆ ಅಮಾಯಕ ನಯನಗಳಲ್ಲಿ! ಕಂಡವರ ಕಣ್ಣು ಪಾವನ!

ಸದಾ ಹಸನ್ಮುಖ!
ನೋಡಿದಾಗ ನಮಗೆಷ್ಟು ಸುಖ!

ಕುಳಿತಲ್ಲಿ ಸುತ್ತ ಗ್ರಂಥಗಳ ರಾಶಿ. ಗೋಡೆಯ ಯಾವ ಭಾಗದಲ್ಲಿ ಕಣ್ಣರಳಿಸಿದರೂ ಕಂಗೊಳಿಸುವ ಆದ್ಯರ ಅನುಭವ ವಾಣಿಗಳ ಬರೆಹ. ನೋಡುತ್ತಿದ್ದಂತೆ ಮೈಮರೆಯುತ್ತದೆ. ಅಲೌಕಿಕ ಅನುಭವವೊಂದು ನಮಗುಂಟಾಗುತ್ತದೆ.

ಆ ಮಂದಿರದಲ್ಲಿ ದೇದೀಪ್ಯಮಾನವಾಗಿ ಪ್ರಕಾಶಿಸುತ್ತಿರುವ ಧರ್ಮಜ್ಯೋತಿಯೆದುರು ನಮ್ಮ ಕರ್ಮದ ಕತ್ತಲು ಕಳಚಿಹೋಗುತ್ತದೆ ಕೇವಲ ದರ್ಶನಮಾತ್ರದಿಂದ. ಇನ್ನು ಆ ಮಹಾಯೋಗಿಗಳ ಆಶೀರ್ವಾದ ಹಸ್ತ ಶಿರ ಮುಟ್ಟಿದಾಗ....

ಓ, ದೇಹದಲ್ಲಿ ಮಿಂಚಿನ ಸಂಚಾರ!
ಅವರ್ಣನೀಯ ಶಕ್ತಿಯ ಪ್ರಸಾರ!

ಆ ಮಿಂಚಿನ ಸಂಚಾರದಿಂದ ದೇಹದಲ್ಲಿನ ಏನೆಲ್ಲ ವಿಕೃತ ಭಾವನೆಗಳು ಮಂಜಿನಂತೆ ಕರಗುತ್ತವೆ.

ಶ್ರೀಗಳವರ ಶಕ್ತಿಯೇ ಅಂತಹುದು; ಅಹುದು. ಹಾಗಿರಲೇಬೇಕು. ಯಾವ ಶಕ್ತಿಯಲ್ಲಿ ಸಂಕುಚಿತತೆ, ಅಹಂಭಾವನೆ, ಆಡಂಬರಗಳ ಆಟ ನಡೆಯುವುದಿಲ್ಲವೋ ಆ ಶಕ್ತಿ ಭವ್ಯವಾಗಲೇಬೇಕು; ದಿವ್ಯವಾಗಲೇಬೇಕು. ಈ ಮಾತು ಶ್ರೀಗಳವರಿಗಂತೂ ಒಪ್ಪವಾಗಿ ಒಪ್ಪುತ್ತದೆ. ಆದುದರಿಂದ ಶ್ರೀಗಳವರನ್ನು ವ್ಯಕ್ತಿ ಎನ್ನುವುದಕ್ಕಿಂತ ಶಕ್ತಿ ಎನ್ನುವುದು ಹೆಚ್ಚು ಸಮಂಜಸ, ಸುಂದರ, ಸತ್ಯ. ಸತ್ಯವೂ ಸುಂದರವೂ ಆದ ಶಕ್ತಿ ಮಹಾಕಳೆಯಿಂದ ಕೂಡಿರಲೇಬೇಕು. ಕೂಡಿದೆ. ಅಂತಿರಲಿ. ನಾವೀಗ ಶ್ರೀಗಳವರ ಆದರ್ಶ ಬಾಳಿನ ಪರಿಚಯದ ಪಂಪಾ ಸರೋವರದಲ್ಲಿ ಮಿಂದು ಮಡಿಯಾಗುವ.

## ಸಂಜನನ

‘ ಆಯಿತ್ತು ಉದಯಮಾನ ! ’
ಇಪ್ಪತ್ತನೆಯ ಶತಮಾನದ ಸುಪ್ರಭಾತ !
ಈ ಮಂಗಳಜೀವಿಯ ಸಂಜನನ !

ಜಾಗತಿಕ ಜಗತ್ತಿನಲ್ಲಿ ಇಪ್ಪತ್ತನೇ ಶತಮಾನವು ಅತ್ಯಂತ ಮಹತ್ವಪೂರ್ಣವಾದುದು; ಕೌತುಕ ಪೂರ್ಣವಾದುದು. ನಿಸರ್ಗದ ಮೇಲೆ ಯಾಂತ್ರಿಕ ಜಾಲ ಹೂಡಿದ ವೈಜ್ಞಾನಿಕ ಪ್ರಗತಿ ಮಾತಿಗೂ ಮೀರುವಷ್ಟು ದೂರ, ಊಹೆಗೂ ನಿಲುಕದಷ್ಟು ಎತ್ತರ ಹೋಗುತ್ತಿರುವ ಕಾಲ. ಭೌತಿಕವಾದ ಬೃಹದಾಕಾರ ತಾಳಿ, ಆತ್ಮಿಕವಾದ ಅದೃಶ್ಯವಾಗುತ್ತಿರುವ ಸಂಕ್ಲಿಷ್ಟ ಸಮಯ.

ವಿಚಿತ್ರ ಕಾಲಮಾನದ ಸಮಯ !
ಸಾತ್ವಿಕ ಕಳೆಯ ಚಂದ್ರೋದಯ !

ಇದೊಂದು ವೈಶಿಷ್ಟ್ಯವೇ ಸರಿ. ವಿಜ್ಞಾನಕ್ಕೆ ಸುಜ್ಞಾನದ ಹಿನ್ನೆಲೆಯಿಲ್ಲದಿದ್ದರೆ ಅದು ಅಜ್ಞಾನವೇ ಹೌದು. ಆದುದರಿಂದ ಜಗತ್ತಿನಲ್ಲಿ ವಿಜ್ಞಾನಕ್ಕಿಂತ ಉನ್ನತವಾಗಿ ಜ್ಞಾನದ್ಯೋತಕವಾದ ಧರ್ಮವು ಬೆಳೆದು ಜಾಗೃತವಾಗಿರಬೇಕಾದುದು ಅವಶ್ಯಕವಿದೆ. ಶ್ರೀಗಳವರ ಜನನವಾದರೂ ಇದರ ಸಂಕೇತವಾಗಿತ್ತು. ಆತ್ಮಜ್ಞಾನಿ ಅಲ್ಲಮಾಪ್ರಭು ಹೇಳಿದ ಉದಯಮಾನ ಅದಾಗಿತ್ತು !

ಕ್ರಿ. ಶ. ಒಂದು ಸಾವಿರದೊಂಬೈನೂರ ಒಂದನೆ ವರ್ಷದ ಆರನೆಯ ತಿಂಗಳ ಹದಿಮೂರನೆಯ ದಿನ. ಶ್ರೀಗಳವರ ಜನನ. ಕಂಚುಗಲ್ಲು ಬಿದರೆಯ ಶ್ರೀ ಹಾಲಾರಾಧ್ಯರ ಧರ್ಮಪತ್ನಿ ಶ್ರೀಮತಿ ವೀರಮ್ಮತಾಯಿಯವರ ಪವಿತ್ರ ಗರ್ಭದಲ್ಲಿ ಉದಯವಾದ ಈ ಪಾವನಮೂರ್ತಿಗೆ ಪಿಣ್ಣಂಕಾರಾಧ್ಯ ಎಂದು ಹೆಸರಿಟ್ಟರು.

## ಬಾಲ್ಯ

ತುಂಬಿದ ಮನೆ ಹಾಲಾರಾಧ್ಯರದು. ಹಣಕಾಸಿಗೆ ಕಷ್ಟವಿದ್ದರೂ ಗುಣ-ಕರುಣೆಗಳಿಗೆ ಕೊರತೆಯಿರಲಿಲ್ಲ. ಬಡತನದ ಚಿಂತೆಯನ್ನು ಭಗವಂತನಿಗೆ ಬಿಟ್ಟು ಅಕ್ಕರೆಯಿಂದ ಮಕ್ಕಳನ್ನು ಸಾಕುತ್ತಿದ್ದ ವೀರಮ್ಮತಾಯಿ ಪಿಣ್ಣಂಕಾರಾಧ್ಯರನ್ನೂ ಅಪಾರ ಪ್ರೇಮದಿಂದ ಸಾಕಿ ಸಲಹಿದರು.

ಹಾಲುಗಲ್ಲದ ಹಸುಳೆ !
ನೇತ್ರದಲ್ಲಿ ಅಪೂರ್ವ ಕಳೆ !
ನಕ್ಕರೂ ಚೆಂದ !
ಅತ್ತರೂ ಚೆಂದ !

ಎಲ್ಲರೂ ಕಚ್ಚಿ ಮುದ್ದಾಡುವವರೇ. ಅಂದು ಮಮಕಾರದಿಂದ ಮಾತಾಪಿತರು ಕೊಟ್ಟ ಮುತ್ತುಗಳು ಆ ಮುಗ್ಧ ಶಿಶುವಿನ ದೇಹವನ್ನು ಮಂತ್ರಮಯವನ್ನಾಗಿ ಮಾಡಿದುವು.

ಪಿಣ್ಣಂಕಾರಾಧ್ಯ ಎಲ್ಲರ ಕಣ್ಮಣಿಯಾಗಿ ಬೆಳೆದರು. ವರ್ಷಗಳು ಆರು ಮೀರಿದರೂ ಅಕ್ಷರಾಭ್ಯಾಸಕ್ಕೆ ಆರಂಭವಿಲ್ಲ. ಮುದ್ದಿಸುವ ಭರದಲ್ಲಿ ಮಕ್ಕಳಿಗೆ ವಯಸ್ಸಾದುದೇ ತಂದೆ ತಾಯಿಗಳಿಗೆ ತಿಳಿಯಲಿಲ್ಲ. ಹಾಲಾರಾಧ್ಯರಿಗೆ ನೆರೆಯವರು ನೆನಪುಕೊಟ್ಟರು.

ಅಕ್ಷರಾಭ್ಯಾಸ ಊರಲ್ಲೇ ಆರಂಭವಾಯಿತು. ಆಗಿನ್ನೂ ಈಗಿನಂತೆ 'ಶಾಲೆ' ಮಠವಿಲ್ಲ, ಕೂಲಿ ಮಠ. ಶಿಕ್ಷೆಯಿಲ್ಲದೆ ಶಿಕ್ಷಣವಿಲ್ಲವೆಂಬ ತತ್ತ್ವ ರೂಢಿಯಲ್ಲಿದ್ದ ಕಾಲ ಓದಿಸುವ 'ಅಯ್ಯ'ಗಳೆಂದರೆ ಓದುವ ಮಕ್ಕಳಿಗೆ ಭಯ–ಭಕ್ತಿ. ಕಲಿಕೆಯಲ್ಲಿ ಆಸಕ್ತಿ. ಆದರೆ ಇಂದಿನ ವಿದ್ಯಾಭ್ಯಾಸದ ಮಟ್ಟ ಮತ್ತು ವಿದ್ಯಾರ್ಥಿಗಳಲ್ಲಿ ಬೆಳೆದಿರುವ ಅಶಿಸ್ತನ್ನು ನೋಡಿದರೆ ಹಿಂದಿನ ಶಿಕ್ಷಣ ಪದ್ಧತಿಯೇ ಸರಿಯೇನೋ ಎಂದು ಒಮ್ಮೊಮ್ಮೆ ಅನಿಸುತ್ತದೆ. ಅದೇನೇ ಇರಲಿ. ಪಿಣ್ಣಂಕಾರಾಧ್ಯರ ಭವಿಷ್ಯಕ್ಕೆ ಅಂದಿನ ಓದಿಸುವ ಅಯ್ಯಗಳ ಶಿಕ್ಷೆ ಭದ್ರಬುನಾದಿಯಾಗಿ, ದಿವ್ಯ ರಕ್ಷೆಯಾಯಿತೆಂದೇ ಹೇಳಬೇಕು.

ಅರ್ಧ ಮನೆಕೆಲಸ, ಅರ್ಧ ಓದು. ಹಾಗೂ ಹೀಗೂ ಸಾಗುತ್ತಿತ್ತು ಪಿಣ್ಣಂಕಾರಾಧ್ಯರ ವ್ಯಾಸಂಗ. ವಯಸ್ಸು ಮಾತ್ರ ಕುಂಟದೆ ನಡೆದಿತ್ತು. ಹತ್ತು ದಾಟಿತ್ತು.

ಪಿಣ್ಣಂಕಾರಾಧ್ಯರು ನಾಟಕಗಳಲ್ಲಿಯೂ ಭಾಗವಹಿಸುತ್ತಿದ್ದರು. 'ವೀರ ಬಭ್ರುವಾಹನ' ನಾಟಕದಲ್ಲಿ ಬಭ್ರುವಾಹನನ ಪಾತ್ರ ಆರಾಧ್ಯರಿಗೆ. ಎಳೆ ವಯಸ್ಸಿನಲ್ಲೇ ನಾಯಕ ಪಾತ್ರ ವಹಿಸಿದ್ದ ಅವರ ಧೀಶಕ್ತಿ ವಿಶೇಷವಾದುದೇ ಸರಿ. ಅದರಲ್ಲೂ ಬಭ್ರುವಾಹನನ ಪಾತ್ರ ವಹಿಸಿದುವರಲ್ಲಿ ಮತ್ತೊಂದು ಹಿರಿಮೆ. ತನ್ನ ತಾಯಿಗೆ ಅನ್ಯಾಯ ಮಾಡಿದ ಅರ್ಜುನನನ್ನು ಎದುರಿಸಿ ಸತ್ಯವನ್ನು ಬಯಲಿಗೆಳೆದ ವೀರ ಬಭ್ರುವಾಹನ. ಆ ಪಾತ್ರವನ್ನು ಅಚ್ಚುಮೆಚ್ಚಾಗಿ, ಪರಿಪೂರ್ಣವಾಗಿ ಅಭಿನಯಿಸಿದ ಪಿಣ್ಣಂಕಾರಾಧ್ಯರು ತಮ್ಮ ಬಾಳಿನ ಭವಿಷ್ಯದಲ್ಲೂ ಅಂತಹ ಒಂದು ಪಾತ್ರವನ್ನು ವಹಿಸಿಕೊಂಡೇ ಬಂದರು. ಧರ್ಮಕ್ಕೆ ಅಪಚಾರವಾದಾಗ ಬಭ್ರುವಾಹನನಂತೆ ಅದರ ರಕ್ಷಣೆಗೆ ಪಣತೊಟ್ಟು ಕಾಪಾಡುತ್ತ ಬಂದರು.

ನಾಟಕದ ಹುಚ್ಚು !
ಮನೆಯವರ ನೆಚ್ಚು !

ಹೀಗಾಗಿ ವ್ಯಾಸಂಗ ಅಷ್ಟಕ್ಕಷ್ಟೇ ಆಯಿತು. ಆ ವರ್ಷವೇ ಶ್ರೀಗಳು ಈಗಿರುವ ಗಿರಿಯಾಪುರಕ್ಕೆ ಬಂದು ಶಾಲೆಗೆ ಸೇರಿಕೊಂಡರು. ಆಗತಾನೆ ಗಿರಿಯಾಪುರಕ್ಕೆ ಹೊಸದಾಗಿ ಸರ್ಕಾರಿ ಶಾಲೆ ಬಂದಿತ್ತು. ಸರ್ಕಾರಿ ಶಾಲೆಯಲ್ಲಿ ಓದುವುದೆಂದರೆ ಆ ಕಾಲಕ್ಕೆ ದೊಡ್ಡ ವಿಷಯ. ಕೆಲವು ದಿನಗಳ ಅಭ್ಯಾಸ ನಂತರ ಅದೇಕೋ ಪಿಣ್ಣಂಕಾರಾಧ್ಯರು

ಮನೆ ಸೇರಿದರು. ಮನೆಗೆ ಬಂದ ಮಗನನ್ನು ತಂದೆತಾಯಿಗಳು ಸುಮ್ಮನೆ ಕೂರಿಸಲಿಲ್ಲ. ಕಾಯಕ ನಿರತರಾದ ಅವರು ಮಗನಿಗೆ ಒಳ್ಳೆ ಕಾಯಕವನ್ನೇ ನೇಮಿಸಿದರು. ದನ ಕಾಯುವ ಕಾಯಕ ಆರಾಧ್ಯರದಾಯಿತು. ಲೇಖನಿ ಹಿಡಿಯಬೇಕಾದ ಕೈ ಕೋಲು ಹಿಡಿಯಿತು. ಮುಂದೆ ಜನ ಕಾಯಬೇಕಾಗಿದ್ದುದರಿಂದಲೋ ಏನೋ ದನ ಕಾಯುವ ಕಾಯಕ ಅವರಿಗೆ ದೊರೆಯಿತು.

ಸಾತ್ವಿಕ ಜೀವಿಗಳ ಬಸಿರಿನಿಂದ ಬಂದ ಪಿಣ್ಣಂಕಾರಾಧ್ಯರು ಸಾತ್ವಿಕರಾಗಿಯೇ ಬೆಳೆದರು. ಶಾಲೆ ಬಿಟ್ಟರೂ ಓದಿನ ಗೀಳು ಬಿಡಲಿಲ್ಲ. ಬಿಡುವಾದಾಗ ಕೈಗೆ ಸಿಕ್ಕುವ ಪುಸ್ತಕಗಳನ್ನು ಓದುತ್ತಿದ್ದರು. ಭಕ್ತಿ ಗೀತೆಗಳನ್ನು ಹಾಡುತ್ತಿದ್ದರು.

ಬಾಲ್ಯ ಸಹಜವಾದ ಕೀಟಲೆ ಕೋಟಲೆ ಇಲ್ಲ.
ಪರಮಗಂಭೀರ ನಡೆ–ನುಡಿ.

—ಇವು ಪಿಣ್ಣಂಕಾರಾಧ್ಯರ ವೈಶಿಷ್ಟ್ಯವಾಗಿದ್ದುವು; ಭವಿಷ್ಯಕ್ಕೆ ಸಾಕ್ಷಿಯಾಗಿದ್ದುವು.

ಮತ್ತೇನೋ ಹೊಳೆಯಿತು ಆರಾಧ್ಯರಿಗೆ!
ಒಡೆದ ಹಲಗೆ!
ಮುರಿದ ಬಳಪ!
ಹರಿದ ಹೊತ್ತಗೆ!

ಹುಡುಕಿ ತೆಗೆದುಕೊಂಡು ಹೊರಟುಬಿಟ್ಟರು ಮತ್ತೆ ಗಿರಿಯಾಪುರಕ್ಕೆ. ಹಿಂದೆ ಬಿಟ್ಟುಹೋದ ವ್ಯಾಸಂಗ ಮುಂದುವರಿಯಿತು.

## ಗುರುಪುತ್ರ ; ಸಮರ್ಥ ಪಾತ್ರ

ಚಾರಿತ್ರಿಕ ಸ್ಥಳವಾದ ಸಖರಾಯಪಟ್ಟಣದ ಶ್ರೀ ಗುರು ಹಾಲುಸ್ವಾಮಿ ಮಠದ ಶ್ರೀ ಹಾಲುಸ್ವಾಮಿಗಳು ಅತ್ಯಂತ ದೀನಾವಸ್ಥೆಯಲ್ಲಿದ್ದ ಮಠವನ್ನು ಜೀರ್ಣೋದ್ಧಾರ ಮಾಡಿ, ಧರ್ಮ, ಭಕ್ತಿ, ಜ್ಞಾನಗಳಿಂದ ವಿಮುಖರಾಗುತ್ತಿದ್ದ ಭಕ್ತಾದಿಗಳಲ್ಲಿ ಮತ್ತೆ ಶ್ರದ್ಧೆ ಮೂಡಿಸಿ ಶುದ್ಧ ಆಸ್ತಿಕರನ್ನಾಗಿ ಮಾಡುವ ಸಾಮಾಜಿಕ ಸುಧಾರಣೆಯನ್ನು ಕೈಗೊಂಡಿದ್ದ ಕಾಲ. ಜನತಾಸೇವೆಯಲ್ಲಿ ಜೀವ ತೇದ ಶ್ರೀ ಹಾಲುಸ್ವಾಮಿಗಳವರ ದೇಹ ಹಣ್ಣಾಗಿತ್ತು.

ಉತ್ತರಾಧಿಕಾರಕ್ಕೆ ಯೋಗ್ಯ ವಟುವನ್ನು ಅರಸುತ್ತಿತ್ತು.

ಜಗತ್ತಿನಲ್ಲಿ ನಮಗೆ ಬೇಕಾದ ವಸ್ತುಗಳು ಬಹಳ ಇರಬಹುದು. ಆದರೆ ಯೋಗ್ಯವಾದುದು ಇರುವುದು ವಿರಳ. ಅಂತೇ ಶ್ರೀ ಹಾಲುಸ್ವಾಮಿಗಳು ಪರೀಕ್ಷಿಸಿದ ನೂರಾರು ವಟುಗಳಲ್ಲಿ ಅವರ ಪೂರ್ಣ ಸಮ್ಮತಿಗೆ ಸಂದ ವಟು ಕಂಚುಗಲ್ಲು ಬಿದರೆಯ ದನಗಾಹಿ ಪಿಣ್ಣಂಕಾರಾಧ್ಯರೊಬ್ಬರೇ.

ಕ್ರಿ. ಶ. ಒಂದು ಸಾವಿರದೊಂಭೈನೂರ ಹದಿಮೂರು.
ತಂದೆ ತಾಯಿಗಳು ಒಪ್ಪಲೊಲ್ಲರು.
ಶ್ರೀ ಹಾಲುಸ್ವಾಮಿಗಳು ಬಿಡಲೊಲ್ಲರು.

ಅಂತೂ ಒಪ್ಪಿಸಿದರು. ಪಿಣ್ಣಂಕಾರಾಧ್ಯರನ್ನು ಗುರುಪುತ್ರನನ್ನಾಗಿ ಶ್ರೀಗಳವರು ಸ್ವೀಕರಿಸಿದರು. ಪಿಣ್ಣಂಕಾರಾಧ್ಯರು ಸದಾಶಿವಮೂರ್ತಿಯಾದರು. ತಮ್ಮ ಮಠದ ಹಾಗೂ ಉತ್ತರಾಧಿಕಾರಿಯ ಭವಿಷ್ಯದ ಬಗ್ಗೆ ಭವ್ಯ ಕಲ್ಪನೆಯಿಟ್ಟುಕೊಂಡಿದ್ದ ಶ್ರೀ ಹಾಲುಸ್ವಾಮಿಗಳವರು ಸದಾಶಿವಮೂರ್ತಿಯ ಅಭ್ಯಾಸದ ಕಡೆ ಆದ್ಯ ಗಮನ ವಿತ್ತರು.

ಮಠಮಾನ್ಯಗಳ ಪೀಠಾಧಿಕಾರಿಗಳಾಗಲು ಯೋಗ್ಯ ಶಿಕ್ಷಣ ಬೇಕು. ಅಂತಹ ಶಿಕ್ಷಣ ಶಿವಯೋಗ ಮಂದಿರದಲ್ಲಿ ಮಾತ್ರ ದೊರೆಯುತ್ತಿತ್ತು. ಆದರೂ ಎಳೆವಯಸ್ಸಿನ ಸದಾಶಿವಮೂರ್ತಿಯನ್ನು ಅಷ್ಟು ದೂರ ಕಳುಹಿಸಲು ಶ್ರೀ ಹಾಲುಸ್ವಾಮಿಗಳವರು ಅಳುಕಿದರು.

## ಶಿವಯೋಗ ಮಂದಿರ

ಶಿವಯೋಗಿ ಮಂದಿರ !

ನೆನಪು ಬಂದರೆ ಸಾಕು ಹೃದಯ ತುಂಬಿ ಬರುತ್ತದೆ. ಅದು ಸಮಾಜಕ್ಕೆ ಬೇಕಾದ ಆದರ್ಶ ಧರ್ಮಗುರುಗಳನ್ನು ಸಿದ್ಧಮಾಡುವ ಸಂಸ್ಥೆ.

ಶುದ್ಧ ಆಧ್ಯಾತ್ಮಿಕ ಕೇಂದ್ರ ;
ವೀರಶೈವ ಸಂಸ್ಕೃತಿಯ ತೌರು !

ಅಲ್ಲಿ ಶಿಕ್ಷಣ ಪಡೆದ ಸಹಸ್ರಾರು ಜನ ಸಾಧಕರು ಇಂದು ದೇಶಾದ್ಯಂತ ಮಠಾಧಿಪತಿಗಳಾಗಿ, ಕಲಾವಿದರಾಗಿ, ಕೀರ್ತನಕಾರರಾಗಿ, ಸಂಗೀತಗಾರರಾಗಿ, ಸ್ವಯಂ ಸೇವಕರಾಗಿ, ವಿದ್ವಾಂಸರಾಗಿ, ಉಪದೇಶಕರಾಗಿ, ವಿವಿಧ ಕಾಯಕ ನಿರತರಾಗಿ ತಮ್ಮ ಅಮೂಲ್ಯ ಸೇವೆ ಸಲ್ಲಿಸುತ್ತಿದ್ದಾರೆ.

ಶಿವಯೋಗ ಮಂದಿರ ಕನ್ನಡ ನಾಡಿನ ಹೆಮ್ಮೆಯ ಸೊತ್ತು !
ಭಕ್ತ ಜನಕೋಟಿಗೆ ತೀರದ ಸಂಪತ್ತು !
ಆಧ್ಯಾತ್ಮ ಜ್ಞಾನದ ದಿವ್ಯಜ್ಯೋತಿ !

ಹಾನಗಲ್ಲ ಕುಮಾರ ಮಹಾಸ್ವಾಮಿಗಳವರ ಮಹಾಕೃತಿ: ಕನ್ನಡ ನಾಡಿನಾದ್ಯಂತ ತಪೋಧನರಾದ ಕುಮಾರ ಶಿವಯೋಗಿಗಳವರು ಸಂಚರಿಸಿ ಜನ-ಧನವನ್ನು ಸಂಗ್ರಹಿಸಿ ಇಂತಹ ಮಹಾಮಂದಿರವನ್ನು ಸ್ಥಾಪಿಸಿ ಮಹೋಪಕಾರ ಮಾಡಿದ್ದಾರೆ.

ಶಿವಯೋಗವ ಕಲ್ಪವೃಕ್ಷ ಶಿವಯೋಗ ಮಂದಿರ!

ಈ ಮಹಾ ವೃಕ್ಷದಡಿ ಆಶ್ರಯ ದೊರಕಲೂ ಪುಣ್ಯ ಬೇಕು. ಸದಾಶಿವ ಮೂರ್ತಿಗಳಿಗೆ ಪುಣ್ಯವಿದ್ದುದರಿಂದಲೇ ಅಲ್ಲಿ ಆಶ್ರಯ ದೊರಕಿತು. ಅವರ ಪುಣ್ಯವೊಂದೆಡೆಯಾದರೆ....

ಮತ್ತೊಂದೆಡೆ ಶ್ರೀ ಹಾಲುಸ್ವಾಮಿಗಳ ಆಶೀರ್ವಾದ!

ಮಗುದೊಂದೆಡೆ ಭಕ್ತಾದಿಗಳ ಅದೃಷ್ಟ!

ಸದಾಶಿವಮೂರ್ತಿಗಳ ಅಭ್ಯಾಸ ಆ ಮುಕ್ತಿ ಮಂದಿರದಲ್ಲಿ ಆರಂಭವಾಯಿತು. ಸತತವಾಗಿ ಹದಿಮೂರು ವರ್ಷಕಾಲ ವ್ಯಾಸಂಗ ನಡೆಯಿತು. ಪಿಣ್ಣಂಕಾರಾಧ್ಯರ ಹಿಂದಿನ ವ್ಯಾಸಂಗವಲ್ಲ. ಸುಂದರ ವ್ಯಾಸಂಗ. ಪರಿಪೂರ್ಣ ವ್ಯಾಸಂಗ.

ಮಂದಿರದಲ್ಲಿದ್ದಷ್ಟು ಕಾಲ ಸದಾಶಿವಮೂರ್ತಿಗಳು ಅಲ್ಲಿಯ ಘನ ನಿಯಮಗಳ ನಿಷ್ಠಾವಂತ ಪರಿಪಾಲಕರಾಗಿ, ಸಂಸ್ಥಾಪಕರ ಆತ್ಮೀಯ ಅನುಯಾಯಿಗಳಾಗಿ, ಆದರ್ಶ ಸಾಧಕರಾಗಿ, ಆಧ್ಯಾತ್ಮ ಜ್ಞಾನಿಗಳಾದರು. ಈ ಮಾತನ್ನು ಅವರ ಸಹಪಾಠಿಗಳಾಗಿದ್ದು ಇಂದು ಉನ್ನತ ಸ್ಥಾನಮಾನಗಳಲ್ಲಿರುವ ಅನೇಕ ಮಠಾಧಿಪತಿಗಳೂ, ಮಹನೀಯರೂ ಹೇಳುತ್ತಾರೆ.

ಮಂದಿರದ ಮಹೋದ್ದೇಶವಾಗಿದ್ದ ಶಿವಯೋಗ ಸಾಧನೆ ಸದಾಶಿವಮೂರ್ತಿಗಳಲ್ಲಿ ಸಂಪೂರ್ಣವಾಗಿತ್ತು.

ಸಾಹಿತ್ಯ ಸಹವಾಸ!

ಸತತ ಅಭ್ಯಾಸ!

ಸದಾಶಿವ ಮೂರ್ತಿಗಳಿಗೆ ಸ್ನೇಹಿತರ ಸಹವಾಸಕ್ಕಿಂತ ಸಾಹಿತ್ಯದ ಸಹವಾಸವೇ ಹೆಚ್ಚಿತ್ತೆಂದು ಕಾಣುತ್ತದೆ.

ಅಭ್ಯಾಸ ನಡೆಯುತ್ತಿದ್ದಂತೆಯೇ ಸಾಹಿತ್ಯ ಸೃಷ್ಟಿ!

ಪ್ರಾಚೀನ ಸಾಹಿತ್ಯ ಸಂಪಾದನೆ!

ಕ್ಲಿಷ್ಟ ತತ್ವಗಳಿಗೆ ಸ್ಪಷ್ಟ ವಿವರಣೆ!

—ಮುಂತಾದುವುಗಳ ಹವ್ಯಾಸ! ಶಿವಪೂಜೆಯೆಂದರೆ ಎಲ್ಲವನ್ನೂ ಮರೆತು ಬಿಡುವ ಮನೋಲ್ಲಾಸ!

ಸಾಧಕ ಗಣದಲ್ಲಿ ಸದಾಶಿವಮೂರ್ತಿಗಳದೇ ಒಂದು ವೈಶಿಷ್ಟ್ಯ. ನುಡಿಯಲ್ಲಿ ನಡೆಯಲ್ಲಿ ಹಿಡಿತವಿಟ್ಟುಕೊಂಡಿದ್ದ ಅವರು ಎಂದೂ ಯಾರೊಡನೆಯೂ ವಿರಸ ಕಟ್ಟಿಕೊಳ್ಳುತ್ತಿರಲಿಲ್ಲ. ಆದರೆ ಮಂದಿರದ ನಿಯಮಗಳಿಗೆ, ಶೀಲ-ಧರ್ಮಗಳಿಗೆ ಚ್ಯುತಿ ಬಂದಾಗ ಮಾತ್ರ ಅವರು ವ್ಯಗ್ರವಾಗುತ್ತಿದ್ದರು. ಮರುಕ್ಷಣದಲ್ಲೇ ದುಃಖಿತರಾಗುತ್ತಿದ್ದರು. ಅದೊಂದು ಗುಣವನ್ನು ಇಂದೂ ನಾವು ಕಾಣಬಹುದಾಗಿದೆ.

ಸದಾಶಿವಮೂರ್ತಿಗಳು ತಮ್ಮ ಜೊತೆಯ ಕೆಲವು ಸಾಧಕರಂತೆ ಶೀಘ್ರ ವಾಗಿಯೇ ಸಂಸ್ಕೃತ ಕಾವ್ಯಗಳ ಮತ್ತು ಪಾಣಿನಿಯ ವ್ಯಾಕರಣಶಾಸ್ತ್ರದ ಅಧ್ಯಯನ ಮಾಡಿ ಮುಗಿಸಿದರು.

ಪರಿಣಾಮವಾಗಿ ಅವರ ಜೀವನ ಪರಮಗುರಿಯನ್ನು ಮುಟ್ಟುವ ಹಿರಿಯ ಹಾದಿ ಹಿಡಿಯಿತು. ಸದಾಚಾರ, ಸದ್ವಿಚಾರ, ಸದ್ಗುಣಗಳ ಗಣಿಯಾಯಿತು. ಅವರ ಬಾಳುವೆ ಯೆಲ್ಲ ಸಾಹಿತ್ಯಮಯವಾಗಿ, ಸಂಸ್ಕೃತಿಮಯವಾಗಿ, ಆಧ್ಯಾತ್ಮಮಯವಾಯಿತು.

ಮಂದಿರದ ಸಂಸ್ಥಾಪಕರ ಬಯಕೆಯಾದರೂ ಅದೇ ಆಗಿತ್ತು.

ಮಂದಿರವನ್ನು ಸೇರಿದ ಐದಾರು ವರ್ಷಗಳಲ್ಲೇ ಸದಾಶಿವಮೂರ್ತಿಗಳು ಸಾಕಷ್ಟು ಶಾಸ್ತ್ರಾಧ್ಯಯನ ಮಾಡಿದ್ದರಲ್ಲದೆ ಆಗಲೇ ಪಾತಂಜಲ ಯೋಗ ಸಾಧಕ ರಾಗಿದ್ದರು.

ಯೋಗ ಸಾಧನೆಯ ಹಾದಿಯಲ್ಲಿ ಪೂರ್ಣ ಮಾರ್ಗದರ್ಶನ ಅವಶ್ಯಕವಿತ್ತು. ಅದೂ ದೊರೆಯಿತು.

ಕಂಚುಗಲ್ಲು ಬಿದರೆಯ ದೊಡ್ಡಮಠದ ಪರಮಪೂಜ್ಯ ಪ್ರಭುಕುಮಾರ ಪಟ್ಟಾ ಧ್ಯಕ್ಷರೂ ಅಲ್ಲೇ ಇದ್ದರಷ್ಟೆ. ಮಂದಿರದ ಹಿರಿಯ ಸಾಧಕರಾದ ಅವರು ಸದಾಶಿವ ಮೂರ್ತಿಗಳಲ್ಲಿ ಅಡಗಿದ್ದ ಅಪೂರ್ವ ಶಕ್ತಿಯನ್ನು ತಮ್ಮ ಅಂತರ್ ದೃಷ್ಟಿಯಿಂದ ಅರಿತುಕೊಂಡರು. ಅತ್ಯಂತ ಆಸ್ಥೆಯಿಂದ, ಅಭಿಮಾನದಿಂದ ಯೋಗ ವಿದ್ಯೆಯನ್ನು ತಾವೇ ಕಲಿಸತೊಡಗಿದರು.

ಕಲಿಸುವವರಿಗೆ ಕಲಿಸಬೇಕೆಂಬ ಹೃತ್ಪೂರ್ವಕ ಇಚ್ಛೆ,
ಕಲಿಯುವವರಿಗೆ ಕಲಿಯಬೇಕೆಂಬ ಮನಃಪೂರ್ವಕ ನಿಷ್ಠೆ

—ಇವೆರಡೂ ಇದ್ದರೆ ಮಾತ್ರ ಯಾವೊಂದು ವಿದ್ಯೆಯಾದರೂ ಸಾಧ್ಯವಾಗು ತ್ತದೆ. ಇಲ್ಲಿ ಅವೆರಡಕ್ಕೂ ಕೊರತೆಯಿರಲಿಲ್ಲ.

ಎರಡೂ ಎರಡು ಶಕ್ತಿಗಳು !
ಆ ಶಕ್ತಿಗಳಲ್ಲಿ ಅಂತಃಸತ್ವ ತುಂಬಿತ್ತು !

ಆದುದರಿಂದಲೇ ಸದಾಶಿವಮೂರ್ತಿಗಳಿಗೆ ಯೋಗ–ಶಿವಯೋಗಗಳಲ್ಲಿ ನಿಷ್ಣಾತ ರಾಗಿ ಸರ್ವಮನ್ನಣೆಯನ್ನು ಪಡೆಯಲು ತಡವಾಗಲಿಲ್ಲ. ದನಗಾಹಿ ಪಿಣ್ಣಂಕಾರಾಧ್ಯ ಗುಣಗ್ರಾಹಿ ಸದಾಶಿವಮೂರ್ತಿಯಾದುದನ್ನು ಕೇಳಿದಾಗ ಶ್ರೀಗುರು ಹಾಲುಸ್ವಾಮಿಗಳ ಹೃದಯ ಎಷ್ಟು ಹಿಗ್ಗಿರಲಿಕ್ಕಿಲ್ಲ? ಆ ಹಿಗ್ಗು ಉಕ್ಕಿ ಹರಿದಿರಲಿಕ್ಕಿಲ್ಲ!

## ಆ ಮಧ್ಯೆ

ಕಾಳಾಯುಕ್ತಿ ಸಂವತ್ಸರದ ವೈಶಾಖ ಮಾಸದ ಒಂದು ದಿನ. ಸದಾಶಿವ ಮೂರ್ತಿಗಳು ಎಂದಿನಂತೆ ಶಿವಪೂಜಾ ನಿರತರಾಗಿದ್ದಾರೆ.

ಅಂದೇನೋ ಎಂದಿಲ್ಲದ ಕಾತರ, ಕಳವಳ !
ಎಂದೂ ಹಾಗಾಗಿರಲಿಲ್ಲ !
'ಇಂದೇಕೆ ಹೀಗೆ?'

ಕಳವಳ ಕಳೆದುಕೊಳ್ಳಲು ಮಂತ್ರೋಚ್ಚಾರಣೆಯನ್ನು ಉಚ್ಚಸ್ವರದಲ್ಲಿ ಮಾಡಿದರು. ಪೂಜೆ ಮುಗಿಸಿ ಹೊರಬಂದರು.

ಹೊರಗೆ ಬಂದು ನೋಡಿದುದೇನು ?
ದುಃಖಾಚ್ಛಾದಿತವಾದ ಮ್ಲಾನವದನದ ಸಹಸಾಧಕರು !
ಸಹಿಸಲಾಗದ ನೀರವತೆ !

ಕಾರಣ ತಿಳಿಯಲು ತಡವಾಗಲಿಲ್ಲ. ಅವರ ಬಾಳನ್ನು ಹಿಡಿದೆತ್ತಿದ ಪರಮಹಂಸ ಶ್ರೀ ಹಾಲುಸ್ವಾಮಿಗಳವರು ಕಂಚುಗಲ್ಲು ಬಿದರೆಯಲ್ಲಿ ಲಿಂಗೈಕ್ಯರಾದರೆಂದು ತಂತಿ ಬಂದಿತ್ತು. ಹದಿನೆಂಟರ ಆ ಯುವಕ ಸಾಧಕ ಹಾಗೆ ಕುಸಿದುಬಿಟ್ಟರು. 'ಗುರುವೇ !' ಎಂದು ಗಳಗಳನೆ ಅತ್ತುಬಿಟ್ಟರು.

ನಗುವ ನೇತ್ರಗಳಿಗೆ ಹೊಗೆಯನೂದಿದ್ದ ವಿಧಿ !
ಅತ್ತರು. ಮತ್ತೆ ಅತ್ತರು.

ಅವರಿವರು ಸಂತೈಸಿದರು. ಏನಾದರೇನು ? ಸದಾಶಿವಮೂರ್ತಿಗಳಿಗೆ ಎಲ್ಲವೂ ಶೂನ್ಯವಾಗಿತ್ತು. ಸ್ವತಃ ಕುಮಾರ ಮಹಾಸ್ವಾಮಿಗಳವರೇ ಸ್ವಾಂತನ ಹೇಳಿದ ಮೇಲೆ ಶಾಂತರಾದರು.

ಶ್ರೀ ಕುಮಾರ ಶಿವಯೋಗಿಗಳ ಅಪ್ಪಣೆ ಪಡೆದು ತಿಂಗಳ ಗಣಾರಾಧನೆಗಾಗಿ ಬಿದರೆಗೆ ಬಂದರು. ಜೊತೆಯಲ್ಲಿ ಆತ್ಮೀಯ ಸಾಧಕರೂ ಕೆಲವರು ಬಂದಿದ್ದರು. ಹಾಗೆ ಬಂದಿದ್ದವರಲ್ಲಿ ಕೊಣ್ಣೂರು ಮಠದ ಶ್ರೀ ಗುರುಸಿದ್ಧದೇವರೂ (ಲಿಂ॥ ಹುಬ್ಬಳ್ಳಿಯ ಜಗದ್ಗುರು ಮೂರು ಸಾವಿರ ಮಠಾಧ್ಯಕ್ಷರು) ಒಬ್ಬರು.

ಶ್ರೀ ಪ್ರಭುಕುಮಾರ ಪಟ್ಟಾಧ್ಯಕ್ಷರು ಜೊತೆಯಲ್ಲಿ ಇದ್ದೇ ಇದ್ದರು. ತಿಂಗಳ ಕಾಲ ಗಣಾರಾಧನೆ ವಿಧಿವತ್ತಾಗಿ ನಡೆಯಿತು. ಪೂರ್ಣವಾಯಿತು. ಆದರೆ ?

ಭಕ್ತರ ಬಯಕೆ ಪ್ರಾರಂಭವಾಯಿತು.

ಉತ್ತರಾಧಿಕಾರ ವಹಿಸಿಕೊಳ್ಳುವಂತೆ ಸದಾಶಿವಮೂರ್ತಿಗಳಿಗೆ ಒತ್ತಾಯ ಹೆಚ್ಚಾಯಿತು.

ತಾವು ಕಲಿಯಬೇಕಾದ ಪಾಠಗಳು ಅಪಾರ !
ಆಗಲೇ ಪೀಠಾಧಿಕಾರ !

ಒಪ್ಪಲಿಲ್ಲ ಸದಾಶಿವಮೂರ್ತಿಗಳು. ವ್ಯಾಸಂಗ ಪೂರ್ಣ ಮಾಡಿಕೊಳ್ಳಲು ಅವಕಾಶ ಕೊಡಬೇಕೆಂದು ಹೇಳಿ ಶ್ರೀ ಪ್ರಭುಕುಮಾರ ಪಟ್ಟಾಧ್ಯಕ್ಷರೊಂದಿಗೆ ಶಿವಯೋಗ ಮಂದಿರಕ್ಕೆ ಹಿಂದಿರುಗಿದರು.

ಲಿ॥ ಹಾಲುಸ್ವಾಮಿಗಳು ಆಶಿಸಿದಂತೆ ಯೋಗ್ಯ ಅಧಿಕಾರಿಯಾಗುವಂತಹ ಪೂರ್ಣ ವಿದ್ಯೆಯನ್ನು ಪಡೆಯುವುದೇ ಪರಮ ಗುರಿಯೆಂದು ಭಾವಿಸಿದ ಸದಾಶಿವ ಮೂರ್ತಿಗಳು ಹೊಸ ಉತ್ಸಾಹದಿಂದ ವ್ಯಾಸಂಗ ಮುಂದುವರಿಸಿದರು.

ವ್ಯಾಸಂಗದಲ್ಲಿದ್ದ ಅವರ ಏಕಾಗ್ರತೆ ಕುಶಾಗ್ರತೆಗಳನ್ನು ಕುಮಾರ ಶ್ರೀಗಳು ಮನಸಾರೆ ಮೆಚ್ಚಿಕೊಳ್ಳುತ್ತಿದ್ದರು.

"ಶ್ರೀ ಸದಾಶಿವಮೂರ್ತಿಗಳ ಸಾರಸ್ವತ ತಪಸ್ಸು ಅವ್ಯಾಹತವಾಗಿ ಸಾಗಿತ್ತು. ಅವರ ತಪೋಭಂಗಮಾಡಲು ಯಾರಿಗೂ ಸಾಧ್ಯವಿರಲಿಲ್ಲ. ವೇದ ವೇದಾಂತಾದಿ ದರ್ಶನಗಳನ್ನೂ, ತರ್ಕವ್ಯಾಕರಣಾದಿ ಶಾಸ್ತ್ರಗಳನ್ನೂ ಕೇವಲ ಗ್ರಂಥಾವಲೋಕನ ದಿಂದಲೇ ಪೂರ್ಣ ಪರಿಚಯ ಮಾಡಿಕೊಂಡರು. ಗುರುಕೃಪಾ ವಿಶೇಷದಿಂದ ಅವು ಗಳನ್ನು ಅರಿತ ಅನುಭವದ ಜೊತೆಗೆ ಅಷ್ಟಾಂಗ ಯೋಗಾನುಷ್ಠಾನವು ತಕ್ಕಮಟ್ಟಿಗೆ ಸಾಂಗವಾಗಿ ಸಾಗಿತ್ತು. ಶಿವಾನುಭವ ಶಾಸ್ತ್ರವನ್ನು ಸಾಕ್ಷಾತ್ ಶ್ರೀ ಕುಮಾರಸ್ವಾಮಿ ಗಳ ಶ್ರೀಮುಖದಿಂದಲೇ ಅರಿತು ಅನುಭಾವಿಗಳಾಗಿದ್ದರು. ಶ್ರೀ ಕುಮಾರ ಸ್ವಾಮಿಗಳವರ ಸೇವಾದೀಕ್ಷೆಯಲ್ಲಿ ತಾವು ಭಾಗಿಗಳಾಗಿದ್ದರು. ಶ್ರೀಗಳು ಪ್ರವಾಸಗಳಲ್ಲಿ ಮೂರ್ತಿ ಗಳನ್ನು ಜೊತೆಗೆ ಕರೆದೊಯ್ದು ಮಠಾಧಿಪತ್ಯದ ಕರ್ತವ್ಯಗಳನ್ನು ಸೂಚಿಸುತ್ತಿದ್ದರು.

ಹಗಲಿರುಳೂ ಕುಮಾರ ಸ್ವಾಮಿಗಳೊಂದಿಗಿರುವ ಸೌಭಾಗ್ಯ ದೊರೆತ ಸಾಧಕರಲ್ಲಿ ಇವರೊಬ್ಬರು. ಇದರಿಂದಾಗಿ ಮೂರ್ತಿಗಳು ಶ್ರೀಗಳವರ ಅಂತರಂಗ ಮಿತ್ರರೂ, ಶಿಷ್ಯರೂ, ಸೇವಕರೂ ಆಗುವ ಭಾಗ್ಯ ದೊರೆತದ್ದು ಸದಾಶಿವಮೂರ್ತಿಗಳಿಗೇ ಎಂದರೆ ಅತಿಶಯೋಕ್ತಿಯಲ್ಲ. ಕ್ರಿ. ಶ. ಒಂದು ಸಾವಿರದೊಂಭೈನೂರ ಇಪ್ಪತ್ತಮೂರು– ಇಪ್ಪತ್ತನಾಲ್ಕನೇ ವರ್ಷ. ಹೈದರಾಬಾದ್ ಪರಳಿ ರುದ್ರಾಭಿಷೇಕ ಸಂಬಂಧವಾಗಿ ವೀರಶೈವ – ಶೈವಬ್ರಾಹ್ಮಣರಿಗೆ ನಡೆದ ವಿವಾದ ಸಂದರ್ಭದಲ್ಲಿ ಅಲ್ಲಿ ನೆರೆದಿದ್ದ ಮಹಾ ಪಂಡಿತರಲ್ಲಿ ಶ್ರೀ ಸದಾಶಿವಮೂರ್ತಿಗಳೂ ಒಬ್ಬರು. ಇವರು ಕುಮಾರಸ್ವಾಮಿಗಳವರ ಜೊತೆಗಿದ್ದು ವೀರಶೈವ ಧರ್ಮಗ್ರಂಥಗಳಿಂದ ವಿಪುಲವಾದ ಆಧಾರಗಳನ್ನು ಸಂಶೋಧಿಸಿ ಕೊಟ್ಟು ವೀರಶೈವವು ಪರಮ ವೈದಿಕವೆಂಬುದನ್ನು ಸ್ಥಾಪಿಸಿದ ಕೀರ್ತಿಗೆ ಭಾಗಿ ಗಳಾದರು. ಇದರಿಂದ ಸದಾಶಿವಮೂರ್ತಿಗಳ ಪ್ರತಿಭೆ ಪಾಂಡಿತ್ಯಗಳು ಪುಟವಿಟ್ಟ ಚಿನ್ನದಂತೆ ರಂಜಿಸಿದವು." *

ಶಿವಯೋಗ ಮಂದಿರದಲ್ಲಿದ್ದ ಸದಾಶಿವಮೂರ್ತಿಗಳ ಸ್ಪಷ್ಟ ಚಿತ್ರ ಮೇಲಿನ ಮಾತುಗಳಿಂದ ವ್ಯಕ್ತವಾಗುತ್ತದೆ.

ಮಂದಿರದ ಶಿಕ್ಷಣ ಮೂರ್ತಿಗಳಿಗೆ ಸಾಹಿತ್ಯ ಸಂಶೋಧನೆಯಲ್ಲಿ ಶಕ್ತಿ, ಸಾರ್ವ ಜನಿಕ ಸೇವೆಯಲ್ಲಿ ಸ್ಫೂರ್ತಿ, ಆದರ್ಶಜೀವನದ ರೀತಿ – ಮುಂತಾದುವುಗಳ ಮಾರ್ಗ

---

* ಶ್ರೀ ಗುರು ಹಾಲುಸ್ವಾಮಿಗಳು – ಶ್ರೀ ಎಂ. ಜಿ. ನಂಜುಂಡಾರಾಧ್ಯ.

ದರ್ಶನವಾಯಿತು. ಇಂದಿನವರೆಗೂ ಮಂದಿರದ ಶಿಕ್ಷಣ ಅವರನ್ನು ಹೊಂದಿಕೊಂಡೇ ಬಂದಿದೆಯೆಂದು ಹೇಳಬಹುದು.

## ಭಕ್ತರ ಬೇಡಿಕೆ

ಶ್ರೀ ಗುರು ಹಾಲುಸ್ವಾಮಿಗಳವರು ಲಿಂಗೈಕ್ಯರಾಗಿ ಎಂಟು ವರ್ಷ ಸಂದು ಹೋಗಿತ್ತು. ಮಠದ ಪರಿಸ್ಥಿತಿಯೂ ಚಿಂತಾಜನಕವಾಗಿತ್ತು. ಧರ್ಮಸಂಸ್ಥೆಯ ದೀನಾವಸ್ಥೆ ಭಕ್ತರಿಗೆ ತೀರ ವ್ಯಸನವುಂಟುಮಾಡಿತ್ತು. ಹಲವು ಜನ ಭಕ್ತ ಪ್ರಮುಖರು ಶಿವಯೋಗ ಮಂದಿರದಲ್ಲಿ ನಿಯೋಗ ಹೊರಟರು. ಸದಾಶಿವಮೂರ್ತಿ ಗಳಲ್ಲಿ ಬೇಡಿಕೆ ಸಲ್ಲಿಸಿದರು.

"ತಾವೀಗ ದಯಮಾಡಿಸಿ ಮಠದ ಉತ್ತರಾಧಿಕಾರ ವಹಿಸದಿದ್ದರೆ ಕೆಲವೇ ದಿನ ಗಳಲ್ಲಿ ಮಠವು ಪೂರ್ಣ ಇಲ್ಲವಾಗುತ್ತದೆ."

"ಇಲ್ಲ, ಯಜಮಾನರೇ, ದಯವಿಟ್ಟು ನನಗೆ ತೊಂದರೆ ಕೊಡಬೇಡಿ. ಬೇರೆ ಯಾರನ್ನಾದರೂ ನೋಡಿಕೊಂಡು ಬಿಡಿ."

"ಲಿಂ॥ ಸ್ವಾಮಿಗಳವರ ಆಸೆಯನ್ನು ತಿರಸ್ಕರಿಸಿ ಭಕ್ತರ ಬೇಡಿಕೆಯನ್ನು ನಿರಾ ಕರಿಸುವಿರಾ ?"

—ಬಂದಿದ್ದ ಭಕ್ತರು ತುಸು ವ್ಯಗ್ರವಾಗಿಯೇ ಪ್ರಶ್ನಿಸಿದರು.

ಆ ವ್ಯಗ್ರತೆಯಿಂದ ಮೂರ್ತಿಗಳ ಚಿತ್ತಶಾಂತಿಯೇನೂ ಭಗ್ನವಾಗಲಿಲ್ಲ. ಸಮಾ ಧಾನವಾಗಿಯೇ ಉತ್ತರಿಸಿದರು.

"ಹಾಗಲ್ಲ ಗೌಡರೇ, ಪೂಜ್ಯ ಶ್ರೀಗಳ ಆಸೆಯಂತೇ ನಾನು ಪೂರ್ಣ ವ್ಯಾಸಂಗ ಮಾಡುತ್ತಿದ್ದೇನೆ. ವ್ಯಾಸಂಗದ ಮಧ್ಯೆ ಈ ಸಂಗ ಹಚ್ಚಬೇಡಿ. ನಿಮ್ಮ ಕರುಣೆ."

ಭಕ್ತರ ಮಾತು ಮೂಕವಾಯಿತು. ಮುಂದೇನೆಂಬುದೇ ತೋಚದಾಯಿತು.

ಒಂದೆಡೆ—

ಮುಂದಿನ ಜೀವನಕ್ರಮಕ್ಕೆ ಬೇಕಾದ ಸಾಮರ್ಥ್ಯ ಸಾಧನಗಳನ್ನು ಸಮಂಜಸ ವಾಗಿ ಹೊಂದಿಸಿಕೊಂಡು ಪೂರ್ಣತೆ ಪಡೆದುಕೊಳ್ಳಬೇಕೆಂದು ನಿಶ್ಚೈಯಿಸಿರುವ ಸದಾಶಿವಮೂರ್ತಿ !

ಮತ್ತೊಂದೆಡೆ—

ಸಖರಾಯಪಟ್ಟಣದ ಸುತ್ತಮುತ್ತಣ ಜನಾಂಗದ ಜೀವನಾಡಿಯಂತಿದ್ದ ಮಠದ ಹೀನಸ್ಥಿತಿ !

ಭಕ್ತರು ಬಹಳ ಆಸೆಯಿಟ್ಟುಕೊಂಡೇನೋ ಬಂದಿದ್ದರು. ಆದರೆ ಬರಿಕೈಯಲ್ಲಿ ಬಂದ ದಾರಿ ಹಿಡಿಯಬೇಕಾಯಿತು.

ಹಾಗೆ ಬರಿಕೈಯಲ್ಲೂ ಹೋಗುವಂತಿರಲಿಲ್ಲ.

ಬೇರೊಂದು ನಿರ್ಧಾರಕ್ಕೆ ಬಂದುಬಿಟ್ಟರು.

ಬೇರೊಬ್ಬ ಉತ್ತರಾಧಿಕಾರಿಯನ್ನು ಅರಿಸಿಕೊಂಡು ಹಿಂತಿರುಗಿದರು. ಕಾದು ಕುಳಿತಿದ್ದ ಶಿಷ್ಯಮಂಡಳಿ ನಿರಾಶೆಯ ಮಡುವಿನಲ್ಲಿ ಮುಳುಗಿದರು. ಆದರೂ ಸದಾಶಿವ ಮೂರ್ತಿಗಳ ಬಗ್ಗೆ ಇನ್ನೂ ಆಸೆ ಇಟ್ಟುಕೊಂಡೇ ಇದ್ದರು.

ಲಿಂ|| ಗುರುಗಳ ಅಪ್ಪಣೆ!
ಸದಾಶಿವಮೂರ್ತಿಗಳಿಗೆ ಉತ್ತರಾಧಿಕಾರ!

—ಭಕ್ತರಲ್ಲಿ ಅನೇಕರು ಮತ್ತೆ ಪಟ್ಟು ಹಿಡಿದರು. ಆದರೇನು ಅವರ ಪಟ್ಟಿಗೆ ಮೂರ್ತಿಗಳು ಸಿಕ್ಕುವಂತಿರಲಿಲ್ಲ.

ಪರಮಾರ್ಥದ ಗಗನದಲ್ಲಿ ವಿಹರಿಸುತ್ತಿದ್ದ ಪಕ್ಷಿ ಪಟ್ಟಾಧಿಕಾರದ ಪಟ್ಟಿಗೆ ಸಿಕ್ಕು ವಂತಿರಲಿಲ್ಲ. ಭಕ್ತರು ಹತಾಶರಾದರು. ಹೊಸದಾಗಿ ಆರಿಸಿಕೊಂಡು ಬಂದಿದ್ದ ಮೂರ್ತಿಗೇ ಉತ್ತರಾಧಿಕಾರ ವಹಿಸುವ ಸಿದ್ಧತೆ ನಡೆಸಿದರು.

ನಿರ್ವಾಹವಿಲ್ಲ. ಮಠದ ಸ್ಥಿತಿ ಹಾಗಿತ್ತು!
ಯಾರಾದರೂ ಒಬ್ಬ ಅಧಿಕಾರಿಯ ಅವಶ್ಯಕವಿತ್ತು!

ಉತ್ತರಾಧಿಕಾರ ಮಹೋತ್ಸವಕ್ಕೆ ಪ್ರತ್ಯಕ್ಷ ಶ್ರೀಕುಮಾರ ಮಹಾಸ್ವಾಮಿಗಳವರೇ ದಯಮಾಡಿಸಿದ್ದರು. ತಾನು ತಪ್ಪಿಸಿಕೊಂಡನೆಂಬ ಹಿಗ್ಗಿನಿಂದ ಸದಾಶಿವಮೂರ್ತಿ ಗಳೂ ಬಂದರು. ತಮ್ಮ ಜೊತೆಯ ಕೆಲವು ಸಾಧಕ ಗೆಳೆಯರನ್ನೂ ತಂದರು.

ಸದಾಶಿವಮೂರ್ತಿಗಳು ಬಂದಿರುವ ಸುದ್ದಿ ಭಕ್ತರಿಗೆ ತಿಳಿಯಿತು. ಹತಾಶ ರಾಗಿದ್ದ ಅವರು ಮತ್ತೆ ಹೊಸ ಆಸೆಯನ್ನು ಹಚ್ಚಿಕೊಂಡರು. ಅಂತಿಮ ಪ್ರಯತ್ನ ಮಾಡಬೇಕೆಂದು ನಿರ್ಧರಿಸಿದರು

ಸಾರಿ ಭಕ್ತರು ಒಳ್ಳೆಯ ಬಲೆಯನ್ನೇ ಬೀಸಿದರು!

ಶ್ರೀ ಕುಮಾರಸ್ವಾಮಿಗಳಿಗೆ ಶರಣಾದರು. ಸದಾಶಿವಮೂರ್ತಿಗಳನ್ನು ಒಪ್ಪಿಸಿ ತಮ್ಮ ಮನೀಷೆಯನ್ನು ಈಡೇರಿಸಬೇಕೆಂದು ಅಂಗಲಾಚಿದರು.

ಭಕ್ತರ ಕರುಳ ಮಿಡಿತವನ್ನೂ ಲಿಂ|| ಶ್ರೀ ಹಾಲುಸ್ವಾಮಿಗಳವರ ಮೂಲ ದೃಷ್ಟಿಯನ್ನೂ ಅರ್ಥಮಾಡಿಕೊಂಡ ಶ್ರೀ ಕುಮಾರ ಸ್ವಾಮಿಗಳವರು ಸದಾಶಿವ ಮೂರ್ತಿಯನ್ನು ಹತ್ತಿರ ಬರಮಾಡಿಕೊಂಡು,

"ಭಕ್ತರ ಬಯಕೆ ಯುಕ್ತವಾಗಿದೆ.
ಆ ಶಕ್ತಿಯೂ ನಿನಗಿದೆ.
ಒಪ್ಪಿಕೊಳ್ಳುವುದೇ ಸೂಕ್ತವಿದೆ."

—ಎಂದು ಅಪ್ಪಣೆ ಕೊಡಿಸಿದ ಮಾತನ್ನು ಮೀರುವ ಸಾಹಸವೊಂದು ಸದಾಶಿವ ಮೂರ್ತಿಗಳಿಗೆ ಸಾಧ್ಯವಾಗಲಿಲ್ಲ.

ತಾನು ತಪ್ಪಿಸಿಕೊಂಡೆನೆಂಬ ಹಿಗ್ಗಿನಿಂದ ಬಂದಿದ್ದ ಸದಾಶಿವಮೂರ್ತಿಗಳನ್ನು ಒಪ್ಪಿಸಿಯಾಯಿತು. ಭಕ್ತಾದಿಗಳ ಹಿಗ್ಗು ಹೇಳತೀರದು.

"ಹಾನಗಲ್ಲು ಶ್ರೀಗಳವರು ಅಪ್ಪಣೆ ಕೊಡಿಸಿದ ಬೋಧಪ್ರದ ಅಮೃತವಾಣಿಯು ಸದಾಶಿವಮೂರ್ತಿಗಳ ಸುಪ್ತಪ್ರಜ್ಞೆಯನ್ನು ಪ್ರಬೋಧಗೊಳಿಸಿತು.

"ಸಿಂಹಾಸನವನ್ನೇರಿದರೂ ಪರಮಹಂಸನಾಗಿರಬೇಕು.

ನೀರಿನಲ್ಲಿನ ಕಮಲದೆಲೆಯಲ್ಲಿ ಭೌತಿಕ ಸಂಪತ್ತಿನ ಬಗ್ಗೆ ಅನಾಸಕ್ತನಾಗಿರ ಬೇಕು"

—ಎಂಬ ನುಡಿಗಳು ಮೂರ್ತಿಯ ಹೃದಯದಲ್ಲಿ ಪ್ರತಿಧ್ವನಿಸತೊಡಗಿದವು. ಇದೇ ಧ್ಯೇಯ ಸಾಧನೆಗಾಗಿ ಸದಾಶಿವಮೂರ್ತಿಗಳು ಆಶ್ರಮ ಸ್ವೀಕಾರಕ್ಕೆ ಅನು ಮತಿಸಿದರು. ತಾವು ಮಂದಿರದಲ್ಲಿ ಅವ್ಯಾಹತವಾಗಿ ಅಭ್ಯಸಿಸಿದ ಸಾರಸ್ವತ ಸಂಪ ತ್ತನ್ನು, ಅನುಭವ ರಸಾಯನವನ್ನು ಸಾಮಾನ್ಯ ಭಕ್ತನಿಗೂ ಸಮಸ್ತ ಜನತೆಗೂ ಹಂಚಿಕೊಡುವ ಧೃಡನಿರ್ಧಾರ ಮಾಡಿದರು.

ತಮಗೆ ಅಥವಾ ವೀರಶೈವ ಸಮಾಜಕ್ಕೆ ಆದರ್ಶರಾಗಿ ಭಾರತದ ಸಂಸ್ಕೃತಿಗೆ ಅಪಾರ ಸೇವೆ ಸಲ್ಲಿಸುತ್ತಿರುವ ಶಿವಾನುಭವ ಭವ್ಯರ್ಷಿ ಕುಮಾರಸ್ವಾಮಿಗಳವರ ಜ್ಞಾನಜ್ಯೋತಿಯಿಂದ ತಮ್ಮ ಹೃದ್ಜ್ಯೋತಿಯನ್ನು ಬೆಳಗಿಸಿಕೊಂಡ ಋಣವನ್ನು ತೀರಿಸಲು, ಆ ದಿವ್ಯ ಪ್ರಕಾಶವನ್ನು ನಾಡಿನಲ್ಲೆಲ್ಲ ಹರಡುವುದಾಗಿ ಸಂಕಲ್ಪಿಸಿದರು. ಕುಮಾರ ಶಿವಯೋಗಿಗಳ ಪ್ರತಿಬಿಂಬವಾಗಿ ಸೇವೆ ಸಲ್ಲಿಸಲು ನಿರ್ಧರಿಸಿದರು. ಗುರುವಿನ ಆಶೀರ್ವಾದ ಪಡೆದು ಸಚ್ಚಿದ್ಗುರುವನ್ನು ಹೃದಯದಲ್ಲಿ ಸೆರೆಹಿಡಿದು ಒಪ್ಪಿದರು." *

## ಪಟ್ಟಾಧಿಕಾರ ಸ್ವೀಕಾರ

ಅಕ್ಷಯನಾಮ ಸಂವತ್ಸರದ ವೈಶಾಖ ಬ॥ ಎರಡನೆಯ ದಿನ. ಸದಾಶಿಮೂರ್ತಿ ಗಳಿಗೆ ಪಟ್ಟಾಧ್ಯಕ್ಷ ಪದವಿ ಪ್ರಧಾನ.

ಏನು ಮಂಗಳ ಘೋಷ !
ಏನು ಭಕ್ತಜನರ ಸಂತೋಷ !

ಕನ್ನಡನಾಡಿನ ಮೂಲೆ ಮೂಲೆಯಿಂದ ಅನೇಕ ಹರ ಗುರುಚರಮೂರ್ತಿಗಳೂ, ಪರಮ ಭಕ್ತಾದಿಗಳು ಕಿಕ್ಕಿರಿದು ತುಂಬಿದ್ದಾರೆ. ಪ್ರತ್ಯಕ್ಷ ಹಾನಗಲ್ಲ ಕುಮಾರ ಮಹಾಸ್ವಾಮಿಗಳೇ ಮಹೋತ್ಸವದಲ್ಲಿ ಮಾರ್ಗದರ್ಶನ ಮಾಡುತ್ತಿದ್ದರೆಂದರೆ ಕೇಳ ಬೇಕೆ ? ಮಹೋತ್ಸವ ಪರಿಪೂರ್ಣವಾಗಿ ನಡೆಯಿತು.

* ಶ್ರೀ ಗುರುಸ್ವಾಮಿ ಚರಿತ್ರೆ – ಶ್ರೀ ಎಂ. ಜಿ. ನಂಜುಂಡಾರಾಧ್ಯರು.

ಬಿದರೆ ದೊಡ್ಡಮಠದ ಪಟ್ಟಾಧ್ಯಕ್ಷ ಶ್ರೀ ಪ್ರಭುಕುಮಾರ ಮಹಾಸ್ವಾಮಿಗಳವರ ಅಮೃತ ಹಸ್ತದಿಂದ ಅಧಿಕಾರ ಪ್ರಧಾನ ನಡೆದುದು ಒಂದು ವಿಶೇಷವಾಗಿತ್ತು.

ಶಿವಯೋಗ ಮಂದಿರದ ಸಾಧಕರಾಗಿದ್ದ ಸದಾಶಿವಮೂರ್ತಿ ಷ|| ಬ್ರ|| ಶ್ರೀ ಸದಾಶಿವ ಶಿವಾಚಾರ್ಯ ಮಹಾಸ್ವಾಮಿಗಳವರಾದರು. ಅಧಿಕಾರ ವಹಿಸಿಕೊಂಡ ಮೇಲೆ ಶ್ರೀಗಳು ಮಾಡಬೇಕಾದ ಕೆಲಸ ಬಹಳವಿತ್ತು. ಕಳೆದ ಎಂಟು ವರ್ಷಗಳಿಂದ ಕುಂಠಿತವಾಗಿದ್ದ, ಬತ್ತಿಹೋಗಿದ್ದ ಭಕ್ತರ ಬಾಳಿಗೆ ಭರವಸೆ, ನೊಂದ ಜೀವಿಗಳಿಗೆ ನೆರವು ಕೊಡಬೇಕಾಗಿತ್ತು.

ಭಕ್ತಾದಿಗಳಿರುವೆಡೆ ಸಂಚಾರ ಕೈಗೊಂಡು ಅವರಲ್ಲಿ ಸಂಘಟನೆ ನಡೆಸಿದರು. ಆಚಾರ ವಿಚಾರಗಳನ್ನು ಉಪದೇಶಿಸಿದರು. ಸೂಕ್ತ ಮಾರ್ಗದರ್ಶನವಿಲ್ಲದೆ ಮಾಯವಾಗುತ್ತಿದ್ದ ವೀರಶೈವ ಸಂಸ್ಕೃತಿಯ ಪುನರುಜ್ಜೀವನ ಕಾರ್ಯದ ಪಣತೊಟ್ಟರು.

ನುಡಿದಂತೆ ನಡೆ.
ಇದೇ ಜನ್ಮ ಕಡೆ.

—ಇದು ಶ್ರೀಗಳ ನಿತ್ಯ ಮಂತ್ರವಾಗಿತ್ತು. ಆಚರಣೆಯಾಗಿತ್ತು. ಅಂತೆಯೇ ನಾಡಿನ ಸಹಸ್ರಾರು ಭಕ್ತ ಭೃಂಗಗಳು ಪೂಜ್ಯರ ಪಾದಪುಷ್ಪದ ಪರಾಗವನ್ನು ಸೇವಿಸಲು ಕೂಡಿಕೊಂಡವು.

ಸಖರಾಯಪಟ್ಟಣದ ಶ್ರೀ ಹಾಲುಸ್ವಾಮಿ ಮಠವು ತನ್ನ ಭಕ್ತ ಜನಕೋಟಿಯ ಧಾರ್ಮಿಕ ಚರಿತ್ರೆಯಲ್ಲಿ ನೂತನ ಅಧ್ಯಾಯವನ್ನೇ ಆರಂಭಿಸಿತು.

ಮಠದ ಶಿಷ್ಯರ ಯಾವ ಮನೆಯಲ್ಲಿ ನೋಡಿದರೂ ಅಸಾಧಾರಣ ಬದಲಾವಣೆ.

ಅದೇನು ಪೂಜೆ ಪುನಸ್ಕಾರ !
ಅದೇನು ಅತಿಥಿ ಸತ್ಕಾರ !

ಶ್ರೀಗಳವರ ಉಪದೇಶದ ಕೃಪಾಬಲದಿಂದ ಭಕ್ತಜನರ ಸಾಮಾನ್ಯ ಗೃಹಗಳು ಸಂಸ್ಕೃತಿಯ ಮಂದಿರಗಳಾದುವು. ಅಷ್ಟಾವರಣದಿಂದ ಆವೃತರಾದ ಭಕ್ತರ ಬಾಳುವೆಯಲ್ಲಿ ಕಷ್ಟಕಾರ್ಪಣ್ಯಗಳು ಕಡಿಮೆಯಾಗತೊಡಗಿದವು : ಸಮಾಜದಲ್ಲಿ ಸಾತ್ವಿಕತೆ ತಾನೇ ತಾನಾಗಿ ಬೆಳೆಯಿತು. ನಿಜಕ್ಕೂ ಅದೊಂದು ಅಸದೃಶ ಪ್ರವಾಹ. ಈ ಹೊಸ ಬಾಳುವೆಯಿಂದ ಶಿಷ್ಯಕೋಟಿಯ ಧರ್ಮಾಸಕ್ತಿ ಹೆಚ್ಚಿತು. ಸಂಸಾರದಲ್ಲಿದ್ದು ಶಿವ ಸುಖವನ್ನನುಭವಿಸುವ ಮಹಾ ಮಾರ್ಗದತ್ತ ಹೊರಳಿತು.

ಲಿಂ|| ಹಾಲುಸ್ವಾಮಿಗಳು ಪರದಲ್ಲಿ ಕುಳಿತು ಪರಮ ಸಂತೋಷಪಟ್ಟಿರಬೇಕು :
ಅಧಿಕಾರದ ಮರುಗಳಿಗೆ !
ಸಮಾಜದ ಏಳಿಗೆ !

ಸ್ವಾಮಿಗಳವರಿಗೆ ಸಾಕಷ್ಟು ಶ್ರಮವಾಯಿತು ಮತ್ತೆ ಕೆಲವು ವರ್ಷಗಳ ತರುವಾಯ ಮಠದ ಆಸ್ತಿಪಾಸ್ತಿಗಳ ಬಗ್ಗೆ ವಿವಾದವೆದ್ದು ನ್ಯಾಯಾಲಯದ ಮೆಟ್ಟಲು ಹತ್ತಿ ನ್ಯಾಯ ಪಡೆಯಬೇಕಾಯಿತು.

ಧರ್ಮ-ಕರ್ಮಗಳ ಸಕೀಲ ತಿಳಿದು ಸದಾಚಾರ, ಸದ್ವಿಚಾರಗಳನ್ನು ಬೋಧಿಸ ಬೇಕಾದ ಸ್ವಾಮಿಗಳು ಕೋರ್ಟು-ಕಛೇರಿಗಳಲ್ಲಿ ವಕೀಲರನ್ನು ಹಿಡಿದು ನ್ಯಾಯ ದೊರಕಿಸಿಕೊಳ್ಳಬೇಕಾಗಿ ಬಂದಾಗ ಶ್ರೀಗಳವರಿಗೆ ತುಂಬಾ ವ್ಯಥೆಯಾಗಿರಬೇಕು. ಆದರೂ ಆಗ ಅವರು ಹೃದಯ ದೌರ್ಬಲ್ಯದಿಂದ ನಿರಾಸಕ್ತಿ ವಹಿಸಿದ್ದರೆ ಸಮಾಜಕ್ಕೆ ಅಪಾರ ನಷ್ಟವಾಗುತ್ತಿತ್ತು. ಸತ್ಯಕ್ಕೆ ಬೆಲೆ ಕೊಡುತ್ತಿದ್ದ ಶ್ರೀಗಳಿಗೆ ಸತ್ಯ ಜಯ ಕೊಟ್ಟಿತು.

ಸಾಮಾನ್ಯವಾಗಿ ನಿಶ್ಚಿತವಾದ ಬೆಳವಣಿಗೆಗೆ ಪ್ರತಿಕೂಲ ನೋಟಗಳು, ವೃತ್ತಿ ಗಳು ತಲೆಯೆತ್ತುವುದು ಸಹಜ. ಅಂತೇ ಶ್ರೀಗಳ ಸಾಧನೆಯ ಹಾದಿಯಲ್ಲಿ ಅನಂತ ವಾದ ಎಡರುಗಳು ತೊಡರಿಕೊಂಡರೂ ನಿಶ್ಚಳವಾದ ನೀತಿಯನ್ನು ಹಿಡಿದು ಸೋಲರಿ ಯದ ಫಲ ಕಂಡರು. ಭಕ್ತ ಸಮುದಾಯದಲ್ಲಿ ಧರ್ಮದ ಪೂರ್ಣತೆ, ಶಕ್ತಿ, ಜ್ಞಾನ ಜ್ಯೋತಿ, ಆನಂದಗಳನ್ನು ಬೆಳೆಸಿ, ಹರಡಿ, ತುಂಬಿದರು.

### ಜೀರ್ಣೋದ್ಧಾರ ಕಾರ್ಯಗಳು

ಹೆಗಲ ಮೇಲೆ ಹೊರಲಾಗದಷ್ಟು ಹೊಣೆ !

ಹಗುರಮಾಡಿಕೊಳ್ಳಲು ಜನಬೆಂಬಲ ಬೇಕಿತ್ತು. ಜನಕ್ಕೂ ಅದರ ಅರಿವಿತ್ತು. ಅಂತೇ ಸಖರಾಯಪಟ್ಟಣದಲ್ಲಿ ಮೂಲ ಕರ್ತೃ ಹಾಲುಸ್ವಾಮಿಗಳ ಶಿವಯೋಗ ಸಮಾ ಧಿಯ ಮೇಲೆ ಒಂಭತ್ತು ಅಂಕಣ ಶಿಲಾಮಠ ರಚನೆ, ಹುಣಸಘಟ್ಟದಲ್ಲಿನ ಶಾಖಾ ಮಠದ ಜೀರ್ಣೋದ್ಧಾರ ಕಾರ್ಯ, ಗಿರಿಯಾಪುರದಲ್ಲಿ ಲಿಂಗೈಕ್ಯರಾದ ಶ್ರೀ ಪ್ರಭು ಕುಮಾರ ಪಟ್ಟಾಧ್ಯಕ್ಷ ಮಹಾಸ್ವಾಮಿಗಳವರ ಗದ್ದುಗೆಯ ಕಟ್ಟಡ ರಚನೆ-ಮುಂತಾದ ಕಾರ್ಯಗಳಲ್ಲಿ ಜನತೆ ತುಂಬ ಸಹಾಯವನ್ನು ನೀಡಿತು.

ಗುರುಭಕ್ತಿ !

ಶಿಷ್ಯ ಶಕ್ತಿ !

ಗಿರಿಯಾಪುರದಲ್ಲ ಶ್ರೀಗಳು ಕಟ್ಟಿಸಿರುವ ಲಿಂ॥ ಪ್ರಭುಕುಮಾರ ಪಟ್ಟಾಧ್ಯಕ್ಷರ ಈ ಗದ್ದುಗೆಯ ಪೂಜಾ ವಿನಿಯೋಗವು ಅವಿಚ್ಛಿನ್ನವಾಗಿ ನಡೆಯಲು ಶ್ರೀಗಳ ಪರಮ ಭಕ್ತರಾದ ಚೆನ್ನಾಪುರದ ಶ್ರೀ ಸಿ. ಎ. ನಾಗಪ್ಪನವರು ಭಕ್ತಿಪೂರ್ವಕವಾಗಿ ಮೂರುವರೆ ಎಕರೆ ಭೂಮಿಯನ್ನು ಅರ್ಪಿಸಿದ್ದಾರೆ.

ಶ್ರೀಗಳವರು ಯಾವ ಕಾರ್ಯ ಕೈಗೊಂಡರೂ ಅದು ಪೂರ್ಣವಾಗಿ, ವ್ಯವಸ್ಥಿತ ವಾಗಿ ಆಗುವಂತೆ ಮಾಡಲು ಭಕ್ತಾದಿಗಳು ನಾಮುಂದು ತಾಮುಂದು ಎಂದು ಬರುತ್ತಿದ್ದರು.

## ಶ್ರೀ ಗುರು ಕುಮಾರಾಶ್ರಮ

"ಸಿಂಹಾಸನವನ್ನೇರಿದರೂ ಪರಮಹಂಸನಾಗಿರಬೇಕು !"

ಕುಮಾರ ಮಹಾಸ್ವಾಮಿಗಳವರ ಈ ಅಮೃತವಾಣಿ ! ಶ್ರೀಗಳನ್ನು ಎಚ್ಚರಿಸಿತು. ಹಚ್ಚಿಕೊಂಡಷ್ಟು ಹೆಚ್ಚು ಕಾರ್ಯಗಳೇನೇನೋ ಕಾದಿದ್ದುವು. ಆದರೆ ಶಿವಯೋಗ ಮಂದಿರದಲ್ಲಿ ತಾವು ಕಲಿತ ಆಚಾರ ವಿಚಾರಾದಿ ನಿತ್ಯನೇಮಗಳಿಗೆ ಗಮನ ಕೊಡ ಬೇಕಾಗಿತ್ತು. ಅದಕ್ಕಾಗಿ ಸೂಕ್ತ ಸ್ಥಳವನ್ನು ಶ್ರೀಗಳು ಅರಸುತ್ತಿದ್ದರು.

ಕುಮಾರ ಮಹಾಸ್ವಾಮಿಗಳವರ ಪ್ರತಿ ಉದ್ದೇಶದಲ್ಲೂ ಪರಮ ಪ್ರಾವೀಣ್ಯತೆ ಯನ್ನು ಪಡೆಯಲು ಪಾರಮಾರ್ಥಿಕ, ಬೌದ್ಧಿಕ, ನೈತಿಕ ವಿಚಾರ ಸರಣಿಯಲ್ಲಿ ಗಹನ ಗಾಢತೆ, ಕೈವಲ್ಯವನ್ನು ಕಾಣಬೇಕೆಂಬುದು ಶ್ರೀಗಳ ಪ್ರಬಲೇಚ್ಛೆಯಾಗಿತ್ತು. ಅದನ್ನು ಸಾಧಿಸಲು ತಕ್ಕ ತಾಣ ಬೇಕಾಗಿತ್ತು.

ಅದಕ್ಕಾಗಿ ಸೂಕ್ತ ಸ್ಥಳ !
ಅನುಕೂಲ ವಾಯು ಜಲ !
ಗಿರಿಯಾಪುರದ ಪೂರ್ವಭಾಗದ ಬಯಲು !

ಅಹುದು. ಅದೇ ಸರಿಯಾದ ಸ್ಥಳ. ಶುದ್ಧ ಬಯಲು ! ಶಾಶ್ವತ ಬಯಲು ! ಶ್ರೀಗಳವರ ಮನಸ್ಸಿಗೆ ಆ ಪ್ರದೇಶ ಒಪ್ಪಿಗೆಯಾಯಿತು.

ಭವಹರನಾದ ಗುರು ಬಳಿಗೆ ಬಂದರೆ ಬೇಡವೆನ್ನುವವರಾರು ? ಗಿರಿಯಾಪುರದ ಭಕ್ತ ಮಹಾಜನ ಬೇಕಾದ ವ್ಯವಸ್ಥೆ ಮಾಡಲು ಮುಂದೆ ಬಂದರು. ಸುತ್ತಮುತ್ತಣ ಗ್ರಾಮದವರೂ ಸಹಕರಿಸಿದರು.

ಆಶ್ರಮ ಕಟ್ಟಿಯಾಯಿತು !
'ಶ್ರೀ ಗುರು ಕುಮಾರಾಶ್ರಮ' ಎಂದು ಹೆಸರಿಟ್ಟಾಯಿತು !
ಪ್ರಾಚೀನ ಋಷ್ಯಾಶ್ರಮದಂತೆ ಗೋಚರವಾಯಿತು !

ಶ್ರೀಗಳವರ ಶಿವಪೂಜೆ, ಶಿವಧ್ಯಾನ, ಶಿವಯೋಗಗಳಿಗೆ ಅನುಕೂಲ ತಾಣ ದೊರೆಯಿತು.

ಹೊಸ ಗಾಳಿ ಬೀಸಿತು !
ಹೊಸ ಉಸಿರ ತಂದಿತು !

ಗಿರಿಯಾಪುರದ ಜನ ಪುಣ್ಯಶಾಲಿಗಳು. ಕೆಲವೇ ದಿನಗಳಲ್ಲಿ ಗಿರಿಯಾಪುರದ ಹೆಸರು ನಾಡು ತುಂಬಿಕೊಂಡಿತು. ಸ್ವಾಮಿಗಳವರ ಉಪದೇಶಾಮೃತದಿಂದ ಅಲ್ಲಿಯ ಜನ ವೀರಶೈವ ಸಂಸ್ಕೃತಿಯ ಪ್ರತೀಕರಾದರು. ತಮ್ಮ ಬಂಧು ಬಾಂಧವರಲ್ಲಿ, ಆಪ್ತೇಷ್ಟರಲ್ಲಿ ಮಾತ್ರವಲ್ಲದೆ ದೂರ ದೂರದ ವೀರಶೈವ ಬಾಂಧವರಲ್ಲಿಗೂ ಆ ಸಂಸ್ಕೃತಿಯ ಸುಗಂಧದೊಸಗೆಯನ್ನು ಕೊಂಡೊಯ್ದು ಹರಡಿದ ಕೀರ್ತಿ ಅವರದಾಯಿತು.



ಶ್ರೀ ಗುರುಕುಮಾರಾಶ್ರಮ



ಆಶ್ರಮದ ಬಳಿ ಇರುವ ಶ್ರೀ ಮರುಳಸಿದ್ಧೇಶ್ವರ ದೇವಾಲಯ



ಆಶ್ರಮದ ಮತ್ತೊಂದು ನೋಟ



ಸಖರಾಯ
ಪಟ್ಟಣದಲ್ಲಿರುವ
ಶ್ರೀ ಗುರು
ಹಾಲುಸ್ವಾಮಿ
ಗಳವರ
ಶಿಲಾ ಮಠ



ಹುಣಸ
ಘಟ್ಟದ
ಲ್ಲಿರುವ
ಶಾಖಾ
ಮಠ

ಶ್ರೀಗಳವರ ಸೇವಾಕ್ಷೇತ್ರ !
ಶಿವರುದ್ರಪ್ಪ ಮಾಸ್ತರರ ಭಕ್ತಿ ಪಾತ್ರ !

ಗಿರಿಯಾಪುರವ ಹೆಸರಿನೊಂದಿಗೇ ಹೊಂದಿಕೊಂಡಿರುವ ಶ್ರೀ ಶಿವರುದ್ರಪ್ಪ ಮಾಸ್ತರರು ಶ್ರೀಗಳವರ ಆಶ್ರಮ ಸ್ಥಾಪನೆ, ಅನುಷ್ಠಾನ ಇತ್ಯಾದಿ ಕಾರ್ಯಗಳಲ್ಲಿ ವಿಶಿಷ್ಟ ಪಾತ್ರವನ್ನು ವಹಿಸಿದ್ದಾರೆ. ಶ್ರೀಗಳ ಪೂರ್ಣ 'ಅನುಗ್ರಹ'ವನ್ನು ಪಡೆದ ಪುಣ್ಯವಂತರು ಅವರು.

ಅಚ್ಚ ಶರಣ !
ಭಕ್ತಿ ಕಿರಣ !

ಶರಣನಿಗಿರಬೇಕಾದ ಸ್ವಚ್ಛ ಹೃದಯ, ನಿರ್ಭಯತೆ, ಪರಿಶುದ್ಧ ಪ್ರವೃತ್ತಿ, ಸೇವೆಯ ಕೆಚ್ಚು, ನೇಮ – ಶೀಲಗಳ ನೆಚ್ಚು. ಅವರಲ್ಲಿ ತುಂಬಿಕೊಂಡಿವೆ. ತಾವಷ್ಟೇ ಅಲ್ಲ ತಮ್ಮ ಮನೆಯನ್ನೇ ತುಂಬಿದ್ದಾರೆ. ಅವರ ಗೃಹವೊಂದು ಶರಣ ನಿಲಯ; ಸಮೃದ್ಧ ಸಂಸ್ಕೃತಿಯಾಲಯ.

ಶ್ರೀಗಳವರ ತಪಶ್ಶಕ್ತಿಗೆ ಮಾರುಹೋಗಿ ತಮ್ಮನ್ನೇ ಅರ್ಪಿಸಿಕೊಂಡಿರುವ ಶಿವರುದ್ರಪ್ಪನವರು ಆಶ್ರಮದ ಬಳಿ ಸಹಸ್ರಾರು ರೂಪಾಯಿಗಳ ವೆಚ್ಚದಲ್ಲಿ ಶ್ರೀಗಳ ಅನುಷ್ಠಾನಕ್ಕಾಗಿ ಸುಂದರ ಪೂಜಾಮಂದಿರವೊಂದನ್ನು ಕಟ್ಟಿಸಿ ಪುಣ್ಯ ಕಟ್ಟಿ ಕೊಂಡಿದ್ದಾರೆ.

ಒಟ್ಟಾರೆ ಶಿವರುದ್ರಪ್ಪನವರು ಭಕ್ತಿಗೇ ಸಾಕ್ಷಿಯಾಗಿದ್ದಾರೆ.

ಗುರುಕುಮಾರಾಶ್ರಮವಿರುವ ಪ್ರದೇಶ ಕೆಲವುಜನ ಭಕ್ತರಿಗೆ ಸೇರಿತ್ತು. ಆ ಮಹನೀಯರು ಅತ್ಯಂತ ಸಂತೋಷದಿಂದ ತಮಗೆ ಸೇರಿದ ಆ ಪ್ರದೇಶವನ್ನು ಆಶ್ರಮಕ್ಕಾಗಿ ಉಚಿತವಾಗಿ ಕೊಟ್ಟರು. ಇಂದು ಗುರುಕುಮಾರಾಶ್ರಮದಿಂದ ನಾಡಿಗೆ, ಅದರಲ್ಲೂ ವೀರಶೈವ ಸಂಸ್ಕೃತಿಗೆ ಏನಾದರೂ ಸೇವೆ ಸಂದಿದ್ದರೆ ಅದರ ಪುಣ್ಯದ ಪಾಲು ಆಶ್ರಮಕ್ಕೆ ನೆಲೆಕೊಟ್ಟ ಆ ಮಹನೀಯರಿಗೆ ಮತ್ತು ಗಿರಿಯಾಪುರದ ಹಾಗೂ ಸುತ್ತುಮುತ್ತಣ ಗ್ರಾಮದ ಭಕ್ತಜನರಿಗೆ ಸೇರಬೇಕಾದುದು.

ಆಶ್ರಮಕ್ಕಾಗಿ ಭೂದಾನ ಮಾಡಿದ ಭಾಗ್ಯಶಾಲಿಗಳು ಶ್ರೀ ಜಿ. ಶಿ. ಸಿವರುದ್ರಪ್ಪ ನವರು, ಬಾವೀಮನೆ ಕೈ॥ ಕರಿಬಸಪ್ಪನವರು, ಬಾವೀಮನೆ ಬಸವೇಗೌಡರ ಮಗ ನಂಜಪ್ಪನವರು, ಶ್ರೀ ಮುದ್ದಪ್ಪನವರ ಮಲ್ಲಪ್ಪನವರು, ದೇವರಮನೆ ಶ್ರೀ ಜಿ. ಎಂ. ಬಸಪ್ಪನವರು ಮತ್ತು ಕೈ. ಜಿ. ಎಂ. ಕರಿಸಿದ್ದಪ್ಪನವರು.

ಕುಮಾರೇಶನ ಕರುಣೆ ;
ಸದಾಶಿವನ ಸ್ಮರಣೆ !

ಶ್ರೀಗಳವರ ಅನುಷ್ಠಾನ ಅಖಂಡವಾಗಿ ನಡೆಯಲು ಅನುಕೂಲವಾಯಿತು. ಅವರ ಯೋಗಕ್ಕೆ, ತಪಸ್ಸಿಗೆ, ಸಾಹಿತ್ಯ ಸಂಶೋಧನೆಗೆ, ಪ್ರಶಾಂತ ವಾತಾವರಣ ದೊರೆಯಿತು.

ಗುರುಕುಮಾರಾಶ್ರಮ ಕೈವಲ್ಯಧಾಮ !
ನಿತ್ಯ ನಡೆಯುವ ಶಿವಪೂಜಾ ನೇಮ !

ಶಿವ ಚಿಂತನೆಯು ಶ್ರೀಗಳವರ ಚಿತ್ತದ ರಾಜ ರಹಸ್ಯವಾಯಿತು. ನೈಜ ಶಿವ ಯೋಗಿಗಳು ಅವರಾದರು. ಆಶ್ರಮ ಜೀವನ, ಶಿವಚಿಂತನೆ, ಸಾಹಿತ್ಯ ಸಂಶೋಧನೆ ಗಳಿಗೆ ಮೀಸಲಾಯಿತು. ಶ್ರೀಗಳು ಪ್ರಾಚೀನ ಸಾಹಿತ್ಯದ ಜ್ಞಾನಸಿದ್ಧಿಗಾಗಿ ಸತತ ಅಭ್ಯಾಸಕ್ಕೆ ತೊಡಗಿದರು, ಸಹಸ್ರಾರು ಗ್ರಂಥಗಳನ್ನು ಸಂಗ್ರಹಿಸಿದರು. ಆಶ್ರಮವೊಂದು ಆಧ್ಯಾತ್ಮ ತತ್ತ್ವಗ್ರಂಥಗಳ ವಿಶ್ವಕೋಶವೇ ಆಯಿತು.

ಶ್ರೀಗಳವರು ರಚಿಸಿದ ಗ್ರಂಥಗಳು ಒಂದೆರಡಲ್ಲ; ಹತ್ತಿಪ್ಪತ್ತು. ಒಂದೊಂದೂ ಒಂದೊಂದು ಮಹತ್ತು;

ಅರವಿಂದರು ಒಂದು ಕಡೆ ("Realise God in life; whole life is yoga") "ಜೀವನದಲ್ಲಿ ದೇವನನ್ನು ಅನುಭವಿಸು; ಸಮಸ್ತ ಜೀವನವೂ ಯೋಗಸ್ವರೂಪ" —ಎಂದು ಹೇಳುತ್ತಾರೆ. ಈ ಮಾತಿನ ಮಹತ್ವವನ್ನೇ ಶ್ರೀಗಳವರ ಕೃತಿಗಳಲ್ಲಿ ಕಾಣ ಬಹುದು.

ಅಧಾರ್ಮಿಕವಾದ, ಅಹಂಕಾರಮಯವಾದ, ಸ್ವಾರ್ಥಪರವಾದ, ಭೌತಿಕವಾದ ಸಾರ್ವಜನಿಕ ಜೀವನ ಬಿದ್ದುಹೋಗುತ್ತಿರುವುದನ್ನು ನೋಡಿದ ಶ್ರೀಗಳು ಅದಕ್ಕೆ ಅನುಭವಸಿದ್ಧವಾದ ಸಾಹಿತ್ಯದಿಂದ ಉಪದೇಶದ ಸೂಜಿಮದ್ದು ಕೊಟ್ಟಿದ್ದಾರೆ.

ಅನುಭವಸಿದ್ಧವಾದ ಸಾಹಿತ್ಯವೇ ನಿಜವಾದ ಸಾಹಿತ್ಯ. ಅದು ಮಾತ್ರ ನೇರ ವಾಗಿ ಅಭ್ಯಾಸಿಗಳ ಹೃದಯವನ್ನು ಮುಟ್ಟುತ್ತದೆ. ಹೃದಯವನ್ನು ಮುಟ್ಟಿದ ಸಾಹಿತ್ಯ ಪರಿಣಾಮವಾಗಲೇಬೇಕು; ಆಗಿದೆ. ಬಹುತೇಕ ಸತ್ಯಪಂಥದ ಅವರ ಗ್ರಂಥಗಳು ಇಂದು ನೂರಾರು ಮನೆಗಳಲ್ಲಿ ನಿತ್ಯಪಠನ ಹಾಗೂ ಪೂಜಾವಸ್ತುಗಳಾಗಿವೆ.

"ಸದಾಶಿವ ಶಿವಾಚಾರ್ಯ ಮಹಾಸ್ವಾಮಿಗಳವರಿಗೆ ಸಂಶೋಧನ ಕಲೆ ಆಜನ್ಮ ವಾಗಿ ಬಂದಿದೆ. ಅವರು ವಿದ್ಯಾರ್ಥಿ ದೆಸೆಯಿಂದಲೂ ಅನೇಕ ಲೇಖನಗಳನ್ನು ಬರೆಯುತ್ತಿದ್ದು ಅವು ಕರ್ನಾಟಕದ ಅನೇಕ ಧಾರ್ಮಿಕ ವಿಚಾರಗಳಿಂದ ಕೂಡಿದ ಪ್ರಸಿದ್ಧ ಮಾಸಿಕ, ತ್ರೈಮಾಸಿಕಗಳಲ್ಲಿ ಪ್ರಕಟವಾಗಿವೆ. ಇವಲ್ಲದೆ ಸರಳವಾದ ತಮ್ಮದೇ ಆದ ಶೈಲಿಯಲ್ಲಿ ಕನ್ನಡ-ಸಂಸ್ಕೃತ ಕೃತಿಗಳು ಶ್ರೀಯವರ ಪಾಂಡಿತ್ಯವನ್ನು ಬಹು ಮುಖ ವಿಷಯ ಪರಿಜ್ಞಾನವನ್ನು ಧರ್ಮಜಾಗೃತಿಯನ್ನು ಪ್ರದರ್ಶಿಸುತ್ತವೆ." *

---

ಶ್ರೀಗುರು ಹಾಲುಸ್ವಾಮಿಗಳು—ಶ್ರೀ. ಎಂ ಜಿ. ನಂಜುಂಡಾರಾಧ್ಯರು.

ಅವರ ಕೃತಿಗಳಲ್ಲಿ "ಕೈವಲ್ಯೋಪನಿಷತ್ ಸಾದಾಶಿವ ಭಾಷ್ಯ"ವೊಂದು ಮಹಾ ಕೃತಿ: ದಿವ್ಯಕೃತಿ! ಅದಕ್ಕೆ ಆಸ್ಥಾನ ವಿದ್ವಾನ್; ಶಿವಾದ್ವೈತ ವಿದ್ಯಾಭೂಷಣ ಶ್ರೀ ಎಂ. ಜಿ. ನಂಜುಂಡಾರಾಧ್ಯರೇ ಕನ್ನಡ ಭಾವಪ್ರಕಾಶವಿತ್ತಿದ್ದಾರೆ.

ಈ ಗ್ರಂಥಕ್ಕೆ ಮುನ್ನುಡಿ ಬರೆಯುತ್ತ ಕರ್ಣಾಟಕದ ಹಿರಿಯರೂ ವಿದ್ಯಾ ಪಾರಂಗತರೂ, ಸಂಶೋಧನಾ ಪ್ರವೀಣರೂ ಆದ ಬಾಗಲಕೋಟೆ ಬಸವೇಶ್ವರ ಕಾಲೇಜ್ ಪ್ರಿನ್ಸಿಪಾಲ್ ಶ್ರೀ ಎಸ್. ಸಿ. ನಂದಿಮಠರು ಹೃದಯ ತುಂಬಿದ ದೊಡ್ಡ ಮಾತುಗಳನ್ನಾಡಿದ್ದಾರೆ: ಅದನ್ನು ಅವರ ಮಾತಿನಲ್ಲೇ ನೋಡೋಣ :—

"Sri Swamiji, in his Commentary had quoted, in support number of Shlokas taken from various authoritative works. All quotations have been traced to their sources. The style and the language, both, are of high type and reflect great credit to the ability, erudition and depth of knowledge of Sri Swamiji. It is therefore a very important work and has made a distinct contribution to the ensisting knowledge of upanised."

("ಶ್ರೀಗಳವರು ತಮ್ಮ ಭಾಷ್ಯದಲ್ಲಿ ಆಧಾರಕ್ಕಾಗಿ ಅನೇಕ ಅಧಿಕೃತ ಶಾಸ್ತ್ರಗ್ರಂಥ ಗಳ ಅಸಂಖ್ಯಾತ ಶ್ಲೋಕಗಳನ್ನು ಉದ್ಧರಿಸಿದ್ದಾರೆ. ಎಲ್ಲ ಉದಾಹರಣೆಗಳೂ ಉಪಯುಕ್ತವಾಗಿವೆ. ಭಾಷೆ ಮತ್ತು ಶೈಲಿಗಳು ಪ್ರೌಢವಾಗಿದ್ದು ಸ್ವಾಮಿಗಳವರ ಧೀಶಕ್ತಿ, ಸಾಮರ್ಥ್ಯ ಮತ್ತು ಆಳವಾದ ಅನುಭವಗಳ ಪ್ರತೀಕವಾಗಿವೆ; ಅವುಗಳ ಕೀರ್ತಿಯನ್ನು ಎತ್ತಿಹಿಡಿದಿವೆ. ಆದ್ದರಿಂದ ಇದೊಂದು ಮಹಾಕೃತಿ. ಪ್ರಚಲಿತ ಉಪನಿಷತ್ ಜ್ಞಾನಕ್ಕೆ ವಿಶಿಷ್ಟ ಕಾಣಿಕೆ.")

ಇದಕ್ಕಿಂತ ಹೆಚ್ಚೇನು ಬೇಕು? ಶ್ರೀಗಳ ಉಳಿದೆಲ್ಲ ಗ್ರಂಥಗಳ ಅಂತಸ್ಸತ್ವಕ್ಕೆ ಇದೊಂದು ಸಾಕ್ಷಿ.

### ನಾಡ ಬಹುಮಾನದ ಬೆಲೆ!

ಶ್ರೀಗಳವರ ಸಾಹಿತ್ಯಸೃಷ್ಟಿಯ ನೀಲಾಕಾಶದಲ್ಲಿ ಪೂರ್ಣ ಚಂದ್ರನಂತೆ ಪ್ರಕಾಶಿಸು ತ್ತಿರುವ ಈ 'ಕೈವಲ್ಯೋಪನಿಷತ್ ಸಾದಾಶಿವಭಾಷ್ಯ' ಪಂಡಿತರೆಲ್ಲರ ಮನ್ನಣೆ ಪಡೆದಿದೆ. ಉಪನಿಷತ್ ಶಾಸ್ತ್ರಗಳ ಬಗ್ಗೆ ಸಂಶೋಧನ ಹಾಗೂ ವಿಚಾರ ಮಾಡುವವರಿಗೆ ಪುಷ್ಕಳ ಆಹಾರವಾಗಿದೆ. ಸಂಸ್ಕೃತ ಭಾಷೆಯಲ್ಲೂ ಶ್ರೀಗಳಿಗಿರುವ ಪಾಂಡಿತ್ಯದ ಅರಿವು ನಮಗದ ರಿಂದ ಉಂಟಾಗುತ್ತದೆ.

ಎಂತಲೇ ಈ ಪ್ರೌಢ ಗ್ರಂಥಕ್ಕೆ ದೇವರಾಜ ಬಹದ್ದೂರ್ ನಿಧಿ ಬಹುಮಾನ ದೊರೆತಿದೆ. ಉಪನಿಷತ್ತುಗಳನ್ನು ಋಷಿಗಳು ಕಾಡಿನಲ್ಲಿ ಕುಳಿತು ಬರೆದಂತೆ ಶ್ರೀಗಳ ವರೂ ಈ ಭಾಷ್ಯವನ್ನು ಕಾಡ ಬೆಳದಿಂಗಳಲ್ಲೇ ಬರೆದಿದ್ದಾರೆ. ಕಾಡ ಬೆಳದಿಂಗಳಲ್ಲಿ ಬೆಳೆದ ಬೆಳೆ ನಾಡ ಬಹುಮಾನ ಪಡೆಯಿತೆಂದರೆ ಎಂಥ ಹೆಮ್ಮೆಯ ವಿಷಯ.

ಜ್ಞಾನದ ಗಣಿಯಾಗಿ, ಮಹತ್ತಿನ ಮಣಿಯಾಗಿ ಸಾಧಕರಿಗೆ, ಸದ್ಭಕ್ತರಿಗೆ ಧರ್ಮಮಾರ್ಗದ ದಾರಿ ತೋರುತ್ತಿರುವ ಶ್ರೀಗಳನ್ನು ಪಡೆದ ನಾವೆಷ್ಟು ಧನ್ಯರು!

ಶ್ರೀ ಶ್ರೀಗಳಲ್ಲಿ ಕೆಲವು ಮಂದಿ ಸಾಧಕರೂ ಬಂದು ಕೆಲವು ಕಾಲವಿದ್ದು ಕಲಿತು ಹೋಗಿದ್ದಾರೆ. ಕಳೆಗೊಂಡಿದಾರೆ.

ಹಾಗೆ ಕಲಿತವರಲ್ಲಿ ಈಗ ಸೊರಬ ತಾಲ್ಲೂಕು ಮೂಡಿದೊಡ್ಡಿಕೊಪ್ಪದಲ್ಲಿರುವ ಶ್ರೀ ಶಿವಲಿಂಗೇಶ್ವರ ವಿರಕ್ತಮಠದ ಅಧಿಕಾರಿಗಳಾದ ಶ್ರೀ ನಿ. ಪ್ರ. ಚನ್ನವೀರದೇಶಿ ಕೇಂದ್ರ ಸ್ವಾಮಿಗಳೂ ಒಬ್ಬರು. ಅವರು ಶ್ರೀಗಳ ಸಂಪೂರ್ಣ ಕೃಪಾಶೀರ್ವಾದವನ್ನು ಪಡೆದು ಅಸಾಧಾರಣ ಜ್ಞಾನಪಡೆದು ಒಳ್ಳೆಯ ಪ್ರವಚನಪಟುಗಳಾದರು. ತಾವು ಕಲಿತ ಶಿವಯೋಗಮಂದಿರದ ಧ್ಯೇಯಗಳನ್ನು ಶ್ರೀ ಸದಾಶಿವ ಶಿವಾಚಾರ್ಯರು ಸಾಧಿಸುತ್ತಿರುವಂತೆ ಇವರೂ ತಾವು ಅಭ್ಯಸಿಸಿದ ಶ್ರೀ ಗುರುಕುಮಾರಾಶ್ರಮದ ಗುರಿಗಳನ್ನು ಸಾಧಿಸುತ್ತಿದ್ದಾರೆಂದು ಹೇಳುವುದಕ್ಕೆ ಅವರೂ ಸಹ ವರ್ಷಕ್ಕೊಮ್ಮೆ ಶಿವಾನುಭವ ಸಮ್ಮೇಳನ ನಡೆಸುತ್ತಿರುವುದೇ ಸಾಕ್ಷಿಯಾಗಿದೆ. ಇವರ ಶಿಷ್ಯೋತ್ತಮರಲ್ಲಿ ನೀಲಗುಂದದ ಷ.ಬ್ರ.ಶ್ರೀ ವಿರೂಪಾಕ್ಷ ಶಿವಾಚಾರ್ಯರೊಬ್ಬರು. ಇವರಿಗಿರುವ ಶ್ರದ್ಧೆ ಅಪಾರವಾದುದು.

ಶ್ರೀಗಳವರ ಸಾತ್ವಿಕ ತೇಜಸ್ಸಿಗೆ ಆಕರ್ಷಿತರಾಗಿ ಬಂದ ಮತ್ತೊಬ್ಬ ಸಾಧಕರೆಂದರೆ ಚೊಳಚಗುಡ್ಡದ ಶ್ರೀ ಶ್ರೀ ಬಸವಲಿಂಗ ಸ್ವಾಮಿಗಳು. ಅವರೀಗ ಶಾಖಾಮಠವಾದ ಹುಣಸಘಟ್ಟ ಮಠದ ವ್ಯವಸ್ಥಾಪಕರಾಗಿದ್ದಾರೆ. ತುಂಬ ಸರಳಜೀವಿಗಳಾದ ಬಸವಲಿಂಗ ಸ್ವಾಮಿಗಳು ಶ್ರೀಗಳವರ ಮನೀಷೆಯಂತೆ ಮಠದ ವ್ಯವಸ್ಥೆಯನ್ನು ನೋಡಿಕೊಂಡು ಹೋಗುತ್ತಿದ್ದಾರೆ.

### ಯೋಗಾಭ್ಯಾಸಕ್ಕೋಸ್ಕರ ಓರ್ವ ಪದವೀಧರ!

ಯೋಗದ ಬಗ್ಗೆ ಸಿದ್ಧಿ ಪಡೆಯಬೇಕೆಂಬ ಹಂಬಲದಿಂದ ಓರ್ವ ಪದವೀಧರ ಹುಟ್ಟಿದ ಊರನ್ನು ಬಿಟ್ಟು, ತೊಟ್ಟ ನೌಕರಿಯ ನೊಗವನ್ನು ಕಳಚಿ ಏಕಲವ್ಯನಂತೆ ಯೋಗ್ಯ ಗುರುವಿಗಾಗಿ ಊರೂರು ತಿರುಗಿ, ಸೋತು ಸುಣ್ಣಾಗಿ ಚಿತ್ರದುರ್ಗದ ಮುರುಘಾಮಠ ಮಹಾಸಂಸ್ಥಾನದ ಜಗದ್ಗುರುಗಳಲ್ಲಿ ತನ್ನ ಹಿರಿಯಾಸೆಯನ್ನು ಅರಿಕೆ ಮಾಡಿಕೊಂಡಾಗ ಜಗದ್ಗುರುಗಳವರು ಗಿರಿಯಾಪುರದತ್ತ ಆ ತರುಣನನ್ನು ತಿರುಗಿಸಿದರು. "ಅಲ್ಲಿ ಮಾತ್ರ ನಿನ್ನ ಇಚ್ಛೆ ಈಡೇರುವುದು" ಎಂದು ಅಪ್ಪಣೆ ಕೊಡಿಸಿದರು.

ತಾಯಿ ಬಳಿಗೆ ಮಗು ಬರುವಂತೆ ಓಡಿಬಂದ ಯುವಕ. ಸೋತು ಸುಣ್ಣಾಗಿದ್ದ ಆತನಿಗೆ ಮಾತು ಮೂಕವಾಯಿತು. ಸುಮ್ಮನೆ ಶರಣೆಂದ. ಮಾರನೆಯ ದಿನ ತನ್ನ ಮನದಿಚ್ಛೆಯನ್ನು ತೋಡಿಕೊಂಡ. ಶ್ರೀಗಳು ಅತ್ಯಂತ ಕರುಣೆಯಿಂದ ಆತನನ್ನು ಕಂಡು ಆತನಿಗೆ ಮಾಹಿತಿ ಒದಗಿಸಿದರು. ದ್ರೋಣರು ಏಕಲವ್ಯನನ್ನು ನಿರಾಕರಿಸಿದಂತೆ ನಿರಾಕರಿಸಲಿಲ್ಲ.

ಶ್ರೀಗಳ ಸಾತ್ವಿಕ ಹಾಗೂ ನಿರಾಡಂಬರ ಯೋಗಜೀವನವನ್ನು ಕಂಡ ಆ ಯುವಕ ಶ್ರೀಗಳಲ್ಲಿ ಸಂಪೂರ್ಣ ಭಕ್ತಿಯಿಟ್ಟುಕೊಂಡಿದ್ದನು. ಗುರುಕಾಣಿಕೆಯೆಂಬಂತೆ ಶ್ರೀಗಳ ಸಾಹಿತ್ಯಕೃತಿ ಪ್ರಕಾಶವೊಂದಕ್ಕೆ ಧನವನ್ನಿತ್ತ. ಏನು ಅಪೂರ್ವ ಚಿತ್ರವಿದು!

ಆ ಯುವಕ ಇಂದು ಎಲ್ಲಿದ್ದಾರೋ ತಿಳಿಯದು. ಬಹುಶಃ ಎಲೆಯ ಮರೆಯ ಹೂವಾಗಿ ಪರಿಮಳ ಬೀರುತ್ತಿರಬೇಕು.

ಒಮ್ಮೆ ಶಿವಯೋಗ ಮಂದಿರವು ಆರ್ಥಿಕ ತೊಂದರೆಯಲ್ಲಿ ಸಿಲುಕಿ ಬಳಲುವ ಪರಿಸ್ಥಿತಿಯೊದಗಿದಾಗ ಕುಮಾರ ಮಹಾಸ್ವಾಮಿಗಳು ಪಟ್ಟ ಪಾಡು ಅಷ್ಟಿಷ್ಟಲ್ಲ. ಬಹಳ ಜನರನ್ನು ಆಶ್ರಯಿಸಬೇಕಾಯಿತು. ಆಗೊಮ್ಮೆ ನಾಡೆಲ್ಲ ಸುತ್ತುಗಟ್ಟ ಬೇಕಾಯಿತು.

ಮಂದಿರದಲ್ಲಿದ್ದು ಅಲ್ಲಿನ ಎಲ್ಲ ಆಗು-ಹೋಗುಗಳ ಪೂರ್ಣ ಪರಿಚಯ ಪಡೆದಿದ್ದ ಶ್ರೀ ಸದಾಶಿವ ಶಿವಾಚಾರ್ಯರೂ ತಮ್ಮ ಕೈಲಾದ ಸೇವೆ ಸಲ್ಲಿಸಬೇಕೆಂದು ನಿರ್ಧರಿಸಿದರು. ಶ್ರೀ ಕುಮಾರ ಮಹಾಸ್ವಾಮಿಗಳವರನ್ನು ಈ ಪ್ರಾಂತ್ಯಕ್ಕೆ ಬರಮಾಡಿಕೊಂಡು ಅಷ್ಟಿಷ್ಟು ಧನ ಸಂಗ್ರಹ ಮಾಡಿ ಅಲ್ಪ ಕಾಣಿಕೆಯೆಂದು ಅರ್ಪಿಸಿದರು. ಹೆಚ್ಚು ಕೊಡಲಾಗದಿದ್ದರೂ ನುಚ್ಚು ಕೊಟ್ಟರು.

ಇಚ್ಛೆಯನ್ನು ಅರಿದಿತ್ತ ನುಚ್ಚು ಮಾಣಿಕವಲ್ಲವೆ?
ಮಂದಿರಕ್ಕೆ ಶ್ರೀಗಳಿಂದ ಸ್ವಲ್ಪ ಋಣ ಸಂದಿತಲ್ಲವೆ?

ಶಿಕ್ಷಣ ಮಂದಿರಗಳಲ್ಲಿ ಶಿಕ್ಷಣಪಡೆದು ಬರುವವರು ಲೆಕ್ಕವಿಲ್ಲದಷ್ಟು. ಆದರೆ ತಮ್ಮ ಶಿಕ್ಷಣದ ಆ ಮಾತೃ ಮಂದಿರಗಳ ಸೇವೆ ಸಲ್ಲಿಸುವವರೆಷ್ಟು? ಶ್ರೀಗಳು ಮಾತ್ರ ಮನಸಾರೆ ಸೇವೆ ಸಲ್ಲಿಸಿದರು. ಇಂದೂ ಮಂದಿರದ ಮಹೋದ್ದೇಶ ಸಾಧನೆಯ ರಾಜಮಾರ್ಗದಲ್ಲೇ ನಡೆಯುತ್ತಿದ್ದಾರೆ.

ಲಿಂ॥ ಕುಮಾರ ಮಹಾಸ್ವಾಮಿಗಳವರೂ, ಲಿಂ॥ ಶ್ರೀಗುರು ಹಾಲುಸ್ವಾಮಿಗಳೂ ಲಿಂ॥ ಪ್ರಭುಕುಮಾರ ಪಟ್ಟಾಧ್ಯಕ್ಷರೂ ಇಂದು ನಮ್ಮ ಕಣ್ಣುಮುಂದಿದ್ದರೆ ಶ್ರೀಗಳ ಕಾರ್ಯಕ್ಷೇತ್ರವನ್ನು ಕಂಡು ಎಷ್ಟು ಹರ್ಷಪಡುತ್ತಿದ್ದರೋ! ಸಮಾಜದ ದೌರ್ಭಾಗ್ಯ ಆ ಮೂರು ಶಕ್ತಿಗಳನ್ನೂ ಕಳೆದುಕೊಂಡಿತು.

ಆದರೂ ಒಂದು ಅದೃಷ್ಟ. ಆ ಮೂರು ಶಕ್ತಿಗಳು ಮುಪ್ಪುರಿಗೊಂಡು ಸದಾಶಿವ ಶಿವಾಚಾರ್ಯರಲ್ಲಿ ಮೂರ್ತೀಭವಿಸಿವೆ. ಶ್ರೀಗಳವರಿಗೆ ಕೀರ್ತಿ ತಂದಿವೆ.

## ಶಿವಾದ್ವೈತ ತತ್ತ್ವ ಪ್ರಚಾರಕ ಸಮಿತಿ

ಶ್ರೀಗಳವರ ಮತ್ತೊಂದು ಅದ್ಭುತ ಸಾಧನೆಯೆಂದರೆ-ಹಾನಗಲ್ಲ ಲಿಂ॥ ಕುಮಾರ ಮಹಾಸ್ವಾಮಿಗಳವರ ಪುಣ್ಯನಾಮದಲ್ಲಿ ಶಿವಾದ್ವೈತ ತತ್ತ್ವ ಪ್ರಚಾರಕ ಸಮಿತಿಯನ್ನು ಸ್ಥಾಪಿಸಿದುದು.

ಕ್ರಿ. ಶ. ೧೯೫೦ ರಲ್ಲಿ :

ಪ್ರಥಮ ಸಮ್ಮೇಳನ ನಡೆಸಿದರು ಸತತವಾಗಿ ಏಳು ದಿನ.

ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಸೇರಿದ ಭಕ್ತಾದಿಗಳು, ನೂರಾರು ಜನ ಹರ ಗುರು ಚರಮೂರ್ತಿಗಳು, ಕಲಾವಿದರು, ಕೀರ್ತನಕಾರರು ಭಾಗವಹಿಸಿದ್ದ ಆ ಸಮ್ಮೇಳನ ಅತ್ಯಂತ ಯಶಸ್ವಿಯಾಗಿ ಜರುಗಿತು. ಶ್ರೀಗಳವರ ಹೆಸರು ಬಳ್ಳಿಯಂತೆ ಹಬ್ಬಿತು.

ಅಂದಿನಿಂದ ಇಂದಿನವರೆಗೆ ಪ್ರತಿವರ್ಷ ಶಿವರಾತ್ರಿಗೆ ಒಂದು ವಾರ ಪೂರ್ವದಲ್ಲಿ ಲಿಂ|| ಶ್ರೀ ಕುಮಾರಸ್ವಾಮಿಗಳವರ ಪುಣ್ಯತಿಥಿಯ ಸಂದರ್ಭದಲ್ಲಿ ಸತತವಾಗಿ ಮೂರು ದಿನಗಳಕಾಲ ಸಮ್ಮೇಳನಗಳನ್ನು ನಡೆಸುತ್ತ ಬಂದಿದ್ದಾರೆ. ಇದಕ್ಕೆ ಭಕ್ತಾದಿಗಳು ಕೊಟ್ಟಿರುವ, ಕೊಡುತ್ತಿರುವ ಸಹಕಾರ ಅಪಾರ.

ಸಮ್ಮೇಳನ ಕಾರ್ಯಕ್ರಮ !

ಸಂಘ ಸಂಸ್ಥೆಗಳಿಗೆ ಪರಿಣಾಮ !

ಈ ಒಂದು ಧಾರ್ಮಿಕ ಸಂಸ್ಥೆಯನ್ನು ಸ್ಥಾಪಿಸಿದ ಶ್ರೀಗಳವರಿಂದ ಸಮಾಜಕ್ಕೆ ಅದರಲ್ಲೂ ಗಿರಿಯಾಪುರ ಪ್ರಾಂತದ ಜನತೆಗೆ ಆಗಿರುವ ಪ್ರಯೋಜನ ಅಷ್ಟಿಷ್ಟಲ್ಲ.

ಪರಿಣಾಮಃವಾಗಿ ಎಷ್ಟೋಜನ ಯುವಕರಿಂದು 'ಸೇವೆ'ಯ ಶಬ್ದದ ಅರ್ಥವರಿತು ಧಾರ್ಮಿಕ ಕ್ಷೇತ್ರದಲ್ಲಿ ದುಡಿಯುತ್ತಿದ್ದಾರೆ. ಅವರ ದಿವ್ಯಾಶೀರ್ವಾದ ಹೊತ್ತು ಸ್ಥಾಪಿತ ವಾದ ಗಿರಿಯಾಪುರದ 'ಗೆಳೆಯರ ಬಳಗ' ಮತ್ತು 'ಮಲ್ಲಿಕಾಂಬಾ ಮಂಡಳಿ'ಗಳು ನಾಡಿನಾದ್ಯಂತ ಹೆಸರಗಳಿಸಿವೆ. ಸಮ್ಮೇಳನ ಸಂದರ್ಭಗಳಲ್ಲಿ ಈ ಎರಡು ಸಂಘಗಳ ಸೇವೆ ಅನುಪಮವಾದುದು. ಈ ಸಂಘಗಳಿಗೆ ಶ್ರೀಗಳೊಂದು ಸ್ಫೂರ್ತಿಯ ಸೆಲೆಯಾಗಿ ದ್ದಾರೆಂದು ಹೇಳಬಹುದು.

ಸಮ್ಮೇಳನ ಸಮಯ ಬಂತೆಂದರೆ ಎಂದಿಲ್ಲದ ಸಡಗರ. ಅದೇನು ಜನ. ಅದೆಷ್ಟು ಜನ ಧರ್ಮಪ್ರಚಾರಕರು? ಅದೊಂದು ಆಧ್ಯಾತ್ಮಕ ತತ್ತ್ವಗಳ ಸುಗ್ಗಿ. ಧರ್ಮ ನೀತಿಗಳ ರಾಶಿ: ಯಾರು ಬೇಕಾದರೂ ತುಂಬಿಕೊಳ್ಳಬಹುದು ಆ ರಾಶಿಯಲ್ಲಿ ಬೇಕಾದ ಕಾಳನ್ನು :

ಶಕ್ತಿಯೊಡನೊಂದು ಸ್ಫೂರ್ತಿ !

ನಾಡತುಂಬಿತು ಕೀರ್ತಿ !

ಶಿವಾದ್ವೈತ ತತ್ತ್ವ ಪ್ರಚಾರಕ ಸಮಿತಿಯನ್ನು ಸ್ಥಾಪಿಸಿದ ಶ್ರೀಗಳವರಿಗೆ ಸಮಿತಿಯ ಕಾರ್ಯ ಚಟುವಟಿಕೆಗಳಿಗೆ ಮೂರ್ತಿಸ್ವರೂಪ ಕೊಡುವ ಸಂಚಾಲಕ ಶಕ್ತಿಯೊಂದರ ನೆರವು ಬೇಕಿತ್ತು.

ಅಂದು ಶಿವಯೋಗ ಮಂದಿರದಲ್ಲಿ !

ಕಿರಿಯ, ಆತ್ಮೀಯ ಗೆಳೆಯರಾಗಿದ್ದ ಅಡ್ನೂರು

ಶ್ರೀ ಚಂದ್ರಶೇಖರ ದೇವರು !

ಗೂಳೂರು ಶ್ರೀಶೈಲ ನಿಡುಮಾಮಿಡಿ ಸಂಸ್ಥಾನದ

ಆದರ್ಶ ಜಗದ್ಗುರುಗಳು! ಅವರು ನೆರವಾದರು.

ಅವರ ನೆರವನ್ನು ಯಾರೂ ಬೆಲೆ ಕಟ್ಟುವಂತಿರಲಿಲ್ಲ. ಸ್ವತಃ ಸಮಿತಿಯಾಗಿ ಸತತವಾಗಿ ದುಡಿದಿದ್ದಾರೆ. ಜಗದ್ಗುರುಗಳ ಬಗ್ಗೆ ಹೇಳುವುದಾದರೆ ನಿಜಕ್ಕೂ ಅವರೇ ಒಂದು ಸಂಸ್ಥೆ. ಅವರ ಬಳಗ ದೊಡ್ಡದು. ಅವರ ಸಾಹಿತ್ಯಸೇವೆಯ ಬೆಳಗು ಹಿರಿಯದು.

ಸಾಹಿತ್ಯ ಕ್ಷೇತ್ರದ ಸೂರ್ಯಸಿಂಹಾಸನ!

ಶ್ರೀ ಜ. ಚ. ನಿ. ಸನ್ನಿಧಿಯ ವಿರಾಜಮಾನ!

ಜಗದ್ಗುರುಗಳವರು ಶಿವಾದ್ವೈತ ತತ್ತ್ವ ಪ್ರಚಾರಕ ಸಮಿತಿಯ ಎಲ್ಲ ಕಾರ್ಯಗಳಿಗೂ ಸುಂದರ ರೂಪು ಕೊಡುತ್ತಾ ಬಂದಿದ್ದಾರೆ. ಸಮಿತಿ ಅವರ ಸೇವೆಗೆ ಎಷ್ಟು ಋಣಿಯಾದರೂ ತೀರದು.

ಬೆಳಗಿನೊಂದಿಗೆ ಬೆಳಗು!

ಮಹಾ ಬೆಳಗು!

ಶ್ರೀಗಳವರ ಮತ್ತು ಜಗದ್ಗುರುಗಳವರ ಸಂಬಂಧ ಅನ್ಯಾದೃಶವಾದುದು. ಎರಡೂ ಸಾತ್ವಿಕ ಕಳೆಗಳು. ಆ ಕಳೆಗಳಿಂದ ಮಹಾಪ್ರಕಾಶ. ಆ ಪ್ರಕಾಶದಲ್ಲಿ ಪ್ರಾಪಂಚಿಕರಾದ ನಾವು ಕಳೆದುಹೋದ ಎಷ್ಟೋ ವಸ್ತುಗಳನ್ನು ಹುಡುಕಿಕೊಂಡಿದ್ದೇವೆ. ಎಷ್ಟೋ ಸಂಕಟಗಳಿಂದ ಪಾರಾಗಿದ್ದೇವೆ. ಈ ಮಹಾತ್ಮರಿಬ್ಬರೂ ಶಿವಾನುಭವ ಸಮ್ಮೇಳನ ಹಾಗೂ ಉಳಿದೆಲ್ಲ ಧಾರ್ಮಿಕ ಕ್ಷೇತ್ರದಲ್ಲಿ ಹಾಸು–ಹೊಕ್ಕಾಗಿ ಸೇವೆಸಲ್ಲಿಸುತ್ತಿದ್ದಾರೆ. ಭಕ್ತಾದಿಗಳ ಮೇಲೆ ಆಶೀರ್ವಾದದ ಅಮೃತವರ್ಷ ಸುರಿಸಿದ್ದಾರೆ.

ಅರವತ್ತು ತುಂಬಿತು! ಹನ್ನೆರಡು ಸಂದಿತು.

ಇಲ್ಲಿಗೆ ಸದಾಶಿವ ಶಿವಾಚಾರ್ಯರಿಗೆ ಅರವತ್ತು ವರ್ಷ ತುಂಬಿತು. ತಾವು ಸಂಕಲ್ಪಿಸಿದ ಶಿವಾದ್ವೈತ ತತ್ತ್ವ ಪ್ರಚಾರಕ ಸಮಿತಿಗೂ ಹನ್ನೆರಡು ವರ್ಷ ತುಂಬಿತು. ಯೋಗಾಯೋಗದಿಂದ ಎರಡು ಮಹಾ ಸುಕೃತಿಗಳು ಒಮ್ಮೆಗೇ ಸಂಧಿಸಿವೆ.

ಅರುವತ್ತು ವರ್ಷ ಜೀವಿಸಿರುವವರಿಗೇನೂ ಕೊರತೆಯಿಲ್ಲ. ಆದರೆ ಅರಿತು ಬಾಳಿದವರಿಗೆ ಕೊರತೆಯಿದೆ. ಆದರೂ ಕನ್ನಡ ನಾಡಿನ ಜ್ವಲಂತ ಜೀವನಾಡಿಯಲ್ಲಿ ಅಲ್ಲಲ್ಲೆ ಅಂತಹ ಇಡಿ ಬಾಳಿನ ಒರತೆಗಳು ಉಕ್ಕಿ ಕೊರತೆಯನ್ನು ತುಂಬಿವೆ. ಶ್ರೀ ಸದಾಶಿವ ಶಿವಾಚಾರ್ಯರೂ ಅವುಗಳಲ್ಲಿ ಅಂತಹ ಒಂದು ಒರತೆ!

ಶಿವಯೋಗ ಮಂದಿರದಲ್ಲಿ ಸಾಧಕರಾಗಿ ಸೇವೆ ಸಲ್ಲಿಸಿದ ಶ್ರೀಗಳು ಮಂದಿರದ ಮಹೋದ್ದೇಶಗಳನ್ನು ಚಾಚೂ ತಪ್ಪದೆ ನಡೆಸುತ್ತಾ ಬಂದಿದ್ದಾರೆ. ಲೌಕಿಕ ಪಾರಮಾರ್ಥವೆರಡನಳವಡಿಸಿಕೊಂಡು ಬಾಳು ಸಾಗಿಸುವಂತೆ ಭಕ್ತಜನಕೋಟಿಗೆ ಉಪದೇಶ ಮಾಡುತ್ತಾ ಧರ್ಮದ ನಿಜ ಸ್ವರೂಪವನ್ನು ನಾಡಿಗೆ ತೋರಿಸುತ್ತಾ ಕಳೆದ ನಲವತ್ತು

ವರ್ಷಗಳಿಂದ ದುಡಿಯುತ್ತಿದ್ದಾರೆ. ವಯಸ್ಸು ಅರುವತ್ತಾಗಿರಬಹುದು. ಆದರೆ ಅವರಿಗಿರುವ ಹುಮ್ಮಸ್ಸು, ತರಣರನ್ನು ನಾಚಿಸುವಂತಿದೆ.

ಸಾತ್ವಿಕ ಹಂಬಲ !
ಶಿವ–ಶಕ್ತಿಯ ಬೆಂಬಲ !

ಜನಜೀವನ ಪೂರ್ಣ ಸಂಸ್ಕೃತಿಮಯವಾಗಬೇಕೆಂಬುದೇ ಶ್ರೀಗಳವರ ಉತ್ಕಟೇಚ್ಛೆ; ಅನುದಿನದ ಹಂಬಲ. ಸಾತ್ವಿಕ ತೇಜೋಮೂರ್ತಿಗಳಾದ ಅವರ ಈ ಹಂಬಲದಲ್ಲಿ ಶಿವ–ಶಕ್ತಿಗಳಿರುವುದರಿಂದಲೇ ಅವರು ಹಿಡಿದ ಕೆಲಸದಲ್ಲಿ ಯಶಸ್ಸುಗಳಿಸಿದ್ದಾರೆ. ಅವರು ಪಾದವಿಟ್ಟೆಡೆಯಲ್ಲಿ ಭಕ್ತಜನ ಪವಿತ್ರ ಹೃದಯರಾಗಿ ಧರ್ಮಜಾಗೃತರಾಗಿದ್ದಾರೆ.

ದೈಹಿಕ ಚಿಂತೆಗಳನ್ನು ದೂರಮಾಡುವುದರಲ್ಲಿ ನಮ್ಮ ದೇಹ ಸವೆಸುವುದು ದೊಡ್ಡ ಕೆಲಸವೇನೋ ಸರಿ. ಅಂತೇ ಅದರ ಚಿಂತೆಯನ್ನು ಹೆಚ್ಚುಕಾಲದವರೆಗೆ ನಿವಾರಿಸುತ್ತಿದ್ದರೆ ನಮ್ಮ ಶ್ರಮದ ಫಲವೂ ಹೆಚ್ಚು ಪುಣ್ಯಪ್ರದವಾಗುತ್ತದೆ. ಆದರೆ ಕೇವಲ ದೈಹಿಕಚಿಂತೆಗಳ ನಿವಾರಣೆ ಕ್ಷಣಿಕ. ಅವು ಕಡೆಯತನಕ ದೂರಾಗಬೇಕಾದರೆ ಆಧ್ಯಾತ್ಮಜ್ಞಾನ ಅವಶ್ಯಕ. ಇಂತಹ ಆಧ್ಯಾತ್ಮಜ್ಞಾನದಾನ ಎಲ್ಲ ದಾನಕ್ಕಿಂತ ಮಿಗಿಲಾದುದು; ಮಹೋನ್ನತವಾದುದು.

ಭಾರತದ ಧರ್ಮ !
ಆತ್ಮಜ್ಞಾನ ಮರ್ಮ !

ಇಂದು ನಿರೀಕ್ಷೆಗಿಂತ ಹಿರಿದಾಗಿ ಬೆಳೆದಿರುವ ವಿಜ್ಞಾನ ಪ್ರಪಂಚ ಆಧ್ಯಾತ್ಮಜ್ಞಾನದ ತಳಹದಿಯಿಲ್ಲದೆ ಅನಂತ ಅನಾಹುತಗಳಿಗೆ ದಾರಿಯಾಗಿರುವುದು ನಮಗೆ ತಿಳಿಯದ ವಿಷಯವಲ್ಲ. ಎಂತಲೇ ಆದಿಯಿಂದಲೂ ಈ ನಮ್ಮ ಪವಿತ್ರ ಭಾರತದಲ್ಲಿ ಆಧ್ಯಾತ್ಮಜ್ಞಾನಕ್ಕೆ ಅತ್ಯಂತ ಉತ್ತುಂಗಸ್ಥಾನ ಕೊಟ್ಟುಕೊಂಡು ಬರುತ್ತಿದ್ದಾರೆ.

ಇಂತಹ ಮಹಾಜ್ಞಾನದಾಸೋಹದ ದೀಕ್ಷೆ ವಹಿಸಿ ಹಗಲಿರುಳೆನ್ನದೆ ಈ ಇಳಿವಯಸ್ಸಿನಲ್ಲಿ ಭಕ್ತಜನರ ಮಧ್ಯೆ ಸಂಚಾರಮಾಡಿ ಸಭೆ ಸಮ್ಮೇಳನಗಳನ್ನು ನಿರ್ವಹಿಸುತ್ತ ಹೊಣೆಗಾರಿಕೆ ಹೊತ್ತು ದುಡಿಯುತ್ತಿರುವ ಶ್ರೀಗಳವರದು ಸಾಮಾನ್ಯ ಬಾಳಲ್ಲ. ತುಂಬಿದ ಬಾಳು.

ಯೋಗಿವರೇಣ್ಯ !
ನಾಡವರ ಪುಣ್ಯ !

ಅರುವತ್ತು ವರ್ಷವೂ ಆದರ್ಶಮೂರ್ತಿಗಳಾಗಿ ನಮಗೆ ಜ್ಞಾನಜ್ಯೋತಿಯಾಗಿ ಧರ್ಮದರ್ಶನ ಮಾಡುತ್ತಿರುವ ಮಹಾಯೋಗಿ ಶ್ರೀ ಸದಾಶಿವ ಶಿವಾಚಾರ್ಯರವರ ಗುಣಶೀಲಗಳ ಬಗ್ಗೆ ಕೆಲವು ಮಾತನ್ನು ಬರೆಯುವೆನೆಂದರೆ ಭಾಷೆಯಿಲ್ಲ. ಎಲ್ಲ ಬರಡು, ಕೊರಡು ಕೊನರಿಸುವ ಜಗದ್ಗುರು ಶ್ರೀ ಜ. ಚ. ನಿ. ಸೂರ್ಯ ಸಿಂಹಾಸನಾಧೀಶ್ವರ

ಸನ್ನಿಧಿಗೆ ಶರಣುಹೋಗುತ್ತೇನೆ. ಶ್ರೀಗಳವರ ಬಗ್ಗೆ ಅವರು ಅಪ್ಪಣೆ ಕೊಡಿಸಿರುವ ನುಡಿಮುತ್ತುಗಳನ್ನು ಇಲ್ಲಿ ಬಳಸಿದರೆ ಸಾಕೆಂದು ಭಾವಿಸುತ್ತೇನೆ.

" ಶ್ರೀ ಸದಾಶಿವ ಶಿವಾಚಾರ್ಯರು ಇಂದಿನ ಒಬ್ಬ ಆದರ್ಶ ಮೂರ್ತಿಗಳು! ಇವರು ನಡೆಯಲ್ಲಿ ಶುದ್ಧ ; ನುಡಿಯಲ್ಲಿ ಶುದ್ಧ.

" ಇವರ ಆಚಾರ ನಿಷ್ಠೆ ಅನನ್ಯ ಸಾಧಾರಣವಾದುದು. ಯೋಗ, ತಪಸ್ಸು, ವಿದ್ವತ್ತು ಮುಂತಾದ ಇವರ ಸರ್ವತೋಮುಖವಾದ ಸತ್‌ಸಾಧನೆ ಸರ್ವಮಾನ್ಯ ವಾದುದು.

' ಇವರ ಆಧ್ಯಾತ್ಮ ತೇಜಸ್ಸು ಅಪೂರ್ವವಾದುದು. ಇವರ ವಿನಯ ಮತ್ತು ವಿಶಾಲ ಮನೋಭಾವನೆಗಳು ಎಂಥವರ ಮನಸ್ಸನ್ನೂ ಆಕರ್ಷಿಸುತ್ತವೆ. ಇವರ ಕರ್ತವ್ಯ ದಕ್ಷತೆ, ನಿಸ್ವಾರ್ಥಪರತೆ, ಇವರ ಜ್ಞಪ್ತಿಶಕ್ತಿ ಆಶ್ಚರ್ಯಕರವಾದುವು.

' ಇವರ ದಿನಚರಿಯು ಅನುಕರಣನೀಯವಾದುದು. ಸಂಸ್ಕೃತಿಗಾಗಿ ಇವರ ಜೀವನ ಮೀಸಲಾಗಿದೆ. ಸಾಮಾಜಿಕರಿಗಾಗಿ, ಸಾಹಿತ್ಯಕ್ಕಾಗಿ ಇವರ ಶಕ್ತಿಸಂಪತ್ತಿ ಸೂರೆಗೊಳ್ಳುತ್ತಿದೆ.

' ಇದಲ್ಲದೆ ನಾಡಿನ ಕ್ಷೇಮಕ್ಕಾಗಿ ಇವರ ತಪಸ್ಸು, ಇವರ ತಿಳಿಬಾಳು (ಪಾವನತೆ) ವಿನಿಯೋಗವಾಗುತ್ತಿದೆ. ಇಂಥವರಿರುವುದು ಹಿರಿಯ ಪುಣ್ಯವಲ್ಲವೆ? ಹಿರಿಯ ಭಾಗ್ಯವಲ್ಲವೆ?"

ಹಾನಗಲ್ಲ ಕುಮಾರ ಶಿವಯೋಗಿಗಳು ಬಿಟ್ಟುಹೋಗಿರುವ ಈ ಹೊಂಬಳ್ಳಿ ಇಂದು ಹಳ್ಳಿ ಸೇರಿದ್ದರೂ ಹತ್ತಾರು ಮಾರು ಹಬ್ಬಿದೆ; ಹೂ ಬಿಟ್ಟಿದೆ; ಫಲ ಕೊಟ್ಟಿದೆ.

ವೀರಶೈವ ಸಂಸ್ಕೃತಿಯ ಪ್ರಚಾರಕರಾಗಿ, ಸ್ವಯಂ ಆಚಾರ ವಿಚಾರ ಅನುಸಾರಕ ರಾಗಿ, ಭಕ್ತಜನಕೋಟಿಯ ಹೃದಯವಾಸಿಗಳಾಗಿರುವ ಶ್ರೀ ಸದಾಶಿವ ಶಿವಾಚಾರ್ಯರಿಗೆ ಗೌರವ ತೋರಿಸಲು ಭಕ್ತಿ ಇಲ್ಲದ ಬಡವರು ನಾವು. ಆದರೂ ಈ ಶುಭ ಸಮಯ ದಲ್ಲಿ ಅವರಿಗೆ ನೂರು ವರ್ಷ ಆಯುಷ್ಯ ಕೋರುವ ಹೃದಯವಿದೆ. ಹಕ್ಕಿದೆ. ಅಂತೇ ಷಷ್ಟ್ಯಬ್ದವನ್ನು ಆಚರಿಸಿದ ಭಕ್ತರಿಗೆ ಶತಾಬ್ದವಾಚರಿಸಲು ಪುಣ್ಯವಕಾಶವಾಗುವು ದಾದರೆ ಅದೇ ಭಾಗ್ಯ! ಅದೇ ಸೌಭಾಗ್ಯ!!

—ಗೊ. ರು. ಚನ್ನಬಸವಪ್ಪ.

## ಶ್ರೀಗಳವರ ಕೃತಿ ರಚನೆಯ ಕಾಲಮಾನ

೧. ಪ್ರಭು ಜಂಗಮವರ್ಯ ಅಷ್ಟೋತ್ತರ ಶತನಾಮಾವಳಿ .... ೧೯೨೯

೨. ಶಿವಪೂಜಾವಿಧಿ .... ೧೯೩೦

೪. ಪಶು ಮತ್ತು ಪತಿಧರ್ಮ ವಿವೇಕ ಅಥವಾ ಗುಟ್ಟು .... ೧೯೩೩

## ಶ್ರೀಗಳವರ ಬಾಳ ಬಳ್ಳಿ.

## ಶ್ರದ್ಧಾವಂತ ಸಾಧಕರು

# ಶ್ರೀ ಸದಾಶಿವ ಶಿವಾಚಾರ್ಯರು.



ವೀರಶೈವ ತತ್ತ್ವ – ಸಂಸ್ಕೃತಿಗಳ ಕೇಂದ್ರ ಶಿವಯೋಗ ಮಂದಿರ. ಸ್ವಾಮಿಗಳಾಗುವ ಸಾಧಕರನ್ನು ಸಂರಕ್ಷಿಸುವುದು ಶಿವಯೋಗಮಂದಿರ. ಶಿವಯೋಗ ಸಾಧಕರ ತಪೋಭೂಮಿಯದು ಶಿವಯೋಗ ಮಂದಿರ. ಅಂತಹ ಆ ಶಿವಯೋಗ ಮಂದಿರದ ಸಾಧಕ ಸಮೂಹದಲ್ಲಿ ಶ್ರೀ ಸದಾಶಿವ ಶಿವಾಚಾರ್ಯರೊಬ್ಬರು. ಒಬ್ಬರು ಮಾತ್ರವಲ್ಲ, ಒಕ್ಕಣಿಸಲು ಯೋಗ್ಯರು. ಯೋಗ–ಶಿವಯೋಗಗಳಲ್ಲಿ ಇವರಿಗಿದ್ದ ಶ್ರದ್ಧೆ ಸೀಮಾತೀತವಾದುದು. ನಿಷ್ಠೆ ನಿರತಿಶಯವಾದುದು. ಅವಧಾನ – ಅಭಿಮಾನಗಳು ಅಸದೃಶವಾದುವು. ಇವರ ಆ ಶ್ರದ್ಧಾಪೂರಿತ ಸಾಧನೆ ಸಂಸ್ಥೆಯ ಕರ್ತರ ಆಶಾಂಕುರಕ್ಕೆ ದೋಹದವಾಯಿತೆಂದರೆ ಅತಿಶಯೋಕ್ತಿಯಲ್ಲ. ಯಾರೂ ಗಳಿಸದ ಶ್ರೀ ಹಾನಗಲ್ಲ ಕುಮಾರ ಮಹಾಸ್ವಾಮಿಗಳವರ ಘನ ಕೃಪೆಯನ್ನು ತಮ್ಮ ಸಾಧನ ಜೀವನದಲ್ಲಿಯೆ ಸಂಗಳಿಸಿದ್ದರು ಶ್ರೀ ಸದಾಶಿವ ಶಿವಾಚಾರ್ಯರು. ತಮ್ಮ ಸಾಧನಸಿದ್ಧಿಯಲ್ಲಿಯೇ ತಮ್ಮ ಜೀವನ ಸಿದ್ಧಿಯನ್ನು ಕಂಡುಕೊಂಡ ಕಲಿಗಳು. '.... ಕಶ್ಚಿದ್ಯತತಿ ಸಿದ್ಧಯೇ' ಎಂಬ ಗೀತೋಕ್ತಿಗೆ ಇವರೇ ಸಾಕ್ಷಿಯಾಗಿದ್ದರು. ತಮ್ಮ ಸಾಧನೆಯ ಹೊರತು ಮತ್ತೊಂದನ್ನು ಗಮನಿಸುತ್ತಿರಲಿಲ್ಲ. ಹಾಳ ಹರಟೆಯಲ್ಲಿ ಹೊತ್ತುಗಳೆಯುತ್ತಿರಲಿಲ್ಲ. ಅಲ್ಲ ಸಲ್ಲದುದನ್ನು ಬಯಸಿ ಬಾಯಾರುತ್ತಿರಲಿಲ್ಲ. ಶಿವಯೋಗ ಮಂದಿರದ ಎಲ್ಲ ನಿಯಮಗಳನ್ನು ನಿಜಾಚರಣೆಯಲ್ಲಿ ತರುವುದೇ ಇವರ ಜೀವನ ಸಾಧನ. ಇದರಿಂದಾಗಿ ಇವರೊಬ್ಬರು ಸಾಧಕಾಗ್ರಣಿಯಾಗಿದ್ದರು,

ಇವರಿಗೆ ಹಾನಗಲ್ಲ ಕುಮಾರ ಶ್ರೀಗಳವರಲ್ಲಿ ಶ್ರದ್ಧೆ ಅಪಾರ. ಅದರಿಂದಾಗಿ ಅವರ ಅಪ್ಪಣೆಯನ್ನು ಅರೆಸಾಸಿವೆಯಷ್ಟನ್ನೂ ಅತಿಕ್ರಮಿಸದ ಜೀವನ ಇವರದು. ಅವರ ಆಚರಣೆಗಳಲ್ಲಿ ಒಂದನ್ನೂ ಬಿಡದೆ ನಡಿಸಿಕೊಂಡು ಬಂದ–ಬರುತ್ತಿರುವ ಶ್ರದ್ಧಾನ್ವಿತರು ಇವರು. ಇವರ ಆ ಶ್ರದ್ಧೆಗೆ ಸೀಮೆಯಿಲ್ಲ. ಇವರು ತೊಟ್ಟ ಆಚಾರ–ವಿಚಾರಗಳಲ್ಲಿ ಅದೆಷ್ಟೋ ತೊಡಕು ತೊಂದರೆಗಳಿರಲಿ – ಬರಲಿ ಬಿಡುವವರಲ್ಲ, ಬಿಟ್ಟಿಲ್ಲ. ಭಗೀರಥ ಸಾಹಸ ಇವರದು. ಭಾವಪೂರ್ಣ ಸಾಹಸ ಇವರದು. ಗುರುವಿನ ಅಜ್ಞೆಯನ್ನು ಅಂಗಾಂಗಗಳಲ್ಲಿ ಆತ್ಮನಲ್ಲಿ ಅವಿರಳವಾಗಿ ಅರಗಿಸಿಕೊಳ್ಳುವ ಸಚ್ಛಲ ಶ್ರೀ ಸದಾಶಿವ ಶಿವಾಚಾರ್ಯರದು. ಇಂತಹ ಸತ್ಯವಂತ ಶ್ರದ್ಧಾವಂತ ಸಾಧಕರು ಸಿಕ್ಕುವುದು ತೀರ

ಅಪರೂಪ. ಇಂತಹ ಶಿಷ್ಯರನ್ನು ಪಡೆದ ಶ್ರೀಗುರು, ಪಡೆದ ಸಂಸ್ಥೆ ನಿಜಕ್ಕೂ ಕೃತಾರ್ಥ.

ಪೂಜ್ಯ ಹಾನಗಲ್ಲ ಶ್ರೀಗಳವರ ಕೃಪೆಗೆ ಪಾತ್ರರಾಗುವುದು ಕಂಡವರಿಗೆಲ್ಲ ಸಾಧ್ಯವಿಲ್ಲ. ಕಡುಕಷ್ಟಸಾಧ್ಯ. ಅಂತಹದನ್ನೂ ಇವರು ಅದೇ ತಮ್ಮ ಸಾಧನ ಜೀವನದಲ್ಲಿಯೆ ಸಂಗಳಿಸಿದ್ದರು. ಜೀವನ ದೃಷ್ಟಿಯಲ್ಲಿ ಜೀವಿಗಳಲ್ಲೆಲ್ಲ ಅಪಾರ ಕರಣೆಯಿತ್ತು ಕುಮಾರ ಯೋಗಿಗಳಿಗೆ! ಆದರೆ ಸಾಧನ ಜೀವನಪಥದಲ್ಲಿ ಮಾತ್ರ ಅವರ ಕರುಳು ಕಲ್ಲಿಗಿಂತ ಕಠಿಣ! ಸಾಧಕನು ಶ್ರದ್ಧಾನ್ವಿತನಾಗಿ ಶುದ್ಧ ಮನಸ್ಕನಾಗಿ ಸತ್ಯಸಂಕಲ್ಪವುಳ್ಳವನಾಗಿದ್ದರೆ ಮಾತ್ರ ಅಂಥವನನ್ನು ಆತ್ಮೀಯವಾಗಿ ಅಂಗೀಕರಿಸುತ್ತಿದ್ದರು ಹಾನಗಲ್ಲ ಶ್ರೀಗಳವರು. ಅಂಗೀಕರಿಸಿದ್ದರೂ ಆಡಿ ತೋರಿಸುತ್ತಿರಲಿಲ್ಲ. ಹೊಗಳಿ ತೃಪ್ತಿಪಡಿಸುತ್ತಿರಲಿಲ್ಲ. ಅವರಿಗಿನ್ನೂ ಹೆಚ್ಚಿನ ಸಾಧನ ಮಾರ್ಗವನ್ನು ತೋರುತ್ತಿದ್ದರು. ಅವರ ಪ್ರಗತಿಗಾಗಿ ಮತ್ತೂ ಮಿಗಿಲಾದ ಸಹಾಯ ಸಂಪತ್ತಿಯನ್ನು ಒದಗಿಸಿ ಅವರನ್ನು ಅವರಿಗಿರುವ ಸಾಧನ ಮಾರ್ಗದಲ್ಲಿ ಮುನ್ನಡೆಸುತ್ತಿದ್ದರು. ಇವರನ್ನು ಅದೇ ರೀತಿಯಲ್ಲಿ ಮುನ್ನಡೆಸಿದರು. ಇವರಾದರೂ ಅವರು ತೋರಿದ ಜನರಿಗೆ ಅಭಿಪ್ರಾಯವಿರುವ ಅವರು ತೊಟ್ಟ ಸಾಧನೆಗಳನ್ನೆಲ್ಲ ಸಾಸಿವೆಯಷ್ಟೂ ಬಿಡದೆ ಶ್ರದ್ಧೆಯಿಂದ ಸ್ವಾಭಿಮಾನದಿಂದ ಸಾಧಿಸುತ್ತಿದ್ದರು.

ಶಿವಯೋಗ ಮಂದಿರದಲ್ಲಿ ಇವರು ಉಳಿದವರಂತೆ ಅಧ್ಯಯನ ಮಾತ್ರವನ್ನು ಅರಗಿಸಿಕೊಳ್ಳಲಿಲ್ಲ. ನೆಪಮಾತ್ರಕ್ಕೆ ನೇಮ ಅನುಸರಿಸಬೇಕೆಂದು ನಟಿಸಿದವರಲ್ಲ. ಕಟ್ಟುಪಾಟು ಮಾತ್ರಕ್ಕೆ ಯೋಗ-ಶಿವಯೋಗಗಳನ್ನು ಆಚರಿಸುತ್ತಿರಲಿಲ್ಲ. ನೀತಿರೀತಿಗಳ ಸಂಚಯದಲ್ಲಿ ಕರಣೇಂದ್ರಿಯಗಳ ಸಂಯಮದಲ್ಲಿ ಯೋಗ ಶಿವಯೋಗಗಳ ಸಂಪಾದನೆಯಲ್ಲಿ ಇವರಿಗಿರುವ ಶ್ರದ್ಧೆ ಸಾಹಸಗಳು ಅದ್ವಿತೀಯವಾದವು. ಇವರು ಅಲ್ಲಿ ಬರೀ ಸಂಸ್ಕೃತ ವಿದ್ಯೆಯೊಂದನ್ನೇ ಕಲಿಯಲಿಲ್ಲ; ಜತೆಗೆ ಸಂಸ್ಕಾರ ಶುದ್ಧಿಯನ್ನೂ ಸಮನಿಸಿಕೊಂಡರು. ಬರೀ ಓದಿದವರಲ್ಲ; ಬರೆದೋದಿದರು. ಬಾಹ್ಯಾಡಂಬರಕ್ಕೆ ಬಾಯ್ನೀರು ಬಿಟ್ಟವರಲ್ಲ: ಭಾವಾಂಬರದಲ್ಲಿ ಭಾವಾವೇಶದಲ್ಲಿ ವಿಹರಿಸಿದವರು. ಬರೀ ದೇಹ ಪೋಷಣೆಯಲ್ಲಿ ಇವರಿಗೆ ದೃಷ್ಟಿಯಿರಲಿಲ್ಲ; ದೇಹಿಯನ್ನು ದಿವ್ಯತೆಗೇರಿಸುವ ದಿವ್ಯದೃಷ್ಟಿ ಇವರಿಗಿತ್ತು. ಬಣಗುನುಡಿಗಳ ಬಳಸುತ್ತ ಹೇಗಾದರೂ ಹೊತ್ತು ನೂಂಕಿ ಬಿಡುವ ಹೃದಯ ಇವರದಾಗಿರಲಿಲ್ಲ; ಕ್ಷಣ ಕ್ಷಣವನ್ನೂ ಸತ್ಯಸಾಧನೆಗೆ ಸಾಹಿತ್ಯ ಸಂಪಾದನೆಗೆ ತಪ್ಪದೆ ಉಪಯೋಗಿಸುತ್ತಿದ್ದರು. ಇವರ ಬಳಿಯಲ್ಲಿ ಈಗಲೂ ಸಹ ಆಗ ಸಂಪಾದಿಸಿದ ಸುಭಾಷಿತ ಸಾಹಿತ್ಯ ಯೋಗಸಾಹಿತ್ಯ ಬೇಕಾದಷ್ಟಿದೆ. ಪೂಜ್ಯ ಹಾನಗಲ್ಲ ಶ್ರೀಗಳವರ ಸಾಹಿತ್ಯ ಸಂಗ್ರಹ ಇವರಲ್ಲಿದೆ. ಶಿಕ್ಷಕರು ಕಲಿಸಿದಷ್ಟನ್ನೇ ಕಲಿವ ಸ್ವಭಾವ ಇವರದಲ್ಲ; ಸಣ್ಣದೃಷ್ಟಿ ಇವರದಲ್ಲ. ಸಂಕುಚಿತಮತಿ ಇವರದಲ್ಲ. ಅದಕ್ಕೂ ಹೆಚ್ಚಿನದನ್ನು ಬೆದಕಿ ಕಲಿವ ದಿವ್ಯಭಾವ-ದಿವ್ಯದೃಷ್ಟಿ-ದೀಪಕ ಬುದ್ಧಿ ಇವರವು.

ಇವರು ಶಿ. ಮಂದಿರದಲ್ಲಿ ಸಂಸ್ಕೃತ ವ್ಯಾಕರಣ ಓದುತ್ತಿದ್ದರೂ ಸ್ವತಃ ಆಗಮೋಪನಿಷತ್ ಪುರಾಣ ಪುಣ್ಯಕಥೆಗಳನ್ನು ಚೆನ್ನಾಗಿ ಓದಿಕೊಂಡಿದ್ದಾರೆ. ಶ್ರೀಗಳಿರುವಾಗ ಓದುತ್ತಿರುವಾಗ 'ಶಿವಪೂಜಾವಿಧಿ' ಯೆಂಬ ಕೃತಿಕರ್ತರೆನಿಸಿಕೊಂಡ ಪ್ರಥಮ ಕೀರ್ತಿ ಇವರದು.

ನುಡಿ ಸಂಪಾದನೆಯಲ್ಲಿ ಹೇಗೆ ಆಸಕ್ತಿಯೋ ಹಾಗೆ ನಡೆ ಸಂಪಾದನೆಯಲ್ಲಿಯೂ ಇವರಿಗಿತ್ತು ಆಸಕ್ತಿ. ಇದರಿಂದಾಗಿ ಇವರ ಮೇಲೆ ಹಾ. ಶ್ರೀಗಳವರ ಕೃಪಾದೃಷ್ಟಿ ಬಿದ್ದಿತ್ತು. ಇವರ ಆಚಾರ-ವಿಚಾರಗಳ ಆಸಕ್ತಿಯನ್ನು ಕಂಡು ಇವರನ್ನು ಮೆಚ್ಚಿ ತಮ್ಮ ಆಪ್ತಸೇವೆಯಲ್ಲಿ ಸದ್ಭಾವ ಸೇವೆಯಲ್ಲಿ ಹೆಚ್ಚುಕಾಲ ಇರಿಸಿಕೊಂಡಿದ್ದರು. ಅನುಭವ ಶಾಸ್ತ್ರವನ್ನೂ ಆತ್ಮೀಯ ಇಂಗಿತಾಶಯಗಳನ್ನೂ ಇವರಿಗೆ ತಿಳಿಸುತ್ತಿದ್ದರು.

ಶ್ರೀ ಸದಾಶಿವ ಶಿವಾಚಾರ್ಯರು ದುರ್ಮಾರ್ಗ-ದುರ್ಮ್ಮಾನಗಳಲ್ಲಿ ಕಾಲ ಕಳೆದವರಲ್ಲ. ದುರಹಂಕಾರದಲ್ಲಿ ದುಡುಕುವವರಲ್ಲ. ದುರ್ವ್ಯಾಪಾರ-ದುರಾಚಾರಗಳು ಅವರ ಬಳಿ ಸುಳಿಯಬಾರದು. ಕೃತಕತೆಯಾಗಲಿ ಕ್ರೂರತೆಯಾಗಲಿ ಅವರಲ್ಲಿಲ್ಲ. ಕುಹಕ-ಕುಭಾಷೆಯನಾಡುವವರಲ್ಲ. ಒಬ್ಬರನ್ನು ಆಡಿಕೊಳ್ಳುವ ಸ್ವಭಾವ ಅವರದಲ್ಲ. ಅವರಿಗೆ ವಿರೋಧವಾಗಿದ್ದವರನ್ನೂ ಸಹ ಅವರು ಆಡಿಕೊಳ್ಳುವುದಿಲ್ಲ, ಅವರನ್ನು ವಿರೋಧಿಸಿ ಕೆಲಸ ಮಾಡುವವರಲ್ಲ. ಜನತೆಯ ಜಂಜಡದಲ್ಲಿ ಇರುವವರಲ್ಲ. ಶೀಲ, ಶಿವಪೂಜೆ, ಸ್ವಾಧ್ಯಾಯ, ಏಕಾಂತವಾಸಗಳೇ ಅವರ ಜೀವನ ಸಾಧನಗಳು. ಸತ್ಯ ಸಾಧನೆಯಲ್ಲಿ ಸ್ವಂತ ಸಾಧನೆಯಲ್ಲಿ ಸ್ವತಂತ್ರರು; ನಿತ್ಯನಿರತರು. ಊಟದಲ್ಲಿ ರುಚಿಯ ಬಯಸುವವರಲ್ಲ. ಉಡಿಗೆಯಲ್ಲಿ ರುಚಿರತೆಯ ಬಲೆಗೆ ಬೀಳುವವರಲ್ಲ. ಅವರ ಸತ್ಯ ಸ್ವಾಭಿಮಾನ ಸ್ತುತ್ಯವಾದುದು; ಅವರ ಸ್ಥೈರ್ಯ ಸಾಧನ, ಧರ್ಮ ಧಾರಣ, ಜ್ಞಾನ - ಧ್ಯಾನಪಾಲನ ಇವೇ ಮುಂತಾದ ಗುಣಗಳು ಗಮನಾರ್ಹವಾದವು. ಎಲ್ಲಕ್ಕೂ ಮಿಗಿಲಾಗಿ ಇವರಲ್ಲಿ ವಿಷಯವಿರತಿ-ಮನೋಭಾವ ವಿಶೇಷವಾದುದು; ನಿಸರ್ಗವಾದುದು. ಇದು ಇವರಲ್ಲಿ ಚಿಕ್ಕಂದಿನಿಂದಲೂ ಚೆನ್ನಾಗಿ ನೆಲಸಿದೆ. ಆಹಾರ, ವಿಹಾರ, ಅಧಿಕಾರ, ಅಹಂಕಾರ, ಯಾವುದರಲ್ಲಿಯೂ ಇವರಿಗೆ ಆಶೆಯಿಲ್ಲ. ಆಶಾ ಪಾಶದಲ್ಲಿ ಬಂಧಿತವಾಗಿ ಬಳಲುತ್ತಿದೆ ಜಗವೆಲ್ಲ. ಆಸೆಗಾಗಿಯೆ ಅಸುಗಳ ನೀಗುತ್ತಿದೆ ಜಗವೆಲ್ಲ. ಇವರಾದರೊ ಆ ಆಸೆಯನ್ನು ಆಮೂಲಾಗ್ರವಾಗಿ ಕಿತ್ತೆಸೆದಿದಾರೆ. ಶಾಂತಿ ಸಾಧನೆಗೆ ಆಶೆ ಅತ್ಯಂತ ಆತಂಕಕಾರಿಯೆಂಬುದು ಇವರಿಗೆ ಗೊತ್ತು. ಆಶೆ ಅಶಾಂತಿಯ ಮೂಲ. ನಿರಾಶೆ ನಿಜಶಾಂತಿಯ ಮೂಲ. ನಿರಾಶೆಯೆಂದರೆ ಜೀವನ ಜಿಹಾಸೆಯಲ್ಲ. ಅಲ್ಲದುದನ್ನು - ಅತಿಯಾಗಿ ಬೇಕೆಂಬುದನ್ನು ಕೈಬಿಡುವುದೆ ಇಲ್ಲಿ ನಿರಾಶೆ ಪದಕ್ಕರ್ಥ! ಈ ನಿರಾಶೆ ಇವರಲ್ಲಿದೆ. ನಿಸ್ಪೃಹರಾಗಿರುವುದು ಸುಲಭವಲ್ಲ. ಆದರೂ ಅದನ್ನು ಇವರು ಸಾಧಿಸಿದ್ದಾರೆ. ಇವರ ಆ ಸಾಧನೆ ತುಂಬಾ ಕಷ್ಟಕರ ವಾದುದು. ಅಂತಿದ್ದರೂ ಅದರಲ್ಲಿ ಇವರಿಗೆ ಉದಾಶೀನವಿಲ್ಲ; ಅಳ್ಳೆದೆಯಿಲ್ಲ. ಇವರ ಅಂಗ ಕೃಶವಾಗಿದ್ದರೂ ಇವರ ಆತ್ಮಬಲ ಅಗಾಧವಾದುದು. ಇವರ ಆಧ್ಯಾತ್ಮ

ಬಯಕೆ ಅನುಪಮವಾದುದು. ಇವರ ಮೈಯಲ್ಲಾಗಲಿ ಮಾತಿನಲ್ಲಾಗಲಿ ಮನ ದಲ್ಲಾಗಲಿ ಹಿಂಜರಿವ ಹೇಡಿತನವಿಲ್ಲ. ಮುಂದುವರಿವ ಮಹಾ ಬಲ ಮುಪ್ಪುರಿ ಗೊಂಡಿದೆ. ಇವರು ತಮ್ಮ ವ್ರತ ನಿಯಮಗಳನ್ನು ಶೀಲ ಸಂಯಮಗಳನ್ನು ಉಳಿಸಿ ಕೊಳ್ಳುವುದರಲ್ಲಿ ಹುಲಿ. ತಮ್ಮ ಬಳಿಗೆ ಬಂದ ಭಕ್ತರ ಕರುಣಿಸುವುದರಲ್ಲಿ ಆದರಿಸು ವುದರಲ್ಲಿ ಹಸು.

ಶಾರೀರಕ ಸುಖಗಳನ್ನು ಪಡೆಯುವದರಲ್ಲಿ ನಿಜವಾದ ಮಾನವತೆಯಿಲ್ಲ; ತನ್ನನ್ನು ತತ್ತ್ವಸಾಧನೆಗೆ ಸಮರ್ಪಿಸುವುದರಲ್ಲಿದೆ ಮಾನವತೆ! ಜೀವನದ ಅಂತ ಶ್ಯಕ್ತಿಯನ್ನು ಅಳಿಯದಂತೆ ಅಳವಡಿಸಿಕೊಳ್ಳುವುದೇ ಸಾಧನ. ಅಲ್ಪಾತ್ಮನಾಗಿ ಬಂದಿರುವ ಜೀವನನ್ನು ಮಹಾತ್ಮನನ್ನಾಗಿಸುವ ಮಾರ್ಗವೇ ಸಾಧನ. ಅಂತಹ ಸಾಧನ ಸಂಪನ್ನನಾಗಿರುವವನು ಬರೀ ಮಾನವ ಮಾತ್ರನಲ್ಲ ಮಹಾನುಭಾವನಾಗಿ ಮೆರೆಯುವನು. ಇದನರಿತಿದಾರೆ ಇವರು.

ಯೋಗ್ಯತೆಯನ್ನು ಸಂಪಾದಿಸಿಕೊಳ್ಳುವುದೇ ಸಾಧನೆಯ ಮುಖ್ಯ ಧ್ಯೇಯ. ಯೋಗ್ಯತೆಯಿಲ್ಲದ ಬಾಳು ಬೀಳು. ಯೋಗ್ಯತೆಯೆ ಸಕಲ ಸೌಭಾಗ್ಯ. ಅಂತಹ ಅತ್ಯುತ್ತಮ ಯೋಗ್ಯತೆಯ ಗಳಿಸಿಕೊಡುವ ಸತ್ಯಸಾಧನವೇ ಇವರ ಜೀವನ. ಯೋಗ-ಶಿವಯೋಗಗಳೇ ಇವರ ಸಾಧನ. ಕರ್ತವ್ಯ ದಕ್ಷತೆಯಲ್ಲಿ ಎತ್ತಿದ ಕೈ ಇವರದು. ಸತ್ಕಾರ್ಯವನ್ನು ಕೈಕೊಂಡರೆ ಅದರಲ್ಲಿ ಅದಾವ ಕೊರತೆಯಿಲ್ಲದಂತೆ ಅದನ್ನು ಕೈ ಬಿಡದಂತೆ ಕೊನೆಗಾಣಿಸುವ ಕೆಚ್ಚುತನ ಇವರಲ್ಲಿದೆ; ಕಟ್ಟಳವಿ ಇವರಲ್ಲಿದೆ. ಸತ್ಪಥ ದಲ್ಲಿ ಇವರು ಸಾಗಿದ್ದೇ ಮಾರ್ಗ! ಇವರು ಇದ್ದದ್ದೇ ಸ್ವರ್ಗ! ಸತ್ಯತೆ ಹೇಗೋ ಸರಳತೆ ಹಾಗೆ ಇವರಿಗೆ ಪ್ರಾಣ! ಹಾಸಿಗೆಯಿಂದೆದ್ದೊಡನೆ ಧ್ಯಾನ. ಧ್ಯಾನ ತೀರಿದೊಡನೆ ಸ್ತೋತ್ರ. ಸ್ತೋತ್ರ ತೀರಿದೊಡನೆ ಜಪಾನುಷ್ಠಾನ. ಇದಾದ ಬಳಿಕ ಶೌಚಾ ಚಮನ; ಶಿವಾರ್ಚನ, ಅಧ್ಯಯನ, ಉಲ್ಲೇಖನ ಹೀಗೆ ಬಿಡುವಿಲ್ಲದ ಬೇಹಾರ; ಸವಡಿಲ್ಲದ ಸಾಧನ. ಆತ್ಮಸಾಧನೆ ಅದೆಷ್ಟು ಬಗೆಯಲ್ಲಿ ಮಾಡಬೇಕೆಂದು ಅರಿತಿರು ವರೋ ಅಷ್ಟು ಬಗೆಯಲ್ಲಿಯೂ ಮನಮುಟ್ಟಿ ಮಾಡುತ್ತಿರುವ ಸತ್ಯಸಾಧಕರಿವರು; ಸ್ತುತ್ಯಸಾಧಕರಿವರು. ಸಂಪಾದನೆಯ ಸಂಪಿಲ್ಲ. ಸುಖಸಾಧನೆಯ ಪೆಂಪಿಲ್ಲ. ಸಿದ್ಧನಾದೆ; ಸಾಧನೆ ಸಾಕೆಂಬ ಭಾವವಿಲ್ಲ. ಸಾಧನೆ ಇದೊಂದು ಜೀವನದುಸಿರೆಂದು ಇವರ ದೃಢಭಾವನೆ. ದಿನಗಳು ಕಳೆದಂತೆ ದೃಷ್ಟಿ ತೆರೆದಂತೆ ಇವರ ಸಾಧನದೀಕ್ಷೆ ಇನ್ನೂ ಹೆಚ್ಚುತ್ತಹೋಗುತ್ತಿದೆ. ಅಶುಚಿಯೊಂದು ಕಂಡರೆ ಅದೆಂತಹದೇ ಆಗಲಿ, ಕಡೆಗೆ ಅದು ಅಮೃತವಾಗಿರಲಿ ಅದನ್ನೂ ಬಿಡಬಲ್ಲರು. ಅನೀತಿಯೆಂಬುದು ಅವರಿಗಾಗದು. ಅನ್ಯಾಯ ಅವರ ಬಳಿಗೆ ಸುಳಿಯಬಾರದು. ಅನ್ಯರನ್ನು ಆಡಿಕೊಳ್ಳುವುದಂತೂ ಅದೆಂದಿಗೂ ಆಗದ ಕೆಲಸ. ಆತ್ಮಶೋಧನೆಯೇ ಇವರ ತಪಸ್ಸು. ಹಾನಗಲ್ಲ ಕುಮಾರ ಯೋಗಿಯ ಸನ್ಮಾರ್ಗ ಗಮನವೇ ಇವರ ಸಿದ್ಧಿ. ಇದುವೇ ಇವರ ಜೀವ; ಜೀವನ.

ಇವರೊಂದು ಸಂಯಮವೆ ಮೂರ್ತಿವೆತ್ತು ಬಂದ ಸ್ವಯಂಜ್ಯೋತಿ! ಇವರ ಸಂಯಮಧಾಮ ದೇಹೇಂದ್ರಿಯಗಳಲ್ಲಿಯೂ ಧಮನಿಗಳಲ್ಲಿಯೂ ಹಬ್ಬಿ ಹೊಮ್ಮಿದೆ. ಊಟದಲ್ಲಿ ಸಂಯಮ; ಉಡಿಗೆಯಲ್ಲಿ ಸಂಯಮ; ನೋಡುವಲ್ಲಿ ಸಂಯಮ; ನುಡಿವಲ್ಲಿ ಸಂಯಮ. ಸದ್ಭಾವ ಸೌಜನ್ಯಗಳಲ್ಲಿ ಸಂಭ್ರಮ. ಇವರು ಇನ್ನೇನಾದರೂ ಸಹಿಸಬಲ್ಲರು. ಶೀಲ-ಸಂಯಮಗಳಲ್ಲಿ ತಪ್ಪಿದರೆ ಸಹಿಸರು. ಶೀಲ ಸಂಯಮಗಳೇ ಇವರ ಪ್ರಾಣ, ಪ್ರಪತ್ತಿ! ಸತ್ಯಸಾಧನವೆ ಇವರ ಪರಮಪ್ರಾಪ್ತಿ! ಅವುಗಳಲ್ಲಿ ಇವರಿಗೆ ದೃಢ ನಂಬುಗೆಯಿದೆ; ಧೃತಿಯ ಬೆಂಬಲವಿದೆ. ಸಂಯಮ ಸಾಧನೆಯಲ್ಲಿಯೆ ಸಮಾಧಾನ ಹೊಂದುವರು; ಸಂವಿಧಾನದಿಂದಿರುವರು.

ಇವರ ಚಿದ್ಗುರು ಕಾರಣಿಕ ಕುಮಾರ ಯೋಗಿಗಳು. ಇವರಿಗೆ ಅವರಲ್ಲಿ ವಿಶೇಷ ವಿಶ್ವಾಸ; ಅಚಲ ಶ್ರದ್ಧೆ; ಅನುಪಮ ನಿಷ್ಠೆ ಅವರ ಆ ಪವಿತ್ರ ಪ್ರಭಾವದ ವಲಯ ವನ್ನು ಬಿಟ್ಟು ಈಚೆಗೆ ಬರುವವರಲ್ಲ. ಅವರ ಆಚಾರವೇ ಇವರ ಆಚಾರ. ಅವರ ವಿಚಾರವೇ ಇವರ ವಿಚಾರ. ಅವರ ನಾಮಾಂಕಿತದಲ್ಲಿ ಒಂದು ವಚನವನ್ನೇ ರಚಿಸಿ ದಾರೆ; ಒಂದು ರಗಳೆಯನ್ನು ಹಾಡಿದಾರೆ.

ಇಂದಿನ ಈ ವಿಜ್ಞಾನಯುಗದಲ್ಲಿ ಈ ನವ ನಾಗರಿಕತೆಯಲ್ಲಿ ಬರೀ ಬೌದ್ಧಿಕ ವಿಚಾರ ನಡೆದ ದಿನದಲ್ಲಿ ತಾತ್ವಿಕಸಾಧಕರು ತೀರ ಸ್ವಲ್ಪ. ಆ ಸ್ವಲ್ಪ ಜನರಲ್ಲಿ ಇವ ರೊಬ್ಬರು. ಇವರ ತಾತ್ತ್ವಿಕ ತಪಸ್ಸು ತಿಳಿಯಾದುದು. ಇವರ ಈ ತಾತ್ತ್ವಿಕ ಸಾಧನ ಸಂಸ್ತುತ್ಯವಾದುದು. ಪೂಜೆ, ಪವಿತ್ರ ಪುಸ್ತಕಗಳ ಪಠನೆ ಇವೆರಡನ್ನು ಬಿಟ್ಟರೆ ಇನ್ನೊಂದು ಹಾದಿಯೇ ಇಲ್ಲ. ಲೋಪವಿಲ್ಲದ ಶೀಲಾಚರಣೆಯೆ ಇವರ ಜೀವನ ಗುರಿ. ಪಾಪದ ಸೋಂಕಿಲ್ಲದ ಶಿವಾನುಭವ ವಿಚಾರವೇ ಇವರ ಜೀವನ ಸಾರ ಸರ್ವಸ್ವ. ಮನವನು ಉನ್ಮನಗೊಳಿಸುವ ಶಾಂತಿ ದಾಂತಿಗಳ ಸಂಪಾದನದ ಚಿಂತನೆಯಲ್ಲಿ ಕ್ರಿಯೆ ಯಲ್ಲಿ ಇರುವುದೇ ಇವರಿಗೆ ಹಿರಿ ಹಬ್ಬ. ಈ ಆನಂದ ಭರದಲ್ಲಿ ಮಠ ಮಾನ್ಯಗಳ ಮೋಹ ತೊರೆದರು. ಆಸ್ತಿಪಾಸ್ತಿಗಳ ಹಂಗು ಹರಿದರು.

ಅಷ್ಟಾಂಗಯೋಗದಲ್ಲಿ ಇಷ್ಟಲಿಂಗಾರ್ಚನೆಯಲ್ಲಿ ಸತ್ಪಥಗಮನದಲ್ಲಿ ಸತ್ಕೃತಿ ರಚನೆಯಲ್ಲಿ ಇವರ ಸಾಧನೆ ಸಂತತವಾಗಿ ಸಾಗಿಬರುತ್ತಿದೆ. ಇವೇ ಇವರ ಪಂಚ ಶೀಲಗಳು. ಇವುಗಳ ಸಾಧನೆ ಇವರಲ್ಲಿ ಬರೀ ಅಂಕುರಿತವಾಗಿಲ್ಲ. ಬೆಳೆದು ಹೆಮ್ಮರ ವಾಗಿ ಹೂವಾಗಿವೆ, ನರುಗಂಪ ಹರಡಿವೆ; ಹಣ್ಣಾಗಿವೆ. ಹೆಂಪಿನ ರಸಭರಿತವಾಗಿವೆ.

ಶಿವಯೋಗ ಮಂದಿರದ ಸತ್ಯಸಾಧನೆಯ ಮಾರ್ಗದಲ್ಲಿ ಇವರೊಬ್ಬ ಯುಗ ಪುರುಷರು. ಇವರ ಈ ಸರ್ವತೋಮುಖ ಸಾಧನೆಯ ತುಂಬುಚರಿತ್ರೆಯನ್ನು ವಿವರಿಸುವವರು ಮತ್ತೊಬ್ಬರಿಲ್ಲ. ಕ್ರಿಯಾಂಗ ಮತ್ತು ಜ್ಞಾನಾಂಗ ಸಾಧನೆಯ ಕ್ಷೇತ್ರಗಳೆರಡರಲ್ಲಿ ಶಿವಯೋಗಮಂದಿರಕ್ಕೆ ತಮ್ಮ ವ್ಯಕ್ತಿತ್ವಕ್ಕೆ ಪವಿತ್ರವಾದ ಪ್ರಪೂರ್ಣ ವಾದ ಪ್ರಕಾಶವನ್ನುಂಟುಮಾಡಿದ ಪ್ರತಿಭಾಶಾಲಿಗಳು ಶ್ರೀ ಸದಾಶಿವ ಶಿವಾಚಾರ್ಯರು.

ಶ್ರೇಯಃಪ್ರದರು ಶ್ರೀ ಸದಾಶಿವ ಶಿವಾಚಾರ್ಯರ್ಯರು. ನಾಮಮಾತ್ರಕ್ಕಲ್ಲ ನೇಮದಲ್ಲಿ-ಷಟ್‌ಸ್ಥಲ ಬ್ರಹ್ಮಿಗಳು ಶ್ರೀ ಸದಾಶಿವ ಶಿವಾಚಾರ್ಯರು. ಗೌರವಕ್ಕಾಗಿ ಅಲ್ಲ ಗುಣದಲ್ಲಿ-ಘನಲಿಂಗ ಚಕ್ರವರ್ತಿಗಳು ಶ್ರೀ ಸದಾಶಿವ ಶಿವಾಚಾರ್ಯರು. ಹಳೆ ಆಚಾರ ಹಳೆ ವಿಚಾರಗಳನ್ನು ಹಳಿಯುವವರೇ ಹೆಚ್ಚು ಮಂದಿ ಇರುವ ಈ ಕಾಲದಲ್ಲಿ ಆ ಹಳೆಯ ಆಚಾರ-ವಿಚಾರಗಳನ್ನೇ ಕೈಬಿಡದೆ ನಡಿಸಿಕೊಂಡು ಹೊಸ ಬೆಳಗಿನಲ್ಲಿ ಬೆಳಗುವ ಸತ್ಯ ಸಾಧಕರು ಶ್ರೀ ಸದಾಶಿವ ಶಿವಾಚಾರ್ಯರು. ಸಿದ್ಧ ಸಾಧಕರು ಶ್ರೀ ಸದಾಶಿವ ಶಿವಾಚಾರ್ಯರು. ಹಳೆಯುವನ್ನಾಗಲಿ ಹೊಸವನ್ನಾಗಲಿ ಆಚರಿಸುವ ಆತ್ಮಶಕ್ತಿ ಒಂದೇ! ಅದು ಹಳೆಯದಲ್ಲ; ಹೊಸದಲ್ಲ- ಎಂದು ಹೇಳುವ ವಿಶಾಲ ವಿಚಾರದ-ವಿಶಿಷ್ಟಾಚಾರದ ವಿಶ್ವಾತ್ಮರು ಶ್ರೀ ಸದಾಶಿವ ಶಿವಾಚಾರ್ಯರು.

ಜೀವನದಲ್ಲಿ ಎಲ್ಲದಕ್ಕೂ ಅಂದರೆ ಕೆಟ್ಟುದಕ್ಕೂ ಒಳ್ಳೆಯದಕ್ಕೂ ಅವಕಾಶವಿದೆ. ಆದರೆ ಕೆಟ್ಟುದನ್ನು ಕೈಬಿಟ್ಟು ಒಳ್ಳೆಯದಕ್ಕೆ ಒಲವನ್ನು ಕೊಡುವುದೇ ನಿಜವಾದ ಸಾಧನೆ. ಇದೇ ಇವರ ಗುರಿ.

ಹೀಗಿದ್ದರೂ ಇವರ ಸಾಧನೆ ಕುರುಡಾದುದಲ್ಲ. ಕಣ್ಣರಳಿಸಿಕೊಂಡು ಇವರು ತಮ್ಮ ಸಾಧನ ಪಂಥದಲ್ಲಿ ಸಾಗಿದಾರೆ. ಪೂರ್ವಾಚಾರಗಳಿದ್ದರೂ ಅವು ಲೋಪ ದೋಷಗಳಿಂದ ಕೂಡಿದ್ದರೆ ಅವನ್ನು ಬಿಡಬೇಕೆನ್ನುತ್ತಾರೆ. ತಾವೇ ಸತ್ಯ ಸಾಧಕರೆಂಬ ತತ್ತ್ವಸಾಧಕರೆಂಬ ಹೆಮ್ಮೆ ಇವರಿಗಿಲ್ಲ. ಇತರರ ಕಷ್ಟಸುಖಗಳನ್ನು ಸ್ಥಾನ-ಮಾನ ಗಳನ್ನು ಗುರ್ತಿಸಬಲ್ಲರು; ಒದಗಿಸಬಲ್ಲರು. ಕುರುಡ ನಂಬಿಕೆಯೆ ಇವರ ಸಾಧನವಲ್ಲ. ಕಲ್ಮಷ ಕಳೆವುದೇ ಇವರ ಸಾಧನ; ಇವರ ಶೀಲ. ಯಾವ ಅಂಗದಲ್ಲಿಯೇ ಆಗಲಿ ಕಲ್ಮಷವಿರಬಾರದೆಂಬುದೇ ಇವರ ಧ್ಯೇಯ. ಚಿನ್ಮಯ ಜೀವನಕ್ಕೆ ಚ್ಯುತಿ ಬರಬಾರ ದೆಂಬುದೇ ಇವರ ಸಾಧನ ಜೀವನ ಸಂಕಲ್ಪ. ಹಿಡಿದ ವ್ರತವ ಕಡೆಹಾಯಿಸುವ ಸತ್ವ ಸಾಧಕರಿವರು; ಸ್ತುತ್ಯರಿವರು.

ಇವರಿಗೀಗ ಅರವತ್ತು ವರುಷಗಳು ತುಂಬಿದವು. ಇಷ್ಟಾದರೂ ಇವರು ತಮ್ಮ ಆ ಕಠಿನ ಸಾಧನ ಜೀವನವನ್ನು ಕೈಬಿಟ್ಟಿಲ್ಲ. ತಮ್ಮ ಆ ಸಾಧನ ಪಂಥದಲ್ಲಿಯೆ ಸಿದ್ಧಿ ಯನ್ನು ಪಡೆದ ಪುಣ್ಯಪುರುಷರಿವರು. ಚಿಜ್ಜ್ಯೋತಿಯ ಕಂಡ ವಿಭೂತಿಪುರುಷ ರಿವರು. ಈ ದಿಸೆಯಲ್ಲಿ ನಿಜವಾಗಿ ಶಾಸ್ತ್ರಗಳು ವಿವರಿಸುವಂತೆ- ಸ್ವಯಂ ಆಚರಿಸು ವವರಾಗಿ 'ಆಚಾರ್ಯ' ಪದವನ್ನು ಅಖಂಡವಾಗಿ ಅಳವಡಿಸಿಕೊಂಡ ಶಿವಾಚಾರ್ಯ ರಿವರು.

ಶಿವ ಬೇರಲ್ಲ; ಇವರ ಸಾಧನೆ ಬೇರಲ್ಲ. ಇವರ ಸಾಧನೆಯೇ ಶಿವ. ಶಿವನೇ ಇವರ ಸಾಧನೆ. ಆದ್ದರಿಂದ ಇವರು ಸದಾ-ಶಿವ! ಇವರು ಶಿವ-ಆಚಾರ್ಯ!

ಭೌತಿಕ ಸೌಂದರ್ಯ ದೃಷ್ಟಿ, ಭೌತಿಕ ಮಾಧುರ್ಯ ತುಷ್ಟಿಗಳು ಪ್ರತಿಯೊಬ್ಬರ ಬೆನ್ನು ಬಿದ್ದಿರುವಾಗ ಕೈಗೆ ನಿಲುಕದ ಕಣ್ಣಿಗೆ ಕಾಣದ ಆ ಆಧ್ಯಾತ್ಮಿಕ ಸುಖ ಸೌಂದರ್ಯ



೧೧ನೆಯ ಸಮ್ಮೇಳನದ ಅಧಿಕಾರಿಗಳು
ಮತ್ತು ಅತಿಥಿಗಳು



ಧಾರವಾಡ ಅಂಕುಶ ಪತ್ರಿಕೆ ಸಂಪಾದಕ
ಶ್ರೀ ಗ. ಶಿ. ಹುರುಳಿಯವರಿಗೆ ಪ್ರಶಸ್ತಿ ಪ್ರಧಾನ



ಸಮ್ಮೇಳನ ಮಂಟಪ ದೃಶ್ಯ



ಹನ್ನೊಂದನೆ ಸಮ್ಮೇಳನ



ಹನ್ನೊಂದನೆಯ ಸಮ್ಮೇಳನದ ಅಧ್ಯಕ್ಷ ಪೀಠದಿಂದ ಶ್ರೀ ಎ. ಸಿ. ಚಂದ್ರೇಗೌಡರು ಮಾತನಾಡುತ್ತಿರುವುದು



೧೧ನೇ ಸಮ್ಮೇಳನ. ರಾಜ್ಯದ ಕೈಗಾರಿಕಾ ಉಪಸಚಿವೆ ಶ್ರೀಮತಿ ಲೀಲಾವತಿ ಮಾಗಡಿಯವರಿಂದ ಧ್ವಜ ವಂದನೆ



ದೇವರಮನೆ
ಶ್ರೀ ಜಿ. ಎಂ. ಕರಿಸಿದ್ದಪ್ಪನವರು
ಗಿರಿಯಾಪುರ.



ಶ್ರೀ ಜಿ. ಎಂ. ಬಸಪ್ಪನವರು ಗಿರಿಯಾಪುರ



ಶ್ರೀ ಮುದ್ದಪ್ಪನವರ
ಮಲ್ಲಪ್ಪನವರು. ಗಿರಿಯಾಪುರ



ಶ್ರೀ ಮಲ್ಲಿಕಾಂಬಾ ಅಮ್ಮನವರು
ಗಿರಿಯಾಪುರ



ಶ್ರೀ ಗುರು ಕುಮಾರಾಶ್ರಮದ ಬಳಿ ಇರುವ ಉಜ್ಜಯಿನಿ
ಶ್ರೀ ಮರುಳಸಿದ್ಧೇಶ್ವರ



ಸಖರಾಯಪಟ್ಟಣದ ಶಿಲಾ ಮಠದಲ್ಲಿರುವ
ಬಸವಣ್ಣ

ಗಳಿಗಾಗಿ ಜಾಯ್ನೀರು ಬಿಡುವ ಕಣ್ಣಿಡುವ ಸಾಧನ ಸೌಭಾಗ್ಯ ಅದೆಷ್ಟು ಜನರ ಜನ್ಮಕ್ಕೆ ಸಿಚ್ಚಟವಾಗಿ ಅಂಟಿಕೊಂಡು ಬಂದಿದೆ? – ಎಂದು ಕೇಳಿದರೆ ಕೈಬೆರಳುಗಳನ್ನು ಮಾತ್ರ ಎಣಿಸಬೇಕಾಗುತ್ತದೆ. ಜಗತ್ತಿನ ಜನಜೀವನದಲ್ಲಿ ನಿತ್ಯ ಒದಗುವ ಜಂಜಡ ವನ್ನು ಕಂಡೂ ಕೇಳಿಯೂ ಬಿಡದೇ ತಮ್ಮ ಮನಸ್ಸನ್ನು ಮುಚ್ಚುಮರೆಯಾಗಿ ಅದರಲ್ಲಿ ಅದ್ದುವರೇ ಅನೇಕಾನೇಕರು. ಸಂಸಾರ ದುಃಖಸಾಗರವೆಂದು ಅರಿತಿದ್ದರೂ ಅನು ಭವಿಸಿದ್ದರೂ ಅದರಲ್ಲಿಯೆ ಅನುರಕ್ತಿಯನ್ನು ಆಳವಡಿಸಿಕೊಳ್ಳುವವರೇ ಬಹಳ! ಇದನ್ನು ಬಿಟ್ಟು ಸತ್ಯಸಾಧನೆಯಲ್ಲಿ ಹೆಜ್ಜೆ ಹಾಕುವ ಹೃದಯವುಳ್ಳವರು ತೀರ ವಿರಳ! ಕೈಗಂದುವ ಕಡಲ್ನೀರು ಕಡು ಉಪ್ಪಾದರೂ ಕುಡಿಯ ಬಯಸುವರೇ ಹೊರತು ಮುಗಿಲ್ನೀರಿಗಾಗಿ ಕಾಯುವವರಿಲ್ಲ. ಪ್ರಕೃತಿ ಮಾರ್ಗದಲ್ಲಿರುವ ಕಲ್ಲು ಮುಳ್ಳುಗಳನ್ನು ಕಂಡು ಅದ ನುಳಿದು ಪರಮಾರ್ಥ ಪಂಥದಲ್ಲಿ ಪ್ರಗತಿಯ ಹಂತದಲ್ಲಿ ಮುನ್ನಡೆವ – ಮೇಲೇರುವ ಸತ್ಯಸಂಕಲ್ಪವನ್ನು ಸ್ತುತ್ಯಸಾಧನವನ್ನು ಮಾಡುವರಾರು? ಈ ಹೆದ್ದಾರಿಯಲ್ಲಿ ಮುನ್ನಡೆಯದಿರಲಿ ಮೇಲೇರದಿರಲಿ ಇದ್ದ ನೆಲೆಯಲ್ಲಿಯೇ ಇರುವವರು ತೀರ ಕಡಿಮೆ. ಹಿಂದಕ್ಕೆಳೆವವರೇ ಹೆಚ್ಚು. ಕೆಳಕ್ಕೆ ಬೀಳುವವರೇ ಬಹಳ. ಅಂಥವರ ಬಾಳಿನಲ್ಲಿ ಅದಾವ ಸುಖ ಸಿಕ್ಕೀತು? ಅದಾವ ಸೌಭಾಗ್ಯ ಸಂಪ್ರಾಪ್ತವಾದೀತು? ಪರಮಾತ್ಮನಿಂದ ಪ್ರಾಪ್ತವಾದ–ಪವಿತ್ರಾತ್ಮರ ಕೃಪೆಗೆ ಸಂದ ಈ ಜೀವನವನ್ನು ಚೊಕ್ಕ ಚಿನ್ನವಾಗಿಯೆ ಇರಿಸಬೇಕೆಂದು ಇಮ್ಮಡಿ ನೂರ್ಮಡಿಯಾಗಿ ಮನಸ್ಸುಮಾಡಿ ಮಹಾ ಶ್ರದ್ಧೆಯಿಂದ ಸಾಧನಮಾರ್ಗದಲ್ಲಿಯೇ ಈ ನಿಡಿದಾದ ಬಾಳಿನಲ್ಲಿ ಹೆಜ್ಜೆ ಹಾಕುತ್ತಿರುವ ಶ್ರೀ ಸದಾಶಿವ ಶಿವಾಚಾರ್ಯರ ಬಾಳಿನ ನಿಲವು ನಿಲುಕುವಂತಹದಲ್ಲ. ಆ ಹಸನಾದ ಬಾಳ ಬಟ್ಟೆಯಲ್ಲಿ ಒಂದು ಚಿಕ್ಕ ಕಪ್ಪು ಕಲೆಯೂ ಕಾಣುವುದಿಲ್ಲ. ಇದೊಂದು ಶುದ್ಧ ಜೀವನ; ಸಿದ್ಧಸಾಧನ.

ಇವರಿಂದ ಶ್ರೀ ಶಿವಯೋಗ ಮಂದಿರೊಂದಕ್ಕೆ ಮಾತ್ರ ಭೂಷಣವಲ್ಲ; ಇಡೀ ಕನ್ನಡನಾಡಿಗೆ ಭೂಷಣ. ಇದೀಗ ನಮ್ಮ ನಾಡಿನಲ್ಲಿ ಇವರಿಗಿಂತಲೂ ಮಿಗಿಲಾದ ಶ್ರದ್ಧಾವಂತ ಸಿದ್ಧಸಾಧಕರನ್ನು ಕಾಣುವುದು ವಿರಳವೆಂದೇ ನಮ್ಮ ಭಾವನೆ. ತಮ್ಮೀ ಸಾಧನೆಯಿಂದ ನಾಡಿನ ಸಾಧನೆಯ ಮಾರ್ಗದ ಕೊರತೆಯನ್ನು ತುಂಬಿ ತಂದಿದಾರೆ. ಅಂತೆಯೆ ನಾಡಿನ ಸಾಧನ ಸಂಪತ್ತಿಯನ್ನೂ ತುಂಬಿ ತಂದಿದಾರೆ.

---

## ಮರವೊಂದು; ಹೂವು ಹಲವು ಬಗೆಯವು.



ಭಾರತಾವನಿಯಲ್ಲಿ ದಕ್ಷಿಣದಿಶೆಯಲ್ಲಿ ಮೈಸೂರು ಮಹಾ ಮನೋಹರ ನಾಡು. ಮನೋಹರ ಮೈಸೂರಿನಲ್ಲಿ ಚಿಕ್ಕಮಗಳೂರೊಂದು ಚೆಲುವಿನ ಬೀಡು. ಚೆಲುವಿನ ನೆಲೆ ಚಿಕ್ಕಮಗಳೂರು ಜಿಲ್ಲೆಯಲ್ಲಿ ಗಿರಿಯಾಪುರ ಗ್ರಾಮ. ಆ ಗ್ರಾಮದ ಬಳಿ ಶ್ರೀ ಗುರುಕುಮಾರಾಶ್ರಮ. ಆ ಆಶ್ರಮದಾರಾಮದಲ್ಲಿ ಒಂದು ವೃಕ್ಷ. ಆ ವೃಕ್ಷ ಜಡ ವೃಕ್ಷವಲ್ಲ; ಜೀವಂತವೃಕ್ಷ; ಜ್ವಲಂತವೃಕ್ಷ. ಅದೊಂದು ವಿಲಕ್ಷಣವೃಕ್ಷ; ವಿಚಕ್ಷಣ ವೃಕ್ಷ. ಆ ವೃಕ್ಷ ಒಂದೇ! ಅದರ ಪುಷ್ಪ ಅನಂತ! ಆ ಅನಂತತ್ವ ಸಜಾತೀಯ ವಲ್ಲ; ವಿಜಾತೀಯ. ಇದರಲ್ಲಿದೆ ವಿಸ್ಮಯ. ಆ ವೃಕ್ಷವೊಂದರಲ್ಲಿಯೆ ಸಂಪಿಗೆ, ಸೇವಂತಿಗೆ, ಇರುವಂತಿಗೆ, ಜಾಜಿಮಲ್ಲಿಗೆ, ಸೂಜಿಮಲ್ಲಿಗೆ; ಕಮಲ, ಬಕುಲ, ಕಣಿಗಿಲ, ಸಿರೀಷ, ಗುಲಾಬಿ, ಸುರಗಿ ಸುರಹೊನ್ನೆ, ಪಾದ್ರಿ, ಪಾರಿಜಾತ ಮುಂತಾದ ಎಲ್ಲ ಬಗೆಯ ಕಂಪಿನ ಹೂವುಗಳಿವೆ. ಹಾಗಾದರೆ ಆ ವೃಕ್ಷವಾವುದು? ಆ ಹೂವು ಗಳಾವು?

ಅದೇ ನಮ್ಮ ಷ. ಬ್ರ., ಘ. ಲಿಂ. ಚಕ್ರವರ್ತಿ ಶ್ರೀ ಸದಾಶಿವ ಶಿವಾಚಾರ್ಯ ವೃಕ್ಷ! ಆ ವೃಕ್ಷದಲ್ಲಿ ಅಷ್ಟಾಂಗಯೋಗವೆಂಬ ಶ್ರೇಷ್ಠ ಸಂಪಿಗೆ ಹೂವಿವೆ. ಇಷ್ಟಲಿಂಗ ಯೋಗ (ಶಿವಯೋಗ)ವೆಂಬ ಪುಷ್ಟ ಸೇವಂತಿಗೆ ಹೂವಿವೆ. ಶೀಲಾಚರಣೆಯೆಂಬ ಜಾಜಿಮಲ್ಲಿಗೆಯಿದೆ. ಕ್ರಿಯಾಚರಣೆಯೆಂಬ ಸೂಜಿಮಲ್ಲಿಗೆಯಿದೆ. ಅಂತಃಕರಣಪೂರಿತ ಹೃದಯಕಮಲವಿದೆ. ಭಾವಭರಿತವಾದ ಬಕುಲವಿವೆ. ಮನೋಲಯವೆಂಬ ಕಣಿಗಿಲ ಹೂವಿದೆ ಮನೀಷವೆಂಬ ಸಿರೀಷವಿವೆ. ಗುರು ಸಹಜ ಗುಣಗಳೆಂಬ ಗುಲಾಬಿ ಹೂವುಗಳಿವೆ. ಸೌಜನ್ಯವೆಂಬ ಸುರಗಿಯಿದೆ. ಚಿರಸ್ಮರಣೆಯೆಂಬ ಸುರಹೊನ್ನೆ ಸುಮವಿದೆ. ಮೌನಮುದ್ರೆಯೆಂಬ ಪರಿಮಳದ ಪಾದ್ರಿಯಿದೆ. ಪರಮಾನುಭೂತಿಯೆಂಬ ಪಾರಿಜಾತವಿದೆ. ಇವಲ್ಲದೆ ಇನ್ನೂ ಬೇರೆ ಬೇರೆ ಬೇಕಾದಷ್ಟು ಹೊನ್ನುಹೂವುಗಳಿವೆ.

ಅವೆಲ್ಲ ಅರಳಿವೆ. ಅವುಗಳಲ್ಲಿ ಒಂದೂ ಹುಳುಕಿಲ್ಲ; ಹರುಕಿಲ್ಲ. ಎಲ್ಲವೂ ಅಂದ ವಾಗಿವೆ; ಗಂಧಯುತವಾಗಿವೆ. ಅವಕ್ಕೆ ಬಿಸಿಲಿನ ಬಾಧೆಯಿಲ್ಲ; ಅವು ಬಾಡುವವಲ್ಲ. ಅವಕ್ಕೆ ಕಾಲಕಟ್ಟಳೆಯಿಲ್ಲ; ಕಂದಿ ಕಣ್ಮರೆಯಾಗುವವಲ್ಲ. ಅವಕ್ಕೆ ನಿರ್ಮಾಲ್ಯ ದೋಷವಿಲ್ಲ; ಮೌಲ್ಯ ಕಡಿಮೆಯಿಲ್ಲ. ಅಂತಹ ಅಚ್ಚಳಿಯದ ಅಗ್ಗಳಿಕೆಯ ಹೂಗಳ ಹೊತ್ತು ನಿಂತಿದೆ ನಮ್ಮ ಸದಾಶಿವನೆಂಬ ಸಜೀವ ಸೋಜ್ವಲ ವೃಕ್ಷ! ಈ ಪುಷ್ಪ ವೃಕ್ಷದ ಶಾಖೆಗಳನೇಕ. ಆ ಒಂದೊಂದು ಶಾಖೆಯಲ್ಲಿ ಒಂದೊಂದು ಬಗೆಯ ಹೂವು. ಒಂದೊಂದು ಬಣ್ಣದ ಹೂವು. ಅವೆಲ್ಲ ಎಂದೆಂದಿಗೂ ಮಾಸದ ಹೂವುಗಳು; ಮೂಸುವ ಹೂವುಗಳು.

ಹೂವಿನ ಹಿರಿಮೆ ಹೆಚ್ಚಿನದು. ಹೂವಿನ ಹೆಂಪು ಮೆಚ್ಚಿನದು. ಹಲವಾರು ದೇವಮಂದಿರಗಳ ಸೌಂದರ್ಯವನ್ನು ಪ್ರತಿನಿಧಿಸಬಲ್ಲುದು ಒಂದೇ ಒಂದು ಹೂವು. ಹಲವಾರು ಹೊನ್ನಿನ ತೊಡಿಗೆಗಳ ಚಲುವನ್ನು ತಾನೊಂದೇ ಒಂದು ತಂದು ತೋರ ಬಲ್ಲುದು ಹೂವು. ಎಂತಹ ದೇವರನ್ನೇ ಆಗಲಿ ಅರ್ಚಿಸಿ ಅಲಂಕರಿಸಿ ರಮ್ಯಗೊಳಿಸ ಬಲ್ಲುದು ಹೂವು. ಕೊರತೆಯ ಕಮನೀಯತೆಯನ್ನು ತುಂಬಿ ತರಬಲ್ಲುದು ಹೂವು. ಭೌತಿಕದ ಹೂವಿಗೇ ಈ ಭವ್ಯ ಬೆಲೆಯಿರುವಾಗ ಕಾವ್ಯ ಕಲೆಯಿರುವಾಗ ಆತ್ಮಿಕದ ಗುಣಪುಷ್ಪಕ್ಕೆ ಇನ್ನೆಂತಹ ಇಂಬಾದ ಬೆಲೆ ಕಲೆಗಳಿರಬೇಡ? ಆ ಬೆಲೆ ಕಲೆಗಳಿಗೆ ಭೌತಿಕವಾಗಿ ಬೆಲೆಯೇ ಇಲ್ಲ.

ಅಂತಹ ಹೂವು ಒಂದಲ್ಲ ಹಲವು ಬಗೆಯವು ಸಖರಾಯಪಟ್ಟಣದ ಶ್ರೀ ಸದಾಶಿವ ಶಿವಾಚಾರ್ಯರಲ್ಲಿವೆ. ಈ ಶ್ರೀಗುರು ಶಿವನ ಪೂಜೆಗೆ ಬೇರೆ ಹೂವುಗಳ ಅಗತ್ಯ ವಿಲ್ಲ. ಬೇರೆ ಹೊಂಮೊಡಿಗೆಗಳು ಬೇಕಿಲ್ಲ. 'ಭೌತಿಕದ ಪುಷ್ಪೆಂಜಲು ತುಂಬಿಯ.' ಇವರ ಆತ್ಮಿಕದ ಗುಣಪುಷ್ಪ ಪ್ರಾಕೃತಿಕಗುಣ ಭೃಂಗೋಚ್ಛಿಷ್ಟವಾಗಿಲ್ಲ: ಇವರ ಈ ಮಂಗಳ ಪುಷ್ಪಗಳೆಲ್ಲ ಮಹಾಲಿಂಗಕ್ಕೆ ಮೀಸಲು.

ಗಿಡಬಳ್ಳಿಗಳ ಈ ಹೂವುಗಳ ಬೆಲೆ ಕಲೆಗಳನರಿತವರು ಮಾನವರು; ಆ ಗುಣ ರೂಪ ಹೂವುಗಳ ಬೆಲೆ ಕಲೆಗಳನರಿತವರು ಮಹಾನುಭಾವರು. ಬರೀ ಬೆಲೆ ಕಲೆಗಳ ನರಿವುದಲ್ಲದೆ ಬಾಳಿನಲ್ಲಿ ಆ ದಿವ್ಯಗುಣ ಪುಷ್ಪಗಳ ಸೂಡುತ್ತಾರೆ. ತಮ್ಮೊಳಗಿನ ಆ ಚಿತ್ಕಳೆಯ ಚಲುವ ಹೂವುಗಳಿಂದ ತಾವು ಅಲಂಕೃತರಾಗುತ್ತಾರೆ. ಅಖಿಲಾಂಡ ಭೂಮಂಡಳ ಪ್ರಪೂಜಿತರಾಗುತ್ತಾರೆ. ಅಚ್ಚಳಿಯದ ಅರಳುಗಳಿಂದ ಆದರ್ಶಿತರಾಗು ತ್ತಾರೆ. ಸದರಿ ಶ್ರೀ ಸದಾಶಿವ ಶಿವಾಚಾರ್ಯರು ಅಂತಾಗಿದ್ದಾರೆ. ಅವರ ದೇಹ ದೇವಾಲಯವು ದಿವ್ಯವಾದುದು. ಅದರೊಳಗಿರುವ ಆತ್ಮದೇವರು ಭವ್ಯವಾದುದು; ಸೇವ್ಯವಾದುದು. ಆ ದಿವ್ಯಾತ್ಮನು ಧರಿಸಿದ ಸತ್ಯ ಅಹಿಂಸೆ ಶೀಲ ಯೋಗ ತ್ಯಾಗ ತಪಸ್ಸು ವಿನಯ ಶಮೆ ದಮೆ ಮುಂತಾದ ಸುಗುಣ ಪುಷ್ಪಗಳು ಪರಮಾರ್ಥವಾದವು.

ಅವುಗಳ ಪರಿಮಳ ಪ್ರಮಾಣಾತೀತವಾದುದು. ಅವುಗಳ ಮರಂದ ಪರಮಾನಂದಕರವಾದುದು.

ಹೂವನು ಮೆಚ್ಚದವರಾರು? ಹೂವನು ಮುಡಿಯದವರಾರು? ಆದರೆ ಅದೇ ಹೂವಿನಂತಹ ಹೃದಯ ಎಷ್ಟು ಜನರಿಗಿದೆ; ಇರುತ್ತದೆ? ಅಲ್ಲದೆ ಈ ಬನದ ಹೂವಿಗಿಂತಲೂ ಹತ್ತು ಕೋಟಿ ಪಾಲು ಹೆಚ್ಚಿನದಾದ ಗುಣಪುಷ್ಪವ ಮೆಚ್ಚಿ ಮುಡಿಯುವವರು ವಿರಳ. ಅದರಲ್ಲಿಯೂ ಹಲವಾರು ಹೂವುಗಳ ಅಳವಡಿಸಿಕೊಳ್ಳುವವರು ತೀರ ವಿರಳ. ಈ ದೃಷ್ಟಿಯಿಂದ ಸುಗುಣ ಸುಮಗಳ ಸೂಡಿದ ಈ ಸದಾಶಿವ ಶಿವಾಚಾರ್ಯರು ವಂದ್ಯರು, ವರೇಣ್ಯರು. ಈ ಬಗೆಯ ಈ ಹೂಮರವ ಕಂಡವರ ಕಣ್ಣು, ಮುಟ್ಟಿ ಪೂಜಿಸಿದವರ ಕೈ ಕೃತಾರ್ಥ; ಸಾರ್ಥ.

ಈ ಜ್ವಲಂತ ಮಹಂತ ವೃಕ್ಷದ ಪುಷ್ಪಗಳ ಅಂದವೇ ಅಂದ. ಗಂಧವೇ ಗಂಧ. ಮಕರಂದವೇ ಮಕರಂದ. ಇವುಗಳಿಗೆ ಹೋಲಿಕೆ ಬೇರೊಂದಿಲ್ಲ. ಇವನ್ನು ಸಂಪಾದಿಸಿದ ಮರದ ನೆಲ ಬೇರೆ, ಜಲಬೇರೆ; ಬಲ ಬೇರೆ. ಆ ಅಂದವ ಕಾಣುವ ಕಣ್ಣು ಬೇರೆ. ಆ ಗಂಧವ ಮೂಸುವ ಮೂಗು ಬೇರೆ. ಆ ಮಕರಂದವ ಸ್ವಾದಿಸುವ ರಸನೆಯೆ ಬೇರೆ. ಅವನ್ನು ಪಡೆದವರೆ ಧನ್ಯಾತ್ಮರು; ಪುಣ್ಯಾತ್ಮರು. ಅಂತಹ ಅಮೋಘ ವೃಕ್ಷವೊಂದಿರುವುದು ಶ್ರೀ ಗುರುಕುಮಾರಾಶ್ರಮದ ಪುಣ್ಯ, ಗಿರಿಯಾಪುರದ ಪುಣ್ಯ; ನಾಡಿನ ಪುಣ್ಯ.

"........ಪೂದೋಟಮಂ ಕೈಮಿಕ್ಕು
ಬಂದು ಪುಳಕಿಸುತೆ ಪರಮಾನಂದದಿಂ ಪೊಕ್ಕು
ತೂಗಾಡಿ ತೊನೆದಾಡುತಾಹಾ! ವಿರೂಪಾಕ್ಷ,
ಪೂಗಳಂ ನಡೆನೋಡುತಾಹಾ! ವಿರೂಪಾಕ್ಷ;
ಎಂದೆನುತೆ ಹಿಗ್ಗಿ ಹೊಗಳುತೊಲ್ದು ನಲಿವುತ್ತೆ
ಚಂದ ಚಂದದ ಕುಸುಮವೃಂದಮಂ ನೋಡುತ್ತೆ
ಎನಗಿಂತು ಕರುಣಿಸಿದನೇ '**ಸದಾಶಿವ**' ನೆನುತೆ
ಮನದೊಳಗೆ ಹರುಷದಿಂ ನಲಿನಲಿದು ನೋಡುತೆ"

ಹರಿಹರನಿಗೆ ಹೂದೋಟವೆಂದರೆ ಹೂವೆಂದರೆ ಹಿಡಿಸಲಾರದ ಹಿಗ್ಗು. ಆತನ ಆ ಹಿಗ್ಗು ಹೂಗಳ ಕಂಡಾಗ ಬುಗ್ಗೆಯಾಗಿ ಹೊಮ್ಮುತ್ತದೆ. ಹಲವಾರು ಹೂವುಗಳು ದೊರೆಯಬೇಕಾದರೂ ದೊರೆತಾಗ ಭಾವ ಮಿಡಿಯಬೇಕಾದರೂ ಭಾವ ಮಿಡಿದು ಕಾವ್ಯವಾಗಿ ಹರಿಯಬೇಕಾದರೂ ಆತನ ಕರುಣೆಯೇ ಬೇಕು. ಅಂದು ಆ ಹರಿಹರ ದೇವಕವಿಗೆ ಹೂದೋಟದಲ್ಲಿ ಚಂದ ಚಂದದ ಕುಸುಮವೃಂದಗಳ ಕರುಣಿಸಿ ಕಾಣಿಸಿ ಹರುಷಗೊಳಿಸಿ ನಲಿನಲಿದಾಡಿಸಿದವನು ಸದಾಶಿವನೆ! ಇಂದು ಅದೇ ಸದಾಶಿವನು ನಮ್ಮೆಲ್ಲರ ಉದ್ಧಾರಕ್ಕಾಗಿ ತಾನೇ ಒಂದು ಹೂ ಮರವಾಗಿ ಅದರಲ್ಲಿ ಹಲವು ಬಗೆಯ

ಹೂವುಗಳ ತೋರಿ ತನ್ನ ಪರಮಾರ್ಥ ಪುಷ್ಪವೃಕ್ಷ ಪವಾಡವನ್ನು ಮೆರೆಯುತ್ತಿದ್ದಾನೆ. ಇವರಿಂದ ನಮ್ಮ ಜನ್ಮ ಸಾಫಲ್ಯ ; ನಮ್ಮ ಜೀವಕ್ಕೆ ಸೌಖ್ಯ.

ಹೂವು ಭಕ್ತನ ಭಾವಕ್ಕೆ ಕವಿಯ ಕಾವ್ಯಕ್ಕೆ ಒಂದು ಹೊಸ ಚೇತನವನ್ನು ಕೊಡಬಲ್ಲುದು ; ಒಂದು ಹೊಸ ಹಬ್ಬವನ್ನು ಕಣ್ಮನಗಳಿಗೆ ತರಬಲ್ಲುದು. ಹೂವು ಅದೆಲ್ಲಿಯೇ ಇರಲಿ ಅದರದೇ ಒಂದು ಸೌಂದರ್ಯ ! ಅದರದೇ ಒಂದು ಮಾಧುರ್ಯ ! ಸೌಂದರ್ಯ ಮಾಧುರ್ಯ ಸೌಗಂಧ್ಯಗಳ ಪಾತ್ರೆ ಪುಷ್ಪ ! ಸಂತರ ಜೀವನವೃಕ್ಷವು ಬಿಡುವ ಸುಗುಣಸುಮಗಳೂ ಅಷ್ಟೆ ! ಆದರಿವು ಕ್ಷಣಭಂಗುರವಲ್ಲ ; ಹಣಕ್ಕೆ ದೊರೆವವಲ್ಲ.

ಈ ಸದಾಶಿವನೆಂಬ ಪುಷ್ಪವೃಕ್ಷವು ಬೆಳೆದು ನಿಂತಿದೆ. ಬಗೆ ಬಗೆಯ ಹೂವರಳಿ ನಿಂತಿದೆ. ಇದರಲ್ಲಿ ಅರಳಿದ ಹೂವುಗಳ ಮೀಸಲು ಮುರಿದಿಲ್ಲ. ಭವಿಭೂತಗಳ ಸೋಂಕಿಲ್ಲ.

"ಅಳಿಯೆರಗದನಿಲನಲುಗದ ರವಿಕರಂ ಪುಗದ
ಬೆಳೆಬೆಳೆದು ನಳನಳಿಸಿ ಮಘಮಘಿಸಿ ಕವಿಲಿಡಿದ"

ಪೊಚ್ಚಪೊಸ ಹೂವುಗಳು ಇದರಲ್ಲಿವೆ. ಇದನ್ನು ಅಳಿಮನವೆಂಬ ಅಳಿಯು ಮುಟ್ಟಿಲ್ಲ. ದುಷ್ಟವಾಸನೆಯೆಂಬ ಗಾಳಿ ತಬ್ಬಿ ತೀಡಿಲ್ಲ ; ತೀಡಿ ಹೂವ ನಲುಗಿಸಿಲ್ಲ ; ಹೂವಿನ ತನಿಗಂಪನ್ನು ಹೊತ್ತೊಯ್ದಿಲ್ಲ. ಅಲ್ಪಜ್ಞಾನವೆಂಬ ಅಥವಾ ಲೌಕಿಕ ವಿಚಾರವೆಂಬ ರವಿಕಿರಣಗಳ ಸೋಂಕಿಲ್ಲ ; ಸೋಂಕಿ ಬಾಡಿಸಿಲ್ಲ. ಇವು ಶಿವಲಿಂಗದ ಸಿರಿಮುಡಿಗಾಗಿಯೆ ಮೈವೆತ್ತಿವೆ. ಶಿವಶರಣರ ಕಣ್ಮನಗಳ ತಣಿಸಲು ತೋರಿ ಕೊಂಡಿವೆ ; ತೊಳತೊಳಗಿ ಅರಳಿಕೊಂಡಿವೆ. ನಳನಳಿಸಿ ನೆರೆದುಕೊಂಡಿವೆ. ಮಘ ಮಘಿಸಿ ಮೆರೆಯುತಿವೆ. ಆಹಾ ! ಅದೇನು ಆ ಹೂವುಗಳ ನುಣ್ಪು! ಅದೇನು ಆ ಹೂವುಗಳ ಗುಣ್ಪು ! ಅದೆಂತಹ ಪುಣ್ಯ ! ಅವೇ ಧನ್ಯ.

" ಹಸುರಳಿದು ಬೆಳ್ಪಳಿದು ನನೆಯೇರಿ ಹೊದೆದೋರೆ
ಹೊಸಪರಿಯ ಬಿರಿಮುಗುಳ್ಗಳಿರೆ ಬೀಗಿ ನೆಲವೇರಿ
ಮಲ್ಲಿಗೆಯರಳ್ಗಳಂ ಮನವಾರೆ ತಿರುವುತುಂ
ಮೆಲ್ಲಮೆಲ್ಲನೆ ನೋಡುತಲ್ಲಲ್ಲಿ ಕುಣಿವುತುಂ "

ಅಂದು ಆ ಭೂವನದಲ್ಲಿರುವ ಹೂವುಗಳ ಕಣ್ಣಾರೆ ಕಂಡು, ಕೈಯಾರೆ ಕೊಂಡು ಹೃದಯಾರೆ ಹೊಗಳಿ ಹೊರೆಯೇರಿ ಹರಿಹರನು ಕುಣಿದಾಡಿದಂತೆ ಇಂದು ಈ ಸದ್ಗುಣ ಮೂರ್ತಿ ಸದಾಶಿವ ವೃಕ್ಷದ ಸಾಂಸ್ಕೃತಿಕ ಸುಂದರ ಹೂವುಗಳ ನೋಡಿ ಹರುಷದೊಳು ಕೂಡಿ ಚಿತ್ತಭೂಮಿಯಲ್ಲಿ ಉತ್ಸಾಹವುಕ್ಕಿ ಉಲ್ಲಾಸವಿುಕ್ಕಿ ಮಣಿಮಣಿಯುವಂತಾಗು ತ್ತದೆ. ಇನ್ನೂ ಈ ಸದಾಶಿವ ವೃಕ್ಷದಲ್ಲಿರುವ ಬೇರೆ ಹೂವುಗಳ ಹೃದಯ ತುಂಬಿ ಬಣ್ಣಿಸಬೇಕೆನಿಸುತ್ತದೆ.

"ಆಹ! ಕೇತಕಿ ನಿನ್ನ ಪರಿಮಳದ ಪರಿ ಬೇರೆ;
ಆಹ! ದೆಸೆದೆಸೆಗೆ ಬೀರುವ ಸುಗಂಧದ ಸೂರೆ!
ಪರಿಮಳಂ ಸುಳಿಗೊಂಡು ಬೆಳೆದು ಕವಲಿರಿಯಿತ್ತೊ;
ಉರವಣಿಸಿ ಬೆಳೆವ ಪರಿಮಳಕೆ ಗರಿ ಮೂಡಿತ್ತೊ?"

ಓ ಓದುಗರೆ! ನೋಡಿದಿರಾ? ಈ ಸದಾಶಿವ ಸುರತರುವಿನಲ್ಲಿರುವ ಗುಣಗಳೆಂಬ ಗೇದಿಗೆ ಹೊಡೆಯ! ಮೂಸಿದಿರಾ? ದೆಸೆದೆಸೆಗೆ ಹಬ್ಬಿದ ಅವರ ನರುಗಂಪವ! ಓ ಓದುಗರೆ, ಬನ್ನಿ ಬೇಗ ಸಾಗಿ ·ಬನ್ನಿ! ಇಲ್ಲಿ ನೋಡಿ! ಇದೋ ಇವರಲ್ಲಿಯೇ ದವನವೂ ಇದೆ. ಆಹಾ!

ದವನವೇ ಶಿವನ ಪರಿಮಳದ ಹಬ್ಬವೇ ಬಾರ!
ಭುವನದೊಳ್ಗಿನಗೆ ಸರಿಯಿಲ್ಲ ಸೌರಭಸಾರ!"

ದೇಹವೆಲ್ಲ ದವನದ ಕಡ್ಡಿಯಂತಿರುವ ಸದಾಶಿವ ಶಿವಾಚಾರ್ಯರ ಸೈಪಿನ ಸೌರಭ ಸಾರಕ್ಕೆ ಸರಿಯುಂಟೆ ತಿರೆಯುಲ್ಲಿ? ಇತ್ತ ಇಣುಕಿ ಈಕ್ಷಿಸಿರಿ! ಈ ವೃಕ್ಷದ ಇನ್ನೊಂದು ರೆಂಬೆಯುಲ್ಲಿ ಎಂತಹ ಸುಂದರ ಸುರಹೊನ್ನೆ ಹೂವಿದೆ:

"ಏನೆನ್ನ ಹೊನ್ನೆ ಸುರಹೊನ್ನೆ ಪರಿಮಳವರಸಿ
ನೀ ಮುನ್ನ ಪುಲಿಗರೆಗೆ ಸೋಮಯ್ಯನಂ ಕರಸಿ–
ಕೊಂಡೆ ಸದ್ಭಕ್ತಿ ಸರಿಯುಂಟೆ ಬಾ ನಿನಗೆನುತೆ
ಕೊಂಡಲ್ಲಿ ದಿವ್ಯಪ್ರಸೂನವಂ ನಡೆತರುತೆ!"

ಬಂಗಾರ ಬಣ್ಣದ, ಬಂಗಾರ ಬೆಲೆಯ ಭಕ್ತಿಯೆಂಬ ಸುರಹೊನ್ನೆಯ ಹೂವು ಈ ಸದಾಶಿವ ಸುರತರುವಿನಲ್ಲಿ ಸುಗಂಧ ಸೂಸುತ ಅರಳಿದೆ. ಅರಳಿ ಆ ಪರಶಿವನೆಂಬ ಸೋಮನಾಥನನ್ನು ತಾನಿರುವ ಶ್ರೀ ಗುರುಕುಮಾರಾಶ್ರಮಕೆ ಬಂದಿರುವಂತೆ ಮಾಡಿದೆ. ಆ ಸೋಮನಾಥನೇ ಮರುಳಸಿದ್ಧನಾಗಿ ಇವರ ಭಕ್ತಿಗೆ ಆಸಕ್ತಿಗೆ ಮರುಳಾಗಿ ಶ್ರೀ ಗುರುಕುಮಾರಾಶ್ರಮದಲ್ಲಿ ವೈಭವದಿಂದ ಜಂಗಾವಲಿಗನಾಗಿ ಬಂದು ಮೂರ್ತಗೊಂಡಿದಾನೆ. ಈ ಸದಾಶಿವನ ಸುಗುಣಸುಮಗಳಿಂದ ನಿತ್ಯ ಪೂಜೆಗೊಳ್ಳುತ್ತಿದ್ದಾನೆ. ಈ ಪುಷ್ಪಗಳ ಧರಿಸುವ ಪರಿ ಬೇರೆ, ಸ್ಮರಿಸುವ ಪರಿ ಬೇರೆ:

"ಕೈ ಮುಟ್ಟೆ ಮುಟ್ಟವೆ ಮನಂ ಮುಟ್ಟೆ ಕಟ್ಟುತುಂ
ಕೈ ಮರೆದು ಪ್ರಾಬೀಳೆ ಮಿಗೆಸತ್ತು ಹುಟ್ಟುತುಂ
ನೋಡಿದೊಡೆ ಪೂ ಬಾಡುಗೆಂದು ಕಣ್ಮುಚ್ಚುತುಂ
ನಾಡೆ ನೆನೆದೊಡೆ ಕುಂದುಗೆಂದು ಮನ ಬಿಟ್ಟುತುಂ
ನೋಡಿದೊಡೆ ಕೊಂಡಾಡುತುಂ ತೂಗಿ ತೊನೆವುತುಂ
ನೋಡುತ್ತೆ ಸಾಗಿಸುತ್ತೋವುತ್ತೆ ಮಲೆವುತುಂ
ನನೆಗಳಲರದ ಮುನ್ನ ಮನವರಲ್ದು ಪೊಂಗುತುಂ

ನನೆಬಿರುವುದಕ್ಕೆ ಚಿತ್ತಂ ಬೀಗಿ ಬಿರಿವುತುಂ
ಮೊಗ್ಗೆಯೊಳ್ ಶಿವನ ನಿರಿಸಲ್ಬೇಡಿ ಬಯಸುತುಂ
ಹಿಗ್ಗದಲರ್ಗಳ ನಡುವೆ ಸಿಂಗರಿಸಲಾಡುತುಂ
ಇರಲಳಿಕುಳಂಗಳೆಲ್ಲಂ ತೋಂಟವುಂ ಪೊಕ್ಕು
ಪರಿದೊಕ್ಕಲಿಕ್ಕೆ ಪೂಗಾಣದೆ ಚಲಂ ಮಿಕ್ಕು
ಪರಿಮಳದ ಪಥವಿಡಿದು ಜೇಂಕರಿಸಿ ಬರುತವಿರೆ
ನೆರೆದು ಪಲ್ಮೊರೆವಂತೆ ಜೇಂಕರಿಸಿ ಬರುತವಿರೆ."

ಇಂತರ್ಚಿಸುತ್ತಿರುವ ಈ ಸುಗುಣಸುಮಸುರತರುವಿನ ಸೊಬಗಿನ ಸೊಗಸನು ಬಣ್ಣಿಸಲಳವಲ್ಲ. ಭಕ್ತರೆಂಬ ಭೃಂಗಾಳಿಯು ಹೀಗೆ ಮನಮುಟ್ಟಿ ಹೂ ಹಾರವ ಕಟ್ಟುತ್ತಿರುವ, ತನ್ನ ಪ್ರತ್ಯಂಗದಲ್ಲಿರುವ ಪರಿಪರಿಯ ಗುಣಕುಸುಮಗಳನ್ನು ಕೆಳಕ್ಕೆ ಬೀಳದಂತೆ ಎಚ್ಚರವಿಡಿದಿರುವ, ತನ್ನ ಸದ್ಗುಣಸುಮಗಳ ತಾ ನೋಡದೆ ತಾ ನೆನೆಯದೆ ಹೂವಿಗೆ ಮೊದಲು ಹೃದಯವ ಅರಳಿಸಿ (ಹೊತ್ತಾರೆ ಹರುಷದಿಂದೆದ್ದು) ಹರುಷಿಸಿ ಹರನಿಗರ್ಪಿಸಿ (ಧ್ಯಾನ ಮೌನಗಳಿಂದ ಜಪತಪಗಳಿಂದ) ಶ್ರೀ ಗುರುಕುಮಾರಾಶ್ರಮದಲ್ಲಿರುವ ಈ ಸದಾಸಿವ ಪುಷ್ಪವೃಕ್ಷವ ನೋಡಲು ಹೃದಯ ಹಂಬಲ ಹೆಚ್ಚಿ ಗುರುಧ್ಯಾನ ಜೇಂಕಾರದೊಡನೆ ಬಂದು ನೆರೆಯುವುದನ್ನು ಕಣ್ಣಾರೆ ಕಾಣಬೇಕು. ಕಂಡು ತಣಿಯಬೇಕು. ಆ ಪುಷ್ಪವೃಕ್ಷ! ಅದಕ್ಕೆರಗಿ ಬರುವ ಭಕ್ತಾಳಿವೃಂದ! ಆ ಪುಷ್ಪ ಮಕರಂದವ ಪಾನಮಾಡಿ ಪಡುವ ಆನಂದ! ಅದನು ಬಣ್ಣಿಸಲು ಮುಂದಿಲ್ಲ ಶಬ್ದ! ಇದೊಂದು ಬಗೆಯ ಸೋಜಿಗದ ಹೂಮರ! ಇದರಲ್ಲಿವೆ ಹೂವುಗಳು ಹಲವು ತೆರ!

——::——

# ಕೈವಲ್ಯೋಪನಿಷದ್ಭಾಷ್ಯಕಾರರು



ಕೈವಲ್ಯೋಪನಿಷತ್ತಿಗೆ ವೀರಶೈವ ಪರ ಭಾಷ್ಯ ಬರೆದವರೂ, ಶಿವಾದ್ವೈತ ತತ್ತ್ವಪ್ರಚಾರ ಸಮಿತಿಯ ಸಂಸ್ಥಾಪಕರೂ, ಷಟ್‌ಸ್ಥಲ ಜ್ಞಾನಸಂಪನ್ನರೂ, ಅನೇಕ ಉಪಯುಕ್ತ ಗ್ರಂಥಗಳನ್ನು ಬರೆದು ಕನ್ನಡ ನಾಡಿನಲ್ಲಿ ಹೆಸರು ಪಡೆದವರೂ ಆಗಿರುವ ಶ್ರೀ ಸದಾಶಿವ ಶಿವಾಚಾರ್ಯರು. ಸಖರಾಯಪಟ್ಟಣ ಇವರ ಅರವತ್ತು ವರ್ಷದ ವರ್ಧಂತಿಯ ಸಮಯದಲ್ಲಿ 'ವಿಭೂತಿ' ಎಂಬುವ ಗ್ರಂಥವನ್ನು ಪ್ರಕಟಿಸಬೇಕೆಂದು ನಿಶ್ಚಯಿಸಿದ್ದುದು ತುಂಬಾ ಉತ್ಕೃಷ್ಟವಾದ ಕಾರ್ಯವಾಗಿರುತ್ತದೆ. ಹೀಗೆಯೇ ಅನೇಕ ತರಹದಿಂದ ವೀರಶೈವ ಸಾಂಸ್ಕೃತಿಕ ಸಾಹಿತ್ಯವನ್ನು ಬೆಳೆಯಿಸುವುದು ಜ್ಞಾನಿಗಳಾದ ವೀರಶೈವರ ಕರ್ತವ್ಯವಾಗಿರುತ್ತದೆ. ಈ ಸಂದರ್ಭದಲ್ಲಿ ಈ ಗ್ರಂಥದಲ್ಲಿ ನನ್ನದೊಂದು ಲೇಖನವನ್ನು ಬರೆಯಲಿಕ್ಕೆ ಸುಸಮಯ ಒಗಿದಸಿ ಕೊಟ್ಟುದುದಕ್ಕೆ ಈ ಶಿವಾದ್ವೈತ ತತ್ತ್ವಪ್ರಚಾರ ಸಮಿತಿಯ ಅಧ್ಯಕ್ಷರೂ ಕನ್ನಡ ನಾಡಿನಲ್ಲಿ ತಮ್ಮ ಬರೆಹ ಭಾಷಣಗಳಿಂದ ವಿಖ್ಯಾತರೂ, ಲೌಕಿಕ ಕುಶಲರೂ ಆಗಿರುವ ಸೂರ್ಯ ಸಿಂಹಾಸನಾಧೀಶ್ವರ ನಿಡುಮಾಮಿಡಿ ಶ್ರೀ ಜಗದ್ಗುರು ಮಹಾಸ್ವಾಮಿಗಳವರಿಗೆ ಅಂತಃಕರಣಪೂರ್ವಕ ಕೃತಜ್ಞತೆಯನ್ನು ಸಲ್ಲಿಸಿ ಕೈವಲ್ಯೋಪನಿಷತ್ತಿನ ಭಾಷ್ಯಕಾರರ ಭಾಷ್ಯದ ವಿಷಯದಲ್ಲಿಯೂ ಅವರ ಬಗ್ಗೆಯೂ ಕೆಲವು ಮಾತುಗಳನ್ನು ಬರೆಯುತ್ತೇನೆ.

ಉಪನಿಷತ್ತುಗಳ ವೇದಾಂತವು ಜಗತ್ತಿನ ಎಲ್ಲೆಡೆಯಲ್ಲಿಯೂ ತಲೆಯೆತ್ತಿ ಮೆರೆಯುತ್ತಲಿವೆ. ಭೂಲೋಕದ ಬೇರೆ ಬೇರೆ ದೇಶಗಳಲ್ಲಿರುವ ಪ್ರಕಾಂಡ ಪಂಡಿತರೆಲ್ಲ ಅವುಗಳಲ್ಲಿ ಅಡಕವಾಗಿರುವ ಗಹನ ಸಿದ್ಧಾಂತಗಳನ್ನು ನೋಡಿ, ತಲೆದೂಗುತ್ತಲಿದ್ದಾರೆ. ಪ್ರಾಯಃ ಉಪನಿಷತ್ತುಗಳು ಜಗತ್ತಿನ ಮುಕ್ಕಾಲುಪಾಲು ಭಾಷೆಗಳಲ್ಲಿ ಅಚ್ಚಾಗಿರುತ್ತವೆ. ವೇದಗಳನ್ನು ಬಿಟ್ಟರೆ, ವೇದದ ಭಾಗಗಳಾಗಿರುವ ಉಪನಿಷತ್ತು

ಗಳಷ್ಟು ಸಂಸ್ಕೃತ ಸಾಹಿತ್ಯ ಪ್ರಪಂಚದಲ್ಲಿ ಗೌರವ ಪಡೆದ ಗ್ರಂಥಗಳಿರುವುದಿಲ್ಲ. ಉಪನಿಷತ್ತುಗಳಲ್ಲಿ ವೇದಾಂತವು ಹಲವಾರು ರೀತಿಯಿಂದ ಪರಿಪೂರ್ಣವಾಗಿರುತ್ತದೆ. ಆದ್ದರಿಂದಲೇ "ತಿಲೇಷು ತೈಲವದ್ವೇದೇ ವೇದಾಂತಃ ಪ್ರತಿಷ್ಠಿತಃ" ಅಂದರೆ ತಿಲದಲ್ಲಿ ತೈಲವು ವ್ಯಾಪಿಸಿರುವಂತೆ ವೇದದಲ್ಲಿ ವೇದಾಂತವು ತುಂಬಿದೆಯೆಂದು ಪ್ರಮಾಣಗಳು ಸಿಗುತ್ತವೆ. ಮಾನವನ ಹಲವು ಕಾರ್ಯಸಾಧನೆಗಳಲ್ಲಿ ಮುಕ್ತಿಯೇ ಮಿಗಿಲಾದುದು. ಅದರ ಮಾರ್ಗವನ್ನು ಕಂಡು ಹಿಡಿಯುವುದರಲ್ಲಿ ಉಪನಿಷತ್ತುಗಳು ಶ್ರೇಷ್ಠಸಾಧನಗಳಾಗಿರುತ್ತವೆ. ಪುನರಾವೃತ್ತಿರಹಿತವಾದ ಮೋಕ್ಷವನ್ನು ಸಾಧಿಸಬೇಕಾದರೆ ಸದಾಚಾರ ನಿರತನಾಗಿ ಪರಮಾತ್ಮನ ಧ್ಯಾನವನ್ನು ಮಾಡಬೇಕಾಗುತ್ತದೆ. ಅದಕ್ಕೆ ಬೇಕಾಗುವ ಸಾಧನೋಪಾಯಗಳೆಲ್ಲ ಉಪನಿಷತ್ತುಗಳಲ್ಲಿ ಅಡಕವಾಗಿರುತ್ತವೆ.

ಪೂಜ್ಯರಾದ ಅನೇಕ ಜನ ವೀರಶೈವಾಚಾರ್ಯವರ್ಯರು ಉಪನಿಷತ್ತುಗಳಿಗೆ ಲಿಂಗಧಾರಣಪರ ಅರ್ಥವನ್ನು ಬರೆದು ವೀರಶೈವ ಷಟ್‌ಸ್ಥಲ ಸಿದ್ಧಾಂತವನ್ನು ಪ್ರತಿಪಾದಿಸಿರುತ್ತಾರೆ. ಇದು ಅವರ ಪಾಂಡಿತ್ಯದ ಹೆಗ್ಗುರುತಾಗಿರುತ್ತದೆ. ವೀರಶೈವರೆಲ್ಲ ಹೆಮ್ಮೆ ಪಡತಕ್ಕ ವಿಷಯವಾಗಿರುತ್ತದೆ.

ಆದರೆ ಸಂಸ್ಕೃತದಲ್ಲಿ ಶ್ರೇಷ್ಠಗಳಾದ ಉಪನಿಷತ್ತುಗಳಿಗೆ ಎಲ್ಲಾ ಮತದ ಆಚಾರ್ಯರು ತಮ್ಮ ತಮ್ಮ ಮತ ಸಿದ್ಧಾಂತದ ಪ್ರಕಾರ ತಮ್ಮ ಪಾಂಡಿತ್ಯದಿಂದ ಭಾಷ್ಯಗಳನ್ನು ಬರೆದಿರುತ್ತಾರೆ. ಇಲ್ಲಿ ಮಹತ್ವದ ವಿಷಯವೇನೆಂದರೆ, ಒಂದೊಂದು ಮಂತ್ರಗಳಿಗೆ ಹತ್ತುಹನ್ನೆರಡು ಜನ ಆಚಾರ್ಯರು ಬೇರೆ ಬೇರೆ ಭಾಷ್ಯಗಳನ್ನು ಬರೆದಿದ್ದಾರೆ. ಇದೇ ಉಪನಿಷತ್ತುಗಳಲ್ಲಿರತಕ್ಕ ಶ್ರೇಷ್ಠವಾದ ಗುಣವು. ಉಳಿದ ಆಚಾರ್ಯರಂತೆ ವೀರಶೈವಾಚಾರ್ಯರೂ ಕೂಡ ಲಿಂಗಧಾರಣಪರ ವೇದಮಂತ್ರಗಳಿಗೆ ವೀರಶೈವಪರ ಭಾಷ್ಯ ಬರೆದಿರುವುದೂ ಇವರಿಗೆ ಗೌರವದಾಯಕವಾಗಿರುತ್ತದೆ. ಬೇರೆ ಬೇರೆ ಮತದ ಆಚಾರ್ಯರು ಬೇರೆ ಬೇರೆ ಅರ್ಥಗಳನ್ನು ಮಾಡಿ ಪರಮತಗಳನ್ನು ಖಂಡಿಸಿ ಸ್ವಮತ ಸಿದ್ಧಾಂತಪಡಿಸಿರುತ್ತಾರೆ. ಅದೇ ಮಾರ್ಗವನ್ನನುಸರಿಸಿ ವೀರಶೈವಾಚಾರ್ಯರು ಲಿಂಗಧಾರಣ ಪರ ಅರ್ಥವನ್ನು ಮಾಡಿ ಬರೆದಿದ್ದುದು ಸರಿಯಾದ ಮಾರ್ಗವಾಗಿರುತ್ತದೆ. ಒಂದು ಧರ್ಮದವರನ್ನು ಮತ್ತೊಂದು ಧರ್ಮದವರು ಖಂಡಿಸುವುದರಲ್ಲಿ ಅರ್ಥವಿಲ್ಲ. ಎಲ್ಲರೂ ಆಯಾಯ ಮತಕ್ಕೆ ಆಚಾರ್ಯರು ಮತ್ತು ಪಂಡಿತರು. ತಮ್ಮಂತರಾತ್ಮನ ಪ್ರೇರಣೆಯಂತೆ ಭಾಷ್ಯಗಳನ್ನು ಬರೆದಿರುತ್ತಾರೆ.

ಆದರೆ ಇಂಥವರ ಬಾಷ್ಯವೇ ಸರಿ ಎಂದು ಹೇಳಲಿಕ್ಕೆ ಬರುವುದಿಲ್ಲ. ಯಾರಿಗೂ ಈ ಧೈರ್ಯ ಬರಲಾರದು. ಎಲ್ಲರೂ ಆಚಾರ್ಯರು. ಆದ್ದರಿಂದ ವೀರಶೈವಾಚಾರ್ಯರು ಉಪನಿಷತ್ತುಗಳಿಗೆ ಷಟ್‌ಸ್ಥಲ ಸಿದ್ಧಾಂತ ಪ್ರತಿಷ್ಠೆಮಾಡಿದ್ದುದು ಸಮಂಜಸವಾಗಿರುತ್ತದೆ.

## ಕೈವಲ್ಯೋಪನಿಷತ್

ಉಪನಿಷತ್ತುಗಳು ಈಗ ೨೨೦ ಅಚ್ಚಾಗಿರುವುವು ದೊರೆಯುತ್ತಲಿವೆ. ಅವುಗಳ ಸಂಖ್ಯೆಗೆ ಇತಿಮಿತಿ ಕಂಡುಬರುವುದಿಲ್ಲ. ದಶೋಪನಿಷತ್ತುಗಳು ಮುಖ್ಯವಾದವುಗಳಾದಾಗ್ಯೂ ಅವುಗಳಿಗೆ ಸರಿಸಮಾನವಾದ ಕೆಲವು ಉಪನಿಷತ್ತುಗಳಿವೆ. ನಿರರ್ಥಕಗಳಾದ ಉಪನಿಷತ್ತುಗಳಿಗೂ ಕೊರತೆ ಇರುವುದಿಲ್ಲ. ಕೈವಲ್ಯೋಪನಿಷತ್ತು ದಶೋಪನಿಷತ್ತುಗಳಲ್ಲಿಲ್ಲದಿದ್ದರೂ – ಅವುಗಳಿಗೆ ಸರಿಸಮಾನವಾಗಿದೆ. ಅನೇಕ ಆಚಾರ್ಯರು ಈ ಉಪನಿಷತ್ತನ್ನು ತಮ್ಮ ಭಾಷ್ಯಗಳಲ್ಲಿ ಉಪಯೋಗಿಸಿರುತ್ತಾರೆ.

ಶೈವೋಪನಿಷತ್ತುಗಳಲ್ಲಿ ಕೈವಲ್ಯೋಪನಿಷತ್ತು ಒಂದು ಪ್ರಧಾನವಾದ ಉಪನಿಷತ್ತಾಗಿದೆ.

ಈ ಉಪನಿಷತ್ತಿನ ಮೊದಲನೆಯ ಖಂಡದಲ್ಲಿ—

"ಉಮಾ ಸಹಾಯಂ ಪರಮೇಶ್ವರಂ ಪ್ರಭುಂ
ತ್ರಿಲೋಚನಂ ನೀಲಕಂಠಂ ಪ್ರಶಾಂತಂ"

ಎಂದು ಹೇಳಿ, ಸ್ಪಷ್ಟವಾದ ಶಬ್ದಗಳಿಂದ ಶಿವ ಪರಬ್ರಹ್ಮತ್ವವನ್ನು ಹೇಳಲಾಗಿದೆ. ಇದಕ್ಕೆ ಬೇರೆ ಬೇರೆ ಅರ್ಥವನ್ನು ಅನೇಕರು ಕಲ್ಪಿಸಿದಾಗ್ಯೂ ಶಿವಪರ ಬಹ್ಮತ್ವವನ್ನು ಅಲ್ಲಗಳೆಯುವುದು ಶಕ್ಯವಾದುದಲ್ಲ. ಲಿಂಗಕ್ಕೆ ಪರ ಬ್ರಹ್ಮಪರ ಅರ್ಥಮಾಡಿ ಶಿವನೇ ಲಿಂಗವೆಂದು ಸಿದ್ಧಪಡಿಸಿರುತ್ತಾರೆ.

ಲಕಾರೋ ಲಯಬುದ್ಧಿಸ್ಥೋ ಬಿಂದುನಾ ಸ್ಥಿತಿರುಚ್ಯತೆ
ಗಕಾರಾತ್ಸೃಷ್ಟಿರಿತ್ಯುಕ್ತಂ ಲಿಂಗಂ ಸೃಷ್ಟ್ಯಾದಿಕಾರಣಂ
ಲೀನಂ ಪ್ರಪಂಚರೂಪಂ ಹಿ ಸರ್ವಮೇತಚ್ಚರಾಚರಂ
ಸರ್ಗಾದೌ ಗಮ್ಯತೇ ಭೂಯಸ್ತಸ್ಮಾಲ್ಲಿಂಗಮುದೀರಿತಮ್

ಹೀಗೆ ಲಿಂಗಕ್ಕೆ ಸ್ಪಷ್ಟವಾಗಿ ಅರ್ಥವಾಗುತ್ತದೆ. ಭಾಷ್ಯಕಾರರು ಇದನ್ನೇ ತಮ್ಮ ಭಾಷ್ಯದಲ್ಲಿ ಸಿದ್ಧಾಂತಪಡಿಸಿರುತ್ತಾರೆ.

ಕೈವಲ್ಯೋಪನಿಷತ್ತು ಚಿಕ್ಕದಾದರೂ ಬಹಳ ಉತ್ಕೃಷ್ಟವಾದುದಾಗಿರುತ್ತದೆ. ಮೊದಲನೆಯ ಖಂಡದಲ್ಲಿ ೧೯ ಮಂತ್ರಗಳೂ ಎರಡನೆಯ ಖಂಡದಲ್ಲಿ ಕೇವಲ ೫ ಮಂತ್ರಗಳೂ ಇರುತ್ತವೆ. ಈ ೨೪ ಮಂತ್ರಗಳಲ್ಲಿ ಅನೇಕ ಶ್ರೇಷ್ಠ ತತ್ವಗಳು ಅಡಗಿರುತ್ತವೆ. ಭಾಷ್ಯಕಾರರಾದ ಸದಾಶಿವಾಚಾರ್ಯರು ಅನೇಕ ಪ್ರಮಾಣ ಗ್ರಂಥಗಳಿಂದ ವೀರಶೈವ ಷಟ್‌ಸ್ಥಲ ಸಿದ್ಧಾಂತದ ಪ್ರಕಾರ ಭಾಷ್ಯವನ್ನು ಬರೆದಿರುತ್ತಾರೆ. ಅವರು ಬರೆದ ೧೦೦ ಪುಟದ ಗ್ರಂಥವನ್ನು ಇಲ್ಲಿ ಉಲ್ಲೇಖ ಮಾಡುವ ಉದ್ದೇಶವಿಲ್ಲ. ಸಾಧ್ಯವೂ ಅಲ್ಲ–ಸ್ಥಾಲೀ ಪುಲಕನ್ಯಾಯದಂತೆ ಒಂದೆರಡು ಮಂತ್ರಗಳ ಭಾಷ್ಯವನ್ನು ಇಲ್ಲಿ ಕೊಡುತ್ತೇನೆ.

ವೇದಾಂತ ವಿಜ್ಞಾನ ಸುನಿಶ್ಚಿತಾರ್ಥಾಃ
ಸನ್ಯಾಸಯೋಗಾದ್ಯತಯಃ ಶುದ್ಧ ಸತ್ವಾಃ
ತೇ ಬ್ರಹ್ಮಲೋಕೇತು ಪರಾಂತಕಾಲೆ ಪರಾಮೃತಾತ್
ಪರಿಮುಚ್ಯಂತಿ ಸರ್ವೇ ||೪||

ಇದಕ್ಕೆ ಭಾಷ್ಯವನ್ನು ಬರೆಯುವಾಗ—

ವೇದಾಂತೇತಿ ವೇದಾಂತವಿಜ್ಞಾನ ಸುನಿಶ್ಚಿತಾರ್ಥಾಃ ವೇದಾನಾಂ ರುಗಾದಿ ಚತುರ್ವೇದಾನಾಂ ಅಂತಾಃ ವೇದಾಂತಾಃ ಉಪನಿಷದಃ ತಾಸಾಂ ವಿಜ್ಞಾನಂ ಸಮ್ಯಕ್ ಜ್ಞಾನಂ ತೇನ ಸುನಿಶ್ಚಿತಃ ಸುಷ್ಟು ನಿರ್ಧಾರಿತೋರ್ಥ ಬ್ರಹ್ಮಪರ ಪರಿಯಾಯಲಿಂಗಂ ಯೈಸ್ತೆ ವೇದಾಂತವಿಜ್ಞಾನ ಸುನಿಶ್ಚಿತಾರ್ಥಾಃ, ಉಪನಿಷದ್ವಿಚಾರಜನ್ಯ ಶಿವಾನುಭವ ಜ್ಞಾನೇನ ಸುನಿರ್ಧಾರಿತ ಬ್ರಹ್ಮಾಣಃ ಲಿಂಗಾಂಗಿನೊ ಭಕ್ತಮಾಹೇಶ್ವರಾದಯಃ ಇತ್ಯರ್ಥಃ ಉಪನಿಷದಿ ಶಿವಾನುಭವಶಾಸ್ತ್ರ ಪ್ರಬಂಧಬೋಧಿತ ಪಶುಪಾಶ ಪತಿರೂಪ ತ್ರಿಪದಜ್ಞಾನೇನ ಸಮ್ಯಜ್, ನಿಶ್ಚಿತ ಪ್ರಯೋಜನಾಃ ಲಿಂಗಪಶುಪತವ್ರತ ವಿಶಿಷ್ಟಾ ಅಪ್ರಾಕೃತಾತಿವರ್ಣಾಶ್ರಮಿಣಃ ಭಕ್ತಮಾಹೇಶ್ವರಾದಯ ಇತಿಭಾವಃ। ಅತಏವ ಶುದ್ಧಸತ್ವಾಃ ಶುದ್ಧಂ ಪರಿಶುದ್ಧಂ ಸತ್ವಂ ಪರವಸ್ತು ಯೇಷಾಂತೆ ಪರಿಶುದ್ಧ ಪರಬ್ರಹ್ಮ ಸ್ವರೂಪಾಃ ಲಿಂಗರೂಪಿಣಃ ಇತ್ಯರ್ಥಃ।

ಹೀಗೆ ಭಾಷ್ಯವನ್ನು ಸದಾಶಿವಾಚಾರ್ಯರು ಬರೆದಿದ್ದಾರೆ. ಲಿಂಗಸಿದ್ಧಾಂತವನ್ನು ಸ್ಫುಟವಾಗಿ ಸ್ಪಷ್ಟೀಕರಿಸಿದ್ದಾರೆ. ನಾನು ಮೇಲೆ ಹೇಳಿದಂತೆ ಲಿಂಗಾದಿ ಶಬ್ದಗಳು ಉಪನಿಷತ್ತುಗಳಲ್ಲಿ ಬಾರದೆ ಇದ್ದರೂ ಭಾಷ್ಯಕಾರರು–ಬ್ರಹ್ಮಪರ ಪರ್ಯಾಯಲಿಂಗ ಶಬ್ದವನ್ನು ಬರೆದು ವಿಸ್ತರಿಸಿರುತ್ತಾರೆ. ಉಳಿದ ಆಚಾರ್ಯರಾದರೊ ಹೀಗೆಯೇ ತಮ್ಮ ಮತಕ್ಕೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು ಭಾಷ್ಯಗಳನ್ನು ಬರೆದಿರುತ್ತಾರೆ. ಇದೇ ಬುದ್ಧಿವಂತಿಕೆಯ ಲಕ್ಷಣವು. ಸೂತ್ರಸ್ವರೂಪಗಳಾದವುಗಳನ್ನು ವಿಸ್ತಾರವಾಗಿ ವಿವೇಚಿಸುವುದೇ ಭಾಷ್ಯದ ಲಕ್ಷಣವಾಗಿರುತ್ತದೆ. ಮುಂದೆ ಇದಕ್ಕೆ ಅನೇಕ ಪ್ರಮಾಣಗಳನ್ನು ಕ್ರಿಯಾಸಾರಾದಿ ಗ್ರಂಥಗಳಿಂದ ಕೊಟ್ಟು ತಮ್ಮ ಸಿದ್ಧಾಂತವನ್ನು ಬಹಳ ಸಮರ್ಪಕವಾಗಿ ಸಮರ್ಥಿಸಿರುತ್ತಾರೆ.

ಉಪನಿಷತ್ತುಗಳ ಅಥವಾ ವೇದದ ಮಂತ್ರಗಳಲ್ಲಿ ಮೇಲೆ ಬರೆದಂತೆ ಸ್ಫುಟವಾಗಿ ಯಾವ ಧರ್ಮದ ವಿಷಯವಿಲ್ಲದಿದ್ದರೂ ಉಪಬ್ರಂಹಣ ವಾಕ್ಯಗಳಿಂದಲೇ ಅದರ ಸಾರವನ್ನು ಸವಿಯಬೇಕಾಗುತ್ತದೆ. ಅಂತಹ ಕಾರ್ಯವನ್ನು ಶ್ರೀ ಸದಾಶಿವಾಚಾರ್ಯರು ಚನ್ನಾಗಿ ಮಾಡಿರುತ್ತಾರೆ.

ಇವರು ತಮ್ಮ ಗ್ರಂಥದ ಆದಿಯಲ್ಲಿ ತಮ್ಮ ಪಾಲನೆ ಪೋಷಣೆ ಮಾಡಿದ ನೆಚ್ಚಿನ ಶ್ರೀಮನ್ನಿರಂಜನ ಹಾನಗಲ್ ಕುಮಾರ ಮಹಾ ಶಿವಯೋಗಿಗಳವರನ್ನು ಅತ್ಯಂತ ಭಕ್ತಿಯಿಂದ ಸ್ಮರಿಸಿರುತ್ತಾರೆ. ಈ ಗ್ರಂಥವನ್ನು ಶ್ರೀ ಜಗದ್ಗುರು ಜಯದೇವ ಮುರುಘ

ರಾಜೇಂದ್ರ ಮಹಾಸ್ವಾಮಿಗಳವರಿಗೆ ಭಕ್ತಿಯಿಂದ ಅರ್ಪಿಸಿರುವುದು ಬಂಗಾರಕ್ಕೆ ಕುಂದಣ ಹಾಕಿದಂತಾಗಿರುತ್ತದೆ. ಶ್ರೀ ಜಗದ್ಗುರು ರೇಣುಕಮಹಾಗುರುವನ್ನು ಸ್ಮರಿಸಿ ಜಂಗಮವರೇಣ್ಯ ಜಗದ್ಗುರು ಪ್ರಭುವಿಗೆ ಭಕ್ತಿಯನ್ನರ್ಪಿಸಿರುತ್ತಾರೆ. ಶ್ರೀ ಸದಾಶಿವಾಚಾರ್ಯರು ತಮ್ಮ ಕಾರ್ಯವನ್ನು ಸಕ್ರಮಗೊಳಿಸಿ ಭಾಷ್ಯವನ್ನು ಮುಗಿಸಿರುತ್ತಾರೆ.

ಒಂದು ಉಪನಿಷತ್ತಿಗೆ ಯಾವದಾದರೊಂದು ಮತಪರ ಭಾಷ್ಯ ಬರೆಯುವುದು ಸಾಧಾರಣ ಕೆಲಸವಲ್ಲ. ಅದಕ್ಕೆ ತಕ್ಕ ಪಾಂಡಿತ್ಯವೂ ಎಲ್ಲ ಕಡೆಯ ದೃಷ್ಟಿಯೂ ಈಶ್ವರಾನುಗ್ರಹವೂ ಬೇಕಾಗುತ್ತದೆ.

ಸದಾಶಿವಾಚಾರ್ಯರು ಸರಳಜೀವಿಗಳು, ಶಿವಯೋಗನಿಷ್ಠರು, ವೀರಶೈವ ಸಮಾಜವು ಒಕ್ಕಟ್ಟಿನಿಂದ ಮುಂದೆ ಸಾಗಿ ಜಗತ್ತಿನಲ್ಲಿ ದೇದೀಪ್ಯಮಾನವಾಗಲೆಂಬುವ ಉಜ್ವಲ ಧ್ಯೇಯವುಳ್ಳವರೂ ಆಗಿರುತ್ತಾರೆ. ಅವರ ಹೃದಯ ಸ್ವಚ್ಛ. ಅವರು ಮಾಡಿದ ಕಾರ್ಯಗಳೆಲ್ಲ ಯಶಸ್ವಿಯಾಗುತ್ತವೆ. ಶಿವಯೋಗಮಂದಿರ ಸಂಸ್ಥಾಪಕರ ಅನುಗ್ರಹ ಅವರ ಮೇಲೆ ಪೂರ್ಣವಾಗಿದ್ದುದು ಅವರ ಭಾಷ್ಯ ಬರೆಯಿಸಬೇಕೆಂಬ ಉದಾತ್ತ ಉದ್ದೇಶವನ್ನು ಇವರು ನೆರವೇರಿಸಿರುವುದು ಉಲ್ಲೇಖನೀಯವಾಗಿರುತ್ತದೆ. ಮನುಷ್ಯನು ಮಾಡಿದ ಕಾರ್ಯ ಜನ ಮೆಚ್ಚುಗೆಯನ್ನು ಪಡೆಯಬೇಕಾದರೆ ಆ ಕಾರ್ಯದಲ್ಲಿ ಸತ್ಯದ ಸತ್ವ ತುಂಬಿರಬೇಕು, ಇಲ್ಲದಿದ್ದರೆ ಅದು ಯಶಸ್ವಿಯಾಗಲಾರದು.

ವೀರಶೈವಾಚಾರ್ಯರು ಅನೇಕ ವೇದಮಂತ್ರಗಳಿಗೆ ವೀರಶೈವ ಸಿದ್ಧಾಂತ ಪ್ರಕಾರ ಭಾಷ್ಯವನ್ನು ಬರೆದು ಲೋಕದ ಮುಂದೆ ಇಟ್ಟಿರುತ್ತಾರೆ. ಆಗಮಗಳಲ್ಲಿ ಇದೇ ಸಿದ್ಧಾಂತವು ಬಹಳ ಚೆನ್ನಾಗಿ ವಿವೇಚಿಸಲ್ಪಟ್ಟಿರುತ್ತದೆ. ಲಿಂಗವು ವೀರಶೈವರ ಪರಬ್ರಹ್ಮ-ಲಿಂಗವು ಉಳಿದರೆ ವೀರಶೈವತ್ವ ಉಳಿಯುವುದು; ಅಳಿದರೆ ನಾಶ. ಅಂದ ಮೇಲೆ ವೀರಶೈವನಾದವನು ಲಿಂಗನಿಷ್ಠೆಯಲ್ಲಿ ಅಚಲನಾಗಿ ಅದರ ತತ್ತ್ವವನ್ನು ಚೆನ್ನಾಗಿ ಅಭ್ಯಸಿಸಿ ಉಳಿದವರಿಗೂ ಉಪದೇಶಿಸಬೇಕು, ಇದೇ ಲಿಂಗಾಂಗಿಯ ಮುಖ್ಯ ಧ್ಯೇಯವು.

ಇನ್ನೂ ಕೆಲವರು ಲಿಂಗವೆಂದರೆ-ಶಿವನ ಲಿಂಗ, ಅದಕ್ಕೆ ಜನನೇಂದ್ರಿಯವೆಂದು ಅರ್ಥಮಾಡುತ್ತಾರೆ. ಶಂ. ಬಾ. ಜೋಶಿಯವರ 'ವೇದದಲ್ಲಿ ವೀರಶೈವರ ಬೇರುಗಳು ಎಂಬುವ ಗ್ರಂಥ ನೋಡಬಹುದು. ಇಲ್ಲಿ ಒಂದೆರಡು ಮಾತುಗಳನ್ನು ಈ ವಿಷಯ ದಲ್ಲಿ ಹೇಳಿ ಈ ಲೇಖನ ಮುಗಿಸುತ್ತೇನೆ.

ಶಿವನ ಲಿಂಗವಲ್ಲ-ಶಿವನೇ ಲಿಂಗವು. ಇದಕ್ಕೆ ಅನೇಕ ಜನ ಭಾಷ್ಯಕಾರರು ವ್ಯಾಖ್ಯಾನ ಮಾಡಿರುತ್ತಾರೆ. ಸಾಯಣಾಚಾರ್ಯರು ಸೂತಸಂಹಿತೆಯ ಟೀಕೆಯಲ್ಲಿ ಬಹಳ ವಿಸ್ತಾರವಾಗಿ ಈ ವಿಷಯವನ್ನು ವಿವೇಚಿಸಿ ಶಿವನೇ ಲಿಂಗ ಎಂಬುದನ್ನು ಸಮ ರ್ಥಿಸಿರುತ್ತಾರೆ.

ಅಥಾತೊ ಬ್ರಹ್ಮಜಿಜ್ಞಾಸೇತ್ಯಾದಿ ವ್ಯಾಸಸೂತ್ರಗಳಿಂದ ಪ್ರತಿಪಾದಿತ ಪರಬ್ರಹ್ಮ ಶಬ್ದವಾಚ್ಯ ಶಿವ-ರುದ್ರಾದಿ ಸಂಜ್ಞೆಯು ಲಿಂಗವೆಂಬುದಾಗಿಯೂ, ತೈತ್ತರೀಯೋಪ

ನಿಷತ್ತಿನಲ್ಲಿ ಹೇಳಿರುವ ಯತೋವಾ ಇಮಾನಿ ಭೂತಾನಿ ಜಾಯಂತೆ ಯೇನ ಜಾತಾನಿ ಜೀವಂತಿ ಯತ್ಪ್ರಯಾತ್ ಅಭಿಸಂವಿಶಂತಿ ತದ್ವಿದಿಜ್ಞಾಸಸ್ವ ತದ್ಬ್ರಹ್ಮೇತಿ

ಈ ಮಂತ್ರವು ಪ್ರಪಂಚದ ಲಯಗಮನ ಕಾರಣಗಳಿಗೆ ಲಿಂಗವೇ ಮುಖ್ಯವೆಂದು ಪ್ರತಿಪಾದಿಸುತ್ತದೆ. ವಾತುಲಾಗಮದಲ್ಲಿಯೂ ಕೂಡ "ಲಿಯತೇ ಗಮ್ಯತೇ ಯತ್ರ ಏನ ಸರ್ವಂ ಚರಾಚರಂ ತದೇವ ಲಿಂಗಮಿತ್ಯುಕ್ತಂ ಲಿಂಗತತ್ವಪರಾಯಣೈಃ ||
ಎಂದು ಸಿದ್ಧಾಂತಪಡಿಸಿದ್ದಾರೆ. ಇಲ್ಲಿ ನೂರಾರು ಪ್ರಮಾಣಗಳನ್ನು ಕೊಟ್ಟು ಶಿವನೇ ಲಿಂಗವೆಂದು ಸಮರ್ಥಿಸಬಹುದು. ಸ್ಥಳವಿಲ್ಲ.

ಶಿವ ಏವ ಸ್ವಯಂ ಲಿಂಗಂ ಗಮಕಮೇವಹಿ |
ಶಿವೇನ ಗಮ್ಯತೇ ಸರ್ವಂ ಶಿವೋನಾನ್ಯೇನ ಗಮ್ಯತೆ ||

ಶಿವನೇ ಲಿಂಗವು ಅದು ಗಮಕವಾಗಿದೆ ಸರ್ವವೂ ಶಿವನಿಂದ ಗಮ್ಯವು. ಅನ್ಯವಸ್ತುವಿನಿಂದ ಶಿವನು ಗಮ್ಯನಲ್ಲ – ಸಾಯಣರು ಸೂತಸಂಹಿತೆಯ ಟೀಕೆಯಲ್ಲಿ

ವಿವೇಕಹೀನ ಮರ್ತ್ಯಸ್ಯ ಚಿತ್ತವೃತ್ತ್ಯ್ಯಪೇಕ್ಷಯಾ
ಶಿವಸ್ಯಲಿಂಗಮಿತ್ಯಯಂ ರವಃ ಸಮಸ್ತ ಜಂತುಭಿಃ
ನಿಗದ್ಯತೆ ಶಿವಃ ಸ್ವತಪ್ರಸಿದ್ಧಃ ಸರ್ವದಾ ತತಃ ಶಿವಸ್ಯ
ಲಿಂಗಮಿತ್ಯಯಂ ರವಃ ನ ಸಂಗತಃ ||

ತತ್ತ್ವಪ್ರಕಾಶಕನೂ, ಸರ್ವಜಗದ್ವಿಭಾಸಕನೂ ಆದ ಶಿವನೇ ಸ್ವಯಂ ಲಿಂಗವು. ತತ್ತ್ವದೃಷ್ಟಿಯಿಂದ ಸ್ವಯಂ ಪ್ರಕಾಶಕನಾದ ಶಿವನಿಗೆ ಲಿಂಗವಿಲ್ಲ. ಶಿವನೇ ಲಿಂಗ. ಲಿಗಿ ಗತೌ ಎಂಬುವ ಧಾತು ಗತ್ಯರ್ಥಕವಾಗಿರುವುದರಿಂದ ಗತ್ಯರ್ಥಕ ಧಾತುಗಳೆಲ್ಲ ಜ್ಞಾನಾರ್ಥಕವಾಗಿರುವುದರಿಂದ ಲಿಂಗವು ಸ್ವಯಂಪ್ರಕಾಶ ಪರಬ್ರಹ್ಮ. ಅದೇ ವೀರಶೈವ ಧರ್ಮದ ಪರಬ್ರಹ್ಮ. ಅದನ್ನೇ ಕೈವಲ್ಯೋಪನಿಷದ್ಭಾಷ್ಯಕಾರರು ಸಿದ್ಧಾಂತಪಡಿಸಿರುತ್ತಾರೆ. ಇವರ ಈ ಕೃತಿಯು ಯೋಗ್ಯವೂ ಅಭಿನಂದನೀಯವೂ ಆಗಿರುತ್ತದೆ. ಶ್ರೀ ಸದಾಶಿವ ಶಿವಾಚಾರ್ಯರು ಹತ್ತು ವರ್ಷಗಳ ಹಿಂದೆಯೇ ವೀರಶೈವ ಸಂಸ್ಕೃತ ಸಾಹಿತ್ಯಕ್ಕೆ ದಿವ್ಯಕಾಣಿಕೆಯನ್ನು ಕೊಟ್ಟಿದ್ದಾರೆ. ಇಂತಹ ಕಾರ್ಯವು ಸ್ತುತ್ಯವಾದುದೂ ಸಮಾಜದ ತಿಳುವಳಿಕೆಗೆ ಸಾಧಕವೂ ಆಗಿರುತ್ತದೆ. ಬೇರೆ ಗ್ರಂಥಗಳನ್ನು ಈ ಮೊದಲೇ ಪ್ರಕಟಿಸಿದ್ದಾರೆ. ಇದೀಗ ಅನುಗ್ರಹವೆಂಬುವ ಹೊಸ ಗ್ರಂಥವನ್ನು ಸಮಾಜಕ್ಕೆ ಅರ್ಪಿಸಿದ್ದಾರೆ. ಇವರ ಚಟುವಟಿಕೆಗಳು ಮಾದರಿಯಾಗಿರುತ್ತವೆ. ಶ್ರೀಶೈಲ ಸಿಡುಮಾಮಿಡಿ ಜಗದ್ಗುರುಗಳು ಅವರಿಗೆ ಬೆಂಬಲರಾಗಿ ಕಾರ್ಯ ಮಾಡುತ್ತಿರುವುದು ಅಭಿನಂದನೀಯವಾಗಿರುತ್ತದೆ.

ಕೈವಲ್ಯೋಪನಿಷದ್ಭಾಷ್ಯಕಾರರಾದ ಸದಾಶಿವ ಶಿವಾಚಾರ್ಯರಿಗೆ–ಸದಾಶಿವನು ಆಯುರಾರೋಗ್ಯ ಭಾಗ್ಯಾದಿಗಳನ್ನು ಕೊಟ್ಟು ಅವರನ್ನು ಶತಾಯುಗಳನ್ನಾಗಿ ಮಾಡಿ

ಇಂತಹ ಅನಂತ ಕೃತಿಗಳು ಬೆಳಕಿಗೆ ಬರಲೆಂದು ಹಾರೈಸಿ ವಿಭೂತಿ ಗ್ರಂಥದಲ್ಲಿ ಈ ಲೇಖನ ಬರೆಯಲಿಕ್ಕೆ ಅವಕಾಶ ಕೊಟ್ಟುದಕ್ಕೆ ಈ ಸಂಸ್ಥೆಯ ಅಧ್ಯಕ್ಷರಿಗೆ ಮತ್ತೊಂದು ಸಾರೆ ಕೃತಜ್ಞತೆ ಸಲ್ಲಿಸಿ ಈ ಲೇಖನವನ್ನು ಮುಗಿಸುತ್ತೇನೆ.

ವ್ಯಾಕರಣತೀರ್ಥ, ವಿದ್ಯಾಲಂಕಾರ, ವಿದ್ಯಾವಾಗೀಶ
—**ಚಂದ್ರಶೇಖರ ಶಾಸ್ತ್ರಿಗಳು,** ಹಿರಿಯಮಠ, ಹೊಳಲು.

———:———

# ನಾನು ಕಂಡ ಶ್ರೀ ಸದಾಶಿವ ಶಿವಾಚಾರ್ಯರು

❖

ಪವಿತ್ರವಾದ ನಮ್ಮೀ ಭಾರತವರ್ಷವು ಬಹು ಪ್ರಾಚೀನ ಕಾಲದಿಂದಲೂ ತನ್ನಲ್ಲಿರುವ ಆಧ್ಯಾತ್ಮಿಕ ಶಕ್ತಿಯ ದಿವ್ಯ ತೇಜಸ್ಸಿನಿಂದ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿಯೂ ಕೂಡ ತನ್ನ ಗುರುತರವಾದ ಗೌರವವನ್ನು ಕಾಯ್ದುಕೊಂಡು ಬಂದಿದೆ. ತನ್ನ ಅಮರವಾದ ಆತ್ಮ ತತ್ತ್ವಗಳ ವಿಚಾರಗಳ ಪ್ರಚಾರದಿಂದಲೂ, ಸ್ವಾಮಿ ವಿವೇಕಾನಂದ, ಸ್ವಾಮಿ ರಾಮತೀರ್ಥ, ಕವೀಂದ್ರ ರವೀಂದ್ರನಾಥ, ಮಹಾತ್ಮಾ ಗಾಂಧಿ, ಅರವಿಂದ ಘೋಷ ಮೊದಲಾದ ಆಧ್ಯಾತ್ಮ ಶಕ್ತಿ ಸಂಪನ್ನರ ಅಮರ ಸಂದೇಶಗಳಿಂದಲೂ ಉರು ತರವಾದ ಗುರುತ್ವದ ಗೌರವ ಸ್ಥಾನವನ್ನು ಗಳಿಸಿಕೊಂಡಿದೆ- ಅದನ್ನು ಈವರೆಗೂ ಉಳಿಸಿಕೊಂಡಿದೆ. ಈ ಸಂಗತಿಯ ಸತ್ಯಾಂಶಕ್ಕೆ ಕಾರಣವೆಂದರೆ – ಪರದೇಶಗಳಲ್ಲಿ ಕೇವಲ ಭೌತಿಕಶಾಸ್ತ್ರವು ಇಂದು ತಲೆಯೆತ್ತಿ ತಾಂಡವವಾಡುತ್ತಿರುವಾಗ, ಕೇವಲ ಭೌತಿಕಜೀವನಕ್ರಮದಿಂದ ಮಾನವಜೀವನದ ಅತ್ಯಂತಿಕ ಕಲ್ಯಾಣವಾಗಲಾರದೆಂಬ ಸತ್ಯವನ್ನು ಭಾರತೀಯರು ಬಹುಕಾಲದ ಹಿಂದೆಯೇ ಕಂಡುಹಿಡಿದು ಪವಿತ್ರವೂ ಶ್ರೇಷ್ಠವೂ ಆದ ಮಾನವಜೀವನದ ಚರಮಗುರಿಯು ಕೇವಲ ಸುಖೋಪಭೋಗ ಸಂಪತ್ತಿಯಾಗಿರದೆ ಆಧ್ಯಾತ್ಮಿಕ ಜ್ಞಾನ ಸಂಪತ್ತಿಯಿಂದ ಆತ್ಮಸಾಕ್ಷಾತ್ಕಾರ ಸಾಧನೆ ಯಾಗಿದೆಯೆಂಬ ಸಂಗತಿಯನ್ನು ನಮ್ಮ ಪೂರ್ವಜರು ಬಹು ಪ್ರಾಚೀನ ಕಾಲದಲ್ಲಿಯೇ ಗುರುತಿಸಿಕೊಂಡರು. ಈ ಸತ್ಯಾನ್ವೇಷಣೆಗಾಗಿ ಪುರಾತನ ಕಾಲದಲ್ಲಿ ಸಕಲೈಶ್ವರ್ಯ ಸಂಪನ್ನರಾದ ಎಷ್ಟೋ ರಾಜಮಹಾರಾಜರು ತಮ್ಮ ಭೋಗ ಭಾಗ್ಯಾದಿಗಳೆಲ್ಲವನ್ನೂ ತೃಣೀಕರಿಸಿ ಆಧ್ಯಾತ್ಮಿಕ ಅರಿವಿನ ತಿರುಕರಾಗಿ ತಿರುಗಿದುದುಂಟು. "ಜಾಣನು ಲೌಕಿಕ ಪರಮಾರ್ಥವೆರಡನು ಮಾಣದೆ ಕೂಡಿ ನಡೆಸುತಿಹನಿಂತು" ಎಂಬ ಶ್ರೀ ನಿಜ ಗುಣರ ನುಡಿಯಂತೆ ಲೌಕಿಕ ಪರಮಾರ್ಥವೆರಡನು ಸರಿಯಾಗಿ ಸಮನ್ವಯ ಮಾಡಿ ಕೊಂಡು ಜೀವನ ಸಾಗಿಸುವುದೇ ಭಾರತೀಯರ ವೀರ ವ್ರತವಾಗಿತ್ತು. ವೇದಗಳು ಆಗಮಗಳು, ಉಪನಿಷತ್ತುಗಳು ಮೊದಲಾದ ಭಾರತೀಯ ಸಂಸ್ಕೃತಿಯ ಧ್ವಜ ಸ್ತಂಭಗಳು, ಈ ವಿಷಯವಾಗಿ ಆಧಾರ ಸ್ತಂಭಗಳಾಗಿವೆ ಇದರಿಂದ ನಮ್ಮ ಭಾರತ ದೇಶದ ಖ್ಯಾತಿ ಸೀತಿಗಳು ಬಹು ಎತ್ತರವಾದ ಮೇಲ್ಮಟ್ಟಕ್ಕೆ ಮುಟ್ಟಿವೆ. ಪಾಶ್ಚಿಮಾತ್ಯ ರಾಷ್ಟ್ರಗಳ ಸಾಧಕರನೇಕರು ತಮ್ಮ ಆಧ್ಯಾತ್ಮ ಸಾಧನೆಯಲ್ಲಿ ಸಂತೃಪ್ತಿಯನ್ನು ಸಂಪಾ

ದಿಸಲಾರದೆ ಭಾರತ ದೇಶಕ್ಕೆ ಬಂದು ಇಲ್ಲಿ ತಮ್ಮ ಆಧ್ಯಾತ್ಮಿಕ ತೃಷ್ಣೆಯನ್ನು ತೃಪ್ತಿಪಡಿಸಿಕೊಂಡು ಹೋದ ಉದಾಹರಣೆಗಳೂ ಉಂಟು. ಈ ವಿಷಯವಾಗಿ ಡಾ. ಅನಿಬೀಜಂಟಳೇ ಉತ್ತಮವಾದ ಉದಾಹರಣೆಯಾಗಿದ್ದಾಳೆ.

## ಕಮನೀಯವಾದ ಕಾಣಿಕೆ

ನಮ್ಮ ತಾಯ್ನಾಡಾದ ಭಾರತ ದೇಶಕ್ಕೆ ಇಂಥ ಮಹತ್ತರವಾದ ಸ್ಥಾನವನ್ನು ಸಾಧಿಸಿಕೊಟ್ಟ ಮಹಾಕಾರ್ಯದಲ್ಲಿ ಕರ್ನಾಟಕವೂ ಒಂದು ಪವಿತ್ರವಾದ ಪಾತ್ರವನ್ನು ವಹಿಸಿಕೊಂಡಿದೆಯೆಂದು ಧಾರಾಳವಾಗಿ ಹೇಳಬಹುದು. ಶಂಕರ, ಮಧ್ವ ರಾಮಾನುಜ ಮೊದಲಾದ ಮತ ಸ್ಥಾಪನಾಚಾರ್ಯರು ಸಹ ಕರ್ನಾಟಕದ ಆಧ್ಯಾತ್ಮಿಕ ಸಂಸ್ಕೃತಿಯ ಸಂಪೋಷಣೆಗೆ ಸಾಕಷ್ಟು ಸೇವೆ ಸಲ್ಲಿಸಿದ್ದಾರೆ. ಆದರೆ ಈ ವಿಷಯದಲ್ಲಿ ವೀರಶೈವ ಮತ ಸ್ಥಾಪನಾಚಾರ್ಯರಾದ ರೇಣುಕಾದ್ಯಾಚಾರ್ಯರೂ, ಶ್ರೀ ಅಲ್ಲಮ, ಬಸವ, ಚೆನ್ನ ಬಸವ, ಸಿದ್ಧರಾಮ, ಅಕ್ಕಮಹಾದೇವಿ ಮೊದಲಾದ ಶಿವಶರಣ ಶರಣೆಯರೂ ಕನ್ನಡ ನಾಡಿನಲ್ಲಿ ನೂತನವಾದ ಚೇತನವನ್ನುಂಟುಮಾಡಲು ಬಹುಮುಖವಾಗಿ ಹೆಣಗಿ ಜನಜೀವನದಲ್ಲೊಂದು ಆಧ್ಯಾತ್ಮಿಕ ಆಂದೋಲವನ್ನುಂಟುಮಾಡಿ ಜನಜೀವನದ ಹೃದಯದಲ್ಲಿ ಹುದುಗಿಕೊಂಡಿದ್ದ ದೈವೀಶಕ್ತಿಯನ್ನು ಜಾಗೃತಗೊಳಿಸಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ಉಪನಿಷತ್ತುಗಳಂತಿದ್ದ ವಚನವಾಹಿನಿಯನ್ನು ಹರಿಯಿಸಿ, ಕನ್ನಡ ಜನಾಂಗವನ್ನು ಪಾವನಗೊಳಿಸಿ ಆಧ್ಯಾತ್ಮ ಶಾಸ್ತ್ರವು ಕನ್ನಡ ನಾಡಿನಲ್ಲಿ ಅಚ್ಚಳಿಯದೆ ಉಳಿಯುವಂತೆ ಮಾಡಿದ್ದಾರೆ. ಈ ರೀತಿಯಾಗಿ ಕನ್ನಡಮ್ಮನ ಕೀರ್ತಿಯ ಹೆಚ್ಚಳಕ್ಕಾಗಿ ವೀರಶೈವರು ಸಲ್ಲಿಸಿದ ಸಂಸ್ಕೃತಿಯ ಕಾಣಿಕೆ ಕಮನೀಯವಾಗಿದೆ.

## ಹಾನಗಲ್ಲ ಶ್ರೀಗಳವರ ಮಹಾಕಾರ್ಯ

ಇಂಥ ಒಂದು ಉಜ್ವಲವಾದ ಆಧ್ಯಾತ್ಮಶಕ್ತಿಯ ಅನುಪಮವಾದ ಪವಿತ್ರ ಪರಂಪರೆಯನ್ನು ಉಳಿಯಿಸಿಕೊಂಡು-ಬೆಳಯಿಸಿಕೊಂಡು ಬರಬೇಕೆಂದೂ ಅದರಿಂದ ಜನಜೀವನದ ಸಂಸ್ಕೃತಿಯ ಮಟ್ಟವನ್ನು ಬಹು ಮೇಲಕ್ಕೆತ್ತಬೇಕೆಂದೂ ಇಂದಿನ ಶತಮಾನದಲ್ಲಿಯೂ ಕೂಡ ಅನೇಕ ಜನ ಮಹಾಪುರುಷರು ಹೆಣಗಿ ಸೆಣಸಿದಾರೆ. ಅಂಥ ಮಹನೀಯರಲ್ಲಿ ಹಾನಗಲ್ಲ ಶ್ರೀ ಕುಮಾರ ಯೋಗಿಗಳು ಬಹು ಮನ್ನಣೆಗೆ ಪಾತ್ರರಾಗಿದ್ದಾರೆ. ಅವರು ಮಾಡಿದ ಕಾರ್ಯ ಮಹತ್ತರವಾಗಿದೆ; ಬಹುಮುಖವಾಗಿದೆ. ವೀರಶೈವ ಮತದ ಮಹಾತತ್ತ್ವಗಳನ್ನೂ ಅವುಗಳೊಡನೆ ಉಳಿದ ಧರ್ಮಗಳ ತತ್ತ್ವಗಳನ್ನೂ ತುಲನಾತ್ಮಕ ದೃಷ್ಟಿಯಿಂದ ಕೂಲಂಕಷವಾಗಿ ಅಭ್ಯಸಿಸಿ ಅವುಗಳಲ್ಲಿ ಅಡಕವಾಗಿದ್ದ ಆಧ್ಯಾತ್ಮಕ ಶಕ್ತಿಯನ್ನು ಜನಜೀವನದಲ್ಲಿ ತುಂಬಿ ಜನತೆಯ ಜೀವನ ಕ್ರಮದಲ್ಲೊಂದು ಮಹಾಶಕ್ತಿಯನ್ನು ಮಾರ್ಪಡಿಸಬೇಕೆಂಬ ಮಹಾಮನೀಷೆಯ ಸಿದ್ಧಿಗಾಗಿ ಅನೇಕ ಜನ ಆಧ್ಯಾತ್ಮಶಕ್ತಿ ಸಂಪನ್ನರಾದ ಧರ್ಮಗುರುಗಳನ್ನು ಸಿದ್ಧಪಡಿಸ



ಪ್ರಥಮ ಸಮ್ಮೇಳನಕ್ಕೆ ದಯಮಾಡಿಸಿದ್ದ ಶ್ರೀಗಳೊಡನೆ ಕಾರ್ಯನಿರ್ವಾಹಕರು.



ಶ್ರೀ ಪೆಟ್ರೆ ಸಿದ್ದಪ್ಪನವರು
ಅಧ್ಯಕ್ಷರು



ಶ್ರೀ ಜಿ. ಸಿ. ಶಿವರುದ್ರಪ್ಪನವರು
ಕೋಶಾಧ್ಯಕ್ಷರು



ಶ್ರೀ ಜಿ. ಕೆ. ಶಿವಲಿಂಗಪ್ಪನವರು
ಕಾರ್ಯದರ್ಶಿ



ಶ್ರೀ ಸಿ. ಎ. ನಾಗಪ್ಪನವರು
ಉಪಾಧ್ಯಕ್ಷರು

ಬೇಕೆಂಬ ಮಹಾಸಂಕಲ್ಪದಿಂದ ಶಿವಯೋಗ ಮಂದಿರವೆಂಬ ಯೋಗಸಂಸ್ಥೆಯೊಂದನ್ನು ಸಂಸ್ಥಾಪಿಸಿ ಸಾಧಕರಾಗಿದ್ದ ಅನೇಕ ಜನ ಮಹನೀಯರನ್ನು ಸಿದ್ಧರಾದ ಶಿವಯೋಗಿಗಳನ್ನಾಗಿ ಮಾಡಿ-ನಾಡಿನ ಕಲ್ಯಾಣಕ್ಕಾಗಿ ನೀಡಿ ನಾಡಿಗೊಂದು ಮಹಾಸೇವೆ ಸಲ್ಲಿಸಿದ್ದಾರೆ.

ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ ।
ತತ್ತದೇವಾವಗಚ್ಛ ತ್ವಂ ಮಮ ತೇಜೋಂಶ ಸಂಭವಂ ॥

ಎಂಬ ಭಗವಂತನ ನುಡಿಯಂತೆ ಇಂಥ ಮಹಾಪುರುಷರು ದೇವಾಂಶ ಸಂಭೂತರೆಂದು ಹೇಳಲಿಕ್ಕೆ ಅವರು ಮಾಡಿದ ಮಹಾಕಾರ್ಯಗಳೇ ಸಾಕ್ಷಿ. ಈರೀತಿಯಾಗಿ ಸಿದ್ಧವಾದ ಶಿವಯೋಗಾಶ್ರಮದಲ್ಲಿ ಆಧ್ಯಾತ್ಮ ಸಿದ್ಧಿಯನ್ನು ಸಾಧಿಸಿಕೊಂಡು ಜನಜೀವನದ ಜಾಗ್ರತಿಗಾಗಿ ಹೊರಬಿದ್ದ ಅನೇಕ ಜನ ಮಹಾಸ್ವಾಮಿಗಳಲ್ಲಿ ಸದಾಚಾರ ಸಂಪನ್ನರಾದ ಸಖರಾಯಪಟ್ಟಣದ ಶ್ರೀ ಸದಾಶಿವ ಶಿವಾಚಾರ್ಯರು ಒಬ್ಬರು.

### ಶ್ರೀ ಸದಾಶಿವ ಶಿವಾಚಾರ್ಯರ ಸಂದರ್ಶನ

ಶ್ರೀ ಸದಾಶಿವ ಶಿವಾಚಾರ್ಯರ ನೀತಿಯ ಖ್ಯಾತಿಯನ್ನು, ಅರಿವಿನ ಆಚಾರವನ್ನು, ಶೀಲದ ಮೇಲ್ಮೆಯನ್ನು, ಸಾಹಿತ್ಯದ ಸೇವೆಯನ್ನು, ಜನಜೀವನದ ಪ್ರಗತಿಯ ಬಗ್ಗೆ ಅವರಲ್ಲಿರುವ ಅನುಪಮವಾದ ಅಭಿಮಾನವನ್ನು ಅನೇಕ ಜನರಿಂದ ಅರಿತುಕೊಂಡು ಅಂತರಂಗದಲ್ಲಿ ಅಭಿಮಾನಪಟ್ಟುಕೊಂಡಿದ್ದೆ. ಅವರ ದಿವ್ಯ ಜೀವನದ ಬಗೆಗೆ ಭವ್ಯವಾದ ಭಾವವನ್ನು ತಳೆದುಕೊಂಡಿದ್ದೆ. ಇಂದಿನ ಭೌತಿಕ ಯುಗದಲ್ಲಿ ಕರಣತ್ರಯದಿಂದಲೂ ಶರಣಮಾರ್ಗದಲ್ಲಿ ಸಂಚರಿಸುವ ತಪಸ್ವಿಗಳೆಂದು ತಿಳಿದುಕೊಂಡಿದ್ದೆ. ಅವರನ್ನು ಕಣ್ಣಾರೆ ಕಂಡು ಕಡುಸಂತಸಪಡಬೇಕೆಂಬ ಕುತೂಹಲವನ್ನು ಕೆರಳಿಸಿಕೊಂಡಿದ್ದೆ.

ಇಂಥ ಪೂಜ್ಯ ಮಹಾಸ್ವಾಮಿಗಳವರ ಸಂದರ್ಶನದ ಸುಯೋಗವು ೧೯೫೫ ನೇ ಇಸ್ವಿಯ ಫೆಬ್ರುವರಿ ತಿಂಗಳಲ್ಲಿ ಸಮನಿಸಿತು. ಕಡೂರ ತಾಲೂಕಿಗೆ ಸೇರಿದ ಗಿರಿಯಾಪುರ ಗ್ರಾಮದಲ್ಲಿ ಸ್ಥಾಪಿಸಲ್ಪಟ್ಟ "ಶ್ರೀ ಗುರುಕುಮಾರಾಶ್ರಮ"ವೆಂಬ ಪುಣ್ಯಾಶ್ರಮ 'ಶಿವಾದ್ವೈತ ತತ್ತ್ವ ಪ್ರಚಾರ ಸಮಿತಿ'ಯ ಮುಖಾಂತರವಾಗಿ ಪ್ರತಿವರ್ಷವೂ ಹಾನಗಲ್ಲ ಶ್ರೀ ಕುಮಾರಸ್ವಾಮಿಗಳವರ ಪುಣ್ಯತಿಥಿಯ ಸಪ್ತಾಹವು ಕಳೆದ ೧೨ ವರ್ಷಗಳಿಂದಲೂ ಅವ್ಯಾಹತವಾಗಿ ಆಚರಿಸಲ್ಪಡುತ್ತಿದೆ. ೧೯೫೫ ನೇ ಇಸ್ವಿಯ ಫೆಬ್ರುವರಿ ತಿಂಗಳಲ್ಲಿ ಆಚರಿಸಲ್ಪಟ್ಟ ಕಾರ್ಯಕ್ರಮದಲ್ಲಿ ಭಾಗವಹಿಸಲು ನಾನೂ ನನ್ನ ಧರ್ಮಪತ್ನಿ ಶ್ರೀಮತಿ ಭಾಗೀರಥಿದೇವಿಯೂ ಆಮಂತ್ರಿಸಲ್ಪಟ್ಟಿದ್ದೆವು. ಮೂರು ದಿನಗಳವರೆಗೂ ಅಲ್ಲಿ ಉಳಿದುಕೊಂಡಿರುವಾಗ ಶ್ರೀಗಳಾದ ಶ್ರೀ ಸದಾಶಿವ ಶಿವಾಚಾರ್ಯರ ಸನ್ನಿಧಿಯ ಸಂಪರ್ಕದಿಂದ ನಿಕಟ ಪರಿಚಯವುಂಟಾಯಿತು. ಸೂಕ್ಷ್ಮವಾಗಿ ಅವರ ವ್ಯಕ್ತಿತ್ವವನ್ನು ಸಮೀಕ್ಷಿಸುತ್ತಿರುವಾಗ ಉಂಟಾದ ಸದ್ಭಾವಗಳನ್ನು ಇಲ್ಲಿಂದ ಸಮಾಲೋಚಿಸಲಾಗಿದೆ.

## ಆಚಾರದ ಅನುಪಮ ಅರಿವು

ಇಂದಿನ ಯುಗದಲ್ಲಿ ಸನ್ಯಾಸಾಶ್ರಮವು ಬಹು ಪ್ರಷ್ಟಸಾಧ್ಯವಾಗಿದೆ. ಅದನ್ನು ಜೀವನದ ಕೊನೆಯವರೆಗೂ ಸರಿಯಾಗಿ ಸಾಗಿಸಿಕೊಂಡು ಹೋಗುತ್ತಿರುವ ಸದಮಲ ಚರಿತ್ರದ ಮಹಾನುಭಾವರು ತೀರ ವಿರಲವಾಗಿದ್ದಾರೆ. ಪಾಶ್ಚಿಮಾತ್ಯ ಸಂಸ್ಕೃತಿಯ ಸಮ್ಮೋಹನಾಸ್ತ್ರವು ಸರ್ವರನ್ನೂ ಸಂತ್ರಸ್ತರನ್ನಾಗಿ ಮಾಡಿದೆ. ಆಚಾರದ ಅರಿವು ಅಳಿದುಹೋಗಿದೆ. ಶೀಲದಲ್ಲಿ ಶೈಥಿಲ್ಯವು ಸಂಪ್ರಾಪ್ತವಾಗಿದೆ. ಧರ್ಮದ ಬಗೆಗೂ ಧರ್ಮಗುರುಗಳ ಬಗೆಗೂ ಇದ್ದ ಭಕ್ತಿ ವಿಶ್ವಾಸಗಳು ಬಯಲಾಗಿವೆ. ಈ ಸ್ಥಿತಿಯ ಕಾರಣವನ್ನು ಸಮಾಲೋಚಿಸುವ ಸಮಯವಿದಲ್ಲ. ಇಂಥ ಕಾಲದ ಯಾವ ದುಷ್ಪರಿಣಾಮವನ್ನು ತಮ್ಮ ಮನಸ್ಸಿನ ಮೇಲೆ ಮಾಡಿಕೊಳ್ಳದೆ ಶಿವಯೋಗವೇ ತಮ್ಮ ಜೀವನದ ಪರಮ ಚರಮಗುರಿಯೆಂದು ಅರಿತು ಆಚರಿಸುತ್ತಿರುವ ಪೂಜ್ಯರಾದ ಶ್ರೀ ಸದಾಶಿವ ಶಿವಾಚಾರ್ಯರ ಜೀವನ ಪರಮಪಾವನವಾದುದು. ಹಾನಗಲ್ಲ ಶ್ರೀಗಳವರ ಕಟ್ಟಾಚಾರದ ಗರಡಿಯಲ್ಲಿ ಸಾಧಕರಾಗಿ-ಸಿದ್ಧರಾಗಿ, ನಾಡಿನ ಸೇವೆಗೆ ಬದ್ಧರಾಗಿ ಹೊರಗೆ ಬಂದ ಶ್ರೀ ಸದಾಶಿವ ಸ್ವಾಮಿಗಳವರು ಅವರ ಕಟ್ಟಾನುಯಾಯಿಗಳಾಗಿ ಆ ಉಜ್ವಲ ಪರಂಪರೆಯನ್ನು, ಅಡರಿಬರುವ ಎರಡು ತೊಡರುಗಳಿಗೆ ತಡವರಿಸದೆ, ಪರಮ ನಿಷ್ಠೆಯಿಂದ ಲೀಲಾಜಾಲವಾಗಿ ಸಾಗಿಸಿಕೊಂಡು ಹೋಗುತ್ತಿರುವುದು ಸದಭಿಮಾನದ ಸಂಗತಿಯಾಗಿದೆ. 'ಶೀಲಂ ಪರಂ ಭೂಷಣಂ' ಎಂಬುದೇ ಅವರ ಜೀವನದ ಮಹಾಮಂತ್ರವಾಗಿದೆ. 'ಆಚಾರಃ ಪರಮೋಧರ್ಮಃ' ಎಂಬ ತತ್ತ್ವವೇ ಅವರ ಜೀವನದ ಉಸಿರಾಗಿದೆ. 'ಆಚಾರವೇ ಸ್ವರ್ಗ, ಅನಾಚಾರವೇ ನರಕ' ಎಂಬ ಶರಣರ ಸೊಲ್ನುಡಿಯೇ ಅವರ ಅಂತರಂಗದ ಒಳ್ನುಡಿಯಾಗಿದೆ.

## ಶಿವಯೋಗ ಸಮರಸ

ಪರೋಪದೇಶ ಪಾಂಡಿತ್ಯದಲ್ಲಿ ಪ್ರವೀಣರಾದ ಮಹನೀಯರು ಇಂದಿನ ಕಾಲದಲ್ಲಿ ವಿಪುಲವಾಗಿ ದೊರೆಯುತ್ತಾರೆ. ಆದರೆ ಶ್ರೀ ಸದಾಶಿವ ಶಿವಾಚಾರ್ಯರಂಥ ಆಚಾರ ನಿಷ್ಠರು ಮಾತ್ರ ವಿರಲವಾಗಿದ್ದಾರೆ. ಸ್ವೀಕರಿಸಿದ ಆಶ್ರಮಕ್ಕುಚಿತವಾದ ರೀತಿಯಲ್ಲಿ 'ಅರಿದಡೆ ಶರಣ ಮರೆದಡೆ ಮಾನವ'ನೆಂಬ ನುಡಿಯಂತೆ ನ್ಯೆಮಾತು ಮನಂಗಳಲ್ಲಿ ಏಕರೂಪತೆಯನ್ನುಂಟುಮಾಡಿಕೊಂಡು, ನಡೆನುಡಿಗಳನೊಂದೆ ಮಾಡಿಕೊಂಡು ಸಮಾಜದ ಪ್ರಗತಿಗಾಗಿ ಅಡಿಯಿಡುತ್ತಿರುವ ಶ್ರೀ ಸದಾಶಿವ ಶಿವಾಚಾರ್ಯರು ನಿಜಕ್ಕೂ ಇಂದಿನ ಕಾಲದ ಶರಣರು; ಶಿವಯೋಗಿಗಳು.

ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।
ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಸಹಾ ॥

ಎಂಬ ಗೀತೆಯ ನುಡಿಯಂತೆ ನಿಯಮಿತವಾದ ಸಾತ್ತ್ವಿಕಾಹಾರ, ಯೋಗ್ಯಕರ್ಮದಲ್ಲಿ ಆಸಕ್ತಿ, ಕಾಲೋಚಿತವಾದ ಸುಪ್ತಿ ಜಾಗೃತಿ ಇವುಗಳ ಸರಿಯಾದ ಸಾಧನೆಯಿಂದ

ಶ್ರೀಗಳವರಿಗೆ ಶಿವಯೋಗವು ಸುಲಭಸಾಧ್ಯವಾಗಿದೆ. ಶಿವಯೋಗ ಸಾಧನೆಯ ಆಸೆಯ ಹೊರತು ಜೀವನದಲ್ಲಿ ಅವರಿಗೆ ಅನ್ಯ ಆಸೆಯ ಆಮಿಷವಿಲ್ಲ.

ನಿಸ್ಪೃಹಃ ಸರ್ವಕಾಮೇಭ್ಯಃ ಯುಕ್ತ ಇತ್ಯುಚ್ಯತೆ ತದಾ ।

ಎಂಬ ಗೀತೆಯ ನುಡಿಯಂತೆ ಲೌಕಿಕದ ಭೋಗಭಾಗ್ಯಾದಿಗಳ ಬಯಕೆಗಳೆಲ್ಲವನ್ನೂ ಬದಿಗಿರಿಸಿ ಆಶೆ ಆಮಿಷಗಳೆಲ್ಲವನ್ನೂ ನಾಶಗೊಳಿಸಿ ಶಿವಯೋಗದಲ್ಲಿ ಸಮರಸವಾಗಿದ್ದಾರೆ ಶ್ರೀಗಳವರು. ಹಾನಗಲ್ಲ ಶ್ರೀಗಳವರ ಕಟ್ಟಾಚಾರದ ನಿಷ್ಠುರವಾದ ಏಕಮಾತ್ರ ಅನುಯಾಯಿಗಳಾಗಿದ್ದಾರೆ.

ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೆ ; ಎಂಬ ಗೀತೆಯ ನುಡಿಯಂತೆ ಬಾಹ್ಯ ಜೀವನದ ಆಗುಹೋಗುಗಳ ಅರಿವನ್ನು ನೀಗಿ, ಆತ್ಮಾನಂದದಲ್ಲಿ ಅವಿರತವಾಗಿ ಅಲೆಯುತ್ತ ಸ್ಥಿತಪ್ರಜ್ಞನ ಸ್ಥಿತಿಗೆ ಬಂದು ಮುಟ್ಟಿದಾರೆ. ಇದೇ ಸ್ಥಿತಿಯಲ್ಲಿ ಜೀವನದ ಅವಸಾನವನ್ನು ಕೂಡ ಅಪೇಕ್ಷಿಸುತ್ತಿದ್ದಾರೆ. ' ಮರಣವೆನಗೆ ಮಹಾನವಮಿ ' ಎಂದು ಶ್ರೀ ಬಸವಣ್ಣನವರು ಹೇಳಿದಂತೆ ' ನಭೀತೊ ಮರಣಾದಸ್ಮಿ ' ಎಂಬ ನುಡಿಯಂತೆ ಶರಣರಿಗೆ ಮರಣದ ಭಯವಿಲ್ಲ. ಆದರೆ ಶೀಲಾಚಾರದ ಆಚರಣೆಗೆ ಬಾಧೆ ಬಂದರೆ ಮಾತ್ರ ಭಯಪಡುತ್ತಾರೆ. ಇಂಥ ಶರಣರು ನಾಡಿನ ಪಾಡಿಗಾಗಿ ಇನ್ನೂ ಬಹುಕಾಲ ಬಾಳಲೇಬೇಕು ; ಬಾಳಿ ಬೆಳಗಲೇಬೇಕು ; ಬೆಳಗಿ ಬೆಳಗಿಸಲೇಬೇಕು.

ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಃ ।
ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಂ ॥

ಎಂಬ ಕಠೋಪನಿಷತ್ತಿನ ನುಡಿಯಂತೆ ಅಂತರ್ಯದಲ್ಲಿ ಅಡಗಿಕೊಂಡಿದ್ದ ಪರಮಾತ್ಮನ ಅನ್ವೇಷಣೆಯಲ್ಲಿ ತೊಡಗಿದ ಶ್ರೀಗಳವರಿಗೆ ಶಾಶ್ವತವಾದ ಆತ್ಮಶಾಂತಿಯು ಸಂಪ್ರಾಪ್ತವಾಗಿದೆ.

ಈ ಶಿವಯೋಗಿಗಳನ್ನು ಕಣ್ಣಾರೆ ಕಂಡಾಗ ಪ್ರಾಚೀನ ಕಾಲದ ಮಹರ್ಷಿಗಳ ಸ್ಮೃತಿಯುಂಟಾಗುವುದು. ಹಿಂದಿನ ಋಷಿಗಳು ಹೇಗಿರಬಹುದೆಂಬ ಕಲ್ಪನೆ ನಮಗೆ ಉಂಟಾಗುವುದು. 'Simple living and high thinking' ಎಂಬಂತೆ ನಿರಾಡಂಬರವಾದ ಇವರ ಜೀವನಗಂಗೆಯಲ್ಲಿ ಉದಾತ್ತ ವಿಚಾರವಾಹಿನಿಯು ಪ್ರವಹಿಸುತ್ತಿದೆ. ಇಂಥ ಪುಣ್ಯಾತ್ಮರ ಜೀವನ ನಾಡಿಗೆ ಪಾವನ.

## ಸಾಹಿತ್ಯ ಸೇವೆ

ಕೇವಲ ಆಧ್ಯಾತ್ಮಿಕ ಅಂಬುಧಿಯಲ್ಲಿ ಮುಳುಗಿ ವೈಯಕ್ತಿಕ ಪ್ರಗತಿ ಸಾಧಿಸಿಕೊಳ್ಳುವದಿಷ್ಟೇ ಶ್ರೀ ಸದಾಶಿವ ಶಿವಾಚಾರ್ಯರ ಸಂಕುಚಿತ ಗುರಿಯಲ್ಲ. ತಮಗೆ ದೊರೆತ ಅನುಭವದ ಅನುಪಮ ಅರಿವನ್ನು ಜನಸಾಮಾನ್ಯರ ಜೀವನಪ್ರಗತಿಗಾಗಿ ನೀಡಬೇಕೆಂಬ ಬಯಕೆ ಬಹುಕಾಲದಿಂದಲೂ ಮೂಡಿಬಂದಿದೆ ಅವರ ಅಂತರಾತ್ಮದಲ್ಲಿ.

ಅದಕ್ಕಾಗಿ ಸುಮಾರು ೩೦ ಚಿಕ್ಕ ದೊಡ್ಡ ಹೊತ್ತಿಗೆಗಳನ್ನು ರಚಿಸಿ ಕನ್ನಡಿಗರ ಕೈಗಿತ್ತಿದಾರೆ. ಕನ್ನಡಮ್ಮನಿಗೆ ಸಲ್ಲಿಸಬೇಕಾದ ಸಾಹಿತ್ಯ ಋಣವನ್ನು ತೆತ್ತಿದಾರೆ. ಇವರು ರಚಿಸಿದ 'ಕೈವಲ್ಯೋಪನಿಷದ್ಭಾಷ್ಯ'ವೆಂಬ ಗ್ರಂಥವು ಇವರ ಆಳವಾದ ಆಧ್ಯಾತ್ಮದ ಅನುಭವವನ್ನೂ ಪ್ರಕೃಷ್ಟವಾದ ಪಾಂಡಿತ್ಯವನ್ನೂ, ಉಭಯ ಭಾಷೆಗಳಲ್ಲಿರುವ ಪ್ರಭುತ್ವವನ್ನೂ ಪ್ರದರ್ಶಿಸುತ್ತಿದೆ. ಇವರು ಬರೆದ 'ಅನುಭವ ವೈಖರಿ' ಎಂಬ ಚಿಕ್ಕದಾದ ಚೊಕ್ಕ ಚಿನ್ನದಂತಿಪ್ಪ ಹೊತ್ತಿಗೆಯೊಂದನ್ನು ಓದಿ ಅದರ ಮೆಚ್ಚುಗೆಯ ಬಗ್ಗೆ ನಾಲ್ಕು ನುಡಿಗಳನ್ನು ಬರೆಯುವ ಸುಯೋಗವೂ ನನಗೆ ಸಂಪ್ರಾಪ್ತವಾಗಿತ್ತು.

ಶ್ರೀಗಳವರ ಸಾಹಿತ್ಯಶೈಲಿ ಬಹು ಸುಭಗವಾಗಿದೆ ; ಸುಲಭವಾಗಿದೆ ; ಸುಲಲಿತವಾಗಿದೆ. ಸಣ್ಣ ಸಣ್ಣ ನುಡಿಗಳಲ್ಲಿ ದೊಡ್ಡ ದೊಡ್ಡ ವಿಚಾರಗಳನ್ನು ತುಂಬುವ ಸಾಹಿತ್ಯದ ಸಾಹಸದ ಶಕ್ತಿ ಶ್ರೀಗಳವರಿಗೆ ಸಮನಿಸಿದೆ. ಈ ಸಂಗತಿಗೆ ಸಾಕ್ಷಿಗಾಗಿ 'ಅನುಭವ ವೈಖರಿ'ಯಲ್ಲಿ ಅಡಗಿರುವ ಅನೇಕ ಆಣಿಮುತ್ತುಗಳನ್ನು ಉದಾಹರಿಸಬಹುದಾಗಿದೆ. ಇಂಥ ಅನುಭವ ಶಾಸ್ತ್ರದ ಅರಿವಿನ ಹಿರಿಮೆಯನ್ನು ಜನತೆಗೆ ಅರುಹುವುದಕ್ಕಾಗಿಯೇ ಇಂಥ ಅನೇಕ ಗ್ರಂಥಗಳನ್ನು ಶ್ರೀಗಳವರು ಇನ್ನೂ ಪ್ರಕಟಿಸಲಿದ್ದಾರೆ. ಅವು ಇನ್ನೂ ಅಚ್ಚುಕೂಟದ ಅಂತರ್ಗರ್ಭದಲ್ಲಿ ಅಡಗಿಕೊಂಡಿವೆ.

## ಜನತೆಯ ಸೇವೆ

ಇವೆಲ್ಲವುಗಳ ಜೊತೆಗೆ ಶ್ರೀಗಳವರು ಜನತೆಯ ಸೇವೆಯನ್ನೂ ಸಾಧಿಸುತ್ತಿದ್ದಾರೆ. ಗಿರಿಯಾಪುರದಲ್ಲಿ ಪೂಜ್ಯ ಹಾನಗಲ್ಲ ಶ್ರೀಗಳವರ ಸಂಸ್ಮರಣಾರ್ಥವಾಗಿ, ಅಲ್ಲಿನ ಜನತೆಯ ಸಹಕಾರ ಸೌಹಾರ್ದ್ರಭಾವಗಳ ಸಹಾಯದಿಂದ "ಶಿವಾದ್ವೈತ ತತ್ತ್ವ ಪ್ರಚಾರ ಸಮಿತಿ" ಎಂಬ ಸಂಸ್ಥೆಯೊಂದನ್ನು ಸಂಸ್ಥಾಪಿಸಿಕೊಂಡು ಆ ಭಾಗದ ಜನ ಜಾಗೃತಿಯ ಕಾರ್ಯವನ್ನು ಕೈಕೊಂಡಿದ್ದಾರೆ. ಕಳೆದ ೧೨ ವರ್ಷಗಳಿಂದಲೂ ಹಾನಗಲ್ಲ ಶ್ರೀಗಳವರ ಪುಣ್ಯತಿಥಿಯ ಸಪ್ತಾಹ ಸಮಾರಂಭವನ್ನು ಪ್ರತಿ ವರ್ಷ ಏರ್ಪಡಿಸಿ ಅನೇಕ ಜನ ಪೂಜ್ಯಸ್ವಾಮಿಗಳವರ, ಪಂಡಿತರ, ಸಾಹಿತಿಗಳ ಅನುಭವಾಮೃತವನ್ನು ಜನಮನಕ್ಕೆ ಉಣಿಸಿ ತಣಿಸುತ್ತಿದ್ದಾರೆ. ಈ ಶ್ರೀಗಳವರ ಬಗೆಗೆ ಆ ಭಾಗದ ಜನತೆಯು ಪಡಿಸಿಕೊಂಡಿರುವ ಶ್ರದ್ಧೆ ಭಕ್ತಿ ವಿಶ್ವಾಸಗಳು ಅವರ್ಣನೀಯವಾಗಿವೆ. ಇವರ ಈ ಬಹುಮುಖವಾದ ಸಾರ್ವಜನಿಕ ಕಾರ್ಯಕಲಾಪಗಳಿಗೆ ಮನಸೋತ ನಿಡುಮಾಮಿಡಿಯ ಶ್ರೀಶೈಲ ಜಗದ್ಗುರು ಚೆನ್ನಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳು ಅಲ್ಲಿನ ಎಲ್ಲ ಚಟವಟಿಕೆಗಳಿಗೂ ಬೆಂಬಲಿಗರಾಗಿ ನಿಂತುಕೊಂಡಿದ್ದಾರೆ. ಆಧ್ಯಾತ್ಮ ಶಕ್ತಿ, ಸಾಹಿತ್ಯಾತ್ಮಕವಾದ ಸಂಘಟನಾ ಶಕ್ತಿಗಳೆರಡೂ ಸಮ್ಮಿಲಿತವಾದಂತೆ ಇವೆ.

## ಹಂಬಲದ ಹಾರೈಕೆ

ಈ ರೀತಿಯಾಗಿ ಕಠಿಣವಾದ ತಪೋಜೀವನವನ್ನು ಸಾಗಿಸುತ್ತಿರುವ ಶ್ರೀ ಸದಾಶಿವ ಶಿವಾಚಾರ್ಯರು ೬೦ ವರ್ಷಗಳ ತುಂಬುಜೀವನವನ್ನು ಬಾಳಿದ್ದಾರೆ. ಅವರ

ಈ ತೆರವ ಜೀವನದಿಂದ ಬಹು ಸಂತುಷ್ಟವಾದ ಜನತೆಗೆ ಅವರ ೬೦ನೇ ವರ್ಷದ ಮಹೋತ್ಸವವನ್ನು ಅತ್ಯಂತ ಉತ್ಸಾಹದಿಂದ ನೆರವೇರಿಸಲು ಉತ್ಸುಕರಾಗಿದ್ದಾರೆ. ಈ ಮಹಾ ವಿಭೂತಿಯ ಜೀವನದ ಬಗೆಗೂ, ಈ ಮಹೋತ್ಸವದ ಸವಿನೆನಪಿನ ಬಗೆಗೂ ಸಮಿತಿಯವರು 'ವಿಭೂತಿ'ಯೆಂಬ ಹೊತ್ತಿಗೆಯೊಂದನ್ನು ಹೊರಡಿಸಲಿದ್ದಾರೆ. ಇಂಥ ಶುಭ ಸಮಯದಲ್ಲಿ ಶ್ರೀಗಳವರಿಗೂ ಸಮಿತಿಯವರಿಗೂ ನನ್ನ ಅಲ್ಪವಾದ ಅಳಿಲಸೇವೆ ಅರ್ಪಿತವಾಗಲೆಂಬ ಅಂತಃಕರಣದಿಂದ ಈ ನಾಲ್ಕು ನುಡಿಗಳನ್ನು ಬರೆದಿದ್ದೇನೆ. ಶ್ರೀಗಳವರನ್ನೂ ಸಮಿತಿಯವರನ್ನೂ ಕಣ್ಣಾರೆ ಕಂಡಾಗ ನನ್ನ ಅಂತರಂಗದಲ್ಲಿ ಒಡಮೂಡಿ ಬಂದ ಭಾವಗಳೇ ಇದರಲ್ಲಿ ಬಯಲಿಗೆ ಬಂದಿವೆ.

ಈ ಪ್ರಕಾರ ಕನ್ನಡ ನಾಡಿನ ಸಂಸ್ಕೃತಿಯ ಸಂಪೋಷಣೆಗಾಗಿ, ತಾಯ್ನುಡಿಯ ಸೇವೆಗಾಗಿ ಬಹುಮುಖವಾದ ಸೇವೆ ಸಲ್ಲಿಸುತ್ತಿದ್ದ ಸದಾಚಾರ ಸಂಪನ್ನರಾದ ಶ್ರೀ ಸದಾಶಿವ ಶಿವಾಚಾರ್ಯ ಮಹಾಸ್ವಾಮಿಗಳವರಿಗೆ ಇನ್ನೂ ಅಧಿಕವಾದ ಆಯುಷ್ಯವನ್ನೂ ಆರೋಗ್ಯವನ್ನೂ ಆ ದಯಾಘನನು ದಯಪಾಲಿಸಲೆಂದೂ, ಅವರ ತಪಸ್ಸಿನ ಫಲವು ನಾಡಿನ ನಾಡಿನಾಡಿಗಳಲ್ಲಿ ಮಿಡಿದು ನವೋತ್ಸಾಹವನ್ನುಂಟುಮಾಡಲೆಂದೂ, ಅವರ ಶತಾಬ್ದ ಮಹೋತ್ಸವವನ್ನು ಆಚರಿಸುವ ಸದ್ಭಾಗ್ಯವು ನಾಡಿಗೆ ಪ್ರಾಪ್ತವಾಗಲೆಂದೂ ಹೃದಯಾರೆ ಹಾರೈಸಿ ಈ ಬರೆಹವನ್ನು ವಿರಮಿಸುವೆನು.

—**ಶ್ರೀ ಸುಬುದ್ಧಿಸ್ವಾಮಿ ಹಿರೇಮಠ,** ಬಿ. ಎ., ಎಲ್‌ಎಲ್. ಬಿ.
ವಕೀಲರು, ಬೈಲಹೊಂಗಲ, ಜಿಲ್ಲಾ ಬೆಳಗಾಂವಿ.

———::———

# ಬೆಳಗು ಬೀರುವ ಭಾನು.



ವಿಶಾಲ ಮೈಸೂರಿನ ಒಂದು ಚೆಲುವ ಜಿಲ್ಲೆ ಚಿಕ್ಕಮುಗಳೂರು. ಈ ಜಿಲ್ಲೆಯ ಒಂದು ಚಿಕ್ಕ ಊರು ಗಿರಿಯಾಪುರ. ಈ ಊರಿನ ಬಳಿ ಒಂದು ಚಿದ್ಧಾಮ ಶ್ರೀಗುರು ಕುಮಾರಾಶ್ರಮ. ಈ ಆಶ್ರಮದ ಅರಿಂಜಯರು ಆನಂದಪರವಶರು ಆದ ಶಿವಾ ಚಾರ್ಯರು ಸಚ್ಚಿನ್ಮುನಿಗಳು. ಶ್ರೀ ಗುರುವರ್ಯರು. ಇವರ ಭವ್ಯಬಾಳಿನ ಬೆಳಗು ಆ ಆಶ್ರಮದ ನಾಲ್ದೆಸೆಗೂ ನಳನಳಿಸುತ್ತ ಹಬ್ಬಿದೆ; ನಾಡಿನಾದ್ಯಂತವೂ ಹಬ್ಬಿದೆ. ಇವರ ಸರ್ವತೋಮುಖವಾದ ಆಧ್ಯಾತ್ಮಿಕ ನೈತಿಕ ತಾಪಸಿಕ ಯೌಗಿಕ ಸಾಹಿತ್ಯಕ ಸಚ್ಛೀಲ ಜೀವನವು ಸುತ್ತಮುತ್ತಿನ ನೆಲ-ಜಲಗಳ ಮೇಲೆ ಜನಜೀವನದ ಮೇಲೆ ಹೊಂಬೆಳಗನ್ನು ಹರಡಿದೆ. ಅಲ್ಲಿರುವ ಕಾಳ್ಗತ್ತಲೆಯು ಕಳೆದಿದೆ. ಈ ಚಿದ್ಭಾನು ಆ ಆಶ್ರಮದಲ್ಲಿ ಮೂಡಿ ತನ್ನ ಹೊಂಗಿರಣಗಳ ಹರಡಿದ ಬಳಿಕ ಆ ಮುಂಜಾವಿನ ಮನೋ ರಂಜನ ದೃಶ್ಯ ಅಲ್ಲಿ ಇಂದಿಗೂ ಅಚ್ಚಳಿಯದೆ ಅದೇ ದಿಸೆಯಲ್ಲಿ ಅದೇ ದಿವ್ಯತೆಯಲ್ಲಿ ತೊಳಗಿ ತೋರುತಿದೆ. ಇನ್ನೂ ಮಿಗಿಲಾಗಿ ಮೇಲೇರಿ ಮೆರಗುತಿದೆ. ಆ ಬೆಳಗಿನಲ್ಲಿ ಆ ಭಾಗದ ಜನರು ತಂತಮ್ಮ ಸತ್ಕಾರ್ಯ ನಿರತರಾಗಿದಾರೆ. ಸದ್ಭಾವಿಗಳಾಗಿದಾರೆ. ಸಚ್ಛೀಲರಾಗಿದಾರೆ. ಸುವಿಚಾರದ ಕಂದೆರದಿದಾರೆ. ಅವರ ಹೃದಯ ಹೂವುಗಳು ಅರಳಿವೆ. ಅವುಗಳ ಸದ್ವಾಸನೆಯ ಹೊತ್ತು ತಂಗಾಳಿ ತೀಡುತಿದೆ. ಅಂಗಭೃಂಗ ಗಳು ಜೇಂಕರಿಸುತ್ತ ಭಕ್ತಿಮಕರಂದಕ್ಕಾಗಿ ಹಂಬಲಿಸಿ ಹಾರಾಡುತಿವೆ. ಅಲ್ಲಿನ ಜನ ರಲ್ಲಿ ಅದೊಂದು ಹೊಸ ಬಗೆಯ ಹಸನಾನ ಜೀವನದ ಹೊಳಸೇರಿದೆ. ಹೊಸ ಬೆಳಗು ಹೊಮ್ಮಿ ಮೂಡಿದೆ. ಆ ಬೆಳಗಿಗೆ, ಆ ಬಂಡುಣಿಸಿಗೆ ನಾಡಿನ ನಾಲ್ಕು ಕಡೆಗಳಿಂದಲೂ ವರ್ಷವರ್ಷವೂ ಆಧ್ಯಾತ್ಮಜಿಜ್ಞಾಸೆಯ ಭೃಂಗಗಳು ಹಾರಿ ಬರು ತ್ತವೆ. ಹಿಗ್ಗೇರಿ ಹೊಳನೇರಿ ಹೊರಡುತ್ತವೆ.

ಆ ಚಿದ್ಭಾನು ಶ್ರೀ ಸದಾಶಿವ ಶಿವಾಚಾರ್ಯರು. ಅವರ ಬಾಳೆಲ್ಲ ಬೆಳಗು. ಆ ಭಾನುವಿನ ಮೈಯೆಲ್ಲ ಕಿರಣಮಯ. ಆ ಒಂದೊಂದು ಕಿರಣದಲ್ಲಿಯೂ ಒಂದೊಂದು ಬಗೆಯ ಬೆಳಗಿವೆ ; ಬಗೆಯಿದೆ. ಆ ಚಿದ್ಭಾನುವಿಗೆ ಆಚಾರ ಒಂದು ಕಿರಣ ; ವಿಚಾರ ಇನ್ನೊಂದು ಕಿರಣ. ಯೋಗ ಮತ್ತೊಂದು ಕಿರಣ ; ತ್ಯಾಗ ಮಗದೊಂದು ಕಿರಣ. ತಪಸ್ಸು ತಾನೊಂದು ಕಿರಣ ; ತ್ರಿಕಾಲ ಜಪಾನುಷ್ಠಾನ ಇನ್ನೊಂದು ಕಿರಣ. ಗುಣ ಕಿರಣಗಳಿಗೆ ಗಣನೆಯಿಲ್ಲ. ಇವು ತಂತಮ್ಮ ತಂಬೆಳಗಳನ್ನು ಬೀರಿ ಉತ್ತಮ ಜನತೆಗೆ ಉಜ್ಜೀವನವ ಉದ್ಘೋಷಿಸಿವೆ ; ಉನ್ಮಾದತೆಯ ಉಡಗಿಸಿವೆ. ಕಂಗಾಣುವಂತೆ ಮನಂಗಾಣುವಂತೆ ಮಾಡಿವೆ. ಮಾನವ ಸಂಸ್ಕೃತಿಯ ಮಹಾ ಪಂಥದಲ್ಲಿ ಮುನ್ನಡೆವಂತೆ ಮಾಡಿವೆ. ಮಬ್ಬು ಮರಳಿ ಮುತ್ತದಂತೆ ಮಾಡಿವೆ.

ಅನಾಚಾರದ ಅಂಧಕಾರದಲ್ಲಿ ಇದ್ದ ಜನ ಆಚಾರದ ಅಚ್ಚ ಬೆಳಗಿಗೆ ಬಂದಿದೆ. ಅಜ್ಞಾನಾಂಧಕಾರದಲ್ಲಿದ್ದ ಜನ ಜ್ಞಾನ ಪ್ರಕಾಶವ ಕಾಣುವಂತಾಗಿದೆ. ಕರ್ತವ್ಯವನರಿಯದೆ ಕಾಳ್ಗತ್ತಲಲ್ಲಿ ಕಾಲ್ ತಡಬಡಿಸುತ್ತಿದ್ದವರು ಕರ್ತವ್ಯದಲ್ಲಿ ಕಾಲಿಡುವಂತಾಗಿದೆ. ಚಿತ್ತವೃತ್ತಿಯಲ್ಲಿ ಸುತ್ತಿಸುತ್ತಿ ಚಿದ್ಭ್ರಮೆಗೊಳಗಾಗಿದ್ದವರು ನಿವೃತ್ತಿಯ ನಿರ್ಮಲ ಮಾರ್ಗದಲ್ಲಿ ಮುಂದುವರಿಯುವಂತಾಗಿದೆ. ಪ್ರಾಯಶ್ಚಿತ್ತಾದಿಗಳಿಗೆ ಮಾತ್ರ ಸೂರೆಯಾಗಿ ವ್ಯರ್ಥವಾಗುತ್ತಿದ್ದ ಹಲವರ ಹಣ ಇಂದು ಸತ್ಪಾತ್ರಕ್ಕೆ ಸಲ್ಲುವಂತಾಗಿದೆ. ಲಿಂಗವಂತರಾಗಿಯೂ ಲಿಂಗಪೂಜೆಯ ತಿರುಳನ್ನೆ ತಿಳಿಯದಂತಿದ್ದವರು ತಿಳಿದಾಚರಿಸುವಂತಾಗಿದೆ. ಮಾತಿನ ಮಹಿಮೆಯನರಿಯದೆ ಮನಬಂದಂತೆ ಮಾತಾಡುತ್ತಿದ್ದವರು ಅನುವರಿದು ವಿನಯದಿಂದಾಡುವಂತಾಗಿದೆ. ಮಂತ್ರಸಂಸ್ಕಾರವೇ ಇಲ್ಲದವರು ಮಂತ್ರ ಸಂಸ್ಕಾರಕ್ಕೊಳಗಾಗಿದಾರೆ. ಅದೆಷ್ಟೋ ಜನ ಸಾತ್ವಿಕರಾಗಿ ಸತ್ಕಾಯಕ ನಿರತರಾಗಿದಾರೆ. ಆ ಬೆಳಗಿನಿಂದಾದ ಫಲೋದಯ ಅನಿತಿನಿತಲ್ಲ.

ಆ ಚಿದ್ಭಾನುವಿನ ಶೀಲ ಬರೀ ಸಾಂಪ್ರದಾಯಕ ಶೀಲವಲ್ಲ. ಅವರ ಅರಿವು ಬರೀ ಅಂಧಾನುಕರಣದ ಅರಿವಲ್ಲ. ಅವರ ಶ್ರದ್ಧೆ ಬರೀ ಜಡ ಶ್ರದ್ಧೆಯಲ್ಲ. ಅವರ ಅರ್ಚನೆ ಬರೀ ಆಡಂಬರದ ಅರ್ಚನೆಯಲ್ಲ. ಅವರ ಯೋಗ ಕೇವಲ ಕೌತುಕವ ತೋರುವ ಯೋಗವಲ್ಲ. ಅವರ ವೈರಾಗ್ಯ ಬರೀ ಜನ ಮೆಚ್ಚಿಸುವ ವೇಷಾಡಂಬರದ ವೈರಾಗ್ಯವಲ್ಲ. ಅವರ ಪ್ರತಿಯೊಂದು ಪವಿತ್ರ ಸಾಧನೆಯು ಅವರ ಆತ್ಮಸ್ಫುರಣ ! ಅವರು ಜನಮೆಚ್ಚಿ ನಡೆವವರಲ್ಲ ; ಮನಮೆಚ್ಚಿ ನಡೆವವರು ; ನುಡಿವವರು. ಅವರ ನಡೆ ನುಡಿಗಳಲ್ಲಿ ಏಕತಾನತೆಯಿದೆ. ಭಾನುವಿನ ಬಿಂಬೆಲ್ಲ ಬೆಳಗೇ ಬೆಳಗಾಗಿರುವಂತೆ ಚಿದ್ಭಾನು ಸದಾಶಿವ ಶಿವಾಚಾರ್ಯ ಗುರುವರ್ಯರ ಬಾಳೆಲ್ಲ ದಿಟವಾದ ಬೆಳುಬೆಳಗಾಗಿ ಬೆಳಗುತಿದೆ. ಬಾನ್ಬೆಳಗು ಎಲ್ಲ ಬೆಳಗುಗಳಿಗೆ ಹಿರಿದಾಗಿರುವಂತೆ ಈ ಚಿದ್ಭಾನು ಇತರ ಎಲ್ಲ ತಾರೆ ತಂಗದಿರುಗಳಲ್ಲಿ ಹಿರಿಬೆಳಗಾಗಿ ಸಿರಿಬೆಳಗಾಗಿ ಶೋಭಿಸುತ್ತಿದೆ ; ದಾರಿದೀಪವಾಗಿದೆ.

೮೧. ಪೂಜ್ಯ ಹಾನಗಲ್ಲ ಶ್ರೀಗಳವರೆಂಬ ಭಾನು ಬೆಳ್ಳನೆ ಬೆಳಗಿ ಅಸ್ತಂಗತವಾದ ಬಳಿಕ ಆವರಿಸಿ ಬರುತ್ತಿರುವ ಅಂಧಕಾರವನ್ನು ಅಡಗಿಸಿ ಆ ಕುಮಾರಯೋಗಿಯ ಕಳೆಯನ್ನೆ ಕೈಗೊಂಡು ಮೈಗೊಂಡು ಇವರು ಇನ್ನೂ ಉಜ್ವಲಗೊಳಿಸಿದರು; ಉದ್ದಾಮಗೊಳಿಸಿದರು. ಅವರ ತತ್ತ್ವಗಳೇ ತಮ್ಮ ತತ್ತ್ವಗಳೆಂದು ತಿಳಿದು ತಳೆದು ಕೈಬಿಡದೆ ನಡಿಸಿಕೊಂಡು ಬಂದರು; ಬರುತ್ತಿದ್ದಾರೆ. ಅವರು ಹೋದ ಹಾದಿಯೇ ಇವರ ಹಾದಿ. ಅವರಿಟ್ಟುಕೊಂಡಿದ್ದ ಗುರಿಯೇ ಇವರ ಗುರಿ. ಅವರ ನಡೆನುಡಿಗಳೇ ಇವರ ನಡೆನುಡಿಗಳು. ಅವರವನ್ನೇ ಆಚರಿಸಿ ಪುನರುಜ್ಜೀವನಗೊಳಿಸಿದರು; ಪ್ರಭಾವಪೂರ್ಣಗೊಳಿಸಿದರು. ಅವರ ಆ ಹೊಂಗಿರಣಗಳೆಲ್ಲ ಇವರಲ್ಲಿ ನೆಲೆನಿಂತು ಪ್ರಕಾಶಗೊಂಡವು; ಪುನರವತಾರ ತಾಳಿದವು. ಅವನ್ನು ಅಭಿವೃದ್ಧಿಗೊಳಿಸುವುದೇ ಅಚ್ಚಳಿಯದಂತಿರಿಸಿ ಸಿದ್ಧಿಗೇರಿಸುವುದೇ ಇವರ ಬಾಳಿನ ಬೇಹಾರವಾಯಿತು. ಅವರ ಆ ವೈಯಕ್ತಿಕ ಬಾಳ ಬಟ್ಟೆಯ ತೋರುವುದರಲ್ಲಿಯೇ ಆದರ್ಶವಿದೆ; ಆತ್ಯಂತಿಕವಿದೆ–ಎಂದು ನೆರೆ ನಂಬಿ ನಿಂತವರಿವರು. ಅಂತೆಯೇ ಇವರನ್ನಿಂದು 'ಎರಡನೆಯ ಕುಮಾರ ಯೋಗಿ' ಎಂದು ಹೆಸರಿಸಿದಾರೆ; ಹೊಗಳಿದಾರೆ. ಸಾಲದ್ದಕ್ಕೆ 'ಸದಾಶಿವ' ಎಂಬ ಪುಣ್ಯನಾಮ ಸಾದೃಶ್ಯವೂ ಇವರನ್ನು ಬಳಸಿ ಬೆಳಗಿದೆ. ಸಂಸ್ಥೆಯೊಂದನ್ನು ಸ್ಥಾಯಿಯಾಗಿ ಕಟ್ಟಿ ಸಂತೆಯೊಂದನ್ನು ನೆರವದಿದ್ದರೂ ಸ್ವಪ್ರಕಾಶವನ್ನು ಸುತ್ತಲೂ ಹರಡಿ ಹಲವಾರು ಹೃದಯಗಳನ್ನು ಅರಳಿಸಿದಾರೆ; ಅನುಗಾಮಿಯಾಗಿಸಿದಾರೆ; ಆದರ್ಶವಾಗಿಸಿದಾರೆ.

## ದರ್ಶನೀಯ ದೀಪ್ತಿ

ಶ್ರೀ ಸದಾಶಿವ ಶಿವಾಚಾರ್ಯರ್ವರ್ಯರು ಭಾನು ಬಿಂಬವಾದರೂ ಬೆಳಗು ಬಿಸಿಲಲ್ಲ; ಬಿಸಿಯ ಬೀರುವುದಲ್ಲ. ಚಂದ್ರಿಕೆಯಂತಹ ತಂಬೆಳಗು; ತಿಳಿಬೆಳಗು. ಇದೊಂದು ದರ್ಶನೀಯ ದೀಪ್ತಿ. ದರ್ಶಿಸಿದರೆ ಸಮನಿಸುವುದು ಸಂತೃಪ್ತಿ. ಈ ಪೌರ್ಣಿಮೆಯ ದೀಪ್ತಿಗೆ ನಾಡಿನವರು ನಾನಾ ಬಗೆಯಲ್ಲಿ ಆಕರ್ಷಿತರಾಗಿದ್ದಾರೆ. ದರ್ಶನಾಶಕ್ತಿ ತೋರಿದಾರೆ; ತೋರುತ್ತಿದಾರೆ. ಬಿಡಿದಿನಗಳ ಮಾತಲ್ಲದೆ ವಾರ್ಷಿಕವಾಗಿ ನಾಲ್ಕಾರು ಸಾಸಿರ ಜನ ದರ್ಶನಕಾಂಕ್ಷಿಗಳಾಗಿ ಆಗಮಿಸುತ್ತಾರೆ. ನಾಲ್ಕಾರು ದಿನ ನಾನಾಬಗೆಯ ಜ್ಞಾನದಾಸೋಹ ಪ್ರಸಾದದಾಸೋಹಗಳಲ್ಲಿ ಭಾಗಿಗಳಾಗಿ ಆನಂದಭರಿತರಾಗಿ ಕಾಲಕ್ಷೇಪ ಮಾಡುತ್ತಾರೆ. ತಮ್ಮನ್ನು ತಾವೇ ಮರೆತಿರುತ್ತಾರೆ. ಭೌತಿಕವಾಗಿ ಕಳೆದುಕೊಂಡ ಆ ಕುಮಾರಯೋಗಿಯ ದರ್ಶನಭಾಗ್ಯವನ್ನು ಬಯಕೆಯನ್ನು ಇಲ್ಲಿ ಜನತೆ ಪೂರೈಸಿಕೊಳ್ಳುತ್ತದೆ. ವೈಯಕ್ತಿಕವಾಗಿ ಇವರ ದಿವ್ಯ ಸನ್ನಿಧಿಯಲ್ಲಿದ್ದು ಜ್ಞಾನೋಪಾಸನೆಯ ಮಾಡಿ ಮುಂದುವರಿದವರಿದ್ದಾರೆ. ಯೋಗೋಪಾಸನೆಯ ಮಾಡಿ ಚಿತ್ತಶಾಂತಿಯ ವೃತ್ತಿ ನಿವೃತ್ತಿಯ ಪಡೆದವರಿದ್ದಾರೆ. ಶಿವಯೋಗೋಪಾಸನೆಯ ಮಾಡಿ ಸುಖಿಗಳಾದವರಿದ್ದಾರೆ. ಇವರ ದಿವ್ಯ ದೀಕ್ಷಾನುಗ್ರಹಗಳಿಗೆ ಭಾಗಿಗಳಾದವರಿದ್ದಾರೆ.

ಇವರೊಂದು ಇವರ ಲಿಂಗಕಾಯವೊಂದು ಜ್ಯೋತಿಯಿಲ್ಲದ ಪ್ರಣತೆಯಲ್ಲ. ದಿವ್ಯದೀಪ್ತಿಯುಳ್ಳ ದೀಪ. ಇದಿಲ್ಲದೆ ಬೆಳಗಿಲ್ಲ; ಬೆಳಗಿಲ್ಲದೆ ಮುನ್ನೋಟವಿಲ್ಲ. ಮುನ್ನೋಟವಿಲ್ಲದೆ ಮಂಗಳಗುರಿಯಿಲ್ಲ. ಇದೇ ಇಂದು ಕ್ರಿಯಾಜ್ಯೋತಿ; ಜ್ಞಾನ ಜ್ಯೋತಿ! ತನ್ನ ಸಚ್ಛೀಲದಿಂದ ಕ್ರಿಯಾಜ್ಯೋತಿಯನ್ನು ಚೆಲ್ಲುತ್ತಿದೆ. ತನ್ನ ಕೈವಲ್ಯೋಪನಿಷದ್ಭಾಷ್ಯದಿಂದ, ತನ್ನ 'ವೀರಶೈವ ಸಂಸ್ಕೃತಿ'ಯಿಂದ ಜ್ಞಾನ ಜ್ಯೋತಿಯು ಹರಡಿದೆ. ಇವೆರಡನ್ನೂ ಇಂದು ನಾವೆಲ್ಲ ದರ್ಶಿಸುತ್ತಿದ್ದೇವೆ. ಇದೊಂದು ಪೂರ್ಣಜ್ಯೋತಿ; ಪರಿಣಾಮಕಾರಿ ಜ್ಯೋತಿ!

ಇದು ಕೇವಲ ಬಾಹ್ಯಜ್ಯೋತಿಯಲ್ಲ; ಕೇವಲ ಕ್ರಿಯಾಪ್ರಚೋದಕ ಜ್ಯೋತಿಯಲ್ಲ. ಆಂತರಂಗಿಕ ಜ್ಯೋತಿಯೂ ಅಹುದು. ಆಧ್ಯಾತ್ಮಿಕ ಜ್ಯೋತಿಯೂ ಅಹುದು. ಮನಬುದ್ಧಿ ಭಾವಜೀವ ಪ್ರಚೋದಕ ಪ್ರಜ್ವಲ ಜ್ಯೋತಿ. ಈ ಜ್ಯೋತಿ ಮನದ ಮೇಲೆ ಸಂಯಮದ ಸುಪ್ರಕಾಶವನ್ನು ಸೂರೆಗೊಳಿಸುತ್ತದೆ. ಬುದ್ಧಿಗೆ ಶಿವಾಗಮಗಳ ಸತ್ಪ್ರಕಾಶವನ್ನು ಬೀರುತ್ತದೆ. ಭಾವದಮೇಲೆ ಸ್ವಾನುಭವದ ಶುಭ್ರ ಜ್ಯೋತಿಯನ್ನು ಬೆಳಗಿಸುತ್ತದೆ. ಜೀವನಿಗೆ ಶಿವಪ್ರಕಾಶವನ್ನು ಅನುಗ್ರಹಿಸುತ್ತದೆ. ಪರರಿಗೆ ಮಾತ್ರ ಪ್ರಕಾಶದಾಯಿಯಲ್ಲ; ತಾನೂ ಆ ದಿವ್ಯಜ್ಯೋತಿರ್ಮಾರ್ಗದಲ್ಲಿ ಪುರೋಗಮಿಸುತ್ತದೆ.

ಶ್ರೀ ಸದಾಶಿವ ಶಿವಾಚಾರ್ಯರು ತಮ್ಮ ಪ್ರಗತಿ ಪಥದಲ್ಲಿ ಪ್ರಭಾಕರಗಾಮಿಗಳು. ಹಿನ್ನಡೆದವರಲ್ಲ; ಹೀನ ಪ್ರಭೆಯ ತಾಳಿದವರಲ್ಲ. ತಮ್ಮ ಸತ್‌ಸಾಧನೆಯಲ್ಲಿ ಸೋಲನ್ನು ಕಾಣದ ಜೀವಜ್ಯೋತಿಯದು; ಜ್ವಲಂತಜ್ಯೋತಿಯದು. ಅದರ ಆಧ್ಯಾತ್ಮ ಜ್ಯೋತಿಯ ಜ್ವಾಲೆ ತುಂಬಾ ಪ್ರಜ್ವಲವಾದುದು. ಅದಕ್ಕೆ ಕುಂದಿಲ್ಲ. ಅವರು ಆ ಜ್ಯೋತಿರ್ಮಾರ್ಗದಲ್ಲಿ ಮುಂಗಂಡು ಮುನ್ನಡೆಯುತ್ತಿದ್ದಾರೆ. ಅವರದು ಅವರದೇ ದಾರಿ. ಅದು ಒಂದೇ ದಾರಿ. ಒಂದೇ ಧ್ಯೇಯ. ಸತ್ಯವೇ ಅವರ ಧ್ಯೇಯ. ತಪ್ಪುಗಳ ತಮಸ್ಸು ಅವರನ್ನು ಬಳಸದು. ಕಾರ್ಯ ಕಾಲಗಳ ಕ್ರಮದಲ್ಲಿ ಅವರು ತಪ್ಪುವವರಲ್ಲ. ಸೋಮಾರಿತನ ಅವರ ಸುತ್ತುಮುತ್ತು ಸುಳಿಯದು. ಯೋಗ್ಯವಾದುದನ್ನೆ ಲಕ್ಷಿಸುವ ಸ್ವಭಾವ. ಯೋಗ್ಯ ಕ್ರಿಯೆಯಲ್ಲಿಯೆ ಅವರ ದುಡಿಮೆ. ಆ ದುಡಿಮೆಯಲ್ಲಿ ಅವರ ಶಕ್ತಿಗೆ ಲೋಭವಿಲ್ಲ. ಅಸಂಸ್ಕಾರದ ಅಂಧಕಾರದಲ್ಲಿರುವವರಿಗೆ ಸುಸಂಸ್ಕಾರದ ಸಂಪೂರ್ಣ ಪ್ರಕಾಶವನ್ನು ಗ್ರಂಥಗಳ ಮುಖಾಂತರ ನಾಡಿನಾದ್ಯಂತ ಹರಡಿದ್ದಾರೆ. ಅವರ ಜ್ಞಾನಜ್ಯೋತಿಯು ಈ ದಿಸೆಯಲ್ಲಿ ನಂದಾದೀಪವಾಗಿ ಬೆಳಗುತ್ತಿದೆ; ದೀಪಾವಳಿಯಾಗಿ ಜ್ವಲಿಸುತ್ತಿದೆ. ಅವರ ಜ್ಞಾನಜ್ಯೋತಿಯು ದಿವ್ಯವಾದುದು; ಅದೊಂದು ಅಪೂರ್ವ ತೇಜ; ಓಜ.

ಸಾಮಾಜಿಕರ ಶಿವಪೂಜೆಯಲ್ಲಿ 'ಶಿವಪೂಜಾವಿಧಿ'ಯಾಗಿ ನಿಧಿಯಾಗಿ ಬೆಳಗಿ ಬೆಳಗುತಿದೆ ಈ ತೇಜ: ಶಿವದೀಕ್ಷಾ ಸಂಸ್ಕಾರದಲ್ಲಿ 'ಶಿವದೀಕ್ಷಾ ವಿಧಾನ'ವಾಗಿ ಶೋಭಿಸುತಿದೆ ಈ ತೇಜ. ಪ್ರಸಾದಿಕರಾಗುವವರಿಗೆ 'ಅನುಗ್ರಹ'ವಾಗಿ ಆತ್ಮ

ಶಾಂತಿಯ ಸುರಭೂರುಹವಾಗಿ ತೊಳಗುತಿದೆ ಈ ತೇಜ. ಅವರಿವರೆನ್ನದೆ ಸರ್ವರಿಗೂ 'ಅನುಭವ ವೈಖರಿ'ಯಾಗಿ 'ಅನುಭವ ಲಹರಿ'ಯಾಗಿ ಹರಿದು ಹಬ್ಬಿದೆ ಈ ತೇಜ.

## ಉದಯ ಗಿರಿ ; ಉದಾತ್ತ ಗುರಿ.

ಗಿರಿಯಾಪುರ ಅದೊಂದು ಇಂದು ಉದಯಗಿರಿ. ಅಲ್ಲಿ ನಮ್ಮೀ ಚಿದ್ಭಾನು ಚಲಿಸದಂತೆ ಮೂಡಿ ಮುಂಬೆಳಗುತ್ತಿದ್ದಾನೆ. ಈ ಉದಯಗಿರಿಯಲ್ಲಿ ಉದಯಿಸಿರುವ ಈ ಚಿದ್ಭಾನು ತೋರುವ ದಾರಿ ಬರೀ ಲೌಕಿಕದ್ದಲ್ಲ, ಭೌತಿಕದ್ದಲ್ಲ ಜತೆಗೆ ಮಿಗಿಲಾಗಿ ಅಧ್ಯಾತ್ಮಿಕದ್ದು. ಅದೆಂತಹ ಸುಂದರ ದೃಶ್ಯ? ಅದೇನು ಆ ಪರಮಾರ್ಥ ವಶ್ಯ? ಅದೊಂದು ಅನಿರ್ವಚನೀಯ ಸೌಂದರ್ಯ! ಅನುಪಮವಾದ ವಶ್ಯ! ಅದನ್ನು ಆ ನಿಟ್ಟಿನಲ್ಲಿ ಆ ಮಟ್ಟದಲ್ಲಿ ನಿಂತು ನೋಡುವವರಿಗೆ ತುಷ್ಟಿಯೇ ತೀರದು. ಆ ಪರಿಪುಷ್ಟ ಚೈತನ್ಯ ವನ್ನು ಆ ಪರಿಪುಷ್ಟ ಜೀವನವನ್ನು ಇನ್ನೂ ಬಳಿಗೆ ಹೋಗಿ ಬಳಿಯಲ್ಲಿದ್ದು ನಿರುಕಿಸುವ ಹಂಬಲ ಹೆಚ್ಚುತ್ತದೆ. ಆದರೆ ಅದಕ್ಕೆ ಆ ಶಕ್ತಿ ಬೇಕು ; ಆ ಭಕ್ತಿ ಬೇಕು. ಆ ಸಂಯಮ ಬೇಕು. ಆ ಚಿದ್ಭಾನು ಅದೊಂದು ಜೀವಂತದರ್ಶನ ಕಾವ್ಯ; ಮಹಂತ ಜೀವನ ದಿವ್ಯ.

ಆ ಚಿದ್ಭಾನುವಿನ ಬೆಳಗು ವ್ಯೋಮನಗಳಿಗೆ ನಿಲುಕದ ಬರೀ ಚಿದಾಕಾಶದ ಬೆಳ ಗಲ್ಲ. ಚಿತ್ತಭೂಮಿಯನ್ನು ಬೆಳಗಬಲ್ಲ ಬೆಳಗು. ಜತೆಗೆ ಚರಾಚರ ಪ್ರಪಂಚವನ್ನು ಬೆಳಗುವ ಬೆಳಗು. ಜನತೆಯ ಬಾಳ ಬಟ್ಟೆಯ ಬೆಳಗಬಲ್ಲ ಬೆಳಗು. ಅದು ಭಾವಕ್ಕೆ ಅನುಭಾವದ ಬೆಳಗನೀಯಬಲ್ಲುದು. ಬುದ್ಧಿಗೆ ಜ್ಞಾನದ ಪ್ರಕಾಶವ ಕೊಡಬಲ್ಲುದು. ಅಹಂಕಾರಕ್ಕೆ ನಿರಹಂಕಾರವ ನೀಡಬಲ್ಲುದು. ಚಿತ್ತಕ್ಕೆ ನಿಶ್ಚಂಚಲತೆಯ ನೆಲೆಗೊಳಿಸ ಬಲ್ಲುದು. ಕಾಯಕ್ಕೆ ಕ್ರಿಯೆಯ ಹಿಡಿಸಬಲ್ಲುದು. ಪ್ರಪಂಚದಲ್ಲಿಯೆ ಪಾರಮಾರ್ಥವ ತುಂಬಬಲ್ಲುದು. ಚಿದ್ಭಾನುವೆನಿಸಿದ ಆ ಸದಾಶಿವ ಶಿವಾಚಾರ್ಯರಿಗೆ ಈ ಎಲ್ಲ ಬೆಳಗ ನೊಳಗೊಂಡು ಹಮುಳಿಗರ ಕಂಡು ಸಂಬುವ ನಚ್ಚುವ ಹೃದಯವಿದೆ. ಅನ್ಯರ ಮೇಲೆ ಬರುವ ಆರೋಪಗಳ ಸತ್ಯಾಸತ್ಯತೆಯ ಒರೆದು ನೋಡುವ ದೃಷ್ಟಿಯಿದೆ; ದಯೆಯಿದೆ. ಅಲ್ಲದೆ ಅವರಿಗೆ ಅಗಾಧವಾದ ಸ್ಮರಣಶಕ್ತಿಯೂ ಇದೆ. ಒಮ್ಮೆ ಒಬ್ಬರನ್ನು ಕಂಡ ರಾಯಿತು ; ಅವರನ್ನು ಮತ್ತೆಂದೂ ಮರೆಯರು. ಅವರಲ್ಲಿ ದಾರ್ಶನಿಕ ದೃಷ್ಟಿಯಿದೆ. ಕವಿ ಹೃದಯವಿದೆ. ಯೌಗಿಕ ಶಕ್ತಿಯಿದೆ. ಯಮ ನಿಯಮಗಳಲ್ಲಿ ಆಸನಗಳಲ್ಲಿ ಪ್ರಾಣಾಯಾಮ ಪ್ರತ್ಯಾಹಾರಗಳಲ್ಲಿ ಛಲವಿದೆ ; ಬಲವಿದೆ. ಧಾರಣ-ಧ್ಯಾನಗಳಲ್ಲಿ ಒಲವಿದೆ ; ನಲಿವಿದೆ. ಸಮಾಧಿಗೇರುವ ಸ್ವಾತ್ಮಬಲವಿದೆ. ಅವರು ಏಕಾಂತ ಪ್ರಿಯರು. ನಿಗ್ರಹಾನುಗ್ರಹ ಸಮರ್ಥರು. ವಿನಯಶೀಲರು. ಶೀಲಲೋಲರು. ಸಹಜ ಲೀಲರು. ಶಾಂತರು. ಒಟ್ಟಾರೆ ಒಂದು ಮಾತಿನಲ್ಲಿ ಒಕ್ಕಣಿಸಬೇಕೆಂದರೆ ಅವರೊಬ್ಬ ಪರಮಾರ್ಥ ಪ್ರಭಾಕರರು. ಅವರ ಬಾಳೆಲ್ಲವೂ ಬೆಳಗು. ಬಾಳಬಯ ಸುವವರಿಗೆಲ್ಲ ಅವರೊಂದು ಹಿತವಾದ ಹಿರಿಬೆಳಗು ; ಇಹದ ಇರುಳಿನ ಚಿದ್ಭಾನು.

—ಶ್ರೀ ಜ. ಚ. ನಿ.

# ಕೈವಲ್ಯ ಕಲ್ಪತರು ; ಕಾರುಣ್ಯಾಮೃತ ಕಾಮಧೇನು.



ಅನ್ವರ್ಥನಾಮ—ಪರಮಾರ್ಥಧಾಮ ಸಖರಾಯ ಪಟ್ಟಣದ ಸದಾಶಿವ ಶಿವಾಚಾರ್ಯರು. ಈ ಪರಮ ಪೂಜ್ಯ ಸ್ವಾಮಿಗಳವರ ಜೀವನವು ಮಹಾತ್ಮರಂತೆ ತೀರ ಸಾಧಾರಣವಾದುದು, ಸರಳವಾದುದು-ಸ್ವಾರ್ಥ ನಿರಸನವಾದುದು.

ಅ. ಭಾ. ವೀರಶೈವ ಮಹಾಸಭೆ ಮತ್ತು ಶಿವಯೋಗ ಮಂದಿರ ಸಂಸ್ಥೆಯ ಸಂಸ್ಥಾಪಕರಾದ ಪರಮ ಪೂಜ್ಯ ಶ್ರೀಮನ್ನಿರಂಜನ ಪ್ರಣವಸ್ವರೂಪಿ ಲಿಂ|| ಕುಮಾರ ಮಹಾಸ್ವಾಮಿಗಳು, ಹಾನಗಲ್ಲು ಅವರ ಕೃಪೆಗೆ ಪಾತ್ರರಾದವರು. ಶಿವಯೋಗ ಮಂದಿರದಲ್ಲಿ ಸಂಸ್ಕೃತ ಶಿಕ್ಷಣಪಡೆದು, ವಿದ್ಯೆಯಲ್ಲಿ ಯೋಗದಲ್ಲಿ ಶೀಲಾಚರಣೆಯಲ್ಲಿ ಶಿವಪೂಜೆಯಲ್ಲಿ ನಿಷ್ಣಾತರು. ಸಕಲ ಮಾನವರಿಗೆ ಲೇಸನೆ ಬಯಸಿ ಕನ್ನಡದಲ್ಲಿ ಕೆಲವು ಗ್ರಂಥಗಳನ್ನು, ರಗಳೆಯ ಕಾವ್ಯವನ್ನು, ಸಂಸ್ಕೃತದಲ್ಲಿ 'ಕೈವಲ್ಯೋಪನಿಷದ್ಭಾಷ್ಯ'ವನ್ನು ಬರೆದು ಸಚೇತನರಾಗಿ ನಾಡಸಂಚಾರ ಧರ್ಮಪ್ರಚಾರ ಮಾಡುತ್ತ, ಯೋಗ್ಯ ಗುರುಗಳಾಗಿದ್ದಾರೆ; ನೀತಿ ಬೋಧಿಸುತ್ತ ನಿಜಗುರುಗಳಾಗಿದ್ದಾರೆ; ರೀತಿ ಶೋಧದಲ್ಲಿ ಪರ್ಯವಸಾನ ಪಡೆದಿದ್ದಾರೆ.

ತಮ್ಮ ಶೀಲಾಚರಣೆಯಿಂದಲೂ ಲಿಂಗಯೋಗಾಶಕ್ತಿಯಿಂದಲೂ ಶ್ರೀ ಗುರು ವಚನೋಪದೇಶವನಾಲಿಸಿದಾಗಳಹುದು ನರರಿಗೆ ಮುಕುತಿ || ಎಂಬ ನಿಜಗುಣ ಶಿವಯೋಗಿಗಳವರ ನೀತಿ-ರೀತಿಯನ್ನು ಹಿಡಿದು ಅವರದೇ ಆದ, ಷಡ್ದರ್ಶನವನ್ನು ಚೆನ್ನಾಗಿ ಅಭ್ಯಾಸ ಮಾಡಿದ ಹಾನಗಲ್ಲು ಕುಮಾರಸ್ವಾಮಿಗಳವರ ಸ್ಮಾರಕವಾಗಿಟ್ಟುಕೊಂಡು ಜಾತಿ ಮತಗಳ ನೆಣಿಸದೆ ಸಕಲ ಮಾನವರು ಸನ್ಮಾರ್ಗದಲ್ಲಿ ಸಾಗಲೆಂದು, ಸಂಘ ಸಂಸ್ಥಾಪಕರಾಗಿ ಕಳೆದ ಹನ್ನೆರಡು ವರ್ಷಗಳಿಂದಲೂ ಸತತವಾಗಿ ಶಿವಾನುಭವ ಸಮ್ಮೇಳನವನ್ನು ನಡೆಸುತ್ತಾ ಆಧ್ಯಾತ್ಮಿಕ ತತ್ತ್ವಪ್ರಚಾರ, ಧಾರ್ಮಿಕ ಸಾಹಿತ್ಯ ಪ್ರಕಟನೆ ಮುಂತಾದ ಕಾರ್ಯಗಳಲ್ಲಿ ನಿರತರಾಗಿ ವೈರಾಗ್ಯಶಾಲಿಗಳಾದಂಥ

ಗುರು ಜಂಗಮರನ್ನು ಅಗ್ರಗಣ್ಯರಾದ ಪಂಡಿತರನ್ನು ಸಾಹಿತ್ಯ ಸಂಸ್ಥಾಪಕರನ್ನು ಆಹ್ವಾನಿಸಿಕೊಂಡು ಅವರ ನಿಜಬೋಧೆಯ ಸವಿಮುತ್ತುಗಳನ್ನು ವರ್ಷಂಪ್ರತಿ ಯಲ್ಲಿಯೂ ಸುರಿಸುತ್ತಾಯಿದ್ದಾರೆ.

ಕೈವಲ್ಯ ಕಲ್ಪತರುವಾಗಿ, "ಕಾರುಣ್ಯಾಮೃತ ಕಾಮಧೇನು"ವಾಗಿ ಜನರ ಬದುಕು ಬಾಳನ್ನು ಬೆಳಸಿ ಬಲಿಸುತ್ತಿದ್ದಾರೆ. ಕೈವಲ್ಯೋಪನಿಷತ್ ಭಾಷ್ಯವನ್ನು ಬರೆದು ಜನತೆಗೆ ಕರುಣಿಸಿ ಕೈವಲ್ಯ ಕಲ್ಪತರುವಾಗಿರುವಂತೆ, ದೀಕ್ಷಾವಿಧಿ ಪೂಜಾವಿಧಿ ಅನುಗ್ರಹ ವಿಧಿಗಳ ಸರ್ವರಿಗೆ ಕರುಣಿಸಿ ಕಾರುಣ್ಯಾಮೃತ ಕಾಮಧೇನುವೂ ಆಗಿ ದಾರೆ. ಜತೆಗೆ ತಾವು ಸ್ಥಾಪಿಸಿದ ಶಿವಾದ್ವೈತ ತತ್ತ್ವಪ್ರಚಾರ ಸಮಿತಿಯ ಅಂಗ ವಾಗಿ ಶಿವಾನುಭವ ಸಮ್ಮೇಳನವ ನಡೆಸುತ್ತ ಇನ್ನೂ ಹೆಚ್ಚಿನ ಕಾರುಣ್ಯವ ತೋರು ತ್ತಿದ್ದಾರೆ, ಅಖಂಡ ಅಮೃತಧಾರೆಯನೆರೆಯುತ್ತಿದ್ದಾರೆ. ಯಾರೂ ಬರೆಯದ ಕೈವಲ್ಯೋಪನಿಷತ್ತಿಗೆ ಭಾಷ್ಯವ ಬರೆದು ಕೈವಲ್ಯವನ್ನು ಕೈಗೆ ತಂದಿರಿಸಿದಾರೆ. ದೀಕ್ಷೆಯ ಕರುಣಿಸಿದರೆ ಪೂರ್ಣ ತಮ್ಮ ಕಾರುಣ್ಯಾಮೃತವನು ಶಿಷ್ಯನ ಹೃದಯ ಪಾತ್ರೆಯಲ್ಲಿ ಕರೆದು ತುಂಬುವ ಕಾಮಧೇನು ಇವರು.

ನಾವೆಲ್ಲ ಅಜ್ಞಾನಿಗಳು; ಅಂಧರು. ನಾವು ಬರೀ ಹೊರಗಿನ ರೂಪವನ್ನೆ ನೋಡುತ್ತೇವೆ. ಈ ನಾಮರೂಪಗಳು ಸ್ಥಿರವಲ್ಲ; ನಿದರ್ಶನವಾಗಿ,

ಜನಕಮಹಾರಾಜನ ಸಭೆ ಸೇರಿರುವಾಗ ಹಸ್ತಪಾದಗಳು ಸೊಟ್ಟಾಗಿ ಕಣ್ಣು ಗುಡ್ಡೆಗಳು ದಪ್ಪಾಗಿ ಚರ್ಮಸುಕ್ಕಾಗಿ ತುಟಿಗಳು ಸೀಳಾಗಿ ಬಾಯಲ್ಲಿ ಸೊಲ್ಲು ಸುರಿಸುತ್ತ ಮೂಗು ಚಪ್ಪಟೆಯಾಗಿ ನೀರು ಸುರಿಸುತ್ತ ಆಳು ಗಿಡ್ಡಾಗಿ ಆಕಾರ ವಿಕಾರ ವಾಗಿ ಅದರುತ್ತ ಆಗಮಿಸುತ್ತಿರುವ ಅಷ್ಟಾವಕ್ರ ಮಹಾಋಷಿಗಳನ್ನು ಕಂಡು ಸಭೆಯ ಜನರೆಲ್ಲರೂ ಗೊಳ್ಳೆಂದು ನಕ್ಕರು; —ಇತ್ತ ಮಹಾಋಷಿಗಳು ಗಟ್ಟಿಯಾಗಿ ನಕ್ಕರು; ಇವೆರೆಡು ಗುಂಪುಗಳ ನಗೆಗಳನ್ನು ಕಂಡು ರಾಜನಿಗೆ ಆಶ್ಚರ್ಯವಾಯಿತು. ಸಂಶಯಾತ್ಮ ದಿಂದ ಸಭಿಕ ಜನರನ್ನು ಕುರಿತು ಏತಕ್ಕೆ ನೀವೆಲ್ಲರು ನಕ್ಕದ್ದು–ಎಂದು ಕೇಳಿದರು. ಅದಕ್ಕೆ ಅವರೆಲ್ಲ ಅವನ ವಿಕಾರರೂಪನ್ನು ಕಂಡು ಎಂದರು; ಸರಿ ಎಂದು, ಮತ್ತೆ ಇತ್ತ ಆ ಮಹಾಋಷಿಗಳನ್ನು ಕುರಿತು ಏತಕ್ಕೆ ನೀವೆಲ್ಲರು ನಕ್ಕದ್ದು–ಎಂದು ಕೇಳಿದರು; ಅದಕ್ಕೆ ಆ ತಪಸ್ವಿಗಳ ಪ್ರಸಾದವಾಣಿಯು ಹೀಗೆಂದಿತು: ತನ್ನಿರವ ನರಿಯದೆ, ನಿಜವ ತಿಳಿಯದೆ, ಹೃದಯದಂದವ ಕಾಣದೆ, ಆನಂದವ ಅಳಿಯದೆ, ಕಂಡ ಮಾಂಸಗಳ ಕಂಡು ನಕ್ಕ ಕಮ್ಮಾರರ ಕಂಡು ನಕ್ಕೆವು; ಮೇಲೆ ಹೊದ್ದಿರುವ ಚರ್ಮವ ಕಂಡು ನಕ್ಕ ಚಮ್ಮಾರರ ಕಂಡು ನಕ್ಕೆವೆಂದರು. ಇನ್ನು ಮುಂದೆ ಹೀಗೆ ಇವರ ವಾದಗಳು ನಡೆಯುತ್ತ ಇದಿರಲಿ.

ಸತ್ಯ ಅಸತ್ಯರೆಂಬ ಸ್ತ್ರೀಯರು ಹೊಳೆಯ ದಡದಲ್ಲಿ ತಮ್ಮ ಬಟ್ಟೆಗಳನ್ನು ಕೂಡಿ

ಇಟ್ಟು ಸ್ನಾನ ಮುಗಿಸಿಕೊಂಡು ಬಂದು ಸತ್ಯಳ ಬಟ್ಟೆಯನ್ನು ಅಸತ್ಯಳು ಅಸತ್ಯಳ ಬಟ್ಟೆಯನ್ನು ಸತ್ಯಳು ಉಪಯೋಗಿಸುತ್ತಾರೆ.

ಈ ಸಂಕ್ಷಿಪ್ತವಾದ ಸಣ್ಣ ಕಥೆಗಳಲ್ಲಿ ನಮ್ಮ ಭವಮಾಲೆಗೆ ಕಾರಣವಾದ ಅಜ್ಞಾನಾಂಧಕಾರದ ಮಬ್ಬನ್ನು ಜನಕಮಹಾರಾಜನ ಸಭಿಕರಲ್ಲಿ ಕಾಣಬಹುದಲ್ಲವೆ ?

ಕಾರಣಕ್ಕೆ ಕಾರಣವಾದ, ಬೆಳಕಿಗೆ ಮಹಾ ಬೆಳಕಾದ ಆ ದಿವ್ಯ ಜ್ಯೋತಿಯನ್ನು ಆ ಮಹಾ ಬೆಳಕನ್ನು ಆ ಮಹಾ ಜ್ಞಾನವನ್ನು, ಅಷ್ಟಾವಕ್ರ ಮಹಾಋಷಿಗಳ ಆತ್ಮಜ್ಞಾನಜ್ಯೋತಿಯನ್ನು ಒಳಗಣ್ಣಿನಿಂದ ಕಾಣಬಹುದಲ್ಲವೆ? ಸತ್ತನ್ನು ಅಸತ್ತೆಂದು ಅಸತ್ತನ್ನು ಸತ್ತೆಂದು ಭಾವಿಸಿ ವ್ಯವಹರಿಸುತ್ತಿರುವ ನಮ್ಮ ಜೀವನದ ಬಾಳನ್ನು ಸತ್ಯ ಅಸತ್ಯ ಸ್ತ್ರೀಯರ ಬಟ್ಟೆಯಿಂದ ಕಾಣಬಹುದಲ್ಲವೆ? ಇವಕ್ಕೆಲ್ಲ ಕಾರಣ ಅಜ್ಞಾನ, ಈ ಅಜ್ಞಾನವನ್ನು ಹೋಗಲಾಡಿಸಿಕೊಳ್ಳಬೇಕಾದರೆ ಇಂಥಾ ಮಹಾಪಾದದಲ್ಲಿ ಶರಣು ಹೋದರೆ ಅಜ್ಞಾನ ಅಹಂಕಾರಗಳನ್ನು ಹೋಗಲಾಡಿಸಿ ತಮ್ಮ ಲಿಂಗಯೋಗದ ತಪಶ್ಶಕ್ತಿಯಿಂದ, ಶಿಷ್ಯರ ಅಂಗದಲ್ಲಿ ಲಿಂಗ ಪ್ರತಿಷ್ಠೆಯನ್ನು ಮಾಡಲು ಕೈವಲ್ಯವನ್ನು ಕರುಣಿಸಲು ಯೋಗ್ಯರಾದವರಿವರು, ಅಗ್ರಗಣ್ಯರಿವರು.

ಒಳಗೆ ಶೋಧಿಸಿ ಹೊರಗೆ ಶುದ್ಧವಿಸಿ,
ಒಳ ಹೊರಗೆಂಬ ಉಭಯ ಶಂಕೆಯ ಕಳೆದು,
ಸ್ಫಟಿಕದ ಶಲಾಕೆಯಂತೆ ತಳವೆಳಗು ಮಾಡಿ,
ಸುಕ್ಷೇತ್ರವನರಿದು ಬೀಜವ ಬಿತ್ತುವಂತೆ,
ಶಿಷ್ಯನ ಸರ್ವ ಪ್ರಪಂಚ ನಿವೃತ್ತಿಯಂ ಮಾಡಿ,
ನಿಜೋಪದೇಶವನಿತ್ತು, ಆ ಶಿಷ್ಯನ
ನಿಜದಾದಿಯನ್ನೈದಿಸುವನೀಗ ಜ್ಞಾನಗುರು.
ಆಸಹಜಗುರುವೀಗ ಜಗದಾರಾಧ್ಯರು ;
ಅವರ ಶ್ರೀ ಪಾದಕ್ಕೆ ನಮೋ ನಮೋ ಎಂಬೆ
ಕಾಣಾ ಚನ್ನಮಲ್ಲಿಕಾರ್ಜುನಾ.

ಎಂದು ಅಂದಿರುವ ಮಹಾದೇವಿ ಅಕ್ಕಗಳು ಆರಿಸಿದಂತೆ ಇರುವ ಶ್ರೇಷ್ಠ ಸದ್ಗುರುಗಳಿವರು. ಇವರಿಗೆ ಕಾರುಣ್ಯಾಮೃತ ಕಾಮಧೇನು ಎಂಬ ಅನ್ವರ್ಥನಾಮ ಸಲ್ಲತಕ್ಕದ್ದು.

ಕಾಮಧೇನುವಿನ ಅಮೃತವು ಜಡವಾದರೂ ಮಾತೃವಿಲ್ಲದ ಮಕ್ಕಳನ್ನು ಮಾತೃವಾಗಿ ಪೋಷಿಸುವುದು ; ಸಾಧಕರು ಸವಿದರೆ ಸತ್ವಗುಣವನ್ನು ವ್ಯಕ್ತ ಪಡಿಸುವುದು ; ತುಪ್ಪವಾಗಿ ಮೆದುಳಿನ ಶಕ್ತಿಯನ್ನು ಹೆಚ್ಚಿಸುವುದು ; ಇಷ್ಟೇ ಏನು, ಶಿವನಿಗೂ ಪ್ರಿಯವಾಗಿ ಅಭಿಷೇಕಕ್ಕೆ ಸಲ್ಲುವುದು. ಕೊಂಚ ಕಾಲವಲ್ಲಿ ಕೆಡುವ ಈ ಅಮೃತಕ್ಕೆ ಇಷ್ಟು ಶಕ್ತಿಯಿರುವಾಗ ಶ್ರೀಗುರು ಕಾರುಣ್ಯಾಮೃತವ ಸವಿದರೆ

ಅದೆಂತಾ ಶಕ್ತಿವಂತರಾಗಬಲ್ಲೆವು ? ಸ್ತುತಿನಿಂದೆಗೆ ಹಿಗ್ಗಿತಗ್ಗದಂತಿರಬಲ್ಲೆವು ? ಆ ನಿಜಾನಂದದಲ್ಲಿ ನಿಲ್ಲಬೇಕೆಂಬ ಭಕ್ತರು, ಈ ನಿಜ ಗುರುವಿನ ಕರುಣಕ್ಕೆ ಪಾತ್ರರಾಗಿ ಕರಣಂಗಳ ಕಲಿತನವ ಕಲಿಯದೆ, ಚೇತನದ ಕಲಿತನದಲ್ಲಿ ಬಾಳಬೇಕು; ಭಾವ ಭಕ್ತಿಯೂ ಬೆಳೆಯಬೇಕು. ತಪವನಾಚರಿಸಿ ತನುಭಕ್ತರಾಗಿ ಮನಭವಿಯಾದರೆ ಫಲವೇನು ? ಮಹಾದೇವಿ ಅಕ್ಕಗಳು 'ನಿಮ್ಮ ಮಂಡೆಗೆ ಹೂವ ತಾಹೆನಲ್ಲದೆ ಹುಲ್ಲ ತಾರೆನೆಂದು'—ಹೇಳಿದಂತೆ ಬಾಳಗಲಿಯಬೇಕು. ಲೋಕದ ಆವ ಅಡೆತಡೆಗಳಿಗೂ ಅಂಜದೆ ಸತ್ಯಕ್ಕೆ ಸಾವಿಲ್ಲೆಂದು ಸಾಗುತ್ತಿರುವಾಗ ಅಲ್ಲಿಯು ಬರುವ ಎಡರು ತೊಡರುಗಳನ್ನು ಕುರಿತು ಪರಮಾತ್ಮನಲ್ಲಿ ಹೀಗೆ ಪ್ರಾರ್ಥಿಸುತ್ತಾರೆ, ಓ ಪರಶಿವನೆ, ಓ ಪರಮಾತ್ಮನೆ ನಿನ್ನೊಡನಾಟ ನಿನ್ನರಿತ ಶರಣರಿಗೊಂದು ಬಗೆಯಾಗಿ, ಲೋಕದ ಜನರಿಗೆ ಮತ್ತೊಂದು ಬಗೆಯಾಗಿ ಕಾಣುವುದು. ಲೋಕದ ಜನರು,

ಕಾಲಿಲೊದೆದು ಜಡಿದು ಬಡಿವರಯ್ಯ. ಭಕ್ತಿಯೈದಲೆಂದೆನ್ನ
ಜರಿವರಯ್ಯ, ನುಡಿವರಯ್ಯ, ಕೂಡಲಸಂಗನ ಶರಣರೊಡೆಯರಾಗಿ !

ಶರಣರ ಸತ್ಯ ಸಂಕಲ್ಪದ ಶಾಸನವಿದು. ಇದರಿಂದ ಜೀವನಕ್ಕೆ ಇನ್ನೂ ಹೆಚ್ಚಿನ ಮೆರಗು ಮೈಗೂಡಿ ಬರುತ್ತದೆ. ಇಂಥವರ ಸಂಗವಲ್ಲದೆ ಲೋಕದವರ ಸಂಗ ಸಮನಿಸದು: ಏಕೆಂದರೆ—

ಅತಿಭಕ್ತರಾದವರ ನೆರೆಬೇಡ, ಹೊರೆಬೇಡ, ದಾರಿ
ಸಂಗಡಬೇಡ, ದೂರ ನುಡಿಯುಲು ಜೇಡ, ಕೂಡಲ ಸಂಗನ
ಶರಣರಲ್ಲಿ ಅಚ್ಚಲಿಂಗೈಕ್ಯಂಗೆ ತೊತ್ತಾಗಿಪ್ಪುದು ಕರಲೇಸಯ್ಯ.

ಎಂದ ಈ ಅಣ್ಣನವರ ಸಂದೇಶವನ್ನು ಮರೆಯಬೇಡ ಮನವೆ; ಓ ಎನ್ನ ಗಿಳಿಯೆ; ಓ ಎನ್ನ ಚಿನ್ನರನ್ನವೆ ಕಂಡಲ್ಲಿ ಕರುಣಾಕರನೆಂದು ನೆರೆನಂಬಿ ಶರಣೆಂಬರು. ಅಲ್ಲಿ ಸುಖ ಸಮನಿಸದು. ಆ ಲೋಕೇಶ್ವರನು ಜಾಲಗಾರನಾಗುವನು. ದೂರಸರಿವನು. ಭಕ್ತಿಯ ಹುಚ್ಚು ಲೋಕಕ್ಕೆ ವಿಲಕ್ಷಣವಾಗುವುದು, ಲೋಕಭಕ್ತರ ಭಾವವನರಿಯದು; ಭರವನರಿಯದು, ಭಾವಾತೀತನಲ್ಲಿರುವ ಆಸಕ್ತಿಯ ಅರಿಯದು; ಅಳಲಿಕೆಯ ಅರಿಯದು, ತಮತಮಗೆ ಕಂಡಂತೆ, ಕಟು ವಚನವಾಡುವುದು ಕಟಕಿಯಾಡುವುದು ಇವರಿಗಾಟ; ಆತ್ಮಸಾಧಕರಿಗೆ ಅಪಾರ ಸಂಕಟ !

ಇವರಲ್ಲಿ ಯಾರಿಗೂ ಕನಿಕರವಿಲ್ಲದಿರುವುದನ್ನು ಕಂಡು ತನ್ನಾತ್ಮ ಜೊತೆಯ ಒಡಗೂಡಿ ಹೇಳುತ್ತಾರೆ; ಕೇಳು ಕೆಳದಿ !

ಬಂಜೆ ಬೇನೆಯ ನರಿಯಳು.
ಬಲದಾಯಿ ಮುದ್ದು ಬಲ್ಲಳೇ ?
ನೊಂದ ನೋವ ನೋಯದವರೆತ್ತ ಬಲ್ಲರು ?

ಚೆನ್ನಮಲ್ಲಿಕಾರ್ಜುನ, ನೀನಿರಿದಲಗು ಒಡಲಲ್ಲಿ ಮುರಿದು
ಹೊರಳುವಳ ನೀವೆತ್ತ ಬಲ್ಲಿರೇ ಎಲೆ ತಾಯಿಗಳಿರಾ ?
ಒಮ್ಮೆ ಕಾಮನ ಕಾಲ ಹಿಡಿವೆ.
ಮತ್ತೊಮ್ಮೆ ಚಂದ್ರಮಂಗೆ ಸೆರಗೊಡ್ಡಿ ಬೇಡುವೆ.
ಸುಡಲೀ ವಿರಹವ, ನಾನಾರಿಗೆ ಧೃತಿಗೆಡುವೆ ?
ಚೆನ್ನಮಲ್ಲಿಕಾರ್ಜುನ ದೇವನೆನ್ನ ನೊಲ್ಲದ ಕಾರಣ
ಎಲ್ಲರಿಗೆ ಹಂಗಿತಿಯಾದೆನವ್ವಾ !

ಎಂಬುದು ನಿಜಭಕ್ತಿ ಹೃದಯುದ ಕೊರಗು; ಅವಸ್ಥೆ. ಲೋಚನವಿಲ್ಲದ ಲೋಕದ ಹಂಗಿತಿಗೆ ಗುರಿಯಾಗದೆ ಇರಲಾಗುವುದಿಲ್ಲ. ಅಕ್ಕನಂಥವರೇ ಆಗಿರುವಾಗ ಉಳಿದವರ ಪಾಡೇನು ! ತತ್ತ್ವವು ಲೋಕದ ಜನಕ್ಕೆಲ್ಲ ತಿಳಿಯದು. ನಿರಾಕಾರಕ್ಕೂ ಸಾಕಾರಕ್ಕೂ ಬೇಧವಿಲ್ಲ. ಆ ನಿರಾಕಾರವೇ ಸಾಕಾರವಾಗಿ ಶ್ರೀಗುರುವಾಗಿ ಶಿಷ್ಯರ ಭಕ್ತರ ಉದ್ಧಾರಕ್ಕಾಗಿ ಬಂದಿರುವಾಗ ಭೇದವುಂಟೆ? ಇಲ್ಲವಾಗಿ ಶ್ರೀ ಗುರುಕಾರುಣ್ಯಾಮೃತವ ಪಡೆವುದೇ ಭಕ್ತರ ಬಾಳ ಲೇಸು, ಅದೇ ಬದುಕು. ಅದಕ್ಕಾಗಿ ಅವರ ಜೀವನವೆಲ್ಲ ಅಲ್ಲಿಯೇ ಇರುತ್ತೆ! ಈ ಲೋಕದ ವಿಚಾರವೆ ಅವರಿಗೆ ಬೇಕಿರುವುದಿಲ್ಲ:

ಗಟ್ಟಿದುಪ್ಪ ತಿಳಿದುಪ್ಪಕೆ, ಭೇದವುಂಟೇ ?
ದೀಪಕೆ, ದೀಪ್ತಿಗೆ ಭೇದವುಂಟೇ ಅಯ್ಯ!
ಆತ್ಮಕೆ, ಅಂಗಕೆ, ಭೇದವುಂಟೇ ಅಯ್ಯ ?
ಎನ್ನಂಗವನು ಶ್ರೀಗುರು ಮಂತ್ರವ ಮಾಡಿ ತೋರಿದನಾಗಿ,
ಸಾವಯುವಕೆ ನಿರವಯುವಕೆ ಭಿನ್ನ ವಿಲ್ಲವಯ್ಯ !

ನೀನೊಲಿಯದ ಸುಖವೇ ದುಃಖವೆಂದು ; ನೀನೊಲಿದ ದುಃಖವೇ ಸುಖವೆಂದು ಅಕ್ಕಗಳು ಕೆಚ್ಚು ಹೃದಯದಿಂದ ಹೀಗೆ ಹೇಳುತ್ತಾರೆ.

ನಿನ್ನರಿಕೆಯ ನರಕವೇ ಮೋಕ್ಷ ನೋಡಯ್ಯ !
ನಿನ್ನರಿಯದ ಮುಕ್ತಿಯೇ ನರಕ ಕಂಡಯ್ಯ.
ನೀನೊಲಿದ ದುಃಖವೇ ಪರಮ ಸುಖ ಕಂಡಯ್ಯ !
ಚನ್ನಮಲ್ಲಿಕಾರ್ಜುನಯ್ಯ ನೀ
ಕಟ್ಟಿ ಕೆಡಹಿದ ಬಂಧನವೇ ನಿರ್ಬಂಧನ ವೆಂದಿಪ್ಪೆನು.

ಎಂದು ಭಾವ ತುಂಬಿದ ಭಕ್ತಿಯಿಂದ ಕೆಚ್ಚೆದೆಯಿಂದ ಪ್ರಾರ್ಥಿಸುತ್ತಾರೆ ; ಆದರಿಂದ ಶ್ರೀಗುರು ಕಾರುಣ್ಯವೇ ಕೈವಲ್ಯ. ಅದಕ್ಕಾಗಿ ಶ್ರೀ ಗುರುವನ್ನು ಅಂಗಲಾಚುತ್ತ ಆರಾಧಿಸೋಣ ಬನ್ನಿ. ಅಂತಃಕರಣದಿಂದ ಹೀಗೆ ಹಾಡೋಣ ಬನ್ನಿ!

ಸಮಾಜ ಸಂಜೀವಿನಿ ಸಹಜ ಶಿವಯೋಗಿ ಸದಾಶಿವರನ್ನು,
ಸಮತಾವಾದಿ ಸಮನ್ವಯ ದೃಷ್ಟಿ ಸದಾಶಿವರನ್ನು,
ಷಟ್‌ಸ್ಥಲ ಬ್ರಹ್ಮಿಗಳಾಗಿ ಬಿಚ್ಚಿ ಬೇರಿಲ್ಲದಿಪ್ಪ ಸಚ್ಚಿದಾನಂದ
ಸದಾಶಿವರನ್ನು

ಶೀಲಾಚಾರಿ ವೀರ ವೈರಾಗ್ಯ ಸದಾಶಿವರನ್ನು,
ಭಕ್ತರ ಸಿರದರಮನೆಯ ವಾಸಿ ಸದಾಶಿವರನ್ನು,
ಕೈವಲ್ಯದ ಕಲ್ಪತರು, ಕಾರುಣ್ಯಾಮೃತ ಕಾಮಧೇನು–
ಶ್ರೀ ಸದಾಶಿವರನ್ನು.

ತೊಟ್ಟಗುಣವ ತೊಡೆಯಬಹುದು;
ಹುಟ್ಟುಗುಣ ತೊಡೆಯಲಾಸಲ್ಲ – ಎಂಬರು.

ಆದರೆ—ಕಡು ಕಷ್ಟವಾದ ಹುಟ್ಟುಗುಣವ ತೊಡೆದು ಜಡಮತಿಗೆ ಚೇತನವನಿತ್ತು ಪುಟ್ಟ ಪುಟ್ಟ ಸಾಹಿತ್ಯ ಸೇವೆಯನ್ನು ಸಲ್ಲಿಸುವಂತೆ ಕುರುಣಿಸಿದ ಶ್ರೀಗುರು ಮಹಾ ಪಾದಕ್ಕೆ ಕಿರಿಯಳ ದೀ. ದಂ. ನಮಸ್ಕಾರಗಳು.

—ಶಂಕರಮ್ಮ, ಬೆಂಗಳೂರು.

———::———

# ನನ್ನ ಜೀವನ ದರ್ಶನ ಅಲ್ಲಾಗಿತ್ತು.



ಭಾರತೀಯ ಯುವಕ ಕೋಟಿಯ ಬಹುತೇಕ ಯುವಕರಲ್ಲಿ ಧರ್ಮ, ದೇವರು, ಗುರು–ಶಬ್ದಗಳ ಬಗ್ಗೆ ಇರುವ ಅಸ್ಥಿರ ಭಾವನೆ ನನ್ನನ್ನೇನೂ ಬಿಟ್ಟಿರಲಿಲ್ಲ. ವಿಚಾರಗಳ ಹೊಯ್ದಾಟದಲ್ಲಿ ಒಮ್ಮೆ ಆಸ್ತಿಕನಾಗಿ ಒಮ್ಮೆ ನಾಸ್ತಿಕನಾಗಿ ಬಾಳುವ ಭಾವ ತಳೆಯುತ್ತಿದ್ದ ನನಗೆ ಎಲ್ಲವೂ ಸಮಸ್ಯಾಮಯವಾಗಿಯೇ ಕಾಣುತ್ತಿತ್ತು.

ಒಂದೆಡೆ—

ವಿಚಿತ್ರ ಸಾಧನೆಯ ವಿಜ್ಞಾನ!
ವಿವಿಧ ನೀತಿಯ ರಾಜಕೀಯ!
ಸಂಸಾರದ ಸುಂದರ ಜೀವನ!
ಸಂಪತ್ತಿನ ಸೌಖ್ಯಾದಾಯ!

ಮತ್ತೊಂದೆಡೆ—

ಅಲೌಕಿಕ ಆಧ್ಯಾತ್ಮ ಜ್ಞಾನ!
ಅನಂತ ತತ್ವಗಳ ದರ್ಶನ!
ಸನ್ಯಾಸಿಗಳ ತ್ಯಾಗಮಯ ಜೀವನ!

ಈ ಎರಡು ಗುಂಪುಗಳ ಮಧ್ಯೆ ಸಿಲುಕಿದ್ದ ನನಗೆ ನಿರ್ದಿಷ್ಟ ನಿಲುವು ನಿಲುಕಿರಲಿಲ್ಲ!

ವೇಷ, ಭಾಷೆ, ಜೀವನ, ದರ್ಶನಗಳಲ್ಲಿ ವಿಶಿಷ್ಟ ನಾಗರಿಕತೆಯು ಬೆಳೆದಿರುವ ಈ ಕಾಲದಲ್ಲಿ ಸ್ವಾಮಿಗಳು, ಮಠಗಳು, ಧಾರ್ಮಿಕ ಸಮ್ಮೇಳನಗಳು ತೀರ ವಿಲಕ್ಷಣವೆಂದು ಹೇಳಿ ನಗುತ್ತಿದ್ದ ನನ್ನ ಮಿತ್ರರ ಜೊತೆಗೆ ನಾನೂ ನಗದಿರಲಿಲ್ಲ. ಆ ನಗುವಿನಲ್ಲಿ ಜೀವನದ ಮತ್ತೊಂದು ಮುಖವನ್ನು ನೋಡಲಾಗದೆ

ಈ ಆಶ್ರಮಗಳು,
ಸ್ವಾಮಿಗಳು,
ಮಠಗಳು,
ಆಧ್ಯಾತ್ಮ

—ಇವೆಲ್ಲ ಅವಾಸ್ತವ, ಅಪ್ರಾಕೃತವೆಂದೇ ನಾನು ನಂಬಿದ್ದೆ.

ನನ್ನ ನಂಬಿಕೆ ಬರಡಾಗಿ ಬಯಲಾಗುವ ಸನ್ನಿವೇಶ, ಸಮಯವೊಂದು ಒದಗಿತು.

ಒಮ್ಮೆ ನನ್ನ ಮಿತ್ರನೊಂದಿಗೆ ಗಿರಿಯಾಪುರಕ್ಕೆ ಹೋಗಿದ್ದೆ. ಸಂಸಾರಿ ಮಿತ್ರರ ಸತ್ಕಾರ ಸುಖವಾಗಿ ನಡೆಯಿತು.

ಆ ಮೊದಲು ಅಲ್ಲೇ ಬಳಿಯಲ್ಲಿ ಆಶ್ರಮವೊಂದು ಇರುವುದಾಗಿ ಕೇಳಿದ್ದೆ. ಆಶ್ರಮ, ಆಧ್ಯಾತ್ಮಗಳೆಂದರೆ ಅಷ್ಟಕ್ಕಷ್ಟೇ ಇದ್ದ ನನ್ನನ್ನು ಅಂದು ಅದಾವುದೋ ಮಾಂತ್ರಿಕ ಶಕ್ತಿ ಆಶ್ರಮವನ್ನು ನೋಡಿ ಬಾರೆಂದು ಪ್ರೇರೇಪಿಸುತ್ತಿತ್ತು.

ಗೆಳೆಯರೊಡನೆ ನನ್ನ ಬಯಕೆಯನ್ನು ಅರಿಕೆಮಾಡಿಕೊಂಡೆ. ಸಂತೋಷದಿಂದ ಅವರು ನನ್ನನ್ನು ಆಶ್ರಮದತ್ತ ಕರೆದೊಯ್ದರು.

ಆಶ್ರಮ ಹತ್ತಿರವಾಗುತ್ತಿತ್ತು,
ಹೃದಯವೇಕೋ ನಡುಗುತ್ತಿತ್ತು.
ಭಾವವೇಕೋ ಬದಲಿಸುತ್ತಿತ್ತು,
ಆವುದೋ ಭಯ ಆವರಿಸಿತ್ತು.

ಆಶ್ರಮ ದರ್ಶನಮಾಡಲು ಭಯವಾಯಿತೆಂದರೆ ಕೇಳಿದವರು ನಕ್ಕಾರು. ಆದರೂ ನಾನು ಭಯಗೊಂಡೆ. ಹೊರಟಾಗಿನ ಹುಮ್ಮಸು ಹರಿದು ಹೋಗಿತ್ತು. ನನ್ನಲ್ಲೇನೋ ದೋಷವಿರಬೇಕೆಂಬ ಅರಿವು ನನಗಾಗಲೇ ಆಗತೊಡಗಿತ್ತು.

ಹೊರಟಾಗ ಬಹಳ ಯೋಚನೆ ಮಾಡಿದ್ದೆ. ಗುರುಗಳೊಡನೆ ಧರ್ಮ, ಕರ್ಮ ಗಳ ಬಗ್ಗೆ ಬಹಳ ಚರ್ಚಿಸಬೇಕೆಂದಿದ್ದೆ. ಪ್ರಶ್ನೆಗಳ ಮಾಲೆಯನ್ನೇ ಕಟ್ಟಿಕೊಂಡಿದ್ದೆ. ಆದರೆ ಬರಬರುತ್ತಾ ಒಂದೊಂದೇ ಪ್ರಶ್ನೆಗಳು ಮಾಲೆಯಿಂದ ಕಳಚಿಹೋಗುತ್ತಿರುವಂತೆ ಕಂಡಿತು.

ಏಕೆ, ಹೀಗೆ?

ನನ್ನ ಈ ಮೊದಲ ದೃಷ್ಟಿಕೋನಕ್ಕೆ ಸಾಣೆಹಿಡಿದ ಅಲ್ಲಿಯ ಪ್ರಶಾಂತ ಪ್ರಕೃತಿ ನನ್ನನ್ನು ಯಾವುದೋ ಅವ್ಯಕ್ತ ಸ್ವರೂಪದಲ್ಲಿ ತೇಲಿಸಲಾರಂಭಿಸಿತ್ತು.

ಮಲೆನಾಡ ತಾಯ ಹೃದಯದಂತಿರುವ ಚಿಕ್ಕಮಗಳೂರು-ಜಿಲ್ಲೆಯ ಕಾಫಿ, ಏಲಕ್ಕಿಗಳ ಮಾಲೆ ಧರಿಸಿ ಬತ್ತದ ತೆನೆಗಳ ಬಾಣವನ್ನು ಕಬ್ಬಿನ ಜಲ್ಲೆಯ ಬಿಲ್ಲಿನಲ್ಲಿಟ್ಟು ಹೂಡಿ ಸಾಸಿರ ಸಾಸಿರ ಬಿರಿಮುಗುಳ ಮೂಡಿದ ಚಿಗುರಿನ ಹಸಿರ ಮುಡಿಯನ್ನುಟ್ಟು ಕರ್ಣಾಟಕವನ್ನೇ ಆಕರ್ಷಿಸುತ್ತಿರುವ ಮಲೆನಾಡ ದೇವಿಯ ಸಿರಿಗರ್ಭದಲ್ಲಿ ರಾರಾಜಿಸುತ್ತಿರುವ ಗಿರಿಯಾಪುರದ ಬಳಿ ಈ ಗುರುಕುಮಾರಾಶ್ರಮ.

ಆಶ್ರಮ ತಲ್ಪಿದೆವು.

ಈಗೇನೋ ಮನಸ್ಸಿಗೆ ತುಸು ಶಾಂತಿ ಸಮಾಧಾನ. ಭಾವಿಯ ಬಳಿ ಹೋಗಿ ಕೈಕಾಲು ತೊಳೆದು ಗುರುಗಳ ದರ್ಶನಕ್ಕೆ ಕಟ್ಟಡದ ಮೇಲಟ್ಟಕ್ಕೆ ಹೋದೆವು.

ಶುಭ್ರ ಕಾಷಾಯವಸ್ತ್ರಧಾರಿ ಸ್ವಾಮಿಗಳವರು ಇಳಿಜಾರು ಮೇಜೊಂದರ್ದ ಬಳಿ ಏನನ್ನೋ ಬರೆಯುತ್ತಾ ಕುಳಿತಿದ್ದರು. ನೋಡಿದೆ. ನೋಡುತ್ತಿದ್ದಂತೆ ನನ ಅರಿವೇ ನನಗಿಲ್ಲವಾಯಿತು.

ಅಲ್ಲಿ ಸುಳಿಯುತ್ತಿದ್ದ ಗಾಳಿಯೇ ಬೇರೆ,  
ಹೊಳೆಯುತ್ತಿದ್ದ ಬೆಳಕೇ ಬೇರೆ.  
ನಾನು ಮೊದಲು ತಳೆದಿದ್ದ ಭಾವನೆಯೇ ಬೇರೆ,  
ಅಲ್ಲಿ ನಾನು ಅನುಭವಿಸಿದುದೇ ಬೇರೆ.

ನನ್ನನ್ನು ಕೇಳದೆಯೇ ಯಾವುದೋ ಶಕ್ತಿ ನನ್ನ ದೇಹವನ್ನು ಪ್ರವೇಶಿಸಿತು. ಹೃದಯದ ಭಾವನೆ ಬದಲಾಯಿತು. ವದನದ ಬಣ್ಣವೂ ಬದಲಾಯಿತು.

ಇದು ಪೂಜ್ಯ ಸ್ವಾಮಿಗಳವರಿಗೆ ಅರಿವಾಗಿರಬೇಕು. ಮುಗುಳ್ನಕ್ಕು ಮಗುವನ್ನು ಕರೆಯುವಂತೆ ಕರೆದು ಕುಳ್ಳಿರೆಂದರು.

ನನ್ನ ಮಾತೆಲ್ಲ ಮೂಕವಾಗಿತ್ತು,  
ಮಂತ್ರ ಮುಗ್ಧನಾಗಿ ನಮಿಸಿದೆ.

ಏನು ಪರಿವರ್ತನೆ ಕೇವಲ ದರ್ಶನಮಾತ್ರದಿಂದ.

ಮಾತನಾಡಬೇಕೆಂದಿದ್ದುದು ಬಹಳ,  
ಚರ್ಚಿಸಬೇಕೆಂದಿದ್ದುದು ಅಪಾರ,  
ಪ್ರಶ್ನಿಸಬೇಕೆಂದಿದ್ದುದು ಪರ್ವತ.

—ಒಂದೂ ಸಾಧ್ಯವಾಗಲಿಲ್ಲ. ಸುಮ್ಮನೆ ಕುಳಿತುಕೊಳ್ಳುವುದಕ್ಕಿಂತ ಮತ್ತಾವ ಸಾಹಸವನ್ನೂ ನಾನು ಮಾಡಲಾಗಲಿಲ್ಲ.

ಮೂರ್ಛೆಯಿಂದ ಆಗತಾನೆ ತಿಳಿದೆದ್ದವ ಏನು ತಾನೇ ಮಾಡಿಯಾನು ? ನನ್ನ ಪಾಡಾದರೂ ಅದೇ ಆಗಿತ್ತು.

ತುಸು ಹೊತ್ತು ಆ ಮಂದಿರದ ಪವಿತ್ರ ಗಾಳಿ ಸೇವಿಸಿದ ನನಗೆ ಮಿತ್ರರ ಸಹಾಯದಿಂದ, ಸ್ವಾಮಿಗಳವರ ಕರುಣೆಯಿಂದ ಅಷ್ಟಿಷ್ಟು ಮಾತನಾಡಲು ಸಾಧ್ಯವಾಯಿತು.

ನನ್ನ ಜೀವನ ದರ್ಶನ ಅಲ್ಲಾಗಿತ್ತು !

ಒಂದು ಗಂಟೆಯ ನಂತರ ಸ್ವಾಮಿಗಳವರಿಗೆ ನಮಸ್ಕರಿಸಿ ಹೊರಡಲನುವಾದೆ. 'ಶಿವ ನಿಮಗೆ ಒಳಿತು ಮಾಡಲೆ'ಂದು ಅಪ್ಪಣೆಕೊಟ್ಟು ಆಶೀರ್ವದಿಸಿದರು.

ನಿಜಕ್ಕೂ ನಾನು ಪುಣ್ಯಶಾಲಿ. ಅವರ ದರ್ಶನವನ್ನು ನಾನೆಂದಿಗೂ ಮರೆಯಲಾರೆ.

ಕಾರಣ :

ನನ್ನ ಜೀವನ ದರ್ಶನ ಅಲ್ಲಾಗಿತ್ತು !

—ತ. ಪು. ವೆಂಕಟರಾಮ್.

———:·:———

# ನುಡಿಯಂತೆ ನಡೆ.



ಸತ್ಯ ಶುದ್ಧ ಸದಾಚಾರದಲ್ಲಿ ನಿರತರಾಗಿ ಸದಾ ಜೀವಕೋಟಿಗೆ ಲೇಸನೇ ಬಯಸುವ ಶ್ರೀ ಷ. ಬ್ರ. ಶ್ರೀ ಸದಾಶಿವ ಶಿವಾಚಾರ್ಯರು ತಮ್ಮ ಪವಿತ್ರವಾದ ನಡೆ-ನುಡಿಗಳಿಂದ ರೇಣುಕಾದ್ಯಾಚಾರ್ಯರೂ, ಬಸವಾದಿಪ್ರಮಥರೂ ಆಚರಿಸಿ ತೋರಿಸಿದ ಷಟ್‌ಸ್ಥಲ ಮಾರ್ಗದಲ್ಲಿ ಚರಿಸುತ್ತಾ, ಆಧುನಿಕ ವೀರಶೈವ ಜನಾಂಗಕ್ಕೂ ಸಮಸ್ತ ಸಜ್ಜನ ಸದ್ಭಾವಿಗಳಿಗೂ ಆದರ್ಶಪ್ರಾಯರಾಗಿದ್ದಾರೆ. ಈ ಮಹಾನುಭಾವರ ಆದರ್ಶ ಜೀವನದಲ್ಲಿ ಹುದುಗಿಕೊಂಡಿರುವ ಅಪಾರವಾದ ಸದ್ಗುಣ ರಾಶಿಯಲ್ಲಿ ನಡೆ-ನುಡಿಗಳೆಂಬ ಎರಡು ರತ್ನಗಳ ಪ್ರಕಾಶದರಿವನ್ನು ಮಾಡಿಕೊಡುವುದೇ ಈ ಲೇಖನದ ಪರಮೋದ್ದೇಶ್ಯವಾಗಿದೆ.

ನಾನು ಶಿವಾನುಭವ ಶಾಸ್ತ್ರ ಸಂಪಾದನೆಗಾಗಿ ಶಿಷ್ಯವೃತ್ತಿಯನ್ನು ವಹಿಸಿ ಶ್ರೀ ಶ್ರೀಯವರ ಸನ್ನಿಧಿಯಲ್ಲಿದ್ದಾಗ ಇವರು ಬೋಧಿಸುವ ನುಡಿಗೂ ಆಚರಿಸುವ ನಡೆಗೂ ಸಾಮ್ಯವೆದ್ದು ಕಾಣುತ್ತಿತ್ತು. ಬೋಧಿಸುವ ಕ್ರಮವು ಎಷ್ಟು ಹೃದಯಂಗಮವೋ ಅಷ್ಟೇ ಸರಳತೆಯಿಂದ ಕೂಡಿದ ಇವರ ಸದಾಚರಣೆ ಮಂಗಳಪ್ರದವು. ಈ ಮಾತಿಗೆ ದೃಷ್ಟಾಂತವಾಗಿ ನನಗೆ ಶಿವಾನುಭವ ಶಾಸ್ತ್ರ ಬೋಧಿಸುವ ಸಮಯದಲ್ಲಿ ಶ್ರೀ ಶ್ರೀಯವರು ಕೆಲವೊಂದು ವಾಕ್ಯಗಳನ್ನು ಉದಾಹರಿಸಿದ ವಿಚಾರ ಪರಿಪ್ಲುತ ನೈಪುಣ್ಯತೆಯನ್ನು ನಿಮ್ಮ ಮುಂದಿಟ್ಟರೆ ತಪ್ಪಾಗಲಾರದಷ್ಟೆ!

ಒಂದು ದಿನ ಪಾಠ ಪ್ರವಚನ ಸಮಯದಲ್ಲಿ ಶ್ರೀ ಶ್ರೀಯವರನ್ನು ಆತ್ಮೋದ್ಧಾರವಾಗವ ಬಗೆ ಎಂತು? ಎಂದು ಪ್ರಶ್ನಿಸಿದೆ. ಆಗ ಶ್ರೀ ಶ್ರೀಗಳವರು :—

ಉದ್ಧರೇದಾತ್ಮನಾತ್ಮಾನಂ ನಾತ್ಮಾನ ಮವಸಾದಯೇತ್ ।
ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ॥

ಆತ್ಮನು ತನ್ನನ್ನು ತಾನೇ ಸಂಸಾರ ಶರಧಿಯಿಂದ ಉದ್ಧರಿಸಿಕೊಳ್ಳಬಲ್ಲ. ಈ ಆತ್ಮನೇ ತನಗೆ ತಾನೇ ಮಿತ್ರನಾಗಬಲ್ಲ. ಶತೃವೂ ಆಗಬಲ್ಲ" ಎಂದು ಅಪ್ಪಣೆ ಕೊಡಿಸುತ್ತಾ ಈ ಶ್ಲೋಕದಲ್ಲಡಗಿರುವ ನಾಲ್ಕು ಮುಖ್ಯಾಂಶಗಳನ್ನು ವಿವರಿಸಿದರು.

ಅವು ಹೀಗೆ:—

೧. ಮನುಷ್ಯನು ತನ್ನ ನಡೆ ನುಡಿಯ ಮುಖಾಂತರ ತನ್ನನ್ನು ಉದ್ಧರಿಸಿಕೊಳ್ಳಬೇಕು.

೨. ಮನುಷ್ಯನು ತನ್ನನ್ನು ಅಧೋಮಾರ್ಗಕ್ಕೆ ಒಯ್ಯುವ ದುರ್ನಡತೆಗಳನ್ನು ಬಿಡಬೇಕು.

೩. ಮನುಷ್ಯನು ತನಗೆ ತಾನೇ ಮಿತ್ರನಾಗಬಲ್ಲ.

೪. ಮನುಷ್ಯನು ತನಗೆ ತಾನೇ ಶತೃವಾಗಬಲ್ಲ.

ಅಭಿಪ್ರಾಯವು ಹೀಗೆ:—ಬುದ್ಧಿವಂತನಾದ ಮನುಷ್ಯನು ತನ್ನ ಹಿತವು ಯಾವ ಮಾರ್ಗದಿಂದ ಆಗುವುದೋ ಅದೇ ಮಾರ್ಗವನ್ನೇ ಅವನು ಅನುಸರಿಸುತ್ತಾನೆ. ಯಾವ ಕಾರ್ಯದಿಂದ ತಾನು ಅಧೋಗತಿಗೆ ಇಳಿಯಬಲ್ಲನೋ ಆ ದುರ್ನಡತೆಗಳನ್ನು ಸರ್ವದಾ ವರ್ಜಿಸುತ್ತಾನೆ. ಇನ್ನು ಅಜ್ಞಾನಿಯಾದ ಮನುಷ್ಯನು ತನ್ನ ಉದ್ಧಾರದ ಮಾರ್ಗವನ್ನು ಬಿಟ್ಟು ಅಧೋಗತಿಗಿಳಿಯುತ್ತಾನೆ. ಮನುಷ್ಯನು ಬುದ್ಧಿಯುಳ್ಳ ಜೀವಿಯಾದ ಕಾರಣ ಆತ್ಮಾನಾತ್ಮ ವಿಚಾರಗಳಿಂದ ತನ್ನ ಸದಾಚಾರ ಸದ್ವರ್ತನೆಗಳಿಂದ ಜಗತ್ತಿನೊಳಗಿನ ಸಮಸ್ತ ಪ್ರಾಣಿವರ್ಗವನ್ನು ಸದ್ಭಾವನೆಯಿಂದ ಕಂಡು ಸಮಸ್ತ ಜೀವ ಕೋಟಿಗಳನ್ನು ಮಿತ್ರರನ್ನಾಗಿ ಮಾಡಿಕೊಳ್ಳಬಲ್ಲ.

"ನುಡಿಯಂತೆ ನಡೆ; ಇದೇ ಜನ್ಮ ಕಡೆ."

ಇದು ಇವರ ಜೀವನ ಸರ್ವಸ್ವವಾಗಿದೆ.

ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ.
ಮುನಿಯಬೇಡ ತನ್ನ ಬಣ್ಣಿಸಬೇಡ ಇದಿರು ಹಳಿಯಲುಬೇಡ.
ಅನ್ಯರಿಗೆ ಅಸಹ್ಯಪಡಬೇಡ ಇದೇ ಅಂತರಂಗದ ಶುದ್ಧಿ ಇದೇ ಬಹಿರಂಗ ಶುದ್ಧಿ.
ಇದೇ ನಮ್ಮ ಕೂಡಲಸಂಗಮದೇವರನೊಲಿಸುವ ಪರಿ.

ಮಹಾನುಭಾವಿ ಬಸವಣ್ಣನವರು ಅಪ್ಪಣೆ ಕೊಡಿಸಿರುವ ಈ ವಚನದಿಂದ ಸದ್ವ್ಯವಹಾರಗಳ ಮತ್ತು ಸದ್ಗುಣಗಳ ಮಹತ್ವವೆಷ್ಟೆಂಬುದೂ ಈ ಸದ್ಗುಣಗಳ ಪ್ರಭಾವದಿಂದ ಒಳ್ಳೆ ನಡೆ ನುಡಿ ಸಂಪನ್ನನಾಗಿ ವರ್ತಿಸಿದಲ್ಲಿ ಆತ್ಮಸಾಕ್ಷಾತ್ಕಾರ ಅರ್ಥಾತ್ ಆತ್ಮೋದ್ಧಾರವಾಗುವಲ್ಲಿ ಸಂಶಯವಿಲ್ಲವೆಂದೂ ನಿಮಗೆ ತಿಳಿದಂತಾಯಿತು. ಈ ವಿಷಯದಲ್ಲಿ ಯೋಗಶಾಸ್ತ್ರದಲ್ಲಿ ಹೇಳಲ್ಪಟ್ಟ ಪಶು, ವೀರ ಮತ್ತು ದಿವ್ಯ ಈ ಮೂರುವಿಧ ಮನುಷ್ಯವರ್ಗದ

ಮಾನಸಿಕ ಸ್ಥಿತಿಯನ್ನಷ್ಟು ಅತ್ಯವಶ್ಯ ಆತ್ಮೋದ್ಧಾರ ಮಾಡಿಕೊಳ್ಳಲು ಬಯಸುವವನು ತಿಳಿಯತಕ್ಕದ್ದೆಂದು ವಿವರಿಸುತ್ತಾ ಕೆಳಗಿನಂತೆ ಮನುಷ್ಯತ್ರಯರ ಮನಸ್ಸಿನ ಸ್ಥಿತಿಗತಿಗಳನ್ನು ಅಪ್ಪಣೆ ಕೊಡಿಸಿದರು.

(೧) ಪಶುಶ್ರೇಣಿಗೆ ಸೇರಿದ ಮನುಷ್ಯನ ಚಂಚಲವಾದ ಮನಸ್ಸು ಶಿಶ್ನೋದರ ಅರ್ಥಾತ್ ವಿಷಯ ಲೋಲುಪತ್ವ ಉಳ್ಳದಾಗಿ ಆಧಾರ ಚಕ್ರದಿಂದ ಸ್ವಾಧಿಷ್ಠಾನ ಚಕ್ರದವರೆಗೆ ಚಲಿಸುತ್ತಿರುತ್ತದೆ. ಅಂದರೆ ಗುದದಿಂದ ಯೋನಿಮಂಡಲದವರೆಗೆ ಹರಿದಾಡುತ್ತದೆ.

(೨) ವೀರಪುರುಷನ ಶ್ರೇಣಿಗೆ ಸೇರಿದ ಮನುಷ್ಯನ ಮನಸ್ಸು ಮಣಿಪೂರಕ ಚಕ್ರದಿಂದ ಅನಾಹತ ಚಕ್ರದವರೆಗೆ ಅಂದರೆ ನಾಭಿಯಿಂದ ಮಧ್ಯ ಹೃದಯದವರೆಗೆ ಚಲಿಸುತ್ತಾ ಒಮ್ಮೊಮ್ಮೆ ಪಾರಮಾರ್ಥ ವಿಚಾರದ ಕಡೆಗೂ ಒಮ್ಮೊಮ್ಮೆ ಲೌಕಿಕ ವಿಷಯಗಳ ಕಡೆಗೂ ಹರಿದಾಡುತ್ತಿರುತ್ತದೆ.

(೩) ದಿವ್ಯಪುರುಷರ ಮನಸ್ಸು ವಿಶುದ್ಧಿಚಕ್ರದಿಂದ ಸಹಸ್ರಾರ ಚಕ್ರದವರೆಗೆ ಚಲಿಸಿ ಅವರಿಗೆ ಬಹ್ಮಾನಂದ ಸುಖವನ್ನುಂಟುಮಾಡಿ ಕೇವಲ ಪಾರಮಾರ್ಥ ವಿಚಾರ ಆಚಾರಗಳಲ್ಲಿ ತಲ್ಲೀನರನ್ನಾಗಿಮಾಡಿ, ಶಕ್ತಿಯಾಗಿ, ಭಕ್ತಿಯಾಗಿ, ಮುಕ್ತಿಗೊಯ್ಯುವ ಉನ್ಮನವೆನಿಸುತ್ತದೆ ; ಎಂಬುದಾಗಿ ಪೂರ್ವಜರಾದ, ಯೋಗದಲ್ಲಿ ನಿಷ್ಣಾತರಾದ ಮಹಾನುಭಾವಿಗಳು ಅಪ್ಪಣೆ ಕೊಡಿಸಿದಂತೆ ಆತ್ಮೋದ್ಧಾರ ಮಾಡಿಕೊಳ್ಳ ಬಯಸುವವನು ದಿವ್ಯಪುರುಷರ ಮಾಲಿಕೆಯಲ್ಲಿ ಸೇರಿ ಉತ್ತಮವಾದ ನಡೆ-ನುಡಿಗಳಿಂದ ಆಚಾರ ವಿಚಾರಗಳಿಂದ ಸಚ್ಛೀಲ ಸದ್ಭಾವಗಳಿಂದ ತಮ್ಮ ಮನಸ್ಸನ್ನು ಅರ್ಥಾತ್ ತಮ್ಮ ಚಿತ್ತವನ್ನು ಶುದ್ಧೀಕರಿಸಿಕೊಂಡು ಉನ್ಮನವನ್ನಾಗಿಯೂ ಸುಚಿತ್ತವನ್ನಾಗಿಯೂ ಮಾರ್ಪಡಿಸಿಕೊಂಡು "ಉದ್ಧರೇದಾತ್ಮನಾತ್ಮಾನಂ" ಎಂಬ ಗೀತೋಕ್ತಿಯಂತೆ ಸಾರ್ಥಕತೆಯನ್ನು ಮಾಡಿಕೊಳ್ಳಬೇಕು. ಇದೇ ಆತ್ಮೋದ್ಧಾರದ ಪರಮೋಪಾಯವೆಂದು ಅಪ್ಪಣೆ ಕೊಡಿಸಿದರು.

ವಾಚಕರೇ !

ಮೇಲಿನ ಶ್ರೀ ಶ್ರೀಗಳವರ ನುಡಿಯಲ್ಲಿ ಎಷ್ಟು ವೈಶಾಲ್ಯತೆ, ಮಧುರತೆ, ವಿಚಾರ ವಿಮರ್ಶತೆ, ಹೃದಯಂಗಮತೆ ಎದ್ದು ಕಾಣುತ್ತದೆಯೋ ಅಷ್ಟೇ ನಾನು ಕಣ್ಣಾರೆ ಕಂಡು ಈ ಕೆಳಗೆ ಹೇಳಲ್ಪಡುವ ಅವರ ನಿತ್ಯನಡೆಯಲ್ಲಿಯೂ ಸರಳತೆ, ನಿಷ್ಕಪಟತೆಯನ್ನು ಮನಗಂಡೆನು.

"ಯದ್ಯದಾಚರತಿ ಶ್ರೇಷ್ಠ ಸ್ತದ್ಯದೇವೇತರೋಜನಾಃ ||
ಸಯತ್ಪ್ರಮಾಣಂ ಕುರುತೆ ಲೋಕಸ್ತದನುವರ್ತತೆ ||

(ಭಗವದ್ಗೀತಾ)

ಶ್ರೇಷ್ಠನು ಅರ್ಥಾತ್ ಸಮಾಜದ ಗುರುವು ತನ್ನ ನಿತ್ಯನಡೆಯ ಮುಖಾಂತರ ಹೇಗೆ ನಡೆಯುತ್ತಾನೆಯೋ ಅಂದರೆ ಆಚರಿಸುತ್ತಾನೆಯೋ ಲೋಕದ ಜನರು ಅಂದರೆ ಸಮಾಜ ಅವನ ನಡೆ ನುಡಿಯನ್ನೇ ಪ್ರಮಾಣವನ್ನಾಗಿ ತಿಳಿದು ಅದೇ ಪ್ರಕಾರ ನಡೆಯುತ್ತಾರೆ ಎಂಬ ಗೀತೋಕ್ತಿಯಂತೆ ಶ್ರೀ ಶ್ರೀಗಳವರು ಲೋಕ ಸಂಗ್ರಹಾರ್ಥ ತಾವು ಸತ್ಯಶುದ್ಧ ಸದಾಚಾರ ನೀತಿ ನಡೆವಳಿಗಳಿಂದ ನಡೆದು ತೋರಿಸುತ್ತಿದ್ದಾರೆ.

ಇದಕ್ಕೆ ಪ್ರಮಾಣವಾಗಿ

ತದ್ಗೇಹಂ ಯತ್ರವಸತಿ ತದ್ಭೋಜಂ ಯೇನ ಜೀವತಿ ।
ಯೇನ ನಿಷ್ಪದ್ಯತೇ ಚಾರ್ಥಃ ಸ್ವಯಂ ಸ್ಯಾದ್ಯೋಗಸಿದ್ಧಿಯೇ ॥
ತಥಾಜ್ಞಾನ ಮುಪಾಶೀತ ಯೋಗೀ ಯತ್ಕಾರ್ಯಸಾಧಕಂ ।
ಜ್ಞಾನಾನಾಂ ಬಹುತಾಯೇಯಂ ಯೋಗವಿಘ್ನಕರೀ ಹಿ ಸಾ ॥
ಇದಂಜ್ಞೇಯಮಿದ ಮಜ್ಞೇಯಮಿತಿ ಯಸ್ತೃಷಿತಶ್ಚರೇತ್ ।
ಅಪಿಕಲ್ಪಸಹಸ್ರಾಯುರ್ನೈವಜ್ಞೇಯಮವಾಪ್ನುಯಾತ್ ॥
ತ್ಯಕ್ತಸಂಗೋ ಜಿತಕ್ರೋಧೋ ಲಬ್ಧಾಹಾರೋ ಜಿತೇಂದ್ರಿಯಃ ।
ಪಿಧಾಯ ಬುದ್ಧ್ಯಾ ದ್ವಾರಾಣಿ ಮನೋಧ್ಯಾನೇ ನಿವೇಶಯೇತ್ ॥
ಆಹಾರಂ ಸಾತ್ವಿಕಂ ಸೇವೇನ್ತಂ ಯೇನವಿಚೇತನಃ ।
ಸ್ಯಾದಯಂ ತಂಚ ಭುಂಜಾನೋ ರೌರವಸ್ಯಪ್ರಿಯಾತಿಥಿಃ ॥

ಶಿವಯೋಗ ಸಾಧಕನು ತನ್ನ ಸಾಧನೆಗೆ ಎಲ್ಲಿ ವಾಸಿಸುವನೋ ಅವನಿಗೆ ಅದೇ ಮನೆ. ಯಾವ ಪ್ರಸಾದದಿಂದ ಜೀವಿಸುವನೋ ಅದೇ ಅವನಿಗೆ ಸತ್ವಾಹಾರ. ಯಾವ ಮಾರ್ಗದ ಸಾಧನೆಯಿಂದ ಶಿವಯೋಗವು ಸಿದ್ಧಿಸುವುದೋ ಅದೇ ಸಾಧನೆಯನು ಬುದ್ಧಿವಂತರಾದ ಮನುಷ್ಯರು ಹೊಂದತಕ್ಕದ್ದು. ನಾನಾಪ್ರಕಾರದ ತನಗೆ ಪ್ರಯೋಜನವಿಲ್ಲದ ನಿರರ್ಥಕದ ಜ್ಞಾನಸಂಗ್ರಹವು ಶಿವಯೋಗ ಸಾಧಕನಿಗೆ ವಿಘ್ನವನ್ನುಂಟು ಮಾಡುತ್ತದೆ. ಶಾಸ್ತ್ರಗಳಲ್ಲಿ ಹೇಳಲ್ಪಟ್ಟ ಜ್ಞಾನವನ್ನು ಇದು ತಿಳಿಯಲು ಯೋಗ್ಯವೆಂಬುದಾಗಿ ಸಂಗ್ರಹಿಸುತ್ತಾ ಹೋಗುವುದರಿಂದ ಕಲ್ಪಸಹಸ್ರಗಳಷ್ಟು ಆಯುಷ್ಯವಿದ್ದರೂ ಸಾಲದು. ಕಾರಣ ಜ್ಞಾನಿಯಾದ ಸಾಧಕನು ಸಾತ್ವಿಕ ಆಹಾರವನ್ನು ಸೇವಿಸುತ್ತ ಜಿತಕ್ರೋಧನಾಗಿ ಲಬ್ಧಾಹಾರಿಯಾಗಿ ಜಿತೇಂದ್ರಿಯನಾಗಿ ತನ್ನ ಪರಿಶುದ್ಧವಾದ ಬುದ್ಧಿಯಿಂದ ಇಂದ್ರಿಯಗಳ ಮುಖಗಳನ್ನು ನಿರೋಧಿಸಲ್ಪಟ್ಟವನಾಗಿ ಮನಸ್ಸನ್ನು ಶಿವಧ್ಯಾನದಲ್ಲಿ ತೊಡಗಿಸಿ ಸರ್ವಸಂಗ ಪರಿತ್ಯಾಗಿಯಾಗಿರಬೇಕು. ಮರೆತಾದರೂ ಮನಸ್ಸನ್ನು ಚಂಚಲಗೊಳಿಸುವ ರಾಜಸತಾಮಸಾಹಾರಗಳನ್ನು ಸೇವಿಸಕೂಡದು. ಒಂದುವೇಳೆ ಸೇವಿಸಿದ್ದೇ ಆದರೆ ರೌರವ ನರಕದ ಪ್ರಿಯಾತಿಥಿಯಾಗುತ್ತಾನೆ ಎಂದು ಹೇಳಲ್ಪಟ್ಟ ಸ್ಕಾಂದಪುರಾಣೋಕ್ತಿಗನುಸರಿಸಿದ ನಡೆಯನ್ನು ಶ್ರೀ ಶ್ರೀಯವರಲ್ಲಿ ನಾವು ಪ್ರತ್ಯಕ್ಷ ಕಾಣಬಹುದು.

ವರಂ ಶೃಂಗೋತ್ಸಂಗಾತ್ ಗುರು ಶಿಖರಿಣಃ ಕ್ವಾಪಿ ವಿಷಮೇ।
ಪತಿತ್ವಾಯಂ ಕಾಯಃ ಕಠಿಣ ದೃಷದಂತೆ ವಿಗಲಿತಃ॥
ವರಂ ನ್ಯಸ್ತೋ ಹಸ್ತಃ ಫಣಿಪತಿ ಮುಖೇ ತೀಕ್ಷ್ಣದಶನೇ।
ವರಂ ವಹ್ನೌ ಪಾತಸ್ತದಪಿ ನ ಕೃತಃ ಶೀಲವಿಲಯಃ॥

ಈ ದೇಹವನ್ನು ಅತ್ಯುನ್ನತವಾದ ಪರ್ವತಶಿಖರದ ಮೇಲಿಂದ ಕೆಡವಿದರೂ ಕಠಿಣವಾದ ಕಲ್ಲಿನ ಮೇಲೆ ಹೊಯ್ದರೂ, ಹಾವಿನ ಬಾಯಿಯಲ್ಲಿ ಕೈಯನ್ನಿಡಿಸಿ ತೀಕ್ಷ್ಣವಾದ ಹಲ್ಲುಗಳಿಂದ ಕಚ್ಚಿಸಲ್ಪಟ್ಟರೂ, ಬೆಂಕಿಯಲ್ಲಿ ಹಾಕಿ ಸುಟ್ಟರೂ, ಸತ್‌ಸ್ವಭಾವ, ಸಚ್ಛೀಲಗಳನ್ನು ತ್ಯಜಿಸಕೂಡದೆಂದು ಶ್ರೀ ಭರ್ತೃಹರಿಯು ನೀತಿಶತಕದಲ್ಲಿ ಹೇಳಿದಂತೆ ಶ್ರೀ ಶ್ರೀಯವರು ತಾವು ಕೈಕೊಂಡ ಸಚ್ಛೀಲಾಚರಣೆಯಲ್ಲಿ ದೃಢನಿಷ್ಠೆಯುಳ್ಳವರಾಗಿ ಲವಲೇಶವೂ ಚ್ಯುತಿ ಬಾರದಂತೆ ಪಾಲಿಸುತ್ತಿದ್ದುದನ್ನು ನಾನು ಕಂಡಿದ್ದೇನೆ. ನೀವೂ ಪ್ರತ್ಯಕ್ಷ ಕಾಣುತ್ತಿದ್ದೀರಿ. ಶ್ರೀ ಶ್ರೀಗಳವರಲ್ಲಿ ಶೀಲನಿಷ್ಠೆ, ಗುರುವಾಕ್ಯನಿಷ್ಠೆ, ಶಾಸ್ತ್ರನಿಷ್ಠೆ, ಇತ್ಯಾದಿ ಅನೇಕ ಸನ್ನಿಷ್ಠೆಗಳನ್ನು ಪ್ರತ್ಯಕ್ಷ ಕಾಣಬಹುದು. ಶ್ರೀ ಶ್ರೀಗಳವರ ಸ್ವಾನುಭವನಿಷ್ಠೆ ಎಷ್ಟೆಂಬುದಕ್ಕೆ ಕೆಲವು ದೃಷ್ಟಾಂತಗಳನ್ನು ಕೊಡಬಹುದು. ಅವರ ಹಸ್ತದಿಂದಲೇ ಲಿಖಿಸಲ್ಪಟ್ಟ ಮತ್ತು ಸಂಗ್ರಹಿಸಲ್ಪಟ್ಟ "ಶಿವಪೂಜಾವಿಧಿ", "ದೀಕ್ಷಾವಿಧಿ", "ಅನುಗ್ರಹ", "ಸಾದಾಶಿವ ಭಾಷ್ಯ" ವಲ್ಲದೆ ಇನ್ನಿತರ ಅವರ ಗ್ರಂಥಗಳಲ್ಲಿ ಅವರದೇ ಆದ ಸ್ವಾನಭವವು ಎದ್ದು ಕಾಣುತ್ತದೆ. ಶ್ರೀ ಶ್ರೀಗಳವರು ಯಾವುದೇ ವಿಚಾರವನ್ನಾದರೂ, ಗುರುವಾಕ್ಯ, ಶಾಸ್ತ್ರಸಮ್ಮತ, ಆತ್ಮಾನುಭವವೆಂಬ ಮೂರು ವರೆಗಲ್ಲುಗಳಿಗೆ ತಿಕ್ಕಿ ಅದು ಪರಿಶುದ್ಧವಾಗಿದ್ದಲ್ಲಿ ಗ್ರಹಿಸುತ್ತಾರೆ.

ಗುರುವಚನಂ ಪ್ರಮಾಣಮಖಿಲಾರ್ಯಪುರಾತನ ದಿವ್ಯಸೂಕ್ತಿಗಳ್।
ನಿರವಧಿಕಪ್ ಪ್ರಮಾಣ ಮಮಲಾಗಮ ಶೈವರಹಸ್ಯವಾಕ್ಯ ತ।
ತ್ಪರಮತವೇ ಪ್ರಮಾಣ ಮನುಸಾರ ಮಾಗದ ಲಿಂಗದೈಕ್ಯನಿ।
ರ್ಭರಮತವೇ ಪ್ರಮಾಣಮೆರೆಡೆಂಬುದು ಬಂಧಕರಂ ಶಿವಾಥವಾ॥

ಎಂಬ ಶ್ರೀ ಮುಗ್ಗೆಮಾಯಿದೇವರ ವಾಕ್ಯವನ್ನು ಮೇಲಿಂದ ಮೇಲೆ ಅಪ್ಪಣೆ ಕೊಡಿಸುತ್ತಾರೆ. ಅಲ್ಲದೆ ಮೇಲಿನ ನಾಲ್ಕು ಪ್ರಮಾಣಗಳನ್ನು ತಮಗೆ ಆಧಾರವನ್ನಾಗಿ ಗ್ರಹಿಸಿದ್ದಾರೆ.

ನಾವು ಲಿಂಗೈಕ್ಯ ಲಿಂಗಾನುಭವಿಗಳೆಂದು ಹೇಳುವ ಅಣ್ಣಗಳಿರಾ।
ನೀವು ಲಿಂಗೈಕ್ಯ ಲಿಂಗಾನುಭವಿಗಳೆಂತಾದಿರಿ ಹೇಳಿರಣ್ಣಾ।
ಅರಿಯದಿರ್ದರೆ ಕೇಳಿರಣ್ಣಾ ಗುರುಕೃಪೆಯಿಂದ ಹೇಳುವೆ.
ಲಿಂಗೈಕ್ಯ ಭೇದಾನುಭೇದವ ಸರ್ವಸಂಗ ಪರಿತ್ಯಾಗ ಮಾಡಬೇಕು।

ಲೋಕಾಚಾರ ಮುಟ್ಟದಿರಬೇಕು. ನುಡಿಯಂತೆ ನಡೆ ದಿಟವಾಗಿರಬೇಕು ।
ಸರ್ವಾಚಾರ ಸಂಪತ್ತಿನಾಚರಣೆ ಸದ್ಗುರುವುುಖದಿಂದರಿದು
ಆಚರಿಸಬೇಕು ।
ನನ್ನ ಜೀವನವೇನು ? ನಾನಾರು ? ನಾನು ಭವಕ್ಕೆ ಬಂದ ಕಾರಣವೇನು ?
ನಾ ಹೋಗುವ ನಿಜಕ್ಕೈವಲ್ಯವಾವುದು ? ನನ್ನಿಂದೇನು ?
ಎಂದರಿದಾಚರಿಸ
ಬಲ್ಲಾತನೇ ನಿಜಲಿಂಗಾನುಭಾವಿ, ಲಿಂಗೈಕ್ಯ ನೋಡು ಕಲಿದೇವರ
ದೇವಾ ॥

ಎಂಬ ಮಡಿವಾಳ ಮಾಚಿ ತಂದೆಗಳ ವಚನದಲ್ಲಿ ಅಡಗಿದ ಸಾರಸರ್ವಸ್ವವೇ ಮೂರ್ತಿವೆತ್ತಂತೆ ಶ್ರೀ ಶ್ರೀಗಳವರ ನಡೆ–ನುಡಿಗಳು ಸಮರ್ಪಕವಾಗಿವೆ. ಈ ಮಾತು ಪ್ರತ್ಯಕ್ಷ ಸಂದರ್ಶಿಸಿದಾಗ ಮನವರಿಕೆಯಾಗುವುದು–ಇನ್ನು ಈ ವಚನದಲ್ಲಡಗಿದ ಪ್ರತಿಯೊಂದು ಪದದ ಅರ್ಥಕ್ಕೂ ಶ್ರೀಗಳವರ ನಡೆಗೂ ಸಂಬಂಧಿಸಿ ನೋಡೋಣ ಸರ್ವಸಂಗ ಪರಿತ್ಯಾಗ ಮಾಡಬೇಕು ಎಂದು ಹೇಳಿದ್ದನ್ನು ಶ್ರೀ ಶ್ರೀಗಳವರು ಸರ್ವಸಂಗ ಪರಿತ್ಯಾಗಿಗಳಾಗಿ ತೋರಿಸಿದ್ದಾರೆ.

ಲೌಕಿಕ ವೃತ್ತಿಯೇ ಮರಳಿ ಭಾಕ್ತಿಕವರ್ತನಮಾಗಿ ಭಾಕ್ತಿಕಂ ।
ಲೌಕಿಕಮಾಗಿ ತನ್ನೊಳಗೆ ತಾನೆರಡಿಲ್ಲದೆ ಕೂಡಿ ಸಂಶಯಂ ।
ಹೋಕೆಡೆಗೊಟ್ಟು ನಿಂದ ಬಯಲಾದ ಬಳಿಕ್ಕದನೇನನೆಂದಪೇಂ ।
ವ್ಯಾಕುಲವಿಲ್ಲದಿರ್ಪ ಪರಮಾಚರಣಸ್ಥಿತಿಯಂ ಶಿವಾಧವಾ ॥

ಎಂಬ ವಾಕ್ಯದಂತೆ ಶ್ರೀ ಶ್ರೀಗಳವರ ಪ್ರತಿಯೊಂದು ಕರ್ತವ್ಯ ಕರ್ಮವೂ ಭಕ್ತಿಯುಕ್ತವಾಗಿರುವುದರಿಂದ ಅವರು ನಿರ್ಲಿಪ್ತರಾಗಿ ಸರ್ವಸಂಗ ಪರಿತ್ಯಾಗಿಗಳಾಗಿದ್ದಾರೆ. ಲೋಕಾಚಾರ ಮುಟ್ಟದಿರಬೇಕು ಎಂಬ ವಚನದ ಇಂಗಿತಾರ್ಥದಂತೆ ಶ್ರೀ ಶ್ರೀಗಳವರ ಪ್ರತಿಯೊಂದು ಆಚರಣೆಯು ಭಾಗವೂ ಲೌಕಿಕರ ಅಹಂಕಾರ ಮಮಕಾರಗಳಿಂದ ಕೂಡಿದ ಆಚಾರಗಳಿಗೆ ಭಿನ್ನವಾಗಿರುತ್ತದೆ. ಈ ಮಾತಿಗೆ ಅವರ ಪ್ರತಿಯೊಂದು ನಿತ್ಯಾಚರಣೆಯನ್ನು ಸೂಕ್ಷ್ಮ ದೃಷ್ಟಿಯಿಂದ ನೋಡಿದಲ್ಲಿ ಪ್ರತ್ಯಕ್ಷಪ್ರಮಾಣಗಳೊದಗುವವು. ಲೌಕಿಕರಂತೆ ರಾಜಸ, ತಾಮಸಾಹಾರಗಳನ್ನು ಎಂದೂ ಸೇವಿಸರು.

ಆಯುಸ್ಸತ್ವ ಬಲಾರೋಗ್ಯ ಸುಖಪ್ರೀತಿ ವಿವರ್ಧನಾಃ ।
ರಸ್ಯಾಃ ಸ್ನಿಗ್ಧಾಃ ಸ್ಥಿರಾಹೃದ್ಯಾ ಆಹಾರ ಸಾತ್ವಿಕಪ್ರಿಯಾಃ ॥

ಎಂಬ ಗೀತೋಕ್ತಿಯನ್ನೇ ಅನುಸರಿಸಿ ಶ್ರೀ ಶ್ರೀಗಳವರ ನಿತ್ಯ ಲಿಂಗಾರ್ಪಣಗೈಯ್ಯುವ ಪ್ರತಿಯೊಂದು ಪದಾರ್ಥವೂ ಸಾತ್ವಿಕವಿದ್ದು ಯೋಗಸಾಧಕರು ಯಾವ ಪದಾರ್ಥವನ್ನು ಸೇವಿಸಬೇಕೆಂದು ಯೋಗಶಾಸ್ತ್ರದಲ್ಲಿ ನಿರ್ದಿಷ್ಟವಿದೆಯೋ ಅವನ್ನೇ ಲಿಂಗಾರ್ಪಣಗೈಯುತ್ತಾರೆ. ಅಂದರೆ ಆಕಳಹಾಲು–ತುಪ್ಪ, ಗೋಧಿ, ಅಕ್ಕಿ, ಹೆಸರುಬೇಳೆ, ಲವಣ

ಇದಿಷ್ಟು ಅವರ ನಿತ್ಯಪ್ರಸಾದ. ಅಲ್ಲದೆ ದೇಹಕ್ಕೆ ಸುಗಂಧಯುಕ್ತವಾದ ತೈಲ, ಸಾಬೂನುಗಳನ್ನು ಲೇಪಿಸರು. ಕಠಿಣೋಕ್ತಿಗಳನ್ನಾಡರು, ಸಟೆಯನ್ನು ನುಡಿಯರು. ಸಮಾಜಸೇವೆಗಲ್ಲದೆ ಅನ್ಯಥಾ ಹಣ ಸಂಗ್ರಹಿಸರು. ಮನಮೋಹಕವಾದ ವಸ್ತ್ರಾಭರಣ ಗಳನ್ನು ಧರಿಸರು. ಜಾಗ್ರತ್‌ಸ್ವಪ್ನ ಸುಷುಪ್ತ್ಯಾವಸ್ಥಾ ತ್ರಯಂಗಳಲ್ಲಿಯೂ ಡಾಂಭಿಕ ವೃತ್ತಿಗಿಂಬುಗೊಡರು. ಇವರಲ್ಲವೇ ಲೌಕಿಕಾಚಾರ ಹೊದ್ದದವರು? ಇನ್ನು ನುಡಿ ಯಂತೆ ನಡೆ ದಿಟವಾಗಿರಬೇಕೆಂಬ ಮಾತಿಗೆ ಶ್ರೀ ಶ್ರೀಪೂಜ್ಯಪಾದರ ವ್ಯಕ್ತಿತ್ವವೇ ಸಾಕ್ಷಿ ಯಾಗಿದೆ. ಅವರೆಂದೂ ತಾವಾಡಿದ ಮಾತನ್ನು ತಪ್ಪರು. ಅಲ್ಲದೆ ತಪ್ಪಿ ನಡೆಯರು; ತಪ್ಪಿ ನುಡಿಯರು. ಇನ್ನು ಸರ್ವಾಚಾರ ಸಂಪತ್ತಿನಾಚರಣೆ ಸದ್ಗುರುಮುಖದಿಂದರಿದು ಆಚರಿಸಬೇಕೆಂಬ ನುಡಿಗೆ ಶ್ರೀ ಶ್ರೀಗಳವರಲ್ಲಿ ಕಂಡುಬರುವ ಪ್ರತಿಯೊಂದು ಸದಾ ಚರಣೆಯು ಭಾಗವೂ ಅವರ ಚಿದ್ಗುರು ಶ್ರೀ ಕುಮಾರೇಶನ-ಪ್ರೇರಣೆಯಿಂದ ಬಂದವು ಗಳಲ್ಲದೆ ಅನ್ಯಥಾ ಕಾಣಬಾರದು. ಇನ್ನು ಅಹೋರಾತ್ರಿ ಏಕಾಂತಿಕ ಸ್ಥಳವಾದ ಶ್ರೀ ಗುರುಕುಮಾರಾಶ್ರಮದಲ್ಲಿ ಆತ್ಮಚಿಂತನೆಯಲ್ಲಿ ಸಚ್ಛಾಸ್ತ್ರಾವಲೋಕನದಲ್ಲಿಯೇ ಅನುರಕ್ತರಾದ ಸದಾಲಿಂಗಾಂಗ ಸಂಯೋಗಸುಖಮಗ್ನರಾದ ಸದ್ಗುರುಗಳಿವರು.

ಪ್ರಶಾಂತಚಿತ್ತಾಃ ಸರ್ವೇಷಾಂ ಸೌಮ್ಯಃ ಕಾಮಜಿತೇಂದ್ರಿಯಾಃ ।
ಕರ್ಮಣಾ ಮನಸಾವಾಚಾ ಪರದ್ರೋಹಮನಿಚ್ಛವಃ ॥
ದಯಾರ್ದ್ರ ಮಾನಸೋ ನಿತ್ಯಂ ಸ್ತೇಯಾಂ ಹಿಂಸಪರಾಂಗ್ಮುಖಾಃ ॥
ಗುಣೇಷು ಪರಕಾರ್ಯೇಷು ಪಕ್ಷಪಾತಮುದಾನ್ವಿತಾಃ ।
ಸದಾಚಾರ ಮದಾತಾಷ್ಟ ಪರೋತ್ಸವ ನಿಜೋತ್ಸವಾಃ ।
ಪಶ್ಯಂತಃ ಸರ್ವಭೂತಸ್ಥಂ ಮಹಾದೇವಮಮತ್ಸರಾಃ ।
ದೀನಾನುಕಂಪಿನೋ ನಿತ್ಯಂ ಭೃಶಂ ಪರಹಿತೈಷಿಣಃ ।
ವಿಷಯೇಷ್ವ ವಿವೇಕಾನಾಂ ಯಾಪ್ರೀತಿರುಪಜಾಯತೇ ॥
ಏತಾನ್ವತೇತು ತಾಂ ಪ್ರೀತಿಂ ಶತಕೋಟಿಗುಣಾಂ ಹತಾ ।
ನಿತ್ಯಕರ್ತವ್ಯತಾ ಬುಧ್ಯಯಜಂತಃ ಶಂಕರಾದಿಕಾನ್ ॥

(ಸ್ಕಾಂದಪುರಾಣ-ಉತ್ಕಲಖಂಡ)

ಪ್ರಸನ್ನಚಿತ್ತರೂ ಸಮಸ್ತವನ್ನು ಸದ್ಭಾವನೆಯಿಂದ ಕಾಣುವವರೂ, ಇಂದ್ರಿಯಗಳನ್ನು ಜಯಿಸಿದವರೂ, ಕಾಯ, ವಾಚ, ಮನಸಾಪರದ್ರೋಹವೆಸಗದವರೂ, ದಯಾ ಮಯರೂ, ಅಸ್ತೇಯ, ಅಹಿಂಸಾ ಮೊದಲಾದ ಸದ್ಗುಣಗಳುಳ್ಳವರೂ, ಸದ್ಗುಣಿಗಳ ಲ್ಲಿಯೂ ಪರರ ಸತ್ಕಾರ್ಯಗಳಲ್ಲಿಯೂ ಆದರಾಭಿಮಾನವುಳ್ಳವರೂ ಸದಾಚಾರಪ್ರಿಯರೂ, ಪರರ ಆನಂದವೇ ತಮ್ಮ ಆನಂದವೆಂದು ತಿಳಿದವರೂ, ಸರ್ವಭೂತಗಳಲ್ಲಿ ಮಹಾದೇವ ನನ್ನು ನೋಡುವವರೂ, ಮಾತ್ಸರ್ಯರಹಿತರೂ, ದೀನಾನುಕಂಪಿಗಳೂ, ಪರಹಿತಾನುವರ್ತಿ ಗಳೂ, ಲೌಕಿಕರು ವಿಷಯಗಳ ಮೇಲೆ ಎಷ್ಟು ಮಮತೆಯನ್ನು ತೋರಿಸುವರೋ

ಅದಕ್ಕಿಂತಲೂ ಶತಕೋಟಿಗುಣಾಧಿಕವಾಗಿ ಶಿವಪೂಜೆಯಲ್ಲಿ ಅನುರಕ್ತಿಯುಳ್ಳವರೂ ನಿತ್ಯ ಕರ್ತವ್ಯ ಬುದ್ಧಿಯಿಂದ ಲಿಂಗಾರ್ಚನೆ ಗೈಯ್ಯುವವರೂ ಆದ ಯಾವ ಮಹಾನು ಭಾವರು ಇರುವರೋ ಅವರೇ ತತ್ವಜ್ಞಾನಿಗಳೆಂದೂ ಸದ್ಗುರುಗಳೆಂದೂ ತಿಳಿಯತಕ್ಕದ್ದೆಂದು ಮುಂತಾಗಿ ಹೇಳಿದ, ಸ್ಕಂದ ಪುರಾಣದ ಮೇಲಿನ ಶ್ಲೋಕದ ಅಭಿಪ್ರಾಯದಂತೆ ಶ್ರೀ ಶ್ರೀಗಳವರಲ್ಲಿ ಈ ಎಲ್ಲಾ ನಡೆನುಡಿಗಳೂ ಅವಿನಾಭಾವದಿಂದ ಹುದುಗಿಕೊಂಡಿವೆ. ಅಲ್ಲದೆ ಶ್ರೀ ಶ್ರೀಗಳವರು,

"ಪರೋಪಕಾರಃ ಪುಣ್ಯಾಯ ಪಾಪಾಯ ಪರ ಪೀಡನಂ" ಎಂಬ ವ್ಯಾಸೋಕ್ತಿಯನ್ನು ತಮ್ಮ ನಡೆಯಿಂದ ಪುಷ್ಟೀಕರಿಸಿದ್ದಾರೆ. ಪರಹಿತಕಾಂಕ್ಷೆಯಿಂದ ಅನೇಕಾನೇಕ ಉದ್ಗ್ರಂಥಗಳನ್ನು ಸಂಗ್ರಹಿಸಿ ಪ್ರಕಟಿಸಿರುವರಲ್ಲದೆ ಸಮಾಜದಲ್ಲಿ ಹುದುಗಿ ಕೊಂಡಿರುವ ಅಜ್ಞಾನಾಂಧಾಕಾರವನ್ನು ಹೊಡೆದೋಡಿಸಲು ಶಿವಾದ್ವೈತ ತತ್ವ ಪ್ರಚಾರ ಸಮಿತಿಯನ್ನು ಸ್ಥಾಪಿಸಿದ ಪುಣ್ಯಮೂರ್ತಿಗಳಾಗಿದ್ದಾರೆ. ಅಲ್ಲದೆ—

ತಂತುಂ ತನ್ವನ್ ರಜಸೋ ಭಾನುಮನ್ವಿಹಿ ।
ಜ್ಯೋತಿಷ್ಮತಃ ಪಥೋರಕ್ಷ ಧಿಯಾ ಕೃತಾನ್ ।
ಅನುಲ್ಬಣಂ ವಯತ ಜೋಗು ವಾಮಪೋ ।
ಮನುರ್ಭವ ಜನಯ ದೈವ್ಯಂ ಜನಾ ॥ (ಋಗ್ವೇದ)

ಹೇ, ಮನುಷ್ಯ ! (ತಂತುಂ ತನ್ವನ್ ರಜಸಃ) ಸಂಸಾರವೆಂಬ ಪಟವನ್ನು ನಿನ್ನ ಜೀವನ ಯಾತ್ರೆಯ ಮುಖಾಂತರ ನೇಯುತ್ತಿರುವ ನೀನು (ಭಾನುಮನ್ವಿಹಿ) ಬೆಳಕನ್ನು ಹಿಂಬಾಲಿಸು, ಅರ್ಥಾತ್ ಬೆಳಕನ್ನು ಹೊಂದು (ಧೀಯಾ ಕೃತಾನ್ ಜ್ಯೋತಿಷ್ಮತಃ ಪಂಥಃ ರಕ್ಷ) ಬುದ್ಧಿಯಿಂದ ಶೋಧಿಸಲ್ಪಟ್ಟ, ಬೆಳಕಿನಿಂದೊಡಗೂಡಿದ ಸನ್ಮಾರ್ಗಗಳನ್ನು ನೀನು ರಕ್ಷಿಸು. (ಅನುಲ್ಬಣಂ ಜೋಗುವಾ ಅಪಃವಯತ) ನಿರಂತರ ಜ್ಞಾನಕ್ರಿಯಾಯುಕ್ತ ಮಾರ್ಗದಲ್ಲಿ ನಡೆಯುತ್ತಾ ನಿಷ್ಕಂಟಕವಾದ ಸನ್ಮಾರ್ಗವನ್ನು ವಿಸ್ತರಿಸು. ಹಾಗೂ (ದೈವ್ಯಂ ಜನಂ ಜನಯಾ) ದಿವ್ಯಗುಣಗಳಿಂದ ಕೂಡಿ ನಿನ್ನನ್ನು ಹಿಂಬಾಲಿಸಿ ಬರುವ ಉತ್ತರಾಧಿಕಾರಿಗೆ ಜನ್ಮ ಕೊಡು. ಈ ಪ್ರಕಾರ ನೀನು (ಮನುರ್ಭವ) ಮನುಷ್ಯನಾಗು ಎಂಬ ಋಗ್ವೇದ ಮಂತ್ರಾರ್ಥಕ್ಕನುಸರಿಸಿ ಶ್ರೀ ಶ್ರೀಗಳವರು ತಾವೊಬ್ಬರೇ ಅನುಭವಿಗಳಾಗಿ ಸದಾಚಾರಿಗಳಾದರೆ ಸಾಲದೆಂದು ತಮ್ಮ ಮಾರ್ಗವನ್ನನುಸರಿಸಲು ಇಚ್ಛಿಸುವ ಅಧಿಕಾರಿಗಳಿಗೆ ಸನ್ಮಾರ್ಗ ದರ್ಶನವಿತ್ತು ತಾವು ಆಚರಿಸಿ, ಅನುಭವಿಸಿ ಕಂಡುಂಡ ನಿತ್ಯಾನಂದವನ್ನು ಅವರಿಗೂ ಉಣಿಸಿ ತಣಿಸಿದ ಅನೇಕ ಪ್ರತ್ಯಕ್ಷ ಉದಾಹರಣೆಗಳಲ್ಲೊಂದನ್ನು ಇಲ್ಲಿ ಕೊಡುತ್ತೇನೆ. ನಾನು ಹಾಲಕೆರೆ ಶ್ರೀ ಶ್ರೀಗಳವರ ಸನ್ನಿಧಿಯಿಂದ ಅನುಗೃಹೀತನಾಗಿ ಜ್ಞಾನಪಿಪಾಸೆಯಿಂದ ಶಿವಾನುಭವ ಶಾಸ್ತ್ರಾಧ್ಯಯನ ಮಾಡಲು ಗಿರಿಯಾಪುರ ಕ್ಷೇತ್ರದಲ್ಲಿ ಇವರಿಂದಲೇ ಸ್ಥಾಪಿಸಲ್ಪಟ್ಟಿರುವ ಶ್ರೀಗುರು ಕುಮಾರಾಶ್ರಮವನ್ನು ಸೇರಿ ಶ್ರೀ ಶ್ರೀಯವರಲ್ಲಿ ಪ್ರಾರ್ಥಿಸಿ

ಕೊಂಡಾಗ ಒಳಗಣ್ಣಿನಿಂದ ನನ್ನಧಿಕಾರವನ್ನು ನೋಡಿ ತಮ್ಮಲ್ಲಿರುವ ಅಪಾರವಾದ ಅನುಭವಾಮೃತವನ್ನು ಪಾನಮಾಡುವ ಸುಸಮಯವನ್ನು ನನಗೆ ಕಲ್ಪಿಸಿ ಕೊಟ್ಟು ಮಾರ್ಗದರ್ಶನವಿತ್ತರು. ಅಲ್ಲವೇ ನನ್ನಂತೆ ಇನ್ನು ಅನೇಕರನ್ನು ತಣಿಸಿದ್ದಾರೆ. ತಣಿಸುತ್ತಲೂ ಇದ್ದಾರೆ, ತಣಿಸುವರು. ಶ್ರೀ ಶ್ರೀಗಳವರ ಅಮೃತ ಹಸ್ತದಿಂದ ಹೊರಹೊಮ್ಮಿದ ಉದ್ಗ್ರಂಥಗಳೆಲ್ಲವೂ ಮೇಲಿನ ವೇದವಾಕ್ಯವನ್ನು ಸಮರ್ಥಿಸುತ್ತಿವೆ. ಅಂದರೆ ಸಂಸಾರದಲ್ಲಿದ್ದ ಸಮಸ್ತ ಜೀವಗಳನ್ನು ಅರ್ಥಾತ್ ಮಾನವ ಕುಲವನ್ನು ಸನ್ಮಾರ್ಗಕ್ಕೊಯ್ಯುವ ಕೈ ದೀವಟಿಗೆಗಳಾಗಿವೆ.

" ಅಸತೋ ಮಾ ಸದ್ಗಮಯ ತಮಸೋ ಮಾ ಜ್ಯೋತಿರ್ಗಮಯ
ಮೃತ್ಯೋರ್ಮಾ ಅಮೃತಂ ಗಮಯ ",

ಎಂದು ಆರ್ಯೋಕ್ತಿಯನ್ನು ಸಮರ್ಥಿಸುತ್ತಿವೆ.

ಧನ್ಯಾಸ್ತೇ ತತ್ತ್ವಮೇತತ್ ಯೇ ಅಸಂಶಯೇನ ವಿಜಾನತೆ ।
ಅಂತರಾಯ ಶತೇಽಗ್ರ್ಯಸ್ಥಾತ್ಮಾ ಸಮವಜಾನತಿ ।
ಕಿಂಚ ಮಾನವ ಮಾತ್ರಸ್ಯ ಮಾನಮಾತನ್ಮತೇ ಸದಾ ।

ಯಾರು ಸಂಶಯವಿಲ್ಲದೆ ಆತ್ಮ ಸಾಕ್ಷಾತ್ಕಾರ ಮಾಡಿಕೊಂಡ ಮಹಾತ್ಮರ ವಾಕ್ಯಗಳನ್ನು ನಂಬುವರೋ ಮತ್ತು ಆಚರಿಸುವರೋ ಮಾನವ ಮಾತ್ರರೆಲ್ಲರಲ್ಲಿಯೂ ದಯಾದಾಕ್ಷಿಣ್ಯ ಪುಳ್ಳವರಾಗಿ ಲೋಕ ಸಂಗ್ರಹಾರ್ಥ ಕರ್ತವ್ಯ ತತ್ಪರರಾಗುತ್ತಾರೆಯೋ ಅವರೇ ನಿಜವಾದ ತತ್ತ್ವಜ್ಞಾನಿಗಳೆಂಬ ವ್ಯಾಸೋಕ್ತಿಯಂತೆ ಶ್ರೀ ಶ್ರೀಗಳವರ ನಡೆ-ನುಡಿಗಳು ಸಮರ್ಪಕವಾಗಿದ್ದು ತಾವು ಗುರು ಪೀಠದಲ್ಲಿದ್ದರೂ ಗುರುತ್ವಾಭಿಮಾನ ರಹಿತರಾಗಿದ್ದಾರೆ. ಮತ್ತು ವಿಷಬಳ್ಳಿಯಂತೆ ಹಬ್ಬಿರುವ ಗುರು-ವಿರಕ್ತರೆಂಬ ಭಿನ್ನ ಭಾವನೆಗೆ ಎಳ್ಳಷ್ಟು ತಮ್ಮಂತರಂಗದಲ್ಲಿ ಎಡೆಗೊಡರು. ಅಲ್ಲದೆ ತಮ್ಮ ಚಿದ್ಗುರುಗಳಾದ ಲಿಂ|| ಶ್ರೀ ಮ. ನಿ. ಪ್ರ. ಕುಮಾರ ಶಿವಯೋಗಿಗಳು, ಹಾನಗಲ್, ಇವರ ಸ್ಮಾರಕವಾಗಿ ಶಿವಾದ್ವೈತ ತತ್ತ್ವಪ್ರಚಾರ ಸಮಿತಿಯನ್ನು ಸ್ಥಾಪಿಸಿ ತದ್ವಾರ ಸಮಾಜಕ್ಕೆ ಮೃತ್ಯುಪ್ರಾಯವಾದ ಗುರು-ವಿರಕ್ತರ ಕಲಹವನ್ನು ಭಿನ್ನಾಭಿಪ್ರಾಯವನ್ನು ಶಮನಗೊಳಿಸಲು ಅವಿಶ್ರಾಂತವಾಗಿ ಪರಿಶ್ರಮಿಸುತ್ತಿದ್ದಾರೆ. ಮತ್ತು ಶಿವ ಲಾಂಛನಧಾರಿಗಳಾಗಿ ತಮ್ಮೆಡೆಗೆ ಬಂದ ಸಮಸ್ತ ಭಕ್ತಮಾಹೇಶ್ವರರನ್ನು ಸಮತಾದೃಷ್ಟಿಯಿಂದ ಕಾಣುತ್ತಾರೆ. " ಲಾಂಛನಕ್ಕೆ ಶರಣೆಂಬೆ " ಎಂದು ಬಸವ ಮಹಾನುಭಾವರು ಹೇಳಿದ ವಾಕ್ಯವನ್ನು ಅಕ್ಷರಸಹ ಪಾಲಿಸುತ್ತಾರೆ.

ಆಚಿನೋತಿಹಿ ಶಾಸ್ತ್ರಾರ್ಥಾನಾಚಾರೇ ಸ್ಥಾಪಯತ್ಯಪಿ ।
ಸ್ವಯಮಾಚರತೇ ಯಸ್ತು ಸ ಆಚಾರ್ಯ ಇತಿ ಸ್ಮೃತಃ ।

ಯಾವನು ವೀರಶೈವ ಶಾಸ್ತ್ರೋಕ್ತ ರಹಸ್ಯಾರ್ಥಗಳನ್ನು ಶಿಷ್ಯರಿಗೆ ಬೋಧಿಸಿ ಅದಂತೆ ತಾನೂ ಆಚರಿಸಿ ವೀರಶೈವಾಚಾರವನ್ನು ನೆಲೆಗೊಳಿಸುತ್ತಾನೆಯೋ ಅವನೇ

ಆಚಾರ್ಯನೆಂದು ಕರೆಯಿಸಿಕೊಳ್ಳಲು ಸಮರ್ಥನೂ ಎಂಬುದಾಗಿ ಹೇಳಿದ ಸಿದ್ಧಾಂತ ಶಿಖಾಮಣಿಯೋಕ್ತಿಯಂತೆ ಶ್ರೀ ಶ್ರೀಗಳವರು ತಮ್ಮ ಪವಿತ್ರವಾದ ನಡೆ–ನುಡಿಗಳಿಂದ, ಶಿವಾಚಾರ್ಯ ಶ್ರೇಷ್ಠರಾಗಿದ್ದಾರೆ.

ಕೆಡೆನೆಡೆಯಪೆ ಕೆಡೆನುಡಿಯಪೆ ಅನ್ಯರ ಪ್ರತಿಪಾದಿಸದಿದ್ದರೆ ।
ಏನು ಮಾಡನಯ್ಯ ಲಿಂಗವು ? ಏನು ಕೊಡನಯ್ಯಾ ಲಿಂಗವು ?
ತಾನೇನ ಬೇಡಿದುದನೀವನಾಗಿ ನಂಬಿಕೆಯುಳ್ಳ ಶಿವಭಕ್ತಂಗೆ
ಇದೇ ದಿವ್ಯ ಕೂಡಲ ಸಂಗಮ ದೇವಾ ॥

ಕೆಟ್ಟ ನಡೆನುಡಿಗಳನ್ನು ಬಿಟ್ಟು, ಅನ್ಯರನ್ನು ನಿಂದಿಸದೆ, ತಾನು ಶುದ್ಧನಾಗಿ ಶಿವಲಿಂಗವನ್ನು ಉಪಾಸನೆಗೈದಲ್ಲಿ ಆ ಲಿಂಗದೇವನು ಎಲ್ಲಾ ಇಷ್ಟಾರ್ಥಗಳನ್ನು ನೆರವೇರಿಸುವನೆಂಬ ಶ್ರೀ ಬಸವನ ವಚನದಂತೆ ಶ್ರೀ ಶ್ರೀಗಳವರು ಕೆಟ್ಟ ನಡೆನುಡಿ–ಪರನಿಂದೆಗಳನ್ನು ಹೇಯವೆಂದು ತಮ್ಮಾಶ್ರಮದ ಅಕ್ಕಪಕ್ಕಗಳಲ್ಲಿಯೂ ಸುಳಿಯದಂತೆ ಜಾಗರೂಕರಾಗಿ ವರ್ತಿಸುತ್ತಾರೆ. ಆದುದರಿಂದಲೇ ಇವರು ಬಯಸಿದ ಮತ್ತು ಬಯಸದ ಆವಶ್ಯಕವಾದ ಸಕಲ ಪಡಿ ಪದಾರ್ಥಂಗಳೂ ಇವರ ಸಮಾಜ ಸೇವೆಗೆ ಚ್ಯುತಿಬಾರದಂತೆ ತಾವಾಗಿಯೇ ಉಪಸ್ಥಿತವಾಗುತ್ತಿರುವುದೊಂದು ಪ್ರತ್ಯಕ್ಷ ನಿದರ್ಶನವಾಗಿದೆ. ಕಾಡನ್ನು ನಾಡನ್ನಾಗಿಸಿದ ಹಿರಿಮೆ–ಬೀಡನ್ನು ಬೃಹತ್ತಾಗಿ ನಿರ್ಮಿಸಿದ ಗರಿಮೆ ಶ್ರೀಪೂಜ್ಯ ಪಾದರಿಗೆ ಸಲ್ಲತಕ್ಕದಾಗಿದೆ.

ಭೀಮಂ ವನಂ ಭವತಿ ಯಸ್ಯಪುರಂ ಪ್ರಧಾನಂ ।
ಸರ್ವೋಜನಃ ಸ್ವಜನತಾ ಮುಪಯಾತಿ ತಸ್ಯ ।
ಕೃತ್ಸ್ನಾಚ ಭೂರ್ಭವತಿ ಸನ್ನಿಧಿ ರತ್ನ ಪೂರ್ಣಾ ।
ಯಸ್ಯಾಸ್ತಿ ಪೂರ್ವ ಸುಕೃತಂ ವಿಪುಲಂ ನರಸ್ಯ । (ನೀತಿ ಶತಕ)

ಪುರಾಕೃತ ಸತ್ಕರ್ಮ ಸಂಜಾತ ಯಾವ ಮಹಾತ್ಮನಲ್ಲಿರುತ್ತದೆಯೋ ಆ ಪುಣ್ಯಾತ್ಮನು ವಾಸಗೈವ ಭೀಕರವಾದ ಕಾಡು ನಾಡಾಗಿ ಪರಿಣಮಿಸುತ್ತದೆ. ಅಲ್ಲದೇ ಸಮಸ್ತ ಜನರೂ ಕಿಂಕರತ್ವದಿಂದ ಆ ಮಹಾತ್ಮನಿಗೆ ವಶರಾಗುತ್ತಾರೆ. ಅಲ್ಲದೆ ಆ ಮಹಾತ್ಮನು ಪಾದವಿಟ್ಟ ನೆಲವು ಚಿಂತಾಮಣಿಯಂತೆ ಸಮಸ್ತ ಸದಿಚ್ಛೆಗಳನ್ನು ಈಡೇರಿಸುವ ಕ್ಷೇತ್ರವಾಗುತ್ತದೆಂಬ ಶ್ರೀ ಭರ್ತೃಹರಿಯ ವಾಕ್ಯದಂತೆ ಶ್ರೀ ಶ್ರೀಗಳವರು ಶ್ರೀಗುರು ಕುಮಾರಾಶ್ರಮವನ್ನು ನಿರ್ಮಿಸಿದ ಕಾಡು ಈಗ ಜನರು ನಿರ್ಭಯದಿಂದ ಬಂದುಹೋಗುವ ಬೀಡಾಗಿದೆ ಆ ಪ್ರಾಂತದ ಹಾಗೂ ಕರ್ನಾಟಕದ ಸಮಸ್ತ ಪಂಡಿತ ಪಾಮರರಿಂದಲೂ ಆದರಣೀಯ ಗುರುವರ್ಯರಾಗಿದ್ದಾರೆ. ಅಲ್ಲದೆ ಶ್ರೀ ಶ್ರೀಗಳವರು ಪಾದವಿಟ್ಟ ಮೇಲೆ ಗಿರಿಯಾಪುರವು ಸರ್ವ ವಿಧದಿಂದಲೂ ಸುಖ ಸೌಲಭ್ಯಗಳನ್ನು ಹೊಂದಿದ ಪ್ರಸಿದ್ಧ ಗ್ರಾಮವಾಗಿ ಮಾರ್ಪಟ್ಟಿರುವುದಲ್ಲದೆ ಆ ಗ್ರಾಮದಲ್ಲಿ ಮೊದಲಿದ್ದ ರೋಗ, ದಾರಿದ್ರ್ಯ, ಅಜ್ಞಾನಗಳು ಕಾಣದಂತಾಗಿವೆ

ಅಲ್ಲಿಯ ಜನರು ಸರ್ವ ವಿಧದಿಂದಲೂ ಸ್ವಾವಲಂಬಿಗಳಾಗಿದ್ದಾರೆ. ದಯಾ ದಾಕ್ಷಿಣ್ಯ ಗಳಿಂದ ಕೂಡಿದ್ದಾರೆ. ಅಲ್ಲದೆ ಶ್ರೀಗುರು ಕುಮಾರಾಶ್ರಮದಲ್ಲಿ ನಡೆಯುವ ಶಿವಾದ್ವೈತ ತತ್ತ್ವದ ಪ್ರಚಾರದ ಫಲವಾಗಿ ಆ ಪ್ರಾಂತವೇ ಧರ್ಮಜಾಗ್ರತೆಯಿಂದ, ಸುನೀತ ವಾಗಿದೆ. ಅಲ್ಲದೆ ಸತ್ಶ್ರವಣ, ಸತ್ಸಂಗ, ಸದಾಚಾರಗಳ ಫಲವಾಗಿ ಆ ನೆಲದಲ್ಲಿ ಅನೇಕ ಶರಣ-ಶರಣೆಯರು ಉದ್ಭವಿಸಿದ್ದಾರೆ ಉದ್ಭವಿಸುತ್ತಲೂ ಇದ್ದಾರೆ. ಇದಲ್ಲವೇ ಶ್ರೀ ಶ್ರೀಗಳಲ್ಲಿದ್ದ ಕ್ರಿಯಾಸಿದ್ಧಿಯ ಪ್ರತೀಕ.

ಶರಣಂ ಶಾಂಭವ ಯೋಗಿಯಿರ್ದ ನೆಲನೇಕ್ಷೇತ್ರಂ ಪವಿತ್ರಂ ಪರಂ
ಭರದಿಂದೇರಿದ ಬೆಟ್ಟಮೇ ಘನತರಂ ಶ್ರೀ ಪರ್ವತಂ ಸ್ವೇಚ್ಛೆಯಿಂ ||
ದಿರದಾಕ್ರೀಡಿಸಲೆಂದು ಪೊಕ್ಕ ಜಲಮೇ ತೀರ್ಥಂ ಮಹಾಪಾವನಂ |
ನಿರುತಂ ಲೀಲೆಯೊಳೊಲ್ದು ಮಾಡಿದುದೆ ತಾಂ ದೈವಂ ಶಿವಾವಲ್ಲಭಾ ||

ಶಿವಯೋಗಿಯು ವಾಸವಾಗಿರುವ ಭೂಮಿಯೇ ಪವಿತ್ರ ಕ್ಷೇತ್ರವು. ಅಂಥ ಶಿವ ಯೋಗಿಯು ಹತ್ತಿದ ಬೆಟ್ಟವೇ ಶ್ರೀಗಿರಿಯು ಆತನು ಪ್ರೀತಿಪೂರ್ವಕವಾಗಿ ವಿಲಾಸದಿಂದ ಮುಟ್ಟಿದುದೇ ದೇವರು ಎಂಬುದಾಗಿ ಶ್ರೀ ಮೊಗ್ಗಿ ಮಾಯಿದೇವರ ಅಭಿಪ್ರಾಯದಂತೆ ಶಿವಯೋಗಿ ಶ್ರೀ|| ಲಿಂ|| ಶ್ರೀ|| ಕುಮಾರ ಮಹಾಸ್ವಾಮಿಯ ಕೃಪಾಪಾತ್ರರಾಗಿ ಇವರ ಪ್ಪಣೆಯ ಪ್ರಕಾರ ಸಚ್ಛೀಲಾಚರಣೆಯನ್ನು ನಡೆಸುತ್ತ ಬಂದ ಶ್ರೀ ಶ್ರೀಗಳವರು ಪಾದ ವಿಟ್ಟ ಶ್ರೀ ಗುರುಕುಮಾರಾಶ್ರಮವೇ ಪವಿತ್ರ ಕ್ಷೇತ್ರ. ಗಿರಿಯಾಪುರವೇ ಅವರ ಪಾದ ಸ್ಪರ್ಶದಿಂದ ಶ್ರೀಗಿರಿಯಾಗಿದೆ. ಇವರೊಲಿದು ಮುಟ್ಟಿದ ಉಜ್ಜನಿ ಮರುಳ ಸಿದ್ಧೇಶ್ವರನೇ ದೇವರಾಗಿದೆ. ಇವರಿಂದುಪದೇಶ ಪಡೆದ ಶ್ರೀ ಜಿ. ಸಿ. ಶಿವರುದ್ರಪ್ಪನವರು ಶರಣ ರೆನಿಸಿದ್ದಾರೆ.

ಸಮಾಹಿತೋ ಬ್ರಹ್ಮ ಪರೋಽಪ್ರಮಾದಿ |
ಶುಚಿಃ ತಥೈಕಾಂತರತಿಃ ಜಿತೇಂದ್ರಿಯಃ |
ಸಮಾಪ್ನುಯಾತ್ ಯೋಗಮಿಮಂ ಮಹಾಮನಾಃ |
ವಿಮುಕ್ತಿ ಮಾಪ್ನೋತಿ ತತಶ್ಚ್ಯ ಯೋಗತಃ |
ಕುಲಂ ಪವಿತ್ರಂ ಜನನೀ ಕೃತಾರ್ಥಾಃ |
ವಸುಂಧರಾ ಭಾಗ್ಯವತೀಚ ತೇನ |
ವಿಮುಕ್ತಿ ಮಾರ್ಗೇ ಸುಖಸಿಂಧು ಮಗ್ನಂ |
ಲಗ್ನಂ ಪರೇ ಬ್ರಹ್ಮಣಿ ಯಸ್ಯಚೇತಃ |

(ಸ್ಕಾಂದ ಪುರಾಣ)

ಏಕಾಗ್ರಚಿತ್ತನೂ ಬ್ರಹ್ಮಚಿಂತನ ಪರಾಯಣನೂ ಪ್ರಮಾದವಿಲ್ಲದವನೂ ಶುದ್ಧನೂ ಏಕಾಂತ ಪ್ರೇಮಿಯೂ ಜಿತೇಂದ್ರಿಯನೂ ಯಾವನು ಆಗಿರುವನೋ ಆ ಮಹಿಮನು ಶಿವಯೋಗದಲ್ಲಿ ಸಿದ್ಧಿಯನ್ನು ಪಡೆಯುವನು. ಹಾಗೂ ಈ ಶಿವ

ಯೋಗದ ಪ್ರಭಾವದಿಂದ ಶಿವಸಾಯುಜ್ಯವನ್ನು ಪಡೆಯುವನು. ಅವನ ಚೇತಸ್ಸು ಲಿಂಗಾಂಗ ಸಾಮರಸ್ಯ ಮಾರ್ಗದಲ್ಲಿ ಪ್ರವೇಶಿಸಿ ಪರಬ್ರಹ್ಮ ರೂಪಸ್ಥಲದಲ್ಲಿ ಸಂಲಗ್ನ ವಾಗಿ ಸುಖ ಸಿಂಧುವಿನಲ್ಲಿ ಮಗ್ನನಾಗಿರುವುದೋ ಆತನ ಕುಲವು ಪವಿತ್ರವಾಯಿತು. ಜನನಿಯು ಧನ್ಯಳಾದಳು. ಹಾಗೂ ಸಮಸ್ತ ಪೃಥ್ವಿಯೇ ಪುನೀತವಾಯಿತು. ಎಂಬ ಪುರಾಣೋಕ್ತಿಯಂತೆ ವಾಚಕರೇ ಶ್ರೀ ಷ. ಬ್ರ ಶ್ರೀ ಸದಾಶಿವ ಶಿವಾಚಾರ್ಯ ಮಹಾ ಸ್ವಾಮಿಗಳವರ ಪಾದಸ್ಪರ್ಶದಿಂದ ಸಮಸ್ತವೂ ಪವಿತ್ರವೆನಿಸಿದೆ. ಈ ಮಹಾನುಭಾವರ ಹೃದಯಾಂತರಾಳದಲ್ಲಿ ಅಘಟಿತಘಟನಾ ಸಾಮರ್ಥ್ಯ ಹುದುಗಿಕೊಂಡಿದ್ದು ಆ ಸಾಮರ್ಥ್ಯವು ಇವರ ನಡೆನುಡಿಗಳ ಮುಖಾಂತರ ಹೊರಹೊಮ್ಮಿ ಅಸ್ಮದಾದಿಗಳನ್ನು ಪುನೀತಗೊಳಿಸಿದೆ. ಇದರಂತೆ ಮುಂದೆಯೂ ಶ್ರೀ ಶ್ರೀಗಳವರ ಕ್ರಿಯಾಸಿದ್ಧಿಯ ಫಲವಾಗಿ ಅನೇಕಾನೇಕ ಜಗತ್ಕಲ್ಯಾಣದಾಯಕವಾದ ಮಹಾತ್ಕಾರ್ಯಗಳು ನಡೆದು ನಮ್ಮ ನಾಡನ್ನು ತದ್ವಾರಾ ನಮ್ಮ ರಾಷ್ಟ್ರವನ್ನು ಅಲ್ಲದೆ ಜಗತ್ತನ್ನೂ ಉತ್ತರೋತ್ತರ ಉದ್ಧರಿಸಲೆಂದು ಹಾರೈಸಿ ಶ್ರೀ ಶ್ರೀಗಳವರಿಗೆ ಶತಾಯುಷಿಯಾಗಲೆಂದು ಈ ಷಷ್ಟ್ಯಬ್ಧ ಶಾಂತಿ ಶುಭ ಪ್ರಸಂಗದಲ್ಲಿ ಜಗದೀಶನನ್ನು ಪ್ರಾರ್ಥಿಸಿ ನನ್ನ ಪಾಲಿನ ಸೇವೆಯನ್ನು ಸಲ್ಲಿಸಿದ್ದೇನೆ.

ಸರ್ವೇಭವಂತು ಸುಖಿನಃ ಸರ್ವೇಸಂತು ನಿರಾಮಯಾಃ ।
ಸರ್ವೇ ಭದ್ರಾಣಿ ಪಶ್ಯಂತು ಮಾಕಶ್ಚಿತ್ ದುಃಖಭಾಗ್ ಭವೇತ್ ॥

ಓಂ ಶಾಂತಿಃ ಶಾಂತಿಃ ಶಾಂತಿಃ.

—ಶ್ರೀ ಮ. ನಿ. ಪ್ರ. ಚನ್ನವೀರ ಮಹಾಸ್ವಾಮಿಗಳವರು,
ಶ್ರೀ ಶಿವಲಿಂಗೇಶ್ವರ ವಿರಕ್ತಮಠ, ಮೂಡಿ (ಬನವಾಸಿ).

---

# ಶ್ರೀ ಸದಾಶಿವ ಶಿವಾಚಾರ್ಯರು.

## ( ನಾ ನೋಡಿದಂತೆ )



ಭೂಗರ್ಭದಲ್ಲಿ ವಿಸ್ಮಯಕಾರಕಗಳಾದ ಹಲಕೆಲವು ರಸಾಯನ ದ್ರವ್ಯಗಳು ಇರುವಂತೆ ಖಗೋಲದಲ್ಲಿಯೂ ಹಲವಾರು ಅದ್ಭುತ ಚಮತ್ಕಾರಗಳು ಗೋಚರಿಸುತ್ತವೆ. ಸಾಗರದ ಅಂತರಾಳದಲ್ಲಿ ಅನಂತಾನಂತ ಅನರ್ಘ್ಯರತ್ನಗಳು ಸಿಗುವಂತೆ ಭೂಗೋಲದ ಮೇಲೆಯೂ ಆ ಕೆಲವು ಅದ್ಭುತಗಳುಂಟು. ಭೂಗೋಲದ ಮೇಲಿರುವ ಅದ್ಭುತವೆಂದರೆ 'ನೋಡಿ ಕೆಲರಂ, ಮಾತನಾಡಿ ಕೆಲರಂ, ಮುಟ್ಟಿ ಕೆಲರಂ, ಉದ್ಧರಿಸುವ ಮಹಾನುಭಾವರು.

ಸಂಶೋಧನೆಯಲ್ಲಿ ವಿಚಕ್ಷಣನಾದ ವಿಜ್ಞಾನಿಯು ಭೂಗರ್ಭವನ್ನು ಬಗಿದು ರಸಾಯನ ದ್ರವ್ಯಗಳನ್ನೂ, ಸಮುದ್ರದ ಗಂಭೀರವಾದ ಆಳದಲ್ಲಿ ಇಳಿದು ಮುತ್ತು ರತ್ನಗಳನ್ನೂ ತೆಗೆದು ಸುಖಕ್ಕೆ ಸಾಧನವನ್ನಾಗಿ ಮಾಡಿಕೊಳ್ಳುವನು. ಭೂಗರ್ಭವನ್ನು ಪ್ರವೇಶಿಸುವದು, ಇಲ್ಲವೆ ಸಮುದ್ರದ ತಳವನ್ನು ಮುಟ್ಟುವದು ವಿಜ್ಞಾನಿಗೆ ಸಾಕಾಗದೆ ಇಂದು ಖಗೋಲದಲ್ಲಿ ಆಕಾಶವಾಹನಗಳಿಂದ ಬೇಕಾದತ್ತ ಹಕ್ಕಿಯಂತೆ ಹಾರಿ ಅಲ್ಲಿಯ ಚಂದ್ರಲೋಕ ; ಮಂಗಳ ಗ್ರಹಗಳನ್ನು ಗೊತ್ತುಹಚ್ಚುವ ಹವಣಿನಲ್ಲಿರುವನು. ಕಾಲತ್ರಿತಯದಲ್ಲಿಯೂ ನೀರಲ್ಲದ, ಆದರೂ ಜಲದಂತೆ ತೋರುವ ಬಿಸಿಲ್ಗುದುರೆಗೆ ಹರಿಣವು ನೀರೆಂದು ಬಗೆದು ಹೌಹಾರಿ ಓಡಿ ಓಡಿ ತನ್ನ ನೀರಡಿಕೆಯನ್ನು ಕಳೆದುಕೊಳ್ಳದೇ ವಿಪರೀತವಾಗಿ ತನ್ನ ಹರಣವನ್ನೇ ಕಳೆದುಕೊಳ್ಳುವಂತೆ, ವಿಜ್ಞಾನಿಯು ಶಾಂತಿಯ ಸಂಶೋಧನೆಗಾಗಿ ಭೂಗೋಲ ಖಗೋಲಗಳನ್ನು ಅಗಿದಗಿದು ಜಗಿಜಗಿದು ಕೊನೆಗೂ ಶಾಂತಿಯನ್ನು ಹೊಂದದೆ ದುಃಖವನ್ನೇ ಪಡೆಯುವನು. ಅಂತೆಯೇ ಕಠೋಪನಿಷತ್ತಿನಲ್ಲಿ ಋಷಿಯು "ತಮಾತ್ಮಸ್ಥಂಯೇಽನುಪಶ್ಯಂತಿ - ಧೀರಾಸ್ತೇಷಾಂ ಶಾಂತಿಃ ನೇತರೇಷಾಂ" ಯಾರು ಆತ್ಮಾನಾತ್ಮ ವಿಚಾರಮಾಡಿ ಸದ್ಗುರು ಸಾನ್ನಿಧ್ಯದಲ್ಲಿ "ಅಧೀಹಿ ಭಗವನ್ ಬ್ರಹ್ಮವಿದ್ಯಾಂ" ಎಂದು ತ್ರಿಕರಣಗಳಿಂದ ಅಂಗಲಾಚಿ ಬೇಡಿಕೊಂಡು ಆತ್ಮವಿದ್ಯೆಯನ್ನು ಪಡೆದು ಉಗ್ರಸಾಧನಗಳನ್ನು ಕಠೋರವಾಗಿ ಮಾಡಿ ಆತ್ಮಸಾಕ್ಷಾತ್ಕಾರವನ್ನು ಮಾಡಿಕೊಳ್ಳುವರೋ ಅವರಿಗೆ ಅಚ್ಚಳಿಯದ

ಶಾಂತಿಯು ಸಿಗುವದು. 'ಇತರೇಷಾಂ ನ' ಈ ಮಾರ್ಗವನ್ನು ಬಿಟ್ಟವರಿಗೆ ಎಂದಿಗೂ ಶಾಂತಿಯು ಸಿಗದು ಎಂದು ನಿಷ್ಠುರವಾದರೂ ಸತ್ಯವಾದ ಮಾತನ್ನೇ ಹೇಳಿರುವನು.

ಪಿಂಡಾಂಡದ ಸಂಶೋಧನೆಯನ್ನು ಮಾಡಿ ಆತ್ಮ ಸಂದರ್ಶನವನ್ನು ಮಾಡಿ ಕೊಳ್ಳುವ ವಿಧಾನದಲ್ಲಿ ಭಾರತೀಯ ಷಡ್ದರ್ಶನಕಾರರು ಬಹಳೇ ಸುವ್ಯವಸ್ಥಿತವಾದ, ಸುಸಂಬದ್ಧವಾದ ಪ್ರಯತ್ನವನ್ನು ಮಾಡಿ ತಾವು ಕಂಡು ಅನುಭವಿಸಿದ ಸುಂದರ ಪ್ರಮೇಯಗಳನ್ನು ಆಯಾಯ ಶಾಸ್ತ್ರಗಳಲ್ಲಿ ಮಂಡಿಸಿರುವರು. ಪಿಂಡಾಂಡದ ಸಂಶೋಧನೆಯಾದರೆ ಬ್ರಹ್ಮಾಂಡದ ಸಂಶೋಧನೆಯು ತಾನೇ ಆಗುವದು. ವಿಜ್ಞಾನಿಯು ಇಂದು ಧ್ವನಿವಾಹಕ - ಯಂತ್ರ (ರೇಡಿಯೋ) ವನ್ನು ಕಂಡುಹಿಡಿದು ಕೋಟಿ ಕೋಟಿ ಮೈಲುಗಳಾಚೆಗಿನ ಶಬ್ದವನ್ನು ಕೂತಲ್ಲಿಯೇ ಕೇಳುವನು. ದೇಶ ವಿದೇಶಗಳಲ್ಲಿ ನಡೆವ ನಾಟಕ ಸಭೆ ಸಮ್ಮೇಲನ ಮೊದಲಾದ ಸುಂದರ ದೃಶ್ಯ ಗಳನ್ನು ಕೂತಲ್ಲಿಯೇ ದೂರದರ್ಶಕ ಯಂತ್ರ (ಟೆಲಿವಿಜನ್)ದಿಂದ ಕಾಣುವನು. ಬ್ರಹ್ಮಾಂಡದಲ್ಲಿ ವಿಜ್ಞಾನಿಯ ಕೈವಾಡವು ಇಂತಿರುವದು. ಆದರೆ ಪಿಂಡಾಂಡದ ಸಂಶೋಧನೆಯಲ್ಲಿ ಮುಂದುವರಿದ ತತ್ತ್ವಜ್ಞಾನಿಯು ಏನೊಂದೂ ಯಂತ್ರದ ಸಹಾಯವಿಲ್ಲದೆ ದೂರಶಬ್ದ, ದೂರರೂಪ ಮುಂತಾದವುಗಳನ್ನು ಸಹಜವಾಗಿಯೇ ಹೊಂದಬಲ್ಲನು. ಇವಕ್ಕೆ ಯೌಗಿಕ ಪ್ರತ್ಯಕ್ಷವೆನ್ನುವರು.

ಜಿಜ್ಞಾಸುವಾದ ಓರ್ವ ಶಿಷ್ಯನು ತನ್ನ ಸದ್ಗುರುವನ್ನು ಕುರಿತು ಪ್ರಪಂಚದಲ್ಲಿ ಬಹಳೇ ಸುಲಭವಾದ ಕೆಲಸವಾವುದು ? ಎಂದು ಕೇಳಿದನಂತೆ. ಅದಕ್ಕೆ ಗುರುಗಳು "ಇತರರಿಗೆ ಬುದ್ಧಿ ಹೇಳುವುದು" ಎಂದು ಪ್ರತ್ಯುತ್ತರವಿತ್ತರಂತೆ. ಇದರಂತೆ ಪ್ರಪಂಚದಲ್ಲಿ ಅತಿ ಕಠಿಣವಾದ ಕೆಲಸವಾವುದು ? ಎಂದು ಕೇಳಲು 'ತನ್ನನ್ನು ತಾನು ಅರಿಯುವದು.' ಇದೇ ಬಹಳ ಕಠಿಣ ಕೆಲಸವೆಂದು ಹೇಳಿದರಂತೆ. ತತ್ತ್ವ ಶಾಸ್ತ್ರದ ವಾದವು ಕೋಹಂ ಎಂಬಲ್ಲಿಂದ ಪ್ರಾರಂಭವಾಗಿ ಸೋಹಂ ಎಂಬಲ್ಲಿಗೆ ಮುಗಿಯುವದು. ಶ್ರೀಮನ್ನಿಜಗುಣರು "ಆರು ನಾನೆಂದು ವಿಚಾರಿಸು" ಎಂದೂ ಶ್ರೀ ಸರ್ಪಭೂಷಣರು "ತನ್ನ ತಾನರಿದೊಡೆ ಮುಕ್ತ, ತನ್ನ ತಾನರಿಯದೊಡೆ ಹೇಗೆ ವಿರಕ್ತ?" ಎಂದು ಹೇಳಿರುವರು.

ಗ್ರೀಕ್‌ದೇಶದ ವಿಶ್ವವಿದ್ಯಾನಿಲಯಗಳ ಮಹಾದ್ವಾರದ ಮೇಲ್ಭಾಗದಲ್ಲಿ "ನಿನ್ನನ್ನು ನೀನು ಅರಿತುಕೋ" ಎಂದು ಬರೆಯುವರಂತೆ. ಎಲ್ಲ ವಿದ್ಯೆಗಳಲ್ಲಿ ತನ್ನನ್ನು ತಾನರಿವ ವಿದ್ಯೆಯೇ ಮಹತ್ತರವಾದುದು. ಇದರಿಂದಲೇ ಆತ್ಯಂತಿಕ ಶಾಂತಿಯು ದೊರೆಯುವದು.

"ಲಿಂಗಾಂಗ ಸಾಮರಸ್ಯ ಬೋಧಿನೀ ವಿದ್ಯೈವ ವಿದ್ಯಾ
ತಸ್ಯಾಂ ಯೇ ಶೈವಾಃ ರಮಂತೇ ತೇ ವೀರಶೈವಾಃ"

ಎಂದು ಶ್ರೀ ಜಗದ್ಗುರು ರೇಣುಕಾಚಾರ್ಯರು ವೀರಶೈವ ಶಬ್ದದ ನಿರ್ವಚನವನ್ನು ಮಾಡಿರುವರು. ೧೯ನೇ ಶತಮಾನದ ಉತ್ತರಾರ್ಧದಲ್ಲಿ ವೀರಶೈವ ಮತವು ನಾಮ

ಮಾತ್ರವಲ್ಲಿತ್ತು. ಧಾರ್ಮಿಕ, ನೈತಿಕ, ಶೈಕ್ಷಣಿಕ, ಔದ್ಯೋಗಿಕ–ಮೊದಲಾದ ತನ್ನ ಅಂತರ್ಬಲ ಬಾಹ್ಯಬಲಗಳನ್ನು ಕಳೆದುಕೊಂಡು ಹತವೀರ್ಯವಾಗಿತ್ತು. ಆ ದುರ್ಧರ ಪ್ರಸಂಗದಲ್ಲಿ ಶ್ರೀ ಹಾನಗಲ್ಲ ಶಿವಯೋಗಿಗಳವರ ಅವತಾರವಾಯಿತು. ಶ್ರೀಗಳವರು ವಿಶ್ವಪ್ರಯತ್ನವನ್ನು ಮಾಡಿ ಸಮಾಜವು ಸರ್ವಾಂಗ ಸುಂದರವಾಗುವಂತೆ ಮಾಡಿದರು. ಶ್ರೀಗಳವರು ಮಾಡಿದ ಮಹತ್ಕಾರ್ಯಗಳೆಂದರೆ ಒಂದು ಶಿವಯೋಗ ಮಂದಿರ ಸಂಸ್ಥೆ; ಮತ್ತೊಂದು ವೀರಶೈವ ಮಹಾಸಭೆ. ಈ ಎರಡು ವೀರಶೈವ ಸಮಾಜ ಪುರುಷನಿಗೆ ಎರಡು ಕಂಣುಗಳಂತೆ ಕಂಗೊಳಿಸುತ್ತಿರುವವು. ಗಿಡದ ಮೂಲಕ್ಕೆ ನೀರೆರೆದರೆ ಮುಂದೆ ಶಾಖೋಪಶಾಖೆಗಳು ಚಿಗಿಯುವಂತೆ ಸಮಾಜದ ಮೂಲದಂತಿರುವ ಗುರುವರ್ಗದ ಸುಧಾರಣೆಯಾದರೆ ಸಮಾಜವು ತಾನೇ ಸುಧಾರಿಸುವದು ಎಂದು ದೀರ್ಘ ವಿಚಾರಮಾಡಿ ಸಮಾಜದಲ್ಲಿಯ ಮಠಗಳ ಚಿಕ್ಕ ಚಿಕ್ಕ ವಟುಗಳನ್ನು ಸಂಸ್ಥೆಗೆ ಬರಮಾಡಿಕೊಂಡರು. ಅವರಿಗೆ ಧರ್ಮಶಿಕ್ಷಣ, ಆಚಾರಬೋಧ ಮೊದಲಾದವುಗಳನ್ನು ಮಾಡಿದರು. ಕೆಲಕೆಲವು ಪ್ರೌಢಸಾಧಕರೂ ಶ್ರೀಗಳವರ ಅನುಜ್ಞೆಯ ಪ್ರಕಾರ ಹಠಯೋಗದ ಸಾಧನಗಳನ್ನು ಮಾಡುತ್ತಿದ್ದರು. ಶ್ರೀ ಸದಾಶಿವ ಶಿವಾಚಾರ್ಯರು ಹಠಯೋಗದಲ್ಲಿ ಬಹಳೇ ಮುಂದುವರಿದಿದ್ದರು. ಪತಂಜಲಿಯು ಹೇಳಿದ ಏಕಾಂತವಾಸ, ದೃಷ್ಟಿಸಾಧನ, ಸಾತ್ವಿಕ ಆಹಾರಸೇವನ, ಸಂಯಮನ ಮೊದಲಾದವುಗಳನ್ನು ಪರಿಪಾಲಿಸುವುದರಲ್ಲಿ ಶ್ರೀ ಸದಾಶಿವ ಶಿವಾಚಾರ್ಯರಿಗೆ ಮಿತಿಯಿಲ್ಲದ ಆನಂದ. ಹಾನಗಲ್ಲ ಶ್ರೀಗಳವರು ಇವರ ಸಂಯಮನ ಶಕ್ತಿಯನ್ನು ಕಂಡು ಹಿರಿ ಹಿರಿ ಹಿಗ್ಗುತ್ತಿದ್ದರು. ಶ್ರೀ ಸದಾಶಿವ ಶಿವಾಚಾರ್ಯರು ಶಿವಾಗಮ ಪಠನ, ಉಪನಿಷದವಲೋಕನ, ವಚನವಾಙ್ಮಯ ಸಂಶೋಧನದಲ್ಲಿಯೇ ಕಾಲ ಕಳೆಯುತ್ತಿದ್ದರು. ಸುಪ್ರಸಿದ್ಧ ವ್ಯಾಕರಣ ಪಂಡಿತರು. ಪಕ್ಷಕ್ಕೊಮ್ಮೆ ವಟುಗಳನ್ನೆಲ್ಲ ಒಂದೆಡೆಗೆ ಸೇರಿಸಿ ಅವರಿಗೆ ಧರ್ಮಪರವಾದ ಭಾಷಣಗಳನ್ನು ಬರೆದು ಕೊಟ್ಟು ಹೇಳಿಸಿ ಅವರನ್ನು ವಾಗ್ಮಿಗಳನ್ನಾಗಿ ಮಾಡುವ ಉದಾರ ಭಾವನೆಯುಳ್ಳವರಿವರು. ಎಲ್ಲ ವಟುಗಳು ಹೇಳಿದ ನಂತರ ಅವರವರ ಕುಂದು ಕೊರತೆಗಳನ್ನು ತಿಳಿಸಿ ಹೇಳಿ ತಾವು ಸ್ವತಃ ಉಪಸಂಹಾರಾತ್ಮಕ ಭಾಷಣವನ್ನು ಮಾಡುತ್ತಿದ್ದರು. ಸದ್ಯಃ ಅಮೋಘವಾದ ತಮ್ಮ ವಕ್ತೃತ್ವ ಕಲೆಯಿಂದ ತಮ್ಮ ಭಾಗದ ಭಕ್ತರನ್ನು ಪುನೀತರನ್ನಾಗಿ ಮಾಡುತ್ತಲಿರುವರು. ಆಡಂಬರದ ಜೀವನವೆಂದರೆ ಇವರಿಗೆ ಅಸಹ್ಯವೆನಿಸುವದು. ಶೀಲ, ಹೃತ್ಪಾವಿತ್ರ್ಯ, ಸಂಯಮನ, ಸತತಪ್ರಯತ್ನ, ಅಂತರ್ನಿರೀಕ್ಷಣೆ, ಇವೇ ಇವರ ಜೀವನ ನಾಟಕದಲ್ಲಿ ಕಂಡು ಬರುವ ಮಹಾಸನ್ನಿವೇಶಗಳು. ಪಿಂಡಾಂಡದ ಸಂಶೋಧನೆಯಲ್ಲಿ ನಿರತರಾದ ಶ್ರೀ ಸದಾಶಿವ ಸ್ವಾಮಿಗಳು ತಮ್ಮ ದಿವ್ಯಗುಣಗಳನ್ನು ತಮ್ಮವರಿಗೂ, ಅನ್ಯರಿಗೂ ಕೊಡಲೆಂದು ಹಾರೈಸಲಾಗಿದೆ.

**—ತೆಲಸಂಗಿ ಪಟ್ಟದ್ದೇವರು.**

———:———

# ಶಿವಾನುಭವ, ಸದಾ - ಶಿವ.



ಇಂದಿನ ಜನಜೀವನದ ಬಾಳು ಗೋಳಿನ ಬೀಡಾಗಿದೆ. ಏನು ಮಾಡಿದರು ಮನಕ್ಕೆ ಶಾಂತಿ ಸಮಾಧಾನಗಳು ಸಿಕ್ಕದಾಗಿವೆ. ಏನು ಮಾಡಬೇಕೆಂಬುದು ಹೊಳೆಯದಾಗಿದೆ. ನಮ್ಮವರಾರು ಎಂಬುದು ತಿಳಿಯದಾಗಿದೆ. ಮೋಸ ಮಾಟಗಳ ಚಲ್ಲಾಟ ಎಲ್ಲೆಡೆಯಲ್ಲಿಯೂ ನಡೆದಿದೆ. ಆತ್ಮೀಯತೆಯ ಕ್ಷಯರೋಗದ ಕೊನೆಯ ಅವಸ್ಥೆಯಲ್ಲಿದ್ದಂತಿದೆ. ಕಳಕಳಿಯು ಕುಂದಿಹೋಗಿದೆ. ನಂಬುಗೆಗೆ ಇಂಬಿಲ್ಲದಾಗಿದೆ. ತೋರಿಕೆಯ ಪರಾಮರಿಕೆಗೆ ಮಾತ್ರ ಕೊರತೆಯಿಲ್ಲ. ಒಂದು ತರಹದ ನಿರಂಕುಶ ಪ್ರವೃತ್ತಿ ಸಾಕಷ್ಟು ಬೆಳೆದು ಬರಹತ್ತಿದೆ. ಜೀವನದ ಗುರಿ ಸಿರಿಗಳನ್ನು ಗುರ್ತಿಸಿಕೊಂಡು ಸಿಸ್ತಿನಿಂದ ಸಾಗುವುದು ಕೆಲವರಿಗೆ ಬೇಜಾರವೆನಿಸಿದೆ. ಮತ್ತೆ ಕೆಲವರಿಗೆ ಅದು ಬೇಡಾಗಿದೆ. ಒಂದೇ ಮಾತಿನಲ್ಲಿ ಹೇಳಬೇಕಾದರೆ ಕೀಲಿಲ್ಲದ ಬಂಡಿಯಂತೆ ಜೀವನವು ಉರುಳಹತ್ತಿದೆ. ಇಂಥ ಬಂಡಿಯ ಗತಿ ಏನಾಗಬಹುದೆಂಬುದನ್ನು ಹೇಳಲು ಬಾರದಾಗಿದೆ. ಇದು ' ಅಶಿವ 'ದ ದಾರಿಯಾಗಿದೆ.

ಮಾನವನು ಬಯಸಬೇಕಾದುದು ಬರಿಯ ಭೌತಿಕ – ಸುಖ ಶಾಂತಿಯನ್ನಲ್ಲ. ಅಧ್ಯಾತ್ಮದತ್ತ ಅವನ ಒಲವಿರುವುದು ಪ್ರಾಮುಖ್ಯವಾಗಿದೆ. ಅಧ್ಯಾತ್ಮಿಕ ಗೊತ್ತು ಗುರಿಗಳಿಲ್ಲದ ಮಾನವ ಜೀವನ ಪರಿಪೂರ್ಣವಾಗದು. ಸುಗಮವಾಗದು. ಲೋಕಾನುಭವ ಹೊರಜೀವನದ ಜೀವಾಳವಾದರೆ ಶಿವಾನುಭವ ಒಳಬಾಳಿನ ಸಾರ ಸರ್ವಸ್ವವಾಗಿದೆ. ಸದಾ – ಶಿವಮಯವಾಗಿದೆ. ಅದು ನಮ್ಮ ಮುಂದಿನ ಬಾಳು ಬಟ್ಟೆಯ ಅಕ್ಷಯ ಬುತ್ತಿಯಾಗಿದೆ. ಈ ದೇಹ ಪೋಷಣೆಗೆ ಅನ್ನ ನೀರು ಅವಶ್ಯವಾಗಿರುವ ಹಾಗೆ ಆತ್ಮ ಪೋಷಣೆಗೆ ಶಿವಾನುಭವಮೋಗರವು ಅತ್ಯವಶ್ಯವಾಗಿದೆ ; ಸದಾ – ಶಿವೋದಕವು ಅನಿವಾರ್ಯವಾಗಿದೆ. "ಶಿವಾನುಭವ" ಎಂಬೀ ಐದಕ್ಷರಗಳುಳ್ಳ ಶಬ್ದದಲ್ಲಿ ತುಂಬಿಕೊಂಡಿರುವಷ್ಟು ಪರಿಪೂರ್ಣತೆಯು ಇನ್ನಾವದರಲ್ಲಿಯೂ ಕಾಣೆವು. ಶಿವಾನುಭವ

ಎಂದರೆ "ಶಿವಯೋಃಅನುಭವಃ" ಶಿವಶಕ್ತಿಯರ ಬಗ್ಗೆ ಅನುಭವ ಅಥವಾ ಶಿವನಾಗುವ ಅನುಭವ ಎಂದು ಸಾಮಾನ್ಯವಾಗಿ ಹೇಳಬಹುದು. ಇದರಲ್ಲಿಯು ಉತ್ತರಾರ್ಧ ಪದವಾದ ಅನುಭವ ಇದು ಅತ್ಯಂತ ಗಮನಾರ್ಹವಾಗಿದೆ. ಯಾವದೇ ಕೆಲಸದ ಅನುಭವ ನಮಗೆ ದೊರಕಬೇಕಾದರೆ ನಾವು ಅದನ್ನು ಮಾಡಬೇಕಾಗುವುದು. ಮಾಡಬೇಕೆಂದಾಕ್ಷಣಕ್ಕೆ ಒಮ್ಮೆಲೆ ದುಡುಕದೆ ಆ ಕೆಲಸ ಹೇಗೆ ಮಾಡಬೇಕು ಮಂಗಳಕರವಾಗಬೇಕಾದರೆ ಏನು ಮಾಡಬೇಕು ಎಂಬುದನ್ನು ಮೊದಲು ತಿಳಿದುಕೊಳ್ಳಬೇಕಾಗುವುದು. ಅಂದರೇನೇ ಆ ಕೆಲಸ ಮಾಡಲು ಸುಲಭ ಸಾಧ್ಯವಾಗುವುದು. ಹಾಗೆ ಮಾಡಿದೊಡನೆ ಆ ಕೆಲಸದ ಅನುಭವವು ಸಿಹಿ ಇರಲಿ ಅಥವಾ ಕಹಿ ಇರಲಿ ಆಗುವುದು. ಪ್ರಯುಕ್ತ ಅನುಭವ ಸಿಗಬೇಕಾದರೆ ಮೊದಲು ತಿಳಿಯಬೇಕು. ತಿಳಿಯಾಗಬೇಕು. ಆಮೇಲೆ ಆ ತಿಳುವಳಿಕೆಯಂತೆ ಮಾಡಬೇಕು. ಆಮೇಲೆ ಅನುಭವಿಸಬೇಕು. ತಿಳುವಳಿಕೆ ಮತ್ತು ನಡವಳಿಕೆ ಇವು ಅನುಭವಕ್ಕೆ ಅನಿವಾರ್ಯವಾದ ಅಮೌಲ್ಯ ಅಡಿಗಲ್ಲುಗಳೆನ್ನಬಹುದು. ಇವಿಲ್ಲದಿದ್ದರೆ ಅನುಭವ ಮಂದಿರವನ್ನು ಕಟ್ಟಲಿಕ್ಕಾಗದು. ಸತ್ಯ ಸೌಂದರ್ಯವನ್ನು ತುಂಬಲಾಗದು.

> "ಗಿರಿಗಂಹರಗಳಲ್ಲಿ ಅನಂತಕಾಲ ತಪದೊಳಿರ್ದಡೇನು ;
> ಒಂದು ಗಳಿಗೆ ಗುರುಸೇವೆ ಸಾಲದೇ ?
> ಅನಂತಕಾಲ ಗುರು ಸೇವೆಯೊಳಿರ್ದಡೇನು ;
> ಒಂದು ಗಳಿಗೆ ಲಿಂಗಾರ್ಚನೆ ಸಾಲದೇ ?
> ಅನಂತಕಾಲ ಜಂಗಮಾರ್ಚನೆಯೊಳಿರ್ದಡೇನು ;
> ಒಂದು ಗಳಿಗೆ ನಿಮ್ಮ ಶರಣರ ಅನುಭಾವ ಸಾಲದೇ ?
> ಕೂಡಲ ಚೆನ್ನಸಂಗಮದೇವಾ"

ಎಂದು ಚೆನ್ನಬಸವಣ್ಣನವರು ಅನುಭವದ ಮಹತಿಯನ್ನು ನಿರೂಪಿಸಿದ್ದಾರೆ. ಆದುದರಿಂದ ಅಜ್ಞಾನಿಯ ಕ್ರಿಯೆಗೆ ಅದರಂತೆ ನಿಷ್ಕ್ರಿಯನಾದ ಜ್ಞಾನಿಗೆ ಶಿವಾನುಭವ ಸಾಮ್ರಾಜ್ಯದಲ್ಲಿ ಸ್ಥಾನವೇ ಇಲ್ಲ.

ಸಮ್ಯಜ್ಞಾನ ಸತ್ಕ್ರಿಯಾಚರಣೆಯುಳ್ಳ ಪುಣ್ಯ ಪುರುಷರಾದ ಅನುಭಾವಿಗಳು ಒಂದೆಡೆ ಸೇರಿ ಜೀವನಾರು ? ಶಿವನಾರು ? ಇಂದ್ರಿಯ ಗೋಚರವಾದ ಲಿಂಗಾಂಗ ಸಾಮರಸ್ಯವೆಂದರೇನು ? ಷಟ್‌ಸ್ಥಲದ ಸ್ವರೂಪವೆಂತು ? ವಿಶ್ವದ ರಹಸ್ಯವೇನು ? ಜೀವನು ಶಿವನನ್ನು ಬೆರೆಯುವುದೆಂತು, ಇವೇ ಮೊದಲಾದ ಗಂಭೀರ ಸಮಸ್ಯೆಗಳನ್ನು ಪರಸ್ಪರವಾಗಿ ವಿಚಾರ ವಿನಿಮಯ ಮಾಡುವುದೇ ಶಿವಾನುಭವ ; ಅದೇ ಸದಾ – ಶಿವ. ಅದನ್ನೆ ಶಿವಾನುಭವ ಗೋಷ್ಠಿ ಎನ್ನುತ್ತಾರೆ. ಇಂತಹ ವಿಷಯಗಳನ್ನು ಪ್ರತಿಪಾದಿಸುವ ಗ್ರಂಥ ಸಮುದಾಯಕ್ಕೆ ಶಿವಾನುಭವ ಶಾಸ್ತ್ರವೆನ್ನುತ್ತಾರೆ. ಶಿವಾನುಭವ ಗೋಷ್ಠಿಯಲ್ಲಿ ಚರ್ಚಿಸಿದ ವಿಚಾರವನ್ನು ಧೃಡಪಡಿಸಿಕೊಂಡು ಅದರಂತೆ ಆಚರಿಸಿ ತನಗುಂಟಾದ

ಅನುಭವವನ್ನು ಹೆರರಿಗೆ ಬೋಧಿಸಿ ಮತ್ತು ತನ್ನ ಉನ್ನತಿಯ ಮಾರ್ಗವನ್ನು ಉತ್ತರೋತ್ತರವಾಗಿ ಅಭಿವೃದ್ಧಿಯ ಮಾಡಿಕೊಳ್ಳುವವರಿಗೆ ಶಿವಾನುಭಾವಿಗಳೆನ್ನುತ್ತಾರೆ. ಅವರು ಸದಾಶಿವ ಸ್ವರೂಪಿಗಳಾಗಿರುತ್ತಾರೆ.

## ಶಿವಾನುಭವದ ಪ್ರಯೋಜನವೇನು?

ಶಿವಾನುಭವವು ಶಿವಾನುಭವ ಶಾಸ್ತ್ರವು ವೀರಶೈವರಿಗೆ ಮಾತ್ರ ಸಂಬಂಧ ಪಟ್ಟಿದ್ದಲ್ಲ. ಶುದ್ಧಾಂತಃಕರಣಿಗಳಾದ ನಿರಹಂಭಾವಿಗಳಾದ ಮಾನವ ಮಾತ್ರರೆಲ್ಲರು ಶಿವಾನುಭವಕ್ಕೆ ಶಿವಾನುಭವ ತತ್ವಜ್ಞಾನಕ್ಕೆ ಅಧಿಕಾರಿಗಳು. ಶಿವಾನುಭವವು ಬಂಧನ ಕಾರಿಯಾದ ಆಸುರೀ ಗುಣವನ್ನು ಹೋಗಲಾಡಿಸಿ ಜೀವನ್ಮುಕ್ತಿಗೆ ಕಾರಣವಾದ ದೈವೀ ಸಂಪತ್ತನ್ನುಂಟುಮಾಡುತ್ತದೆ. ಮಾನವನನ್ನು ಹುಟ್ಟು ಬಾಳು ಸಾವು ನೋವುಗಳ ಮಹಾ ತೊಡಕಿನಿಂದ ಪಾರುಮಾಡುವ ಧರ್ಮಶಾಸ್ತ್ರವೆಂದರೆ ಶಿವಾನುಭವ ಒಂದೇ ಎಂದು ಹೇಳಿದರೆ ತಪ್ಪಾಗಲಾರದು. ಇದು ತ್ರಿಕಾಲಾಬಾಧಿತವಾದುದು. ನಿತ್ಯ ನೂತನವಾದುದು. ಇದರಲ್ಲಿ ಸೇರುವವರೆಲ್ಲರನ್ನು ಶಿವಾನುಭವ ಧರ್ಮಿಗಳೆಂದು ಕರೆಯಬಹುದು. ಇದು ಪೂರ್ವಾಶ್ರಮವನ್ನು ಸಂಪೂರ್ಣವಾಗಿ ಹೋಗಲಾಡಿಸಿ ವಿನೂತನವಾದ ಬಾಂಧವ್ಯವನ್ನು ಬಳಕೆಯಲ್ಲಿ ತರುತ್ತದೆ. ಒಂದು ವಿಶಿಷ್ಟವಾದ ಆಚಾರ ವಿಚಾರಗಳನ್ನುಂಟು ಮಾಡುತ್ತದೆ. ಜಾತಿ ಭೇದವನ್ನು ಸಮಯ ಭೇದವನ್ನು ಗಮನಿಸದೆ, ಲಿಂಗ ಭೇದವನ್ನು ವಯೋಭೇದವನ್ನು ಪರಿಕಿಸದೆ, ರೂಪವನ್ನು ವೃತ್ತಿಯನ್ನು ಲಕ್ಷಿಸದೆ ಮಾನವಮಾತ್ರರೆಲ್ಲರಲ್ಲಿಯೂ ಸಮಾನವಾದ ಬಾಂಧವ್ಯವನ್ನು ಪ್ರೇಮಾದರಗಳನ್ನುಂಟು ಮಾಡುತ್ತದೆ. ಶಿವಾನುಭವ ಶಾಸ್ತ್ರದಿಂದ ಮಾನವನು ಧಾರ್ಮಿಕ ನೈತಿಕದಲ್ಲಿ ಪರಿಪೂರ್ಣನಾಗಿ ಲಿಂಗಾಂಗ ಸಾಮರಸ್ಯ ಜ್ಞಾನದಿಂದ ಜೀವ ಭಾವವಳಿದು ಲಿಂಗರೂಪನೆನಿಸಿಕೊಳ್ಳುವನು. ಇದೇ ಶಿವಾನುಭವದ ಪರಮ ಪ್ರಯೋಜನವು. ಇದರಿಂದ ಅದು ಎಂದಿಗೂ ಶುಭಪ್ರದವು. "ಅರಿದಡೆ ಶರಣ ಮರೆದಡೆ ಮಾನವ" ಎಂಬ ಬಸವಣ್ಣನವರ ನುಡಿಯು ಇದನ್ನೇ ಸ್ಪಷ್ಟೀಕರಿಸುತ್ತದೆ.

ಶಿವಾನುಭವ ಶಾಸ್ತ್ರದ ಉಗಮವು ಎಂದಿನಿಂದ? ಎಲ್ಲಿಂದ? ಎಂಬ ಪ್ರಶ್ನೆಗೆ ಖಚಿತವಾಗಿ ಉತ್ತರಿಸುವುದು ಸಾಹಸದ ಮಾತಾಗಿದೆ. ಶಿವಾನುಭವ ಮಹಾಸಾಗರದ ಆಳವನ್ನು ಅಳೆಯುವುದು ಆದಿಯನ್ನು ಗುರುತಿಸುವುದು ಸುಲಭ ಸಾಧ್ಯವಲ್ಲ. ಅದು ಸಂತೆಯ ಮಾತಲ್ಲ. ಒರಿಯ ಬುದ್ಧಿಗೆ ನಿಲುಕದು. ಅದು ಪರಂಪರಾಗತವಾಗಿ ಶುದ್ಧ ಸಾತ್ವಿಕ ಹೃದಯದಿಂದ ಹೊರಹೊಮ್ಮಿದ ಹಿರಿಗಡಲು ಎಂದು ಮಾತ್ರ ಹೇಳಬಹುದು.

೧೨ ನೆಯ ಶತಮಾನದಲ್ಲಿ ಅಭಿನವ ಕೈಲಾಸವೆನಿಸಿದ ಕಲ್ಯಾಣ ಪಟ್ಟಣದಲ್ಲಿ ಶ್ರೀ ಅಲ್ಲಮಾಪ್ರಭುದೇವರು, ಬಸವಣ್ಣನವರು, ಚೆನ್ನಬಸವಣ್ಣನವರು, ಅಕ್ಕಮಹಾದೇವಿ ಮೊದಲಾದ ಶರಣ ಶರಣೆಯರಿಂದ ಅದು ಪರಿಪುಷ್ಟವಾಗಿ ಬೆಳೆದು ಹೆಮ್ಮರ

ವಾಗಿ ಪಸರಿಸಿ ಸುಪುಷ್ಪಗಳಿಂದ ಸುಫಲಂಗಳಿಂದ ಸೊಂಪನ್ನು ತಂಪನ್ನು ದಶ ದಿಕ್ಕುಗಳಲ್ಲಿ ಬೀರಿ ಸರ್ವರನ್ನು ಆಕರ್ಷಿಸಿತು. ಅದ್ಭುತವಾದ ವಿಲಕ್ಷಣವಾದ ಕ್ರಾಂತಿಯನ್ನು ಶಾಂತಿಯನ್ನು ಉಂಟುಮಾಡಿತು.

ಅಲ್ಲಿಂದ ಮುಂದೆ ವಿಜಯನಗರದ ನೂರೊಂದು ವಿರತರೇ ಮೊದಲಾದ ಮಹಾಮೇಧಾವಿಗಳು ತತ್ವಜ್ಞಾನಿಗಳು ಶಿವಾನುಭಾವಿಗಳು ಅದನ್ನೇ ಬಗೆ ಬಗೆಯ ವಿಧಾನದಿಂದ ಮುಂದುವರಿಸಿದರು.

ಶಿವಾನುಭವ ಚರಚಕ್ರವರ್ತಿಗಳಾದ ತೋಂಟದ ಸಿದ್ಧಲಿಂಗ ಯತಿಗಳು ಸಾವಿರಾರು ಶಿವಾನುಭಾವಿಗಳಾದ ಚರಮೂರ್ತಿಗಳ ಸಮೇತವಾಗಿ ಶಿವಾನುಭವವನ್ನು ವಿವಿಧ ವಿಧಾನದಿಂದ ಪ್ರಚಾರ ಮಾಡಿದರು. ಅವರ ಶಿಷ್ಯ ಪ್ರಶಿಷ್ಯ ಪ್ರವಾಹ ಪರಂಪರೆಯು ಆದನ್ನು ಅಮೌಲ್ಯವಾದ ಸೊತ್ತೆಂದು ಶ್ರದ್ಧೆಯಿಂದ ಕಾಯ್ದುಕೊಂಡು ಪ್ರಚಾರ ಮಾಡುತ್ತ ಬಂದಿದೆ.

ಮತ್ತೆ ನಶಿಸಿಹೋದ ಸಮಾಜವನ್ನು ಇಂದಿಗೆ ಅರ್ಧ ಶತಮಾನದ ಪೂರ್ವದಲ್ಲಿ ಶಿವಯೋಗ ಮಂದಿರ ಸಂಸ್ಥೆಯನ್ನು ವೀರಶೈವ ಮಹಾ ಸಭೆಯನ್ನು ಸ್ಥಾಪಿಸಿ ಮತೋದ್ಧಾರ ಮಾಡಿದ ಹಾನಗಲ್ಲ ಕುಮಾರ ಸ್ವಾಮಿಗಳವರು ವೀರಶೈವ ಸಾಹಿತ್ಯ ತತ್ತ್ವ ಸಂಸ್ಕೃತಿ ಶಿವಾನುಭವ ತತ್ತ್ವಗಳನ್ನು ಉದ್ಧರಿಸಿ ಬೆಳಗಿಸಿ ಬಳಕೆಯಲ್ಲಿ ತಂದರು. ವೀರಶೈವ ಧರ್ಮವು ಅನುಭವ ಧರ್ಮವೆಂದು ಪ್ರತಿಪಾದಿಸಿದರು. ಪ್ರಚಾರ ಮಾಡಿದರು. ಅನುಭವದಲ್ಲಿ ಅನುಪಮ ಸುಖಿಯಾದರು.

ಅವರು ತೋರಿದ ದಿಶೆಯಲ್ಲಿಯೇ ಷ. ಬ್ರ. ಶ್ರೀ ಸದಾಶಿವ ಶಿವಾಚಾರ್ಯ ಸ್ವಾಮಿಗಳವರು ಆಧ್ಯಾತ್ಮಿಕ ತತ್ತ್ವಪ್ರಚಾರ ಧಾರ್ಮಿಕ ಸಾಹಿತ್ಯ ಪ್ರಕಟನೆ ಮುಂತಾದ ಮಹತ್ ಕಾರ್ಯಗಳನ್ನು ಸಾಧಿಸಿ ಸಮಾಜಕ್ಕೆ ಮಹದುಪಕಾರ ಮಾಡಿದ್ದಾರೆ. ಮಾಡುತ್ತಲೂ ಇದ್ದಾರೆ. ಉಪನಿಷತ್ ಭಾಷ್ಯಕಾರರಾಗಿ ಹಟಯೋಗ ಶಿವಯೋಗಗಳನ್ನು ಸಾಧಿಸಿ ಆಚಾರಶೀಲರಾಗಿ ಆಶ್ರಮ ಧರ್ಮನಿಷ್ಠರಾಗಿ ಆದರ್ಶರಾಗಿದ್ದಾರೆ. ಅಭಿನಂದನೆಗೆ ಅಭಿವಂದನೆಗೆ ಪಾತ್ರರಾಗಿರುತ್ತಾರೆ. ಶ್ರೀ ಸದಾಶಿವ ಶಿವಾಚಾರ್ಯ ಸ್ವಾಮಿಗಳವರ ಆಚರಣೆಯೇ ವೀರಶೈವಾಚರಣೆ, ವೀರಶೈವಾಚರಣೆಯೇ ಸದಾಶಿವಾಚಾರ್ಯ ಸ್ವಾಮಿಗಳು ಎಂಬ ರೀತಿಯಲ್ಲಿ ಒಪ್ಪುತ್ತಿರುವರು. ಇಂತಪ್ಪ ಮಹಾನುಭಾವಿಗಳು ಸಮಾಜಕ್ಕೆ ಅಪೂರ್ವ - ಅತ್ಯಪೂರ್ವ. ಇದರಿಂದ ಅವರು ಒಂದು ತತ್ತ್ವವೂ ಆಹುದು ; ವ್ಯಕ್ತಿಯೂ ಅಹುದು.

**—ಶ್ರೀ ಮ. ನಿ. ಪ್ರ. ಪ್ರಭುಸ್ವಾಮಿಗಳು,**
ಹೊಸಹಳ್ಳಿ ಶ್ರೀ ಬೂದಿಸ್ವಾಮಿ ಸಂಸ್ಥಾನ ಮಠ.

——::——

# ಸದಾಶಿವಕಲೆ !



ಸದಾ-ಶಿವಕಲೆಯ ಉಪಾಸನೆಯೆ ಶ್ರೀ ಸದಾಶಿವ ಶಿವಾಚಾರ್ಯರ ಸತ್ಯಸಾಧನ. ಕಲೆ ಬೇಕು. ಆದರೆ ಅದು ಶಿವಕಲೆಯಾಗಿರಬೇಕು. ಎಂಬುದೇ ಅವರ ಧ್ಯೇಯ. ಶಿವಕಲೆ ಸತ್ಯಜೀವನದ ದಾರಿ. ಶಿವೇತರ ಕಲೆ ಮೃತ್ಯು ಮುಖದ ದಾರಿ. ಬರೀ ಬಾಹ್ಯರೂಪು ರಾಗಗಳೇ ಕಲೆಗಳಲ್ಲ; ಆ ಕಲೋಪಾಸಕರೇ ಕಲೆಗಾರರಲ್ಲ. ಮನ ಸಂಚಲನಗೊಳಿಸುವ ಕಲೆ ಅದೊಂದು ಕಲೆಯೆ? ಮನಸಾಂತ್ವನಗೊಳಿಸುವ ಕಲೆ ಯಿದ್ದರೆ ಸಾಲದೆ? ಈ ದಿಸೆಯಲ್ಲಿ ಶೀಲ ಸಂಯಮಗಳೇ ನಿಜವಾದ ಕಲೆ; ಶಿವಕಲೆ. ಸದ್ವೃತ್ತಿ ಸುಸ್ವಭಾವಗಳಿಲ್ಲದ ರೂಪ ಆದೆಷ್ಟಿದ್ದರೂ ಅದು ಶಿವಕಲೆಯಲ್ಲ. ಸದ್ಭಕ್ತಿ ಭಾವವಿಲ್ಲದ ರಾಗರಚನೆ ಆದೆಷ್ಟು ಮನಮೋಹಕವಾಗಿದ್ದರೂ ಅದು ಗಾನಕಲೆಯಲ್ಲ; ಹೀನಕಲೆ. ಕಲೆ ಅಮಂಗಳವಾಗಿರಬಾರದು; ಅಸತ್ಯವಾಗಿರಬಾರದು. ಬಾಹ್ಯ ಕಲೆಗಿಂತ ಆಭ್ಯಂತರ ಕಲೆ ಅತ್ಯಧಿಕವಾದುದು. ಅಮೃತ ಶ್ರಾವಿಯಾದುದು.

ಸೌಂದರ್ಯವೆ ಕಲೆಯೆಂದು ಹೇಳುವುದುಂಟು. ಇದನ್ನು ಶ್ರೀ ಸದಾಶಿವ ಶಿವಾ ಚಾರ್ಯರು ಒಪ್ಪುವುದಿಲ್ಲ. ಬಾಹ್ಯಸೌಂದರ್ಯ ಭವಕ್ಕೆ ಮೂಲ. ಆಭ್ಯಂತರ ಸೌಂದರ್ಯ ಅನಂತ ಸುಖಕ್ಕೆ ಸಾಧನ ಎಂಬುದು ಅವರ ಸಿದ್ಧಾಂತ. ಆಭ್ಯಂತರ ಕಲೆಯೆಂದರೆ ಜೀವನ ಸತ್ಯಸಾಧನೆ; ಶಿವಾರಾಧನೆ. ರೂಪಾರಾಧನೆಗಿಂತಲೂ ಸ್ವರೂಪಾರಾಧನೆ ಯಲ್ಲಿದೆ ಸಾಟಿಯಿಲ್ಲದ ಶ್ರೇಯಸ್ಸು. ಬಾಹ್ಯಕಲಾರಾಧನೆಗೆ ಬಾಯಿ ಬಿಡುವುದಕ್ಕಿಂತ ಭಾವಾರಾಧನೆಗೆ ಬಾಯ್ಬಿಡುವದನ್ನು ಕಲಿಯಬೇಕು. ಬಾಹ್ಯ ಕಲಾರಾಧನೆಯು ನಮ್ಮನ್ನು ಅಶಿವದತ್ತ ಎಳೆಯುತ್ತದೆ. ಅಸತ್ಯದತ್ತ ಸೆಳೆಯುತ್ತದೆ. ಇದು ನಿಜವಾದ ಕಲೆಯಲ್ಲ. ನಿರ್ಮಳ ಕಲೆಯಲ್ಲ. ಈ ಬಾಹ್ಯರೂಪು ರಾಗಗಳ ಕಲೆ ಎಂಥವರನ್ನೂ ಎಳೆಯುತ್ತದೆ. ಇನ್ನು ಸಾಮಾನ್ಯರ ಮಾತೇನು? ಇವಕ್ಕೊಮ್ಮೆ ತಮ್ಮದೇ ಒಂದು ಉದಾಹರಣೆಯ ಉದ್ಧರಿಸಿದರು: ಇದೋ ನೋಡಿ! ನನ್ನ ಮಸಕ್ತವ ನೋಡಿ ಈ

ನಾವು ಧರಿಸಿದ ಕಾವಿಬಣ್ಣದ ಕಿವಿಟೊಪ್ಪಿಗೆಗೆ ಪ್ರಣವವೊಂದನ್ನು ಹಾಕಿದರೆ ಇದು ಹಣೆಯ ಮಧ್ಯದಲ್ಲಿಯೇ ಇರಬೇಕು; ನೋಡುವವರಿಗೆ ಚೆಂದಾಗಿ ತೋರಬೇಕು–ಎಂಬ ಅಪೇಕ್ಷೆಯನ್ನು ಹುಟ್ಟಿಸುತ್ತದೆ. ಆ ಅಪೇಕ್ಷೆಯಾದೊಡನೆ ಕನ್ನಡಿ ನೋಡಿಕೊಳ್ಳುವ ಅಭಿಲಾಷೆ. ಅದಾದೊಡನೆ ಅಲಂಕಾರದ ಆಸೆ. ಹೀಗೆ ಬಾಹ್ಯ ಕಲಾರಾಧನೆ ಬೆಳೆದು ಮನಸ್ಸನ್ನು ಬಾಹ್ಯಕಲೆಗೆ ಹರಿಸಿಬಿಡುತ್ತದೆ. ಆದ್ದರಿಂದ ಶಿವಕಲೆಗೆ ಮನಸ್ಸು ಮಾಡಬೇಕೆನ್ನುವವರು ಬಾಹ್ಯಕಲೆಯ ಮೆಚ್ಚುಗೆಯನ್ನು ಆರಾಧನೆಯನ್ನು ಕಮ್ಮಿ ಮಾಡಬೇಕು. ಶೀಲ–ಸಂಯಮಾದಿ ಶಿವಕಲೆಯ ಆರಾಧನೆ ಹೆಚ್ಚಬೇಕು. ಸದಾಚಾರ ಸದ್ವಿಚಾರ ಶಿವಕಲೆ ಸಂವೃದ್ಧಿಯಾಗಬೇಕು; –ಎಂದು ಗಿರಿಯಾಪುರದ ಮಲ್ಲಿಕಾಂಬಾ ಮಂಡಳಿಯ ಸಭೆಯೊಂದರಲ್ಲಿ ಈ ಲೇಖಕರ ಸಮ್ಮುಖದಲ್ಲಿ ಅಪ್ಪಣೆಯನಿತ್ತರು ಸದಾಶಿವಕಲೆಯ ಆರಾಧಕರಾದ ಶ್ರೀ ಸದಾಶಿವ ಶಿವಾಚಾರ್ಯರು. ಇದು ಅವರದೇ ಆದ ಶಿವಕಲೆಯ ವಿಷಯವಾದ ಅಭಿಪ್ರಾಯ; ಆಶಯ.

ಮಂಗಳಕರವಾಗಿ ಇರಲು ಪ್ರಯತ್ನಿಸಬೇಕು; ಮೋಹಕವಾಗಿರಲು ಪ್ರಯತ್ನಿಸಬಾರದು. ಭಕ್ತಿರಾಗಬೇಕು; ರಕ್ತಿರಾಗಬೇಡ. ಶುಚಿಯಾಗಿರಲು ಕಲಿಯಬೇಕು. ಅಶುಚಿಯಾಗಿರಬಾರದು. ಶೀಲವಿಲ್ಲದ ಶುಚಿ ಅದೂ ಒಂದು ಅಶುಚಿ. ಭಕ್ತಿಯಿಲ್ಲದ ರಾಗ ಅದೊಂದು ಮನದ ರೋಗ. ಮಂಗಳ ಭಾವವನ್ನು ಹುಟ್ಟಿಸದ ರೂಪ ಅದೊಂದು ಕುರೂಪ. ಶಾಂತಿಯನ್ನು ಹುಟ್ಟಿಸದ ಸಾಧನೆ ಅದೊಂದು ವೇದನೆ. ಶಿವಕಳೆಯನ್ನು ತಾರದ ಕಲೆ ಅದೊಂದು ಕೊಲೆ. ಎಂಬುದು ಅವರ ಸತ್ಯಸಾಧನೆಯ ಶೀಲ ಸಂಯಮದ ಸಾರಸಿದ್ಧಾಂತ.

ಶೀಲವೇ ಸೌಂದರ್ಯ; ಆತ್ಮಸೌಂದರ್ಯವೇ ಶೀಲ ಎಂಬುದು ಶ್ರೀ ಸದಾಶಿವ ಶಿವಾಚಾರ್ಯರ ಸ್ವಾನುಭವ. ಇವರು ಶೀಲದ ಮುಖದಲ್ಲಿ ಶಿವಕಲೆ (ಸೌಂದರ್ಯ)ಯನ್ನು ಸಾಧಿಸುತ್ತಿದ್ದಾರೆ; ಸಾಧಿಸಿದ್ದಾರೆ. ಅವರೆಂದಿಗೂ ಬಾಹ್ಯ ಸೌಂದರ್ಯಕ್ಕೆ ಬಾಯಿಬಿಡಲಿಲ್ಲ; ಬಿಟ್ಟಿಲ್ಲ. ಕಣ್ಣುಹಾಕಿಲ್ಲ. ಅವರದು ಸದಾ–ಶಿವಕಲೆ!

—ಶ್ರೀ ಜ. ಚ. ನಿ.

———:———

# ಸದಾಶಿವ ಪೂಜೆ !

✠

ಸದಾ – ಶಿವ ಪೂಜೆಯಲ್ಲಿ ನಿರತರಾಗಿರುವುದು ಶ್ರೀ ಸದಾಶಿವ ಶಿವಾಚಾರ್ಯರ ಸತ್ಕಾಯಕ. ಆ ಸತ್ಕಾಯಕದಿಂದ ಅವರು ಸದಾಶಿವನ ಸ್ವರೂಪಿಗಳೇ ಆಗಿದಾರೆ. ಅಂತಹ ಆ ಸದಾಶಿವ (ಶಿವಾಚಾರ್ಯ)ನ ಪೂಜೆಯ ಮಾಡುವುದು ಅಂದರೆ ಈ ಕೃತಿಯ ರೂಪದಲ್ಲಿ ಸೇವೆ ಸಲ್ಲಿಸುವುದು ನಮ್ಮ ಕರ್ತವ್ಯವಾಗಿದೆ.

ಉತ್ತಮರೆನಿಸಿಕೊಳ್ಳಲು ಯಾವ ಯಾವ ಸುಗುಣಗಳು ಬೇಕೋ ಅವೆಲ್ಲ ಇವರಲ್ಲಿ ಮನೆಮಾಡಿಕೊಂಡಿವೆ. ಶಮೆ ಬೇಕೆ? ದಯೆ ಬೇಕೆ? ಶೀಲ ಬೇಕೆ? ಸಂಯಮ ಬೇಕೆ ? ತ್ಯಾಗ ಯೋಗ ಬೇಕೆ ? ವಿದ್ಯೆ ವಿನಯ ಬೇಕೆ ? ಎಲ್ಲವೂ ಇವೆ. ಇವೆಲ್ಲ ಸದ್ಗುಣಗಳಿಂದ ಸರ್ವೋತ್ತಮರೂ ಸಮಾಜಕ್ಕೆ ಆದರ್ಶರೂ ಆದ ಇವರಿಗೆ ಇಂದು ಅರವತ್ತು ತುಂಬಿವೆ. ಈ ಹಬ್ಬ ತಂದಿವೆ. ಇದು ನಮ್ಮೆಲ್ಲರಿಗೆ ಸುದಿನ. ಸದಾಶಿವ ಸ್ವರೂಪನ ಸಂಪೂಜಿಸುವ ದಿನ. ಸದಾಶಿವ ಶಿವಾಚಾರ್ಯರು ತಮ್ಮ ಸದಾ ಕಾಲದ ಶಿವ (ಮಂಗಳಾಚರಣೆಯ) ಪೂಜೆಯಿಂದ ಶಿವಾಚಾರ್ಯರಾಗಿದಾರೆ; ಸಂಪೂಜ್ಯ ರಾಗಿದಾರೆ. ಇಂದಿನ ಈ ನವಯುಗದಲ್ಲಿ ಇವರೊಬ್ಬ ಅಪೂರ್ವ ಆದರ್ಶ ವ್ಯಕ್ತಿ; ಅವಧಾನಿ; ಅನುಭಾವಿ; ಆತ್ಮಜ್ಞಾನಿ; ಆತ್ಮಾನುಸಂಧಾನಿ; ಸುಧ್ಯಾನಿ.

ಇಂದು ಸಮಾಜಕ್ಕೆ ಶೀಲ ಸಾರಾಮೃತವನ್ನು ಕರುಣಿಸುತ್ತಿದ್ದಾರೆ ಸದಾಶಿವ ಶಿವಾಚಾರ್ಯರು. ಸಾಹಿತ್ಯ ಸಂಪತ್ತನ್ನು ಸೂರೆಗೋಳಿಸುತ್ತಿದ್ದಾರೆ ಸದಾಶಿವ ಶಿವಾಚಾರ್ಯರು ಆಧುನಿಕ ಭಾಷ್ಯಕಾರರಾಗಿದಾರೆ ಸದಾಶಿವ ಶಿವಾಚಾರ್ಯರು. ಶಿವಾದ್ವೈತ ತತ್ತ್ವಪ್ರಚಾರಕರಾಗಿದಾರೆ ಸದಾಶಿವ ಶಿವಾಚಾರ್ಯರು. ಸಾಮಾಜಿಕ ಸಾಂಸ್ಕೃತಿಕ ಪಂಥದಲ್ಲಿ ತಮ್ಮದೇ ಆದ ಕೈಸೊಡರವಿಡಿದು ಬೆಳ್ಳಗೆ ಬೆಳಗಿ ಹೊಸ ಹಾದಿ ಹಾಕಿದಾರೆ ಸದಾಶಿವ ಶಿವಾಚಾರ್ಯರು. ಶ್ರೀಗುರುವಾಗುವ ಸನ್ಮಾರ್ಗದಲ್ಲಿ ಮುನ್ನಡೆದು ಉನ್ನತದ ಸಿದ್ಧಿಗೇರಿದಾರೆ ಶ್ರೀ ಸದಾಶಿವ ಶಿವಾಚಾರ್ಯರು. 'ಸಮಾಜಕ್ಕೊಬ್ಬನೆ ಸದಾಶಿವಂ' ಎಂದು ಹಾಡುವಂತಹ ಹಿರಿಮೆಗೇರಿದಾರೆ ಶ್ರೀ ಸದಾಶಿವ ಶಿವಾಚಾರ್ಯರು. ಇದರಿಂದಾಗಿ ಇವರು ಸದಾಶಿವ ಸ್ವರೂಪರು. ಈ ಬಗೆಯಲ್ಲಿ ಇವರಿಂದ ನಡೆಯುತಿದೆ ಸದಾ – ಶಿವಪೂಜೆ ! ಇಂಥವರ ಚರಣಾರವಿಂದದಲ್ಲಿ ಈ 'ವಿಭೂತಿ' ಸಮರ್ಪಣ ರೂಪದಲ್ಲಿ ನಡೆಯುತ್ತಿರುವ ಸೇವೆಯೆ ನಮ್ಮ ಸದಾಶಿವ ಪೂಜೆ !

ಶ್ರೀ ಜ. ಚ. ನಿ.

# ಶಾಂತಿಧಾಮ, ಶ್ರೀಗುರು ಕುಮಾರಾಶ್ರಮ.

✠

ಅಜ್ಜಂಪುರಕ್ಕೆ ಅನತಿ ದೂರದಲ್ಲಿದೆ ಗಿರಿಯಾಪುರ. ಇದೊಂದು ಚಿಕ್ಕ ಊರು. ಇದು ಗಾತ್ರದಲ್ಲಿ ಕಿರಿಯದು; ಪಾತ್ರತೆಯಲ್ಲಿ ಹಿರಿಯದು. ಈ ಊರಿಗೆ ತೀರ ಸನಿಹದಲ್ಲಿದೆ ಶ್ರೀ ಗುರು ಕುಮಾರಾಶ್ರಮ. ಇದೊಂದು ಶಾಂತಿಧಾಮ. ಇದನು ಬಣ್ಣಿಸದೆ ತೀರದು ಪ್ರೇಮ. ಇದರ ಸ್ಥಾಪನೆಯ ಹಿನ್ನೆಲೆಯಿದು; ಇದುವೆ ಇದಕ್ಕೆ ಸಾಧು.

ಒಂದು ಕಿರಿಯ ಕೆರೆ. ಆ ಕೆರೆಗೆ ಸಿಂಗಾರ ಅದರ ತೆರೆ. ಆದರೊಳಗಿಲ್ಲ ಒಂದೂ ತಾವರೆ. ಆ ಕೆರೆಯ ಕಟ್ಟೆಯ ಬಳಿ ಎರಡೊ ಮೂರೊ ಹಲಸಿನ ಹೆಮ್ಮರ. ಆ ಹೆಮ್ಮರಗಳ ಹತ್ತಿರ ಒಂದು ಮರುಳಸಿದ್ಧೇಶ್ವರನ ಮುರುಕು ಮಂದಿರ. ಮಂದಿರದ ಪಕ್ಕದಲ್ಲಿ ವಿಶಾಲವಾದ ಬಯಲು; ಅಲ್ಲಿಗೆ ಹರಿಯುವವು ದೃಷ್ಟಿ ಮೊದಲು. ಮತ್ತೊಂದು ಪಕ್ಕದಲ್ಲಿ ಹಸರ್ಮೃಡಿವ ತೆಂಗಿನ ತೋಟ; ಅದೊಂದು ಚೆಲುವಿನ ನೋಟ. ಮುಂಜಾವಿನಲ್ಲಿಯೋ ಮುಚ್ಚಂಜೆಯಲ್ಲಿಯೋ ಅಲ್ಲಿಗೆ ಬಂದು ನಿಂತರೆ ಆ ಕೆರೆ ನೀರ ಮೇಲೆ ಹರಿದು ಬರುವ ತಂಗಾಳಿ, ಆ ಹಲಸಿನ ಮರಗಳ ತಣ್ಣೆಳಲು, ಆ ತೆಂಗಿನ ತೋಪಿನ ಎಲೆ ಹಸುರು, ಎಳೆ ಬಿಸಿಲು, ಅಲ್ಲಿನ ಆ ವನದ ಮೌನಗಾನ, ಆ ತಿಳಿ ಗಗನ – ಇವೆಲ್ಲ ಆ ಸ್ಥಾನಕ್ಕೆ ಶಾಂತಿಯನ್ನು ಸಮನಿಸಿದ್ದವು; ಶಾಂತಿಯನ್ನು ಕೈಗೂಡಿಸಿದ್ದವು.

ಆ ಶಾಂತಿ ಆ ಕಾಂತಿಗಳು ಸು. ೨೦–೨೫ ವರುಷಗಳ ಹಿಂದೆ ಶಾಂತಿದೂತರಾದ ಶ್ರೀ ಸದಾಶಿವ ಶಿವಾಚಾರ್ಯರನ್ನು ಆಕರ್ಷಿಸಿದವು. ಆ ಶಾಂತಿಯಲ್ಲಿ ತನ್ನ ಆತ್ಮ ಶಾಂತಿಯನ್ನು ಸಂಪಾದಿಸಲು ಪ್ರೇರೇಪಿಸಿದವು. ಆ ಕಾಂತಿಯಲ್ಲಿ ತನ್ನ ಅಚ್ಚಳಿಯದ ಆತ್ಮ ಕಾಂತಿಯನ್ನು ಅಳವಡಿಸಿಕೊಳ್ಳಲು ಪ್ರೋತ್ಸಾಹಿಸಿದವು. ಅದೋ ಆಗಲೇ ಬೀಜಾವಾಪವಾಯಿತು; ಅಂಕುರಿಸಿಯೂ ಆಯಿತು. ಅಲ್ಲಿಯೇ ಶಾಂತಿಧಾಮವಾದ ಶ್ರೀ ಗುರು ಕುಮಾರಾಶ್ರಮವೊಂದನ್ನು ಸ್ಥಾಪಿಸಲು ಸಂಕಲ್ಪಿಸಿದರು, ಸಂಸ್ಥಾಪಿಸಿದರು. **ಇನ್ನು ಇದರ ಮುನ್ನೆಲೆ:**

ಆತ್ಮಶಾಂತಿಯ ಆರಾಧಕರಾದ ಶ್ರೀ ಸದಾಶಿವಶಿವಾಚಾರ್ಯರು ಅಲ್ಲಿಯೇ ನಿಂತರು. ಅಲ್ಲಿಯೆ ಅನುಷ್ಠಾನ ಆರಂಭಿಸಿದರು. ಅವಿಚಲವಾದ ಅನುಷ್ಠಾನ. ಅಸದೃಶವಾದ ಅರ್ಚನ. ಅತಿಶಯವಾದ ಅಭ್ಯುತ್ಥಾನ. ಅದನಿಲ್ಲಿ ವಿವರಿಸಲು ನಮಗಿಲ್ಲ ಶಬ್ದ ಸಾಧನ; ಅಲ್ಲದೆ ಹೆಚ್ಚಿಲ್ಲ ಇಲ್ಲಿ ಸ್ಥಾನ. ಅನತಿ ಕಾಲದಲ್ಲಿಯೇ ಅವರ ಆ ಅನುಷ್ಠಾನ ಫಲಿಸಿತು. ಆಶ್ರಮ ಆಕರ್ಷಣೀಯವಾಗಿ ಬೆಳೆಯಿತು. ಆಕಾಶ ಮಲ್ಲಿಗೆ ಮರಗಳು ಆಕಾಶ ಚುಂಬಿಯಾಗಿ ಬೆಳೆದವು. ಹೂವರಳಿ ಹೂವೇರಿನಂತೆ ಮೆರೆದವು. ಹೂಗಂಪನು ಹರಡುತಿವೆ. ಅಂದು ಮುರುಕಲಾಗಿದ್ದ ಮರುಳುಸಿದ್ಧೇಶ್ವರನ ಮಂದಿರ ಇಂದು ಮಹಾ ಮಂದಿರವಾಗಿ ಮನೋಹರವಾಗಿ ಮೆರೆಯುತಿದೆ. ಅಂದು ಕತ್ತಲೆಯ ಗೂಡಾಗಿದ್ದ ಆ ಸ್ಥಾನ ಇಂದು ವಿದ್ಯುತ್ತಿನ ಬೀಡಾಗಿ ಬೆಳಗುತಿದೆ. ಅಂದು ಪ್ರಾಕೃತಿಕ ಶಾಂತಿಗೆ ಮಾತ್ರ ಸದನವಾದ ಆ ಪ್ರದೇಶ ಇಂದು ಪರಮಾರ್ಥ ಶಾಂತಿ ಧಾಮವಾಗಿ ಶೋಭಿಸುತಿದೆ. ಉಭಯ ಶಾಂತಿ – ವಿಶ್ರಾಂತಿ ಸಂಗಮಧಾಮವಾಗಿ ಸೈಪುಗೊಂಡಿದೆ. ಪಾರ್ಥಿವ ಪಲ್ಲವಗಳ ಮೇಲೆ ಪಾರಮಾರ್ಥಿಕ ಪುಷ್ಪ ಫಲಗಳ ತಳೆದಿದೆ.

ಆ ಶಾಂತಿಧಾಮವಾದ ಆ ಶ್ರೀಗುರು ಕುಮಾರಾಶ್ರಮದಲ್ಲಿ ಶ್ರೀ ಸದಾಶಿವ ಶಿವಾಚಾರ್ಯರು ನಿರ್ಮಲ ಮೂರ್ತಿಯಾಗಿ ನೆಲೆನಿಂತರು. ತಮ್ಮ ನಿರ್ಮಲಾಚಾರ ವಿಚಾರಗಳಿಂದ ಆತ್ಮಶೋಧನೆಸಗಿದರು. ಆತ್ಮಶುದ್ಧಿಯನ್ನು ಸಿದ್ಧಿಯನ್ನು ಸಂಗಳಿಸಿ ಆಶ್ರಮವನ್ನು ಆತ್ಮ ಶಾಂತಿಧಾಮವನ್ನಾಗಿಸಿದರು. ತಮ್ಮ ಆತ್ಮಕಾಂತಿಯಿಂದ ಆ ಆಶ್ರಮವ ಜಿಕ್ಕನೆ ಬೆಳಗಿಸಿದರು. ಅಲ್ಲಿರುವ ಆ ಮರುಳಸಿದ್ಧೇಶನಿಗೊಂದು ಮಂಗಳ ಪ್ರಭೆಯ ತಂದರು. ಮಹೋನ್ನತಿಯ ತಂದರು. ಅಂದಿನ ಆ ಪ್ರಾಕೃತಿಕ ಪಾರ್ಥಿವ ಭೂಮಿ ಇಂದು ಪಾರಮಾರ್ಥ ಪರಮಾತ್ಮನಿರುವ ಭೂಮಿಯಾಗಿದೆ. ಅಚರಲಿಂಗ ವಿರುವಲ್ಲಿ ಚರಲಿಂಗವೂ ಇರುವಂತಾಗಿದೆ. ಸಕಲ ಕಲಾಪ್ರಪೂರ್ಣವಾಗಿದೆ. ಅಲ್ಲಿ ಅನುದಿನ ಶಿವಾರ್ಚನೆ ಸಾಗಿ ಬರುತಿದೆ. ಶ್ರೀರುದ್ರ ಪಠನಗಾನ ಕೇಳಿಬರುತಿದೆ. ಗಂಟೆ ಜಾಗಟೆಗಳ ನಿನಾದವಾಗುತಿದೆ. ‘ಕೈವಲ್ಯೋಪನಿಷದ್ಭಾಷ್ಯ’ ಉದಯವಾಗಿದೆ. ‘ವೀರಶೈವ ಸಂಸ್ಕೃತಿ’ಯ ಉದಯ ಕೇಂದ್ರವಾಗಿದೆ. ‘ಶಿವಾದ್ವೈತ ತತ್ತ್ವಪ್ರಚಾರ ಸಮಿತಿ’, ‘ಶಿವಾನುಭವ ಸಮ್ಮೇಲನ’ಗಳ ಕಾರ್ಯಕ್ಷೇತ್ರವೆನಿಸಿದೆ. ‘ಏಕಾದಶ ಮಂಟಪ ಭೂರುದ್ರಗಣ ಪೂಜೆ’ಗೆ ಪಾತ್ರವಾಗಿದೆ. ಅನೇಕರು ಅಲ್ಲಿಗೆ ಆಕರ್ಷಿತರಾಗಿ ಆತ್ಮ ಶಾಂತಿಯ ಪಡೆಯುತಿದ್ದಾರೆ. ಆತ್ಮಾನುಭವದ ಕಾಂತಿಯ ಕಾಣುತ್ತಿದ್ದಾರೆ.

ಹಾನಗಲ್ಲ ಕುಮಾರ ಶ್ರೀಗಳವರ ಪುಣ್ಯ ನಾಮಾಂಕಿತದಲ್ಲಿ ಜನ್ಮವೆತ್ತಿದೆ ಶ್ರೀ ಗುರು ಕುಮಾರಾಶ್ರಮ. ಆದರೂ ಆ ಹೆಸರಿನಲ್ಲಿ ಅದೇನು ಹೆಂಪಿದೆ? ಅದೇನು ಕೋಮಲತೆಯಿದೆ? ಅದೆಷ್ಟು ಕಮನೀಯತೆಯಿದೆ? ಶ್ರೀಗುರು ಅಂದರೆ ಆ ಪರಶಿವ. ಆ ಪರಶಿವನ ಕುಮಾರ ಸದಾಶಿವ. ಆತನ ಆಶ್ರಮ, ಶ್ರೀಗುರು ಕುಮಾರಾಶ್ರಮ;

ಹೀಗೆಂದು ಅರ್ಥವಿಸಿದಾಗ ಆಗುವ ಆನಂದ ಅನಿತಿನಿತಲ್ಲ. ಅನುಭವಿಸುವ ಆರ್ಥಾನುಭೂತಿಗೆ ಪರಿಮಿತಿಯಿಲ್ಲ.

ಉಜ್ಜಯಿನಿ ಮರುಳಸಿದ್ಧರೊಡನೆ ಹಾನಗಲ್ಲ ಕುಮಾರ ಯೋಗಿಯು ಅಲ್ಲಿನ ಅಭಿಮಾನ ದೇವತೆಯಾಗಿ ಆತ್ಮೀಯ ಶ್ರೀ ಗುರುವಾಗಿ ಆರಾಧನೆಗೊಳ್ಳುತ್ತಿದ್ದಾನೆ. ಅವರಿಬ್ಬರ ಆ ಸಕಲ ನಿಷ್ಕಲ ಚೈತನ್ಯಗಳೊಡನೆ ಚಿತ್ಪ್ರಕಾಶವ ಬೀರುತ್ತಿದ್ದಾರೆ ಶ್ರೀ ಸದಾಶಿವ ಶಿವಾಚಾರ್ಯರು. ಆರಾಧನೆಯೆಂದರೆ ಬರೀ ಬಾಹ್ಯಾರಾಧನೆಯಲ್ಲ; ಭಾವಾರಾಧನೆಯೂ ನಡೆಯುತ್ತಿದೆ. ಬರೀ ಕ್ರಿಯಾರಾಧನೆಯಲ್ಲ; ಜ್ಞಾನಾರಾಧನೆಯೂ ಜರಗುತ್ತಿದೆ. ಸಂಗೀತ, ಜಾನಪದ ಸಾಹಿತ್ಯ ಮುಂತಾದ ಕಾವ್ಯ ಕಲೆಗಳ ಆರಾಧನೆಯೂ ಅಲ್ಲಿ ಕಾರ್ಯಗತವಾಗುತ್ತದೆ.

ಅಲ್ಲಿ ಆ ಶ್ರೀಗುರು ಕುಮಾರಾಶ್ರಮದಲ್ಲಿ ಶ್ರೀ ಸದಾಶಿವನ ಸ್ವರೂಪರಾದ ಶ್ರೀ ಸದಾಶಿವ ಶಿವಾಚಾರ್ಯರಲ್ಲದೆ ಬೇರಾರ ವಾಸವಿಲ್ಲ. ಬೇರಾರ ಆಸರಿಲ್ಲ. ಬೇರಾವ ಜಂಜಡವಿಲ್ಲ; ಸಂಗಡವಿಲ್ಲ. ಅಲ್ಲಿ ಇವರ ಶಿವಯೋಗ ಶಕ್ತಿ – ಶೀಲ ಶಾಂತಿಗಳು ತುಂಬಿ ತುಳುಕುತ್ತಿವೆ. ಚಿದ್ಬೆಳಗು ಬೆಳಗುತ್ತಿದೆ.

ಅಲ್ಲಿರುವ ಆ ಪುರಾತನ ಮರುಳಸಿದ್ಧೇಶ್ವರನು ಅಲ್ಲಿಗೆ ಹೇಗೆ ಬಂದನೊ ಏಕೆ ನಿಂದನೋ ತಿಳಿಯದು. ಆದರೆ ಅದೇ ಅಲ್ಲಿ ಮೊದಲಿದ್ದ ದೇವರು. ಶ್ರೀ ಸದಾಶಿವ ಶಿವಾಚಾರ್ಯರ ಮನವನು ಅಲ್ಲಿಗೆ ಸೆಳೆದು ಮರುಳು (ಆಸಕ್ತಿ) ಗೊಳಿಸಿದ ದೇವರು. ಅಲ್ಲಿ ನಿಂತು ಅನೇಕರನ್ನು ಆ ಶಾಂತಿ ನಿಲಯಕ್ಕೆ ಆಸಕ್ತಿಯಿಂದ ಬಂದು ನಿಂದು ಶಾಂತಿ ವಿಶ್ರಾಂತಿಗಳ ಪಡೆವಂತೆ ಮಾಡಿದ ಚೇತನ ದೇವರು ಶ್ರೀ ಸದಾಶಿವ ಶಿವಾಚಾರ್ಯರು. ವರುಷಕ್ಕೊಮ್ಮೆ ಮಾಘ ಮಾಸದಲ್ಲಿ ಸಾಸಿರ ಸಾಸಿರ ಜನರು ಬಂದು ಶಾಂತಿ ಪಡೆಯುತ್ತಾರೆ; ಸನ್ಮತಿಗಳಾಗಿ ಮರಳುತ್ತಾರೆ.

ಅಲ್ಲಿ ಇನ್ನೊಂದು ವಿಶೇಷ! ಅಲ್ಲೊಂದು ಬಾವಿಯಿದೆ. ಅದನ್ನು ಇವರೇ ತೋಡಿಸಿದ್ದಾರೆ. ಅದೊಂದೇ ನಾಲ್ಕಾರು ಸಾವಿರ ಜನರ ತೃಷೆಯನ್ನು ತೀರಿಸುತ್ತದೆ. ಅದಕ್ಕೆ ನೀರಿನ ಬರ ಇಲ್ಲ. ಭವದ ಬೇಗೆಯಿಂದ ಬಳಲಿ ಬಂದವರಿಗೆ ಶ್ರೀ ಶದಾಶಿವ ಶಿವಾಚಾರ್ಯರೊಬ್ಬರೇ ಆತ್ಮಶಾಂತಿಯನ್ನು ಅಂತಃಕರಣದಿಂದ ಕರುಣಿಸುವಂತೆ-ಅಲ್ಲಿನ ಆ ಬಾವಿಯೂ ಸಹ ಬಿಸಿಲಿನ ಬಾಧೆಯಿಂದ ಬಳಲಿದ ಅಷ್ಟೊಂದು ಜನರ ತೃಷೆಯನ್ನು ತೀರಿಸುತ್ತದೆ. ಈ ಬಾವಿಯಿಂದ ತೃಷೆ ತೀರುತ್ತಿದೆ; ಆ ಮಹಾನುಭಾವಿಯಿಂದ ತೃಷ್ಣೆ ತೀರುತ್ತಿದೆ. ಇವೆರಡುಳ್ಳ ಆ ಆಶ್ರಮ ಇಹ–ಪರ ಶಾಂತಿಧಾಮವಾಗಿ ಶೋಭಿಸುತ್ತಿದೆ.

ಶ್ರೀಗುರು ಕುಮಾರಾಶ್ರಮಕರ್ತರ ಉದ್ದೇಶ ಈ ಜಗದ ಈ ಜಂಜಡದಿಂದ ವಿಶ್ರಾಂತಿ! ಈ ವಿಶ್ರಾಂತಿ ಮಠಮಾನ್ಯಗಳ ವ್ಯಾಮೋಹದಿಂದ ಒದಗುವುದಲ್ಲ. ಮಠ ಮಾನ್ಯಗಳ ಅಭಿಮಾನ-ಆಶೆಗಳು ಶಾಂತಿಸಾಧನಗಳಲ್ಲ, ಶಾಂತಿ ಸದನಗಳಲ್ಲ. ಮಠದ

ಮಮಕಾರ ಮನೆಯ ಮಮಕಾರಕ್ಕಿಂತ ಮಿಗಿಲಾದುದೇನಲ್ಲ. ಮಠವನ್ನೂ ಮಾನ್ಯವನ್ನೂ ಬೆಳಸುತ್ತ ಬೆಳಸುತ್ತ ಮನೆ ಬಾಳಿಗಿಂತಲೂ ಮಹತ್ತರವಾದ ಮಮಕಾರ ಬಾಳಿಗೆ ಬೀಳುತ್ತೇವೆ. ನನ್ನ ಮಠದ ಬಾಳು-ಬದುಕು ಬೆಳೆಯಬೇಕು ; ಕೀರ್ತಿಕಳಸ ಬೆಳ್ಳಿಯದಾದರೆ ಸಾಲದು, ಚಿನ್ನದ್ದಾದರೆ ಸಾಲದು, ರತ್ನ ವಜ್ರಗಳದ್ದಾಗಬೇಕು-ಎಂಬ ಮನದ ಹೋರಾಟ ಮೊದಲಾಗುತ್ತದೆ. ಜಗತ್ತಿನಲ್ಲಿ ಜನತೆಯಲ್ಲಿ ನನ್ನದೇ ಪ್ರಭಾವವಿರಬೇಕು ಎಂಬ ಆಸೆ ಆರಂಭವಾಗುತ್ತದೆ. ಆ ಪ್ರಭಾವವನ್ನು ಸಹಜ ಸತ್ಯ ವರ್ತನದಿಂದ ತಂದುಕೊಳ್ಳದೆ ಕುಟಿಲ ಕುಹಕ ಮೋಸ ಕ್ರಿಯೆಗಳಿಂದ ಅರ್ಜಿಸಲು ಆರಂಭವಾಗುತ್ತದೆ. ಜೊಳ್ಳುಜೀವನಕ್ಕೆ ಮೊದಲಾಗುತ್ತದೆ. ನನ್ನಮಠವೇ ಹಿರಿಯದು, ನಾನೇ ಎಲ್ಲರಿಗೂ ಹಿರಿಯ, ನನಗೇ ಎಲ್ಲ ಭಾಗ್ಯ ಭೋಗಗಳಾಗಬೇಕು ; ನನ್ನ ಬಿಟ್ಟಿನಿಲ್ಲ ; ನಾನೇ ಎಲ್ಲ - ಎಂಬ ಅವಿವೇಕಯುಕ್ತ-ಅಹಂಕಾರ ಪೂರಿತ-ಮದ ಮಾತ್ಸರ್ಯಭರಿತ ಅನೀತಿಜೀವನ ಅಶಾಂತಿಜೀವನ ಆರಂಭವಾಗುತ್ತದೆ. ವಿಚಾರಿಸಿದರೆ ವಿಶಾಲ ಬ್ರಹ್ಮಾಂಡದೊಳಗೆ ಇದಾವ ಮಠ? ಇದಾವ ಘಟ? ವಿಶ್ವ ಸಂಪತ್ತಿನೊಳಗೆ ವ್ಯಕ್ತಿಗತವಾದ ಇದಾವ ಸಂಪತ್ತು ? ಇದಾವ ಮಹತ್ತು ? ವಿಶ್ವಾತ್ಮರಲ್ಲಿ ವಿಶ್ವನಾಥನಲ್ಲಿ ನಾನೆಷ್ಟರವನು ? ನನ್ನ ವಿಶಿಷ್ಟತೆಯೇನು ? ಎಂಬ ಭಾವನೆ ಬರುವುದೇ ಇಲ್ಲ. ಬಂದರೂ ಬಿಡುವುದಿಲ್ಲ. ಜತೆಗೆ ತನ್ನಳವಿಗೆ ತಕ್ಕಷ್ಟು ಗಳಿಸಿದುದನ್ನೇ ಬಹುವೆಂದು ಭಾವಿಸುತ್ತಾನೆ. ಭಾಗ್ಯದ ಮದದಲ್ಲಿ ವೈಮರೆಯುತ್ತಾನೆ. ಅದನ್ನು ಗಳಿಸುವುದೇತಕ್ಕೆ ? ಗಳಿಸಿದ್ದನ್ನು ಹೊತ್ತೊಯ್ಯುವುದೆಲ್ಲಿಗೆ ? ಏತಕ್ಕಾಗಿ ಈ ಹೋರಾಟ ? ಎಲ್ಲಿಯವರೆವಿಗೆ ಈ ಬಂಡಾಟ ? ಇದೆಲ್ಲ ನಿಲ್ಲುವುದೆ ? ಸಲ್ಲುವುದೆ ? ಇತ್ಯಾದಿಯಾಗಿ ಸಾವಧಾನ ಮನಸ್ಕನಾಗಿ ಯೋಚಿಸುವುದೇ ಇಲ್ಲ. ವೃಥಾ ಅಶಾಂತಿಗೆ ಸಿಲುಕಬೇಕಾಗುತ್ತದೆ. ಇದಕ್ಕೆಲ್ಲ ಮೂಲ ಮಠ ಮಾನ್ಯಗಳ ಮಮತೆ! ಇದನ್ನೇ ತೊಡೆದುಬಿಟ್ಟರೆ ಲೇಸು ಎಂದು ಭಾವಿಸಿ ಸಂಗ್ರಹದ ಸಂಗ್ರಾಮದಿಂದ ದೂರಾಗಿ, ಸ್ವಾಭಿಮಾನದ ಸಂತೆಯಿಂದ ಸಿಡಿದು ಸದಾ ಶಿವಪೂಜೆ, ಶಿವಧ್ಯಾನ, ಶಿವಸ್ತೋತ್ರ, ಶಿವಾನುಭವ ಸ್ವಾಧ್ಯಾಯಗಳಲ್ಲಿ ನಿರತರಾಗಿರಲು ಈ ಆಶ್ರಮ ವಿರಚಿಸಿದರು. ಈಗಲೂ ಅವುಗಳಲ್ಲಿಯೇ ನಿರತರಾಗಿ ಶಾಂತಿ ಸಮಾಧಾನಗಳಲ್ಲಿದ್ದು ಸುಖಿಗಳಾಗಿರುವರು. ಇವರ ಈ ಒಳ್ಳುರಿಗೆ ಮುಖ್ಯ ಸಾಧನವಾಗಿ ನಿಂತಿದೆ ಈ ಶ್ರೀಗುರು ಕುಮಾರಾಶ್ರಮ. ಈ ಆಶ್ರಮದ ವಾತಾವರಣ ಶಾಂತಿ ಸಾಧನವಾಗಿದೆ. ಆಶ್ರಮವಾದ ಬಳಿಕ ಅಲ್ಲಿನ ಆ ದೃಶ್ಯವು, ದೃಷ್ಟಿ ಮನಸ್ಸುಗಳನ್ನು ನಿಶ್ಚಲಗೊಳಿಸುವಂತೆ ರೂಪಿತವಾಗಿದೆ. ಅಲ್ಲಿನ ಆ ಗಗನ ಮಲ್ಲಿಗೆಯ ಗಿಡಗಳ ಗುಂಪು, ಬಿಲ್ವಬನ, ನಳನಳಿಸಿ ಬೆಳೆದ ಮಾವಿನ ಮರಗಳು, ಕೋಮಲವಾದ ಚಿಗುರು ಕೆಂಬಣ್ಣದ ಹೂವು ತಳೆದ ದಾಳಿಂಬೆ, ಕಾಯಿ ಹಣ್ಣುಗಳಿಂದ ತುಂಬಿ ಚಲುವಾದ ಲಿಂಬೆ ಮುಂತಾದ ಹೂ ಹಣ್ಣುಗಳ ಮರಗಳು ವಿಶ್ರಾಂತಿ-ಸಾಧನವಾಗಿರುವಂತೆ, ಅಲ್ಲಿರುವ ಶ್ರೀ ಸದಾಶಿವ

ಶಿವಾಚಾರ್ಯರ ತಪಸ್ಸು, ಯೋಗ, ಅಧ್ಯಯನ, ಆಚಾರಾದಿಗಳು ಮಾನಸಿಕ ಶಾಂತಿಯನ್ನೂ ಅವರ ಸತ್ಯ ಸಾಹಿತ್ಯದ ಬೌದ್ಧಿಕ ಕಾಂತಿಯನ್ನೂ ಅವರ ಆ ಆತ್ಮಪ್ರಭಾವ ಜೀವನ್ಮುಕ್ತಿಯು ಸುಖವನ್ನೂ ಉಂಟುಮಾಡುತ್ತವೆ. ಅಲ್ಲಿನ ಆ ನೋಟ ನೇತ್ರಕ್ಕೊಂದು ತೃಪ್ತಿ! ಅವರ ಆ ಚಿತ್‌ಕ್ರಿಯಾಮೃತದೂಟ ಜೀವಕ್ಕೊಂದು ಸಂತೃಪ್ತಿ. ಅಲ್ಲಿನ ಆ ಪೂಜಾದ್ರವ್ಯಗಳ ಕಂಪು ಹೃದಯಕ್ಕೆ ತಂಪು. ಅಲ್ಲಿನ ಆ ಪಾವನಮಯ ಪರಿಶುದ್ಧವಾಸನೆ ಮನಕ್ಕಿಂಪು. ಆ ಸದಾಶಿವಮೂರ್ತಿ ಸಂದರ್ಶನ ಚಿತ್ತಕ್ಕೊಂದು ಚಿರಶಾಂತಿ! ಚಂದ್ರಮನ ಬೆಳಕು ಅದೆಷ್ಟು ತಂಪೋ ಅದಕ್ಕೂ ಹೆಚ್ಚು ತಂಪು ಆ ಸದಾಶಿವಶಿವಾಚಾರ್ಯ ಚಂದ್ರನಿರುವ ಶ್ರೀ ಗುರುಕುಮಾರಾಶ್ರಮ! ಇದರಿಂದಾಗಿ ಇದು ಶಾಂತಿಧಾಮ; ಮುಕ್ತಿಧಾಮ.

ಈ ಹೊರಗಿನ ಹೋರಾಟಮಯ ಜೀವನದಲ್ಲಿ ಸಾಕಾಗಿ ಈ ಯಾಂತ್ರಿಕ ಜೀವನದಲ್ಲಿ ಬಳಲಿ ಬೆಂಡಾಗಿ ವೈಷಮ್ಯಜೀವನ ವಿಷಯಜೀವನಗಳಿಂದ ನಿರ್ವೀರ್ಯರಾಗಿ ನಿರಾಶರಾಗಿ ನಿಂತವರು ಶ್ರೀಗುರು ಕುಮಾರಾಶ್ರಮಕ್ಕೆ ಬಂದರೆ ಅಲ್ಲಿ ದೊರೆವುದು ಅವರ ಆತ್ಮಕ್ಕೆ ಅಮೃತ-ಶಾಂತಿ; ಅಪ್ರತಿಮ ಸುಗತಿ! ಕಳೆದುಕೊಂಡ ಆತ್ಮವಿಶ್ವಾಸ ಕೈಗೂಡುತ್ತದೆ. ಬೆಳೆದು ಬಂದ ನಿರಾಶೆ ನಿರುತ್ಸಾಹಗಳು ತೊಲಗಿ ಸದಾಸೆ-ಸೋತ್ಸಾಹಗಳು ತೊಳಗಿ ಬರುತ್ತವೆ. ಸುಳಿದುಸುತ್ತಿದ ಶೋಕ ಮೋಹ ಮದಮತ್ಸರಾದಿಗಳು ಮಾಯವಾಗುತ್ತವೆ. ಈ ಬಯಲಾಟ ನೋಟಗಳ ಆಶಾನೇತ್ರ ಮುಚ್ಚಿ ಅತ್ಮಶಾಂತಿ ಹೆಚ್ಚಿ ಸಮಾಧಿ ನಿದ್ರೆಯಲ್ಲಿ ನಿಶ್ಚಿಂತಸುಖಿಯಾಗಿ ನಿಲ್ಲುವ ಸಲ್ಲುವ ಸುಯೋಗ ವೊದಗುತ್ತದೆ. ಓಂ ಶಾಂತಿ: ಓಂ ಶಾಂತಿ: ಓಂ ಶಾಂತಿ: ಎಂದು ಎದೆಯಾರೆ ಉದ್ಘೋಷವುಕ್ಕುತ್ತದೆ.

—ಶ್ರೀ ಜ. ಚ. ನಿ.

———::———

# ಗಾರುಡಿಗ ನೀನೊಬ್ಬ !

*

ಯೋಗದಲಿ ತ್ಯಾಗದಲಿ ತಿಳಿಯಾದ ಶೀಲದಲಿ
ತಳೆದಿರುವ ತಪಸ್ಸಾಮ್ರಾಜ್ಯ ನಿಜ ಸೌಖ್ಯದಲಿ
ನಿತ್ಯ ನಿರ್ಮಳ ರೀತಿ-ನೀತಿಯಲಿ ನಿಯತಿಯಲಿ
ನಿಂತಿರುವ ಶಾಂತಿಯುತ ಶ್ರೀ ಸದಾಶಿವವರ್ಯ,
ನಿನ್ನ ಮಂಗಳ ಮಾಟ, ನಿನ್ನ ಕಂಗಳ ನೋಟ
ಬಳಿಬರ್ಪ ಭಾವುಕರ ಭಾವವನು ಬರಸೆಳೆದು
ಹೃತ್ಕಮಲ ವಿಕಸನಂಗಯ್ದು ಮಕರಂದವನು
ಆನಂದ ಬಾಷ್ಪವಾಗಿ ಹರಿವಂತೆಸಗುವುದು.
ನೀ ಧನ್ಯ ನೀ ಮಾನ್ಯ ನಿನ್ನ ಜನ್ಮವು ಪುಣ್ಯ
ಸಾರ ಸಜ್ಜನ ಗಣದೊಳಗೆ ಗಣಿಸೆ ನೀ ಗಣ್ಯ !
ನಿನ್ನದೇ ತಿಳಿಬಾಳು ನೀನ್ನದೇ ಬಿಳಿಬಾಳು
ನಿನಗಾರು ಸರಿಸಾಟಿ ಮೂಲೋಕದೊಳು ಹೇಳು !
ದುಶ್ಶೀಲ ದುಸ್ವಪ್ನ ದುಃಖಾರ್ಣವದಿ ಬಿದ್ದು
ದುಮ್ಮಾನದಲ್ಲಿ ಬಳಲುತ್ತಿಹುದು ಜನವಿಂದು,
ಸುಮ್ಮಾನದಲ್ಲಿ ಶೀಲ ಹಸ್ತವನು ನೀನಿತ್ತು
ಬಿಮ್ಮನೇ ಬಿಡದೆತ್ತಿ ಕಾಪಾಡು ಕೃಪೆಯಿತ್ತು.
ಸರ್ವದೋಷಂಗಳನು ತೊಳೆವುದೇ ನಿನ್ಕರ್ಮ
ಸರ್ವವಿಧ ವಿದ್ಯೆಗಳ ನರಿವುದೇ ನಿನ್ಬ್ರಹ್ಮ
ಶರ್ವ ಸುಖದೊಳ್ಸದಾ ನಲಿವುದೇ ನಿನ್ಮರ್ಮ
ನಿನ್ನ ಪ್ರಕೃತಿ ಪಾತ್ರೆಯ ನೀ ನಿತ್ಯ ತೊಳೆಯುವೆ.
ನಿನ್ನ ಪ್ರವೃತ್ತಿ ಬತ್ತಿಯನಂಟಿಸಿ ಬೆಳಗುವೆ.
ನಿನ್ನ ಕರಣೇಂದ್ರಿಯ ಹಯಂಗಳನು ಬಿಗಿದಿರುವೆ.
ನೀನಿರದೆ ನಿಚ್ಚಟದ ಗುರಿಯತ್ತ ಸಾಗಿರುವೆ
ಶೀಲವನು ಕೆಳಗೊತ್ತಿ ಮೇಲೇಳಮೊಲ್ಮುತ್ತಿ
ನಿಂತಿಹುದು ದುಶ್ಶೀಲ ಹೆಬ್ಬಾವು ಹೆಡೆಯೆತ್ತಿ
ಹೆಬ್ಬಾವವದನು ಹೇಳಿಗೆಯಲ್ಲಿ ಮುಚ್ಚಿಟ್ಟ
ಹೆಬ್ಬಗೆಯ ಶೀಲದಾ ಗಾರುಡಿಗ ನೀನೊಬ್ಬ !

———

—ಶ್ರೀ ಜ. ಚ. ನಿ.



ಸಮಿತಿಯ ಸಂಸ್ಥಾಪಕರ ಆರಾಧ್ಯ ಚಿದ್ಗುರು ಮೂರ್ತಿ
ಲಿಂ|| ಹಾನಗಲ್ಲ ಕುಮಾರ ಮಹಾಸ್ವಾಮಿಗಳು.
ಶಿವಯೋಗ ಮಂದಿರ ಮತ್ತು ವೀರಶೈವ ಮಹಾಸಭೆಯ ಸಂಸ್ಥಾಪಕರು.



ಶ್ರೀ ಮ।। ನಿ।। ಜಗದ್ಗುರು ಸಚ್ಚಿದಾನಂದ ಮಹಾಸ್ವಾಮಿಗಳು



ಲಿಂ।। ಶ್ರೀ ಪ್ರಭುಕುಮಾರ ಪಟ್ಟಾಧ್ಯಕ್ಷರು
ದೊಡ ಮಠ. ಕಂಚುಗಲು ಬಿದರೆ.



## ಭಾಷ್ಯಕಾರರು ಶ್ರೀ ಸದಾಶಿವ ಶಿವಾಚಾರ್ಯರು.



ಕೈವಲ್ಯೋಪನಿಷದ್ಭಾಷ್ಯಂ ಶಿವಾದ್ವೈತ ಪ್ರಕಾಶಕಂ
ಸದಾಶಿವ ಶಿವಾಚಾರ್ಯೋ ವಿಧತ್ತೇ ದೇಶಿಕಾಜ್ಞಯಾ
ಕೈವಲ್ಯೋಪನಿಷದ್ವೇದ್ಯಂ ಕೈವಲ್ಯಾನಂದ ತುಂದಿಲಂ
ಕೈವಲ್ಯ ಗಿರಿಜಾರಾಮಂ ಸ್ವಮಾತ್ರಂ ಕಲಯೇಽನ್ವಹಂ

**ಅಸ್ಯಾರ್ಥ :—**

ಕೇವಲಸ್ಯೇದಂ ಕೈವಲ್ಯಂ ಲಿಂಗಾಂಗ ಸಾಮರಸ್ಯರೂಪಾ ಮುಕ್ತಿರಿತ್ಯರ್ಥಃ ।
ಉಪನಿಷದಿತಿ ಶ್ರೇಯೋಽಸ್ಯಾ ಮಿತ್ಯುಪನಿಷತ್ ।
ಕೈವಲ್ಯಸ್ಯ ಉಪನಿಷತ್ ಕೈವಲ್ಯೋಪನಿಷದಿತಿ ಪ್ರತಿಪಾದ್ಯ ಪ್ರತಿಪಾದಕ

ಭಾವಸಂಬಂಧೇ ಷಷ್ಠೀ, ಕೈವಲ್ಯ ಪ್ರತಿಪಾದಿಕಾ ತದ್ಬೋಧಿಕಾ ತತ್ಪ್ರದಾ ವೋಪನಿಷತ್ ಕೈವಲ್ಯೋಪನಿಷದಿತಿ ತಾತ್ಪರ್ಯಮ್ ।

—ಕೈವಲ್ಯೋಪನಿಷತ್ ಸಾದಾಶಿವ ಭಾಷ್ಯ.

## ವಚನಕಾರರು :

### ಶ್ರೀ ವಿಭೂತಿ

ಶ್ರೀ ಗುರು ಲಿಂಗ ಜಂಗಮುದೈವಂಗಳ ಅಂತರಂಗದಲ್ಲಿದ್ದ
ಶಾಂತಿ ಚಿತ್ಕಳೆಯೆ ಭಸಿತವಾಗೆಸೆವುದು ನೋಡಾ.
ಸಕಲ ಪಾಪಗಳನುರುಹಿ ಪರಿಪೂತರನ್ನಾಗಿ
ಮಾಡುವುದು ಭಸ್ಮವು ನೋಡಾ. ಅದೇಂತೆಂದೊಡೆ :
"ಪಾಪಾನಾಂ ಭರ್ತ್ಸನಾದ್ಭಸ್ಮ ಶಿವತೇಜಃ ಪ್ರಕಾಶನಾತ್"
ಎಂದುದಾಗಿ ಶ್ರೀ ಚಿದ್ಗುರು ಕುಮಾರ ದೇವಯ್ಯಾ,
ಇಂತಪ್ಪ ಭಸಿತದ ಸ್ನಾನ ಧೂಳನ ಧಾರಣಗಳಿಂದ
ನಿಮ್ಮ ಶರಣರು ನಿತ್ಯ ಪರಿಶೋಭಿಸುತ್ತಿಹರಾಗಿ
ಅವರಿಗಾನು ನಮೋ ನಮೋ ಎನುತಿರ್ದೆನಯ್ಯಾ !

—ಶ್ರೀ ಗುರು ಕುಮಾರೇಶ್ವರ ವಚನ.

"ಕಾಯ ಜೊಳ್ಳು ; ಮಾಯ ಮುಳ್ಳು.
ಇದು ಸಟೆಯಲ್ಲ, ದಿಟ ಕಾಣಿರಣ್ಣಾ !
ಕಾಯಜವೈರಿ ಎಮ್ಮಾರಾಧ್ಯ ಚಿಲ್ಲಿಂಗಮೂರ್ತಿಯುಡಿವಿಡಿದು
ಮಾಯ ಮೀರಿ ಚಿರಂಜೀವಿಗಳಾಗಿರಣ್ಣಾ !

—ಅನುಭವ ವೈಖರಿ.

---

# ಕವನಕಾರರು :

## ದಿವ್ಯ ಹೃದಯ

ಕಂಗಳೂರಿನ ಇಂಗಿತವರಿದರೆ ಹಿಂಗುವುದೀ ಜೀವನದ ಹೊರೆ
ಮಂಗಳ ಮೂರುತಿ ಲಿಂಗದ ಸಂಗದಿಯುಂಗಕೆ
ಸುಖವು ದೊರೆವುದುರೆ ॥ ಪ ॥

ದಿನದಿನವೀಪರಿ ಸಾಧನವಿರುತಿರೆ ಸಿದ್ಧಿಸುವುದು ಪರತರಸುಖ
ಅನುದಿನ ಮರೆಯದೆ ಪರಮನ ಶೋಧಿಸಿ ಸಾಧಿಸಿದರೆ ನೈಜಸುಖ ೧

ಭಾಗ್ಯದ ಭೋಗವನೆಲ್ಲವನುರೆ ನೀಗಿದರಾಗುವುದಾನಂದ
ರಾಗ ವಿರಾಗವ ನಳಿದುಳಿದುದೆ ಜೀವನಿಗದು ನಿತ್ಯಾನಂದ ೨

ಅನುಭವಿ ಚಿದ್ಗುರು ಕುಮಾರಕೃಪೆಯಿಂದರಿದಿರವದು ಮಂದಟ್ಟು
ಘನಶಂಭುಲಿಂಗದೆ ತಿಳಿವಿಹ ಪರದೊಳು ಪರತರ
ಸುಖಕದುವೆ ಗುಟ್ಟು ೩

## ಸ್ವಪ್ನ

ನಾ ಕಂಡೆ ನಾ ಕಂಡೆ ಬೆಳಗಿನೊಬ್ಬುಳಿಯ
ಕೈಕೊಂಡ ಕರದಿಷ್ಟ ಲಿಂಗದಚ್ಚರಿಯ ॥ ಪ ॥

ಅದು ಮೂಗ ಸವಿದ ಸಕ್ಕರೆಯ ರುಚಿಯಂತೆ
ಅದು ಸತಿಪತಿಯ ರತಿಸುಖದ ಸವಿಯಂತೆ ೧

ಹೇಳಬಾರದು ಕೇಳಬಾರದತಿಗೂಢ
ಕೇಳದೆ ಶ್ರುತಿಗುರು ಸಖರಿಂದಾದೆ ಮೂಢ ೨

ಹಾಳುಮತ ಹವ್ಯಾಸದಿಂದ ನಾ ಕೆಟ್ಟೆ
ಹಾಳಾಯ್ತು ತಿಳಿವಿನ ಬಾಳೆನ್ನ ಗುರುವೆ ೩

ಮರೆದರಿದಾದರು ಹೀನರೊಡನಾಟ
ಸರಿಯಾದುದಲ್ಲದು ಹಾನಿಗೆ ಮಾಟ ೪

ಭಾಳಲೋಚನನೊಲಿಮೆ ಹಗಲಿರುಳು ಬಯಸುವೆನು
ಹಾಳು ಸಂಸಾರವ ತ್ಯಜಿಸಿ ಸುಖಿಸುವೆನು ೫

ಗುರುವೆ ಸಚ್ಚಿದ್ಗುರುವೆ ಬೇಡುವೆ ಬೇಗ
ಪರಿಹರಿಸೀ ಶೃಂಖಲೆಯ ಪೊರೆ ಪೊರ್ದಿದವನ ೬

## ನಿಜಾನಂದ

ಉಪಾಧಿಯಿಲ್ಲದ ನಿರುಪಾಧಿ ಗಂಟೆಜಾಗಟೆ ಬಡಿಯುತಿದೆ
ಉಪಮೆಯಿಲ್ಲದ ಲಿಂಗಪೂಜೆಯೊಳನುದಿನ ಘನತರದೆ ॥ ಪ ॥

ಆಹತವಿಲ್ಲದನಾಹತನಾದವ ಕೇಳಿಕೇಳಿ ಕಿವಿಯು
ಆಹ ! ಮನಸ್ಸೈಮರೆಮ ನಿಂದಿಹ ಸೋಜಿಗವೇನಿದು ೧

ಲಿಂಗದೊಳಿಟ್ಟು ನಟ್ಟು ಚಲಿಸದಿಹ ಕಣ್ಣುಗಳವೆಯಾಟ
ಕಂಗೊಳಿಸುವ ಪರಿಪರಿಯ ಬಿಂದುವ ನೋಡಿ ರಮಿಸುವಾಟ ೨

ರವಿಶಶಿಕೋಟಿ ಜೆಳಗನು ಮೀರಿದ ಸ್ವಯಮಾತ್ಮನ ಬೆಳಗು
ತವೆ ಕವಿದಿಹ ಜ್ಯೋತ್ಯವಸಾನೆಂತು ಬಣ್ಣಿಪೆನಿಳೆಯೊಳಗು ೩

ಲೀಲಾಜಾಲದಿ ಭಾವದೊಳುದಿಸಿದ ಈ ಬಗೆ ವಿಷಯವನು
ಪೇಳಿದವನು ಸಟರಾಯಪಟ್ಟಣದ ಶ್ರೀಗುರು ಸದಾಶಿವನು ೪

---

### ಪ್ರಾಚ್ಯ ಸಾಹಿತ್ಯ ಸಂಗ್ರಾಹಕರು :

'ಶೀಲಸಂತಯ್ಯಗಳ ತ್ರಿವಿಧಿ' ಮತ್ತು 'ತ್ರಿಭುವನತಾತನ ಗುರು ರಗಳೆ' ಎಂಬೀ ಎರಡು ಮಹತ್ವದ ಕೃತಿಗಳನ್ನು ಕ್ರಿ. ಶ. ೧೯೪೦ ರಲ್ಲಿ ಸಂಗ್ರಹಿಸಿ ಪ್ರಕಟಿಸಿದಾರೆ. ಅಲ್ಲದೆ ಇನ್ನು ಬೇರೆ ಪ್ರಾಚ್ಯ ಸಾಹಿತ್ಯ ಸಂಗ್ರಹ ಇವರಲ್ಲಿವೆ.

### ಸಂಸ್ಕಾರ, ಸಂಸ್ಕೃತಿ ಪ್ರದಾತರು :

'ಶಿವಪೂಜಾ ವಿಧಿ', 'ದೀಕ್ಷಾ ವಿಧಿ', 'ಅನುಗ್ರಹ', 'ಪಟ್ಟಾಧಿಕಾರ ವಿಧಿ', ಎಂಬೀ ಸಂಸ್ಕಾರ ಕೃತಿಗಳನ್ನು ಅನುಗ್ರಹಿಸಿದ್ದಾರೆ.

'ವೀರಶೈವ ಸಂಸ್ಕೃತಿ' ಎಂಬ ಸಾಮಾಜಿಕ ಸಂಸ್ಕೃತಿಯ ಉದ್ಬೋಧಿಸುವ ಉತ್ತಮ ಕೃತಿಯನ್ನು ರಚಿಸಿದಾರೆ.

---:---

# ಬಡಗನಾಡ ಹೇಮರೆಡ್ಡಿ ವೀರಶೈವರು.



## ರಡ್ಡಿ–ರೆಡ್ಡಿ :

ಭಾರತದ ಬಹುಮತಗಳಲ್ಲಿ ರಡ್ಡಿ ಮತವೊಂದು. ಈ ರಡ್ಡಿ ಪದಕ್ಕೆ ಬದಲಾಗಿ 'ರೆಡ್ಡಿ' ಎಂತಲೂ ಹೇಳುತ್ತಾರೆ. ಹೇಗಂದರೂ ಒಂದೆ: ರಟ್ಟೆ (ರೆಟ್ಟೆ)ಯು ಬಲದ ಮೇಲೆ ಬಾಳುವುದರಿಂದ ಇವರಿಗೆ ರಡ್ಡಿ ಅಥವಾ ರೆಡ್ಡಿಗಳೆಂದು ಹೆಸರು. ಸಂಸ್ಕೃತದ ರಾಟ್ ಪದದಿಂದ ರೆಡ್ಡಿಯಾಯಿತೆಂದು ಒಂದು ಅಭಿಪ್ರಾಯವಿದೆ. ಇದು ಮೇಲಿನ ನಮ್ಮ ಅಭಿಪ್ರಾಯಕ್ಕೆ ಅಷ್ಟೇನು ವಿರೋಧವಾಗಿರದಿದ್ದರೂ ಇದೇ ಸರಿಯೆಂದು ಒಪ್ಪಲು ನಾವು ಸಿದ್ಧರಿಲ್ಲ. ರಡ್ಡಿ ಮತೋದಯ ಆರಂಭ ಕಾಲದಲ್ಲಿಯೆ ರಾಜರಾಗಿ ರಂಜಿಸಿದರೆಂದು ಬಾಳಿ ಬದುಕಿದರೆಂದು ಹೇಳುವುದು ತೀರ ಕಷ್ಟ; ತೀರ ಅಸಹಜ. ಮೊದಮೊದಲು ಇವರು ತಂತಮ್ಮ ರೆಟ್ಟೆಯ ಬಲದಿಂದ ದುಡಿದು ಬಾಳಿ ಬದುಕಿ ಮುಂದುವರಿದು ಆ ಬಳಿಕ ಆ ಸಾಹಸದ ಫಲವಾಗಿ ರೂಢಿಯಲ್ಲಿ ರೆಡ್ಡಿಗಳೆಂದು ಹೆಸರು ಪಡೆದುದೇ ಸಹಜವೂ ಸಯುಕ್ತವೂ ಆಗಿದೆ. ರಟ್ಟೆ – ರೆಟ್ಟೆ ಎಂಬುದಾಗಿ ಎರಡು ಬಗೆಯ ಪದ ಪ್ರಯೋಗಗಳಿರುವಂತೆ ರಡ್ಡಿ – ರೆಡ್ಡಿ ಎಂಬ ಪದದ್ವಯ ಪ್ರಯೋಗವಿರುವುದೂ ಸಹ ನಮ್ಮ ಅಭಿಪ್ರಾಯಕ್ಕೆ ಸಾಕ್ಷಿಯಾಗಿದೆ. ಇದರಿಂದಾಗಿ ರಡ್ಡಿ ಪದವು ದ್ರವಿಡ ಶಬ್ದವೆಂದು ನಮ್ಮ ಅಭಿಪ್ರಾಯ. ರಡ್ಡಿ ಪದವು ಜಾತಿ ಸೂಚಕವಲ್ಲ; ವೃತ್ತಿ ಸೂಚಕ.

## ಪಾಕನಾಡ ಬೆಡಗು :

ರಡ್ಡಿ ಮತದಲ್ಲಿ ಬೆಡಗು (ಬಗೆ)ಗಳು ಬಹುವಾಗಿವೆ. ಅವುಗಳಲ್ಲಿ ಆಂಧ್ರ ಪ್ರದೇಶದಲ್ಲಿ ಬಳಕೆಯಿರುವ ಬಗೆಗಳಿವೆ. ಕನ್ನಡ ನಾಡಿನಲ್ಲಿ ರೂಢಿಯಲ್ಲಿರುವ ಬೆಡಗುಗಳು ಹಲವಿವೆ. ಪ್ರೋಕನಾಟಿ, ಪೆದ್ದಯಪ್ರ, ಮೊರಸು, ಎಸಗುತೋಟ, ನೆರವಲ, ಪಟಪಟ ರೆಡ್ಡಿ, ಪಂಟರೆಡ್ಡಿ, ಚಿಟಪಟರೆಡ್ಡಿ, ಚಿಟಿಮಿರೆಡ್ಡಿ ಇವೆಲ್ಲ ತೆಲುಗು ನಾಡಿನ

ಬೆಡಗುಗಳೆಂದು ಹೇಳಬಹುದು. ಪಾಕನಾಡು, ಪರಗಮೂಟ, ಬಾಲರಡ್ಡಿ, ಕಾಮಾಟಿ, ಕನ್ನಾಟಿ, ನರವಾಲ, ನರಡಿ. ಇವೆಲ್ಲ ಕರ್ನಾಟಕದಲ್ಲಿ ಬಳಕೆಯಿರುವ ರಡ್ಡಿ ಬೆಡಗುಗಳು. ಇವುಗಳಲ್ಲಿ ಪಾಕನಾಡು, ನರವಾಲ, ನರಡಿ ಬೆಗೆಗಳವರು ವೀರಶೈವರಾಗಿರುವರು. ಇವರುಗಳಲ್ಲಿ ಪಾಕನಾಡು ಪ್ರಭೇದದವರು ಪ್ರಸಿದ್ಧರಾಗಿದ್ದಾರೆ. ಇವರು 'ಪಾಕನಾಡು' ಎಂಬ ಪ್ರದೇಶದಲ್ಲಿ ವಾಸಿಸಿದ್ದರಿಂದ ಇವರಿಗೆ ಈ ಹೆಸರು ಬಂದಿದೆ. '....ಪಾಕನಾಟಿ ದೇಶಂಬುನ ಭದ್ರಪೀಠಂಬುನ ನಧಿವಸಿಂಚಿ' ಎಂದು ಶ್ರೀನಾಥ ಕವಿಯು ತನ್ನ ಕಾವ್ಯದಲ್ಲಿ ಹೇಳಿದಾನೆ. ಪಾಕನಾಡು ಎಂಬುದಕ್ಕೆ ಪಾಕನಾಟಿ ಎಂಬುದು ಪರ್ಯಾಯ ಪದ. ಇವರನ್ನು ಪಂಟರೆಡ್ಡಿ ಎಂಬುದಾಗಿಯೂ ಹೇಳುತ್ತಾರೆ. ಇದು ಇವರ ವೃತ್ತಿ ಸೂಚಕವಾಗಿರಬೇಕು. ಪಾಕನಾಡು ಬೆಡಗಿನವರು ರಾಜಕೀಯ ಹಾಗೂ ಧಾರ್ಮಿಕ ಕ್ಷೇತ್ರಗಳಲ್ಲಿ ತುಂಬಾ ಹೆಸರು ಗಳಿಸಿದಾರೆ. ಪ್ರತಿಭೆಗೆ ಬಂದವರಲ್ಲಿ ಈ ಬೆಡಗಿನವರೂ ಒಬ್ಬರೆಂದು ವೇಮಣ್ಣನು ತನ್ನೊಂದು ಪದ್ಯದಲ್ಲಿ ಹೇಳಿದಾನೆ. ಅಲ್ಲದೆ "ಚಾಳುಕ್ಯರ ತರುವಾಯ ಆ ರಾಜಮಹೇಂದ್ರ ಮೊದಲಾದ ದೇಶಕ್ಕೆ ರಡ್ಡಿಗಳು ರಾಜರಾಗುವರು. ಇವರನ್ನು ಪಾಕನಾಟಿ ರೆಡ್ಡಿಗಳು, ಪಂಟರೆಡ್ಡಿಗಳು ಎಂದು ಕರೆಯುತ್ತಾರೆ. ಗೋದಾವರಿ ಜಿಲ್ಲೆಯಲ್ಲಿರುವ ರಾಜಮಹೇಂದ್ರಪರವನ್ನು ಕೃಷ್ಣಾ ಜಿಲ್ಲೆಯಲ್ಲಿರುವ ಕೊಂಡವೀಡು ನಗರವನ್ನು ರಾಜಧಾನಿಯಾಗಿ ಮಾಡಿಕೊಂಡಿದ್ದರು."

ಎಂಬುದಾಗಿ ತೆಲುಗಿನಲ್ಲಿ ಕ್ರಿ. ಶ. ೧೯೩೫ ರಲ್ಲಿ ಮದರಾಸ್ ಆನಂದ ಭಾರತೀ ಪ್ರೆಸ್ಸಿನಲ್ಲಿ ಅಚ್ಚಾದ "ವೇಮನ ಪದ್ಯಮುಲು" ಎಂಬ ಗ್ರಂಥ ಮುನ್ನುಡಿಯಿಂದ ತಿಳಿಯುತ್ತದೆ.

ಡ್ಡಿ ಪದವು ಕಲೆ ವಾಚಿಯಾಗಿದ್ದರೆ ಪಾಕನಾಡುಬೆಡಗು ನೆಲೆ ವಾಚಿಯೆಂದು ಹೇಳಬಹುದಾಗಿದೆ. ಬೆಡಗಿಗೆ ಮೂಲ ಕಾರಣ ನೆಲೆಯಾದರೂ ಇರಬಹುದು; ಕಲೆಯಾದರೂ ಇರಬಹುದು. ಆದರೆ ಈ ಪಾಕನಾಡು ಬೆಡಗಿಗೆ ಮಾತ್ರ ನೆಲೆ ಮೂಲವೆಂದು ಶ್ರೀನಾಥನ ಮೇಲ್ಕಂಡ ಮಾತಿನಿಂದ ವ್ಯಕ್ತವಾಗುತ್ತದೆ. ಬೆಡಗುಗಳು ಬಳಕೆಯಲ್ಲಿ ಬರಲು ಮೂಲ ಕಾರಣವೇನೆಂಬುದನ್ನು ಇನ್ನೂ ಸಂಶೋಧಿಸಬೇಕಾದುದಾಗಿದೆ.

ಒಟ್ಟಿನಲ್ಲಿ ಪಾಕನಾಡು ಎಂಬ ಬೆಡಗು ಬಡಗನಾಡ ಹೇಮರಡ್ಡಿ ವೀರಶೈವರನ್ನು ಬಳಸಿ ಬಂದ ನೆಲೆ ಸೂಚಕ ಬೆಡಗು.

## ಹೇಮರಡ್ಡಿ ವಂಶ:

ಪಾಕನಾಡು ಅಥವಾ ಪಾಕನಾಟಿ ಪ್ರಭೇದದಲ್ಲಿರುವವರಲ್ಲಿ ಹೇಮರಡ್ಡಿಯು ಹೆಚ್ಚು ಹೆಸರು ಗಳಿಸಿದಾನೆ. ಅಂತೆಯೇ ಈ ಪ್ರಭೇದದವರು ಹೇಮರಡ್ಡಿ ವಂಶದವರೆಂದು ಹೆಮ್ಮೆಯಿಂದ ಹರುಷದಿಂದ ಹೇಳಿಕೊಳ್ಳುತ್ತಾರೆ.

ಹೇಮರಡ್ಡಿಯು ದಕ್ಷಿಣ ದೇಶದಲ್ಲಿ ಪ್ರಸಿದ್ಧವಾದ ಪವಿತ್ರವಾದ ಶ್ರೀ ಶೈಲ ಪರ್ವತದ ಸನಿಹದಲ್ಲಿದ್ದ ಸಿದ್ಧಾಪುರದವನು. ಈ ಹಳ್ಳಿ ಈಗ ಹಾಳುಬಿದ್ದಿದೆ. ಇದು ಮೊದಲು ಹೆಸರಾದ - ಹಿರಿದಾದ ಹಳ್ಳಿ. ಈ ಊರಿನಲ್ಲಿ ಪುರಾತನ ಶಿವಾಲಯಗಳು, ಶಿಲಾಮಂಟಪಗಳು, ಶಿವಾಲಯ ಶಿಖರಗಳು, ಸೊಬಗಿನ ಹೆಬ್ಬಾಗಿಲುಗಳು ಇದ್ದು ಈಗ ಸಿಥಿಲವಾಗಿ ಬಿದ್ದಿವೆ. ಇವುಗಳಿಂದ ಇದು ಹಿಂದೆ ಭಕ್ತರ ಭಾವುಕರ ಮತ್ತು ಭೂಪರಾದವರ ಬೀಡಾಗಿತ್ತೆಂದು ಭಾಸವಾಗುತ್ತದೆ.

ಹೇಮರಡ್ಡಿ ಅನುಪೋತರಡ್ಡಿಯ ಮಗ. ಈತನಿಗೆ 'ಕುಮಾರ ಗಿರಿವೇಮನು' ಎಂಬುದಾಗಿಯೂ ಹೆಸರು. ಈತನಿಗೆ ಐವರು ಗಂಡುಮಕ್ಕಳು: ಕೋಮಟಿರಡ್ಡಿ, ಭರಮರಡ್ಡಿ, ನಾಗರಡ್ಡಿ, ವೇಮಣ್ಣ-ಎಂಬಿವರು. ಮೂರನೆಯವನಾದ ಭರಮರಡ್ಡಿಯ ಧರ್ಮಪತ್ನಿಯೆ ಮಲ್ಲಮ್ಮ. ಇವಳು ಪರಮ ಪತಿವ್ರತೆ. ಗುರುಜಂಗಮ ದಾಸೋಹ ಶೀಲೆ. ಕಷ್ಟಕಾರ್ಪಣ್ಯ ಸಹಿಷ್ಣೆ. ಶ್ರೀಶೈಲ ಮಲ್ಲಿಕಾರ್ಜುನನ ಪರಮೋಪಾಸಿಕೆ. ಹೇಮರಡ್ಡಿ ಮಲ್ಲಮ್ಮ ಎಂದು ಹೆಸರಾಂತ ಮಾತೆ. ಕ್ರಿ. ಶ. ೧೪ನೆಯ ಶತಮಾನದಲ್ಲಿ ಶ್ರೀ ಶೈಲದಲ್ಲಿರುವ ಜಗದ್ಗುರು ಪಂಡಿತಾರಾಧ್ಯ ಪೀಠಾಧಿಪತಿಗಳಾದ ಶ್ರೀ ಜಗದ್ಗುರು ಚಂದ್ರಗುಂಡ ಮಠದಲ್ಲಿದ್ದ ನಿಡುಮಾಮಿಡಿ ಶ್ರೀ ಕರಿಬಸವೇಂದ್ರರಿಂದ ದೀಕ್ಷೋಪ ದೇಶವ ಪಡೆದು ಶಿಷ್ಯಳಾಗಿದ್ದ ಮಾತಾಯಿ! ಈ ಮಾತಾಯಿ ಮಲ್ಲಮ್ಮನ ಸಚ್ಚರಿತ್ರೆ ಯನ್ನು ಜೈನಾಪುರದ ರುದ್ರಕವಿಯು ಕನ್ನಡ ಸಾಂಗತ್ಯದಲ್ಲಿಯೂ ದ್ಯಾಂಪುರ ಚೆನ್ನ ಕವಿಯು ಷಟ್ಪದಿಯಲ್ಲಿಯೂ ಬರೆದಿದಾರೆ.

ಮಲ್ಲಮ್ಮನ ಭಾವವೈದನಾದ ವೇಮರಡ್ಡಿ ವೈಷಯಿಕನಾಗಿರುತ್ತಾನೆ. ಆತ ನನ್ನು ಆ ವೃತ್ತಿಯಿಂದ ಹಿಂತಿರುಗಿಸಿ ವಿರತಿಗೊಳಿಸುತ್ತಾಳೆ ಹೇಮರಡ್ಡಿ ಮಲ್ಲಮ್ಮ. ಈತನು ಮುಂದೆ ಅನೇಕ ಪದ್ಯಗಳನ್ನು ಬರೆದು 'ವೇಮಣ್ಣ' ನೆಂದು ಪ್ರಸಿದ್ಧಿಗೇರು ತ್ತಾನೆ. ರಾಜಯೋಗಿಯೆಂದು ಹೆಸರಾಗುತ್ತಾನೆ. ಈತನದು ಅಪಾರವಾದ ಸಾಹಿತ್ಯ ಸೇವೆ. ಮಳೆಹನಿಯಿಂದ ತೋಯದ ನೆಲವಿಲ್ಲ; ವೇಮನು ಹೇಳದೆ ಉಳಿದ ವಿಷಯವಿಲ್ಲ. ಈತನ ಪ್ರಪಂಚಾನುಭವ ಪರಮಾದ್ಭುತವಾದುದು. ಆಂಧ್ರ ಭಾಷೆಯಲ್ಲಿಯೇ ಅದ್ವಿತೀಯ ಸ್ಥಾನ ವೇಮಣ್ಣನಿಗೆ ಮೀಸಲಾಗಿದೆ. ಕನ್ನಡ ನಾಡಿನಲ್ಲಿ ಸರ್ವಜ್ಞ ಕವಿಗಿರುವ ಕೀರ್ತಿ ತೆಲುಗಿನಲ್ಲಿ ವೇಮಣ್ಣನಿಗೆ ಇದೆ. ಈತನ ಕಾಲ ೧೫ನೆಯ ಶತಮಾನದ ಕೊನೆ, ಹದಿನಾರನೆಯ ಶತಮಾನದ ಮೊದಲು. ಈತನ ಪದ್ಯಗಳನ್ನು ಪ್ರಸಿದ್ಧನಾದ ಜಗನ್ನಾಥ ಕವಿಯು ಸಂಸ್ಕೃತಕ್ಕೆ ಅನುವಾದಿಸಿದ್ದಾನೆ.

## ಹೇಮ – ವೇಮ

ಹೇಮ ಎಂಬ ಪದವು ತೆಲುಗಿನಲ್ಲಿ ವೇಮ ಎಂದಾಗುತ್ತದೆಯೆಂದು ವಿದ್ವಾಂಸರ ಅಭಿಪ್ರಾಯವಿದೆ. ವೇಮ ಪದವು ಹೆಚ್ಚು ಬಳಕೆಯಲ್ಲಿರುವುದು ತೆಲುಗಿನಲ್ಲಿ! ಇದ ರಿಂದಾಗಿ ಈ ಅಭಿಪ್ರಾಯ ಆವಿರ್ಭವಿಸಿರಬೇಕು. ವೇಮ, ವೇಮನ, ವೇಮಣ್ಣ,

ವೇಮನಾರಾಧ್ಯ ಎಂಬ ದಾಗಿ ಹೆಸರುಗಳು ಹೆಚ್ಚಾಗಿ ಬಳಕೆಯಲ್ಲಿವೆ. ೧೨ನೆಯ ಶತಮಾನದಲ್ಲಿ ಒಬ್ಬ ವೇಮನಾರಾಧ್ಯನಾಗಿದ್ದಾನೆ. ಆತನು ಆಚಾರ್ಯನೂ ವಚನ ಕಾರನೂ ಆಗಿದ್ದಾನೆ. ಶ್ರೀ ಜಗದ್ಗುರು ಪಂಡಿತಾರಾಧ್ಯ ಚರಿತ್ರೆಯಲ್ಲಿ ಒಬ್ಬ ವೇಮನಾರಾಧ್ಯನ ಹೆಸರು ಬರುತ್ತದೆ. ಆತನ ಹೆಸರು ಒಲಿದೇವ ವೇಮನಾರಾಧ್ಯ ಎಂದಿದೆ. ಆತನು ಹೆಸರುವಾಸಿಯಾಗಿದ್ದನು; ವಿದ್ವಾಂಸನಾಗಿದ್ದನು. ಹೇಮರೆಡ್ಡಿ ವಂಶದಲ್ಲಿ ವೇಮ ಹೆಸರಿನವರು ಹೆಚ್ಚಾಗಿದ್ದಾರೆ. ಅಲ್ಲದೆ ಆ ವಂಶದವರ ಹೆಸರಿನ ಮುಂದೆ ವೇಮ ಪದ ಬಂದೇ ಬರುತ್ತದೆ. ನಿದರ್ಶನಕ್ಕಾಗಿ ಪ್ರೋಲಯ ವೇಮಾರಡ್ಡಿ, ಅನಪ್ರೋತ ವೇಮನ, ಅನವೇಮನ ಇತ್ಯಾದಿ. ಇದು ಹಾಗೇ ಇರಲಿ; ಇವೆಲ್ಲ ಕಾರಣ ಗಳಿಗಿಂತ ಈ ಮುಂದಿನ ಕಥಾಂಶವೇ ಮೂಲ ಕಾರಣವೆಂದು ಹೇಳಬೇಕು.

## ವೇಮದಿಂದ ಹೇಮ:

ಆದಿಯುವನೂ ಆಚಾರ್ಯನೂ ಆದ ವೇಮನಾರಾಧ್ಯನು ಮಹಾ ಮಹಿಮನು. ಮಂತ್ರಸಿದ್ಧಿಯುಳ್ಳವನು. ಇದರಿಂದಾಗಿ ಪ್ರಸಿದ್ಧಿಗೇರಿದ್ದನು. ಹೀಗಿರಲು ಒಮ್ಮೆ ಪ್ರಯಾಣ ಮಾಡುತ್ತ ಪೋರಾಂಡಲವೆಂಬ ಪಟ್ಟಣಕ್ಕೆ ಬರುವನು. ಆ ಪಟ್ಟಣದ ಅರಸನು ಅದೇ ಸಮಯದಲ್ಲಿ ಮದುವೆಯಾಗಿ ತನ್ನ ಚಲುವೆಯಾದ ಹೆಂಡತಿಯೊಡನೆ ರಥಾರೂಢನಾಗಿ ರಸಿಕ ರಾಜನಾಗಿ ಸಂಭ್ರಮದಿಂದ ಬರುತ್ತಿದ್ದನು. ಆತನ ಹೆಸರು ಸಾರಂಗರಾಜನು. ಆತನು ಕಾಲ್ನಡಿಗೆಯಲ್ಲಿ ಕಾಂತಿಯುಕ್ತನಾಗಿ ಹೋಗುತ್ತಿದ್ದ ವೇಮನಾರಾಧ್ಯನ ಸಮಾಚಾರವನ್ನು ವಿಚಾರಿಸಿ ರಥದಿಂದಿಳಿಯದೆ ಅಲ್ಲಿಂದಲೇ ನಮ ಸ್ಕರಿಸುವನು. ಅದನ್ನು ವೇಮನಾರಾಧ್ಯನು ಲೆಕ್ಕಿಸದಿರುವನು. ಇದನರಿತು ಆ ರಾಜನು ರಥದಿಂದಿಳಿದು ಬಂದು ವಂದಿಸುವನು. ಅದಕ್ಕೆ ವೇಮನಾರಾಧ್ಯನು ಮರು ಮಾತಾಡದೆ ಸುಮ್ಮನಿರುವನು. ರಾಜನು ಮತ್ತೆ ಮತ್ತೆ ವಂದಿಸಿ ಪ್ರಾರ್ಥಿಸುವನು. ಏನಾದರೂ ವೇಮನಾರಾಧ್ಯನು ಮಾತೇ ಆಡದೆ ಹೋಗುವನು. ಆಗ ರಾಜನು ಬೇಸತ್ತು ಸಸುಮುನಿಸಿನಿಂದ – ಅದೆಷ್ಟು ಸಲ ನಮಿಸಿದರೂ ಹರಸದ ನಿನಗೆಷ್ಟು ಹೆಮ್ಮೆ? ನಿನಗೆಷ್ಟು ಗರ್ವ? ನೀನು ಹರಸದಿದ್ದರೆ ನನಗೇನು? ನೀನು ಕರುಣಿಸದಿದ್ದರೆ ನನಗೇನು ಮರಣ ಬರುವುದೆ? – ಎಂದಾಡುವನು. ಅದಕ್ಕೆ ಆ ವೇಮನಾರಾಧ್ಯನು: ದಿಟಕ್ಕು ನಿನಗೆ ನಾಳೆ ಹೊತ್ತುನೆತ್ತಿಗೇರುವಷ್ಟರಲ್ಲಿ ಸಾವು ಸಮನಿಸುವುದು ಎಂದು ಶಪಿಸುವನು. ಇದನ್ನು ಕೇಳಿ ಅರಸನು ಕೆರಳಿ ಓಹೋ ನೀನೊಬ್ಬ ಮಹಾ ಸನ್ಯಾಸಿ! ನಿನ್ನ ಶಾಪಕ್ಕೇನಿದೆ ಆ ಶಕ್ತಿ? ಇಂತಹ ಮಾತನ್ನು ನಂಬುವರಾರು? ಎಂದು ಉದಾ ಸೀನದಿಂದ ಉಪಹಾಸ್ಯ ಮಾಡಿ ರಥಾರೂಢನಾಗಿ ರಾಜಮಂದಿರಕ್ಕೆ ಹೋಗುವನು.

ದಿನ ರಾತ್ರಿ ತನ್ನ ನವಪತ್ನಿಯೊಡನೆ ಮಲಗುವನು. ಬೆಳಗಿನ ಜಾವಕ್ಕೆ ಹಾವು ಕಚ್ಚಿ ಹೋಗುವುದು. ಆತನು. ಬೆಳಗಾಗುವುದು. ಏನೇನೋ ಔಷಧೋಪಚಾರ. ವಾಯಿತಾದರೂ ಉಪಯೋಗವಾಗಲಿಲ್ಲ. ರಾಜನು ಮರಣಿಸುವನು. ರಾಣಿಗೆ



ಲಿಂ|| ಶ್ರೀ ಗುರು ಹಾಲುಸ್ವಾಮಿಗಳು ಸಖರಾಯಪಟ್ಟಣ



ಶ್ರೀ ಬಸವಲಿಂಗಶಿವಾಚಾರ್ಯರು ಹುಣಸಘಟ್ಟೆ



ಬೆಳಗಿನೊಂದಿಗೆ ಬೆಳಗು !



ಲಿಂ॥ ಪ್ರಭುಕುಮಾರ ಪಟ್ಟಾಧ್ಯಕ್ಷರ ಗದ್ದುಗೆ ಗಿರಿಯಾಪುರ



ಶ್ರೀ ಹೇಮರೆಡ್ಡಿ ಮಲ್ಲಿಕಾಂಬಾ ದೇವಾಲಯ ಗಿರಿಯಾಪುರ



ಸಮಿತಿಯ ಮಹಾ ಪೋಷಕರೂ ಗ್ರಂಥ ಪ್ರಕಟಣಾ ಶಾಖೆಯ ಅಧ್ಯಕ್ಷರೂ ಆದ
ಶ್ರೀ ಸೂರ್ಯಸಿಂಹಾಸನಾಧೀಶ್ವರ ಜ. ಚ. ನಿ. ಸನ್ನಿಧಿ.

ವ್ಯಥೆಯಾಗುವುದು. ರಾಜಮನೆತನದವರೂ ಪ್ರಜರೂ ದುಃಖಿಸುವರು. ಆಗ ರಾಣಿಯು ಹಿಂದಿನ ದಿನ ನಡೆದ ಕಥೆಯನ್ನು ತಿಳಿಸುವಳು. ಆಗ ವೇಮನಾರಾಧ್ಯರಿರುವ ಸ್ಥಳವನ್ನು ಗೊತ್ತುಹಚ್ಚಿ ಅಲ್ಲಿಗೆ ಮೃತನಾದ ವೇಮನಾರಾಧ್ಯನನ್ನು ಹೊತ್ತೊಯ್ದು ಪರಿಪರಿಯಾಗಿ ಆತನನ್ನು ಮರೆಹೊಕ್ಕು ಬೇಡಿಕೊಳ್ಳುವರು. ಅದಕ್ಕೆ ಆತನ ಅಂತಃಕರಣ ಕರಗಿ ತನ್ನ ಮಂತ್ರೋದಕವ ಪ್ರೋಕ್ಷಿಸಿ ಸತ್ತ ರಾಜನನ್ನು ಬದುಕಿಸುವನು. ಪ್ರಾಣಬಂದ ಆ ಸಾರಂಗರಾಜನು ಎದುರಿಗಿದ್ದ ವೇಮನನ್ನು ನೋಡಿ ನಿನ್ನಿನವೆಲ್ಲ ನೆನಪಾಗಿ ತುಂಬಾ ಸಂತೋಷಿಸಿ ನೀನು ವೇಮನಲ್ಲ ನನಗೆ ಹೇಮ. (ಬಂಗಾರ) ನನಗೆ ಪ್ರಾಣದಾತ ಎಂದು ಮುಂತಾಗಿ ಹೊಗಳಿ ಹೊನ್ನರಾಶಿಯನ್ನೇ ಕಾಣಿಕೆಯಾಗಿ ಸಲ್ಲಿಸುವನು. ಇದರಿಂದ ಅಂದಿನಿಂದ ಆ ವೇಮನನ್ನು ಹೇಮನೆಂದು ಹೇಳುವ ವಾಡಿಕೆ. ಆ ವಂಶಕ್ಕೆ ಹೇಮ ವಂಶವೆಂದು ಹೆಸರು ಬಂದಿರಬೇಕು. ವೇಮ–ಹೇಮವಾದ ಕಾರಣವಿದಿರಬೇಕೆಂಬುದು ವಾಸ್ತವವಲ್ಲವೆ?

ಅಂತಹ ಮಹಿಮನಾದ ಆ ಆದಿ ವೇಮನಾರಾಧ್ಯನ ಹೆಸರನ್ನು ಹೊತ್ತು ೧೫ನೆಯ ಶತಮಾನದ ಹೇಮರಡ್ಡಿ ಮಲ್ಲಮ್ಮನ ಭಾವಮೈದ ವೇಮನನೂ ಸಹ ತನ್ನ ದುರ್ನಡತೆಯ ಬಿಟ್ಟ ಬಳಿಕ ಪೂರ್ಣ ಪ್ರಭಾವಶಾಲಿಯಾಗಿ ಹೇಮದಂತಹ ಪದಗಳ ಹಾಡಿ ತನ್ನ ಜನ್ಮ ಸಾರ್ಥಕಪಡಿಸಿಕೊಂಡಿದಾನೆ. ಅಮರಕೀರ್ತಿಶಾಲಿಯಾಗಿದಾನೆ.

## ಬಡಗನಾಡು ವೀರಶೈವರು :

ಈ ಹೇಮರಡ್ಡಿ ವಂಶಜರಿಗೆ ಬಡಗನಾಡವರೆಂದು ಮತ್ತೊಂದು ಹೆಸರಿದೆ. ಇದು ಬರಲು ಇವರೆಲ್ಲ ಶ್ರೀಗಿರಿಯ ಪ್ರಾಂತದಿಂದ ಈ ಭಾಗಕ್ಕೆ ಬಂದುದೇ ಈ ಹೆಸರಿಗೆ ಕಾರಣ. ಇದು ಇತ್ತೀಚಿನ ಕಾರಣ.

ಈಗ ಆಂಧ್ರ ರಾಜ್ಯದಲ್ಲಿರುವ ಕರ್ನೂಲು ಜಿಲ್ಲೆಯಲ್ಲಿ ಶ್ರೀಶೈಲವಿದೆ. ಇದು ನಲ್ಲಮಲಯದ ಅಡವಿಯ ನಡುವಿದೆ. ಮುಗಿಲು ಮುಟ್ಟುವ ಗಿರಿ ಶಿಖರಗಳು. ಮನೋಹರವಾದ ವನ್ಯಸಂಪತ್ತು, ಮಂಗಲಕರವಾದ ಮಹಾನದಿ – ನಿರ್ಝರಗಳು, ಮನಸ್ಸನ್ನು ನಿಲ್ಲಿಸಿದ ತಪಸ್ವಿಗಳಿರುವ ಗಿರಿ ಶ್ರೀಶೈಲ. ಜಗದ್ಗುರು ಪಂಡಿತಾರಾಧ್ಯರ ಮೂಲನಿವಾಸ ಶ್ರೀಗಿರಿ. ವೀರಶೈವ ಸಂಸ್ಕೃತಿಯ ಕೇಂದ್ರ ಶ್ರೀಗಿರಿ. ಹನ್ನೆರಡು ಜ್ಯೋತಿರ್ಲಿಂಗಗಳಲ್ಲಿ ಒಂದಾದ ಮಲ್ಲಿಕಾರ್ಜುನನ ಮಂದಿರ ಶ್ರೀಗಿರಿ. ದಕ್ಷಿಣ ಭಾರತದಲ್ಲಿ ಶ್ರೀಶೈಲವನ್ನು ಮೀರಿಸುವ ಪುಣ್ಯ ಕ್ಷೇತ್ರ ಬೇರೊಂದಿಲ್ಲ. 'ಶ್ರೀಶೈಲ ಶಿಖರಂ ದೃಷ್ಟ್ವಾ ಪುನರ್ಜನ್ಮ ನ ವಿದ್ಯತೇ' ಎಂಬುದು ಇದರ ಪಾವಿತ್ರ್ಯ— ಪ್ರಸಿದ್ಧಿ ಸೂಚಕ ಪದ್ಯವಾಗಿದೆ. ಇದು ಪುರಾತನ ಕ್ಷೇತ್ರ. ಸುಮಾರು ಮೂರು ಸಾವಿರ ವರುಷಗಳಷ್ಟು ಪುರಾತನವೆನಿಸಿದೆ. ಶಾಸನೇತಿಹಾಸ ಪ್ರಸಿದ್ಧವಾಗಿದೆ. ಅನೇಕ ಸಂತರು, ಶಿವಾಚಾರ್ಯರು, ಶಿವಶರಣರು ಇಲ್ಲಿದ್ದು ಆತ್ಮೋಪಾಸಕರಾಗಿದ್ದಂತೆ ಅನೇಕ ರಾಜಮನೆತನಗಳೂ ಸಹ ಈ ಕ್ಷೇತ್ರೋಪಾಸಕರಾಗಿದ್ದಾರೆ. ಇವುಗಳಲ್ಲಿ ೧೪ನೆಯ

ಶತಮಾನದ ಆಂಧ್ರ ಪ್ರಾಂತ ಪರಿಪಾಲಕರಾದ ರಡ್ಡಿ ವಂಶವೂ ಒಂದು. ಇವರಿಂದ ವೀರಶೈವ ಕ್ರಾಂತಿ ಜರಗಿದೆ.

"ಕುಲ್ಯಪಾಕ, ಪೊಟ್ಟಲಕೆರೆ ಮತ್ತು ಶ್ರೀಶೈಲ ಈ ಸ್ಥಾನಗಳಲ್ಲಿ ವೀರಶೈವ ಧರ್ಮವು ಮೊದಲು ಪ್ರಸಾರ ಹೊಂದಿರಬೇಕೆಂಬ ಅನುಮಾನವು ಶಿವಶರಣರ ಚರಿತ್ರೆಗಳಿಂದ ತೋರಿಬರುತ್ತದೆ. ಶ್ರೀಶೈಲ ಪ್ರಾಂತವೇ ಶೈವಧರ್ಮದ ಉಗಮ ಸ್ಥಾನವೆಂದು ಹೇಳಬಹುದು. ಶ್ರೀಶೈಲವು ಒಂದು ಕಾಲದಲ್ಲಿ ನಿಬಿಡ ವಸತಿಯುಳ್ಳ ಪಟ್ಟಣವಾಗಿತ್ತು. ಆದರೆ ಮುಂದೆ ಜನರು ಇಲ್ಲಿ ಇರಲಿಕ್ಕೆ ಶಕ್ಯವಾಗದ್ದರಿಂದ ಇಲ್ಲಿಯ ಜನರ ದಟ್ಟವಸತಿಯು ಕಡಿಮೆಯಾಗುತ್ತ ಹೋಗಿ ಮುಂದೆ ಅದು ನಿರ್ಜನ ಪ್ರದೇಶವಾಯಿತು.

—ಶಿವಾನುಭವ ೧೯೫೪ ಮೇ

ಮೇಲೆ ಬರೆದ ನಮ್ಮ ಮಾತನ್ನು ಶ್ರೀ ರಾ. ಸಾ. ಪಿ ಜಿ. ಹಳಕಟ್ಟಿಯವರ ಈ ಮಾತು ಪರಿಪೋಷಿಸುತ್ತದೆ.

೧೧-೧೨-೧೩-೧೪ ಈ ನಾಲ್ಕು ಶತಮಾನಗಳಲ್ಲಿ ಕನ್ನಡ ನಾಡಿನಲ್ಲಿ ಮಹತ್ವದ ವೀರಶೈವ ರಾಜವಂಶಗಳು ತಲೆಯೆತ್ತಿದವು. ಇವುಗಳಲ್ಲಿ ರಡ್ಡಿ ವಂಶದವರು ಸೇರುತ್ತಾರೆ. ಇವರು ಕಾಕತೀಯ ವಂಶದ ರಾಜರಾದ ಬಳಿಕ ರಾಜರಾದರು. ಸಾಂತರು, ನೊಳಂಬರು, ಪಲ್ಲವರು, ಯಾದವರಂತೆ ರಡ್ಡಿ ರಾಜರು ಕ್ಷಾತ್ರಧರ್ಮ ಪರಿಪಾಲಕರಾಗಿದ್ದರು. ಇವರು ಶ್ರೀಶೈಲ ಪರಿಸರ ಪ್ರಾಂತದಲ್ಲಿ ಆಳಿದರು. ಸುಮಾರು ೧೪ನೆಯ ಶತಮಾನದಲ್ಲಿ ಇವರು ನಾಡೊಡೆಯರಾಗಿದ್ದರು. 'ಅದ್ದಂಕಿ' 'ಕೊಂಡವೀಡು ನಗರಗಳೆರಡು ಇವರ ರಾಜಧಾನಿಗಳಾಗಿದ್ದವೆಂದು ತಿಳಿಯುತ್ತದೆ. ೧೪ ನೆಯ ಶತಮಾನ ಪೂರ್ತಿ ಆಂಧ್ರ ರಾಜ್ಯವನ್ನು ಆಳಿದ ಕೀರ್ತಿ ಇವರದಾಗಿದೆ.

ರಡ್ಡಿ ವಂಶದ ಹಿರಿಯನಾದ ಪೋಲಯ ವೇಮಾರಡ್ಡಿಯು, ಕ್ರಿ. ಶ. ೧೩೨೪ ರಲ್ಲಿ ಸ್ವತಂತ್ರ ರಾಜನಾಗಿ ವಹಿಸಿಕೊಂಡ ರಾಜ್ಯಭಾರವನ್ನು ಮಾಡಿದನು. ಈತನು ಇದಕ್ಕೆ ಮೊದಲು ಕಾಕತೀಯ ಪ್ರತಾಪರುದ್ರರಾಜನಲ್ಲಿ ಸೇನಾಪತಿಯಾಗಿದ್ದನು. ಈತನು ಸ್ವತಂತ್ರ ರಾಜನಾದ ಮೇಲೆ ೧೭ ವರುಷ ರಾಜ್ಯಪರಿಪಾಲನ ಮಾಡುವನು. ಅಂದರೆ ೧೩೪೧ರವರೆಗೆ ಆಳುವನು. ಈತನು ಶೂರನಾಗಿದ್ದನು. ತೇಜಸ್ವಿಯಾಗಿದ್ದನು. ಇದರಿಂದಾಗಿ ಈತನಿಗೆ 'ಪಲ್ಲವಾದಿತ್ಯ' 'ಪಲ್ಲವತ್ರಿನೇತ್ರ' ಎಂದು ಪ್ರಶಸ್ತಿಗಳಿದ್ದವೆಂದು ಚರಿತ್ರಕಾರರು ಹೇಳುತ್ತಾರೆ.

ಪೋಲಯ ವೇಮಾರಡ್ಡಿಯ ಪ್ರಥಮ ಪುತ್ರ ದೇಸಟಿವೇಮಾರಡ್ಡಿಯು ಕ್ರಿ. ಶ. ೧೩೫೦ರ ವರೆಗೆ ರಾಜ್ಯಭಾರ ಮಾಡುವನು. ಈತನು ಸ್ವಾಭಿಮಾನಿ; ಸಾಮರ್ಥ್ಯಶಾಲಿ. ಅಂತೆಯೇ ಅಂದಿನ ಮುಸಲ್ಮಾನೀಯ ರಾಜರನ್ನು ಸೋಲಿಸಿ ಓಡಿಸುವನು. ಬಹುಭಾಗದ ಭೂಮಿಯನ್ನು ಆಕ್ರಮಿಸುವನು. ತನ್ನವರನ್ನು ತನ್ನ ಬಂಧು

ಬಳಗವನ್ನು ತನ್ನ ಪ್ರಜರನ್ನು ಚೆನ್ನಾಗಿ ಪೋಷಿಸುವನು. 'ಅನ್ವಯೈಕ ಪಾವನ' ಎಂಬ ಬಿರುವನ್ನು ಪಡೆದಿದ್ದನು. ಈತನು ಶ್ರೀ ಶೈಲದಲ್ಲಿ ಒಂದು ಮಂಟಪವನ್ನು ಕಟ್ಟಿಸಿದನೆಂದು ಕಂಡು ಬರುತ್ತದೆ. ಈತನ ಮಗ ಅನಪೋತರಡ್ಡಿ ಕ್ರಿ. ಶ. ೧೩೫೨ರ ವರೆಗೆ ರಾಜ್ಯಪರಿಪಾಲಿಸುವನು. ಇವನು 'ವೈರಿವೀರ ಭಂಜನ' ಎಂದು ಹೆಸರಾಂತು ಮೆರೆದನು. ಈತನು ಕಾಳಗದಲ್ಲಿ ಕಲಿ. ಈತನಿಗೆ ಕುಮಾರಗಿರಿರೆಡ್ಡಿ ಎಂಬ ಮಗನು, ಮಲ್ಲಾಂಬೆ ಎಂಬ ಮಗಳು ಇದ್ದರು. ಕುಮಾರಗಿರಿರಡ್ಡಿಯು ಪರ್ವತದ ಪಾತಾಳ ಗಂಗೆಗೆ ಮೆಟ್ಟಲುಗಳನ್ನು ಕಟ್ಟಿಸಿ ಚಿರಕೀರ್ತಿಕಾಯನಾದ. "ಶ್ರೀ ಶೈಲ ಗಂಗಾ ತಟಸೀಮ ರಮ್ಯಾಂ । ಸೋಪಾನವೀಥೀಂ ವಿವಿಧೇಮ ವೇಮ"—ಶಾಸನ. ತನ್ನ ಚಿಕ್ಕಪ್ಪನಾದ ಅನವೇಮರಡ್ಡಿಯ ರಾಜ್ಯಭಾರವಾದ ಬಳಿಕ ಅಂದರೆ ಕ್ರಿ. ಶ. ೧೩೮೦ರ ನಂತರ ರಾಜನಾಗುವನು. ಆದರೇನು? ಈತನು ವೀರನಾಗಿರಲಿಲ್ಲ. ಇದರಿಂದಾಗಿ ರಾಜ್ಯವನ್ನು ಕಳೆದುಕೊಳ್ಳುವನು. ಶ್ರೀ ಶೈಲದ ಬಳಿಯಿರುವ ಸಿದ್ಧಾಪುರ ಗ್ರಾಮಕ್ಕೆ ಬಂದು ನೆಲಸುವನು. ಈ ಕುಮಾರಗಿರಿರಡ್ಡಿಯೇ ಹೇಮರಡ್ಡಿಯೆಂದು ಹೆಸರಾಗಿದಾನೆ. ಇವನೇ ಈ ಚರಿತ್ರ ನಾಯಕನು, ಇವನ ಸೊಸೆಯೆ ಹೇಮರಡ್ಡಿ ಮಲ್ಲಮ್ಮನು.

ಆ ಬಳಿಕ ಪೆದಕೋಮಟಿ ವೇಮಭೂಪಾಲನು ಕ್ರಿ. ಶ. ೧೪೨೦ರ ವರೆಗೆ ವೀರ ನಾಗಿ ವಿದ್ಯಾಭಿಮಾನಿಯಾಗಿ ರಾಜ್ಯವಾಳುವನು. ಈತನದು ಶ್ರೀನಾಥನ ಕಾಲ. ಇವನಲ್ಲಿ ಶ್ರೀನಾಥ ಕವಿಗೆ ಆಶ್ರಯ ದೊರೆಯಿತು. ಪೆದಕೋಮಟಿ ವೇಮ ನೃಪನು ಕವಿಕಲ್ಪ ತರುವೆಂದೆನಿಸಿ ಕೀರ್ತಿಗಳಿಸಿದನು. ಆಮೇಲೆ ಈತನ ಮಗ ರಾಚವೇಮ ರಡ್ಡಿಯು ರಾಜನಾಗುವನು. ಈತನು ಸಮರ್ಥನಾಗದೆ ರಾಜ್ಯವನ್ನು ಪ್ರಾಣವನ್ನು ಕಳೆದುಕೊಳ್ಳುವನು. ರಾಜ್ಯವು ವಿಜಯನಗರ ಸಾಮ್ರಾಜ್ಯದಲ್ಲಿ ವಿಲೀನವಾಗುವುದು. ಹೀಗಾಗಿ ಈ ರಡ್ಡಿ ಜನರು ನಿರಾಶ್ರಿತರಾಗಿ ಶ್ರೀ ಶೈಲದ ಆ ಭಾಗದಿಂದ ಚದರಿ ನಾಡಿನ ನಾನಾ ಭಾಗಗಳಿಗೆ ಹೊರಟು ಹೋಗುವರು. ಹೀಗೆ ವಲಸೆ ಹೋದವರಲ್ಲಿ ಅನೇಕರು ಮೈಸೂರು ಪ್ರಾಂತದಲ್ಲಿರುವ ಚಿಕ್ಕಮಗಳೂರು ಜಿಲ್ಲೆಯ ಕಡೂರು-ತರೀಕೆರೆ ತಾಲ್ಲೂಕುಗಳಲ್ಲಿರುವ ಗಿರಿಯಾಪುರ, ಬಾಸೂರು, ಹೀರೇನೆಲ್ಲೂರು, ಚೆನ್ನಾಪುರ, ಬಗ್ಗವಳ್ಳಿ, ಗೊಂಡೇದಹಳ್ಳಿ, ಗೌರಾಪುರ, ಹೆಬ್ಬೂರು, ನಾರಣಪುರ-ಈ ಒಂಬತ್ತು ಗ್ರಾಮಗಳಲ್ಲಿ ನೆಲೆ ನಿಂತರು. ಇವರುಗಳಿಗೆ ಈಗ ಈ ಕಾರಣದಿಂದ ಅಂದರೆ ಉತ್ತರ ದಿಂದ ಬಂದುದರಿಂದ ಬಡಗನಾಡ ವೀರಶೈವರೆಂದು ಹೇಳುವರು.

## ಬಡಗಣ ಗೋತ್ರ

ಬಡಗಣ ಎಂಬುದಾಗಿ ಒಂದು ಗೋತ್ರವನ್ನು ಹೇಳುತ್ತಾರೆ. ಇದು ಅಗಸ್ತ್ಯ ಗೋತ್ರವೆಂದು ಪ್ರಸಿದ್ಧವಾಗಿದೆ. ಅಗಸ್ತ್ಯನು ಶ್ರೀ ಜ. ರೇಣುಕರ ಪರಮಶಿಷ್ಯನು. ಷಟ್‌ಸ್ಥಲ ಸಿದ್ಧಾಂತೋಪದೇಶವನ್ನು ಪಡೆದವನು. ಅವರ ವಂಶಪರಂಪರೆಯವರಿಗೆ

ಬಡಗದವರೆಂದು ಹೇಳಬಹುದೇನೊ ಎನಿಸುತ್ತದೆ. ಆದರಿದು ಇನ್ನೂ ಸಂಶೋಧನೀಯ ಸಂಗತಿ!

ಸ್ಥಲದವರು ಪಂಚಮರು ಬಣಜಿಗರು ಎಂಬ ಬಗೆಗಳು ವೀರಶೈವರಲ್ಲಿ ಇರುವಂತೆ ಬಡಗನಾಡವರು, ಬಳ್ಳಾರಿಯವರು, ತುರುಕಾರಣ್ಯದವರು ಎಂಬ ದೇಶಿಯ ನಾಮವುಳ್ಳ ವೀರಶೈವರುಂಟು. ಗೌಡ, ಸಾದರ, ಶೀಲವಂತ ಮುಂತಾದ ವರ್ತನ (ಕಸಬಿನ) ಮೇಲೆ ಬಂದ ಹೆಸರುಳ್ಳವರಿರುವರು. ಹೀಗೆಯೆ ಕೆಲವು ಗುಣನಾಮವುಳ್ಳವರುಂಟು. ಅಂಕಿತ ಅನ್ವರ್ಥಕ ನಾಮಗಳುಂಟು ಎಂಬುದಾಗಿ ವೀರಶೈವಾನ್ವಯ ಚಂದ್ರಿಕೆಯಲ್ಲಿ ಉಕ್ತವಾಗಿದೆ. ಈ ಪಟ್ಟಿಯಲ್ಲಿ ಬಡಗನಾಡವರು ಎಂಬುದಾಗಿ ಬಂದುದು ಗಮನಾರ್ಹವಾದುದು. ಅಲ್ಲದೆ ಬಡಗನಾಡ ವೀರಶೈವರೆಂಬುದು ದೇಶ ಸಂಬಂಧದಿಂದ ಬಂದ ಹೆಸರೆಂಬುದು ಸ್ಪಷ್ಟವಾಗುವುದು. ಉತ್ತರದಿಂದ ಬಂದವರು ಔತ್ತರೇಯರು ಅಥವಾ ಬಡಗನಾಡವರು ಎಂದು ಹೇಳುವುದು ಸಹಜ, ಸೂಕ್ತ. ಇದನನುಸರಿಸಿ ಈ ಹೆಸರು ಈ ಹೇಮರೆಡ್ಡಿ ವಂಶದವರಿಗೆ ಬಂದಿದೆಯೆಂದೆ ಹೇಳಬೇಕು. ಇವರು ಉತ್ತರಕ್ಕಿರುವ ಶ್ರೀ ಶೈಲಪ್ರಾಂತದಿಂದಲೂ ವಿಜಾಪುರ ಪ್ರಾಂತದಿಂದಲೂ ಬಂದವರು ನಿಂದವರು; ಈ ಅರ್ಥವನ್ನು ಈ ಇತಿಹಾಸವನ್ನು ಸೂಚಿಸುತ್ತದೆ ಈ ಹೆಸರು.

"......... ವೀರಶೈವರಲ್ಲಿ ಬಡಗಲವರು, ಬಳ್ಳಾರಿಯವರು, ಸ್ಥಳದವರು, ಆರಾಧ್ಯರು, ಶೀಲವಂತರು, ಅತನಿಯವರು, ಪಂಚಮಶಾಲಿಯವರು, ಧೂಳ ಪಾವಡದವರು, ಪಂಚಾಚಾರದವರು, ವಸ್ತ್ರದವರು ಇನ್ನೂ ಕೆಲವರು ಇರುವರು."

— ಕ್ರಿ.ಶ. ೧೯೦೧ರ ಮೈಸೂರು ಸೆನ್ಸಸ್ (೧೬)

ಇವುಗಳಿಂದ ಬಡಗಲವರು ಬಡಗನಾಡವರು ಎಂಬ ಪದಗಳು ಪ್ರಸಿದ್ಧವಾಗಿರುವುದಾಗಿ ಚೆನ್ನಾಗಿ ತಿಳಿದು ಬರುತ್ತದೆ.

—ಸೂರ್ಯಸಿಂಹಾಸನಾಧೀಶ್ವರ **ಶ್ರೀ ಜ. ಚ. ನಿ.**

——::——

# ವಿಭೂತಿ ಪುರುಷ !



ಸತ್ಯವ ಪರಿಪಾಲಿಸಿ ಮಿಥ್ಯವ ಪರಿತ್ಯಜಿಸಿ
ನಿತ್ಯ ಶೀಲವನು ಬಿನದದಲಿ ಬಿಡದಾಚರಿಸಿ
ಕರಣಗಳ ನಿಗ್ರಹಿಸಿ ಹರಣಗಳ ಹದಗೊಳಿಸಿ
ಸರಳತನ ಸದ್ಭಾವ ಸದ್ವೃತ್ತಿಗಳ ಬೆಳಸಿ
ಶಿವಪೂಜೆಯಲಿ ಸತತ ತನುಕರಣ ಮನವಿರಿಸಿ
ಕೈವಲ್ಯೋಪನಿಷತ್ ಭಾಷ್ಯವನು ವಿರಚಿಸಿ
ದೃಪ್ತತೆಯ ದೂರಿರಿಸಿ ತೃಪ್ತತೆಯೊಳು ಬೆರಸಿ
ಕ್ಲುಪ್ತತೆಯನಾದರಿಸಿ ಸುಷುಪ್ತಿಸುಖವ ಗಳಿಸಿ
ಶತ್ರುಮಿತ್ರರೆಲ್ಲರ ಸಂತತಂ ಸಮಗೊಳಿಸಿ
ಸ್ವಾತ್ಮಸುಖವನುಭವಿಸಿ ವಿಷಯಸುಖ ವರ್ಜಿಸಿ
'**ವಿಭೂತಿಪುರುಷ**'ನೆನಿಸಿ ಸದಾಚಾರಂಗಳಿಂ
ತ್ರಿಭುವನದೆ ಮೆರೆಯುತಿಹ ಓ ಸದಾಶಿವ ಗುರುವೆ,
ಅರವತ್ತು ಬರಿಸಗಳು ತುಂಬಿಹವು ನಿನಗಿಂದು
ನಿಡುಗಾಲ ಬೆಳಗೆಂದು ಬೇಡುವೆವು ಮನದಂದು

—ಸೂರ್ಯಸಿಂಹಾಸನಾಧೀಶ್ವರ **ಶ್ರೀ ಜ. ಚ. ನಿ.**

# ಹರಿಯುತಿದೆ ಹಿರಿ ಹೊನಲು.



ಇದೊ ನೋಡು ಶ್ರೀಗಿರಿಯ ಪುರದ ಬಳಿ ಮುಮ್ಮಿಗಿಲು,
ಸದಮುಳದೆ ಹರಿಯುತಿದೆ ಶೀಲದಾ ಹಿರಿಹೊನಲು.

ಹಿರಿಗನ್ನಡ ನಾಡನು ನೆರೆ ಪಾವನಗೊಳಿಸಲು
ಸಿರಿಗನ್ನಡಿಗರ ಸಕಲ ಹೃದಯಗಳ ತೊಳೆಯಲು ;

ನಾಡಿಗರ ಸಾರತರ ಜೀವನಾವನಿಯೊಳು
ನೋಡಿ ನಲಿವ ಚಲುವ ಹೂಬಳ್ಳಿಗಳ ಹಬ್ಬಿಸುತ !

ಫಲವೃಕ್ಷ ರಾಜಿಗಳ ಭರದಿಂದ ಬೆಳಸುತ್ತ,
ಬಲರಹಿತ ಜನತೆಯೊಡಲಾಸೆಯನು ತುಂಬುತ್ತ ;

ತನ್ನೀ ಪ್ರವಾಹಯೋಗದಿಂದನುಯೋಗದಿಂ
ಚಿನ್ಮಯದ ವಿದ್ಯುತ್ಪ್ರಭೆಯ ನಾಡೊಳಗೆ ಚೆಲ್ಲಿ

ಕನ್ನಡದ ಮೈಮಣ್ಣ ಹೊನ್ನನಾಗಿಸುತ್ತ
ಕನ್ನಡದ ಜೀವರನು ತಾ ದೇವರೆನಿಸುತ್ತ ;

ಸದಾಶಿವನೆಂಬ ಸಲುವ ಹೆಸರನು ತಾ ತೊಟ್ಟು
ಸದಾ ಮಂಗಲ ತರಂಗದಿಂ ಚಲುವಳವಟ್ಟು

ಇದೊ ನೋಡು ಶ್ರೀ ಗಿರಿಯ ಪುರದ ಬಳಿ ಮುಮ್ಮಿಗಿಲು
ಸದಮುಳದೆ ಹರಿಯುತಿದೆ ಶೀಲದಾ ಹಿರಿ ಹೊನಲು.

**—ಶ್ರೀ ಜ. ಚ. ನಿ.**

———:·:———

# ಗಿರಿಯಾಪುರ ಗೀತೆ.



ಮೈಸೂರು ನಾಡೊಳಗೆ ಹೆಸರಾಗಿ ಹೆಚ್ಚಾಗಿ
ಭಾಸಿಸುವ ಗಿರಿಯಾಪುರವನೊರೆವೆ ಮೆಚ್ಚಾಗಿ !

ಚಿಕ್ಕಮಗಳೂರು ಜಿಲ್ಲೆಯೊಳು ಕೇಳ್ತಾನಿಹುದು ;
ಚುಕ್ಕೆಯಂದದಿ ಮಿಂಚಿ ಮಿರ್ರನೆ ಮಿರುಗುತಿಹುದು.
ಅಜ್ಜಂಪುರ ನಗರದ ನಿಲ್ದಾಣ ಬಳಿಯಲಿ
ಸಜ್ಜನರ ನೆರವಿಂದ ಸಜ್ಜಾಗಿ ತಾನಿಹುದು.
ದ್ವಿತೀಯ ಶ್ರೀಗಿರಿಯ ಹೋಲುತಲಿ ಹಿರಿಮೆಯಿಂ
ಖ್ಯಾತಿಯಿಂ ಜೋತಿಯಿಂ ತಾನಿಹುದು ನೈಮೆಯಿಂ

ಊರು ತಾನದು ಚಿಕ್ಕದಾದೊಡೇಂ ನೋಳ್ಪೊಡೆ
ಚಾರುತರ ಮಹಿಮೆಯದು ಚಿಕ್ಕದಲ್ಲ ಕೇಳ್ವೊಡೆ
ನೂರು ಮನೆಗಳುಳ್ಳಾ ಹಳ್ಳಿಯೊಳು ಹುಡುಕಿದೊಡೆ
ಗಾರುಗೊಳಿಪ ಗರ್ವಿಗಳಿಲ್ಲ, ಭವಿಗಳಿಲ್ಲ.
ಹಸನುಳ್ಳ ಹಾದಿಗಳು ಹೆಂಚುಳ್ಳ ಮನೆಗಳು
ಹಸರುಳ್ಳ ತೋಟಗಳು ಮೆರೆದಿಹವು ಗ್ರಾಮದೊಳು.

ಹುಲುಸಾಗಿ ಬೆಳೆದಿರ್ಪ ಹುಣಸೆಯ ಮರಗಳು
ಚೆಲುವಾದ ತೆಂಗಿನಾತೋಪುಗಳು ಸುತ್ತಲು.
ಮೇಲುಪ್ಪರಿಗೆಗಳನು ಕಟ್ಟಿದ್ದ ಮನೆಗಳಾ–
ಸಾಲು ಸಾಲುಗಿಯೊಪ್ಪಿಹವು ಗಿರಿಯ ಪುರದೊಳಗೆ.

ಶ್ರೀ ಗಿರಿಯಪುರದ ಮೂಡಲಕೆ ಮೆರೆವ ನಿಸ್ಸೀಮ–
ಶ್ರೀಗುರು ಕುಮಾರಾಶ್ರಮ – ಪ್ರಶಾಂತಧಾಮ
ಏನೆಂಬೆನದರ ಪ್ರಖ್ಯಾತಿಯಂ ಜೋತಿಯಂ ;
ಏನೆಂಬೆನದರ ವಿಭೂತಿಯಂ ರೀತಿಯಂ !
ಅಲ್ಲಿಹುದು ಮರುಳ ಸಿದ್ಧೇಶ್ವರನ ಸಾನ್ನಿಧ್ಯ.
ಅಲ್ಲಿಹರು ಸದಾಶಿವ ಶಿವಾಚಾರ್ಯವರ್ಯ.

ಶ್ರೀ ಸದಾಶಿವ ಶಿವಾಚಾರ್ಯ ಗುರುವರ್ಯರಾ-
ಭಾಸವನು ಬಣ್ಣಿಸಲು ಭಾಷೆಯ ಸಿರಿಯಿಲ್ಲ.
ಶೀಲಸಂಪನ್ನರು, ಶಿವಪೂಜಾಲೋಲರು ;
ಮೇಲಾದ ಶಿವಯೋಗ ಸಾಹಿತ್ಯಪಾಲರು.
ಕೈವಲ್ಯೋಪನಿಷದ್ಭಾಷ್ಯವನು ಬರೆದಿಹರು ;
ಶಿವಾದ್ವೈತ ತತ್ತ್ವಪ್ರಚಾರ ಸಮಿತ್ಯಧಿಪರು.
ಸತ್ಯ ಶಮ ದಮ ಶಾಂತ್ಯುಪರತಿ ಸಂಯುಕ್ತರು,
ನಿತ್ಯನೇಮ ಸ್ತುತ್ಯನಾಮಯುತ ಮುಕ್ತರು.

ಗಿರಿಯಾಪುರದ ಪಡುವಲಕೆ ಸಿನೆ ಸನಿಹದಲಿ
ಮೆರೆಯುತಿಹುದು ಪ್ರಾಥಮಿಕ ಶಿಕ್ಷಣಾಲಯವು.
ಊರ ಬಳಿಯಲಿ ಹೇಮರೆಡ್ಡಿ ಮಲ್ಲಾಂಬೆಯ
ಚಾರುದೇಗುಲವಿಹುದು ಗ್ರಾಮಕ್ಕೆ ಚೆಲುವಾಗಿ !
ದೇಗುಲದ ಪಕ್ಕದೊಳು ಶ್ರೀ ಪ್ರಭುಕುಮಾರ
ಯೋಗಿರಾಜರ ಗದ್ದುಗೆಯು ಶೋಭಿಸಿಪ್ಪುದು.

ಶರಣೆಯರು 'ಮಲ್ಲಿಕಾಂಬಾ ಮಂಡಳಿ'ಯನು ಮೇಣ್
ತರುಣರಲ್ಲಿ 'ಗೆಳೆಯರ ಬಳಗ'ವನು ರಚಿಸಿಹರು.
ಧನ್ಯರಿವರೊಗ್ಗೂಡಿ ವಿಕಾರಿ ಸಂವತ್ಸರದ
ಚೆನ್ನಾದ ಶ್ರಾವಣದ ಮಾಸದೊಳು ಮೋದದೊಳು
ಶೂನ್ಯಸಂಪಾದನೆಯ ಪ್ರವಚನವ ನಡಸಿಹರು
ಮನ್ನಿಸುತ ಮನನಿಸುತ ನಮ್ಮಿಂದ ನೇಹಿಗರು .

ಕೊನೆಯಲ್ಲಿ ತಿರ್ಯಗ್ರಜತಾಂದೋಳಿಕೋತ್ಸವವ
ತೊನೆತೊನೆದು ನಲಿನಲಿದು ನೆರವೇರಿಸಿದರು ತಾವ್
ಶ್ರೀ ಗಿರಿಯಪುರದ ಶ್ರೀ ಸನ್ನಿಧಿಗೆ ನಮಮಕ್ಕೆ
ಶ್ರೀ ಗಿರಿಯಪುರದಲಿಪ್ಪ ಸಕಲರ್ಗೆ ಶುಭಮಕ್ಕೆ !

—ಶ್ರೀ ಜ. ಚ. ನಿ.

—::—



ಗ್ರಂಥ ಪ್ರಕಟನಾ ಶಾಖೆಯೊಂದಿಗೆ ಸಮಿತಿಯ ಸದಸ್ಯರು.

# ಸಮ್ಮೇಳನಾಧ್ಯಕ್ಷರು.

೧೯೫೬



ವೀರಸಿಂಹಾಸನಾಧೀಶ್ವರ ಜಗದ್ಗುರು
ಪಟ್ಟದ ಶ್ರೀ ಶಿವರಾತ್ರೀಶ್ವರ
ಮಹಾಸ್ವಾಮಿಗಳು ಸುತ್ತೂರು

೧೯೫೯



ಶೂನ್ಯ ಸಿಂಹಾಸನಾಧೀಶ್ವರ ಜಗದ್ಗುರು
ಶ್ರೀ ಮ. ನಿ. ಗಂಗಾಧರ ರಾಜಯೋಗೀಂದ್ರ
ಮಹಾಸ್ವಾಮಿಗಳು, ಮೂರುಸಾವಿರ ಮಠ ಹುಬ್ಬಳ್ಳಿ

೧೯೫೫



ವೀರಸಿಂಹಾಸನಾಧೀಶ್ವರ ಜಗದ್ಗುರು
ಶ್ರೀ ಶಿವರಾತ್ರಿ ರಾಜೇಂದ್ರಸ್ವಾಮಿಗಳು
ಸುತ್ತೂರು

# ಗ್ರಂಥ ಪ್ರಕಟನಾ ಶಾಖೆ



ಶ್ರೀ ಜಿ. ಎಸ್. ಶಾಂತವೀರಪ್ಪನವರು
ಉಪಾಧ್ಯಕ್ಷರು ಮತ್ತು
ಸ್ವಾಗತ ಸಮಿತಿ ಅಧ್ಯಕ್ಷರು



ಶ್ರೀ ಎ. ಸಿ. ಚಂದ್ರೇಗೌಡರು
ಉಪಾಧ್ಯಕ್ಷರು



ಶ್ರೀ ಗೊ. ರು. ಚೆನ್ನಬಸಪ್ಪನವರು
ಪ್ರಧಾನ ಕಾರ್ಯದರ್ಶಿ
ಸ್ವಾಗತ ಸಮಿತಿ

## ಗ್ರಂಥ ಪ್ರಕಟಣಾ ಶಾಖೆ



ಶ್ರೀ ಕೆ. ಆರ್. ಲಿಂಗಪ್ಪನವರು
ಬಿ.ಎ., ಎಲ್ ಎಲ್ ಬಿ.,
ಸಲಹೆಗಾರರು



ಶ್ರೀ ಜಿ. ಮಹಲಿಂಗಪ್ಪನವರು,
ಬಿ. ಕಾಂ.,
ಸಲಹೆಗಾರರು



ಶ್ರೀ ಜಿ. ಸಿ. ಸಿದ್ದಪ್ಪನವರು
ಸಹ ಕಾರ್ಯದರ್ಶಿ

# ಶಿವಾದ್ವೈತ ತತ್ತ್ವ ಪ್ರಚಾರಕ ಸಮಿತಿ

## ನಡೆದು ಬಂದ ದಾರಿ



ಹನ್ನೊಂದು ವರ್ಷಗಳ ಹಿಂದಿನ ಮಾತು. ಅಂದಿಗೆ ಶ್ರೀಗುರು ಕುಮಾರಾಶ್ರಮ ಸ್ಥಾಪನೆಯಾಗಿ ಹದಿನಾಲ್ಕು ವರುಷಗಳಾಗಿದ್ದುವು. ಆಶ್ರಮ ಸಂಸ್ಥಾಪಕರಾದ ಷ. ಬ್ರ. ಶ್ರೀ ಸದಾಶಿವ ಶಿವಾಚಾರ್ಯ ಮಹಾಸ್ವಾಮಿಗಳವರು ಆಶ್ರಮ ಆರಂಭ ವಾದಂದಿನಿಂದಲೂ ಪುರಾಣ, ಪ್ರವಚನ, ಉಪನ್ಯಾಸ, ಉಪದೇಶ-ಇತ್ಯಾದಿ ಜ್ಞಾನ ದಾಸೋಹ ಕಾರ್ಯವನ್ನು ನಡೆಸಿಕೊಂಡು ಬಂದಿದ್ದರು. ಗಿರಿಯಾಪುರದ ಪ್ರದೇಶದ ಜನತೆಗೆ ಭಕ್ತಿ ಧರ್ಮಗಳ ಅರಿವನ್ನುಂಟುಮಾಡಿದ್ದರು. ಧರ್ಮಕ್ಕೆ ಸಂಬಂಧಿಸಿದ ಯಾವ ದೊಡ್ಡ ಕೆಲಸಕ್ಕೂ ಜನ ಸಿದ್ಧರಾಗಿರುವಂತಹ ಶಕ್ತಿ ತಂದುಕೊಟ್ಟಿದ್ದರು.

ಪ್ರತಿವರ್ಷ ಶ್ರಾವಣಮಾಸವೇ ಅಲ್ಲದೆ ಶಿವರಾತ್ರಿ ಸಂದರ್ಭದಲ್ಲೂ ಸಹ ಶ್ರೀ ಶ್ರೀಗಳವರ ನೇತೃತ್ವದಲ್ಲಿ ವಿಶೇಷ ಕಾರ್ಯಕ್ರಮಗಳು ಆಶ್ರಮದ ಬಳಿ ಇರುವ ಶ್ರೀ ಉಜ್ಜಯಿನಿ ಮರುಳ ಸಿದ್ಧೇಶ್ವರ ಸ್ವಾಮಿ ದೇವಾಲಯದ ಆವರಣದಲ್ಲಿ ನಡೆಯು ತ್ತಿದ್ದುವು. ಸುತ್ತಮುತ್ತಿನ ಜನ ಅತ್ಯುತ್ಸಾಹದಿಂದ ಕಾರ್ಯಕ್ರಮಗಳಲ್ಲಿ ಭಾಗ ವಹಿಸುತ್ತಿದ್ದರು. ಮಹಾಸ್ವಾಮಿಗಳವರ ಉಪದೇಶವನ್ನು ಮನವಿಟ್ಟು ಕೇಳುತ್ತಿದ್ದರು. ಈ ನಿರಂತರ ಕೇಳಿಕೆಯಿಂದ ಜನತೆಯ ಹೃದಯ ಸಂಸ್ಕಾರಗೊಂಡು ಧರ್ಮ ಜಾಗೃತ ವಾಯಿತು. ಬರಬರುತ್ತಾ ಆಶ್ರಮದ ಅಭಿಮಾನಿಗಳ ಸಂಖ್ಯೆ ವೃದ್ಧಿಯಾಗುತ್ತ ಬಂದಿತು. ಆಶ್ರಮದ ಕೆಲಸಗಳಿಗೆ ಯಾವ ಶ್ರಮವನ್ನು ವಹಿಸಲೂ ಸಿದ್ಧರಿರುವ ಧರ್ಮಯೋಧರನೇಕರು ತಯಾರಾದರು. ಶ್ರೀ ಶ್ರೀಗಳ ಸಾತ್ವಿಕ ತೇಜಸ್ಸು ಅಷ್ಟೆಲ್ಲ ಪರಿವರ್ತನೆಗೆ ಕಾರಣವಾಯಿತು.

ಅದುವರೆಗೂ ನಡೆಯುತ್ತಿದ್ದ ಧರ್ಮಪ್ರಚಾರ ಕಾರ್ಯ ಅಷ್ಟೊಂದು ದೇಶ ವ್ಯಾಪ್ತಿಯನ್ನು ಪಡೆದಿರಲಿಲ್ಲ. ಕೇವಲ ಸ್ಥಳೀಯವಾಗಿ ಆಶ್ರಮದ ಹತ್ತಿರದ ಭಕ್ತಾದಿಗಳು ಮಾತ್ರ ಭಾಗವಹಿಸುತ್ತಿದ್ದು ಅವರಿಗೆ ಮಾತ್ರ ಅದರ ಪ್ರಯೋಜನ ಲಭಿಸುತ್ತಿತ್ತು. ಈ ಬಗ್ಗೆ ಗಿರಿಯಾಪುರದ ಹಾಗೂ ಸುತ್ತಮುತ್ತಣ ಕೆಲವು ಗ್ರಾಮಗಳ ಪ್ರಮುಖ ಭಕ್ತ ಮಾಹೇಶ್ವರರಿಗೆ ಶ್ರೀಗಳವರು ಸೂಚನೆಯೊಂದನ್ನು ಕೊಟ್ಟು ಈಗ ನಡೆಯುತ್ತಿರುವ ಶಿವರಾತ್ರಿ ಕಾರ್ಯಕ್ರಮಗಳು ಸಾರ್ವತ್ರಿಕ ಸ್ವರೂಪ ತಾಳಬೇಕೆಂದು ಅಪ್ಪಣೆ ಕೊಡಿಸಿದರು; ಕನ್ನಡನಾಡಿನ ಪೂರ್ಣ ವ್ಯಾಪ್ತಿಯನ್ನು ಪಡೆಯಬೇಕೆಂದರು.

ಆಗಲೇ ಹದವಾಗಿದ್ದ ಭಕ್ತ ಪ್ರಮುಖರ ಹೃದಯಭೂಮಿಕೆ ಸ್ವಾಮಿಗಳವರ ಸೂಚನೆಯನ್ನು ಸೋತ್ಸಾಹದಿಂದ ಸ್ವಾಗತಿಸಿತು. ಆ ಹಾದಿಯಲ್ಲಿ ಹೃತ್ಪೂರ್ವಕ ಸೇವೆ ಸಲ್ಲಿಸುವುದಾಗಿ ಸನ್ನಿಧಿಯಲ್ಲಿ ಎಲ್ಲರೂ ಅರಿಕೆ ಮಾಡಿಕೊಂಡರು.

## ಪ್ರಥಮ ಕಾರ್ಯಕ್ರಮ

ಪರಿಣಾಮವಾಗಿ, ಪ್ರಥಮವಾಗಿ ವಿರೋಧಿನಾಮ ಸಂವತ್ಸರದ ಮಾಘ ಬಹುಳ ೭ನೇ ಗುರುವಾರದಿಂದ ಒಂದು ವಾರಕಾಲ ಶಿವಾನುಭವ ದಾಸೋಹ ಸಪ್ತಾಹವನ್ನು ನಡೆಸಬೇಕೆಂದು ನಿರ್ಣಯಿಸಲಾಯ್ತು. ಈ ನಿರ್ಣಯ ತುಂಬ ಬೆಂಬಲ ಪಡೆಯಿತು. ಗಿರಿಯಾಪುರದ ಭಕ್ತ ಮಾಹೇಶ್ವರರು ತಿಂಗಳುಗಟ್ಟಲೆ ಹಗಲಿರುಳೆನ್ನದೆ ದುಡಿದು ಸಪ್ತಾಹದ ಸಿದ್ಧತೆ ನಡೆಸಿದರು. ಸುತ್ತಮುತ್ತಿನ ಗ್ರಾಮಸ್ಥರೂ ಸಹಕರಿಸಿದರು. ಕನ್ನಡನಾಡಿನ ಮೂಲೆ ಮೂಲೆಗಳಿಂದಲೂ ಧನ-ಧಾನ್ಯ ಸಂಪತ್ತಿನ ಸಹಾಯ ಒದಗಿ ಬಂದಿತು. ವ್ಯವಸ್ಥೆಗಾಗಿ ತಾತ್ಕಾಲಿಕ ಸಮಿತಿಯೊಂದು ರಚಿತವಾಯಿತು.

ಶ್ರೀ ಸದಾಶಿವಶಿವಾಚಾರ್ಯ ಮಹಾಸ್ವಾಮಿಗಳವರು ಶ್ರೀ ಶಿವಯೋಗ ಮಂದಿರದಲ್ಲಿ ಶಿಕ್ಷಣ ಪಡೆದು ಬಂದವರಾಗಿ, ಶಿವಯೋಗ ಮಂದಿರದ ಸಂಸ್ಥಾಪಕರಾದ ಲಿಂ. ಹಾನಗಲ್ಲ ಕುಮಾರಮಹಾಸ್ವಾಮಿಗಳವರಿಗೆ ಕೃತಜ್ಞತೆ ಸಲ್ಲಿಸಿ ಅವರು ಆಜ್ಞಾಪಿಸಿದಂತೆ ಸಮಾಜಸೇವೆ ಮಾಡಬೇಕೆಂದು ಇಚ್ಛಿಸಿ ಅದೇ ಹಾದಿಯಲ್ಲಿ ದುಡಿಯಲು ಅವಕಾಶವಾದ ಈ ಸಪ್ತಾಹವು ಲಿಂ. ಕುಮಾರ ಶಿವಯೋಗಿಗಳ ಪುಣ್ಯ ನಾಮಾಂಕಿತದಲ್ಲೇ ನಡೆಯಬೇಕೆಂದು ಆಶಿಸಿದರು. ಅಂತೇ ಲಿಂ. ಕುಮಾರ ಮಹಾಸ್ವಾಮಿಗಳವರ ಇಪ್ಪತ್ತೊಂದನೇ ಪುಣ್ಯ ತಿಥಿ ಮಹೋತ್ಸವದ ಸ್ಮಾರಕವಾಗಿ ಪ್ರಥಮ ಸಪ್ತಾಹ ಕಾರ್ಯಕ್ರಮಗಳು ಜರುಗಿದವು.

ಪ್ರಪ್ರಥಮ ಕಾರ್ಯಕ್ರಮ ಅಖಂಡವಾಗಿ ಏಳುದಿನಗಳ, ಕಾಲ ಜ್ಞಾನ ಹಾಗೂ ಅನ್ನದಾಸೋಹ ನಿರ್ವಿಘ್ನವಾಗಿ ನಡೆದವು. ಈ ಮಹಾಕಾರ್ಯಕ್ಕೆ ದಯಮಾಡಿಸಿದ್ದ ಅನೇಕ ಗುರು ಜಂಗಮ ಮೂರ್ತಿಗಳು ಧರ್ಮೋಪದೇಶಗೈದು ಸಪ್ತಾಹದ ಯಶಸ್ವಿಗೆ ಕಾರಣರಾದರು.

ಸಪ್ತಾಹದ ಕಾರ್ಯಕ್ರಮಗಳ ಸಂಪೂರ್ಣ ನೇತೃತ್ವವನ್ನು ಶ್ರೀಮನ್ನಿರಂಜನ ಜಗದ್ಗುರು ಸಚ್ಚಿದಾನಂದ ಮಹಾಸ್ವಾಮಿಗಳವರು, ಮುರುಘಾಮಠ, ಆನಂದಾಪುರ-ಅವರೂ ಮತ್ತು ಅಂದಿನಿಂದ ಇಂದಿನವರೆಗೆ ಸಮಿತಿಯ ಸರ್ವಕಾರ್ಯಗಳಲ್ಲೂ ಮುಂಬೆಳಕಾಗಿ ದುಡಿಯುತ್ತಿರುವ ಶ್ರೀ ಗಿರಿರಾಜ ಮಣಿ ಖಚಿತ ಕನಕ ಸೂರ್ಯ ಸಿಂಹಾಸನಾಧೀಶ್ವರ ಶ್ರೀಮನ್ನಿಡುಮಾಡಿ ಶ್ರೀಶೈಲ ಜಗದ್ಗುರುಗಳವರೂ ವಹಿಸಿದ್ದರು.

ನಾಡಿನ ಮೂಲೆ ಮೂಲೆಯಿಂದ ಬಂದು ಸೇರಿದ್ದ ಧರ್ಮಾಭಿಮಾನಿಗಳಿಗೆ ಅಪೂರ್ವ ಹಬ್ಬದಂತಿದ್ದ ಸಪ್ತಾಹ ಮಹೋತ್ಸವದಲ್ಲಿ ನೂರಾರು ಜನ ಶಿವಾನುಭಾವಿಗಳು, ಧರ್ಮೋಪದೇಶಕರು, ಕೀರ್ತನಕಾರರು, ಕಲಾವಿದರು ಶಿವಾನುಭವದ ದಿವ್ಯ ರಸಾಯನವನ್ನೇ ಉಣಿಸಿದರು. ಆ ರಸಾಯನವನ್ನು ಸೇವಿಸುವ ಧರ್ಮಾಭಿಮಾನಿಗಳು ಸಪ್ತಾಹ ಸಾರ್ಥಕವಾಯಿತೆಂದು ಹೃದಯತುಂಬಿ ಹೊಗಳಿದರು. ಅಂತಹ ಮಹದವಕಾಶವನ್ನು ಕಲ್ಪಿಸಿದ ಶ್ರೀ ಸದಾಶಿವಶಿವಾಚಾರ್ಯ ಮಹಾಸ್ವಾಮಿಗಳವರನ್ನು ಮನಸಾರೆ ನಮಸ್ಕರಿಸಿದರು.

ಸಪ್ತಾಹದ ವಿಶೇಷವೆಂದರೆ ಏಳು ದಿನಗಳೂ ಎಡೆಬಿಡದೆ ನಡೆದ ಅನ್ನದಾಸೋಹ. ಆಹಾರ ಸಾಮಗ್ರಿಗಳಿಗೆ ನಿಯಂತ್ರಣವಿದ್ದ ಕಾಲವದು. ಗುರು ಕೃಪೆಯಿಂದ ಯಾವ ಕೊರತೆಯೂ ಉಂಟಾಗಲಿಲ್ಲ. ಅನ್ನದಾಸೋಹ ಅಕ್ಷಯ ರೂಪವಾಗಿ ನಡೆಯಿತು. ಈ ಸೇವೆಯಲ್ಲಿ ಅಂದಿನ ಸರ್ಕಾರಿ ಅಧಿಕಾರಿಗಳೂ ತುಂಬ ಸಹಕರಿಸಿದರು. ಈ ಸಂದರ್ಭದಲ್ಲಿ ಅವರನ್ನು ವಂದಿಸಲು ಹರ್ಷವೆನಿಸುತ್ತದೆ. ವೀರಶೈವ ಧರ್ಮದಲ್ಲಿ ಅನ್ನದಾಸೋಹಕ್ಕೆ ಪರಮ ಪಾವಿತ್ರತೆಯಿದೆ. ಆ ಪಾವಿತ್ರತೆಯನ್ನು ಇಂದಿಗೂ ಸಮಿತಿಯು ತಾನು ನಡೆಸುತ್ತಿರುವ ಅನ್ನದಾಸೋಹ ಕಾರ್ಯದಲ್ಲಿ ಕಾಪಾಡಿಕೊಂಡು ಬಂದಿದೆ.

## ಗ್ರಂಥ ಪ್ರದರ್ಶನ

ಅದೇ ಮೊದಲನೆ ಬಾರಿಗೆ ಏರ್ಪಡಿಸಿದ್ದ ಗ್ರಂಥ ಪ್ರದರ್ಶನಕ್ಕೆ ಬಹಳಷ್ಟಲ್ಲದಿದ್ದರೂ ಸಾಕಷ್ಟು ಸಂಖ್ಯೆಯಲ್ಲಿ ಗ್ರಂಥಗಳು ಬಂದಿದ್ದವು. ಧಾರ್ಮಿಕ ಗ್ರಂಥಗಳಿಗೆ ಮಾತ್ರ ಅವಕಾಶವಿದ್ದ ಆ ಪ್ರದರ್ಶನದಲ್ಲಿ ಶ್ರೀ ಸೂರ್ಯ ಸಿಂಹಾಸನಾಧೀಶ್ವರ ಶ್ರೀ ಜ. ಚ. ನಿ. ಕೃತ "ವಚನಾಂಜಲಿ", ಪ್ರಭೋದ ಪುಸ್ತಕ ಮಾಲೆಯ "ಸಂಸ್ಕೃತ ಸ್ತವನಮಂಜರಿ" ಧಾರವಾಡ ಲಿಂಗಾಯಿತ ವಿದ್ಯಾಸಂಸ್ಥೆಯ "ಕೈವಲ್ಯ ಕಲ್ಪವಲ್ಲರಿ", ಶ್ರೀ ಮಹಲಿಂಗಾರ್ಯರು ದ್ಯಾಂಪುರ ಹಿರೇಮಠ ಅವರ "ಸದ್ಬೋಧಕ ಪದ್ಯಾವಳಿ" ಮತ್ತು ಸವದತ್ತಿ ಶ್ರೀ ಮಹಾಲಿಂಗಸ್ವಾಮಿಗಳವರ "ಬಿದರೆ ಶ್ರೀ ಕುಮಾರಸ್ವಾಮಿಗಳವರ ಪುರಾಣ"—ಈ ಗ್ರಂಥಗಳಿಗೆ ಬಹುಮಾನ ಕೊಡಲಾಯ್ತು. ಉಪನ್ಯಾಸ, ಕೀರ್ತನೆ, ಸಂಗೀತಗಳ ಜೊತೆಯಲ್ಲಿ ಸಾಹಿತ್ಯಪೂಜೆಯೂ ನಡೆದಂತಾಯಿತು.

ಒಟ್ಟಾರೆ ಪುಣ್ಯ ಜೀವಿಗಳ ಪವಿತ್ರ ಪ್ರೇರಣೆಯಿಂದ, ಭಕ್ತಾದಿಗಳ ಹೃತ್ಪೂರ್ವಕ ಸೇವೆಯಿಂದ, ಧರ್ಮಾಭಿಮಾನಿಗಳ ಔದಾರ್ಯದ ನೆರವಿನಿಂದ, ಎಲ್ಲಕ್ಕೂ ಹೆಚ್ಚಿನದಾಗಿ ಲಿಂ. ಹಾನಗಲ್ಲ ಕುಮಾರ ಶಿವಯೋಗಿಗಳ ದಿವ್ಯಾಶೀರ್ವಾದದಿಂದ ಸಪ್ತಾಹದ ಎಲ್ಲ ಕಾರ್ಯಕ್ರಮಗಳೂ ಸುಲಲಿತವಾಗಿ ಪೂರ್ಣಗೊಂಡವು.

## ಸ್ಥಿರ ಸಮಿತಿ

ಹೀಗೆ ನಡೆದ ಕಾರ್ಯಕ್ರಮಗಳಿಂದ ಸ್ಫೂರ್ತಿಹೊಂದಿದ ಭಕ್ತಾದಿಗಳು ಈ ಜ್ಞಾನದಾಸೋಹವನ್ನು ಅವಿಚ್ಛಿನ್ನವಾಗಿ ಪ್ರತಿ ವರ್ಷ ಇದೇ ಮಾಘ ಬಹುಳದಲ್ಲಿ ನಡೆಸಿಕೊಂಡು ಹೋಗಲು ನಿರ್ಧರಿಸಿ ಕಾರ್ಯನಿರ್ವಹಣೆಗಾಗಿ ಕ್ರಮವಾದ ಕಾರ್ಯ ಸಂಸ್ಥೆಯೊಂದನ್ನು " ಲಿಂ. ಹಾನಗಲ್ಲ ಶ್ರೀ ನಿ. ಪ್ರ. ಕುಮಾರ ಶಿವಯೋಗಿ ಸ್ಮಾರಕ ಶಿವಾದ್ವೈತ ತತ್ತ್ವಪ್ರಚಾರಕ ಸಮಿತಿ " ಎಂಬ ಹೆಸರಿನಲ್ಲಿ ರೂಪಿಸಿದರು.

ಸಂಸ್ಥೆಯ ಸ್ಥಾಯಿ ಸಮಿತಿಯು ಜಗದ್ಗುರು ಸಚ್ಚಿದಾನಂದ ಮಹಾಸ್ವಾಮಿಗಳು ಮುರುಘಾಮಠ, ಆನಂದಾಪುರ-ಇವರ ಅಧ್ಯಕ್ಷತೆಯಲ್ಲೂ, ಕಾರ್ಯ ನಿರ್ವಾಹಕ ಮಂಡಲಿಯು ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಜಗದ್ಗುರುಗಳವರ ಅಧ್ಯಕ್ಷತೆಯಲ್ಲೂ ರಚಿತವಾಗಿ ಸಮಿತಿಯು ವಿಶಾಲ ಕಾರ್ಯಕ್ಷೇತ್ರದಲ್ಲಿ ಕಾಲಿಟ್ಟು ಸೇವೆ ಸಲ್ಲಿಸಲಾರಂಭಿಸಿತು.

## ಉದ್ದೇಶಗಳು

ಸಂಸ್ಕೃತಿ ಪ್ರಸಾರ, ಕಲಾವಿದರಿಗೆ ಸನ್ಮಾನ, ಸಾಹಿತ್ಯ ಪ್ರಕಾಶನ, ಪ್ರೋತ್ಸಾಹ, ಸಭೆ ಸಮ್ಮೇಳನಗಳಲ್ಲಿ ಸ್ತ್ರೀಯರಿಗೆ ಸಮಾನ ಸ್ಥಾನಮಾನಗಳನ್ನು ಕಲ್ಪಿಸುವುದು, ಯುವಕರಲ್ಲಿ ಸಂಘಶಕ್ತಿ ಬಲಿಸುವುದು; ಸೇವಾಸಕ್ತಿ ಬೆಳೆಸುವುದು, ನಾಡಿನ ವಿದ್ವಾಂಸರುಗಳನ್ನು, ಪಂಡಿತರನ್ನು ಕರೆಸಿ ಉಪನ್ಯಾಸಗಳನ್ನು ಏರ್ಪಡಿಸುವುದು, ವೀರಶೈವ ಸಂಸ್ಕೃತಿ, ಸಾಹಿತ್ಯಗಳ ಪ್ರಾಚಾರ, ಶಿವಾನುಭವ ಸಮ್ಮೇಳನಗಳನ್ನು ನಡೆಸುವುದು, ಜನಗಳಲ್ಲಿ ಪರಸ್ಪರ ಸಂಪರ್ಕ ಸಾಮರಸ್ಯವನ್ನೇರ್ಪಡಿಸುವುದು ಮುಂತಾದ ಮೂಲ ಉದ್ದೇಶಗಳನ್ನು ಹೊಂದಿ ಆ ಮೂಲಕ ನಾಡಿನಲ್ಲಿ ಧರ್ಮಜಾಗೃತಿಯುಂಟುಮಾಡುವುದೇ ಸಮಿತಿಯ ಹಿರಿಯ ಗುರಿಯಾಯಿತು.

ಮೇಲ್ಕಂಡ ಗುರಿ ಸಾಧನೆಯ ಹಾದಿಯಲ್ಲಿ ಕಳೆದ ಹನ್ನೊಂದು ವರ್ಷಗಳಿಂದಲೂ ಸಮಿತಿಯು ನಡೆದು ಬಂದಿದೆ. ಅನೇಕ ಮಂದಿ ಸಮಾಜದ ಸ್ವಾಮಿಗಳನ್ನು ಆಹ್ವಾನಿಸಿ ಗೌರವಿಸಿದೆ. ನೂರಾರು ಮಂದಿ ಕಲಾವಿದರನ್ನು ಕರೆಸಿ ಪುರಸ್ಕರಿಸಿ ಪ್ರೋತ್ಸಾಹಿಸಲಾಗಿದೆ. ನಾಲ್ಕಾರು ಗ್ರಂಥಗಳನ್ನು ಪ್ರಕಟಿಸಲಾಗಿದೆ. ಸಂಸ್ಕೃತಿ ಪ್ರಸಾರವಂತೂ ಮುಖ್ಯವಾಗಿ ನಡದೇ ಇದೆ.

## ಸಮಿತಿಯ ಪ್ರಕಟನೆಗಳು

ಭಕ್ತಿ ಗೀತೆಗಳು : ಷ. ಬ್ರ. ಶ್ರೀ ಸದಾಶಿವ ಶಿವಾಚಾರ್ಯ ಮಹಾಸ್ವಾಮಿಗಳವರ ಕೃತಿ.
ಕಾರಣಿಕ ಕುಮಾರಯೋಗಿ : ಸೂರ್ಯಸಿಂಹಾಸನಾಧೀಶ್ವರ, ಶ್ರೀ ಜ.ಚ.ನಿ. ಸನ್ನಿಧಿ ಕೃತಿ.
ಅಷ್ಟಾವರಣ : ಸೂರ್ಯ ಸಿಂಹಾಸನಾಧೀಶ್ವರ ಶ್ರೀ.ಜ.ಚ.ನಿ. ಸನ್ನಿಧಿ ಕೃತಿ.
ಪಂಚಾಚಾರ : ಸೂರ್ಯ ಸಿಂಹಾಸನಾಧೀಶ್ವರ ಶ್ರೀ.ಜ.ಚ.ನಿ. ಸನ್ನಿಧಿ ಕೃತಿ.
ಷಟ್‌ಸ್ಥಲ : ಸೂರ್ಯ ಸಿಂಹಾಸನಾಧೀಶ್ವರ ಶ್ರೀ ಜ.ಚ.ನಿ. ಸನ್ನಿಧಿ ಕೃತಿ.

## ಶಿವಾನುಭವ ಸಮ್ಮೇಳನಗಳು

ಸಮಿತಿಯು ಇಲ್ಲಿಗೆ ಹನ್ನೊಂದು ಸಮ್ಮೇಳನಗಳನ್ನು ಅತ್ಯಂತ ಯಶಸ್ವಿಯಾಗಿ ನಡೆಸಿದೆಯೆಂದು ಹೇಳಲು ಹೆಮ್ಮೆಯೆನಿಸುತ್ತದೆ. ಆ ಹೆಮ್ಮೆ ಹರ್ಷಗಳ ಹೊಸಲಿನಲ್ಲೀ ತನ್ನ ಹನ್ನೆರಡನೆಯ ವಾರ್ಷಿಕ ಮಹೋತ್ಸವವನ್ನು ಇದೀಗ ಆಚರಿಸುತ್ತಿದೆ. ಇದು ಸಮಿತಿಯ ಸುಕೃತ. ತನ್ನ ಸಂಸ್ಥಾಪಕರಿಗೆ ಅರುವತ್ತು ವರ್ಷ ತುಂಬಿ ಅವರನ್ನು ಗೌರವಿಸುವ ಅವಕಾಶವೂ ಅದಕ್ಕೆ ಈಗಲೇ ಒದಗಿದೆ. ಸಮಿತಿಯ ಕಾರ್ಯಚಟುವಟಿಕೆಗಳ ಕೇಂದ್ರ ಸ್ಥಾನವಾದ ಶ್ರೀ ಗುರುಕುಮಾರಾಶ್ರಮಕ್ಕೆ ಇಪ್ಪತ್ತೈದು ತುಂಬಿದ ಬೆಳ್ಳಿ ಹಬ್ಬವೂ ಕೂಡ ಬಂದೊದಗಿದೆ. ಎಂತಹ ಸುವರ್ಣ ಸಂದರ್ಭ! ಮೂರು ಮಹತ್ವದ ಸಂಗತಿಗಳ ಸಂಯೋಗ; ಅದಕ್ಕಾಗಿ ಈ ಸಂಯುಕ್ತ ಮಹೋತ್ಸವ.

ಈ ಸಂದರ್ಭದಲ್ಲಿ ಸಮಿತಿಯ ಕಾರ್ಯ ಕಲಾಪಗಳ ವರದಿಯನ್ನು ಸಮಸ್ತರ ಎದುರಿಗೆ ಇಡಬೇಕಾದುದು ಉಚಿತವೆಂದೇ ಇಷ್ಟು ವಿಷಯಗಳನ್ನು ಪೂರ್ವಭಾವಿಯಾಗಿ ಅರಿಕೆ ಮಾಡಿಕೊಂಡುದು. ಇನ್ನು ಇಲ್ಲಿಯವರೆಗೂ ನಡೆದಿರುವ ಶಿವಾನುಭವ ಸಮ್ಮೇಳನಗಳಿಗೆ ಸಂಬಂಧಪಟ್ಟ ಮುಖ್ಯ ವಿಷಯಗಳನ್ನಷ್ಟು ವರ್ಷಕ್ರಮವಾಗಿ ಈ ಕೆಳಗೆ ಕೊಡಲಾಗಿದೆ.

### ವಿರೋಧಿನಾಮ ಸಂವತ್ಸರ
### ಮೊದಲನೆಯ ಸಮ್ಮೇಳನ

ಮಾಘ ಬಹುಳ ೭ ರಿಂದ ೧೪ (ದಿನಾಂಕ 3-2-50 ರಿಂದ 15-2-50)

**ಸಮ್ಮೇಳನಕ್ಕೆ ದಯಮಾಡಿಸಿದ್ದ ಶ್ರೀಗಳವರು**

1. ಸಿ. ಪ್ರ. ಮೃತ್ಯುಂಜಯಸ್ವಾಮಿಗಳವರು, ಮುರುಘಾಮಠ, ಧಾರವಾಡ.

2. ,, ಮಹಾಂತ ಸ್ವಾಮಿಗಳವರು, ಇಳಕಲ್ಲು.
3. ,, ಕುಮಾರಸ್ವಾಮಿಗಳು, ಕಲ್ಮಠ, ಸವದತ್ತಿ.
4. ,, ಚೋಳಬಸವ ಸ್ವಾಮಿಗಳವರು, ಆದವಾನಿ.
5. ,, ಚನ್ನವೀರ ಸ್ವಾಮಿಗಳವರು, ಹಿರೆಕೆರೂರು.
6. ಅಭಿನವಾಲ್ಲಮ ಶ್ರೀ ನಿ. ಪ್ರ. ಮಹಾದೇವ ಸ್ವಾಮಿಗಳವರು, ಸರ್ಪಭೂಷಣ ಮಠ, ಬೆಂಗಳೂರು.
7. ನಿ. ಪ್ರ. ಶಿವಬಸವ ಸ್ವಾಮಿಗಳವರು, ಹೊಸಮಠ, ಹುಬ್ಬಳ್ಳಿ.
8. ,, ಶಿವಲಿಂಗಸ್ವಾಮಿಗಳವರು, ಹುಕ್ಕೇರಿ ಮಠ, ಹಾವೇರಿ.
9. ,, ನೀಲಲೋಚನ ಸ್ವಾಮಿಗಳವರು, ಕೋಡಿ ಮಠ, ಹಾಗ್ನಹಳ್ಳಿ.
10. ,, ಸಂಗನ ಬಸವ ಸ್ವಾಮಿಗಳವರು, ಜಿವರನಹಳ್ಳಿ ಮಠ, ಹಾಸನ.
11. ,, ಬಸವರಾಜ ಸ್ವಾಮಿಗಳವರು, ಬಿ. ಮಲ್ಲೇನಹಳ್ಳಿ.
12. ಷ. ಬ್ರ. ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳವರು, ಶಿಲಾಮಠ, ತಾವರೆಕೆರೆ.
13. ,, ಘನಲಿಂಗ ಶಿವಾಚಾರ್ಯ ಸ್ವಾಮಿಗಳವರು, ದೊಡ್ಡಮಠ, ಕೆ. ಬಿದರೆ.
14. ,, ವಿರೂಪಾಕ್ಷ ಶಿವಾಚಾರ್ಯಸ್ವಾಮಿಗಳವರು, ಹಿರೇಮಠ, ನೀಲಗುಂದ.
15. ,, ಕೆಂಚಬಸವ ಸ್ವಾಮಿಗಳು.

## ಉಪನ್ಯಾಸಕರು

1. ಶ್ರೀ ಚನ್ನಮಲ್ಲಿಕಾರ್ಜುನರು, ಸಂಪಾದಕರು, ಸದ್ಧರ್ಮದೀಪಿಕೆ, ಮೈಸೂರು.
2. ಆಸ್ಥಾನ ವಿದ್ವಾನ್, ಎಂ. ಜಿ. ನಂಜುಂಡಾರಾಧ್ಯರು, ಬೆಂಗಳೂರು.
3. 'ಧರ್ಮಕಾರ್ಯನಿರತ' ಎಚ್. ನಂಜುಂಡಯ್ಯನವರು, ಇಡಗೂರು, ಗೋರಿಬಿದನೂರು ತಾಲ್ಲೂಕು.
4. 'ವಿಮರ್ಶ ವಿಶಾರದ' ಜಿ. ಟಿ. ಅಕ್ಕಾಲಯ್ಯ ದೀಕ್ಷಿತರು, ಮದನಪಲ್ಲಿ.
5. ವೈ. ಎಂ. ಶ್ರೀಕಂಠಯ್ಯನವರು, ಸಹಕಾರಿ ಸಂಘಗಳ, ಅಸಿಸ್ಟೆಂಟ್ ರಿಜಿಸ್ಟ್ರಾರ್ ಶಿವಮೊಗ್ಗ.
6. ಮಲ್ಲಾಬಾದಿ ವೀರಭದ್ರಪ್ಪನವರು, ಧಾರವಾಡ.

## ವಿಕೃತಿನಾಮ ಸಂವತ್ಸರ

### ಎರಡನೆಯ ಸಮ್ಮೇಳನ

ಆ ಹಿಂದಿನ ವರ್ಷ ತೀರ್ಮಾನವಾದಂತೆ ಇನ್ನು ಮುಂದೆ ಸಮ್ಮೇಳನವು ಮೂರುದಿನಗಳ ಕಾಲ ನಡೆಯುವಂತೆ ವ್ಯವಸ್ಥೆಗೊಳಿಸಲಾಗಿ ಮಾಘ ಬಹುಳ ೫ ರಿಂದ ೭ (ದಿನಾಂಕ ೫-೩-೫೭ರಿಂದ ೭-೩-೫೧)ರವರೆಗೆ ನಡೆಯಿತು.

ಉಪನ್ಯಾಸಕರು :— ಶ್ರೀ ಚೆನ್ನಮಲ್ಲಿಕಾರ್ಜುನ, ಸಂಪಾದಕರು "ಸದ್ಧರ್ಮ ದೀಪಿಕೆ", ಶಿವಾದ್ವೈತ ವಿದ್ಯಾಭೂಷಣ, ಆಸ್ಥಾನ ವಿದ್ವಾನ್ ಶ್ರೀ. ಎಂ. ಜಿ. ನಂಜುಂಡಾರಾಧ್ಯರು, ಆಸ್ಥಾನ ವಿದ್ವಾನ್, ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು; ಮತ್ತು ಚಾಮರಾಜೇಂದ್ರ ಸಂಸ್ಕೃತ ಕಾಲೇಜು ಪ್ರಿನ್ಸಿಪಾಲರಾದ ಶ್ರೀ ಕೆ. ಎಸ್. ಧರಣೇಂದ್ರಯ್ಯ, ಎಂ.ಎ, ಅವರು. ಕೀರ್ತನ, ನಾಟಕ ನವ ರಸಾಲಂಕಾರ, ಕೀರ್ತನಕೇಸರಿ ಶ್ರೀ ಹೆಚ್. ಎಂ. ಶಿವಲಿಂಗಸ್ವಾಮಿ ಹಿರೇಮಠ ಮತ್ತು ಏಕಪಾತ್ರಾಭಿನಯ ನಾಟಕ ಕಲಾಕೋವಿದ ಶ್ರೀ ವೀರಭದ್ರಯ್ಯ ಹಿರೇಮಠ, ಬಿಜಾಪುರ.

ಗ್ರಂಥೋದ್ಘಾಟನೆ :— ಶ್ರೀ ಸೂರ್ಯ ಸಿಂಹಾಸನಾಧೀಶ್ವರ ಜ.ಚ.ನಿ. ವಿರಚಿತ "ಕಾರಣಿಕ ಕುಮಾರಯೋಗಿ" ಮತ್ತು ಷ. ಬ್ರ. ಶ್ರೀ ಸದಾಶಿವ ಶಿವಾಚಾರ್ಯ ವಿರಚಿತ "ಕೈವಲ್ಯೋಪನಿಷತ್ [ಶ್ರೀ. ಬಿ ಶಿ ಶಾಸ್ತ್ರಿ] ಸದಾಶಿವಭಾಷ್ಯ"- ಈ ಎರಡು ಗ್ರಂಥಗಳು ಸಮ್ಮೇಳನದಲ್ಲಿ ಉದ್ಘಾಟಿತವಾದುದೊಂದು [ಶ್ರೀ ಜ.ಚ.ನಿ] ವಿಶೇಷ ವಾಗಿತ್ತು.

## ನೂತನ ಕಾರ್ಯ ಮಂಡಲಿ

ಸಮ್ಮೇಳನದ ಕಡೆಯ ದಿನದ ಸಭೆಯ ಕೋರಿಕೆಯಂತೆ ಇದುವರೆಗೂ ಸಮಿತಿಯ ಕಾರ್ಯ ನಿರ್ವಾಹಕ ಮಂಡಳಿಯ ಅಧ್ಯಕ್ಷರಾಗಿದ್ದ ಶ್ರೀ ಸೂರ್ಯ ಸಿಂಹಾಸನಾಧೀಶ್ವರ ಜ. ಚ. ನಿ. ಸನ್ನಿಧಿಯವರು ಮಹಾ ಪೋಷಕರಾಗಿಯೂ, ಸಂಸ್ಥಾಪಕ ಶ್ರೀಗಳು ಪೋಷಕರಾಗಿಯೂ ಇರಲು ಒಪ್ಪಿದನಂತರ ನೂತನ ಕಾರ್ಯಕಾರೀ ಮಂಡಳಿಯೊಂದನ್ನು ರಚಿಸಲಾಯ್ತು.

ಶ್ರೀ ಶೆಟ್ರ ಸಿದ್ದಪ್ಪನವರು, ಅಜ್ಜಂಪುರ-ಇವರನ್ನು ಅಧ್ಯಕ್ಷರನ್ನಾಗಿಯೂ, ಶ್ರೀ ಸಿ. ಎ. ನಾಗಪ್ಪನವರು, ಚೆನ್ನಾಪುರ-ಇವರನ್ನು ಉಪಾಧ್ಯಕ್ಷರನ್ನಾಗಿಯೂ, ಶ್ರೀ ಜಿ.ಸಿ. ಶಿವರುದ್ರಪ್ಪನವರು, ಗಿರಿಯಾಪುರ-ಇವರನ್ನು ಕೋಶಾಧ್ಯಕ್ಷರನ್ನಾಗಿಯೂ ಶ್ರೀ ಜಿ. ಕೆ. ಶಿವಲಿಂಗಪ್ಪನವರು, ಗಿರಿಯಾಪುರ-ಇವರನ್ನು ಕಾರ್ಯದರ್ಶಿಯನ್ನಾಗಿಯೂ ಸರ್ವಾನುಮತದಿಂದ ಆರಿಸಿ ನೂತನ ಮಂಡಲಿಗೆ ಹದಿನೈದು ಜನ ಸದಸ್ಯರನ್ನು ಸೇರಿಸಲಾಯ್ತು. [ಅಂದಿನಿಂದ ಇಂದಿನವರೆಗೂ ಇದೇ ಕಾರ್ಯ ಮಂಡಲಿಯು ಸತತವಾಗಿ ಸೇವೆ ಸಲ್ಲಿಸುತ್ತ ಬಂದಿದೆ].

## ಖರನಾಮ ಸಂವತ್ಸರ

### ಮೂರನೆಯ ಸಮ್ಮೇಳನ

ಮಾಘ ಬಹುಳ ಐದು, ಆರು ಮತ್ತು ಏಳು [ದಿನಾಂಕ ೧೬-೨-೫೨ರಿಂದ ೧೮-೨-೫೨] ಈ ಮೂರು ದಿನಗಳು ಮೂರನೇ ವರ್ಷದ ಕಾರ್ಯಕ್ರಮಗಳು ಮುಂದಿನಂತೆ ನಡೆದವು.

ಶ್ರೀಗಳು :— ಶ್ರೀ ನಿ. ಪ್ರ. ಶಿವಲಿಂಗಸ್ವಾಮಿಗಳು ಹಾವೇರಿ; ಶ್ರೀ ಪೆದ್ದ ಬಸವ ಮಹಾಸ್ವಾಮಿಗಳು. ಮೇಟಿಕುರಿಕೆ ಮಠ, ಬೂದಾಳು; ಗೊಗ್ಗಿಹಳ್ಳಿ ಶ್ರೀ ಘ. ಚ. ನಿಜಗುಣ ಪಟ್ಟಾಧ್ಯಕ್ಷರು ಮತ್ತು ಘ. ಲಿಂ. ಚ. ಶ್ರೀ ವಿರೂಪಾಕ್ಷ ಶಿವಾಚಾರ್ಯರು, ನೀಲಗುಂದ-ಮೊದಲಾದ ಶ್ರೀಗಳವರು ದಯಮಾಡಿಸಿ ಭಕ್ತರಿಗೆ ಯುಕ್ತರಿಗೆ ಯುಕ್ತ ಸಂದೇಶವನ್ನಿತ್ತರು.

ಉಪನ್ಯಾಸಕರು— ಬಾಗಲಕೋಟೆ ಬಸವೇಶ್ವರ ಕಾಲೇಜ್ ಪ್ರಿನ್ಸಿಪಾಲ್ ಡಾ. ಎಸ್. ಸಿ ನಂದೀಮಠ, ಎಂ.ಎ., ಪಿ.ಹೆಚ್.ಡಿ., ಮೈಸೂರು ಸರ್ಕಾರದ ವಾರ್ತಾಶಾಖೆ ಉಪವಾರ್ತಾಧಿಕಾರಿ ಶ್ರೀ ಜೀರಗೆ ಕಟ್ಟಿಬಸವಪ್ಪ, ಬಿ.ಎ., ಮತ್ತು ಧಾರವಾಡ ಲಿಂಗಾಯತ ಅಭಿವೃದ್ಧಿ ಸಮಿತಿಯ ಶ್ರೀ ಮಲ್ಲಾಭಾದಿ ವೀರಭದ್ರಪ್ಪ ನವರು ಪ್ರಮುಖ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದರು.

ಸಂಗೀತ :— ಉಭಯಗಾನ ವಿಶಾರದ ಶ್ರೀ ಪಂಚಾಕ್ಷರಿ ಗವಾಯಿಗಳ ಪಟ್ಟ ಶಿಷ್ಯ ಪುಟ್ಟರಾಜ ಕವಿಗಳು ಮತ್ತು ನಾಗಸ್ವರ ನಿಪುಣ ಜಗನ್ನಾಥ್, ಬಾಗೇಪಲ್ಲಿ.

ಗ್ರಂಥೋದ್ಘಾಟನೆ :— ಷ. ಬ್ರ. ಶ್ರೀ ಸದಾಶಿವ ಶಿವಾಚಾರ್ಯ ವಿರಚಿತ "ಶಿವಪೂಜಾ ವಿಧಿ" ಎಂಬ ಗ್ರಂಥವನ್ನು ಮಹಾಪೋಷಕರಾದ ಶ್ರೀ ಸೂರ್ಯ ಸಿಂಹಾಸನಾಧೀಶ್ವರ ಜ.ಚ.ನಿ. ಸನ್ನಿಧಿಯವರು ಉದ್ಘಾಟಿಸಿದರು. ಈ ಗ್ರಂಥ ಪ್ರಕಾಶನಕ್ಕೆ ಧನಸಹಾಯ ಮಾಡಿರುವವರು ಬೆಂಗಳೂರಿನ ಶ್ರೀಮಂತ ಜಿ. ವಿ. ರುದ್ರಪ್ಪ ನವರು ಮತ್ತು ಅವರ ಸೋದರ ಶ್ರೀ ಜಿ. ವಿ. ಚನ್ನಬಸಪ್ಪನವರು.

ಸಂದೇಶ :— ಸಮ್ಮೇಳನದ ಕೊನೆಯ ದಿನ ಸಂಸ್ಥಾಪಕ ಶ್ರೀಗಳು ಕೊಟ್ಟ ಸಂದೇಶದಲ್ಲಿ ಈ ಭಾಗದಲ್ಲಿ ಒಂದು ಹೈಸ್ಕೂಲು ಮತ್ತೂ ಪ್ರಸಾದ ನಿಲಯವನ್ನು ಸ್ಥಾಪಿಸಲು ಸರ್ವರೂ ಶ್ರಮಿಸಬೇಕೆಂದು ಅಪ್ಪಣೆಕೊಡಿಸಿದರು.

## ನಂದನನಾಮ ಸಂವತ್ಸರ

### ನಾಲ್ಕನೆಯ ಸಮ್ಮೇಳನ

ಮಾಘ ಬಹುಳ ೫. ೬ ಮತ್ತು ೭ (ದಿನಾಂಕ ೪-೨-೫೩ರಿಂದ ೬-೨-೫೩)

ಶ್ರೀಗಳು :—ಶ್ರೀ ನಿ.ಪ್ರ. ಸಿದ್ಧಲಿಂಗಸ್ವಾಮಿಗಳವರು, ರಾವೂರು, ಗುಲ್ಬುರ್ಗಾ ಜಿಲ್ಲೆ; ಶ್ರೀ ನಿ. ಪ್ರ. ಸಂಗನ ಬಸವಸ್ವಾಮಿಗಳು, ಹಾಸನ-ಇವರಿಬ್ಬರ ಉಪದೇಶಾವ ಕಾಶ ಈ ಬಾರಿ ಜನತೆಗೊದಗಿತ್ತು.

ಉಪನ್ಯಾಸಕರು :— ಪ್ರೊ॥ ಎಸ್. ಎಸ್. ಎಸ್. ಭೂಸನೂರಮಠ, ಎಂ.ಎ., ಲಿಂಗರಾಜ ಕಾಲೇಜ್, ಬೆಳಗಾಂ. ಮತ್ತು ಶ್ರೀ ಜೋಳದರಾಶಿ ದೊಡ್ಡನಗೌಡರು,

ಸಂಗೀತ :— ಸಂಗೀತ ಸುಧಾಕರ, ರೇಡಿಯೋ ಸ್ಟಾರ್, ಶ್ರೀ ಬಸವರಾಜ ರಾಜಗುರು.

ನಾಟ್ಯ :— ಭೃಂಗಿ ನಾಟ್ಯವಿಶಾರದ ಶ್ರೀ ಸೊಲಭಪ್ಪ ರುದ್ರಪ್ಪ ಚಂಗೇರಿ, ಹುಬ್ಬಳ್ಳಿ.

ನಾಟಕ :— "ಶ್ರೀ ಸಿದ್ಧರಾಮೇಶ್ವರ"-ಗೊಂಡೇದಹಳ್ಳಿ ತರುಣರ ಸಂಘದ ಕಲಾವಿದರಿಂದ.

ನಾಲ್ಕನೆಯ ಸಮ್ಮೇಳನ ಪೂರ್ಣ ನಾದ, ನಾಟ್ಯ, ನಾಟಕಗಳ ಪೂರ್ಣ ಪರಿಚಯವನ್ನು ಸಭಿಕರಿಗೆ ಮಾಡಿಕೊಟ್ಟಿತಲ್ಲದೆ ನಾದ, ನಾಟ್ಯ, ನಾಟಕಗಳನ್ನು ಹೇಗೆ ಭಕ್ತಿಗೆ ಬಳಸಿಕೊಳ್ಳಬಹುದೆಂಬುದನ್ನು ತೋರಿಸಿಕೊಟ್ಟಿತು.

ಗ್ರಂಥೋದ್ಘಾಟನೆ :— ಶ್ರೀ ಷ. ಬ್ರ. ಶ್ರೀ ಸದಾಶಿವ ಶಿವಾಚಾರ್ಯ ಕೃತ "ಭಕ್ತಿಗೀತೆಗಳು" ಗ್ರಂಥದ ಉದ್ಘಾಟನೆಯು ಶ್ರೀ ಎಸ್. ಎಸ್. ಭೂಸನೂರ್‌ಮಠ. ಅವರಿಂದ ನಡೆಯಿತು. ಈ ಗ್ರಂಥ ಪ್ರಕಾಶನಕ್ಕೆ ನೆರವಾಗಿರುವವರು ಸಮಿತಿಯ ಅಧ್ಯಕ್ಷರಾಗಿರುವ ಅಜ್ಜಂಪುರದ ಶ್ರೀ ಶೆಟ್ರ ಸಿದ್ದಪ್ಪನವರು.

## ವಿಜಯನಾಮ ಸಂವತ್ಸರ

### ಐದನೆಯ ಸಮ್ಮೇಳನ

ಮಾಘ ಬಹುಳ ೫, ೬ ಮತ್ತು ೭ (ದಿನಾಂಕ ೨೩-೨-೫೪ರಿಂದ ೨೫-೨-೫೪)

ಶ್ರೀಗಳು :— ಶ್ರೀ ನಿ. ಪ್ರ. ಬಸವರಾಜ ಸ್ವಾಮಿಗಳು, ಬಿ. ಮಲ್ಲೇನಹಳ್ಳಿ.

ಉಪನ್ಯಾಸಕರು :— ಶ್ರೀ ಬ.ಕ. ಮಾಸ್ತರ, ಗದಗ ಮತ್ತು ಶ್ರೀ ಕರೀಂಖಾನ್, ಸಕಲೇಶಪುರ. ಐದನೇ ವರ್ಷದ ಸಮ್ಮೇಳನ ವೀರಶೈವರ ಐದು ಆಚಾರಗಳ (ಪಂಚಾಚಾರ) ಸಂಕೇತವೆಂದು ಹೇಳಿದ ಶ್ರೀ ಬ.ಕ. ಮಾಸ್ತರರ ಉಪನ್ಯಾಸ ಈ ಬಾರಿಯ ವಿಶೇಷವೆಂದೇ ಹೇಳಬೇಕು.

ಕೀರ್ತನ :— ಶ್ರೀ ತಮ್ಮಣ್ಣಾಚಾರ್, ಸ್ಪೇರ್ಷ ಮಾಸ್ತರ ಅಜ್ಜಂಪುರ.

ಗ್ರಂಥೋದ್ಘಾಟನೆ :— ಶ್ರೀ ಸೂರ್ಯ ಸಿಂಹಾಸನಾಧೀಶ್ವರ ಜ. ಚ. ನಿ. ಕೃತ "ಅಷ್ಟಾವರಣ" ಎಂಬ ಕೃತಿಯ ಉದ್ಘಾಟನೆಯನ್ನು ಸಮಿತಿಯ ಪೋಷಕ ಶ್ರೀಗಳು ನಡೆಸಿದರು. ಈ ಕೃತಿ ಪ್ರಕಾಶನಕ್ಕೆ ಆಶ್ರಯವಿತ್ತಿರುವವರು ಚಿಕ್ಕಮಗಳೂರಿನ ಕಾಫಿ ಪ್ಲಾಂಟರ್, ಶ್ರೀ ಟಿ. ಸಿ. ಮಂಜಪ್ಪಶೆಟ್ಟರು.

## ಜಯನಾಮ ಸಂವತ್ಸರ

### ಆರನೆಯ ಸಮ್ಮೇಳನ

ಮಾಘ ಬಹುಳ ೫, ೬ ಮತ್ತು ೭ (ದಿನಾಂಕ ೧೩-೨-೫೫ರಿಂದ ೧೪-೨-೫೫)

ಶ್ರೀಗಳು :— ಶ್ರೀ ವೀರಸಿಂಹಾಸನಾಧೀಶ್ವರ ಜಗದ್ಗುರು ಶಿವರಾತ್ರಿ ರಾಜೇಂದ್ರ

ಸ್ವಾಮಿಗಳವರು, ಸುತ್ತೂರು ಮತ್ತು ಘ. ಲಿಂ. ಚ. ಘನಲಿಂಗ ಶಿವಾಚಾರ್ಯರು ದೊಡ್ಡಮಠ, ಕಂಚುಗಲ್, ಬಿದರೆ.

ಉಪನ್ಯಾಸಕರು :— ಲೋಕ ಸಭಾಸದಸ್ಯ ಶ್ರೀ ಎಂ. ಎಸ್. ಗುರುಪಾದ ಸ್ವಾಮಿ, ಎಂ.ಎ., ಎಲ್‌ಎಲ್.ಬಿ., 'ಆದರ್ಶ' ಪತ್ರಿಕೆ ಸಂಪಾದಕ ಶ್ರೀ ಹೆಚ್. ಗಂಗಾಧರನ್, ಬಿ.ಎ. ಮತ್ತು ಶ್ರೀಮತಿ ಪಾರ್ವತಿಬಾಯಿ ಹುಂಬರವಾಡಿ, ಚಿಕ್ಕೋಡಿ, (ಬೆಳಗಾಂ ಜಿಲ್ಲೆ).

ಸಂಗೀತ :— ಶ್ರೀ ಶರಣಪ್ಪ ಗವಾಯಿಗಳು ಮತ್ತು ಶ್ರೀ ಜಿಂದೋಡಿ ವೀರಪ್ಪನವರು ದಾವಣಗೆರೆ.

ಗ್ರಂಥೋದ್ಘಾಟನೆ :— ಶ್ರೀ ಸೂರ್ಯ ಸಿಂಹಾಸನಾಧೀಶ್ವರ ಜ.ಚ.ನಿ. ಕೃತ "ಪಂಚಾಚಾರ" ಮತ್ತು "ಷಟ್ಸ್ಥಲ" ಎಂಬ ಎರಡು ಕೃತಿಗಳನ್ನು ಆಸ್ಥಾನ ವಿದ್ವಾನ್ ಶ್ರೀ. ಎಂ. ಜಿ. ನಂಡುಂಡಾರಾಧ್ಯರು ಉದ್ಘಾಟಿಸಿದರು. "ಪಂಚಾಚಾರ" ಕೃತಿಗೆ ಧನಸಹಾಯ ಮಾಡಿದವರು ಶ್ರೀ ಎಂ. ವೀರಯ್ಯನವರು, ಶಿರಾಪನಹಳ್ಳಿ.

ನಿರ್ಣಯಗಳು :— ಧಾರ್ಮಿಕ ಸಮ್ಮೇಳನವಾದರೂ ರಾಜಕೀಯ ಹಾಗೂ ಸಾಮಾಜಿಕ ವಿಷಯಗಳಿಗೆ ಸಂಬಂಧಪಟ್ಟ ಎರಡು ನಿರ್ಣಯಗಳನ್ನು ಈ ಸಾರಿ ಮಹಾಸಭೆ ಅಂಗೀಕರಿಸಿದ್ದೊಂದು ವೈಶಿಷ್ಟ್ಯವಾಗಿತ್ತು; ರಾಜಕೀಯ ಹಾಗೂ ಸಾಮಾಜಿಕ ಸುಧಾರಣೆಗಳು ಧರ್ಮದ ಹಿನ್ನೆಲೆಯನ್ನು ಪಡೆದಿರಬೇಕೆಂಬುದಕ್ಕೆ ಸಾಕ್ಷಿಯಾಗಿತ್ತು.

ಒಂದನೇ ನಿರ್ಣಯ :— "ಮೈಸೂರನ್ನೊಳಗೊಂಡ ಕರ್ಣಾಟಕ ಏಕೀಕರಣವು ಬೇಗನೆ ಆಗಬೇಕು" ಎಂದು ಮೈಸೂರು ವಿಧಾನಸಭಾ ಸದಸ್ಯ ಶ್ರೀ ವೈ.ಎಂ. ಚಂದ್ರಶೇಖರಯ್ಯನವರು ಮಂಡಿಸಿದ ನಿರ್ಣಯವನ್ನು ಚಿಕ್ಕಮಗಳೂರಿನ ಶ್ರೀ ಟಿ.ಸಿ. ಮಂಜಪ್ಪಶೆಟ್ಟರು ಅನುಮೋದಿಸಿದರು.

ಎರಡನೇ ನಿರ್ಣಯ :— "ವೀರಶೈವ ಅಂತರ್ಭೇದಗಳು ಹೋದಲ್ಲಿ ನಮ್ಮ ಸಮಾಜದ ಪ್ರಗತಿಯು ಸಾಧ್ಯ"–ಎಂದು ಸಮಿತಿಯ ಕಾರ್ಯದರ್ಶಿಗಳಾದ ಶ್ರೀ ಜಿ. ಕೆ. ಶಿವಲಿಂಗಪ್ಪನವರು ಮಂಡಿಸಿದ ವಿಷಯವನ್ನು ಗಿರಿಯಾಪುರದ ಪ್ರಮುಖರಾದ ಶ್ರೀ ಜಿ. ಎಸ್. ಶಾಂತವೀರಪ್ಪನವರೂ, ಬೀರೂರಿನ ಶ್ರೀ ಎಲ್. ನಾಗರಾಜ್, ಬಿ.ಎ. ಅವರೂ ಅನುಮೋದಿಸಿದರು.

ಎರಡು ನಿರ್ಣಯಗಳೂ ಸರ್ವಾನುಮತದಿಂದ ಅಂಗೀಕರಿಸಲ್ಪಟ್ಟವು. ಅದರಲ್ಲಿ ಒಂದನೇ ನಿರ್ಣಯ ತಾನು ರೂಪಗೊಂಡ ಕೇವಲ ಹತ್ತಾರು ತಿಂಗಳಲ್ಲೇ ಜಯಗಳಿಸಿತೆಂದು ತಿಳಿಸಲು ಸಂತೋಷವಾಗುತ್ತದೆ.

## ಮನ್ಮಥನಾಮ ಸಂವತ್ಸರ

### ಏಳನೆಯ ಸಮ್ಮೇಳನ

ಮಾಘ ಬಹುಳ ೫, ೬ ಮತ್ತು ೭ (1–3–56 ರಿಂದ 3–3–56)

ಆಗಮಿಸಿದ್ದ ಶ್ರೀಗಳು :—ನಿ. ಪ್ರ. ಶಿವಕುಮಾರ ಮಹಾಸ್ವಾಮಿಗಳವರು, ಸಿದ್ಧಗಂಗಾ; ಶ್ರೀ ನಿ. ಪ್ರ. ನೀಲಲೋಚನ ಮಹಾಸ್ವಾಮಿಗಳವರು, ಹಾರನಹಳ್ಳಿ; ಶ್ರೀ ವೀರಸಿಂಹಾಸನಾಧೀಶ್ವರ ಜಗುದ್ಗುರು ಪಟ್ಟದ ಶಿವರಾತ್ರಿ ಸ್ವಾಮಿಗಳವರು, ಸುತ್ತೂರು; ಶ್ರೀ ಶ್ರೀ ಬಸವಲಿಂಗಸ್ವಾಮಿಗಳು, ಚೊಳಚಗುಡ್ಡ ಮತ್ತು ಶ್ರೀ ಚನ್ನವೀರ ದೇಶಿಕರು, ಮೂಡಿ.

ಉಪನ್ಯಾಸಕರು :—ವಿಧಾನ ಸಭಾಸದಸ್ಯ ಅಂದಾನಪ್ಪ ಜ್ಞಾನಪ್ಪ ದೊಡ್ಡಮೇಟಿ, ಜಕ್ಕಲಿ; ಶ್ರೀ ಜಿ. ಎಸ್. ತಮ್ಮಯ್ಯನವರು, ತುಮಕೂರು; ಚಿಕ್ಕಮಗಳೂರು ಜಿಲ್ಲಾಧಿಕಾರಿಗಳಾದ ಶ್ರೀ ಎಂ. ಡಿ. ಶಿವನಂಜಪ್ಪ, ಐ. ಎ. ಎಸ್, ಮೈಸೂರು ಮರಿಮಲ್ಲಪ್ಪ ಹೈಸ್ಕೂಲ್ ಕನ್ನಡ ಪಂಡಿತ ಶ್ರೀ ಹೆಚ್. ಎಂ. ವೀರಭದ್ರಯ್ಯನವರು ಮತ್ತು ಶ್ರೀ ಕೆ. ಆರ್. ಲಿಂಗಪ್ಪನವರು ಅಡ್ವೊಕೇಟ್, ತರೀಕೆರೆ.

ಗ್ರಂಥೋದ್ಘಾಟನೆ :—ಮೋಟೆಕುರ್ಕೆ ಶ್ರೀ ಆರ್. ಸಿದ್ದಪ್ಪನವರಿಂದ ರಚಿತವಾಗಿ ಪ್ರಕಾಶಿಸಲ್ಪಟ್ಟ "ಪರಶಿವಲಿಂಗ ಸಾಕ್ಷಾತ್ಕಾರ" – ಎಂಬ ಪ್ರಕಟನೆಯನ್ನು ಗೊಂಡೇದಹಳ್ಳಿ ತರುಣರ ಸಂಘದ ಪ್ರಕಾಶನವಾದ "ಜೋಗದ ಝೋಕ್ ಮತ್ತು ಇತರ ಹಾಡುಗಳು" – ಎಂಬ ಜಾನಪದ ಗೀತೆಗಳ ಸಂಗ್ರಹದ ಹೊತ್ತಗೆಯನ್ನು ಮಹಾಪೋಷಕರಾದ ಶ್ರೀ ಸೂರ್ಯಸಿಂಹಾಸನಾಧೀಶ್ವರ ಶ್ರೀ ಜ. ಚ. ನಿ. ಸನ್ನಿಧಿಯವರು ಉದ್ಘಾಟಿಸಿದರು.

ಗೊಂಡೇದಹಳ್ಳಿ ತರುಣರ ಸಂಘದ ಈ ಪ್ರಕಾಶನಕ್ಕೆ ನೆರವಿತ್ತವರು ಅದೇ ಗ್ರಾಮದ ಶ್ರೀ ಕೊಟ್ಟೂರು ಬಸಪ್ಪ ಮತ್ತು ಸೋದರರು.

## ದುರ್ಮುಖನಾಮ ಸಂವತ್ಸರ

### ಎಂಟನೆಯ ಸಮ್ಮೇಳನ

ಮಾಘ ಬಹುಳ ೫, ೬ ಮತ್ತು ೭ (ದಿ :19–2–57 ರಿಂದ 21–2–57)

ಆರನೆಯ ಸಮ್ಮೇಳನದಲ್ಲಿ ಕೈಗೊಂಡ ನಿರ್ಣಯ ನಿಜವಾದ ವಿಶೇಷ ಸಂದರ್ಭ. ಕನ್ನಡನಾಡು ಒಂದುಗೂಡಿದ ಸಂತಸದ ಸನ್ನಿವೇಶ! ಸಮ್ಮೇಳನಕ್ಕೆ ಎಂದಿಗಿಂತ ಹೆಚ್ಚಾದ ಉತ್ಸಾಹದಿಂದ, ಹರ್ಷದಿಂದ ಕನ್ನಡನಾಡಿನ ಅನೇಕ ಕಡೆಗಳಿಂದ ಜನ ಸೇರಿದ್ದರು. ಸಮ್ಮೇಳನದ ಕಾರ್ಯಕಲಾಪಗಳಲ್ಲಿ, ಅವರ್ಣನೀಯ ಉಲ್ಲಾಸ ತುಂಬಿತ್ತು.

ಶ್ರೀಗಳು :—ವೇದಾಂತ ವಿದ್ವಾರ್ ಶ್ರೀ ಶಾಂತಕುಮಾರ ಸ್ವಾಮಿಗಳವರು, ಶಂಕರದೇವರ ಮಠ, ಬೆಂಗಳೂರು; ನೀಲಗಿರಿ ಶ್ರೀ ಷ. ಬ್ರ. ಬಸವಪ್ಪ ಸ್ವಾಮಿಗಳು, ವೀರಸಿಂಹಾಸನ ಮಠ, ಸೋಮಹಳ್ಳಿ; ಶ್ರೀ ಶಿವಪ್ರಕಾಶ ಸ್ವಾಮಿಗಳು, ಉಜ್ಜಯಿನಿ ಮಠ, ಚಿತ್ರದುರ್ಗ ಮತ್ತು ಶ್ರೀ ಚಂದ್ರಶೇಖರ ದೇಶಿಕರು ಗಿರಿಯಾಪುರ.

ಉಪನ್ಯಾಸಕರು :—ಶ್ರೀ ಚನ್ನವೀರ ಕಣವಿ, ಎಂ.ಎ., ಕರ್ಣಾಟಕ ವಿಶ್ವ ವಿದ್ಯಾಲಯ, ಧಾರವಾಡ; ಶ್ರೀಮತಿ ಗುರುತಾಯಿ ಪಾಟೀಲ, ಬಿಜಾಪುರ ಮತ್ತು ಲೋಕಸಭಾ ಸದಸ್ಯ ಶ್ರೀ ಸಿ. ಆರ್. ಬಸಪ್ಪನವರು.

ಸಂಗೀತ :—ಸಂಗೀತ ವಿದುಷಿ ಜಿ. ಚನ್ನಮ್ಮ, ಬೆಂಗಳೂರು.

## ಹೇವಿಳಂಬಿ ಸಂವತ್ಸರ

### ಒಂಬತ್ತನೇ ಸಮ್ಮೇಳನ

ಮಾಘ ಬಹುಳ ಶ್ರೀ ೫ ಮತ್ತು ೭ (ದಿನಾಂಕ : 8-2-58 ರಿಂದ 10-2-58)

ಶ್ರೀಗಳು :—ಸೊಲ್ಲಾಪುರ ಕಿರೀಟ ಮಠದ ಶ್ರೀ ಶ್ರೀ ಬಸಪ್ಪಸ್ವಾಮಿಗಳು, ಬೆಳಕವಾಡಿ; ಶ್ರೀ ಪಟ್ಟದಾರ್ಯರು ಬಾಗಲಕೋಟೆ.

ಸಂಗೀತ :—ಶ್ರೀಕಂಠಾಚಾರ್ಯರು, ಬೆಂಗಳೂರು.

ಈ ಸಾರಿ ಆಹ್ವಾನಿತ ಅತಿಥಿಗಳನೇಕರು ಬಾರದೇ ಹೋದರೂ ಸ್ಥಳೀಯ ಉಪನ್ಯಾಸಕರು ಆ ಕೊರತೆಯನ್ನು ತುಂಬಿದರು. ಶ್ರೀ ಶ್ರೀ ಮುಘೋಳ ಮೃತ್ಯುಂಜಯ ಮಹಾಸ್ವಾಮಿಗಳವರು ಇಡೀ ಸಮ್ಮೇಳನವನ್ನೇ ತಮ್ಮ ಅಮೋಘ ಪ್ರವಚನದಿಂದ ಬೆಳಗಿಸಿದರು.

## ವಿಳಂಬಿನಾಮ ಸಂವತ್ಸರ

### ಹತ್ತನೆಯ ಸಮ್ಮೇಳನ

ಮಾಘ ಬಹುಳ ಶ್ರೀ ೬ ಮತ್ತು ೭ (ದಿನಾಂಕ 27-2-59 ರಿಂದ 1-3-59)

ಶ್ರೀಗಳು :—ಶೂನ್ಯಸಿಂಹಾಸನಾಧೀಶ್ವರ ಶ್ರೀಮನ್ ಮಹಾರಾಜ ನಿರಂಜನ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು, ಮೂರು ಸಾವಿರ ಮಠ, ಹುಬ್ಬಳ್ಳಿ ಮತ್ತು ಶ್ರೀ ನಿ. ಪ್ರ. ವಿಜಯ ಮಹಾಂತ ಸ್ವಾಮಿಗಳವರು, ಇಲಕಲ್ಲು.

ಉಪನ್ಯಾಸಕರು :—ಶ್ರೀ ಎ. ಸಿ. ದೇವೇಗೌಡರು, ಮೈಸೂರು ವಿದ್ಯಾ ಇಲಾಖೆ ಡೈರೆಕ್ಟರು; ಶ್ರೀ ಸುಬುದ್ಧಿ ಸ್ವಾಮಿ ಹಿರೇಮಠ ಮತ್ತು ಚಿಕ್ಕಮಗಳೂರು ಜಿಲ್ಲಾ ವಿದ್ಯಾರ್ಥಿಗಳಾದ ಶ್ರೀ ಪ್ರಭುಲಿಂಗಪ್ಪ ಅಮೃತೇಶ್ವರ ಗುಡಿಸಾಗರ್.

ಕೀರ್ತನ :—ಶ್ರೀ ಶಿವಯೋಗಿ ಶಾಸ್ತ್ರಿಗಳು, ದೇವಗಿರಿ

ಸಂಗೀತ :—ಪಿಟೀಲುವಾದನ ಪ್ರವೀಣ ಶ್ರೀ ಗೋವಿಂದರಾವ್, ಕೋಲಾರ

ಈ ಬಾರಿ ಸಮಿತಿಯು ಶ್ರೀ ಬ. ಕ. ಮಾಸ್ತರರಿಗೆ "ಶಿವಾದ್ವೈತ ತತ್ತ್ವಭೂಷಣ" ಎಂಬ ಪ್ರಶಸ್ತಿಯನ್ನು ಕೊಟ್ಟು ಗೌರವಿಸಿತು.

## ವಿಕಾರಿನಾಮ ಸಂವತ್ಸರ

### ಹನ್ನೊಂದನೆಯ ಸಮ್ಮೇಳನ

ಮಾಘ ಬಹುಳ ೫, ೬ ಮತ್ತು ೭ (ದಿನಾಂಕ 17-2-60ರಿಂದ 19-2-60)

ಶ್ರೀಗಳು :— ಶ್ರೀ ಶ್ರೀ ಬಸವಾನಂದ ಸ್ವಾಮಿಗಳು, ಶಿವನಿ.

ಉಪನ್ಯಾಸಕರು :—ಧಾರವಾಡದ 'ಅಂಕುಶ' ಪತ್ರಿಕೆ ಸಂಪಾದಕರಾದ ಶ್ರೀ ಗ. ಶಿ. ಹುರುಳಿ; ತಾರಾ ಗ್ರಂಥ ಪ್ರಕಾಶನದ ಸಂಪಾದಕರಾದ ಶ್ರೀ ಪಂಚಾಕ್ಷರಿ ಹಿರೇಮಠ ಮತ್ತು ಶ್ರೀಮರ್ತಿ ವೈ. ವೈ. ಯಡ್ರಾಮಿಯವರು.

ಗ್ರಂಥೋದ್ಘಾಟನೆ :—ಷ. ಬ್ರ. ಶ್ರೀ ಸದಾಶಿವ ಶಿವಾಚಾರ್ಯ ಕೃತ "ಅನುಗ್ರಹ" ಎಂಬ ಗ್ರಂಥವನ್ನು ಶ್ರೀ ಸೂರ್ಯ ಸಿಂಹಾಸನಾಧೀಶ್ವರ ಜ.ಚ.ನಿ. ಸನ್ನಿಧಿಯವರೂ, ಶ್ರೀ ಜ.ಚ.ನಿ. ವಿರಚಿತ "ಹೂ ಬೊಗಸೆ" (ಶಿವಯೋಗ ಮಂದಿರದ ಸುವರ್ಣ ಮಹೋತ್ಸವ ಸಂದರ್ಭದ ಸವಿನೆನಪಿನ ಅರ್ಪಣೆ) ಎಂಬ ಕವನ ಸಂಗ್ರಹವನ್ನು ಶ್ರೀ ಗ.ಶಿ. ಹುರುಳಿಯವರೂ ಉದ್ಘಾಟಿಸಿದರು.

'ಅನುಗ್ರಹ' ಗ್ರಂಥ ಪ್ರಕಾಶನಕ್ಕೆ ಆಶ್ರಯವಿತ್ತವರು ಸಮಿತಿಯ ಕೋಶಾಧ್ಯಕ್ಷರಾದ ಶ್ರೀ ಜಿ.ಸಿ. ಶಿವರುದ್ರಪ್ಪನವರು, ಗಿರಿಯಾಪುರ

ಹನ್ನೊಂದನೆಯ ಸಮ್ಮೇಳನದಲ್ಲಿ ಅಪೂರ್ವವಾದ ಎರಡು ವಿಶೇಷ ಕಾರ್ಯಕ್ರಮಗಳು ಜರುಗಿದವು. ಅದರಲ್ಲಿ ಪ್ರಥಮವಾಗಿ ನಡೆದ ಏಕಾದಶ ಮಂಟಪ ಪೂಜೆಯೊಂದು ಮತ್ತೊಂದು ದ್ವಾದಶಮಹೋತ್ಸವ ಗ್ರಂಥ ಪ್ರಕಟನಾ ಶಾಖೆಯ ರಚನೆ. ಸಮ್ಮೇಳನದ ಕೊನೆಯದಿನ ಗ್ರಂಥ ಪ್ರಕಟನೆಯ ವಿಷಯಕ್ಕೆ ಸರ್ವಾನುಮತ ಸ್ವಾಗತ ದೊರೆಯಿತು. ಸಭೆಯಲ್ಲೇ ಸಹಸ್ರಾರು ರೂಪಾಯಿಗಳ ವಾಗ್ದಾನವೂ ಆಯಿತು. ಕಳೆದ ವರ್ಷ ಕೈಗೊಂಡ ಠರಾವಿನ ಇದೀಗ ಕೃತಿಗಿಳಿದಿದೆ.

## ಕಳೆದ ಹನ್ನೊಂದನೆಯ ಸಮ್ಮೇಳನಗಳ ಅಧ್ಯಕ್ಷರು, ಉದ್ಘಾಟಕರು

### ಒಂದನೆಯ ಸಮ್ಮೇಳನ

೧೯೫೦

ಉದ್ಘಾಟನೆ :—ಶ್ರೀ ಗಿರಿರಾಜ ಮಣಿಖಚಿತ ಕನಕ ಸೂರ್ಯ ಸಿಂಹಾಸನಾಧೀಶ್ವರ ಶ್ರೀ ಮನ್ನಿಡುಮಾಮಿಡಿ ಶ್ರೀಶೈಲ ಜ. ಪ. ಚನ್ನಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳವರು, ಗೂಳೂರು.

ಅಧ್ಯಕ್ಷತೆ :—ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ದ್ವಿತಿಯ ಮುರುಘ ರಾಜೇಂದ್ರ ಸಚ್ಚಿದಾನಂದ ಮಹಾಸ್ವಾಮಿಗಳವರು, ಶ್ರೀ ಮುರುಘಾ ಮಠ, ಆನಂದಾಪುರ.

## ಎರಡನೆಯ ಸಮ್ಮೇಳನ

೧೯೫೧

ಉದ್ಘಾಟನೆ :—ಶ್ರೀ ಷ.ಬ್ರಂ.ಶ್ರೀ. ಸದಾಶಿವ ಶಿವಾಚಾರ್ಯ ಸ್ವಾಮಿಗಳವರು, ಶ್ರೀಗುರು ಕುಮಾರಾಶ್ರಮ

ಅಧ್ಯಕ್ಷತೆ :-ಶ್ರೀ ಸೂರ್ಯ ಸಿಂಹಾಸನಾಧೀಶ್ವರ ಜ.ಚ.ನಿ.ಸನ್ನಿಧಿ, ಗೂಳೂರು.

## ಮೂರನೆಯ ಸಮ್ಮೇಳನ

೧೯೫೨

ಉದ್ಘಾಟನೆ:—ಶ್ರೀ ನಿ.ಪ್ರ. ಶಿವಲಿಂಗಸ್ವಾಮಿಗಳವರು ಹುಕ್ಕೇರಿಮಠ ಹಾವೇರಿ.

ಅಧ್ಯಕ್ಷತೆ:—ಶ್ರೀ ಶ್ರೀ ಸೂರ್ಯಸಿಂಹಾಸನಾಧೀಶ್ವರ ಜ.ಚ.ನಿ. ಸನ್ನಿಧಿಯವರು, ಶ್ರೀ.ನಿ.ಪ್ರ. ಶಿವಲಿಂಗ ಮಹಾಸ್ವಾಮಿಗಳವರು, ಹುಕ್ಕೇರಿ ಮಠ, ಹಾವೇರಿ.

## ನಾಲ್ಕನೆಯ ಸಮ್ಮೇಳನ

೧೯೫೩

ಉದ್ಘಾಟನೆ :—ಶ್ರೀ ನಿ.ಪ್ರ. ಸಿದ್ಧಬಸವ ಸ್ವಾಮಿಗಳವರು. ಬೂದಾಳು ಮಠ. ದೊಡ್ಡಮೇಟಿಕುರ್ಕೆ.

ಅಧ್ಯಕ್ಷತೆ :—ಶ್ರೀ ಶ್ರೀ ಷ. ಬ್ರ. ಶ್ರೀ ಸದಾಶಿವ ಶಿವಾಚಾರ್ಯ ಮಹಾಸ್ವಾಮಿಗಳವರು, ಶ್ರೀ ನಿ.ಪ್ರ. ಸಿದ್ಧಬಸವ ಸ್ವಾಮಿಗಳವರು, ಬೂದಾಳ ಮಠ, ದೊಡ್ಡಮೇಟಿಕುರ್ಕಿ.

ಶ್ರೀ.ಜಿ.ಎ. ಶಾಂತವೀರಪ್ಪನವರು, ಗಿರಿಯಾಪುರ.

## ಐದನೆಯ ಸಮ್ಮೇಳನ

೧೯೫೪

ಉದ್ಘಾಟನೆ:—ಶ್ರೀ ಸೂರ್ಯಸಿಂಹಾಸನಾಧೀಶ್ವರ. ಜ.ಚ.ನಿ. ಸನ್ನಿಧಿಯವರು

ಅಧ್ಯಕ್ಷತೆ :—ಶ್ರೀ ಮನ್ನಿರಂಜನ ಜಗದ್ಗುರು ಸಚ್ಚಿದಾನಂದ ಸ್ವಾಮಿಗಳವರು. ಆನಂದಾಪುರ.

ಶ್ರೀ ಸೂರ್ಯ ಸಿಂಹಾಸನಾಧೀಶ್ವರ ಜ.ಚ.ನಿ.ಸನ್ನಿಧಿಯವರು.

## ಆರನೆಯ ಸಮ್ಮೇಳನ

೧೯೫೫

ಉದ್ಘಾಟನೆ :—ಶ್ರೀ ಜಿ. ಪರಮಶಿವಯ್ಯನವರು, ನಿವೃತ್ತ ಹೈಕೋರ್ಟ್ ಶ್ರೇಷ್ಠ ನ್ಯಾಯಾಧೀಶರು, ಬೆಂಗಳೂರು.

ಶ್ರೀ ಸೂರ್ಯ ಸಿಂಹಾಸನಾಧೀಶ್ವರ ಜ.ಚ.ನಿ. ಸನ್ನಿಧಿಯವರು.

## ಏಳನೆಯ ಸಮ್ಮೇಳನ

೧೯೫೬

ಉದ್ಘಾಟನೆ :—ಶ್ರೀ ಎಸ್. ನಿಜಲಿಂಗಪ್ಪನವರು, ಲೋಕಸಭಾ ಸದಸ್ಯರು, ಚಿತ್ರದುರ್ಗ.

ಅಧ್ಯಕ್ಷತೆ :—ಶ್ರೀ.ನಿ.ಪ್ರ. ಶಿವಕುಮಾರ ಮಹಾಸ್ವಾಮಿಗಳವರು. ಸಿದ್ಧ ಗಂಗಾಕ್ಷೇತ್ರ.

ಸೂರ್ಯ ಸಿಂಹಾಸನಾಧೀಶ್ವರ ಶ್ರೀ.ಜ.ಚ.ನಿ. ಸನ್ನಿಧಿಯವರು.
ಸೂತ್ತೂರು ವೀರಸಿಂಹಾಸನಾಧೀಶ್ವರ ಜಗದ್ಗುರು ಪಟ್ಟದ ಶಿವ ರಾಮೇಶ್ವರ ಮಹಾಸ್ವಾಮಿಗಳವರು.

## ಎಂಟನೆಯ ಸಮ್ಮೇಳನ

೧೯೫೭

ಅಧ್ಯಕ್ಷತೆ :—ಷ. ಬ್ರ. ಶ್ರೀ ಸದಾಶಿವ ಶಿವಾಚಾರ್ಯ ಸ್ವಾಮಿಗಳವರು. ಶ್ರೀ ಗುರು ಕುಮಾರಾಶ್ರಮ.

ಶ್ರೀ ಶಾಂತಕುಮಾರ ಸ್ವಾಮಿಗಳವರು, ಶಂಕರದೇವರ ಮಠ, ಬೆಂಗಳೂರು.

ಶ್ರೀ ಸೂರ್ಯಸಿಂಹಾಸನಾಧೀಶ್ವರ ಶ್ರೀ ಜ.ಚ.ನಿ. ಸನ್ನಿಧಿಯವರು.

## ಒಂಭತ್ತನೆಯ ಸಮ್ಮೇಳನ

೧೯೫೮

ಉದ್ಘಾಟನೆ :—ಶ್ರೀ.ನಿ.ಪ್ರ. ಮೃತ್ಯುಂಜಯ ಮಹಾಸ್ವಾಮಿಗಳು, ಕಿರೀಟ ಮಠ, ಸೊಲ್ಲಾಪುರ.

ಅಧ್ಯಕ್ಷತೆ :—ಶ್ರೀ ಸೂರ್ಯ ಸಿಂಹಾಸನಾಧೀಶ್ವರ ಶ್ರೀ ಜ.ಚ.ನಿ. ಸನ್ನಿಧಿಯವರು.
ಶ್ರೀ.ನಿ.ಪ್ರ. ಮೃತ್ಯುಂಜಯ ಮಹಾಸ್ವಾಮಿಗಳವರು. ಕಿರೀಟ ಮಠ. ಸೊಲ್ಲಾಪುರ.

## ಹತ್ತನೆಯ ಸಮ್ಮೇಳನ

೧೯೫೯

ಅಧ್ಯಕ್ಷತೆ :—ಶ್ರೀ.ಎ.ಸಿ. ದೇವೇಗೌಡ. ಎಂ.ಎ., ಎಂ.ಎಡ್., ಡಿಫ್ ಎಡ್ (ಕೊಲಂಬಿಯ) ಮೈಸೂರು ದೇಶದ ವಿದ್ಯಾಭ್ಯಾಸದ ಮುಖ್ಯಾಧಿಕಾರಿಗಳು ಬೆಂಗಳೂರು.

ಅಧ್ಯಕ್ಷತೆ :—ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು, ಮೂರು ಸಾವಿರ ಮಠ, ಹುಬ್ಬಳ್ಳಿ.

ಶ್ರೀ. ಸೂರ್ಯ ಸಿಂಹಾಸನಾಧೀಶ್ವರ ಜ.ಚ.ನಿ. ಸನ್ನಿಧಿಯವರು.

## ಹನ್ನೊಂದನೆಯ ಸಮ್ಮೇಳನ

೧೯೬೦

ಉದ್ಘಾಟನೆ:—ಶ್ರೀ ಸೂರ್ಯ ಸಿಂಹಾಸನಾಧೀಶ್ವರ ಜ.ಚ.ನಿ. ಸನ್ನಿಧಿಯವರು.

ಅಧ್ಯಕ್ಷತೆ :—ಸುಪ್ರಸಿದ್ಧ ಕೋಕೋನಟ್ ಪ್ಲಾಂಟರ್ ಎ. ಸಿ. ಚಂದ್ರೇಗೌಡರು, ಉಳುಗೆರೆ ಎಸ್ಟೇಟ್.

ಮೈಸೂರು ದೇಶದ ಗೃಹ ಕೈಗಾರಿಕಾ ಉಪಸಚಿವ ಶ್ರೀಮತಿ ಲೀಲಾವತಿ ವಿ. ಮಾಗಡಿ.

## ಶಾರ್ವರಿನಾಮ ಸಂವತ್ಸರ

### ದ್ವಾದಶ ಮಹೋತ್ಸವ

ಧರ್ಮಾಭಿಮಾನಿಗಳ ಸಂಪೂರ್ಣ ಸಹಾನುಭೂತಿ ಸಹಕಾರಗಳಿಂದ ಕಳೆದ ಹನ್ನೊಂದು ವರ್ಷಗಳಿಂದ ಅಖಂಡವಾಗಿ ಸಮಿತಿಯು ಶಿವಾದ್ವೈತ ತತ್ತ್ವ ಪ್ರಚಾರ ಕಾರ್ಯ ನಡೆಸುತ್ತ ಬಂದಿದೆ. ತಾನು ನಡೆದ ಬಂದ ದಾರಿಯಲ್ಲಿ ಎಡರುಗಳೂ ಬಾರದಿರಲಿಲ್ಲ. ಆದರೆ ಅವೆಲ್ಲ ಗುರುಕೃಪೆಯಿಂದ ನಿವಾರಣೆಯಾದುವು. ಒಟ್ಟಾರೆ ಸಮಿತಿಯು ಸುಪಥವಲ್ಲಿ ಸಾಗಿ ಬಂದುದರಿಂದ ಸುಲಲಿತವಾಗಿಯೇ ಸೇವೆ ಸಲ್ಲಿಸುತ್ತ ಬಂದಿದೆಯೆಂದು ಹೇಳಬಹುದು. ಅದಕ್ಕೆ ಸಾಕ್ಷಿಯಾಗಿದೆ ಇದೀಗ ಆಚರಿಸುತ್ತಿರುವ ದ್ವಾದಶ ಮಹೋತ್ಸವ ಹಾಗು ಸಂಸ್ಥಾಪಕರ ಷಷ್ಟ್ಯಬ್ದ ಮಹೋತ್ಸವ.

## ಕೃತಜ್ಞತೆಗಳು

ಸಮಿತಿಯ ಸರ್ವ ಸೇವಾಕಾರ್ಯದಲ್ಲೂ ಸಂಪೂರ್ಣ ಸಹಕಾರವಿತ್ತವರು ಸಹಸ್ರಾರು ಜನ. ಅದರಲ್ಲೂ ಗಿರಿಯಾಪುರದ ಗೆಳೆಯರ ಬಳಗ, ಮಲ್ಲಿಕಾಂಬಾ ಮಂಡಳಿ, ಗೊಂಡೇದಹಳ್ಳಿ ತರುಣರ ಸಂಘ, ಗಿರಿಯಾಪುರದ ಮಾಧ್ಯಮಿಕ ಶಾಲಾ, ಭಾರತ ಸೇವಾದಳ ಮತ್ತು ಹಿರೇನಲ್ಲೂರು ರೈತ ಸೇವಾ ಸಂಘ ಈ ಸಂಸ್ಥೆಗಳ ಪಾತ್ರ

# ಸಮ್ಮೇಳನಾಧ್ಯಕ್ಷರು

೧೯೫೯



ಶ್ರೀ ಎ. ಸಿ. ದೇವೇಗೌಡರು, ಎಂ. ಎ., ಕೊಲಂಬೋ

B.T., M.Ed. Leeds. Dip. Edn.

[illegible] ಇಲಾಖೆಯ ನಿರ್ದೇಶಕರು

೧೯೫೬



ಶ್ರೀ ಎಸ್. ನಿಜಲಿಂಗಪ್ಪ. ಬಿ.ಎ., ಎಲ್‌ಎಲ್.ಬಿ.

ಲೋಕ ಸಭಾ ಸದಸ್ಯರು



ಮಧ್ಯ ವಯಸ್ಸಿನಲ್ಲಿ
ಷ|| ಬ್ರ|| ಶ್ರೀ ಸದಾಶಿವ ಶಿವಾಚಾರ್ಯರು



ಶ್ರೀ ಸಿ. ಆರ್. ಸದಾಶಿವಶಾಸ್ತ್ರಿಗಳು
ಪುರೋಹಿತ್
ಚಿಕ್ಕಮಗಳೂರು.



ಆಶ್ರಮಕ್ಕೆ ಭೂದಾನ ಮಾಡಿರುವ
ಶ್ರೀ ಬಾವಿಮನೆ ನಂಜಪ್ಪನವರು
ಗಿರಿಯಾಪುರ

ಅಷ್ಟಿಷ್ಟಲ್ಲ. ಗಿರಿಯಾಪುರದ ಗ್ರಾಮಸ್ಥರಂತೂ ಅಸಾಧಾರಣ ಸಹಕಾರ ಕೊಟ್ಟಿದ್ದಾರೆ. ಅವರೆಲ್ಲರಿಗೂ ಈ ಸಂದರ್ಭದಲ್ಲಿ ಸಮಿತಿಯು ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತದೆ.

ಕಳೆದ ಹನ್ನೊಂದು ವರ್ಷದಿಂದಲೂ ಕಾರ್ಯ ಕಲಾಪಗಳಲ್ಲಿ ಸೂಕ್ತ ಸಲಹೆಗಳನ್ನೂ ನೆರವನ್ನೂ ನೀಡುತ್ತಾ ಬಂದಿರುವ ಗಿರಿಯಾಪುರದ ಶ್ರೀ ಜಿ. ಎಣ್. ರಾಜಶೇಖರಪ್ಪನವರು ಮತ್ತು ದೇವರ ಮನೆ ಜಿ. ಕೆ. ತಮ್ಮಯ್ಯನವರು ಮೊದಲಾದ ಗ್ರಾಮದ ಯಜಮಾನರುಗಳಿಗೂ, ಹೆಚ್ಚಾಗಿ ಕೋಶಾಧ್ಯಕ್ಷರ ಮತ್ತು ಕಾರ್ಯದರ್ಶಿ ಭುಜವಾಗಿ ಹಣದ ಜೋಪಾನ ಮತ್ತು ಲೆಖ್ಖಪತ್ರಗಳ ವಹಿವಾಟಿನಲ್ಲಿ ಎಲೆಯ ಮರೆಯ ಕಾಯಿಯಂತೆ ದುಡಿದಿರುವ ಶ್ರೀ. ಜಿ. ಬಿ. ಶಿವರುದ್ರಪ್ಪನವರು, ಇನ್ನೂ ಹೆಚ್ಚಿನದಾಗಿ ಸಮಿತಿಯ ಭಾಂಡ ಮೊದಲಾದ ವಸ್ತುಗಳ ವಹಿವಾಟಿನಲ್ಲಿರುವ ಶ್ರೀ.ಜಿ.ಜಿ. ನಂಜಯ್ಯನವರಿಗೂ ಸಮಿತಿಯ ತನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತದೆ.

ಕಳೆದ ಹನ್ನೊಂದು ವರ್ಷಗಳಿಂದಲೂ ಸ್ವಲ್ಪವೂ ಬೇಸರಿಸದೆ ಕನ್ನಡನಾಡಿನ ಧಾರ್ಮಿದ ಮಹಾಶಯರು ಸಮಿತಿಗೆ ಪ್ರತಿವರ್ಷವೂ ತಮ್ಮ ಪಾಲಿನ ವಂತಿಗೆಯನ್ನು ಸಲ್ಲಿಸುತ್ತ ಬಂದಿದ್ದಾರೆ. ಈ ವಂತಿಗೆಯನ್ನು ಸಂಗ್ರಹಿಸುವುದಕ್ಕೆ ಅನೇಕರು ಶ್ರಮಿಸಿದ್ದಾರೆ. ಕಾರ್ಯ ಸಣ್ಣದಲ್ಲ. ಸ್ವಲ್ಪ ಜನಗಳಿಂದ ಆಗತಕ್ಕುದಲ್ಲ. ಅಂತೇ ಸಮತಿಯ ಕಾರ್ಯಗಳಲ್ಲಿ ನೆರವಾದ ಸರ್ವರಿಗೂ ಮತ್ತೊಮ್ಮೆ ಕೃತಜ್ಞತೆ ಅರ್ಪಿಸಿ ಶುಭ ಕೋರುತ್ತದೆ ಸಮಿತಿ.

## ಅರಿಕೆ

ಕಡೆಯದಾಗಿ ಮಹಾಜನಗಳಲ್ಲಿ ಒಂದು ಅರಿಕೆ. ದ್ವಾದಶ ಮಹೋತ್ಸವವನ್ನು ಆಚರಿಸಿದ ಮಾತ್ರಕ್ಕೆ ಸಮಿತಿಯ ಸೇವೆ ಪೂರ್ಣವಾಗಲಿಲ್ಲ. ಈ ಹಿಂದೆ ನಡೆಸಿಕೊಂಡು ಬಂದಂತೆ ಮುಂದೆಯೂ ನಡೆಸಿಕೊಂಡು ಹೋಗಬೇಕೆಂಬುದೇ ಅದರ ಇಚ್ಛೆ. ಆದುದರಿಂದ ಸದ್ಧರ್ಮಾಭಿಮಾನಿಗಳು ಎಂದಿನಂತೆ ಸಹಾಯ ಸಹಕಾರಗಳನ್ನು ನೀಡುತ್ತಿರಬೇಕಾಗಿ ಪ್ರಾರ್ಥಿಸಲಾಗಿದೆ.

## ಕ್ಷಮೆ

ಸಮಿತಿಯು ತನ್ನ ಸೇವಾಕ್ಷೇತ್ರದಲ್ಲಿ ಕಾರ್ಯಗೌರವದಿಂದ ಯಾರಿಗಾದರೂ ಅರಿಯದೆ ನೋವುಂಟುಮಾಡಿದ್ದರೆ ಅಂತಹವರು ಔದಾರ್ಯದಿಂದ ಮನ್ನಿಸಬೇಕು. "ನಡೆವರೆಡಹದೆ ಕುಳಿತವರೆಡಹರು!" ಈ ಮಾತು ಎಲ್ಲರಿಗೂ ತಿಳಿದಿದೆಯಷ್ಟೆ. ದೃಷ್ಟಿ ದೊಡ್ಡದಾಗಬೇಕು. ಅಂತಾದರೆ ನೋವೆಲ್ಲ ನಲಿವಾಗುತ್ತದೆ.

## ಸ್ಥಾಯೀ ಸಮಿತಿ

**ಮಹಾಪೋಷಕರು—**

೧. ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು, ಮೂರು ಸಾವಿರ ಮಠ ಹುಬ್ಬಳ್ಳಿ.

೨. ಶ್ರೀಮನ್ನಿರಂಜನ ಜಗದ್ಗುರು ದ್ವಿತೀಯ ಮುರುಘರಾಜೇಂದ್ರ ಸಚ್ಚಿದಾನಂದ ಮಹಾಸ್ವಾಮಿಗಳವರು.

೩. ಶ್ರೀ ಜಗದ್ಗುರು ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರು, ವೀರ ಸಿಂಹಾಸನ, ಸುತ್ತೂರು.

೪. ಶ್ರೀ ಗಿರಿರಾಜ ಮಣಿಖಚಿತ ಕನಕಸೂರ್ಯ ಸಿಂಹಾಸನಾಧೀಶ್ವರ ಶ್ರೀಮನ್ನಿಡುಮಾಮುಡಿ ಶ್ರೀಶೈಲ ಜ. ಪ. ಚನ್ನಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳವರು, ಗೂಳೂರು, ಬಾಗೇಪಲ್ಲಿ ತಾಲ್ಲೂಕು.

**ಪೋಷಕರು—**

೧. ಷ. ಬ್ರ. ಶ್ರೀ ಸದಾಶಿವ ಶಿವಾಚಾರ್ಯ ಸ್ವಾಮಿಗಳವರು, ಶ್ರೀ ಗುರು ಕುಮಾರಾಶ್ರಮ, ಗಿರಿಯಾಪುರ.

೨. ಷ. ಬ್ರ. ಶ್ರೀ ವಿರೂಪಾಕ್ಷ ಶಿವಾಚಾರ್ಯ ಸ್ವಾಮಿಗಳವರು, ಹಿರೇಮಠ, ನೀಲಗುಂದ.

೩. ಷ. ಬ್ರ. ಶ್ರೀ ಬಸವಲಿಂಗ ಸ್ವಾಮಿಗಳವರು, ಶ್ರೀ ಗುರು ಹಾಲುಸ್ವಾಮಿ ಮಠ, ಹುಣಸಗಟ್ಟ.

ಅಧ್ಯಕ್ಷರು :—ಶ್ರೀ ಶೆಟ್ರು ಸಿದ್ದಪ್ಪ ಶಿವನಾಗಪ್ಪ ಜಮೀನ್ದಾರ್ ಮತ್ತು ವ್ಯಾಪಾರಿಗಳು, ಅಜ್ಜಂಪುರ.

ಉಪಾಧ್ಯಕ್ಷರು :—ಸಿ. ಎ. ನಾಗಪ್ಪನವರು ಜಮೀನ್ದಾರ್ ಚನ್ನಾಪುರ.

ಕೋಶಾಧ್ಯಕ್ಷರು :—ಜಿ. ಸಿ. ಶಿವರುದ್ರಪ್ಪನವರು ಜವಳಿ ವ್ಯಾಪಾರಿಗಳು ಗಿರಿಯಾಪುರ.

ಕಾರ್ಯದರ್ಶಿಗಳು :—ದೇವರಮನೆ ಜಿ. ಕೆ. ಶಿವಲಿಂಗಪ್ಪನವರು, ಜಮೀನ್ದಾರ್, ಗಿರಿಯಾಪುರ.

## ಸದಸ್ಯರು

ಶ್ರೀಗಳಾದ :—

೧ ಎರ್. ಸಿದ್ದಪ್ಪನವರು, ರಾಮಗಿರಿ, ಚಿತ್ರದುರ್ಗ ಡಿಸ್ಟ್ರಿಕ್ಟ್

೨ ಬಿ. ಜಿ. ರೇವಣಸಿದ್ದಪ್ಪನವರು, ಪಟೇಲ್, ದೊಡ್ಡಬಾತಿ, ಚಿತ್ರದುರ್ಗ ಡಿಸ್ಟ್ರಿಕ್ಟ್

೩ ದೊಡ್ಡಮನೆ ನಂಜಪ್ಪನವರು, ಸುಣ್ಣದಹಳ್ಳಿ ತರೀಕೆರೆ ತಾಲ್ಲೂಕು

೪ ಎಂ. ಎಸ್. ಸಿದ್ಧಪ್ಪನವರು, ಮರವಂಜಿ

೫ ಎಂ. ಎಸ್. ರೇವಣ್ಣನವರು, ಮರವಂಜಿ
೬ ವೇ॥ ಹೆಚ್. ಎಂ. ಹಾಲಾರಾಧ್ಯರು, ಹಾಲುಸ್ವಾಮಿ ಮಠ, ಕೆ. ಬಿದರೆ
೭ ಎಂ. ಮಲ್ಲಯ್ಯಶೆಟ್ಟರು, ಕಂಚಗಲ್ಲು
೮ ಮಾಳಿಗೆ ಮರುಳಪ್ಪನವರು, ಆಲದಹಳ್ಳಿ
೯ ಎಂ. ಕಲ್ಲಪ್ಪನವರು, ಕಂಚಗಲ್ಲು
೧೦ ರೇವಣಸಿದ್ದಪ್ಪನವರು, ಆಲದಹಳ್ಳಿ, ಕಡೂರು ತಾಲ್ಲೂಕು
೧೧ ಎ. ಜಿ. ದಕ್ಷಿಣಾಮೂರ್ತಿಗಳು, ಮರ್ಚೆಂಟ್, ಹೊಸದುರ್ಗ
೧೨ ಜಿ. ತಮ್ಮಯ್ಯನವರು, ಪಟೇಲ್, ಗೊಂಡೇದಹಳ್ಳಿ
೧೩ ಜಿ. ಮುದ್ದಪ್ಪನವರು, ಗೊಂಡೇದಹಳ್ಳಿ
೧೪ ಮುದಿಗೌಡರ ಚಿಂದಪ್ಪನವರು, ಬಾಸೂರು
೧೫ ಹೆಚ್. ನಾಗೇಂದ್ರಪ್ಪನವರು, ಹೀರೇನಲ್ಲೂರು
೧೬ ಎಣ್. ಸಿ. ನಂಜಪ್ಪನವರು, ನಾರಣಾಪುರ
೧೭ ಜಿ. ಎಣ್. ಶಾಂತವೀರಪ್ಪನವರು, ಗಿರಿಯಾಪುರ
೧೮ ಜಿ. ಜಿ. ನಂಜಯ್ಯನವರು ಗಿರಿಯಾಪುರ
೧೯ ದೇವರಮನೆ ಜಿ. ಎಂ. ಚನ್ನಬಸಪ್ಪನವರು, ಗಿರಿಯಾಪುರ
೨೦ ಜಿ. ಎಣ್. ಹಾಲಪ್ಪನವರು, ಗಿರಿಯಾಪುರ
೨೧ ಸಿ. ಆರ್. ಸದಾಶಿವಶಾಸ್ತ್ರಿಗಳವರು, ಚಿಕ್ಕಮಗಳೂರು
೨೨ ಟಿ. ಸಿ. ಮಂಜಪ್ಪಶೆಟ್ಟರು, ಕಾಫೀ ಪ್ಲಾಂಟರ್, ಚಿಕ್ಕಮಗಳೂರು
೨೩ ಜಿ. ಬಿ. ಶಿವರುದ್ರಪ್ಪನವರು, ಗಿರಿಯಾಪುರ
೨೪ ಅಧ್ಯಕ್ಷರು, ಗೆಳೆಯರ ಬಳಗ, ,,
೨೫ ಅಧ್ಯಕ್ಷಿಣಿ, ಮಲ್ಲಿಕಾಂಬಾ ಮಂಡಳಿ, ಗಿರಿಯಾಪುರ
೨೬ ಅಧ್ಯಕ್ಷರು, ತರುಣ ಸಂಘ, ಗೊಂಡೇದಹಳ್ಳಿ

ಆಯಾ ವರ್ಷದಲ್ಲಿ ಬಂದ ಉದಾರಾಶ್ರಯದ ಚಂದಾ ವಗೈರೆ ಜಮಾಗಳು, ವಿನಿಯೋಗವಾದ ಖರ್ಚುಗಳು ಮೊದಲಾದ ಲೆಖ್ಖ ಪತ್ರಗಳನ್ನೆಲ್ಲಾ ಸಮಿತಿಯಿಂದ ನೇಮಕವಾಗಿರುವ ತನಿಖೆಗಾರ (ಆಡಿಟರ್)ರಿಂದ ತನಿಖೆ ಮಾಡಿಸಿ ವರದಿಯಲ್ಲಿ ಪ್ರಕಟಿಸುತ್ತಾ ಬಂದಿದೆ.

### ಕೊನೆಯ ಮಾತು

ಸಂಘ ಸಂಸ್ಥೆಗಳ ಜೀವನದಲ್ಲಿ ಹನ್ನೆರಡು ವರ್ಷಗಳು ತುಂಬಿ ಬರುವುದು ಒಂದು ವಿಶೇಷವೆಂದೇ ಭಾವಿಸುತ್ತೇನೆ. ಜತೆಗೆ ಸಂಸ್ಥಾಪಕರ ಕ್ರಿಯಾಶಕ್ತಿ, ಅವರ ಶಿಷ್ಯವರ್ಗದ ಮತ್ತು ಅಭಿಮಾನಿಗಳ ದಾತೃತ್ವ ಶಕ್ತಿಗಳ ಕುರುಹೆಂದು ಹೇಳಲು ಹರ್ಷಿಸುತ್ತೇನೆ.

ಇದರ ಫಲವಾಗಿ ಕಾರ್ಯ ನಿರ್ವಾಹಕ ಮಂಡಳಿಯು ತನ್ನ ಅಳಿಲು ಸೇವೆಯನ್ನು ನಿರ್ವಹಿಸಲು ಅನುವಾಯಿತು. ಈ ಹನ್ನೆರಡು ವರ್ಷದ ಹರುಷದ ಈ ಹಿರಿ ಹಬ್ಬದಲ್ಲಿ ನಿಂತು ಈ ಬಗೆಯಲ್ಲಿ ಸೇವೆ ಸಲ್ಲಿಸುವಂತಹ ಭಾಗ್ಯವನ್ನು ತಂದುಕೊಟ್ಟ ನಾಡಿನ ಉದಾರಿಗಳನ್ನೆಲ್ಲಾ ನೆನೆದು ಇವಕ್ಕೆ ಮೂಲಕರ್ತೃಗಳಾದ ಪೂಜ್ಯ ಶ್ರೀ ಶಿವಾಚಾರ್ಯ ರನ್ನು ವಂದಿಸಿ ನಡೆದು ಬಂದ ದಾರಿಯಲ್ಲಿ ಮುನ್ನಡೆಯುವಂತೆ ತಮ್ಮೆಲ್ಲರ ಕೊಡುಗೆ ಯನ್ನು ಮುಂದೆಯೂ ನಿರೀಕ್ಷಿಸುತ್ತಾ ಈ ವರದಿಯನ್ನು ಅರ್ಪಿಸುತ್ತೇನೆ.

**ಜಿ. ಕೆ. ಶಿವಲಿಂಗಪ್ಪ,**
ಕಾರ್ಯದರ್ಶಿ.

## ಕಾರ್ಯ ನಿರ್ವಾಹಕ

ಅಧ್ಯಕ್ಷರು :—ಶ್ರೀ ಶೆಟ್ರು ಸಿದ್ದಪ್ಪ ಶಿವನಾಗಪ್ಪ, ಜಮೀನ್ದಾರ್ ಮತ್ತು ವ್ಯಾಪಾರಿಗಳು, ಅಜ್ಜಂಪುರ

ಉಪಾಧ್ಯಕ್ಷರು:—ಶ್ರೀ ಸಿ. ಎ. ನಾಗಪ್ಪನವರು, ಜಮೀನ್ದಾರ್, ಚೆನ್ನಾಪುರ

ಕೋಶಾಧ್ಯಕ್ಷರು:—ಜಿ. ಸಿ. ಶಿವರುದ್ರಪ್ಪನವರು, ಜವಳಿ ವ್ಯಾಪಾರಿಗಳು, ಗಿರಿಯಾಪುರ

ಕಾರ್ಯದರ್ಶಿಗಳು :—ದೇವರಮನೆ ಜಿ. ಕೆ. ಶಿವಲಿಂಗಪ್ಪನವರು, ಜಮೀನ್ದಾರ್, ಗಿರಿಯಾಪುರ

## ಸದಸ್ಯರು

ಸರ್ವಶ್ರೀ

೧ ಜಿ. ಎಁ. ಶಾಂತವೀರಪ್ಪನವರು, ಗಿರಿಯಾಪುರ
೨ ಜಿ. ಜಿ. ನಂಜಯ್ಯನವರು, ,,
೩ ಜಿ. ಬಿ. ಶಿವರುದ್ರಪ್ಪನವರು, ,,
೪ ಯಜಮಾನ ಚಂದಪ್ಪನವರು, ಬಾಸೂರು
೫ ಎಚ್. ನಾಗೇಂದ್ರಪ್ಪನವರು, ಹಿರೇನಲ್ಲೂರು
೬ ಜಿ. ಮುದ್ದಪ್ಪನವರು, ಗೊಂಡೇದಹಳ್ಳಿ
೭ ಎಚ್. ಎಂ. ಹಾಲಾರಾಧ್ಯರು, ಕೆ. ಬಿದರೆ
೮ ಎಁ. ಸಿದ್ದಪ್ಪನವರು, ರಾಂಗಿರಿ
೯ ಅಧ್ಯಕ್ಷರು, ಗೆಳೆಯರ ಬಳಗ ಗಿರಿಯಾಪುರ
೧೦ ಅಧ್ಯಕ್ಷಿಣಿ, ಮಲ್ಲಿಕಾಂಬಾ ಮಂಡಳಿ, ಗಿರಿಯಾಪುರ
೧೧ ಅಧ್ಯಕ್ಷರು, ತರುಣ ಸಂಘ, ಗೊಂಡೇದಹಳ್ಳಿ

———::———

# ಶೀಲ - ಸಂಯಮ ಸಂಜೀವಿನಿ.



ಪ್ರಕೃತಿ ಗುಣಧರ್ಮಗಳನ್ನು ತೊಡೆದು, ಪ್ರವೃತ್ತಿ ಚಿತ್ತವೃತ್ತಿಗಳನ್ನು ತೊರೆದು ಪ್ರಗತಿ ಗತಿಯಲ್ಲಿ ಮುನ್ನಡೆದು ಕೀರ್ತಿಗಳಿಸಿದ ವಿಭೂತಿ ಪುರುಷರು ಶ್ರೀ ಸದಾಶಿವ ಶಿವಾಚಾರ್ಯರು. ಇವರ ಒಂದೊಂದು ನಡೆಯೂ ಇವರ ವಿಭೂತಿತ್ವಕ್ಕೆ ಹೆಗ್ಗುರುತು. ಇವರು ಎಲ್ಲ ಮಾನವರಂತಿದ್ದರೂ ಮಹಾನುಭಾವ ರೀತಿಯಿಂದ ರಂಜಿಸುತ್ತಿದ್ದಾರೆ. ಮಂಗಳಾಚರಣೆಯಲ್ಲಿ ಮಹಾ ಪ್ರೀತಿಯುಳ್ಳವರಾಗಿದ್ದಾರೆ. ಭೌತಿಕ ಸೊತ್ತುಗಳನು ಬಯಸದೆ ಆಧ್ಯಾತ್ಮಿಕ ತತ್ವಗಳನ್ನು ಬಿಡದೆ ಊರ್ಜಿತ ಸತ್ವವುಳ್ಳವರಾಗಿದ್ದಾರೆ.

ಇವರ ಬಾಳ ಬಾನಿನಲ್ಲಿ ಕೈವಲ್ಯೋಪನಿಷತ್ ಭಾಷ್ಯಭಾನು ಬೆಳ್ಳನೇ ಬೆಳಗುತ್ತಿದ್ದಾನೆ. 'ವೀರಶೈವ ಸಂಸ್ಕೃತಿ' 'ಅನುಭವ ವೈಖರಿ' ಅನುಗ್ರಹ ವಿಧಾನಾದಿ ಗ್ರಂಥ ರಾಶಿಗಳು ಗಗನತಾರೆಗಳಂತೆ ತಳತಳಿಸುತ್ತಿವೆ. ಅಂತೆಯೆ ಇವರ ಈ ಬಾಳ ಭೂಮಿಯಲ್ಲಿ ಇವರ ಶೀಲ ಸಲಿಲನಿಧಿಯು ಎಂದೆಂದಿಗೂ ಕೊರೆಯಾಗದೆ ತುಂಬಿ ಚಲುವಾಗಿದೆ. ಇದೊಂದು ತಿಳಿಗಡಲು, ತನಿಗಡಲು. ಈ ಶೀಲ ಸಲಿಲದಲ್ಲಿ ಇವರ ಹೃದಯ ಹೊಂದಾವರೆ ಸಹಸ್ರ ದಳವಾಗಿ ಅರಳಿದೆ. ಸುಂದರವಾಗಿದೆ. ಸುಕೋಮಲವಾಗಿದೆ. ಅಲ್ಲಿ ಇವರ ಅಂತರಾತ್ಮ ಅರಸಂಚೆಯಾಗಿ ಆನಂದಿಸುತ್ತಿದೆ. ಪರಮಾರ್ಥ ಪರಮಹಂಸವಾಗಿ ಪರಿಶೋಭಿಸುತ್ತಿದೆ. ಪರಮೇಶನ ಪೂಜೆಯಲ್ಲಿ ಪರವಶವಾಗಿರುತ್ತದೆ. ಸಂಯಮ ಸಂಜೀವಿನಿಯು ಸಂಗಳಿಸಿ ಶಾಶ್ವತಕ್ಕೇರಿದೆ. ಇವರ ಆ ಉಜ್ಜೀವನಾಗಾರದಲ್ಲಿ ಯೋಗ, ತಪಸ್ಸು, ಸಾಧ್ಯಾಯ, ಸತ್ಯ, ಶಮೆ, ಸಂಯಮವಾದಿ ಸುಗುಣಧನವು ರಾಶಿ ರಾಶಿಯಾಗಿ ರಂಜಿಸುತ್ತಿದೆ. ಇದರಿಂದ ಶ್ರೀ ಗುರು ಸದಾಶಿವ ಶಿವಾಚಾರ್ಯರು ಕನ್ನಡನಾಡಿನ ವಿಭೂತಿ ಪುರುಷರಲ್ಲಿ ಒಬ್ಬರು.

ಅನಾಚಾರ – ಅಸಂಯಮಗಳು ಹರಡಿರುವ ಇಂದಿನ ಈ ವಾತಾವರಣದಲ್ಲಿ ಇವರೊಬ್ಬರು ಆಚಾರ – ಸಂಯಮಾದಿಗಳಿಂದ ಶೋಭಿಸುವ ಸಂಜೀವಿನಿಯಾಗಿ ಬಾಳಿದಾರೆ. ಸಂಸ್ಪರ್ಶಿಸಿದವರಿಗೆ ಆಚಾರಗಳ ಮೂಲಕ ಸಜೀವತೆಯ ಕರುಣಿಸಬಲ್ಲ ಕರುಣಾಳುಗಳಾಗಿದ್ದಾರೆ. ಸಮಾಜವೆಂಬ ಪರ್ವತದಲ್ಲಿ ಸಾಮಾಜಿಕವೆಂಬ ವೃಕ್ಷವೃಂದದಲ್ಲಿ ಇವರೊಂದೆಡೆಯಲ್ಲಿರುವ ದಿವ್ಯ ಸಂಜೀವಿನಿ. ನಡೆ – ನುಡಿಗಳನ್ನು ಕಳೆದುಕೊಂಡು ಜೀವನ್ಮೃತರಾದವರನ್ನು ಜೀವಂತರನ್ನಾಗಿಸುವ ಸಜೀವ ಸಂಜೀವಿನಿ ಶ್ರೀ ಸದಾಶಿವ ಶಿವಾಚಾರ್ಯರು. ಇವರ ಸಾನ್ನಿಧ್ಯ ಸಂಗಮ ಅದೊಂದು ಹೊಸ ಚೇತನ ಕಾರಣ। ಹೊಸ ಸಂಯಮ ಸ್ಫುರಣ! ಇವರ ಪುಣ್ಯನಾಮಸ್ಮರಣ ಅದೊಂದು ಮಂಗಳಮಯ ಕಿರಣ! ಮನಕೆ ಶಾಂತಿರಸವ ಚಿಮ್ಮಿಸುವ ಚಿಲುಮೆ. ಹುಣ್ಣಿಮೆಯ ತುಂಬು ತಂಗದಿರನ ತಂಬೆಳಗು ನೆಲಮುಗಿಲಗಳ ಬೆಳಗುವಂತೆ ಇವರ ಸದಾಚಾರದ ಶುಭ್ರ ಜೀವನಕಾಂತಿಯು ಜನರ ಅಂಗ – ಆತ್ಮಗಳೆರಡನ್ನೂ ತೊಳಗಿ ಬೆಳಗಿಸುತ್ತದೆ. ತಾತ್ವಿಕತೆಯಿಂದ ಪಾವನಗೊಳಿಸುತ್ತದೆ. ಚಿನ್ಮಯತೆಯಿಂದ ಚಿತ್ತನ್ನು ಬೆಳಗುತ್ತದೆ. ಹೃದಯರಸದಿಂದ ಹೃದಯವನ್ನು ತೊಳೆಯುತ್ತದೆ. ಸದ್ಭಾವಸಹಿತವಾದ ಈ ದಿವ್ಯ ಸಂಜೀವಿನಿಯು ಶರೀರದ ಪ್ರತ್ಯಂಗವನ್ನೂ ಸ್ಪರ್ಶಿಸಿ ಸಚೇತನಗೊಳಿಸುತ್ತದೆ. ; ಸುವರ್ಣವಾಗಿಸುತ್ತದೆ. ಸ್ಫೂರ್ತಿಗಿಂಬಾಗಿಸುತ್ತದೆ.

ಇವರ ಶೀಲ ಸಂಸ್ಕಾರವು ಹೊನಲಾಗಿ ಹರಿದು ಹಲವಾರು ಶಿಷ್ಯರೆಂಬ ಉತ್ತಮ ಬಳ್ಳಿ ಮರಗಳ ಬೆಳಸಿ ನಾಡ ಬೆಂಗಾಡನ್ನು ಭವ್ಯ ನಂದನವನವನ್ನಾಗಿ ಮಾಡಿದೆ. ಇವರ ಸಂಯಮ ಸಂಜೀವಿನಿಯು ಮೃತ್ಯುಮುಖರಾದವರನೇಕರನ್ನು ಅಮರರನ್ನಾಗಿಸಿದೆ. ಇವರ ಜ್ಞಾನಜ್ಯೋತಿ ಸಂಸ್ಕೃತಿಯಾಗಿ ಬಂದು ಹರಡಿದ ಕಾಳ್ಗತ್ತಲೆಯನ್ನು ಕಳೆದಿದೆ. ಇವರ ತನಿಯಾದ ತಪಸ್ಸು ತಾತ್ವಿಕರ ಜೀವನದಲ್ಲಿ ಪಾವನತೆಯ ಪಸರಿಸಿದೆ. ಇವರ ಯೋಗಶಕ್ತಿ ಯೋಗಾಸಕ್ತಿಯುಳ್ಳವರ ಆಕರ್ಷಿಸಿ ಯೋಗ ಭೋಗವನ್ನಿತ್ತಿದೆ. ಇವರ ಸರ್ವಜೀವ ಕಾರುಣ್ಯ 'ಶಿವಾದ್ವೈತ ತತ್ತ್ವಪ್ರಚಾರಕ ಸಮಿತಿ' ರೂಪಾಗಿ ಹೊಮ್ಮಿ ನಿಂತಿದೆ; ಹಬ್ಬಿ ಹರಡಿದೆ. ಆದರೂ ಅಹಂಕಾರದ ಸುಳಿವಿಲ್ಲ. ಅನಾಚಾರಕ್ಕೆ ಅಲ್ಲಿ ಅರೆಗಾಳಿಷ್ಟು ಅನುವಿಲ್ಲ. ಇವರ ಜೀವನವೊಂದು ಶೀಲ–ಸಂಯಮಗಳ ಸಂಜೀವಿನಿ ; ಜೀವನ್ಮೃತರಿಗೆ ಜೀವಪ್ರದಾಯಿನಿ.

ಶ್ರೀ ಸದಾಶಿವ ಶಿವಾಚಾರ್ಯರ ಸಂಜೀವಿನಿ ಶಕ್ತಿ ಅನಂತಮುಖವುಳ್ಳದು ; ಅನನ್ಯಸಾಧಾರಣವಾದುದು. ಅಪಾರವಾದ ವೈರಾಗ್ಯ, ಅಪೂರ್ವವಾದ ವೈದುಷ್ಯ, ಅನುಪಮವಾದ ಸಂಯಮ, ಅನಿರ್ವಚನೀಯವಾದ ತಪಸ್ಸು, ಅಖಂಡವಾದ ಆತ್ಮನಿಷ್ಠೆ, ಅಂತಃಕರುಣದಿಂದ ಅನುಗ್ರಹಿಸಿದ ಅಸದಳವಾದ ಸಂಸ್ಕಾರ ವಿಧಾನ, ಅತುಲವಾದ ಸಾಹಿತ್ಯ ಸಂಸ್ಕೃತಿ ಪ್ರದಾನ, ಅಚ್ಚಳಿಯದ ತತ್ತ್ವಶ್ರದ್ಧೆ, ಆಚಾರ–ವಿಚಾರಗಳಲ್ಲಿರುವ ಅವಧಾನ – ಅನುಭವ, ಕೈಕೊಂಡ ಕಾರ್ಯವನ್ನು ಕೊನೆಗಾಣಿಸುವ ದೃಢಭಾವ–

ದೃಢ ಪ್ರಯತ್ನಗಳು ; ಸತ್ಯಪ್ರೇಮ, ನಿತ್ಯನೇಮ. ಮನೋನಿಗ್ರಹ, ನೋವು – ನಿಂದೆಗಳ ಸಹಿಷ್ಣುತೆ, ಅಸ್ಖಲಿತ ಆಚರಣೆ, ಆಗುಂತಕರ ಆದರಣೆ ಇತ್ಯಾದಿಯಾಗಿ ಇನ್ನೂ ಅನೇಕ ಸದ್ಗುಣ ಗಣಗಳಿಂದ ಅವರ ಮೂರ್ತಿ ಸಂಜೀವಿನಿಯು ದಿವ್ಯಶಕ್ತಿಶಾಲಿಯಾಗಿ ಸಮಾಜದಲ್ಲಿ ಶೋಭಿಸುತ್ತಿದೆ.

ವಿನಯಾದಿ ಗುಣಗೌರವ, ವಿದ್ಯಾ ವಿಭೂಷಣತೆ, ಅರ್ಚನಾದಿ ಅಪೂರ್ವ ತಪಶ್ಶಕ್ತಿ, ಆಚಾರಾದಿ ಅದ್ವಿತೀಯ ಸೌಭಾಗ್ಯ ಸಂಪತ್ತಿ, ಸಮಿತಿ ಸಮ್ಮೇಲನಾದಿಗಳ ಮುಖಾಂತರ ಸಾಮಾಜಿಕ ಸಾಹಿತ್ಯಕ ಶಿವಾನುಭಾವಿಕ ಸೇವಾ ಕರ್ತೃತ್ವಶೀಲತೆ ; ಯೌಗಿಕ ಪ್ರತಿಭೆ ಇವೆಲ್ಲ ಒಂದುಗೂಡಿಸಿಕೊಂಡ ವ್ಯಕ್ತಿ ತೀರ ಅಪರೂಪ. ಈ ಎಲ್ಲ ಗುಣಗಳನ್ನು ಒಂದಕ್ಕಿಂತ ಮತ್ತೊಂದನ್ನು ಮಿಗಿಲಾಗಿ ತಮ್ಮೊಳಗಳವಡಿಸಿಕೊಂಡ ಮಹಾವ್ಯಕ್ತಿ ಸಖರಾಯಪಟ್ಟಣದ ಶ್ರೀ ಸದಾಶಿವ ಶಿವಾಚಾರ್ಯರು. ಮಂಗಲಕರ ಮಹಾ ಧ್ಯೇಯ ಸಾಧನೆಯಲ್ಲಿ ಮಹಾವ್ಯಕ್ತಿತ್ವವಿಕಾಸಮಾರ್ಗದಲ್ಲಿ ಮುನ್ನಡೆವಾಗ ಮಹಾ ಶ್ರಮವಹಿಸಿದಾಗ ಮೈಯು ಗಾತ್ರ ತೀರ ಕಡಿಮೆಯಾಗಬಹುದು ; ಆಗುವುದು ಸಹಜ. ಅದುವೇ ಅವರ ಹಿರಿಮೆಯು ಹೆಗ್ಗುರುಹು. ಮೈಸಿರಿಯ ಗಳಿಸುವವರು ಮುನ್ನೂರು ಕೋಟಿ ! ಮನದ ಸಿರಿಯ ಗಳಿಸುವವರು ಮೂವರಾದರೂ ಸಿಕ್ಕುವುದು ಮಹಾ ದುರ್ಲಭ. ಅಂಥವರ ಅಂಗಕೃಶವಾದರೂ ಅಂತರಂಗ ವಿಕಾಸವಾಗಿರುತ್ತದೆ; ಪ್ರಕಾಶವಾಗಿರುತ್ತದೆ. ಆ ಅಂತರಂಗದ ಅಪೂರ್ವವಾದ ಅಪಾರವಾದ ತೇಜಸ್ಸಿನಿಂದ ಅವರ ಅಂಗವು ಅಸಾಧಾರಣವಾಗಿ ತೊಳಗುತ್ತಿರುತ್ತದೆ. ಆಧ್ಯಾತ್ಮದ ಅಭಿಲಾಷಿಗಳಿಗೆ ಆಕರ್ಷಣೀಯವಾಗಿರುತ್ತದೆ; ಆದರ್ಶವಾಗಿರುತ್ತದೆ. ಅಂಥವರ ಅಂಗದಲ್ಲಿ ರೂಪಿಲ್ಲದಿದ್ದರೂ, ಸತ್ಯಸ್ವರೂಪು ಇರುತ್ತದೆ; ಶಿವಸ್ವರೂಪು ಇರುತ್ತದೆ. ಶಾರೀರಕಶಕ್ತಿ ರಂಜಕರಕ್ತಿಗಳಿಲ್ಲದಿದ್ದರೂ ಸ್ವಾತ್ಮಶಕ್ತಿ ಸುಗುಣ ರಕ್ತಿಗಳು ಸೂರೆಗೊಂಡಿರುತ್ತವೆ. ಚರ್ಮ ಚಕ್ಷುಗಳಿಗೆ ಆಕರ್ಷಣೆಯಿಲ್ಲವಾದರೂ ಚಿಚ್ಚಕ್ಷುವಿನ ಆಕರ್ಷಣೆಗೆ ಆಕರವಾಗಿರುತ್ತದೆ. ಮಾನವ ಸಹಜವಾದ ಬಾಳಿಲ್ಲದಿದ್ದರೂ ಮಹಾನುಭಾವ ಸಹಜವಾದ ಮಹಾಜೀವನವಿರುತ್ತದೆ. ಭೌತಿಕ ಭಾಗ್ಯವಿಲ್ಲದಿದ್ದರೂ ಭಾವಭಾಗ್ಯ ಬೇಕಾದಷ್ಟಿರುತ್ತದೆ. ಅದುವೇ ಸತ್ಯಶಾಂತಿಗೆ ಶಾಶ್ವತ ಸೌಖ್ಯಕ್ಕೆ ಸಾಧನವಾಗಿರುತ್ತದೆ. ಸಕಲ ಮಾನವರಿಗೆ ಶುಭಜೀವನವ ಆಶೀರ್ವದಿಸುವಲ್ಲಿ ಆದರ್ಶವಾಗಿರುತ್ತದೆ. ಸದರಿ ಶ್ರೀ ಸದಾಶಿವ ಶಿವಾಚಾರ್ಯರ ಶುಭ್ರ ಜೀವನವು ಆ ತೆರನಾಗಿದೆ.

ಇವರು ನೆಲೆ ನಿಂತ ನೆಲ ಇಂದು ಪುಣ್ಯಾಶ್ರಮವಾಗಿ ಪರಿಶೋಭಿಸುತ್ತಿದೆ. ಇವರು ಅಭಯಹಸ್ತದಿಂದ ಅನುಗ್ರಹಿಸಿದ ವ್ಯಕ್ತಿಗಳು, ಅಂತಃಕರಣಹಸ್ತದಿಂದ ಮುಟ್ಟಿದ ವಸ್ತುಗಳು ಪೂರ್ಣ ಪಾವನಗೊಂಡಿವೆ. ಇವರಿರುವ ಆ ಪುಣ್ಯಾಶ್ರಮಕ್ಕೆ ಅನೇಕರು ಧಾವಿಸಿ ಬಂದು ಆ ದಿವ್ಯ ಸಂಜೀವಿನಿಯ ಚೇತೋಹಾರಿ ಚೇತನವನ್ನು ತಮ್ಮತಮ್ಮ ನಿಶ್ಚೇತನಗೊಂಡ ಜೀವನದಲ್ಲಿ ತುಂಬಿಕೊಂಡು ಹೋಗುತ್ತಾರೆ. ಶಾಂತಿ

ಕಾಂತಿಗಳ ಸಂಗಳಿಸಿಕೊಳ್ಳುತ್ತಾರೆ. ತಮ್ಮ ನೈತಿಕ ಸಾಮಾಜಿಕ ಕೌಟುಂಟಿಕ ಬಾಳಿನಲ್ಲಿ ತಪ್ಪುಹೆಜ್ಜೆಗಳನಿಕ್ಕಿದ್ದರೆ ಅವನ್ನು ಸರಿಪಡಿಸಿಕೊಂಡು ಹೆದ್ದಾರಿಯಲ್ಲಿ ಹೆಜ್ಜೆಹಾಕಿದ್ದಾರೆ. ಕೊಳೆ ಬಾಳನ್ನು ಬಿಟ್ಟು ಹಸನಾದ ಬಾಳಿಗೆ ಬಂದಿದ್ದಾರೆ. ಕಷ್ಟ ಕಾರ್ಪಣ್ಯಗಳ ಕಳೆದು ಜಡತೆಯ ತೊಡೆದು ಹರುಷಿತರಾಗಿ ಹಿಂದಿರುಗುತ್ತಾರೆ.

ಶ್ರೀ ಸದಾಶಿವ ಶಿವಾಚಾರ್ಯರು ಅಂಗದಲ್ಲಿ ಆಚಾರ ಅಳವಟ್ಟ ಅಪಾರ ಮಹಿಮರು. ಆತ್ಮನಲ್ಲಿ ವಿಚಾರ ಕರಿಗೊಂಡ ಕಳಾವಂತರು. ಸಕಲ ಶೀಲ ಸಂಪನ್ನರು, ಸದಾಚಾರ ಶಿವಾಚಾರ ನಿರತರು. ಅರವತ್ತುನಾಲ್ಕು ಶೀಲಾಚಾರಗಳಲ್ಲಿ ಸುಪ್ರಸಿದ್ಧನಾದ ಪಾಲ್ಕುರಿಕೆ ಸೋಮನಾಥನನ್ನು ಬಿಟ್ಟ ಬಳಿಕ ಆ ದಿಸೆಯಲ್ಲಿ ಆ ಹಂತದಲ್ಲಿ ದೃಷ್ಟಿ ಗೋಚರವಾಗುವವರು ಈ ಶ್ರೀ ಸದಾಶಿವ ಶಿವಾಚಾರ್ಯರೊಬ್ಬರು. ಆ ಹೆಸರನ್ನು ಆ ಶೀಲಾಚಾರವನ್ನು ಉಳಿಸಿ ಬೆಳಸಿಕೊಂಡು ಬಂದವರೆಂದರೆ ಶ್ರೀ ಸದಾಶಿವಾ ಚಾರ್ಯರೆಂದೇ ಹೇಳಬೇಕು. ಆ ಪಾಲಕುರಿಕೆ ಸೋಮನಾಥನೇ ಇಂದು ಹಾಲು ಸ್ವಾಮಿಮಠದ ಸದಾಶಿವ ಶಿವಾಚಾರ್ಯನಾಗಿ ಅವತರಿಸಿರುವನೆಂದರೆ ಅತಿಶಯೋಕ್ತಿ ಯಲ್ಲ. ಆಚಾರದಲ್ಲಿ ವಿಚಾರದಲ್ಲಿ ಅದೇ ನಿಲವು; ಅದೇ ಒಲವು. ಅದೇ ಶುದ್ಧಿ; ಅದೇ ಪ್ರಸಿದ್ಧಿ. ಅದು ಅಂದಿನ ಶೀಲಸಂಯಮ ಸಂಜೀವಿನಿ, ಇದು ಇಂದಿನ ಶೀಲ ಸಂಯಮಸಂಜೀವಿನಿ.

—ಶ್ರೀ ಜ. ಚ. ನಿ.

——::——

ಓಂ.

ಸಮಾಜ – ಸಂಸ್ಕೃತಿಗಳು
ಮಾನವ ಜೀವನದ ಎರಡು ಅಂಗಗಳು.
ಮಾನವ ಸಮಾಜ ಜೀವಿ.
ಸಮಾಜ ಮಾನವ ಸಂಜೀವಿ.
ಆ ಆ [illegible]
ಸಾಮಾಜಿಕ ತತ್ತ್ವಗಳು
ಅಂಗಾಂಗಗಳಂತಿವೆ.

# ಅನಾದಿ-ಆದಿ-ಆಧುನಿಕ ವೀರಶೈವ-ವೀರಶೈವರು

**ಶ್ರೀ ಜ. ಚ. ನಿ.**

ವೀರಶೈವ ಮತವನ್ನು ಅನಾದಿ ವೀರಶೈವ, ಆದಿ ವೀರಶೈವ, ಆಧುನಿಕ ವೀರಶೈವ ವೆಂದು ವಿಂಗಡಿಸಬಹುದಾಗಿದೆ. ಈ ವಿಂಗಡಣೆಗೆ ವೀರಶೈವ ಸಾಹಿತ್ಯದಲ್ಲಿ ಸಾಕಷ್ಟು ಸಾಕ್ಷಿಗಳಿವೆ. ಅವನ್ನು ಮುಂದೆ ಉದ್ಧರಿಸುತ್ತೇವೆ.

ನಿಗಮಾಗಮಗಳ ಕಾಲಕ್ಕೆ ಹಿಂದಿದ್ದ ಕಾಲವೆ ಅನಾದಿಕಾಲ. ಆ ಕಾಲದ ವೀರಶೈವವು ಅನಾದಿ ವೀರಶೈವವು. ಆ ಅನಾದಿ ವೀರಶೈವವನ್ನು ರೂಢಿಸಿದವರು ಅನಾದಿ ವೀರಶೈವರು. ಆ ಅನಾದಿ ವೀರಶೈವ ಮತ್ತು ವೀರಶೈವರು ಇತಿಹಾಸಕ್ಕೆ ಸಿಲುಕದಿರುವುದರಿಂದ ಅದು ಅನಾದಿ ವೀರಶೈವ ; ಅವರು ಅನಾದಿ ವೀರಶೈವರು.

ಆಗಮ ಕಾಲದಿಂದ ಆರಂಭವಾಗಿ ಕ್ರಿ. ಶ. ಹನ್ನೊಂದನೆಯ ಶತಮಾನದವರೆ ವಿಗೂ ಇರುವ ಕಾಲ ಆದಿ ವೀರಶೈವ ಕಾಲ ; ಮತ್ತು ಆದಿ ವೀರಶೈವರ ಕಾಲ.

ಹನ್ನೆರಡನೆಯ ಶತಮಾನದಿಂದೀಚೆಯ ಅಂದರೆ ಇಪ್ಪತ್ತನೆಯ ಶತಮಾನದ ವರೆಗೂ ಇರುವ ಈ ಎಂಟು ನೂರು ವರುಷಗಳ ಕಾಲ ಆಧುನಿಕ ಕಾಲ. ಈ ಕಾಲ ದಲ್ಲಿರುವ ವೀರಶೈವ ಆಧುನಿಕ ವೀರಶೈವ, ಈ ಕಾಲದ ವೀರಶೈವರು ಆಧುನಿಕ ವೀರಶೈವರು.

### ವೀರಶೈವ ವಿಕಾಸವಾದ :

ವೀರಶೈವ ವಾಙ್ಮಯದಲ್ಲಿ ಲಭ್ಯವಾಗುವ ಈ ಅನಾದಿ – ಆದಿ ಪದಗಳಿಗೆ ಕ್ರಮ ವಾಗಿ ಪ್ರಾಗೈತಿಹಾಸಿಕಕಾಲ, ಐತಿಹಾಸಿಕಕಾಲಗಳೆಂದೂ ಮೇಲೆ ಹೇಳಿದ ಆಧುನಿಕ

ಕಾಲವನ್ನು ಅರ್ವಾಚೀನಕಾಲವೆಂದೂ ಕರೆಯಬೇಕು. ಇದು ವೀರಶೈವ ಪ್ರಪಂಚದ ಕಾಲಗಣನೆ. ಇದರಂತೆ ವಿಶ್ವದ ಐತಿಹಾಸಿಕರು ಪ್ರಾಗೈತಿಹಾಸಿಕಕಾಲ, ಪುರಾಣ ಕಾಲ, ಐತಿಹಾಸಿಕಕಾಲ – ಎಂಬುದಾಗಿಯೂ ಪ್ರಾಚೀನಕಾಲ, ಮಧ್ಯಕಾಲ, ಅರ್ವಾಚೀನಕಾಲ – ಎಂಬುದಾಗಿಯೂ ವಿಂಗಡಿಸುವುದುಂಟು.

ಅನಾದಿ ಕಾಲದಿಂದಲೂ ವೀರಶೈವವು ಇತ್ತೆಂಬುದಕ್ಕೆ ಇತಿಹಾಸ ಸಾಕ್ಷಿ ನುಡಿಯುತ್ತದೆ. ಶೈವ ಭೇದವಾದ ವೀರಶೈವಕ್ಕೆ ಅನಾದಿತ್ವ ಅತ್ಯಂತ ಸಹಜವಾಗಿಯೆ ಇದೆ. ಶೈವ ಅನಾದಿ ಎಂಬುದಕ್ಕೆ ಯಾರ ವಾದವಿಲ್ಲ. ಆ ಶೈವವೆ ಚತುರ್ವಿಧವೆಂದು ಸಪ್ತವಿಧವೆಂದು, ದಶವಿಧವೆಂದು ಮುಂತಾಗಿ ಶಿವಾಗಮಗಳು ಸಾರುತ್ತಿವೆ.

" ಶೈವಂ ಚತುರ್ವಿಧಂ ಜ್ಞೇಯಂ ಸಮಾಸಾಚ್ಛೃಣು ಷಣ್ಮುಖ
ಸಾಮಾನ್ಯಂ ಮಿಶ್ರಕಂ ಚೈವ ಶುದ್ಧಂ ವೀರಂ ಯಥಾ ಕ್ರಮಂ
ಸರ್ವೇಷಾಮಪಿ ಶೈವಾನಾಂ ವೀರಶೈವಂ ಮಹತ್ತರಂ
ಅಲ್ಪಕ್ರಿಯಾ ಬಹುಫಲಂ ವೀರಶೈವಂ ಚ ಷಣ್ಮುಖ ! "

—ವಾತುಲಾಗಮಃ

ಈ ನಾಲ್ಕುವಿಧ ಶೈವಗಳಲ್ಲಿ ವೀರಶೈವವೊಂದು ಮಾತ್ರವಲ್ಲ – ವಿಶಿಷ್ಟಮತ. ವಿಶಿಷ್ಟತೆಗೆ ಕಾರಣ ಅಲ್ಪಕ್ರಿಯಾ ಬಹುಫಲ ಪ್ರದಾಯಕತೆ.

" ಅನಾದ್ಯಾದಿ ವಿಶುದ್ಧಂ ಚ ಕೇವಲಂ ಮಿಶ್ರಮೇವ ಚ
ವೀರಶೈವಮಿತಿಪ್ರೋಕ್ತಂ ಷಡ್ವಿಧಂ ಶಾಸ್ತ್ರಸಮ್ಮತಂ "

—ವೀರಶೈವ ವಿಜಯ.

ಅನಾದಿ – ಆದಿ – ವಿಶುದ್ಧ – ಕೇವಲ – ಮಿಶ್ರ – ವೀರಶೈವ ಎಂಬೀ ಆರು ಬಗೆಯ ಶೈವವು ಉದಾಹೃತವಾಗಿದೆ. ಶಾಸ್ತ್ರ ಸಮ್ಮತವಾಗಿದೆ.

" ಅನಾದಿಶ್ಶೈವಃ ಪ್ರಥಮಮಾದಿಶೈವಸ್ತತಃ ಪರಂ
ಮಹಾಶೈವಸ್ತತೋ ಜ್ಞೇಯಸ್ತ್ವನುಶೈವಸ್ತತಃ ಪರಂ
ಅವಾಂತರಸ್ತತೋಜ್ಞೇಯಃ ಪ್ರವರಸ್ತದನಂತರಂ
ಅಂತ್ಯಶೈವಸ್ತತೋಜ್ಞೇಯಸ್ತೇಷಾಂ ಲಕ್ಷಣಮುಚ್ಯತೇ "

—ಸೂಕ್ಷ್ಮಾಗಮ.

ಅನಾದಿ ಆದಿ ಮಹಾ ಅನು ಅವಾಂತರ ಪ್ರವರ ಅಂತ್ಯ ಎಂಬುದಾಗಿ ಏಳು ಶೈವಗಳನ್ನು ಸೂಕ್ಷ್ಮಾಗಮ ಹೇಳಿದೆ. ಇವುಗಳಲ್ಲಿ ಕೊನೆಯ ಪ್ರವರ – ಅಂತ್ಯ ಶೈವನಾಮಗಳಿಗೆ ಬದಲಾಗಿ ಅನುಶೈವ – ವೀರಶೈವ ಎಂದು ಹೇಳುತ್ತಾರೆ. ಈ ಸೂಕ್ಷ್ಮಾಗಮವು ಮೊದಲು ಹೇಳಿದ ವಾತುಲಾಗಮದ ನಾಲ್ಕು ಶೈವಗಳನ್ನೂ ಒಪ್ಪಿಕೊಂಡಿದೆ. ವೀರಶೈವವೆ ಶ್ರೇಷ್ಠವೆಂದು ಪ್ರತಿಪಾದಿಸಿದೆ.

" ಆದೌ ಸಾಮಾನ್ಯ ಶೈವಂತು ಪೂರ್ವಶೈವಂ ದ್ವಿತೀಯಕಂ
ಮಿಶ್ರಶೈವಂ ತೃತೀಯಂತು ಶುದ್ಧಶೈವಂ ಚತುರ್ಥಕಂ
ಪಂಚಮಂ ಶ್ರೌತಶೈವಂತು ಮಾರ್ಗಶೈವಂತು ಷಷ್ಠಕಂ
ಸಪ್ತಮಂ ವೀರಶೈವಂ ಸ್ಯಾತ್ ವೀರಸಾಮಾನ್ಯಮಷ್ಟಮಂ
ವಿಶೇಷಂ ವೀರಶೈವಂ ತು ನವಮಂ ಪರಿಕೀರ್ತಿತಂ
ನಿರಾಭಾರಾಖ್ಯ ಶೈವಂತು ದಶಮಂ ಪರಿಚೋದಿತಂ
ಕ್ರಿಯಾಶೈವಂ ದಶವಿಧಂ ತತ್ತದ್ಭೇದಮಿಹೋಚ್ಯತೇ "

—ಕಾರಣಾಗಮ.

ಹೀಗೆ ಹತ್ತು ಬಗೆಯ ಶೈವಗಳನ್ನು ಕಾರಣಾಗಮವು ಕಾಣಿಸಿದೆ. ೧೫ ಶೈವ ಭೇದಗಳನ್ನು ಹೇಳುವವರಿದ್ದಾರೆ. ಇವೆಲ್ಲವುಗಳಿಂದ ವೀರಶೈವವು ಶೈವದ ವಿಕಾಸವೆಂದೂ ಶೈವ ಸಂಸ್ಕೃತಿಯ ಕೊನೆಯ ಅಂದರೆ ಸಾರಭೂತವಾದ ಭೇದವೆಂದೂ ಸ್ಪಷ್ಟವಾಗುತ್ತದೆ. ವೀರಶೈವವು ಶಿವಾಗಮುಗಳಿಗಿಂತಲೂ ಪೂರ್ವದಲ್ಲಿ ಇತ್ತೆಂದು ವ್ಯಕ್ತವಾಗುತ್ತದೆ.

ಅನಾದಿಯಿಂದಾಚೆ ನಿಷ್ಕಲ ಲಿಂಗವಿತ್ತು. ಅದು ಅಖಂಡಾದ್ವಯ ನಿತ್ಯ ನಿರವಯ ಪರಿಪೂರ್ಣ ಚೈತನ್ಯ ಜ್ಞಾನಪ್ರಭಾ ರೂಪಾಗಿತ್ತು. ಅದು ಅನಾದಿಗೆ ಬಂದು ಸಕಲ ನಿಷ್ಕಲ ರೂಪಾಯಿತು ; – ಎಂಬೀ ಅಭಿಪ್ರಾಯವನ್ನು ಸೂಚಿಸುವ ಸಾಹಿತ್ಯ ಸಾಕಷ್ಟಿದೆ.

ಆದಿ ಅನಾದಿಯಿಲ್ಲದಂದು, ಮಹಾಶೂನ್ಯವಿಲ್ಲದಂದು,
ಸಾಧ್ಯ ಅಸಾಧ್ಯವಿಲ್ಲದಂದು, ರೂಪು ನಿರೂಪು ಇಲ್ಲದಂದು,
ಸ್ಥೂಲಸೂಕ್ಷ್ಮವಿಲ್ಲದಂದು, ಸಾಕಾರ ನಿರಾಕಾರವೆಂಬ ವಾಕು
ಹುಟ್ಟದಂದು,
ದ್ವೈತಾದ್ವೈತವಾಗದಂದು, ಶಂಕರ ಶಶಿಧರ ಈಶ್ವರರೆಂಬ ಗಣಾಧೀಶ್ವರ
ರಿಲ್ಲದಂದು, ವರ್ತನೆ ನಿವರ್ತನೆಯಿಲ್ಲದಂದು,
ಉಮೆಯ ಕಲ್ಯಾಣವಾಗದಂದು, ಇವರಾರೂ ಒಬ್ಬರ
ನಾಮ ಸೀಮೆಯಿಲ್ಲದಂದು ನೀನು ಉಲುಹಡಗಿರ್ದೆಯಲ್ಲಾ
ಕಲಿದೇವರ ದೇವಯ್ಯ.

ಆದಿಯಾಧಾರವಿಲ್ಲದಂದು,....ಸುರಾಳ ವಿರಾಳವಿಲ್ಲದಂದು,
ಶೂನ್ಯ ನಿಶ್ಶೂನ್ಯವಿಲ್ಲದಂದು, ಸಚರಾಚರವೆಲ್ಲ ರಚನೆಗೆಬಾರದಂದು
ಗುಹೇಶ್ವರಾ ನೀನೊಬ್ಬನೇ ಇದ್ದೆಯಲ್ಲಾ ಇಲ್ಲದಂತೆ !

ಅಪರವಿಲ್ಲದಂದು, ಪರಬ್ರಹ್ಮವಿಲ್ಲದಂದು
ಅನಾದಿಯಿಲ್ಲದಂದು ಆದಿಯಿಲ್ಲದಂದು
ಸದಾಶಿವನಿಲ್ಲದಂದು, ಶಿವನಿಲ್ಲದಂದು
ಆನು ನೀನೆಂಬುದು ತಾನು ಇಲ್ಲದಂದು
ಕೂಡಲ ಚೆನ್ನಸಂಗಯ್ಯ ಏನೂ ಎನ್ನದಿರ್ದನಂದು.

ಆದಿ ಅನಾದಿಗಳಿಲ್ಲದಂದು, ನಾದ ಬಿಂದು ಕಳೆ
ಮೊಳೆದೋರದಂದು, ದೇಹ ದೇಹಿಗಳುತ್ಪತ್ತಿಯಾಗದಂದು,
ಜೀವಾತ್ಮ ಪರಮಾತ್ಮರೆಂಬುವರಿಲ್ಲದಂದು,
ಸಕಲ ಸಚರಾಚರಂಗಳ ಸುಳುಹು ಇಲ್ಲದಂದು,
ಇವೇನೂ ಇಲ್ಲದಂದು ನೀನು ಶೂನ್ಯನಾಗಿ ಇದ್ದೆಯಯ್ಯ
ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೆ.

ನಾವು ಹೇಳುವ ಪ್ರಾಗೈತಿಹಾಸಿಕಕಾಲ ಅಂದರೆ ಅನಾದಿ ವೀರಶೈವ ಕಾಲಕ್ಕೆ ಹಿಂದೆ ಅಂದರೆ ಸೃಷ್ಟಿಗೆ ಮೊದಲು ಒಂದು ನಿರಾಕಾರ ನಿರ್ಗುಣ ಅನಿರ್ವಾಚ್ಯವಸ್ತು ಇತ್ತೆಂದು ಈ ಎಲ್ಲ ವಚನಗಳಿಂದ ವಿಶದವಾಗುತ್ತದೆ. ಆ ನಿಷ್ಕಲವಸ್ತುವೆ ತನ್ನ ಲೀಲಾವಿನೋದದಿಂದ ಅನಾದಿಕಾಲಕ್ಕೆ ಆಕಾರವಾಗಿ ಬಂದು ಧ್ಯಾನ ಧಾರಣ ಪೂಜಾದಿಗಳಿಗೆ ಸಲ್ಲುವ ಮಹಾಲಿಂಗವಾಗಿ ಅವತರಿಸಿತು. ಅದರ ಪ್ರಪಥಮ ಪೂಜಕನಾಗಿ ಶ್ರೀರುದ್ರನು ಶಿವಲಿಂಗಧಾರಿಯಾಗಿ ಅನಾದಿಕಾಲದ ಅನಾದಿ ಗುರುವಾಗಿ ಅವತರಿಸುವನು.

## ಅನಾದಿ ವೀರಶೈವ–ವೀರಶೈವರು

"ಅನಾದಿವಿಡಿದು ಬಂದ ಗುರು, ಅನಾದಿವಿಡಿದು ಬಂದ ಲಿಂಗ.
ಅನಾದಿವಿಡಿದು ಬಂದ ಜಂಗಮ. ಅನಾದಿವಿಡಿದು ಬಂದ ಗುರು–ಶಿಷ್ಯಸಂಬಂಧ.
ಅನಾದಿವಿಡಿದು ಬಂದ ಪಾದೋದಕ ಪ್ರಸಾದ.
ಅನಾದಿವಿಡಿದು ಬಂದ ಭಕ್ತಿಜ್ಞಾನ ವೈರಾಗ್ಯ.
ಅನಾದಿವಿಡಿದು ಬಂದ ಪ್ರಸಿದ್ಧವಾದ ವೀರಶೈವಾಚಾರ ಸಂಪತ್ತು.
ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೆ.

ವೀರಶೈವವು ಇಂದಿನದಲ್ಲ; ವೀರಶೈವರು ಇಂದಿನವರಲ್ಲ. ಇದಕ್ಕೆ ಬಹು ಪುರಾತನತೆಯಿದೆ. ಅಂತೆಯೆ ವೀರಶೈವ ಗುರುಪರಂಪರೆಗೂ ಬಹು ಪ್ರಾಚೀನತೆಯಿದೆ. ಇದು ಶಿವಶಾಸನ; ಶಿವಶರಣರ ಶಾಶನ. ಇದನ್ನು ಯಾರೂ ಅಲ್ಲಗಳೆಯಲು ಸಾಧ್ಯವಿಲ್ಲ.

ಅನಾದಿಯಿಂದ ಆಚೆಗಿದ್ದ ಆ ಅನಿರ್ವಾಚ್ಯವಸ್ತುವೆ ಸಗುಣವಾಗಿ ಸಾಕಾರವಾಗಿ ಸೃಷ್ಟಿಯಾಯಿತು. ಆ ಪರಶಿವನ ಕೋಟ್ಯಂಶದಲ್ಲಿ ಒಂದಂಶವೇ ರುದ್ರರೂಪನಾಗಿ

ಅವತರಿಸುವುದು. ಆ ಸೃಷ್ಟಿಗೊಡೆಯನಾಗಿ ಆ ಪರಶಿವನು ರುದ್ರನಾಗಿ ಬಂದನು. ಅಪ್ರಾಕೃತಿಕ ವೀರಶೈವವ ಸೃಷ್ಟಿಸಿದನು. ಆತನ ಸಹಾಯಕ್ಕಾಗಿ ರುದ್ರಗಣರು ಅನಾದಿಯಲ್ಲಿ ಭೂಮಿಗವತರಿಸಿದರು. ಅವರಿಗೆ ರುದ್ರಪ್ರಮಥರೆಂದು ಮತ್ತೊಂದು ಹೆಸರು. ಈ ಅನಾದಿ ಸೃಷ್ಟಿಗೆ ಕಾರಣನಾದ ಅನಾದಿ ರುದ್ರನ ಉತ್ಪತ್ತಿಯನ್ನು ಕುರಿತು ಅನೇಕ ಪ್ರಮಾಣಗಳಿವೆ: ರುದ್ರಮುಖದಲ್ಲಿ ವಿಷ್ಣುಭುಜದಲ್ಲಿ ಜಂಘೆಯಲ್ಲಿ ಅಜನ ಜನನವು ! ಎಂದು ಬಸವಣ್ಣ ಹೇಳಿದಾನೆ.

“ ಓಂಕಾರವೆ ಮೊದಲನೆಯ ದೇವನು. ಓಂಕಾರವೆ ಜ್ಯೋತಿರೂಪ.
ಓಂಕಾರವೇ ಮೂಲಮಂತ್ರ. ಓಂಕಾರವೇ ಗೋಪ್ಯಮುಖ.
ಓಂಕಾರದ ಸ್ವರೂಪವೆ ಬೀಜರೂಪ. ಓಂಕಾರದಿಂದಲೇ
ಅನಾದಿರುದ್ರನ ಉತ್ಪತ್ತಿ....” —ಪಂಚಬ್ರಹ್ಮೋದಯ ಭಾಷ್ಯ.

“ ಮಹೇಶ್ವರ ಸಹಸ್ರಾಂಶಾದ್ರುದ್ರದೇವ ಸಮುದ್ಭವಃ”
—ವಾತುಲಾಗಮ.

ಇದು ಅನಾದಿರುದ್ರನ ಉತ್ಪತ್ತಿ. ಇನ್ನು ರುದ್ರಗಣರ ಉತ್ಪತ್ತಿಯ ಉಕ್ತಿಗಳಿವು: “....ಸಕಲಕೋಟಿ ಬ್ರಹ್ಮಾಂಡಕ್ಕಾಧಾರ ಕಾರಣವಾಗಿಯೂ ಸಮಸ್ತ ಲೋಕಂಗಳ ಪವಿತ್ರಕಾರಣವಾಗಿಯೂ ಪರಮೇಶ್ವರನ ನಿಜ ಚಿನ್ಮಯವಪ್ಪ ಊರ್ಧ್ವಮುಖದ ಚಿತ್ಕಲಾಸ್ವರೂಪವಪ್ಪ ರುದ್ರಗಣಂಗಳು ಉದಯವಾದರು ನೋಡಾ, ಆ ರುದ್ರಗಣಂಗಳು ಜಗತ್ಪಾವನ ಕಾರಣ ಮರ್ತ್ಯದಲ್ಲಿ ಅವತರಿಸಿದರೆ....”
—ಸಿದ್ಧೇಶ್ವರವಚನ.

“ ಸರ್ವದೇವಾತ್ಮಕೋರುದ್ರಃ ಸರ್ವೇದೇವಾಶ್ಶಿವಾತ್ಮಕಾಃ
ರುದ್ರಸ್ಯ ದಕ್ಷಿಣೇಪಾರ್ಶ್ವೇ ರವಿರ್ಬ್ರಹ್ಮತ್ರಯೋಽಗ್ನಯಃ
ವಾಮಪಾರ್ಶ್ವೇ ಉಮಾದೇವಿ ವಿಷ್ಣುಸೋಮೋಹಿ ತೇ ತ್ರಯಃ
—ರುದ್ರ ಹೃದಯೋಪನಿಷತ್.

ಹೀಗೆ ರುದ್ರನು ರುದ್ರಗಣರು ಅನಾದಿಯಲ್ಲಿ ಅವತರಿಸುವರು. ಆ ರುದ್ರಗಣರು ಅಸಂಖ್ಯಾತರು, ಅವರಿಗೆಲ್ಲ ರುದ್ರನೇ ಅಧಿಪತಿಯು.

“ ನವಕೋಟ್ಯಸ್ತು....ಸಾನಂತಾ ವೈ ಪ್ರಕೀರ್ತಿತಾಃ
ಸರ್ವಾಸಾಂ ಭಗವಾನ್ ರುದ್ರಃ ಸರ್ವಗತ್ವಾತ್ಪತಿರ್ಭವೇತ್ ”
—ವರಾಹಪುರಾಣ.

“ ರುದ್ರಾಣಾಮಪಿ ಯೋ ರುದ್ರಃ ಪ್ರಭಾ ಪ್ರಭವತಾಮಪಿ ।
ಯೋಗಿನಾಮಪಿ ಯೋ ಯೋಗೀಕಾರಣಾನಾಂ ಚ ಕಾರಣಂ ॥
ಯತೋಽಲೋಕಾಸ್ಸಂಭವಂತಿ ನಭವಂತಿ ಯತಃ ಪುನಃ ।
ಸರ್ವಭೂತಾತ್ಮ ಭೂತಸ್ಯ ಹರಸ್ಯಾಮಿತತೇಜಸಃ ॥ ”
—ಉಪಮನ್ಯು ಶಿವಚಾರ್ಯ.

" ಮೋಕ್ಷಮಾರ್ಗಂ ಪ್ರದರ್ಶಯೇತಿ. ಸಾಕ್ಷಾತ್
ಪರಂಜ್ಯೋತಿಃ ಪರಶಿವಃ ಕಾರ್ಯರುದ್ರ ಮುಪಾದಿಶತ್ "
—ವೀ. ಸದಾಚಾರ ಸಂಗ್ರಹ.

ಇದು ರುದ್ರದೇವನಿಗಿರುವ ಅಧಿಕಾರ.

" ದೇವಾ ಹ ವೈ ಸ್ವರ್ಗಂ ಲೋಕಮಗಮನ್ ತೇ ದೇವಾ
ರುದ್ರಮಪ್ರಚ್ಛನ್ ; ಕೋಽಭವಾನಿತಿ ? ಸೋಽಬ್ರವೀತ್,
ಅಹಮೇಕ: ಪ್ರಥಮಮಾಸಂ ವರ್ತಾಮಿ ಚ ;
ಭವಿಷ್ಯಾಮಿ ಚ ನಾನ್ಯಃ ಕಶ್ಚಿನ್ಮತ್ತೋ ವ್ಯತಿರಿಕ್ತ ಇತಿ."
—ಅಥರ್ವಶಿರಸ್ಸು.

ಹಿಂದೊಮ್ಮೆ ದೇವತೆಗಳು ಸ್ವರ್ಗಸದೃಶವಾದ ತನ್ನ ಲೋಕದಲ್ಲಿ ಇರುವ ರುದ್ರನನ್ನು ನೀನಾರೆಂದು ಕೇಳಿದರು. ಅದಕವನು ನಾನು ಸೃಷ್ಟಿಗಾದಿಯಲ್ಲಿ ಇದ್ದವನೊಬ್ಬನು. ಹಿಂದೆ ಮಾತ್ರವಲ್ಲ, ಇಂದೂ ಇದ್ದೇನೆ. ಮುಂದೆಯೂ ಇರುತ್ತೇನೆ. ನನಗನ್ಯನು ಮತ್ತೊಬ್ಬನಿಲ್ಲ. – ಎಂದು ಕೇಳಿದ ದೇವತೆಗಳಿಗೆ ರುದ್ರನು ಉತ್ತರಿಸಿದಾನೆ.

" ವಿಶ್ವಾಧಿಕೋರುದ್ರಃ " " ವಿಶ್ವಾಧಿಕೋ ರುದ್ರೋ ಮಹರ್ಷಿಃ " ಮುಂತಾದ ಶ್ರುತ್ಯುಪನಿಷತ್ತುಗಳು ರುದ್ರದೇವನ ಹಿರಿಮೆಯನ್ನು ಹೊಗಳಿವೆ.

" ಅತೀವ ಸುಖದಂ ಶುದ್ಧಂ ರೌದ್ರಂ ಲೋಕಂ ಸಮಾವಿಶನ್ ;
ತೇಷಾಂ ಮಧ್ಯೇ ಮಹಾದೇವ ಸ್ಸಂಸಾರದ್ರಾವಕೋ ಹರಃ
ರುದ್ರಃ ಪರಮ ಕಾರುಣ್ಯಾತ್ ಸ್ವಯಮಾವಿರಭೂತ್ "
—ಸೂತ ಸಂಹಿತೆ.

ರುದ್ರನಿದ್ದ ಆ ಲೋಕ ಸುಖದಾಯಕವಾಗಿತ್ತು ; ಶುದ್ಧವಾಗಿತ್ತು. ಅಲ್ಪ ಸುಖ ಅಲ್ಪ ಶುದ್ಧತೆಗಳಲ್ಲ ಅನಲ್ಪಸುಖಶುದ್ಧತೆಗಳ ಬೀಡಾಗಿತ್ತು ಆ ಅನಾದಿ ರುದ್ರದೇವನ ಲೋಕ. ಅದರಿಂದಾಗಿ ಆತನು ಇತರರ ದುಃಖರೂಪ ಸಂಸಾರವನ್ನು ಸಂಹರಿಸಲು ಸಮರ್ಥನಾಗಿದ್ದನು. ಅದರಿಂದಾಗಿ ಹರನೆಂಬ ಹೆಸರಾಂತನು ರುದ್ರನು ಹೆಸರಿನಂತೆ ರುದ್ರ (ಭೀಕರ)ನಾಗಿರಲಿಲ್ಲ. ಕರುಣಾಮಯ ಮೂರ್ತಿಯಾಗಿದ್ದನು ; ಶಾಂತಿ ಮುದ್ರೆಯಿಂದ ಮುದ್ರಿತನಾಗಿದ್ದನು.

" ಯೋ ದೇವಾನಾಂ ಪ್ರಭವಶ್ಚೋದ್ಭವಶ್ಚ ವಿಶ್ವಾಧಿಪೋ ರುದ್ರೋ ಮಹರ್ಷಿಃ, ಹಿರಣ್ಯಗರ್ಭಂ ಪಶ್ಯತ ಜಾಯಮಾನಂ ಸನೋ ಬುದ್ಧ್ಯಾ ಶುಭಯಾ ಸಂಯುನಕ್ತು "
—ಶ್ವೇತಾಶ್ವತರೋಪನಿಷತ್.

ದೇವ ದೇವತೆಗಳ ಜನ್ಮಕಾರಣ ರುದ್ರ. ಉನ್ನತಿಗೆ ಕಾರಣ ರುದ್ರ, ವಿಶ್ವಾಧಿಪ ರುದ್ರ ಮಹಾಋಷಿ (ಸರ್ವಜ್ಞ) ರುದ್ರ. ಆ ರುದ್ರನು ಸೃಷ್ಟಿಕರ್ತನಾದ ಹಿರಣ್ಯ

ಗರ್ಭನು ಹುಟ್ಟಿ ಬರುವುದನ್ನು ಕಣ್ಣಾರೆ ಕಂಡನು. ಅಂತಹ ರುದ್ರನು ನಮ್ಮಗಳಿಗೆ ಶುದ್ಧ ಬುದ್ಧಿಯನ್ನೀಯಲಿ. ಇದರಿಂದ ಆದಿಯಾದ ಸೃಷ್ಟಿಗೆ ಸೃಷ್ಟಿಕರ್ತನಿಗೆ ಅನಾದಿಯಾಗಿದ್ದನೆಂದು ಅವಗತವಾಗುತ್ತದೆ.

ಆತನ ವಾಸ ಕನಕಗಿರಿ.

" ಕನಕಗಿರಿ ನಿವಾಸಂ ಕಾಮ ಕಾಲ ನಾಶಂ ಕಮಲವೈರಿಭೂಷಂ
ನಿರತ ನಾಮಧೇಯಂ ಅನುಪಮತರ ವೀರಂ ಶೈವಭಕ್ತಿಭಾವಂ
ಜನಿತ ಪುಣ್ಯಕಾರಿಯಂ " ಎಂದುದಾಗಿಯೂ
" ನಾದಪ್ರಿಯಂ ನಾದಮಯಂ ನಾದಲಿಂಗಂ ಮಹೇಶ್ವರಂ
ಆದಿಮಧ್ಯಾಂತರಹಿತಂ ವೇದ ವೇದವಿದಂ ಪರಂ
ಮಂತ್ರಮೂರ್ತಿ ಮಹಾರುದ್ರಂ ಓಮಿತಿ ಜೋತಿರೂಪಕಂ "

ಎಂಬುದಾಗಿಯೂ ಆ ಅನಾದಿ ವೀರಶೈವ ಕಾರಣ ಕರ್ತನಾದ ರುದ್ರನನ್ನು ಕನಕಗಿರಿ ವಾಸನೆಂದು, ಕಾಮಕಾಲನಾಶನೆಂದು, ಚಂದ್ರಧಾರಿಯೆಂದು ನಾಮಯುಕ್ತನೆಂದು ಅಸದೃಶವೀರನೆಂದು, ಪುಣ್ಯ (ಮಂಗಳ) ಕಾಯನೆಂದು, ಮಿಗಿಲಾಗಿ ಶೈವಭಕ್ತಿ ಭಾವವುಳ್ಳವನೆಂದು ಅಂದರೆ ವೀರಶೈವನೆಂದು ಆದಿ ಮಧ್ಯಾಂತರಹಿತನೆಂದು ಅಂದರೆ ಅನಾದಿ ರೂಪನೆಂದು, ಮಂತ್ರ ಮೂರ್ತಿಯೆಂದು ಶ್ರುತಿಗಳು ಹೊಗಳಿವೆ. ಕನಕಗಿರಿವಾಸ ಎಂಬುದರಲ್ಲಿ ಜ್ಯೋತಿರ್ಮಯ ಸ್ವರೂಪವರ್ಣನೆಯು ಭಾಸವಾಗುತ್ತದೆ. ಶ್ರೀರುದ್ರನಿಂದಲೇ ವೀರಶೈವ ತತ್ತ್ವ ಜೋತಿಯು ಸುರೂಪಗೊಂಡಿತೆಂದು ತಿಳಿಯಬೇಕು. ಶ್ರೀರುದ್ರನು ಜ್ಯೋತಿರೂಪಾಗಿದ್ದಂತೆ ಶಾಂತಿ ರೂಪನೂ ಆಗಿದಾನೆ. ಅಗ್ನಿ ಮತ್ತು ಜಲ ತತ್ತ್ವಗಳೆರಡರ ಮೂರ್ತಿ ಅವನಾದ ಕಾರಣ ಆ ರುದ್ರನನ್ನು ಉಗ್ರರೂಪವಾಗಿಯೂ ಶಾಂತರೂಪವಾಗಿಯೂ ಚಿತ್ರಿಸುವ ಸಂಪ್ರದಾಯ ಸಾಗಿಬಂದಿದೆ. ಅಗ್ನಿ ತತ್ತ್ವದ ರುದ್ರನನ್ನು ಉಗ್ರವಾಗಿ ವರ್ಣಿಸಿದಾರೆ. ಜಲತತ್ತ್ವದ ರುದ್ರನನ್ನು ಶಾಂತ ಮೂರ್ತಿಯನ್ನಾಗಿ ವರ್ಣಿಸಿದಾರೆ. ಪುಣ್ಯಕಾಯನು ಅನಾದಿ ರುದ್ರನು. 'ಯಾತೇ ರುದ್ರ ಶಿವಾ ತನೂರಘೋರಾ ಅಪಾಪಕಾಶಿನೀ' ಎಂಬ ವೇದವಾಣಿಯು ಅದನ್ನೇ ಸಮರ್ಥಿಸುತ್ತದೆ. ಇದಲ್ಲದೆ ಬಹು ಜನ ಭಾಷ್ಯಕಾರರು ಇದನ್ನೇ ಸಮರ್ಥಿಸಿದ್ದಾರೆ. ತ್ರಿಲೋಚನ ಶಿವಾಚಾರ್ಯರು ತಮ್ಮ ಭಾಷ್ಯದಲ್ಲಿ "ರುತ್ಯಾ ಪ್ರಣವರೂಪಯಾ ಸ್ವಾತ್ಮಾನಂ ಪ್ರಾಪಯತೀತಿವಾ ರುದ್ರೋ ರೌರೀತಿ ಸತ್ಯೇ ರೋರೂಯಮಾಣೋ ದ್ರವತಿ; ಪ್ರವಿಶತಿ ಮರ್ತ್ಯಾನ್ ಇತಿರುದ್ರಃ, ತೇಜಸ್ವೀತಿ ವಾ ರುದ್ರಃ" ಪ್ರಣವರೂಪದಿಂದ ತನ್ನನ್ನು ಹೊಂದಿಸುವನೆಂದು, ಮರ್ತ್ಯರನ್ನು ಸತ್ಯದಲ್ಲಿ ಪ್ರವೇಶ ಮಾಡಿಸಿ ಕರುಣಿಸುವನೆಂದು,ಮಹಾತೇಜಸ್ಸುಳ್ಳವನೆಂದು, ಅನ್ವರ್ಥನಾಮರುದ್ರನೆಂದೆನಿಸಿದ್ದಾನೆ.

ಹರದತ್ತಾಚಾರ್ಯರು ತಮ್ಮ ಭಾಷ್ಯದಲ್ಲಿ "ರುತಾ ನಾದೇನ ಸಕಲಂ ಜಗದಿದಂ ದ್ರಾವಯತಿ ರಂಜಯತಿ ನಾದಾತ್ಮಕತ್ವಾದಿತಿ ರುದ್ರಃ; ಅಥವಾ ಸಂಸಾರ ಚಕ್ರವರ್ತಿನಃ ತತ್ರತತ್ರ ಕ್ಲೇಶಪರಂ ಪರಾಮನುಭವತಃ ಪ್ರಾಣಿನೋ ದೃಷ್ಟ್ವಾ ಕೃಪಾವಿಷ್ಟೋ ರೋದತೀತಿ ರುದ್ರಃ ಅಥವಾ ಅನಾದಿ ಮಲಕರ್ಮವಾಸನಾರೂಢ ದೇಹಾದಿ ಶರೀರಾಭಿಮಾನ ಪ್ರವಾಹ ಸಿದ್ಧಾಮಧ್ಯಾತ್ಮಾದಿ ಭೇದಭಿನ್ನಾಮಸಹ್ಯಾಂ ಸಂಸಾರರುಜಂ ದ್ರಾವಯತ್ಯುಪಾಸಕಾನಾಮಿತಿ ರುದ್ರ ಇತ್ಯುಚ್ಯತೇ"

ರುದ್ರನು ಅನಾದಿ ವೀರಶೈವ ಕರ್ತನೆಂಬುದನ್ನು ಈ ಉಕ್ತಿಯು ಉತ್ತಮವಾಗಿ ವಿವರಿಸಿದೆ. ಅದರಾಶಯವಿದು. ತನ್ನ ಮಂಜುಳ ನಾದದಿಂದ ಈ ಸಕಲ ಜಗತ್ತನ್ನು ರಂಜಿಸುವನಾದುದರಿಂದ ರುದ್ರನೆನಿಸಿದನು. ಮತ್ತು ಈ ಜನನ ಮರಣರೂಪ ಸಂಸಾರ ಚಕ್ರದಲ್ಲಿ ಸಿಕ್ಕಿ ತಿರ್ರನೇತಿರುಗುತ್ತಿರುವ ಮತ್ತು ಸಂಸಾರದುಃಖದಲ್ಲಿ ಮುಳುಗಿರುವ ಜೀವಿಗಳನ್ನು ಕಂಡು ಕರುಳು ಕರಗಿ ಕೃಪೆಯುಳ್ಳವನಾಗಿ ಅವರ ದುಃಖವನ್ನು ದೂರ ಮಾಡುವವನಾಗಿ ರುದ್ರನೆಂದೆನಿಸಿದಾನೆ. ಇದಲ್ಲದೆ ಅನಾದಿಯಾದ ತ್ರಿಮಲಗಳ ಕರ್ಮವಾಸನೆಯಿಂದ ದೇಹಾಭಿಮಾನವುಳ್ಳವರ ಆಧ್ಯಾತ್ಮಾದಿ ತಾಪತ್ರಯಗಳನ್ನು ಅಸಹ್ಯವಾದ ಸಂಸಾರ ರೋಗವನ್ನು ಕಳೆಯುವನಾದ ಕಾರಣ ರುದ್ರನೆಂದೆನಿಸಿದಾನೆ.

"ರುತ್ಯಾ ವೇದರೂಪಯಾ ಧರ್ಮಾದೀನವಲೋಕಯತಿ ಪ್ರಾಪಯತೀತಿ ವಾ ರುತ್ಯಾ ವಾಗ್ರೂಪಯಾ ವಾಚ್ಯಂ ಪ್ರಾಪಯತೀತಿ ರುದ್ರಃ" ರುದ್ರನು ವೇದ ನಿರ್ಮಾಪಕನೆಂದು ಭಟ್ಟ ಭಾಸ್ಕರಾಚಾರ್ಯನು ತನ್ನ ಭಾಷ್ಯದಲ್ಲಿ ಬಣ್ಣಿಸಿದ್ದಾನೆ. ಇದೇ ಅಭಿಪ್ರಾಯವನ್ನು ದೀಕ್ಷಿತೇಂದ್ರನು ತನ್ನ ಭಾಷ್ಯದಲ್ಲಿ "ರುತಿಂ ಶಬ್ದಂ ವೇದಾತ್ಮಾನಂ ಬ್ರಹ್ಮಣೇ ದದಾತಿ ಕಲ್ಪಾದಾವಿತಿ ರುದ್ರಃ | ಯೋವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ ರುದ್ರಪದಂ ವ್ಯುತ್ಪಾದ್ಯತೇ ||" ಎಂದು ಹೇಳಿದಾನೆ. ಕೊನೆಯದಾಗಿ ಶ್ರೀ ಜಗದ್ಗುರು ಪಂಡಿತಾರಾಧ್ಯರು ತಮ್ಮ ಭಾಷ್ಯವಲ್ಲಿ ರುದ್ರಪದ ವಿವರಣೆಯನ್ನು ಈ ರೀತಿ ಮಾಡಿದಾರೆ. "ರೋದಿಕಾ ಬಂಧಿಕಾ ಮೋಹಿಕಾ ವಾ ಶಕ್ತಿಸ್ತದ್ವಾನ್ ತಸ್ಯಾದ್ರಾವಯಿತಾ ವಾ ಭಕ್ತೇಭ್ಯೋ ರುದ್ರಃ | ರುದಂ ಸಂಸಾರದುಃಖಂ ದ್ರಾವಯತೀತಿ ವಾ ರುದ್ರಃ | ಯಥಾ ಅಶುಭದ್ರಾವಕೋ ರುದ್ರೋ ಯಜ್ಞಹಾರ ಪುನರ್ಭವಂ"

ಓಂಕಾರ ರಥಮಾರುಹ್ಯ ವಿಷ್ಣುಂ ಕೃತ್ವಾತು ಸಾರಥಿಂ |
ಬ್ರಹ್ಮಲೋಕ ಪದಾನ್ವೇಷೀ ರುದ್ರಾರಾಧನ ತತ್ಪರಃ ||

ಅಮೃತನಾದೋಪನಿಷತ್ತು ರುದ್ರಾರಾಧನೆಯ ಮಹಿಮೆಯನ್ನು ಮನಸಾರೆ ಬಣ್ಣಿಸಿದೆ.

ಇದಲ್ಲದೆ "ಏಕೋ ರುದ್ರಃ ಸರ್ವೋ ವೈ ರುದ್ರಃ ಸರ್ವೋ ಹ್ಯೇಷರುದ್ರಃ ನಮೋ ರುದ್ರಾಯ ಪಶುಪತಯೇ ರುದ್ರೋಽಗ್ನಿಃ" ಎಂಬುದಾಗಿ ವೇದ ಪ್ರಮಾಣವುಂಟು.

ಆ ಅನಾದಿಕಾಲದ ರುದ್ರನನ್ನು ಆದಿಕಾಲದಲ್ಲಿರುವ ವೇದಗಳು ವಿಶೇಷವಾಗಿ ಹೊಗಳಿವೆ. ಋಗ್ವೇದದ "ಅಗ್ನಿಮೀಳೆ ಪುರೋಹಿತಂ........" ಎಂಬ ಆದಿಋಕ್ ರುದ್ರನನ್ನೇ ಹೊಗಳಿದೆ. ಆ ಪರಶಿವನ ಆದಿ ತತ್ತ್ವಗಳಾದ ನಾದ ತೇಜಗಳೆರಡೂ ರುದ್ರ ರೂಪವೆಂಬುದನ್ನು ಚೆನ್ನಾಗಿ ತಿಳಿಯಬೇಕು. ಇವೆರಡರಿಂದ ರುದ್ರ ಮಹಿಮೆ ಎಂತಹದೆಂಬುದು ಮನಸ್ಸಿಗೆ ತಟ್ಟುತ್ತದೆ. ಅರೂಪವಾದ ಆ ವಸ್ತು ರೂಪಕ್ಕೆ ಬರಬೇಕಾದರೆ ಅಗ್ನಿ (ಜ್ಯೋತಿ) ತತ್ತ್ವದಿಂದಲೆ ಮೊದಲಾಗಬೇಕು. ಅಗ್ನಿರೂಪನು ರುದ್ರನಲ್ಲದೆ ಇನ್ನಾರಿಲ್ಲ. ಪ್ರಾಕೃತ ಸೃಷ್ಟಿಯು ಸಹ ಅಗ್ನಿ ತತ್ತ್ವದಿಂದಲೇ ರೂಪುಗೊಳ್ಳುತ್ತದೆ. ಅಂತೆಯೇ ಅಪ್ರಾಕೃತ ಸೃಷ್ಟಿಯಾದ ವೀರಶೈವವು ಸಹ ಜ್ಯೋತಿರ್ಮಯನಾದ ಆ ರುದ್ರ ತತ್ತ್ವದಿಂದಲೇ ಆರಂಭವಾಗಿರುವುದರಲ್ಲಿ ಔಚಿತ್ಯವಿದೆ. ಅರ್ಥವಿದೆ. ಆದ್ದರಿಂದ ಅನಾದಿ ವೀರಶೈವಕ್ಕೆ ಅನಾದಿಯಾದ ಆ ರುದ್ರನೇ ಕರ್ತನು.

"ರುದ್ರೇಣ ದೀಕ್ಷಿತೋಽಭೂತ್ವಾ ಸ್ಕಂದಃ ಶಿವಸಮೋಽಭವತ್
ಶಿವಾಚಾರ ರಹಸ್ಯಸ್ಯ ಪಾತ್ರತಾಂ ಪ್ರಥಮಂ ಗತಃ"

ಎಂಬೀ ಆದಿತ್ಯ ಪುರಾಣೋಕ್ತಿಯನ್ನು ಚೆನ್ನಬಸವಣ್ಣನು ತನ್ನ ವಚನದಲ್ಲಿ ಉದಹರಿಸಿದಾನೆ. ಇದರಿಂದ ಶ್ರೀರುದ್ರನು ಅನಾದಿ ವೀರಶೈವ ಗುರುವಾಗಿದ್ದಾನೆಂಬುದು ಸುಸ್ಪಷ್ಟವಾಗಿದೆ. ಚೆನ್ನಬಸವಣ್ಣನವರ ಮೂಲಪುರುಷನಾದ ಸ್ಕಂದನನ್ನು ದೀಕ್ಷೆಯಿಂದ ಶಿವಾಚಾರ ಸಂಪನ್ನನನ್ನಾಗಿ ಮಾಡಿದನೆಂಬುದು ಅದರಲ್ಲಿಯೂ ಪ್ರಥಮದಲ್ಲಿ ಮಾಡಿದನೆಂಬುದು ಗಮನಾರ್ಹ ವಿಷಯವಾಗಿದೆ.

"ರುದ್ರೋ ಲಿಂಗಮುಮಾಪೀಠ ತಸ್ಮೈ ನಮೋ ನಮಃ"

—ರುದ್ರ ಹೃದಯೋಪನಿಷತ್

ಆ ಶ್ರೀ ರುದ್ರಗುರುವೇ ಲಿಂಗರೂಪಾಗಿ ಶಿಷ್ಯನ ಕರ ಉರ ಸ್ಥಲಗಳಿಗೆ ಬರುತ್ತಾನೆ. ಆತನೇ ಲಿಂಗ; ಅದು ಜ್ಯೋತಿರ್ಲಿಂಗ. ಆತನಿಂದಲೇ ಲಿಂಗೋತ್ಪತ್ತಿ. ರುದ್ರನಿಂದ ಭಸ್ಮೋತ್ಪತ್ತಿ. ಆತನ ಆ ಭಸ್ಮವೂ ಜ್ಯೋತಿಸ್ವರೂಪ. ರುದ್ರನಿಂದ ರುದ್ರಾಕ್ಷೋತ್ಪತ್ತಿ.

"ಇದುಸೇ ಬ್ರಹ್ಮಕಪಾಲ ಕರದಲ್ಲಿ. ಇದುದೆ ವಿಷ್ಣುನಯನ ಚರಣದಲ್ಲಿ. ಇದುದೆ ಕಾಮನ ಸುಟ್ಟ ವಿಭೂತಿ ಮೈಯಲ್ಲಿ. ಇದುದೆ ಕಾಲನ ಸುಟ್ಟ ಕಿಡಿಗಣ್ಣು ನೊಸಲಲ್ಲಿ. ಇದಕ್ಕೆ ಮುಖ ಮೊದಲೇಕಯ್ಯಾ ಕೂಡಲ ಸಂಗಮ ದೇವಾ."

"ಶ್ರೀ ರುದ್ರ ಪ್ರೀತ್ಯರ್ಥೇ ಭಸ್ಮತ್ರಿಪುಂಡ್ರ ಧಾರಣೇ ವಿನಿಯೋಗಃ" ಎಂಬುದಾಗಿ ಕಾಲಾಗ್ನಿ ರುದ್ರೋಪನಿಷತ್ತು ಉಗ್ಗಡಿಸಿದೆ. ಆತನಿಂದಾದ ವಿಭೂತಿಯನ್ನು ಆತನ ಪ್ರೀತಿಗಾಗಿಯೆ ಧರಿಸಬೇಕು. ಅಂತೆಯೇ ರುದ್ರಾಕ್ಷಧಾರಣವೂ ಸಹ! ಆತನ ವಿಭೂತಿಯನ್ನು ಧರಿಸದೆ ರುದ್ರಾಕ್ಷವನ್ನು ಧರಿಸದೆ ಮಂತ್ರ ಜಪಿಸಲು ಅರ್ಹತೆ

ಬರುವುದಿಲ್ಲ. "ರುದ್ರ ಮಂತ್ರ ಜಾಪೀ ಭವತಿ" ಭಸ್ಮ ಧರಿಸಿದಾತನು ರುದ್ರ ಮಂತ್ರ ಜಪಿಸಲು ಅಧಿಕಾರಿಯಾಗುವನು. ಇದರಿಂದ ಅನಾದಿ ರುದ್ರನ ಕಾಲದಲ್ಲಿ ಇನ್ನೂ ಶಿವ ಪಂಚಾಕ್ಷರಿಯು ಹುಟ್ಟಿರಲಿಲ್ಲೆಂಬುದು 'ರುದ್ರ ಮಂತ್ರ' ಪದಪ್ರಯೋಗದಿಂದ ತಿಳಿಯುತ್ತದೆ. ಆಗ ರುದ್ರ ಪಂಚಾಕ್ಷರಿಯೇ ಬಳಕೆಯಲ್ಲಿರಬೇಕು. ಪಂಚಬ್ರಹ್ಮ ಮಂತ್ರವಾದ ವಾಮದೇವ ಮಂತ್ರದಲ್ಲಿ "ರುದ್ರಾಯ ನಮಃ" ಎಂಬ ರುದ್ರ ಪಂಚಾಕ್ಷರಿಯು ಉಲ್ಲಿಖಿತವಾಗಿದೆ. 'ನಮೋ ರುದ್ರಾಯ' ಎಂತಲೂ ಸಿಕ್ಕುತ್ತದೆ.

ಹೀಗೆ ಶ್ರೀರುದ್ರನು ಆದಿಗುರುವಾಗಿ ಲಿಂಗವಾಗಿ ಜಂಗಮನಾಗಿ ಭಸ್ಮ ರುದ್ರಾಕ್ಷ ಮಂತ್ರ ಸ್ರಷ್ಟನಾಗಿ ಅಷ್ಟಾವರಣ ಕರ್ತನಾಗಿರುವಂತೆ – ಷಟ್‌ಸ್ಥಲ ಸಂಸ್ಥಾಪಕನೂ ಅವನೇ ಆಗಿದಾನೆ. "ವೀರಶೈವ ಷಟ್‌ಸ್ಥಲ ಮೇವ ಅನಾದೀತ್ಯುತ್ತರಂ" ಎಂದು ಅನಾದಿ ವೀರಶೈವ ಸಾರಸಂಗ್ರಹ ಕೃತಿಯು ವೀರಶೈವ ಷಟ್‌ಸ್ಥಲವು ಅನಾದಿಯೆಂಬುದಾಗಿ ಹೇಳಿದೆ. ಅನಾದಿಯಾದ ಷಟ್‌ಸ್ಥಲವನ್ನು ಅನಾದಿ ವೀರಶೈವ ಕರ್ತನಾದ ಶ್ರೀರುದ್ರನೇ ಸಂಸ್ಥಾಪಿಸಿರಬೇಕಲ್ಲವೆ?

ರುದ್ರದೇವನ ಪ್ರಾಶಸ್ತ್ಯವನ್ನು ಕೆಲವು ಪದಾರ್ಥಗಳಿಗಿರುವ ಹೆಸರುಗಳಿಂದಲೂ ಗುರುತಿಸಬಹುದಾಗಿದೆ. ದಾಸವಾಳ ಹೂವಿಗೆ 'ರುದ್ರಪುಷ್ಪ'ವೆಂದು, ಪಾದರಸಕ್ಕೆ 'ರುದ್ರಶುಕ್ಲ'ವೆಂದು, ಕೆಂಪಗಸೆ ಕುಸುಮಕ್ಕೆ 'ರುದ್ರಪರ್ಣಿಕಾ' ಎಂದು – ಹೆಸರಿರುವುದು ಹೆಚ್ಚು ಗಮನಾರ್ಹ ವಿಷಯ. ಅಲ್ಲದೆ ರುದ್ರಜಟೆ, ರುದ್ರಕನ್ನೆ, ರುದ್ರಗ್ರಂಥಿ, ರುದ್ರಾಣಿ, ರುದ್ರಾಕ್ಷಿ, ರುದ್ರಭೂಮಿ, ರುದ್ರಗಣ ಮುಂತಾದ ನಾಮಗಳು ರುದ್ರನ ವ್ಯಕ್ತಿ ಪ್ರಾಶಸ್ತ್ಯವನ್ನು ಅನಾದಿಕಾಲದ ಅಧಿಕಾರ ಆಧಿಕ್ಯಗಳನ್ನು ಅಭಿವ್ಯಕ್ತಗೊಳಿಸುವುದಿಲ್ಲವೇ?

"ದೇವಾನಾಮಾದಿ ಭೂತಶ್ಚ ರುದ್ರೋ ವಿಶ್ವಾಧಿಕಃ ಪ್ರಭುಃ
ಸರ್ವಜ್ಞಃ ಸರ್ವಕರ್ತಾ ಚ ಸರ್ವಕಾರಣಮೀಶ್ವರಃ"

ದೇವರ ದೇವ ಶ್ರೀರುದ್ರ. ದೇವರಿಗೆಲ್ಲ ಮೊದಲಿಗ ಶ್ರೀರುದ್ರ. ವಿಶ್ವದಲ್ಲಿ ಮಿಗಿಲಾದ ಪ್ರಭು ಶ್ರೀರುದ್ರ. ಅಲ್ಲದೆ ಸರ್ವಜ್ಞನೂ ಸರ್ವಕರ್ತನೂ ಸರ್ವಕಾರಣನೂ ಸರ್ವೇಶ್ವರನೂ ಆತನೇ ಆಗಿದಾನೆ.

"ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ।
ನಬ್ರಹ್ಮಾ, ನವಿಷ್ಣುರ್ನಶೂನ್ಯೋ ನಾಗ್ನಿರ್ನಚಂದ್ರ ತಾರಕಾಃ॥"

—ಯಜುರ್ವೇದ.

"ಏಕೋ ರುದ್ರಃ ಸ ಈಶಾನಃ ಸ ಭಗವಾನ್ ಸ ಮಹೇಶ್ವರಃ
ಸ ಮಹಾದೇವ ಇತಿ ಶ್ರುತಿಃ"

ಅನಾದಿ ರುದ್ರನು ಅದ್ವಿತೀಯನು. ಆತನಿಗೆ ಮೊದಲು ಆತನ ಮುಂದೆ ಬ್ರಹ್ಮ ವಿಷ್ಣ್ವಾದಿಗಳಿಲ್ಲ – ಅಲ್ಲ. ಅವನೇ ಒಡೆಯ. ಅವನೇ ಷಡ್ಗುಣೈಶ್ವರ್ಯ ಸಂಪನ್ನ. ಅವನೇ ಸರ್ವೇಶ್ವರ; ಶ್ರೇಷ್ಠ ದೇವ.

" ತಮುಷ್ಟು ಹಿಯಸ್ವಿಷು ಸುಧನ್ವಾ ಯೋ ವಿಶ್ವಸ್ಯ
ಕ್ಷಯತಿ ಭೇಷಜಸ್ಯ । ಯಕ್ಷ್ವಾಮಹೇ ಸೌಮನಸಾಯ
ರುದ್ರಂ ನಮೋಭಿರ್ದೇವಮುಸುರಂ ದುವಸ್ಯ ॥ "

—ಋಗ್ವೇದ

ವಿಶ್ವರೂಪ ರುದ್ರ. ವಿಶ್ವರಕ್ಷಕ ರುದ್ರ. ಆ ರುದ್ರನನ್ನು ತನುಮನ ವಚನಗಳಿಂದ ಸೇವಿಸು, ನಮಿಸು ; ಪೂಜಿಸು. ಧ್ಯಾನಿಸು ; ಸ್ತುತಿಸು. ರೋಗ – ಭವರೋಗಗಳ ಹರಿಸುತ್ತಾನೆ ರುದ್ರದೇವ. 'ರುದ್ರಾಯ ಸ್ಥಿರ ಧನ್ವನೇ' 'ಸುಧನ್ವಾ' ಎಂದು ಹೇಳಿದುದರಿಂದ ರುದ್ರನು ಸಾವಯವಿ ; ಸಾಕಾರಸ್ವರೂಪಿ. ತಮುಷ್ಟುಹಿ – ಯಕ್ಷ್ವಾಮಹೇ ಈ ಪದ ಪ್ರಯೋಗಗಳೂ ಆತನ ಸಾಕಾರತೆಗೆ ಸಾಕ್ಷಿಗಳಾಗಿವೆ. ಆತನೊಬ್ಬ ಅನಾದಿ ಕಾಲದ ದಿವ್ಯವ್ಯಕ್ತಿ ; ವಂದ್ಯ ವ್ಯಕ್ತಿ. ಮಂಗಳ ಮೂರ್ತಿ ; ಸೇವ್ಯ ಮೂರ್ತಿ. ಸ್ತುತ್ಯ ಮೂರ್ತಿ ; ಸಂರಕ್ಷಕ ಮೂರ್ತಿ.

" ನಮೋಭಿಗೃಣೀಮುಸಿ ತ್ವೇಷಂ ರುದ್ರಸ್ಯ ನಾಮ
ಇಮಾ ರುದ್ರಾಯ ಗಿರೋ ಭರತಾಸ್ತುಹಿ । ಶ್ರುತಂಗರ್ತ
ಸದಂ ಸ್ತೋಮಂ ವೋ ಅದ್ಯರುದ್ರಾಯ ದಿದಿನಷ್ಟ"

ಇತ್ಯಾದಿ ಯಜುರ್ವೇದ ಋಕ್ಕುಗಳು ರುದ್ರದೇವನನ್ನೇ ಋಜುಪಡಿಸಿವೆ ; ಭಜಿಸಿವೆ.

" ಕಾಲಃ ಪ್ರಾಣಶ್ಚ ಭಗವಾನ್ ಮನ್ಯುಶ್ಯರ್ವೋ ಮಹೇಶ್ವರಃ
ಉಗ್ರೋಭವಶ್ಚ ರುದ್ರಶ್ಚ ಸಸುರಸ್ಸಾಸುರಸ್ತಥಾ
ಪ್ರಜಾಪತಿರ್ವಿರಾಟ್ಚೈವ ಪುರುಷಸ್ಸಲಿಲಮೇವಚ
ಸ್ತೂಯತೇ ಮಂತ್ರ ಸಂಸ್ತುತ್ಯೈರಥರ್ವ ವಿದಿತೈರ್ವಿಭುಃ "

—ಅಥರ್ವಣ

ಕಾಲತತ್ತ್ವದಿಂದ ಜಲತತ್ತ್ವದವರೆವಿಗೂ ಇರುವವುಗಳೆಲ್ಲ ರುದ್ರರೂಪವೆಂದು ಅಥರ್ವಣ ವೇದಾಧ್ಯಾಯಿಗಳು ವರ್ಣಿಸಿದಾರೆ. ಶತರುದ್ರೀಯವು ಅಥರ್ವಣಶಾಖೆಯಾಗಿ ನೂರೊಂದಾಗಿ ನೂರೊಂದು ಸ್ಥಲಕ್ಕೆ ಬೀಜಾವಾಪವನ್ನು ಮಾಡಿದೆ. " ಶತರುದ್ರೀಯಸ್ಯಚ ಮಹಿಮಾನಂತ ಆಮ್ನಾಯತೇ । ಅಥಹ್ಯೇನಂ ಬ್ರಹ್ಮಚಾರಿಣ ಊಚುಃ ॥ ಕಿಂ ಜಪ್ಯೇನಾಮೃತತ್ವಂ ನೋ ಬ್ರೂಹೀತಿ । ಶತರುದ್ರೀಯೇಣೇತಿ । ಏತಾನಿ ಹವಾ ಅಮೃತಸ್ಯ ನಾಮಧೇಯಾನಿ । ಏತೈರ್ಹವಾ ಅಮೃತೋ ಭವತೀತಿ ॥ "

—ಜಾಬಾಲೋಪನಿಷತ್

"ಅಪ್ರೋ ರಾಜಾನಮಧ್ವರಸ್ಯ ರುದ್ರಂ ಹೋತಾರಂ ಸತ್ಯಯುಜಂ ರೋದಸ್ಯೋಃ ಅಗ್ನಿಂ ಪುರಾತನ ಯಿತ್ನೋರಚಿತ್ತಾದ್ಧಿರಣ್ಯ ರೂಪಮುವಸೇ ಕೃಣುಧ್ವಂ " —ಎಂದು ಋಗ್ ಯಜುಸ್ಸಾಮ ವೇದಗಳಲ್ಲಿ ವರ್ಣನೆಯಿದೆ. ಯಜ್ಞದೊಡೆಯನು ರುದ್ರನು.

ಜಪದಿಂದ ಮುಕ್ತಿಯೆಂದು ಒಪ್ಪುವದಾದರೆ ಇನ್ನಾವ ಜಪದಿಂದಲೂ ಸಾಧ್ಯವಿಲ್ಲ; ಶತರುದ್ರೀಯ ಜಪದಿಂದಲೇ ಮುಕ್ತಿ ಸಾಧ್ಯ; ಪಾತಕವಧ್ಯ. ಅಮೃತತತ್ವದ ಹೃದಯ ಶತರುದ್ರೀಯ. ರುದ್ರನ ಶತನಾಮುಗಳೆ ಅಮೃತ ಸುರಿಸುವ ನಾಮುಗಳು. ಆ ನಾಮುಗಳ ನೆನೆದರೆ ಅಮೃತದ ಹನಿಗಳ ಪಾನಮಾಡಿದಂತಾಗಿ ಅಮರರಾಗುತ್ತಾರೆಂದು ಬ್ರಹ್ಮನಿಷ್ಠ ಸಾಧಕರಿಗೆ ಯಾಜ್ಞವಲ್ಕ್ಯನು ಉಪದೇಶಿಸಿದಾನೆ.

"ಯಶ್ಶತರುದ್ರೀಯಮಧೀತೇ ಸೋಽಗ್ನಿಪೂತೋಭವತಿ...." ಎಂಬುದಾಗಿ ಕೈವಲ್ಯೋಪನಿಷತ್ತು ಆ ಮಾತನ್ನು ಸಮರ್ಥಿಸಿದೆ. ಶತರುದ್ರೀಯ ಜಾಪಕನು ಜ್ಯೋತಿಯಂತೆ ತೇಜಸ್ವಿಯೂ ಪವಿತ್ರನೂ ಆಗುತ್ತಾನೆಂದು ಅದರ ಅರ್ಥ. "ರುದ್ರಂ ಪುರುಷಸೂಕ್ತಂಚ ನಿತ್ಯಮಾವರ್ತಯೇದ್ಯತಿಃ" ನಿತ್ಯ ಶ್ರೀರುದ್ರ ಪುರುಷಸೂಕ್ತಗಳನ್ನು ಪಠಿಸುವುದೇ ಯತಿಗೆ ನಿಯತಿ ಎಂದು ಸ್ಮೃತಿಯ ಉಕ್ತಿ. ಇದು ಇಂದಿಗೂ ವೀರಶೈವ ಗುರು ಜಂಗಮರ ಮತ್ತು ಶೈವರ ನಿತ್ಯಾರ್ಚನಾನುಷ್ಠಾನದಲ್ಲಿ ಪಠಿಸುವ ರೂಢಿ ಬಂದಿದೆ. ಶ್ರೀರುದ್ರ ಪಠನವು ಇಷ್ಟೊಂದು ದೀರ್ಘಕಾಲ ಅಚ್ಚಳಿಯದೆ ನಿತ್ಯ ಅರ್ಚನಾದಿ ಕ್ರಿಯೆಗಳಲ್ಲಿ ಪಠಿಸುವ ಪದ್ಧತಿ ಬೆಳೆದುಬರಬೇಕಾದರೆ ಶ್ರೀರುದ್ರದೇವನ ಪ್ರಭಾವ ಶೈವ ಮತ್ತು ವೀರಶೈವ ಮತಗಳ ಮೇಲೆ ಎಷ್ಟಿರಬೇಕೆಂಬುದನ್ನು ಎದೆಯಾರೆ ನೆನೆಯಬೇಕು.

ತೇಜಸ್ತತ್ತ್ವದ ರುದ್ರನನ್ನು ಹಿರಣ್ಯವರ್ಣನೆಂದು ಕೆಂಪು ಬಣ್ಣದವನೆಂದು ಹೇಳುವುದುಂಟು. 'ಅಸೌಯಸ್ತಾಮ್ರ ಅರುಣ ಉತ ಬಭ್ರುಃ ಸುಮಂಗಲಃ' "ಹಿರಣ್ಯರೂಪಮುವಸೇ ಕೃಣುಧ್ವಂ" ಎಂದು ವೇದ ಹೊಗಳಿದೆ. ರುದ್ರ ವರ್ಣಕ್ಕೆ ಚೆಲುವು – ಕೆಂಪು ಎಂಬ ಅರ್ಥಗಳನ್ನು ಮಾಡುವುದಲ್ಲದೆ ಮಂಗಲವೆಂದೂ ಹೇಳುವುದುಂಟು. ಕೆಂಪು ಮಂಗಲವಾಚಿಯಾದುದರಿಂದ ರುದ್ರದೇವನ ಸ್ಮರಣಗೌರವ ಸೂಚಕವಾಗಿ ಮಂಗಲೆಯರು ಹಣೆಯಲ್ಲಿ ಕುಂಕುಮ ಧರಿಸುವ ರೂಢಿ ಸಾಗಿಬಂದಿದೆ. ಇದು ರುದ್ರನ ಅಗ್ನಿನೇತ್ರದ ಕುರುಹಾಗಿದೆ. ಕಾವಿ ಬಟ್ಟೆಯ ಧರಿಸುವುದು ರುದ್ರಗಣರ (ಚರಮೂರ್ತಿಗಳ) ಚಿನ್ಹೆ. ಕೆಂಪು ಸೌಂದರ್ಯವಾಚಿಯಾದುದರಿಂದ ಕೆಂಪಮ್ಮ ಕೆಂಪಣ್ಣ ಎಂದು ಹೆಸರಿಟ್ಟುಕೊಳ್ಳುವುದುಂಟು. ಇವೆಲ್ಲ ರುದ್ರದೇವನ ಸಂಸ್ಕೃತಿ, ಸಂಪ್ರದಾಯಗಳು. *

ಅನಾದಿ ವೀರಶೈವದ ಪ್ರಾಗೈತಿಹಾಸಿಕ ಕಾಲದಲ್ಲಿ ಪ್ರಾಮುಖ್ಯವಾಗಿ ಹನ್ನೊಂದು ಜನ ರುದ್ರರಾಗಿದ್ದಾರೆ. ಇವರನ್ನು ಕುರಿತು ಶ್ರೀ ರುದ್ರಕೃತಿಯು ಹುಟ್ಟಿದೆ. ಇನ್ನು ರುದ್ರಗಣರಿಗೆ ಲೆಕ್ಕವಿಲ್ಲ. 'ಗಂಗೆವಾಳುಕ ಸಮರುದ್ರರು' ಎಂಬುದಾಗಿ ವಚನಕಾರರು ವರ್ಣಿಸುವುದುಂಟು. ಅಲ್ಲದೆ :

---

* ರುದ್ರದೇವನ ಅನಾದಿ ವೀರಶೈವ ರೀತಿ ನೀತಿ ಸಂಸ್ಕೃತಿ ಸಂಪ್ರದಾಯಗಳನ್ನು ಹೆಚ್ಚಾಗಿ ತಿಳಿಯಲು ಸಾಹಿತ್ಯ ಸಂಪತ್ತಿಯಿಲ್ಲ. ಋಗ್ವೇದದಲ್ಲಿ ಹೆಚ್ಚಾಗಿ ಬರೆಯಲಿ ನಿರೋಧದಿಂದಾಗಿ !

"ಯೇ ರುದ್ರಲೋಕಾದವತೀರ್ಯ ರುದ್ರಾ ಮನುಷ್ಯಮಾಶ್ರಿತ್ಯ ಜಗದ್ಧಿತಾಯ ।
ಚರಂತಿ ನಾನಾವಿಧ ಚಾರುಚೇಷ್ಟಾಸ್ತೇಭ್ಯೋ ನಮಸ್ತ್ರ್ಯಂಬಕ ಪೂಜಕೇಭ್ಯಃ॥"

ಈ ರುದ್ರಗಣರೆಲ್ಲರೂ ರುದ್ರ ಪೂಜಕರು. ತ್ರ್ಯಂಬಕನು ಶಿವನಲ್ಲ; ರುದ್ರ ದೇವನ ಹೆಸರಿದು. ತ್ರ್ಯಂಬಕ ಪೂಜಕರೆಂದರೆ ಅನಾದಿ ವೀರಶೈವರು.

"ರುದ್ರಸಂಘೈಃ ಪುರಾ ಲೋಕೇ ರಚಿತಂ ತದ್ ವ್ರತಂ ಪ್ರಿಯೇ
ತತ್ ಪ್ರಸಾದಮುಪೈಹಿ...."

—ವೀರಮಾಹೇಶ್ವರ ತಂತ್ರ.

"ಭೂರುದ್ರ ಭಕ್ತ ಸಂಘಾತೈಃ ರಚಿತಂ ಮಂತ್ರವೇಷ್ಟಿತಂ"
"ಪ್ರಾಕೃತಾನ್ನಂ ಪರಿತ್ಯಜ್ಯ ಭೂರುದ್ರಾಚಾರ ಚಕ್ರಿಣಾಂ"

ಇತ್ಯಾದಿ ವೀರಮಾಹೇಶ್ವರ ತಂತ್ರ ವಾಕ್ಯಗಳಿಂದ ಭೂರುದ್ರ ಸಂಘವೊಂದಿತ್ತೆಂದು ಅವರವೇ ಕೆಲವು ವ್ರತಗಳಿದ್ದವೆಂದು ತಿಳಿಯುತ್ತದೆ. ಅವರೆಲ್ಲ ಪಾದೋದಕ ಪ್ರಸಾದ ವ್ರತನಿಷ್ಠರಾಗಿದ್ದರೆಂದೂ ತಿಳಿಯುತ್ತದೆ. ರುದ್ರನ ಪ್ರಥಮ ಶಿಷ್ಯ ಚಂಡಿ. ಚಂಡಿಯ ಶಿಷ್ಯ ಉಪಮನ್ಯು, ಉಪಮನ್ಯುವಿನ ಶಿಷ್ಯ ವಾಸುದೇವ, ವಾಸುದೇವನ ಶಿಷ್ಯ ಧರ್ಮ-ಇದು ರುದ್ರನ ಶಿಷ್ಯ ಪರಂಪರೆ. ಲೈಂಗ್ಯ ಪುರಾಣದ ಶಾಂತಿ ಪರ್ವದಲ್ಲಿ ಉಕ್ತವಾಗಿದೆ. ಅಲ್ಲದೆ,

"ಸ್ವಸ್ತಿ ಪಾಣಿನಯೇ ತಸ್ಮೈ ಯಸ್ಯ ರುದ್ರಪ್ರಸಾದತಃ ।
ಆದೌ ವ್ಯಾಕರಣಂ ಕಾವ್ಯಮನು ಜಾಂಬುವತೀ ಜಯಂ"

ಎಂದು ರಾಜಶೇಖರ ಕವಿಯ ಹೇಳಿಕೆ. ಕ್ರಿ.ಪೂ. ಏಳನೆಯ ಶತಮಾನ ಪಾಣಿನಿಯ ಕಾಲ. ಆತನಿಗೆ ವ್ಯಾಕರಣ ಶಾಸ್ತ್ರವನ್ನು ಕರುಣಿಸಿದವನು ರುದ್ರನು. ಅನಾದಿ ಕಾಲದ ರುದ್ರಗಣರೆಲ್ಲರ ಹೆಸರುಗಳು ಸಿಕ್ಕುವುದಿಲ್ಲ. ಗಣಸಹಸ್ರದಲ್ಲಿ ೧೭೧ ಮಂದಿ ರುದ್ರಗಣರು ಗಣಿಸಲ್ಪಟ್ಟಿದ್ದಾರೆ:

"ಭುವನೇಶ್ವರ ಸರ್ವಜ್ಞ ವಿಭೂತಿಭವ ಶಾಶ್ವತಾಃ
ಮೇಘನಾದೋ ಭೂತಿಕರಃ ಪಿನಾಕೀ ಭೂತಪಾವನಃ
ಅಜಶ್ಚಕ್ರಧರಃ ಶ್ವೇತಃ ಕಪಾಲೀ ವೇದಪಾರಗಃ
ಮಹಾಬಲೋ ದಂತದಂಷ್ಟ್ರ ಸ್ತ್ರಿಕಲೋ ಮೇಘವಾಹನಃ
ಊರ್ಧ್ವದೇಹಃ ಕ್ರೂರದಂಷ್ಟ್ರೋ ಧನಂಜಯ ಕಪರ್ದಿನೌ
ನೀಲರುದ್ರಃ ಕಾಲಕಾಲರುದ್ರ ವಿಶ್ವೇಶ ಬಭ್ರುವಃ
ಸರ್ವೇಶ ದಹನೌ ಸ್ಥೂಲ ರುದ್ರಭದ್ರಾನಿಲಾಶನಾಃ
ದೀರ್ಘಹಸ್ತಸ್ಸುಖಕರಸ್ಸುನಾದ ಹರಪಿಂಗಳಾಃ
ಬಲಭರ್ಗ ಮಹೇಶ ತ್ರಿದಂಷ್ಟ್ರಾ ಸ್ಸರ್ವಮನೋನ್ಮನಾಃ

ಅಘೋರಃ ಪೂರಕಜ್ಯೋತಿ ರೌದ್ರೋ ವಿಷಧರೋ ಗುಹಃ
ಕ್ರೋಧೇಶೋ ವಟರುದ್ರಃ ಶ್ರೀಜ್ವಲನಾಕ್ಷೋ ವಿವಾಹನಃ
ಧೂಮ್ರವರ್ಣಸ್ಸರ್ವಭೂತದಮನಃ ಶ್ರೀಚರಸ್ತಥಾ
ವಿದ್ಯಾಧರೇಶೋ ರುದ್ರಾಗ್ನಿಸ್ಸಕೇಶಃ ಶ್ರೀಗಣಪ್ರಿಯಃ
ಮೃತ್ಯುಂಜಯೋ ಮಹಾನಾಟ್ಯ ರುದ್ರಃ ಶ್ರೀ ಬಡಬಾಮುಖಃ
ಲಘುರೂಪಧರೋ ಮೃತ್ಯುಂಜಯರುದ್ರೋ ಭಯಾನಕಃ
ಶಾನರುದ್ರಃ ಪ್ರಳಯಾಗ್ನಿರುದ್ರಃ ಕಾಲಲೋಹಿತಃ
ಹೆರರುದ್ರೋರ್ಧನಾರೀಶ ರುದ್ರಸ್ತ್ರಿದಶವಂದಿತಃ
ಶೀಘ್ರಾವಿಕರಣಾ ವಿಶ್ವಾಧಿಕರುದ್ರೋ ವಿಚಕ್ಷಣಃ
ವಿಜ್ಞಾನ ರುದ್ರಃ ಶರಭರುದ್ರಃ ಶೂಲಧರೋ ವಿಭುಃ
ಮಹೋಗ್ರರುದ್ರಃ ಶಬರರುದ್ರೋ ಧಾತಾ ಹುತಾಶನಃ
ಆದಿರುದ್ರೋ ಮಹಾಕಾಲರುದ್ರ ಭೀಮಭವೋದ್ಭವಾಃ
ಸಂಹಾರರುದ್ರೈಕಪಾದ ರುದ್ರಾರ್ಚಿರ್ವರ ಪಾವಕಾಃ
ಮಹಾವೃಷಭರುದ್ರಶ್ಚ ವಾಯುವೇಗಸ್ಸದುಂಬರಃ
ಕಿರಾತರುದ್ರೋ ಜಯವಿಜಯ ರುದ್ರಃ ಪರಾಪರಃ
ಕರ್ತಾ ಜಟಾಧರ ಸದಾಶಿವರುದ್ರೌ ಕ್ಷಯಾಂತಕಃ
ಶ್ರೀ ಮಹಾಶಿವ ರುದ್ರೋಗ್ರೌ ಸ್ಥಾಣು ಸಂಹಾರ ಘಾತುಕೌ
ವೀರಾಖ್ಯರುದ್ರಃ ಕರ್ಮಾಖ್ಯರುದ್ರೋ ಮೃತ್ಯುಹರೋ ಮೃಡಃ
ಬಕರುದ್ರಃ ಕಾಲಮೇಘೋ ನಿವೃತ್ತಿಃ ಪಾಶಹಸ್ತಕಃ
ಮಾತಂಗ ಕ್ಷಯರುದ್ರೌಚ ವಿಟರುದ್ರಃ ಪ್ರಮರ್ದಕಃ
ಬದ್ಧೋವಿಧಾತಾ ಕ್ಷೇಮೀಶೋ ವಿಯೋಕ್ತಾ ಪ್ರಬಲೋಽವ್ಯಯಃ
ಹಿತಪ್ರಮಥನೌ ಜ್ಯೇಷ್ಠೋ ವಿರೂಪಾಕ್ಷಶ್ಚ ಗೋಪತಿಃ
ಶ್ರೀ ನಿಧೀಶೋ ಮಹಾತೇಜಾ ವಿದ್ವೇಷಾನಂತಶಂಭವಃ
ಗಣಾಧ್ಯಕ್ಷಾಂತರಿಕ್ಷಾಂಗ ಶ್ರೀಮತ್ಪಂಚ ಶಿಖೇಶ್ವರಾಃ
ಸಾಮ್ಯದೇಹೋರ್ಧ್ವಕೇಶಾತಿ ಭವೇಶ ಗಗನೇಶ್ವರಾಃ
ಶ್ರೀವಜ್ರದಂತೋಜ್ವಲನ ಪ್ರಕಾಶ ಸಹನೇಶ್ವರೌ
ಸರ್ವಾತ್ಮಾ ಸಿತವರ್ಣಶ್ಚ ಗ್ರಸನಃ ಪಿಂಗಲೇಕ್ಷಣಃ
ಅಸಾಧ್ಯಃ ಶ್ರೇಷ್ಠ ಗೌರೀಶ ಪರಮಾತ್ಮ ಸಮಾಹ್ವಯಾಃ
ಪರಂಧಾತಾ ಪ್ರಭುಸ್ವಾಮೀ ಶ್ರೀಮದ್ರತ್ನಧರಸ್ತಥಾ
ವಾಮದೇವೋ ದುಃಖಕರಃ ಫಣೀಂದ್ರಸ್ಸೂಕ್ಷ್ಮ ಸಂಜ್ಞಿಕಃ
ಬಲವಿಕರಣ ರುದ್ರೋಽನೇಕವೀರಸ್ತ್ರಿನೇತ್ರೋ ಹರಹರಿ

ಹರ ಕಾಲಾಮಾರ ಹಂತ್ರೈಕವೀರಃ । ಕಲವಿಕರಣರುದ್ರೋ
ಯಾಮ್ಯ ಭಸ್ಮಾಂತಕಃ ಶ್ರೀಕ್ಷಣ ವೃಷಭ ಗಣೇಂದ್ರಾ –
ಶ್ಚೇತ್ಯಯಂ ರುದ್ರವರ್ಗಃ ॥ "

ಇವಿಷ್ಟು ರುದ್ರಗಣರ ಹೆಸರುಗಳು. ಇವರೆಲ್ಲ ಅನಾದಿ ವೀರಶೈವರು. ಅನಾದಿ ವೀರಶೈವವು ಆರ್ಯ ದ್ರವಿಡ ಯುಗಗಳಿಗಿಂತ ತೀರ ಹಿಂದಿನದು. ಹರಪ್ಪಾ ಮೋಹೆಂಜೋ ದಾರೋಗಳ ಸಂಶೋಧನೆಯಿಂದ ಸಿದ್ಧಾಂತವಾದ ಐದಾರು ಸಾವಿರ ವರುಷ ಗಳಿಗಿಂತ ಆಚೆಯದು. ವೀರಶೈವ ಹೀಗೆ ಅನಾದಿಯಾದುದು. ವೀರಶೈವವು ಆಧುನಿಕ ಮಾತ್ರವೆಂದು ಈಚೆಗೆ ಕೆಲವರು ವಾದಿಸುತ್ತಿದ್ದಾರೆ. ಇವರ ವಾದದಲ್ಲಿ ವೀರಶೈವ ವಿಕಾಸವಾದಕ್ಕೆ ಕೊಡಲಿ ಹೊಡೆತ ಬಿದ್ದಿದೆ. ವೀರಶೈವವು ಹುಟ್ಟಿದೊಡನೆ ಪ್ರೌಢ ಸ್ಥಿತಿಗೆ ಬಂತೆಂದು ಹೇಳುತ್ತಾರೆ. ಹುಟ್ಟಿದೊಡನೆ ಮಗುವಿನ ಮುಖದಲ್ಲಿ ಮೀಸೆ ಬಂದು ಯುವಕನಾಗುವನೆಂಬಂತೆ ಇವರ ವಾದವಾಗಿದೆ. ವಿಕಾಸ ವಾದದ ದೃಷ್ಟಿಯಿಂದಲೂ ಐತಿಹಾಸಿಕ ದೃಷ್ಟಿಯಿಂದಲೂ ವೀರಶೈವಕ್ಕೆ ಒಂದು ಪ್ರಾಚೀನ ಪರಂಪರೆಯಿದೆ. ಅದನೀಗ ಈ ರೂಪದಲ್ಲಿ ವೀರಶೈವರು ಅರಿವುದು ಅವಶ್ಯವಾಗಿದೆ. ಈ ದೃಷ್ಟಿಯಲ್ಲಿ ಈ ಅನಾದಿ ವೀರಶೈವ ವಿಚಾರ ವಿಮರ್ಶೆ ಆಗಲೇ ಬೇಕಾಗಿದೆ. ಮುಚ್ಚಿದ ಮುಸಗನ್ನು ತೆಗೆಯಬೇಕಾಗಿದೆ. ಎಚ್ಚತ್ತು ಉಸಿರಾಡಬೇಕಾಗಿದೆ. ಆದಿ ಕಾಲವೆಂದು ಹೇಳುವ ವೇದ ಕಾಲಕ್ಕೆ ಹಿಂದಿರುವ ಅನಾದಿ ವೀರಶೈವ ಧಾರ್ಮಿಕ ಪರಂ ಪರೆಗಳನ್ನು ಸಂಬಂಧ ಸೂತ್ರಗಳನ್ನು ತಿಳಿಯಲು ಇದು ಸಾಧನವಾಗಿದೆ.

" ವೀರಶೈವರ ' ಶಿವ–ರುದ್ರ ' ನಲ್ಲಿರುವ ಏಕಾಂತಿಕವಾದ ಅವ್ಯಭಿಚಾರಿಣೀ ಭಕ್ತಿಯು ಒಂದೇ ಈ ಮತವು ವೈದಿಕವೆಂದು ಸಿದ್ಧಪಡಿಸುವುದಕ್ಕೆ ಸಾಕು. ಏಕೆಂದರೆ ' ರುದ್ರ–ಶಿವ ' ನು ವೈದಿಕ ದೇವತೆ; ಎಂದರೆ ವೇದದಲ್ಲಿ ಈ ದೇವತೆಯ ಮಂತ್ರಗಳಿವೆ. ತಮ್ಮ ಆರಾಧ್ಯದೈವತವಾದ ' ರುದ್ರ–ಶಿವ ' ನ ಸಂಬಂಧದ ಈ ವೈದಿಕ ಮಂತ್ರಗಳ ಮೇಲೆ ವೀರಶೈವರಿಗೆ ಇರುವ ಅಧಿಕಾರವು ಉಳಿದ ಯಾವ ವೈದಿಕ ಮತಾನುಯಾಯಿ ಗಳಿಗಿಂತಲೂ ಕಡಿಮೆ ಇಲ್ಲ; ತಿರುಗಿ ಕೇಳಿದರೆ, ಈ ಮಂತ್ರಗಳ ಸಂಬಂಧವು–ವಿಶೇಷತಃ ರುದ್ರಾಧ್ಯಾಯದ ಸಂಬಂಧವು ವೀರಶೈವರಿಗೆ ಇರುವಷ್ಟು ಬೇರೆ ಇನ್ನಾರಿಗೂ ಇಲ್ಲ. ' ರುದ್ರ–ಶಿವ ' ನನ್ನಲ್ಲದೆ ಬೇರೊಂದು ದೈವತವನ್ನು ಕಣ್ಣೆತ್ತಿಯೂ ನೋಡಲು ಸಿದ್ಧ ವಿಲ್ಲದ ಈ ಜನಗಳ **ಮತ ವಿಚಾರದ ಬೇರುಗಳು ವೇದದಲ್ಲಿ ಕಂಡುಬಂದರೆ ಸೋಜಿಗವೇನು?** ಕೆಲವರು ಗ್ರಹಿಸಿರುವಂತೆ ವೀರಶೈವ **ಮತದ ಆರಂಭವು ಶ್ರೀಮದಲ್ಲಮ, ಬಸವಣ್ಣನವರಿಂದಾಗಲಿ ಅಷ್ಟೆ ಏಕೆ, ಶ್ರೀ ಪಂಚಾಚಾರ್ಯ ರಿಂದಾಗಲಿ** ಆಗಿಲ್ಲ. ಇವರುಗಳೆಲ್ಲ ಕಾಲಕಾಲಕ್ಕೆ ತಮಗೆ ಸರಿದೋರಿದ ರೀತಿಯಲ್ಲಿ ವೀರಶೈವಧರ್ಮಕ್ಕೆ ಹೊಸ ಸಂಸ್ಕಾರಗಳನ್ನು ಕೊಟ್ಟವರು. ' ರುದ್ರ–ಶಿವ ' **ನ ಆರಾಧನೆಯ ಪರಂಪರೆಯು** ಇವರಿಂಗಿತಲೂ **ಮೊದಲಿನಿಂದ – ವೇದದಲ್ಲಿಯೆ**

ದೊರೆಯುತ್ತಿರುವುದರಿಂದ (ಇನ್ನೂ ಹಲವು ವಿದ್ವಾಂಸರ ಅಭಿಪ್ರಾಯದಂತೆ ವೇದ ಪೂರ್ವಕಾಲದಿಂದಲೆ ನಡೆದುಬಂದುದರಿಂದ ಈ ಮತದ ಉಗಮವು ವೇದ ಗಳಲ್ಲಿ ಕಣ್ಣಿಗೆ ಬೀಳುವುದು ಸ್ವಾಭಾವಿಕವಾಗಿದೆ." *

ಹೀಗೆಂದು ಶ್ರೀ ಶಂ. ಬಾ. ಜೋಷಿ ಅವರು ತಮ್ಮ 'ಶಿವ – ರಹಸ್ಯ' ಗ್ರಂಥದಲ್ಲಿ ಅಭಿಪ್ರಾಯಪಟ್ಟಿದಾರೆ. ಇದು ನಾವು ಹೇಳುತ್ತಿರುವ ವೇದಕಾಲಕ್ಕಿಂತ ಹಿಂದಿರುವ ಅನಾದಿ ವೀರಶೈವದ ಅಸ್ತಿತ್ವವನ್ನು ಅತ್ಯಂತ ಸ್ಪಷ್ಟವಾಗಿ ಸಮರ್ಥಿಸುವ ಸತ್ಯ ಸಾಕ್ಷಿಯಾಗಿದೆ.

"....ಅನಾದಿವಿಡಿದು ಬಂದು ಗುರು ಶಿಷ್ಯ ಸಂಬಂಧ.
ಹಾಂಗೆ ಅನಾದಿವಿಡಿದು ಬಂದ ಲಿಂಗ. ಅನಾದಿವಿಡಿದು
ಬಂದ ಜಂಗಮ. ಅನಾದಿವಿಡಿದು ಬಂದ ಪಾದೋದಕ – ಪ್ರಸಾದ.
ಅನಾದಿವಿಡಿದು ಬಂದ ವಿಭೂತಿ–ರುದ್ರಾಕ್ಷಿ–ಮಂತ್ರ.
ಅನಾದಿವಿಡಿದು ಬಂದು ಭಕ್ತಿ ಜ್ಞಾನ ವೈರಾಗ್ಯ.
ಅನಾದಿವಿಡಿದು ಬಂದ ವೀರಶೈವ–ಷಟ್‌ಸ್ಥಲಾಚಾರವು.
ಕಾಡಿನೊಳಗಾದ ಶಂಕರಪ್ರಿಯ ಚೆನ್ನಕದಂಬಲಿಂಗ
ನಿರ್ಮಾಯ ಪ್ರಭುವೇ"

ಎಂಬ ಕಾಡಸಿದ್ಧೇಶ್ವರ ವಚನದಿಂದಲೂ ಖಚಿತವಾಗುತ್ತದೆ. ಅಲ್ಲದೆ "ಅನಾದಿ ವೀರಶೈವ ಷಟ್‌ಸ್ಥಲ ಸಾರಸಂಗ್ರಹ' 'ಅನಾದಿ ವೀರಶೈವ ಸಾರಸಂಗ್ರಹ' 'ಅನಾದಿ ವೀರಶೈವ' ಇತ್ಯಾದಿ ಗ್ರಂಥನಾಮಗಳು ಅನಾದಿ ವೀರಶೈವದ ನೆನಹನ್ನು ತರುತ್ತವೆ.

## ಆದಿ ವೀರಶೈವ – ವೀರಶೈವರು.

ಆದಿ ವೀರಶೈವವೆಂದರೆ ಐತಿಹಾಸಿಕಕ್ಕೆ ನಿಲುಕುವ ವೀರಶೈವ; ಅಂದರೆ ನಿಗಮಾ ಗಮಗಳಿಗೆ ನಿಲುಕಿ ಮುಂದುವರಿದು ಕ್ರಿ. ಶ. ೧೧ನೆಯ ಶತಮಾನದವರೆವಿಗೂ ಅಂದರೆ ಶ್ರೀ ರೇವಣಸಿದ್ಧನವರೆವಿಗೂ ಇದ್ದ ವೀರಶೈವವೆಂದು ಹಿಂದೆಯೇ ಹೇಳಿದ್ದೇವೆ. ಆ ಆದಿ ವೀರಶೈವ ಕರ್ತನು ಶಿವನು. ಆ ಅನಾದಿ ರುದ್ರನೇ ಶಿವನಾಗಿ ಬರುವನಾದರೂ ಹಲವರು ಭಾವಿಸಿರುವಂತೆ ರುದ್ರನೇ ಶಿವನಲ್ಲ. ರುದ್ರನ ಎರಡನೆಯ ಅವತಾರ ಶಿವ. ಆತ್ಮಾಕಾಶವಾಯುತತ್ತ್ವ ಪ್ರಧಾನ ಪರಶಿವನಾದರೆ ಅಗ್ನಿ ಜಲ ತತ್ತ್ವಪ್ರಧಾನ ರುದ್ರ. ಪೃಥ್ವಿ ತತ್ತ್ವಪ್ರಧಾನ ಶಿವ. ಅಂತೆಯೆ ಈತನಿಗೆ ಪ್ರಧಾನವಾಗಿ ಪಾರ್ವತಿ (ಭೂಮಿ) ಯನ್ನು ಪತ್ನಿಯನ್ನಾಗಿಸಿದರು. ಜತೆಗೆ ಜಲದೇವತೆ (ಗಂಗೆ)ಯನ್ನೂ ವಿವಾಹ ವಾಗಿದಾನೆ. ಶಿವನಿಂದಲೇ ಭೂತತತ್ತ್ವಾರಾಧನೆ ಆರಂಭವಾಯಿತೆನ್ನಬೇಕು. ಶಿವ

* ರುದ್ರ ವಿಷಯವಾಗಿ ಹೆಚ್ಚು ತಿಳಿಯಲು 'ಶಿವ ರಹಸ್ಯ' ಓದುವುದು.

ಪ್ರತೀಕವಾಗಿ ಲಿಂಗವಲ್ಲಿ ಶಿಲೆಯನ್ನು ಸೇರಿಸಿ ಆರಾಧಿಸುವ ರೂಢಿ ಬಂದಿತು. ಮಣ್ಣಿನಲ್ಲಿ ಗಣಪನನ್ನು ಮಾಡಿ ಪೂಜಿಸುವ ಪರಂಪರೆಯುಂಟಾಯಿತು. ಗಂಗಾ (ಜಲಾ) ರಾಧನೆಯೂ ಆರಂಭವಾಯಿತು.

'ನೀಲ ಲೋಹಿತ' ಇದು ಶಿವನ ಹೆಸರಲ್ಲ; ಶ್ರೀರುದ್ರನ ಹೆಸರು. ರುದ್ರ ಮತ್ತು ಶಿವನ ಹೆಸರುಗಳನ್ನು ಮಿಳಿತ ಮಾಡಿ ಶಬ್ದಕೋಶದಲ್ಲಿ ಸೇರಿಸಿದಾರೆ. ಇವನ್ನು ವಿಂಗಡಿಸುವ ಕೆಲಸವಾಗಬೇಕು. ಕಪ್ಪು ಕೆಂಪು (ನೀಲಲೋಹಿತ) ಇವು ರುದ್ರನ ಬಣ್ಣಗಳು. ಶಿವನು ಶುಭ್ರ. ಅಂತೆಯೆ ಇವನು ಚಂದ್ರಶೇಖರ. ರಜತಗಿರಿವಾಸ. ರಜತಗಿರಿಗೆ ಕೈಲಾಸವೆಂದು ಮತ್ತೊಂದು ಹೆಸರು. ಇದೂ ಶುಭ್ರ ಸೂಚಕ. ಹಾಗು ಕೈಲಾಸವೆಂದರೆ ಕೇವಲ ರಜತಾದ್ರಿಯ ಒಂದು ಭಾಗವೆಂದಲ್ಲ. ಕ-ಇಲಾ-ಆಸ ಎಂಬುದಾಗಿ ಕೈಲಾಸ ಪದ ವಿಂಗಡಣೆ! ಕ ಎಂದರೆ ಜಲ; ಇಲಾ ಎಂದರೆ ನೆಲ. (ಭೂಮಿ.) ಇವೆರಡರಲ್ಲಿ ಆಸ ಎಂದರೆ ಇರುವವನೆ ಕೈಲಾಸಾಧಿಪತಿ! ಇದು ಶಿವನ ಜಗದ್ವ್ಯಾಪಕತ್ವದ ಸೂಚಕ! ಅಲ್ಲದೆ ರುದ್ರನು ಜೋತಿ ತತ್ತ್ವ ಮುಖ್ಯವಾಗಿ ಜಲತತ್ತ್ವ ಗೌಣವಾಗಿ ಅವತರಿಸಿಹೋಗಿದ್ದರೆ, ಶಿವನು ಭೂತತ್ತ್ವ ಮುಖ್ಯವಾಗಿ ಜಲತತ್ತ್ವ ಗೌಣವಾಗಿ ಅವತರಿಸಿದ್ದಾನೆ. ಶಿವನು ಭೂತತ್ತ್ವಾಧಿಪತಿಯಾಗಿ ಬಂದು ಆದಿ ವೀರಶೈವಾಧಿಪತಿಯಾಗಿದಾನೆ.

ಶಿವನು ಶಾಂತಸ್ವರೂಪಿ. ರುದ್ರನು ಉಗ್ರಸ್ವರೂಪಿ. ಆದ್ದರಿಂದ ಅನಾದಿಕಾಲದ ರುದ್ರನನ್ನು ಕಂಡರೆ ಆರ್ಯರಿಗೆ ಅತ್ಯಂತ ಭಯ. ಅಲ್ಲದೆ ಆರ್ಯತತ್ತ್ವವಿರೋಧಿ, ಆರ್ಯವಿದ್ವೇಷಿಯಾಗಿರಬೇಕು. ಆದ್ದರಿಂದ ವೇದದಲ್ಲಿ " ಮಾನೋ ಮಹಂತ ಮುತ ಮಾನ ಅರ್ಭಕಂ ಮಾನ ಉಕ್ಷಂತ ಮುತಮಾನ ಉಕ್ಷಿತಮ್ । ಮಾನೋ ವಧೀಃ ಪಿತರಂ ಮೋತ ಮಾತರಂ ಮಾನಃ ಪ್ರಿಯಾಸ್ತನ್ವೋ ರುದ್ರರೀರಿಷಃ " ಓ ರುದ್ರ ದೇವ, ನಮ್ಮ ಹಿರಿಕಿರಿಯರನ್ನು ಕೊಲ್ಲಬೇಡ. ಮಕ್ಕಳನ್ನು ಮೃತ್ಯುವಿಗೀಡು ಮಾಡಬೇಡ. ನಮ್ಮ ತಾಯಿ ತಂದೆಗಳನ್ನು ಸಾಯಿಸಬೇಡ. ನಮ್ಮನ್ನೂ ಕೊಲ್ಲಬೇಡ ಎಂದು ಪ್ರಾರ್ಥಿಸಬೇಕಾದರೆ ರುದ್ರರೋಷ–ರುದ್ರ ಪ್ರತಿಭಟನೆ–ರುದ್ರ ಭಯ ಅದೆಷ್ಟಿರಬೇಕು? ಆ ಭಯ ಶಿವನಲ್ಲಿಲ್ಲ. ಇವನು ಉಗ್ರನಲ್ಲ, ವಿರೋಧಿಯಲ್ಲ. ಆರ್ಯರಲ್ಲಿ ಮಿಳಿತನಾಗಿಹೋಗುವ ಸ್ವಭಾವವುಳ್ಳವ. ಇವನ ಜೀವನದಲ್ಲಿ ಯಾರೊಡನೆಯೂ ಯುದ್ಧ ಮಾಡಿದ ಪ್ರಸಂಗ ಕಾಣುವುದು ತೀರ ಕಡಿಮೆ. ಇದರಿಂದಾಗಿ ಆರ್ಯರು ಶಿವನಲ್ಲಿ ಬೆರೆಯಲು ಮೊದಲು ಮಾಡಿದರು. ಇದರ ಫಲವೇ ದಕ್ಷಬ್ರಹ್ಮನ ಸಂಬಂಧ. ಅದರೂ ಆ ಹಿಂದಿನ ಮನೋಭಾವ–ಅಸಹನೆಗಳು ಹೋಗಿರಲಿಲ್ಲ. ಆಗಾಗ ಅಲ್ಲಲ್ಲಿ ಅಸಹಾಕಾರ ಅಭಿವ್ಯಕ್ತವಾಗುತ್ತಿತ್ತು. ಇದು ಮೊದಲು ಹೊರಹೊಮ್ಮಿದುದು ಸಂಬಂಧದಲ್ಲಿಯೆ! ಮಾವನಾದ ದಕ್ಷಬ್ರಹ್ಮನಲ್ಲಿಯೆ! ಹೇಗೂ ಶಿವನು ಶಾಂತನು ಅಹಿಂಸಾವಾದಿಯೆಂದು ಭಾವಿಸಿ ಮೀರಿದ ಪ್ರತಿಭಟನೆ ಧರ್ಮೋಲ್ಲಂಘನ ಕಾರ್ಯದಲ್ಲಿ ದಕ್ಷಬ್ರಹ್ಮನು

ತೊಡಗಿದನು. ಶಿವನ ವಿರೋಧವಾಗಿ ಅವಮಾನಕರವಾಗಿ ಯಜ್ಞವೊಂದನ್ನು ಆರಂಭಿಸಿಯೇ ಬಿಡುವನು. ಆದರಲ್ಲಾದ ಅನಾಹುತ ಗೊತ್ತೇ ಇದೆ. ಅದಕ್ಕೂ ಸಹ ಶಿವನು ಸಾಕ್ಷಾತ್ತಾಗಿ ಭಾಗವಹಿಸದ ಶಾಂತಿ ಪುರುಷ. ಅದಕ್ಕಾಗಿ ಆ ಶಿವನ ಹಿಂದಿನ ಅವತಾರ ತತ್ತ್ವವಾದ ರುದ್ರನೇ ಮರಳಿ ವೀರಭದ್ರನಾಗಿ ಅವತರಿಸಿ ಬರಬೇಕಾಯಿತು; ಬಂದಾಯಿತು. ಮತ್ತೆ ಆರ್ಯರ ಪ್ರತಿಭಟನೆಯನ್ನು ಯಜ್ಞಯಾಗಾದಿಗಳನ್ನು ಅಣಗಿಸ ಬೇಕಾಯಿತು. ಹೀಗೆ ರುದ್ರನಿಗೂ-ಶಿವನಿಗೂ ಭಿನ್ನವತಾರದ ಇತಿಹಾಸವಿದೆ. "ರುದ್ರಲೋಕಂ ಪರಿತ್ಯಕ್ತ್ವಾ ಶಿವಲೋಕೇ ಭವಿಷ್ಯತಿ" ಎಂಬಂತೆ ಆ ರುದ್ರಲೋಕದ ರುದ್ರನೇ ಶಿವನಾಗಿ ಆ ರುದ್ರ ಗಣವೇ ಶಿವಗಣವಾಗಿ ಆದಿಕಾಲಕ್ಕೆ ಅವತರಿಸುತ್ತಾರೆ. ತತ್ತ್ವದಿಂದ ಭೇದವಿಲ್ಲದಿದ್ದರೂ ಜನ್ಮಾಂತರದ ಭೇದವಿದೆ. ವ್ಯಕ್ತಿತ್ವದ ಭೇದವಿದೆ. ಕಾಲಭೇದವಿದೆ.

ಶಿವನು ಆದಿವೀರಶೈವ ಹರಿಕಾರ. ಇವನು ಇತಿಹಾಸದ ಹಿಡುವಳಿಗೆ ಸಿಕ್ಕುತ್ತಾನೆ. ಈತನು ಶಿವಾಗಮಗಳನ್ನು ರಚಿಸಿದಾನೆ. ಯಜುರ್ವೇದದಲ್ಲಿ ಈತನು ಹೆಸರು ಲಭ್ಯವಾಗುತ್ತದೆ. ಈತನನ್ನು ಈಶನೆಂದು ಮಹೇಶನೆಂದು ಆರ್ಯ ಆರ್ಯೇತರರು ಒಪ್ಪಿಕೊಳ್ಳುತ್ತಾರೆ.

" ಶಿವ ಏವಕೇವಲಃ ಶಿವಮದ್ವೈತಂ ಶಿವಮಚ್ಯುತಂ
ಶಿವೋಽಹಂ ಭೂತಯೋನಿಂ ಪರಿಪಶ್ಯಂತಿ ಧೀರಾಃ
ಧ್ಯಾತ್ವಾ ಶಿವಂ ಉಮಾಸಹಾಯಂ ಮೃತ್ಯುಂಜಯಂ
ಓಂಕಾರಂ ಶಿವಮಾತ್ಮಾನಂ ಶಿವಲಿಂಗಾಯ ನಮಃ
ತಮೀಶ್ವರಾಣಾಂ ಪ್ರಥಮಂ ಮಹೇಶ್ವರಂ "

ಎಂಬುದಾಗಿ ಆದಿ ವೀರಶೈವ ಕರ್ತನಾದ ಶಿವನನ್ನು ಶ್ರುತಿತತಿಗಳು ಹೊಗಳಿವೆ. ಆ ಕೇವಲ ಪರಶಿವನೆ ಆದಿ ವಿರಶೈವಕರ್ತನಾಗಿ ಬರುತ್ತಾನೆ. ಶಿವಸೃಷ್ಟಿಗೆ ಕಾರಣನಾಗುತ್ತಾನೆ. ಉಮಾಧವನಾಗುತ್ತಾನೆ.

" ಯಶ್ಶಿವೋ ನಾಮ ರೂಪಾಭ್ಯಾಂ ಯಾಶಕ್ತಿಸ್ಸರ್ವಮಂಗಳಾ ।
ಯಃ ಕಾರಣಂ ಕಾರಣಾನಾಂ ಯಃ ಪತೀನಾಂ ಪತಿಃ ಪರಃ ॥
ದೇವಾನಾಂ ಯೋ ಮಹಾದೇವೋ ಮಂಗಳಾನಾಂ ಚ ಮಂಗಳಂ
ತತ್ಸಂಬಂಧ ಪ್ರಕಾಶೇನ ಸರ್ವಂ ಭವತಿ ಮಂಗಳಂ "

ನಾಮ ರೂಪಂಗಳಿಗೆ ಬಂದವನಾಗಿ ಅಂದರೆ ಪಂಚಮುಖ ದಶಭುಜ ಚಂದ್ರಧರ ತ್ರಿನೇತ್ರಧರನಾಗಿ ಸರ್ವಮಂಗಳೆಗೆ ಅರಸನಾಗಿ ಕಾರಣಕ್ಕೆ ಕಾರಣನಾಗಿ ಪರಪತಿಯಾಗಿ ಮಹಾದೇವನಾಗಿ ಮಂಗಳಕ್ಕೆ ಮಂಗಳನಾಗಿ ಆತನ ಉಪಾಸಕರಿಗೆ ಮಂಗಳಪ್ರದನಾಗಿ ಇರುವಾತನೇ ಶಿವನು. ಇವನು ರಚಿಸಿದವುಗಳೇ ಶಿವಾಗಮಗಳು.

" ಕಾಮಿಕಾದ್ಯಾ ವಾತುಲಾಂತಾಶ್ಶಿವೇನೋಕ್ತಾಶ್ಶಿವಾಗಮಾಃ "

ಎಂಬ ಉಕ್ತಿಯು ಶಿವನು ಶಿವಾಗಮಕರ್ತನೆಂದು ಸಾರುತ್ತದೆ. ಅಲ್ಲದೆ

ಆದಿಕರ್ತಾ ಶಿವಸ್ಸಾಕ್ಷಾತ್ ಶೂಲಪಾಣಿರಿತಿ ಸ್ಥಿತಿಃ |
ವಿಮರ್ಶರೂಪಿಣೀಶಕ್ತಿಃ ಶಿವಸ್ಯ ಪರಮಾತ್ಮನಃ ||
ನಿಗಮಾಗಮ ರೂಪಸ್ಸ್ಯಾತ್ ಸರ್ವತತ್ತ್ವ ಪ್ರಕಾಶಿನೀ | "

ಎಂಬೀ ವಚನಗಳಿಂದಲೂ ಶಿವನು ಆದಿ ವೀರಶೈವಕರ್ತನಾಗಿದ್ದಾನೆ. ಶಕ್ತಿ ವಿಮರ್ಶ ರೂಪಿಣಿಯಾಗಿ ತತ್ತ್ವಪ್ರಕಾಶಿನಿಯಾಗಿ ಶಿವನಿಗೆ ಸಹಾಯಕಳಾಗಿದಾಳೆ. ಶಕ್ತಿವಿಶಿಷ್ಟಾದ್ವೈತನೆಂದೆನಿಸಿದಾಳೆ.

ಆದಿ ಶೂನ್ಯಾಂತರೇ ಮಧ್ಯೇ ನಿಷ್ಕಳತ್ವಮಜಾಯತ
ನಿಷ್ಕಳಸ್ಯಾಂತರೇ ಮಧ್ಯೇ ಆದಿಮೂರ್ತಿಸಮುದ್ಭವಃ
ಆದಿಮೂರ್ತಿ ಪ್ರಭಾವೋತ್ರ ಆದಿಶಕ್ತಿಯುತೋದಯಃ
ಶಕ್ತಿಮೂರ್ತಿದ್ವಯೋರೈಕ್ಯಂ ದಿವ್ಯತೇಜೋಮಯಃ ಶಿವಃ "

ಸೃಷ್ಟಿಕಲ್ಪದ ಬ್ರಹ್ಮವ್ಯಾಕ್ಯವಿದು. ಇದರಲ್ಲಿ ಆದಿವೀರಶೈವಕರ್ತನಾದ ಆದಿಮೂರ್ತಿಯ ಆದಿಶಕ್ತಿಯ ಉದಯ, ಪ್ರಭಾವ, ಸಮನ್ವಯಗಳು ಸುಸ್ಪಷ್ಟವಾಗಿ ಉಕ್ತವಾಗಿವೆ. ಆ ಆದಿ ಶಿವನು ಅನುಗೊಳಿಸಿದ ಅಂದಿನ ವೀರಶೈವ ಸ್ವರೂಪವು ಹೀಗಿದ್ದಿತು.

" ದ್ವಿಧಾ ಪಾಶುಪತಂ ಜ್ಞೇಯಂ ಪೂರ್ವಾಪರವಿಭೇದತಃ
ಶಿವಾಗಮಾನುಸಾರೇಣ ಭಸ್ಮರುದ್ರಾಕ್ಷಧಾರಣಂ
ಲಬ್ಧ್ವಾಶಿವಂ ಮಹಾದೇವಂ ಲಿಂಗರೂಪಮುಮಾಪತಿಂ
ಅರ್ಚಯೇತ್ತು ತ್ರಿಕಾಲಂ ವೈ ಪೂರ್ವಂ ಪಾಶುಪತಂ ತತ್
ನಿಗಮಾಗಮಾನು ಸಂಧಾನ ಶೈವದೀಕ್ಷಾ ವಿಧಾನತಃ
ಶಿವಲಿಂಗಂ ಕರೇ ಕಂಠೇ ಧೃತ್ವಾ ವಕ್ಷಸ್ಥಳೇಽಪಿವಾ
ತ್ರಿಕಾಲಂ ಯೋಽರ್ಚಯೇದ್ಭಕ್ತ್ಯಾ ಮಹಾಪಾಶುಪತೋಽಹಿ ಸಃ "

ಈ ಶ್ಲೋಕಗಳಲ್ಲಿ ಆದಿ ವೀರಶೈವಕ್ಕೆ ಪೂರ್ವದಲ್ಲಿದ್ದ ಅನಾದಿ ವೀರಶೈವವೆಂಬ ಪೂರ್ವ ಪಾಶುಪತದ ಲಕ್ಷಣವನ್ನೂ ಆದಿವೀರಶೈವ ಅಂದರೆ ಮಹಾ (ಅಪರ ಪಾಶುಪತ ವೀರಶೈವ) ಲಕ್ಷಣವನ್ನೂ ಚೆನ್ನಾಗಿ ಚಿತ್ರಸಲಾಗಿದೆ. ಆದಿವೀರಶೈವರಲ್ಲಿ ದೀಕ್ಷಾಸಂಸ್ಕಾರದೊಡನೆ ಶಿವಲಿಂಗವನ್ನು ಕರ ಕಂಠ ಹೃದಯ ಅಂದರೆ ಎದೆ ಇವುಗಳಲ್ಲಿ ಈಗಿರುವಂತೆ ಕಟ್ಟುವ ಪೂಜಿಸುವ ರೀತಿ (ನಿಯಮ)ಯಿತ್ತು. ಇದು ಆದಿವೀರಶೈವ ಅಂದರೆ ನಿಗಮಾಗಮ ವೀರಶೈವ ನಿರ್ದಿಷ್ಟ ಲಕ್ಷಣ. ವೇದದಲ್ಲಿ " ಅಮೃತಸ್ಯ ದೇವಧಾರಣೋ ಭೂಯಾಸಂ " ಅಂದರೆ ಮೋಕ್ಷಕ್ಕಾಗಿ ನಿತ್ಯಾನಂದ ಪ್ರಾಪ್ತಿಗಾಗಿ ಲಿಂಗದೇವಧಾರಣವಾಗಬೇಕೆಂದು ಹೇಳಿದೆ. " ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷು ವಿಶ್ವತಃ " " ಅಯಂ ಮೇ ಹಸ್ತೋ ಭಗವಾನ್ | ಅಯಂ ಮೇ

ವಿಶ್ವಭೇಷಜೋsಯಂ ಶಿವಾಭಿಮರ್ಶನಃ " ಇತ್ಯಾದಿ ಶ್ರುತಿಗಳು ಆದಿವೀರಶೈವ ವಿಧಿಯನ್ನು ವಿವರಿಸುತ್ತವೆ. ಆದಿ ಶಿವನ ಕಾಲದಲ್ಲಿ ಅನಾದಿ ವೀರಶೈವದ ರುದ್ರಪಂಚಾಕ್ಷರಿಯು ಹೋಗಿ ಶಿವಪಂಚಾಕ್ಷರಿಯು ಹುಟ್ಟಿತು.

"ಓಮಿತ್ಯೇಕಾಕ್ಷರಂ ಬ್ರಹ್ಮ ನಮಶ್ಶಿವಾಯೇತ್ಯಜಾಯತ"

—ಯಜುರ್ವೇದ.

ಶಿವನು ತಾನು ಅನುಷ್ಠಾನ ಅನುಸಂಧಾನ ಮಾಡುವಲ್ಲಿ ಸರ್ವವಿದ್ಯೆಗೆ ಆದಿಬೀಜಾಂಗವಾದ ಮಹಾನಾದದ ಅರ್ಥದಿಂದ ಪಂಚಾಕ್ಷರಗಳು ಹುಟ್ಟಿದವು. " ಮಂತ್ರೇ ಷಡಕ್ಷರೇ ಸೂಕ್ಷ್ಮೇ ಪಂಚಾಕ್ಷರತನುಃ ಶಿವಃ" ಶಿವಪಂಚಾಕ್ಷರಿಗೂ ಶಿವನಿಗೂ ಇರುವ ಸಂಬಂಧವಿದು. ಅಲ್ಲಿಂದೀಚೆಗೆ ಶಿವಪಂಚಾಕ್ಷರಿಯೇ ಸರ್ವರಲ್ಲಿ ಹೆಚ್ಚು ಬಳಕೆಯಾಗಿ ಬಂದಿದೆ. ಶಿವನು ಜನಪ್ರಿಯನಾದ ಕಾರಣ ಶೈವರೂ ವೀರಶೈವರೂ ಇದನ್ನೇ ಜಪಿಸತೊಡಗಿದರು. ರುದ್ರಪಂಚಾಕ್ಷರಿಯನ್ನು ಕೈ ಬಿಟ್ಟರು. ರುದ್ರನ ಕಾಲದಲ್ಲಿ ವೀರಶೈವ ಶವವನ್ನು ಸುಡುತ್ತಿದ್ದರು. ಶಿವನ ಕಾಲಕ್ಕೆ ಅದು ನಿಂತುಹೋಯಿತು. ಅವರವರ ಆ ಭೂತತತ್ತ್ವಗಳಂತೆ ಇವೆರಡೂ ಸರಿಯಾದರು ತಾತ್ತ್ವಿಕವಾಗಿ ಶಿವನಿಂದ 'ದಗ್ಧಸ್ಯ ದಹನಂ ನಾಸ್ತಿ....' ಎಂಬ ಪ್ರತಿಪಾದನೆಯು ಪರಿಣಾಮಕಾರಿಯಾಗಿ ಬಳಕೆಗೆ ಬಂದಿರುತ್ತದೆ.

ಶಿವನು ಕಲಾಪ್ರಿಯನಾದ ಕಾರಣ ಜನಪ್ರಿಯನಾದನು. ಶಿವನ ಆಡಳಿತ ಆಕರ್ಷಕವಾಗಿತ್ತು. ಶಿವನಿಂದ ಸರ್ವಕಲೆಗಳು ಸೃಷ್ಟಿಗೊಂಡವು ; ದೃಷ್ಟಿಗೊಳಗಾದವು ; ಸೆಳೆದವು. ನೃತ್ಯಕಲೆಯನ್ನು ಸೃಷ್ಟಿಸಿದವನು ಶಿವನು. ನೃತ್ಯಪ್ರಿಯ ಶಿವ. ನೃತ್ಯಕುಶಲ ಶಿವ. ನಟರಾಜ ರಾಜನೆಂದು ಹೆಸರಾದ ಶಿವ. ಸಂಗೀತವೂ ಆತನಿಂದಲೆ ಆರಂಭವಾಯಿತು. ' ನನಾದ ಢಕ್ಕಾಂ ನವಪಂಚವಾರಂ ' ಎಂಬ ಮಾತಿನಲ್ಲಿ ವಾದ್ಯವಾದನಕಲೆಯೊಡನೆ ಶಬ್ದಶಾಸ್ತ್ರ ರಚಕನೂ ಅಂದರೆ ವ್ಯಾಕರಣ ಸೂತ್ರಪ್ರಷ್ಟಾರನೂ ಶಿವನೆಂಬುದು ಸರ್ವರಿಗೆ ಸುವಿದಿತವಾಗಿದೆ. ಅಲ್ಲದೆ ಆಯುರ್ವೇದ, ಜ್ಯೋತಿಷ್ಯ, ಯಂತ್ರ, ವಿದ್ಯಾಕರ್ತನೂ ಸಹ ಶಿವನೆಂದು ಹೇಳುತ್ತಾರೆ. ಎಲ್ಲಕ್ಕೂ ಮಿಗಿಲಾಗಿ ಯೋಗಾಚಾರ್ಯನೂ ಆತನೇ ಆಗಿದ್ದಾನೆ. ಇದರಿಂದಾಗಿ ರುದ್ರನಿಗಿಂತ ಶಿವನು ಹೆಚ್ಚಾಗಿ ಜನಪ್ರಿಯನಾದನು. ಹಾವು ಸಿಂಹಗಳು ಸಹ ಆತನ ಆಭರಣ, ಆತನ ಹೆಂಡತಿಯ ವಾಹನವಾಗಿರಬೇಕಾದರೆ ಆತನು ಜನಪ್ರಿಯ ಮಾತ್ರನಲ್ಲ ; ಪ್ರಾಣಿಗಳಿಗೂ ಪ್ರಿಯನಾಗಿದ್ದನು ; ಅವರಲ್ಲಿಯೂ ವಿಷಕಾರುವ ಹಿಂಸೆಗೊಳಿಸುವ ಪ್ರಾಣಿಗಳಿಗೆ ಪ್ರಿಯನಾಗಿದ್ದನೆಂದರೆ ಆತನ ಜನಪ್ರಿಯತೆಗೆ ಮೇರೆಯಿದೆಯೆ ? ಶಿವನ ಸಂಗೀತಕಲೆಗೆ ಮೆಚ್ಚಿತು ಸರ್ಪ. ಶಿವನ ನಾಟ್ಯಕಲೆಗೆ ಮುಗ್ಧವಾಯಿತು ನವಿಲು. ಭೂತತತ್ತ್ವದ ಶಿವನು ಕರ್ಷಕಲೆಯಲ್ಲಿ ಬಲ್ಲಿದನೆಂಬುದನ್ನು ಸೂಚಿಸುತಿದೆ ವೃಷಭ. ಕೃಷಿಯಿಂದ ಸಮೃದ್ಧವಾಗಿ ಬೆಳೆ ಬೆಳೆದು ಮನೆತುಂಬ ಧಾನ್ಯವುಳ್ಳವನೆಂಬುದನ್ನು ಸೂಚಿಸುತ್ತದೆ ಆತನ ಮಗ

ಗಣಪತಿಯ ಮೂಷಕ ವಾಹನ ಕಲ್ಪನೆ. ಚಂದ್ರಧರನೆಂಬುದು ಆತನ ಜ್ಯೋತಿಷ್ಯ ನಿಪುಣತೆಯ ಚಿನ್ಹೆ. ಚಂದ್ರನನ್ನು ನೋಡಿ ತಿಥಿ ವಾರ ಮುಂತಾದವುಗಳನ್ನು ಮೊದಲು ಮಾಡಿದವನು ಶಿವನು. ಆದ್ದರಿಂದ ಶಿವನಿಗೆ ಚಂದ್ರಧರನೆಂದು ಹೆಸರು. ಜಗತ್ತಿಗೆ ಮೊದಲು ದೊಡ್ಡ ಜಲಾಶಯವನ್ನು ನಿರ್ಮಿಸಿ ಕೊಟ್ಟವನು ಶಿವನು. ಸಮುದ್ರ ಶಿವನು ಮೊದಲು ತೋಡಿಸಿದ ಬೃಹದಾಕಾರದ ಭಾವಿ. ಜನತಗೆ ಜಲಾಶಯವನ್ನಿತ್ತುದರ ಸವಿನೆನಪಿಗಾಗಿ ಶಿವನನ್ನು 'ಗಂಗಾಧರ'ನೆಂದು ಬಿರುದಿತ್ತು ಕರೆದರು. ಕೊನೆಯದಾಗಿ ಸ್ಮಶಾನವಾಸಿಗಳಿಗೂ ಸಂತೋಷವನ್ನು ಹುಟ್ಟಿಸುವ ವಿಶಾಲ ಜೀವಿ ಶಿವನು. ಇದಕ್ಕಿಂತ ಶಿವನ ಜನಪ್ರಿಯತೆಗೆ ಮಿಗಿಲಾದ ಸಾಕ್ಷಿ ಬೇಕಿಲ್ಲ. ಅಂತೆಯೇ ಪೃಥ್ವೀತತ್ತ್ವಾಧಿಕ್ಯವುಳ್ಳ ವ್ಯಕ್ತಿ ಶಿವನೆಂಬುದಕ್ಕೂ ಬೇರೆ ಇನ್ನಾವ ರುಜುವಾತು ಬೇಕಿಲ್ಲ. ಇವರಿಂದಾಗಿ ಶಿವನ ಕೀರ್ತಿ ಶಿವನ ಪ್ರೀತಿ ಜಗತ್ತಿನ ಜನತೆಯಲ್ಲಿ ಅಂದಿನಿಂದ ಹಾಸು ಹೊಕ್ಕಾಗಿ ಹರಡಿ ಹಬ್ಬಿತು.

"ಋಗ್ವೇದದಲ್ಲಿ ಬಾಣದಂತೆ ಹೊಳೆಯುತ್ತ ಬರುವ ರುದ್ರನು ಮರುತ್ತುಗಳ ಒಡೆಯ. ಅಲ್ಲಿಯ ರುದ್ರನಿಗೂ ಇಂದಿನ ಶಿವನಿಗೂ ತುಂಬಾ ಅಂತರವಿದೆ. ಯಜುರ್ವೇದದ ಶತರುದ್ರೀಯ ಅಧ್ಯಾಯದಲ್ಲಿ ರುದ್ರನ ಜೊತೆಗೆ ಶಿವ ಮತ್ತು ಗಿರೀಶರ ಉಲ್ಲೇಖವಿದೆ. ಆದರೆ ಇದು ಶೈವಭಾವನೆಯ ವಿಕಾಸ ಪರಂಪರೆಯ ಸೋಪಾನ ಮಾತ್ರ...."

ಎಂಬುದಾಗಿ ಶ್ರೀ ಮ. ಸು. ಕೃಷ್ಣಮೂರ್ತಿ ಅವರು ಅಭಿಪ್ರಾಯ ಪಡುತ್ತಾರೆ. ಈ ದಿಸೆಯಲ್ಲಿ ಪ್ರಜಾಮತದ ವಿಶೇಷ ಸಂಚಿಕೆಯಲ್ಲಿ ಪ್ರಕಟವಾದ ಇವರ "ಭಾರತೀಯ ಸಂಸ್ಕೃತಿಗೆ ಆರ್ಯೇತರ ಜನಾಂಗಗಳ ಕೊಡುಗೆ" ಎಂಬ ಬರೆಹವು ಗಮನಾರ್ಹವಾಗಿದೆ.

ಶಿವನು ಹೇಗೆ ಕಲಾವಿದನೋ ಹಾಗೆ ಕ್ರಾಂತಿಕಾರಕನು. ಮೊತ್ತ ಮೊದಲು ಶಕ್ತಿಪೂಜೆ, ಶಕ್ತಿಗೆ ಪೂಜ್ಯತೆ ತಂದವನು ಶಿವನು. ಅರ್ಧನಾರೀಶ್ವರನೇ ತಾನಾಗಿ ಸ್ತ್ರೀ ಜೀವನಕ್ಕೆ ಕಳೆಯೇರಿಸಿದ ಕ್ರಾಂತಿಕಾರನು ಆತನು. ಶಿವ–ಶಕ್ತಿ ಹೇಗೆ ಬೇರಲ್ಲವೋ ಸ್ತ್ರೀ ಪುರುಷರು ಹಾಗೆ ಬೇರಲ್ಲ. ಒಂದೇ ವಸ್ತುವಿನಲ್ಲಿರುವ ಎರಡು ಭಾಗ. ಅವೆರಡೂ ಸಮಗೂಡಿಕೊಂಡಿದ್ದರೆ ಅದು ಶುಭಜೀವನ; ಸುಖಜೀವನ, – ಎಂದು ಸಾರಿದಾತನು ಶಿವನು. ಅಲ್ಲದೆ ಅಸ್ಪೃಶ್ಯೋದ್ಧಾರದ ಆದಿ ಕರ್ತನೂ ಆತನೆ ! ಅತ್ತ ಅಗ್ರಜರ ಹುಡುಗಿ ದಾಕ್ಷಾಯಣಿಯನ್ನು ಮದುವೆಯಾಗಿ ಇತ್ತ ಅಂತ್ಯಜರ ಮಾಲೆಯ ಅಂಬಿಗರ ಹುಡುಗಿ ಗಂಗೆಯನ್ನು ಮದುವೆಯಾಗಿ ಅಸ್ಪೃಶ್ಯತೆಯನ್ನು ತೊಡೆದು ಸಾಮ್ಯವಾದವನ್ನು ತಂದ ಕ್ರಾಂತಿಕಾರನು ಶಿವನು. ಕೃಷಿಕನಾಗಿ ಕಾಯಕಕ್ಕೆ ಮಹತ್ವವನು ತಂದವನವನು. "ಧರೆಯೊಳಗೆ ಹಿರಿದಪ್ಪ ಅಂಗಡಿಯನಿಕ್ಕಿ ಹರದ ಕುಳ್ಳಿರ್ದ ನಮ್ಮ ಮಹಾದೇವಸೆಟ್ಟಿ. ಕಾಣಿಯ ಸೋಲ; ಅರ್ಧಗಾಣಿಯ ಗೆಲ್ಲ. ಜಾಣ

ನೋಡವ್ವ ನಮ್ಮ ಕೂ. ಸಂ. ದೇವ " ಎಂಬ ಬಸವಣ್ಣನವರ ವಚನದ ತತ್ತ್ವಾರ್ಥ ಹೇಗಾದರಿರಲಿ. ವಣಿಕ್ (ಬಣಜ) ಕಲೆಯು (ವ್ಯಾಪಾರ ಕ್ರಾಂತಿಯು) ಮೂಲ ಪುರುಷನೂ ಆ ಶಿವನು–ಎಂದು ಹೇಳಿದರೆ ಹೆಚ್ಚಿನ ಮಾತಲ್ಲ. ಲೌಕಿಕ ಅಲೌಕಿಕ ವ್ಯಾಪಾರಗಳೆರಡರಲ್ಲಿಯೂ ಜಾಣ ನೆನಿಸಿಕೊಂಡನು ಶಿವನು.

ಶಿವನ ಎಲ್ಲ ಕಲೆಗಳಿಗಿಂತ ಕಾಯಕಕಲೆ ಅಗಾಧವಾದುದು, ಕಾಯಕ ಕ್ರಾಂತಿ ಅಸಾಮಾನ್ಯವಾದುದು. ಕಾಯಕಗಳಲ್ಲೆಲ್ಲ ಮಿಗಿಲಾದಕಾಯಕ– ಮೂಲಕಾಯಕ ಕೃಷಿ. ಇದನಂದೇ ಆ ಶಿವನು ಅರಿತಿದ್ದನು ; ಆಚರಣೆಗೆ ತಂದಿದ್ದನು.

ಶಿವನು ಕೈಲಾಸಾಧಿಪತಿ ! ಇದರ ಮೂಲಾರ್ಥ ನಾವು ಹೇಳುವ ಕೃಷಿಕಾಯ ಕಾಧಿಪತ್ಯವನ್ನೆ ಸೂಚಿಸುತ್ತದೆ. ಸದ್ಯಕ್ಕೆ ಇದನೊಂದೆಡೆಗಿರಿಸಿ ಪ್ರಚಲಿತ ವಿರುವ ಕೈಲಾಸ ರಾಜ್ಯಾಧಿಪತಿಯೆಂದು ಬಗೆದು ಮುಂದುವರಿದರೂ ಅಲ್ಲಿಯೂ ಆತನ ಅಗ್ಗಳಿಕೆ ವೆಗ್ಗಳವಾಗುತ್ತದೆ. ಶಿವನು ಕೈಲಾಸ ರಾಜ್ಯದ ರಾಜನಾಗಿದ್ದರೂ ರೈತ ನಾಗಿದ್ದನು. ದೇವನೆನಿಸಿದ್ದರೂ ದುಡಿಯುತ್ತಿದ್ದನು. ಅವನ ನಾಮ ರೂಪಗಳಲ್ಲಿ ಅವನ ಬಾಳ ಬಗೆಗಳಲ್ಲಿ ಆತನ ಕೃಷಿಕಾಯಕದ ಗುಟ್ಟಿದೆ; ಗುರುತಿದೆ.

ಶಿವನೊಬ್ಬ ಶ್ರೇಷ್ಠ ಜಮೀನ್ದಾರ. ಆತ ನೆಲ-ಜಲಗಳೊಡೆಯ. 'ಕ-ಇಲಾ-ಆಸ' ಈ ಬಿಚ್ಚು ನುಡಿಯ ಅರ್ಥ ಅದನ್ನೇ ಸೂಚಿಸುತ್ತದೆ. ಇದನ್ನು ಇನ್ನೂ ವೆಗ್ಗಳವಾಗಿ ಸೂಚಿಸಲು ಪಾರ್ವತಿ–ಗಂಗೆಯರ ಪರಿಣಯ. ಪಾರ್ವತಿ ತನ್ನ ಪೂರ್ವ ಜನ್ಮದಲ್ಲಿ ಆರ್ಯ ಬ್ರಾಹ್ಮಣ ಕನ್ನೆಯಾಗಿದ್ದಳು. ಆಗ ಕೃಷಿಕಾಯಕ ನಿರತನಾದ ಶಿವನ ಕೈವಿಡಿದು ಕೃಷಿಯಲ್ಲಿ ಸಹಕರಿಸಿ ಬಾಳಲು ಆಗದೆ ಅತ್ತ ಶಿವನನ್ನು ಬಿಡಲು ಮನಸಾ ಗದೆ ಆ ಜನ್ಮವ ನೀಗಿ, ಕೃಷಿಕಾಯಕದಲ್ಲಿ ನಿರತನಾದ ಪರ್ವತರಾಜನ ಮಗಳಾಗಿ ಹುಟ್ಟಿ ಬೆಳೆದು, ಶಿವನ ಕೈವಿಡಿದು ಆತನ ಕೃಷಿಕಾಯಕದಲ್ಲಿ ಸಹಕರಿಸುತ್ತಾಳೆ. ಕೃಷಿಗೆ ನೆಲ–ಜಲಗಳ ಪ್ರಾಮುಖ್ಯತೆ ಅದೆಷ್ಟಾದರೂ ಇದೆಯೆಂಬುದನ್ನು ಶಿವನ ಪತ್ನಿಯರಾದ ಗೌರಿ, ಗಂಗೆಯರಿಂದ ಗೊತ್ತಾಗುತ್ತದೆ. ಕೃಷಿಗೆ ಇವೆರಡೇ ಸಾಲವು. ಪಂಚಭೂತಗಳೂ ಬೇಕು. ಇದನ್ನು ಸೂಚಿಸಲು ಪಂಚಭೂತಗಳನ್ನು ಶಿವನಿಗೆ ಪಂಚ ಮುಖಗಳನ್ನಾಗಿ ಚಿತ್ರಿಸಿದರು. ಕೃಷಿನಿರತನಾದ ಶಿವನು ಹೆಚ್ಚಾಗಿ ಭೂಮಿ ಯಲ್ಲಿಯೆ (ಹೊಲದಲ್ಲಿಯೆ) ಇರಬೇಕಾಗುತ್ತದೆ. ಅಲ್ಲಿಯೆ ಕಾವಲಿಗಾಗಿ ಇರುಳು ಮಲಗಬೇಕಾಗುತ್ತದೆ. ಆಗ ಆತನ ಮೈಮೇಲೆ ಹಾವುಗಳು ಹರಿದಾಡಲಾರಂಭಿಸಿ ದವು. ಮೈಮೇಲೆ ಹಾವುಗಳು ಹರಿದಾಡಿದರೂ ಅರಿಯದ, ಎಚ್ಚರಾಗದ ನಿದ್ದೆ ಬರ ಬೇಕಾದರೆ ಕೃಷಿಕಾಯಕದಲ್ಲಿ ಅದೆಷ್ಟು ಚೆನ್ನಾಗಿ ಬಿಡುವಿಲ್ಲದೆ ದುಡಿದು ಶ್ರಮಿಸುತ್ತಿರ ಬೇಕು. ಹಾಗೆ ಶ್ರಮಿಸಬೇಕೆಂಬುದನ್ನು ಸೂಚಿಸಲು ಈ ಚಿತ್ರ. ಅಲ್ಲದೆ ಪಶುಪತಿ, ಸ್ಥಾಣು, ಗಿರೀಶ, ಭೂತೇಶ, ಖಂಡಪರಶು, ಕೃತ್ತಿವಾಸ, ಭೀಮ ಇತ್ಯಾದಿ ಆತನ ನಾಮಗಳು ಆತನು ಕೃಷಿಕಾಯಕ ನಿರತನಾಗಿರುವುದರಿಂದ ಬಂದವೆಂಬುದಾಗಿ

ಯೋಚಿಸಿದರೆ ತಪ್ಪಾಗಲಾರದು. ಕೃಷಿಗೆ ಪ್ರಧಾನವಾದುದು ವೃಷಭ. ಅದು ಅವನಲ್ಲಿವೆ. ಆ ವೃಷಭ ಶಕ್ತಿಯನ್ನು ಪೂಜ್ಯವಾಗಿ ಕಾಣಬೇಕೆಂಬ ಕಲೆಯೆ ಆತನನ್ನು ಮನುಷ್ಯಾಕಾರವಾಗಿ ಚಿತ್ರಿಸಿ ಮುಖ ಮಾತ್ರ ವೃಷಭವಂತಿರಿಸುವ ಪದ್ಧತಿ ಬಂದಿರ ಬೇಕಲ್ಲವೆ? ಪರ್ವತನ ಮಗಳಾಗಿ ಗಿರೀಶನ ಮಡದಿಯಾಗಿ ಬಾಳುವ ಪಾರ್ವತಿಗೆ ಸಿಂಹವಾಹನವಾಗುವುದರಲ್ಲಿ ಔಚಿತ್ಯವಿದೆಯಲ್ಲವೆ? ಗಣಪತಿಯ ಚಿತ್ರವೂ ಇದೇ ನಿಟ್ಟಿನದು. ಇವೇ ಕೃಷಿಕಾಯಕಕ್ಕೆ ಸಂಬಂಧಿಸಿದುದು. ಕೃಷಿಯಿಂದ ಬೆಳೆದುಬಂದ ಕಾಳನ್ನು ರೂಢಿಸುವ ಹಾಗು ಇರಿಸುವ ಸಾಮಗ್ರಿಗಳನ್ನೆಲ್ಲ ಒಂದೆಡೆಗಿರಿಸಿ ಕೃಷಿಗಾರನ ಪತ್ನಿಯಾದ ಪಾರ್ವತಿಯು ಮನೆಯ ಮುಂಬಾಗಿಲಲ್ಲಿ ಪೂಜಿಸಿದ ಫಲವೇ ಇಂದಿನ ಈ ಆಕೃತಿಯ ಗಣಪತಿ! ಕೃಷಿಯಿಂದ ಬಂದ ಕಾಳನ್ನು ತುಂಬಲು ಗುಡಾಣ (ಕಣಜ) ಬೇಕು. ಅದನ್ನು ಪಾರ್ವತಿಯು ತನ್ನ ಮೈ ಮಣ್ಣಿನಿಂದ ಮಾಡಿದಳು. ಇದೇ ಗಣಪನ ಹೊಟ್ಟೆ! ಅದರಲ್ಲಿ ತುಂಬಿದ ಅವರೆ, ತೊಗರೆ ಮುಂತಾದ ಕಾಳುಗಳೇ ಕಡುಬು ಉಂಡೆಗಳು. ಗುಡಾಣ ಒಡೆದು ಕಾಳು ಹೊರಬರಬಾರದೆಂದು ಹಾವು ಹಗ್ಗವ ಹೊಟ್ಟೆಗೆ ಕಟ್ಟಿರುವುದು. ಕಾಳನ್ನು ಹಸನ ಮಾಡುವ ಮರಗಳೇ ಕಿವಿಗಳು. ಕಾಳನ್ನು ಕುಟ್ಟುವ ಒನಕೆಯೆ ಏಕದಂತ. ಕಾಳಿನ ಕಣಜದ ಬುಡಕ್ಕೆ ಕಾಳಿಗಾಗಿ ಬಂದು ಕೊರೆವ ಇಲಿಯೇ ವಾಹನ. ಇತ್ಯಾದಿ. ಇವನ್ನು ಯೋಚಿಸಿದರೆ ಗಣಪತಿ ಪೂಜೆ ರೈತರ ಪೂಜೆ. ಅದರಲ್ಲಿಯೂ ಮುಖ್ಯವಾಗಿ ರೈತ ಸ್ತ್ರೀಯರ ಪೂಜೆ. ಜೀವನಾ ಧಾರವಾದ ಆಹಾರವನ್ನು ಕೊಡುವ ನೆಲದ ಪೂಜೆಯನ್ನು ಪಾರ್ವತಿಯು 'ಗಣಪತಿ'ಯ ವ್ಯಾಜ್ಯದಲ್ಲಿ ತಂದಿದಾಳೆ. ಇದು ಮುಖ್ಯ ತಾನೆ. ಅಂತೆಯೆ ಗಂಗೆ ಪೂಜೆಯೂ ಬಂದಿದೆ. ಕೃಷಿಗೆ ಬೇಕಾದ ವಸ್ತು ಮತ್ತೊಂದಿದೆ. ಅದೇ ಮರ. ಅದೂ ಮುಖ್ಯ. ಅದಕ್ಕೆ ಶಿವನನ್ನು 'ಸ್ಥಾಣು'ವನ್ನಾಗಿ ಕಲ್ಪಿಸಿರಬೇಕು. ಕೃಷಿಕಾಷ್ಠಕ್ಕೆ ಎಲೆ ಬೇಕಾ ಗುವುದಿಲ್ಲ. ಅದರಿಂದ ಆತನ ಪತ್ನಿ ಅಪರ್ಣ. ಕೃಷಿಗೆ ಕವಲುಳ್ಳ ಕಾಷ್ಠ ಬೇಕಾಗು ವುದಿಲ್ಲ; ಅದರಿಂದ ಆತನ ಮಗ ವಿಶಾಖ. ಗೊಬ್ಬರಕ್ಕೆ ಹಾಲು ಬೆಣ್ಣೆಗಳಿಗೆ ಹಸು ಗಳು ಬೇಕು. ಅವೂ ಶಿವನಿಗಿದ್ದವು. ಆದ್ದರಿಂದ ಆತ ಪಶುಪತಿ. ಅವನ್ನು ಮೇಯಿಸಲು ಅರಣ್ಯ ಬೇಕು. ಅದರಿಂದ ಆ ಶಿವನು ಗಿರೀಶ. ಇವೆಲ್ಲ ಅರ್ಥಪೂರ್ಣ ನಾಮ ರೂಪಗಳ ಚಿತ್ರಣದಿಂದ ಶಿವನ ಕೃಷಿಕಾಯಕದ ಸುಂದರ ಚಿತ್ರ ಕಣ್ಣುಮುಂದೆ ಬಂದು ನಿಲ್ಲುತ್ತದೆ. ಜಗತ್ತಿನ ಮೂಲಶಿಕ್ಷಣದ ಮೂಲಶಿಕ್ಷಣಾಚಾರ್ಯ ಶಿವನೆಂಬುದು ವ್ಯಕ್ತವಾಗುತ್ತದೆ. ಆದುದರಿಂದಲೇ ಆದಿಶಿವನ ಈ ಆದಿಕಾಯಕವು ವೀರಶೈವರಲ್ಲಿಯೇ ವಿಶೇಷವಾಗಿ ಇಂದಿಗೂ ಉಳಿದು ಬೆಳೆದು ಬಂದಿದೆ.

ಹೀಗೆ ಶಿವನು ಪಾರ್ಥಿವ ಕೃಷಿಯಲ್ಲಿ ಪ್ರವೀಣನಾಗಿದ್ದಂತೆ ಪ್ರಾಕೃತಿಕ ಕೃಷಿ ಯಲ್ಲಿಯೂ ಪ್ರವೀಣನಾಗಿದ್ದನು. ಪ್ರಕೃತಿ ರಚನೆಯಲ್ಲಿ ಆತ ತೋರಿಸಿದ ಜಾಣ್ಮೆ ಅಗಾಧವಾದುದು. ಪ್ರಕೃತಿ ಇಬ್ಬಗೆ! ಒಂದು ಸಮಷ್ಟಿ; ಇನ್ನೊಂದು ವ್ಯಷ್ಟಿ.

ಇವೆರಡರ ಸೃಷ್ಟಿಯಲ್ಲಿಯೂ ಆತ ನಿಪುಣ! ಸೃಷ್ಟಿ ಮಾತ್ರದಲ್ಲಿ ಅಲ್ಲ, ಸ್ಥಿತಿಯಲ್ಲಿಯೂ ಸಹ ಆತ ನಿಪುಣ! ಗತಿಯಲ್ಲಿಯೂ ಆತ ನಿಪುಣ!

ದ್ವಂದ್ವಗಳಲ್ಲಿ ಸಮತ್ವಭಾವವ ತಾಳುವುದೇ ಯೋಗವೆಂಬುದನ್ನು ಚೆನ್ನಾಗಿ ತನ್ನಲ್ಲಿ ಅಳವಡಿಸಿಕೊಂಡ ಆದಿಯೋಗಿ ಆ ಶಿವ. ಅಮೃತದಂತೆ ವಿಷವನ್ನೂ ಪಾನ ಮಾಡಬಲ್ಲ ಆ ಶಿವ! ಯುಗಾದಿಯಂತೆ ಯುಗಾಂತ್ಯವ ಮಾಡಬಲ್ಲ ಸಮರ್ಥ ಆ ಶಿವ. ಹೊನ್ನಿನಂತೆ ಹಾವ ಮುಡಿಯಬಲ್ಲ ಆ ಶಿವ. ರಾಜಭವನದಂತೆ ಶ್ಮಶಾನವ ಕಾಣಬಲ್ಲ ಆ ಶಿವ. ಅದರಿಂದ ಆತ ಅಭವ; ಭವ. ದ್ವಂದ್ವರಹಿತ.

ಆ ಶಿವನ ಷಡ್ದರ್ಶನ ಶಕ್ತಿ ಸೂಚಕವೇ ಷಣ್ಮುಖ. ಆತನ ಬುದ್ಧಿಶಕ್ತಿಸೂಚಕ ಷಣ್ಮುಖನಾದರೆ ಕಾಯ ಶಕ್ತಿಸೂಚಕ ವೀರಭದ್ರ. ಕಲಾಶಕ್ತಿ ಸೂಚಕ ಭೃಂಗಿ. ಶಿವಶಕ್ತಿ ಸಾಮ್ಯ-ಸಮರಸ ಸಿದ್ಧಾಂತ ಸ್ಥಾಪಕನೇ ಶಿವ. ಇದರಿಂದಾಗಿ ಆದಿ ವೀರ ಶೈವ ಸಾರ ಸರ್ವಸ್ವವಾಗಿದ್ದಾನೆ ಶಿವ. ತನ್ನ ದರ್ಶನ ಜ್ಞಾನ, ವಿಜ್ಞಾನ, ವೃತ್ತಿ ಶಿಕ್ಷಣ, ನೈತಿಕಾಚರಣ, ಆಧ್ಯಾತ್ಮಿಕ ಜೀವನ ಮುಂತಾದವುಗಳನ್ನು ವೀರಶೈವ-ಶೈವ ಜನತೆಯಲ್ಲಿ ತುಂಬಿದನು ಆ ಶಿವ. ತನ್ನ ಅಂಶಜರಾದ ಶಿವಾಚಾರ್ಯರ ಮುಖಾಂತರ ಪ್ರಚುರಪಡಿಸಿದನು ಆ ಶಿವ. ಧರ್ಮಜಾಗ್ರತಿಯಿಲ್ಲದಲ್ಲಿಗೆ ತನ್ನ ಗಣರನ್ನು ಕಳುಹಿಸಿ ಧರ್ಮಪ್ರಸಾರ ಮಾಡಿಸುತ್ತಿದ್ದನು ಆ ಶಿವನು.

ಶಿವನ ತರುವಾಯ ಶಿವಾಚಾರ್ಯರು ಉದಯಿಸಿ ವೀರಶೈವ ದರ್ಶನಗಳನ್ನು ಉಗಮಿಸಿ ಉದ್ಧರಿಸಿದ್ದಾರೆ. ಆಗಮೋಪನಿಷತ್ತುಗಳನ್ನು ಸ್ಮೃತಿಪುರಾಣಗಳನ್ನು ಸೃಷ್ಟಿಸಿದ್ದಾರೆ. ಹತ್ತು ಶಿವಾಗಮಗಳನ್ನು ಶಿವನು ರಚಿಸಿದ್ದರೆ ಉಳಿದವುಗಳನ್ನು ಶಿವಾಚಾರ್ಯರು ರಚಿಸಿದ್ದಾರೆ. ಲಿಂಗೋಪನಿಷತ್ತು, ವೀರಲಿಂಗೋಪನಿಷತ್ತು, ಕಾಲಾಗ್ನಿ ರುದ್ರ, ರುದ್ರ ಜಾಬಾಲಾದಿ ಉಪನಿಷತ್ತುಗಳನ್ನು ಆದಿ ವೀರಶೈವರು ರಚಿಸಿದ್ದಾರೆ. ಬ್ರಹ್ಮಸೂತ್ರ, ಶಿವಸೂತ್ರಗಳಿಗೆ ಆದಿಶಂಕರಾಚಾರ್ಯರಿಗೆ ಮೊದಲೆ ಭಾಷ್ಯಗಳನ್ನು ಬರೆದಿದ್ದಾರೆ. ಅಗಸ್ತ್ಯ, ದೂರ್ವಾಸಾದಿಗಳು ವೃತ್ತಿಗಳನ್ನು ಬರೆದಿದ್ದಾರೆ. ರೇಣುಕ, ಏಕೋರಾಮ, ಪಂಡಿತ ಶಿವಾಚಾರ್ಯರು ಭಾಷ್ಯಗಳನ್ನು ರಚಿಸಿದಂತೆ ತಿಳಿಯುತ್ತದೆ. ಇವರಾದಿಯಾಗಿ ಇನ್ನೂ ಅನೇಕರು ಆದಿ ವೀರಶೈವರಾಗಿ ಸೇವೆ ಸಲ್ಲಿಸಿದ್ದಾರೆ.

“ಆದಿಯಲ್ಲಿ ಶಿವತತ್ತ್ವದಲ್ಲಿ ರೇಣುಕನುದಯವಾಗದಿರ್ದರೆ
ಇಲ್ಲಿ ಶಿವಲಿಂಗದಲ್ಲಿ ಉದಯವಾದ ಪರಿಯೆಂತೋ?
ಶಿವನಲ್ಲಿಯೆ ಹುಟ್ಟಿ ಶಿವನಲ್ಲಿಯೆ ಲಯವಾದ
ರೇವಣ ಸಿದ್ಧೇಶ್ವರನು ಅನಾದಿ ಮುಕ್ತನಲ್ಲ;
ಅವಾಂತರ ಮುಕ್ತನೆಂಬ ಅಜ್ಞಾನಿಗಳಿಗೆ ಏನೆಂಬೆ?
ಸಕಲಕೋಟಿ ಬ್ರಹ್ಮಾಂಡಕ್ಕಾಧಾರ ಕಾರಣವಾಗಿಯೂ

ಸಮಸ್ತ ಲೋಕಂಗಳ ಪವಿತ್ರ ಕಾರಣವಾಗಿಯೂ
ಪರಮೇಶ್ವರ ನಿಜಚಿನ್ಮಯವಪ್ಪ ಊರ್ಧ್ವ ಮುಖದಲ್ಲಿ
ಚಿತ್ಕಲಾ ಸ್ವರೂಪರಪ್ಪ ರುದ್ರಗಣಂಗಳು ಉದಯವಾ
ದರು ನೋಡಾ! ಮತ್ತೂ ಆ ರುದ್ರಗಣಂಗಳು ಜಗತ್ಪಾವನ
ಕಾರಣ ಮರ್ತ್ಯದಲ್ಲಿ ಅವತರಿಸಿದರೆ ಅದೇನು ಕಾರಣ
ಉದಯವಾದರು ವಾಸನಾಗುಣವಿಲ್ಲದೆ ಎಂದು
ಸಂದೇಹಿಸುವ ಅವಲಕ್ಷಣ ನಾಯನೇನೆಂಬೆ?
ಇವರಿಗೆ ಭವಪಾಶ ತಪ್ಪದು ಕಾಣಾ ಎಲೆ ಶಿವನೆ ನೀ
ಸಾಕ್ಷಿಯಾಗಿ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ!"

ಈ ವಚನದಲ್ಲಿ ತೋಂಟದ ಸಿದ್ಧಲಿಂಗೇಶ್ವರರು ಸ್ಪಷ್ಟವಾಗಿ ಹೇಳಿದ್ದಾರೆ. ಆದಿ ಕಾಲದ ಆದಿ ರೇಣುಕರ ಅವತಾರವನ್ನು ಅಂತ್ಯದಲ್ಲಿ ಅಂದರೆ ಹನ್ನೊಂದನೆಯ ಶತ ಮಾನದಲ್ಲಿ ರೇವಣಸಿದ್ಧರ ಅವತಾರವನ್ನು ಬಿಚ್ಚಿ ಬಣ್ಣಿಸಿದ್ದಾರೆ. ಇದರಿಂದ ಆದಿ ರೇಣುಕರೆ ಬೇರೆ; ರೇವಣರೆ ಬೇರೆ ಎಂಬುದು ವೆಗ್ಗಳವಾಗುತ್ತದೆ. ಅಲ್ಲದೆ ಅನಾದಿ ಕಾಲದ ವೀರಶೈವೋದ್ಧಾರಕ್ಕಾಗಿ ಚಿತ್ಕಲಾ ಸ್ವರೂಪರಾದ ರುದ್ರಗಣಂಗಳು ಉದಯಿಸಿ ಮತ್ತೆ ಆದಿಕಾಲದ ವೀರಶೈವೋದ್ಧಾರಕ್ಕಾಗಿ ಅವರೆ ಶಿವಾಚಾರ್ಯರಾಗಿ ಅವತರಿಸಿದ ರೆಂದು ಹೆಚ್ಚು ನಿಚ್ಚಳವಾಗಿ ಹೇಳಿದಾರೆ. ಅಲ್ಲದೆ;

"ನಂದೀಶ್ವರ, ಭೃಂಗೀಶ್ವರ, ವೀರಭದ್ರ, ದಾರುಕ, ರೇಣುಕ, ಶಂಖಕರ್ಣ, ಗೋಕರ್ಣ, ಏಕಾಕ್ಷರ, ತ್ರ್ಯಕ್ಷರ, ಪಂಚಾಕ್ಷರ, ಷಡಕ್ಷರ, ಸದಾಶಿವ, ಈಶ್ವರ, ಮಹೇಶ್ವರ, ರುದ್ರ, ಘಂಟಾಕರ್ಣ, ಗಜಕರ್ಣ, ಏಕಮುಖ, ದ್ವಿಮುಖ, ತ್ರಿಮುಖ, ಚತುರ್ಮುಖ, ಪಂಚಮುಖ, ಷಣ್ಮುಖ, ಶತಮುಖ, ಸಹಸ್ರಮುಖ ಮೊದಲಾದ ಗಣಾಧೀಶ್ವರರು ನಿತ್ಯಪರಿಪೂರ್ಣವಹ ಪರಶಿವ ತತ್ತ್ವದಲ್ಲಿ ಜ್ಯೋತಿಯಿಂದ ಜ್ಯೋತಿ ಉದಯಿಸಿದಂತೆ ಉದಯಿಸಿದ ಶುದ್ಧ ಚಿದ್ರೂಪರಪ್ಪ ಪ್ರಮಥರು. ಇವರು ಅನಾದಿ ಮುಕ್ತರಲ್ಲ, ಅವಾಂತರ ಮುಕ್ತರೆಂಬ ಅವಲಕ್ಷಣನಾಯ ನಾಲಗೆಯನೇನಂಬೆ....?" ಎಂಬುದಾಗಿ ಅದೇ ವಚನಕಾರರು ಶಿವತತ್ತ್ವದಲ್ಲಿ ಹುಟ್ಟಿದ ಶಿವಗಣಾಧೀಶ್ವರರನ್ನು ನಿರ್ದೇಶಿಸಿದ್ದಾರೆ. ಇವರೆಲ್ಲರೂ ಆದಿ ವೀರಶೈವರು; ಆದಿ ವೀರಶೈವೋದ್ಧಾರಕರು. ಇವರಲ್ಲದೆ, ಹದಿನಾಲ್ಕು ಸಾವಿರ ಜನ ಶಿವಗಣರು ಮತಪ್ರವರ್ತಕರಾಗಿ ಗುರು ಪೀಠಾಧಿಪತಿಗಳಾಗಿದ್ದರೆಂದು ತಿಳಿಯುತ್ತದೆ:

" ಸನತ್ಕುಮಾರ ಪ್ರಮುಖಾ ಜ್ಞಾನನಿಷ್ಠಾ ಯಶಸ್ವಿನಃ
ಧೃತಲಿಂಗಾಂಗ ಭಾವಾಶ್ಚ ವಿರಾಜಂತೇಽನಿಶಂ ಮುದಾ
ದುಂಡಿ ನಂದಿ ಮಹಾಕಾಳಿ ಪ್ರಮುಖಗಣನಾಯಕಾಃ
ಚತುರ್ದಶ ಸಹಸ್ರಂ ಹಿ ಕೈಲಾಸಾವರಣಾಧಿಪಾಃ

ಮತಪ್ರವರ್ತಕಾಸ್ಸರ್ವೇ ಗುರುಪೀಠಾಧಿರೋಹಿಣಃ
ಮಹೇಶ್ವರ ಸಮೀಪೇ ತೇ ವರ್ತಂತೇ ಶೂಲಪಾಣಯಃ
ಅಗಸ್ತ್ಯೋ ಜೈಮಿನಿಶ್ಚೈವ ವಿಶ್ವಾಮಿತ್ರೋಽಥ ಕಾಶ್ಯಪಃ
ಭರದ್ವಾಜೋಽಂಗಿರಾ ಅತ್ರಿರ್ವಶಿಷ್ಠೋ ರೋಮಹರ್ಷಣಃ
ಏತೇ ಸರ್ವೇ ಮಹಾಭಾಗಾ ಅತಿವರ್ಣಾಶ್ರಮೇ ರತಾಃ
ವೀರಶೈವಾಃ ಸಮಾಖ್ಯಾತಾ ಜೀವನ್ಮುಕ್ತಾ ನ ಸಂಶಯಃ"

ಎಂಬುದಾಗಿ ನೀಲಕಂಠ ಶಿವಾಚಾರ್ಯರು ಕ್ರಿಯಾಸಾರದಲ್ಲಿ ಆದಿ ವೀರಶೈವರ ಹೆಸರುಗಳನ್ನು ಉಲ್ಲೇಖಿಸಿದ್ದಾರೆ. ಇಲ್ಲಿ ಇವರು ಹೇಳಿದ ಗುರುಪೀಠಾಧಿಕಾರಿಗಳ ಸಂಖ್ಯೆ ಗಮನಾರ್ಹವಾದುದು. ಇದರಿಂದ ಶಿವಾಚಾರ್ಯರು ವಿಪುಲವಾಗಿದ್ದ ಸಂಗತಿ ಸುಸ್ಪಷ್ಟವಾಗಿದೆ. ಅವರೆಲ್ಲ ಮತಪ್ರವರ್ತಕರಾಗಿದ್ದ ಸಂಗತಿಯೂ ತಿಳಿಯುತ್ತದೆ. ಇದಲ್ಲದೆ ೭೭೦ ಅಮರಗಣರು ತ್ರಿಷಷ್ಠಿ ಗಣರು, ದಶಗಣರು, ಷೋಡಶರು, ತೇರಸರು ಆದಿವೀರ ಶೈವರಾಗಿ ಸೇವೆ ಸಲ್ಲಿಸಿದ್ದಾರೆ.

"ಆದಿ ಶೈವಾಸ್ತು ವಿಜ್ಞೇಯಾಃ ಕೌಶಿಕಾದ್ಯಾ ನಗಾತ್ಮಜೇ
ಕೌಶಿಕಃ ಕಶ್ಯಪಶ್ಚೈವ ಭರದ್ವಾಜಾತ್ರಿ ಗೌತಮಾಃ
ಆದಾವೇಶೇ ಮಹಾದೇವಿ ಪಂಚವಕ್ತ್ರೇಷು ದೀಕ್ಷಿತಾಃ
ತಾದೃಶಾನಾಂ ಪುನರ್ದೀಕ್ಷಾ ನಾಸ್ತಿ ಸಾ ದೇವಿ ನಿಷ್ಫಲಂ

—ಸೂಕ್ಷ್ಮಾಗಮ, ಪ. ೭, ಶ್ಲೋ. ೯–೧೦.

"ಪುರಾತನ ಪ್ರಮಥಗಣ ಭೃಂಗಿರಿಟಿ ಘಂಟಾಕರ್ಣ
ಸುಕೇಸರೂಪಮನ್ಯು ಭೃಗು ದಧೀಚಿಗೌತಮಾದಿ ಋಷಿಭಿಸ್ಸ ||"

—ಅನಾದಿ ವೀರಶೈವಸಾರ ಸಂಗ್ರಹ.

ಆದಿ ವೀರಶೈವರಾದ ಶಿವಗಣರನ್ನು ಸ್ಥೂಲವಾಗಿ ಹೀಗೆ ಹೇಳಬಹುದಾಗಿದೆ. ರೇಣುಕ ದಾರುಕಾದಿ ಪಂಚಾಚಾರ್ಯರು, ವೀರ, ವೀರಭದ್ರ, ಸ್ಕಂದ, ನಂದಿ ಭೃಗು, ಗರ್ಗ, ಜೈಗಿಷವ್ಯ, ಅತ್ರಿ, ಅಗಸ್ತ್ಯ, ದುರ್ವಾಸ, ದಧೀಚಿ, ಸಾನಂದ, ಶಾಂಭವಾನಂದ, ಕಾಶ್ಯಪ, ಕೌಶಿಕ, ಭರದ್ವಾಜ, ಅಂಗಿರಸ, ವಿಶ್ವಾಮಿತ್ರ, ಜೈಮಿನಿ, ಗೌತಮ, ಉಪಮನ್ಯು, ಗಜಕರ್ಣ, ಘಂಟಾಕರ್ಣ, ನಂದಿಕೇಶ್ವರ ಶಿವಾಚಾರ್ಯ, ಪರಮ ಶಿವಾರಾಧ್ಯ, ಪರಮತ ಕಾಲಾನಲ ಶಿವಾಚಾರ್ಯ, ಪರವಾದಿ ಭಯಂಕರ ಶಿವಾಚಾರ್ಯ, ಜ್ಯೋತಿರ್ನಾಥ ಶಿವಾಚಾರ್ಯ, ಸದ್ಯೋನಾಥ ಶಿವಾಚಾರ್ಯ, ವಾಮದೇವ, ಕಲವಿಕರಣ ಶಿವಾಚಾರ್ಯ, ಬಲವಿಕರಣ ಶಿವಾಚಾರ್ಯ, ಬಲಪ್ರಮಥನಾಥ ಶಿವಾಚಾರ್ಯ, ಅಘೋರ ಶಿವಾಚಾರ್ಯ, ತತ್ಪುರುಷ ಶಿವಾಚಾರ್ಯ, ಈಶಾನ ಶಿವಾಚಾರ್ಯ, ನೀಲಕಂಠ ಶಿವಾಚಾರ್ಯ, ಶಿವಯೋಗಿ ಶಿವಾಚಾರ್ಯ, ಏಕೋರಾಮ ಶಿವಾಚಾರ್ಯ, ಮಂಚಣ ಪಂಡಿತಾರಾಧ್ಯ, ಮಲ್ಲಿಕಾರ್ಜುನ ಪಂಡಿತಾರಾಧ್ಯ, ಶ್ರೀಪತಿ ಪಂಡಿತಾರಾಧ್ಯ, ಗೋಕರ್ಣ ಶಿವಾಚಾರ್ಯ,

ಶಿವರೇಣುಕ ಶಿವಾಚಾರ್ಯ, ದೇವರ ದಾಸಮಯ್ಯ, ಶಂಕರ ದಾಸಮಯ್ಯ, ಚಂದಿ ಮರಸ, ನಿಜಗುಣದೇವ, ರೇವಣಸಿದ್ಧ, ಸಕಳೇಶ ಮಾದರಸ, ದೇಮನಾರಾಧ್ಯ, ಉದ್ಭಟಾರಾಧ್ಯ, ಸೋಮಾನಂದ ಶಿವಾಚಾರ್ಯ, ಸ್ವಪ್ರಭಾನಂದ ಶಿವಾಚಾರ್ಯ, ನಾಥಾನಂದ ಶಿವಾಚಾರ್ಯ, ಮೊದಲಾದವರು ಆದಿ ವೀರಶೈವಕ್ಕೆ ಸೇವೆ ಸಲ್ಲಿಸಿದಾರೆ. ಇವರೆಲ್ಲ ಆದಿ ವೀರಶೈವರು.

## ಆಧುನಿಕ ವೀರಶೈವ – ವೀರಶೈವರು

ಆಧುನಿಕ ಅಂದರೆ ನೂತನ ವೀರಶೈವವು ಹನ್ನೆರಡನೆಯ ಶತಮಾನದಿಂದ ಮೊದಲಾಗುತ್ತದೆ. ಅದಕ್ಕೆ ಹಿಂದಿರುವವರನ್ನೆಲ್ಲ ಹನ್ನೆರಡನೆಯ ಶತಕದವರು ಆದ್ಯರು ಎಂದು ಕರೆಯುವದರಿಂದ ಹನ್ನೆರಡನೆಯ ಶತಮಾನದ ವೀರಶೈವರು ಆಧುನಿಕರು. ಅಲ್ಲಿಂದ ಇಂದಿನವರೆವಿಗೂ ಇರತಕ್ಕವರೆಲ್ಲರೂ ಆಧುನಿಕರು.

ಆಧುನಿಕ ವೀರಶೈವದ ಆಧಾರಸ್ತಂಭ ಬಸವಾದಿ ಪ್ರಮಥರು. ಮತ್ತು ಪಂಚ ಗಣಾಧೀಶ್ವರರು. ಪಂಚಾಚಾರ್ಯರು ಹನ್ನೊಂದನೆಯ ಶತಕಕ್ಕೆ ಸೇರುವುದರಿಂದ ಅವ ರಲ್ಲಿ ಒಬ್ಬಿಬ್ಬರು ಇನ್ನೂ ಹಿಂದಕ್ಕೆ ಹೋಗುವುದರಿಂದ ಅವರೆಲ್ಲ ಆ ಆದಿವೀರಶೈವಕ್ಕೆ ಸೇರಿದಾರೆ. ಆದ್ದರಿಂದ ಅವರನ್ನಿಲ್ಲಿ ಉದ್ಧರಿಸಿಲ್ಲ. ಅನಾದಿ ರುದ್ರನೇ ಆದಿಶಿವನಾಗಿ ಆ ಆದಿಶಿವನೇ ಆಧುನಿಕ ಬಸವಣ್ಣನಾಗಿ ದ್ವಿತೀಯ ಶಂಭುವಾಗಿ ಬಂದು ವೀರಶೈವ ಭೂಮಿಯಲ್ಲಿ ಶಿವಧರ್ಮದ ಬೆಳೆಯ ತೆಗೆದರು. ಅನುಭಾವಪ್ರಸಾದವ ಕೊಡುವರು. ಆ ಆದಿಶಿವನ ಕ್ರಾಂತಿಗಳನ್ನೇ ಮುಂದುವರಿಸುವರು. ಇದರಿಂದಾಗಿ ಇವರಿಗೆ ಎರಡ ನೆಯ ಶಿವನೆಂದು ಹೆಸರಾಗುವುದು. ಇವರಿಗೆ ಸಹಾಯವಾಗಿ ಆದಿಶಿವನಲ್ಲಿದ್ದ ಪ್ರಮಥ ಗಣವೆಲ್ಲ ಬೇರೆ ಬೇರೆ ರೂಪದಲ್ಲಿ ಅವತರಿಸಿ ಬರುತ್ತಾರೆ. ನಿರ್ಮಾಯಗಣೇಶ್ವರನು ಪ್ರಭುದೇವನಾಗಿ ಷಣ್ಮುಖನು ಚೆನ್ನಬಸವನಾಗಿ ವೀರಭದ್ರನು ಮಡಿವಾಳ ಮಾಚಿ ತಂದೆ ಯಾಗಿ ಭೃಂಗಿಯು ಸಿದ್ಧರಾಮನಾಗಿ ಗಂಗೆಗೌರಿಯರು – ಗಂಗಾಂಬಿಕೆ ನೀಲಾಂಬಿಕೆ ಯರಾಗಿ ಉಳಿದ ಶಿವಗಣರು ಶಿವಶರಣರಾಗಿ ಆ ರುದ್ರ ಕನ್ನಿಕೆಯರು ಶರಣೆಯರಾಗಿ ಬರುವರು. ಜಗಕ್ಕೆ ಕಲ್ಯಾಣವೆಸಗಲೋ ಎಂಬಂತೆ ಕಲ್ಯಾಣವಾಸಿಗಳಾಗುವರು· ಕಲ್ಯಾಣವನ್ನು ದ್ವಿತೀಯ ಕೈಲಾಸವೆನಿಸುವರು.

"ಲೋಕೋದ್ಧಾರ ಮಾಡಲು ಕಲ್ಯಾಣದ ಬಸವಣ್ಣನವರಾಗಿ ಕನ್ನಡ ನಾಡಿ ನಲ್ಲಿಯೇ ಅವತರಿಸಿ ರುದ್ರಲೋಕವ ಮರ್ತ್ಯಲೋಕಕ್ಕೆ ತಂದಾತ ಬಸವಣ್ಣ ! ಶಿವಾ ಚಾರದ ಘನವ ಮೆರೆದಾತ ಬಸವಣ್ಣ ! ಮಹಾಮನೆಯ ಮಾಡಿದಾತ ಬಸವಣ್ಣ !"

—ಸದ್ಧರ್ಮ ದೀಪಿಕೆ, ಸಂ. ೯೩-೯೪.

ಇದರಲ್ಲಿರುವ 'ರುದ್ರಲೋಕವ ಮರ್ತ್ಯಲೋಕಕ್ಕೆ ತಂದಾತ, ಬಸವಣ್ಣ !' ಎಂಬ ಮಾತು ನಾವು ಹೇಳುವ ಅನಾದಿ ವೀರಶೈವ ಪರಂಪರೆಯನ್ನು ಚೆನ್ನಾಗಿ ಚಿತ್ರಿ ಸುತ್ತದೆ. ಇಲ್ಲಿ ರುದ್ರಲೋಕ ಬೇರೊಂದು ಲೋಕವೆಂಬ ಭಾವ ಬರುವಂತಿದ್ದರೂ

ಬೇರಲ್ಲ. ಅದೂ ಇದೇ ಲೋಕ; ಹಿಂದಿದ್ದ ಅನಾದಿ ವೀರಶೈವ ಲೋಕ! ಈ ವಾಸನೆ ಬಿಡದೆ ಹರಿದು ಬರುತ್ತಿರುವುದರಲ್ಲಿದೆ ಅನಾದಿ ವೀರಶೈವ ಅಸ್ತಿತ್ವದ ಗುಟ್ಟು. 'ಶಿವಾಚಾರದ ಘನವ ಮೆರೆದಾತ ಬಸವಣ್ಣ' ಎಂಬ ಮಾತು ಆದಿ ವೀರಶೈವದ ಪುನರುದ್ಧಾರ ಕಾರ್ಯವನ್ನು ಉಗ್ಗಡಿಸಿದೆ. ಆದಿ ವೀರಶೈವ ಕರ್ತನಾದ ಶಿವಾಚಾರಗಳನ್ನು ಹಿಂದೆ ಬಿತ್ತರಿಸಲಾಗಿದೆ. ಆ ಶಿವನು ಅಂದು ಮಾಡಿದ ಕಾಯಕ ಮಹತ್ವ ಅಸ್ಪೃಶ್ಯೋದ್ಧಾರ ಕಾರ್ಯ ಮುಂತಾದವುಗಳನ್ನೇ ಮತ್ತೆ ಮೆರೆಯಲು ಬಂದಾತ ಬಸವಣ್ಣ ಎಂಬುದು ವೆಗ್ಗಳವಾಗುತ್ತದೆ.

"ಶಿವಭಕ್ತ್ಯಮೃತಾಸ್ವಾದ ಚೇತಸೇ ಶಿವಜನ್ಮನೇ
ನಮಃ ಶ್ರೀನಂದಿನಾಥಾಯ ಶಂಕರಾಪರಮೂರ್ತಯೇ
ನಮೋ ಬಸವರಾಜಾಯ ವೃಷೇಂದ್ರಾಪರಮೂರ್ತಯೇ
ಚರಾರ್ಚನೈಕ ನಿಷ್ಠಾಯ ಶಿವಾಚಾರ ಪ್ರವರ್ತಿನೇ"

ಎಂಬುದಾಗಿ ಬಸವಣ್ಣನನ್ನೂ

"ಶಿವತತ್ತ್ವಾಮೃತಾಸ್ವಾದ ಚೇತಸೇ ಯೋಗಿನೇ ನಮಃ
ಶ್ರೀ ಚೆನ್ನಬಸವೇಶಾಯ ಷಟ್‌ಸ್ಥಲ ಬ್ರಹ್ಮವಾದಿನೇ"
ಈ ಬಗೆಯಾಗಿ ಚನ್ನಬಸವಣ್ಣನನ್ನೂ
"ಬಸವೇಶಾದಿ ಸರ್ವೇಷಾಂ ಗಣಾನಾಂ ಜ್ಞಾನದಾಯಿನೇ
ಯೋಗೀಂದ್ರಾಯ ನಮಸ್ತಸ್ಮೈ ಪ್ರಭವೇ ಶಿವಮೂರ್ತಯೇ

ಹೀಗೆಂದು ಪ್ರಭುದೇವನನ್ನೂ ಶ್ರೀ ಸಂಪಾದನ ಸಿದ್ಧ ವೀರಣ್ಣಾಖ್ಯ ಶಿವಯೋಗಿಯು 'ಅನಾದಿ ವೀರಶೈವ ಸಾರ ಸಂಗ್ರಹ' ಗ್ರಂಥವಲ್ಲಿ ಸ್ತುತಿಸಿದ್ದಾನೆ. ಈ ಸ್ತುತಿಗಳು ತುಂಬಾ ಸೂಕ್ತವಾಗಿವೆ. ಸತ್ ಚಿತ್ ಆನಂದ ರೂಪನಾದ ಆ ಶಿವನೆ ಒಂದೊಂದು ಕಲೆಯಿಂದ ಒಬ್ಬೊಬ್ಬರಾಗಿ ಅವತರಿಸಿದ್ದಾನೆ. ಅಂದರೆ ಸದ್ರೂಪನೆ ಬಸವಣ್ಣ, ಚಿದ್ರೂಪನೆ ಚೆನ್ನಬಸವಣ್ಣ; ಆನಂದರೂಪನೆ ಅಲ್ಲಮಾಪ್ರಭು. ಒಂದೇ ಮೂರಾಗಿ ಬರುತ್ತದೆಂಬ ವೀರಶೈವ ತತ್ತ್ವವು ಇಲ್ಲಿ ತೋರಿ ಏಕೀಭವಿಸಿದೆ. ಶಿವತತ್ತ್ವವೇ ಬೀಜವಾಗಿ ಬಸವ – ಚೆನ್ನಬಸವ – ಪ್ರಭುದೇವರೇ ಅಂಕುರ ಪ್ರಾಯರಾಗಿ ಮೂರು ರೆಂಬೆಗಳಾಗಿ ಬೆಳೆದು ಬಂದಿದಾರೆ. ಮುಂದಿನ ಮಣಿಹವನ್ನೇ ಹೊತ್ತು ತಂದಿದಾರೆ. ಉಳಿದ ಲಕ್ಷದ ಮೇಲೆ ತೊಂಬತ್ತಾರು ಸಾವಿರಗಳಂಗಳು ರುದ್ರಗಣ ಶಿವಗಣರ ಅಂಶಜರಾಗಿ ಶಾಖೋಪಶಾಖೆಗಳಾಗಿ ಶೋಭಿಸಿದಾರೆ.

ವೀರಶೈವ ತತ್ತ್ವದಂತೆ ಯಾರು ಯಾವ ಕಾಲಕ್ಕೆ ಯಾವ ರೂಪದಲ್ಲಿ ಬಂದರೂ ಅವರೆಲ್ಲ ಆ ಅನಾದಿ ಸೂತ್ರವಿಡಿದೇ ಬರಬೇಕು, ಬಂದಿದ್ದಾರೆ. ಅನಾದಿಯಿಂದತ್ತತ ಇದ್ದ ಆ ನಿಃಕಲವಸ್ತುವೆ ಅನಾದಿಗೆ ಅಗ್ನಿ ಅಂದರೆ ಜ್ಯೋತಿ ತತ್ವ ಹಿಡಿದು ರುದ್ರನಾಗಿ

ಅವತರಿಸಿ ಅನಾದಿ ವೀರಶೈವ ಕರ್ತನಾದನು. ರುದ್ರಗಣರ ನೆರವು ಪಡೆದನು. ಆ ಜ್ಯೋತಿತತ್ತ್ವವೇ ಮುಂದೆ ಜಲ-ಭೂತತ್ತ್ವ ಸಾರವಾಗಿ ಶಿವತತ್ತ್ವವಾಗಿ ಬಂದು ಆದಿ ವೀರಶೈವಕ್ಕೆ ಕಾರಣನಾದನು. ಶಿವಗಣರ ಭುವಿಗೆ ಕರೆತಂದನು. ಶಿವಾಗಮಾದಿ ಸಾಹಿತ್ಯವ ರಚಿಸಿ ಶಿವಾಚಾರೋದ್ಧಾರ ಮಾಡಿದನು. ಆ ಆದಿ ಶಿವ-ಶಿವಗಣರೇ ಕಲ್ಯಾಣದಲ್ಲಿ ಬಸವಣ್ಣ* ಮತ್ತು ಶಿವಶರಣರಾಗಿ ಬಂದರು, ಶಿವಮತವನುದ್ಧರಿಸಿದರು. ಈ ಸಂಬಂಧ ಅಪರಿಹಾರ್ಯ.

"ಆದಿ ಪರಶಿವನು ತನ್ನ ಲೀಲಾ ವಿನೋದಾರ್ಥ ಕಾರಣ
ಶರಣನಾಗಿ ತೋರಿದಡೆ ಭೇದವ ಮಾಡಿ ನುಡಿವ
ವಾದಿಗಳನೇನೆಂಬೆನಯ್ಯ? ಅನಾದಿ ಪರಶಿವ ತಾನೆ
ಶರಣನೆಂಬ ವಾಕ್ಯ ಸತ್ಯ ಕಂಡೆಯಾ.
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ!"

ಆಧುನಿಕ ಶರಣನಿಗೆ ಆದಿ-ಅನಾದಿಗಳ ಸಂಬಂಧವನ್ನು ಸ್ಪಷ್ಟವಾಗಿ ಹೇಳುವ ಈ ವಚನ ಉಭಯಾರ್ಂಗವಾಗಿಯೂ ಅಂದರೆ ಅಂತರ್ಬಹಿರಂಗಗಳ ದೃಷ್ಟಿಗೂ ಸರಿಹೋಗುತ್ತದೆ; ಹೋಲುತ್ತದೆ. ಹೀಗಿರಲು ವೀರಶೈವವು ಇಂದಿನದು ಹಿಂದಿನದಲ್ಲ, ವೀರಶೈವರು ಇವರೇ ಹೊರತು ಹಿಂದಿನವರಲ್ಲ ಎಂಬ ವಾದವು ಈ ವಚನದಿಂದ ಈ ಎಲ್ಲ ನಮ್ಮ ವಿವರಣೆಯಿಂದ ಬಿದ್ದುಹೋಗುತ್ತದೆ.

ಆದಿ ವೀರಶೈವರನ್ನು ಆಧುನಿಕ ವೀರಶೈವರು ಮನಸಾರೆ ತಮ್ಮ ವಚನಗಳಲ್ಲಿ ವರ್ಣಿಸಿದ್ದಾರೆ.

ಆಧುನಿಕ ವೀರಶೈವದ ರೂಪುರೇಷೆಗಳು ಸರ್ವರಿಗೆ ಸುಸ್ಪಷ್ಟವಾಗಿವೆ. ಕಾರಣ ಅವನೆತ್ತಿ ಬರೆದು ಬೆಳೆದ ಈ ಬರೆಹವನ್ನು ಇನ್ನು ಬೆಳೆಸಲು ಮನಸಿಲ್ಲ. ಇಷ್ಟರಿಂದ ತ್ರಿವಿಧಕಾಲದ ವೀರಶೈವ ರೂಪರೇಷೆಗಳು ಸುಮಾರಾಗಿ ಕಣ್ಮುಂದೆ ಕಾಣಿಸುವಂತಾದರೆ ಅದೇ ಈ ಶ್ರಮಕ್ಕೆ ಫಲ. ಈ ದಿಸೆಯಲ್ಲಿ ಇನ್ನೂ ಹೆಚ್ಚಿನ ಸಂಶೋಧನೆ ಪ್ರಚಾರಗಳು ಅತ್ಯಗತ್ಯವಾಗಿವೆ.

ಈ ಚಿತ್ರ ನಮ್ಮ ಸಾಹಿತ್ಯದಲ್ಲಿ ಸಾಕಷ್ಟಿದೆ; ಸ್ಪಷ್ಟರೀತಿಯಲ್ಲಿದೆ. ಈ ದಿಸೆಯಲ್ಲಿ ಈ ಬರೆಹ ದಿಗ್ದರ್ಶನ ಮಾತ್ರ. ಮುನ್ನಡೆವವರಿಗೆ ಮುಂದಾರಿ ಮಾತ್ರ.

ಆಧುನಿಕ ವೀರಶೈವರಾದ ಬಸವಣ್ಣನವರಿಗೆ ನೆರವಾದ ಶರಣಗಣವಿದು. ಇದು ಅನೇಕವಾಗಿದ್ದರೂ ನಿದರ್ಶನಕ್ಕಾಗ ಕೆಲವರನ್ನು ಮಾತ್ರ ಹೆಸರಿಸೋಣವಾಗಿದೆ.

---

* ಬಸವಣ್ಣನು ನಂದಿಯ ಅವತಾರಿ ಎಂಬುದೊಂದು ಕಲ್ಪನೆ. ದ್ವಿತೀಯ ಶಂಭು ಎಂಬುದೆ ಸರಿ. ಆತನ ನಾಮಾಂಕಿತದಿಂದ ನಂದಿಕಲ್ಪನೆ. ಆತನ ಕ್ರಿಯಾಶಕ್ತಿ ಸೂಚಕ ದ್ವಿತೀಯ ಶಂಭು.

ಅಲ್ಲಮಾಪ್ರಭು, ಚೆನ್ನಬಸವಣ್ಣ, ಸಿದ್ಧರಾಮದೇವ, ರುದ್ರಮುನಿಶಿವಾಚಾರ್ಯ, ಮರುಳಶಂಕರದೇವ, ಮಡಿವಾಳಮಾಚಿತಂದೆ, ಹಡಪದಪ್ಪಣ್ಣ, ಸುಲಿಯಚಂದಯ್ಯ, ಆದಯ್ಯ, ಉರಿಲಿಂಗದೇವ, ಉರಿಲಿಂಗಪೆದ್ದಿ, ಏಕಾಂತ ರಾಮಯ್ಯ, ಏಲೇಶ್ವರದ ಕೇತಯ್ಯ, ಕಕ್ಕಯ್ಯ, ಒಕ್ಕಲುಮುದ್ದಯ್ಯ, ಕಿನ್ನರಿ ಬೊಮ್ಮಯ್ಯ, ಗಟ್ಟಿವಾಳಯ್ಯ, ಗಾಣದ ಕನ್ನಪ್ಪ, ಪ್ರಸಾದಿಭೋಗಣ್ಣ, ಬಹುರೂಪಿಚೌಡಯ್ಯ, ಬಂಡಾರಿ ಶಾಂತರಸ, ಮುಗ್ಧಸಂಗಯ್ಯ, ಮೆರೆಮಿಂಡಿದೇವ, ರಾಯಸದ ಮಂಚಣ್ಣ, ವೈದ್ಯ ಸಂಗಣ್ಣ, ಮುಂತಾದ ಶಿವಶರಣರು.

ಅಕ್ಕಮಹಾದೇವಿ, ಅಕ್ಕನಾಗಮ್ಮ, ಗಂಗಾಂಬಿಕೆ, ನೀಲಾಂಬಿಕೆ, ಲಕ್ಕಮ್ಮ, ಮಹಾದೇವಿಯಮ್ಮ, ಕಾಳವ್ವೆ, ಗುಡ್ಡವ್ವೆ, ರೇಚವ್ವೆ, ತಿಮ್ಮವ್ವೆ, ಬೊಂತಲದೇವಿ, ಮುಕ್ತಾಯಕ್ಕ, ಸತ್ಯಕ್ಕ ಮುಂತಾದ ಶಿವಶರಣೆಯರು. ಇವರಲ್ಲದೆ ಈಚೆಗಿರುವ ಈ ಮಹಾನುಭಾವರೆಲ್ಲರೂ ಆಧುನಿಕ ವೀರಶೈವರು :

ಕೆರೆಯ ಪದ್ಮರಸ, ಕುಮಾರ ಪದ್ಮರಸ, ಹರಿಹರ, ರಾಘವಾಂಕ, ನೂರೊಂದು ವಿರಕ್ತರು, ಚಾಮರಸ, ಕಾಡಸಿದ್ಧೇಶ್ವರ, ಗೂಳೂರು ಸಿದ್ಧವೀರಣಯ್ಯ, ವಿರೂಪಾಕ್ಷ ಪಂಡಿತ, ಷಡಕ್ಷರಕವಿ, ನಿಜಗುಣಶಿವಯೋಗಿ, ಮುಪ್ಪಿನಷಡಕ್ಷರಿ, ಮಗ್ಗೆಯ ಮಾಯಿ ದೇವ, ತೋಂಟದಸಿದ್ಧಲಿಂಗಯತಿ, ಮರಿತೊಂಟದಾರ್ಯ, ಸರ್ವಜ್ಞ, ಪಾಲ್ಕುರಿಕೆ ಸೋಮನಾಥ, ಶಿವಪ್ರಕಾಶಸ್ವಾಮಿ, ಗುಬ್ಬಿಮಲ್ಲಣಾರ್ಯ, ಚಿಕ್ಕನಂಜೇಶ, ಶಾಲ್ಯದ ಅರಸರು, ಘನಮಠಾರ್ಯ, ಕೆಳದಿ ಕೊಡಗಿನ ಅರಸರು, ಮೈಲಾರಬಸವಲಿಂಗ ಶರಣರು, ಗುರುಬಸವಕವಿ, ಸಿಂಗಳಿ ರೇವಣಾರಾಧ್ಯ, ಶಿವದೇವ, ಬಾಲಲೀಲಾ ಮಹಾಂತ ಶಿವಯೋಗಿ, ಸರ್ಪಭೂಷಣ ಶಿವಯೋಗಿ, ಘನಲಿಂಗದೇವ, ಸೊನ್ನಲಿಗೆಯ ಶರಣ ವೀರಯ್ಯನವರು, ಇವರ ಮಗಳು ನೀಲಮ್ಮನವರು, ಹಾನಗಲ್ಲ ಕುಮಾರಶ್ರೀಗಳು, ಬಿದರೆ ಪ್ರಭುಕುಮಾರಪಟ್ಟಾಧ್ಯಕ್ಷರು ಮುಂತಾದವರೆಲ್ಲರೂ ಆಧುನಿಕ ವೀರಶೈವ ಪ್ರಮುಖರಾಗಿ ಪ್ರಕಾಶಿಸುತ್ತಿದ್ದಾರೆ.

---:o:---

# ಶಿವಾದ್ವೈತ, ಬ್ರಹ್ಮಾದ್ವೈತ.



ಬ. ಕ. ಪಾಟಿಲ, ಗದಗ.

ಅದ್ವೈತ—"ಏಕಮೇವಾದ್ವಿತೀಯಂ ಬ್ರಹ್ಮ" ಎಂಬ ಶ್ರುತಿಯಂತೆ ಸ್ವಗತ, ಸಜಾತೀಯ ವಿಜಾತೀಯ ಭೇದರಹಿತವಾಗಿಯೂ, ತ್ರಿಕಾಲಾಬಾಧಿತ ಸಚ್ಚಿದಾನಂದ ಸ್ವರೂಪವಾಗಿಯೂ ಶುದ್ಧ ಅರುವಿನ ಸ್ವರೂಪವಾಗಿಯೂ ಯಾವದೊಂದು ಸತ್ಯ ತತ್ತ್ವವುಂಟೋ ಅದು ಅದ್ವೈತವೆನಿಸುವುದು.

ಆ ಮೂಲ ಸದ್ರೂಪ ವಸ್ತುವಿಗೆ ಪರಬ್ರಹ್ಮ, ಪರಶಿವ, ಪರಮಾತ್ಮ, ಮಹೇಶ್ವರ, ಮಹಾಲಿಂಗ, ಸ್ಥಲ ಇತ್ಯಾದಿ ಪರ್ಯಾಯ ನಾಮಗಳು ಲಾಕ್ಷಣಿಕ ಅರ್ಥರೂಪವಾಗಿರುವವು. ಮತ್ತು ಆ ಮೂಲವಸ್ತುವಿಗೆ ಪರ, ಅಪರ ಅಥವಾ ನಿರ್ಗುಣ, ಸಗುಣ ಎಂಬ ಎರಡು ರೂಪುಂಟು ಎಂದು ನಿಗಮಾಗಮಾದಿಗಳೊರೆವವು. ಮತ್ತು ಇದುವೆ ಪರತತ್ತ್ವ, ಸಿದ್ಧಾಂತ, ನಿರಂಜನ, ನಿರಾಭಾರಿದೈವತ, ವಾಚಾಮಗೋಚರ, ವೇದಾಂತ ಸಿದ್ಧಾಂತೋಭಯಲಕ್ಷ್ಯ, ಶಿವಯೋಗಗಮ್ಯ, ಶರಣ ಸತಿಪತಿಯೆನಿಸುವದು ಎಂದು ಶ್ರೀ ನಿಜಗುಣ ಶಿವಯೋಗಿಗಳು ವಿವೇಕ ಚಿಂತಾಮಣಿಯಲ್ಲಿ ಹೇಳಿರುವರು.

ಕಟ್ಟಿಗೆಯಲ್ಲಿ ಅಗ್ನಿಯು, ಬೀಜದಲ್ಲಿ ವೃಕ್ಷವು, ಮಯೂರಾಂಡರಸದಲ್ಲಿ ನವಿಲು, ಹಾಲಿನಲ್ಲಿ ತುಪ್ಪವು, ಮನುಷ್ಯನಲ್ಲಿ ಶಕ್ತಿಯು ಅವ್ಯಕ್ತ (ಗುಪ್ತ) ವಾಗಿರುವಂತೆ ಪರಶಿವನಲ್ಲಿ ಸ್ವಾನುಭವರೂಪವಾದ, ವಿಮರ್ಶರೂಪ ಚಿಚ್ಛಕ್ತಿಯು ಸದಾ ಅವ್ಯಕ್ತ (ಸಮರಸ) ವಾಗಿರುವದೆಂಬುವದಕ್ಕೆ ಶ್ವೇತಾಶ್ವತರ ಕೈವಲ್ಯ, ಐತರೀಯ, ಛಾಂದೋಗ್ಯಾದಿ ಶ್ರುತಿಗಳೂ, ಬ್ರಹ್ಮಸೂತ್ರ, ಶಿವಸೂತ್ರ, ಅನುಭವಸೂತ್ರಗಳೂ,

ಶ್ರೀಕರಭಾಷ್ಯ, ನೀಲಕಂಠಭಾಷ್ಯಗಳೂ, ಕೂರ್ಮಪುರಾಣ, ಶೈವಪುರಾಣ, ಮಾರ್ಕಂಡೇಯ ಪುರಾಣಗಳೂ, ಯೋಗವಾಶಿಷ್ಠ, ಭಗವದ್ಗೀತಾ, ಸಿದ್ಧಾಂತ ಶಿಖಾಮಣಿ, ವೀರಶೈವಾನಂದ ಚಂದ್ರಿಕೆ, ಶಿವಾದ್ವೈತ ಮಂಜರಿ, ಶ್ರೀ ನಿಜಗುಣ ಶಿವಯೋಗಿಗಳ ಆರು ಗ್ರಂಥಗಳೂ, ಅನುಭವಿಕ ಮಹಾತ್ಮರ ವಾಕ್ಯಗಳೂ ಬಲವಾದ ಪ್ರಮಾಣಗಳಾಗಿರುವವು.

ಪರಶಿವನಲ್ಲಿರುವ ಶಕ್ತಿಯು ಜಲಶೈತ್ಯದಂತೆಯೂ, ಚಂದ್ರಚಂದ್ರಿಕೆಯಂತೆಯೂ, ಸೂರ್ಯ ಪ್ರಕಾಶದಂತೆಯೂ, ಅಗ್ನಿ ಉಷ್ಣತೆಯಂತೆಯೂ, ದೀಪದೀಪ್ತಿಗಳಂತೆಯೂ ಶಿವನಿಂದ ಎಂದೂ ಅಗಲಿಕೆಯಿಲ್ಲದಿರುವ ನಿತ್ಯ ಸ್ವರೂಪ ಸಂಬಂಧವಾಗಿಯೇ ಇರುವುದು. ಅಂದರೆ ಬೆಸಿ ಒಂದಾಗದ ಬಿಚ್ಚಿ ಬೇರೆಯಾಗದ ಸ್ವರೂಪವಾಗಿಯೇ ಇರುವುದು. ಸ್ವರೂಪ ವಸ್ತುಗಳಿಗೆ ಎಂದೂ ಕೂಡುವಿಕೆಯೂ, ಅಗಲಿಕೆಯೂ ಇಲ್ಲವೆಂಬುವೇ ನಿಶ್ಚಿತಾರ್ಥವು.

* 'ರಸೋಽಹಮಪ್ಸು ಕೌಂತೇಯ ಪ್ರಭಾಸ್ಮಿ ಶಶಿಸೂರ್ಯಯೋಃ' (ಗೀತಾ)
'ತಲ್ಲೀನಮಸ್ತ್ಯವಿರಹಃ ಶಿವಯೋಃ ಸ್ವಭಾವಃ' (ಶ್ರುತಿ)

ಪರಶಿವನಲ್ಲಿ ಅವಿನಾಭಾವದಿಂದಿರುವ ಶಕ್ತಿಗೆ ಆಮೆಯ ಅವಯವಗಳಂತೆ ಸಂಕೋಚ, ವಿಕಾಸ (ಪ್ರಸರ) ಅಥವಾ ಅವ್ಯಕ್ತ, ವ್ಯಕ್ತ ಎಂಬ ಎರಡು ಸ್ಥಿತಿಯುಂಟು. ಪರಶಿವನಲ್ಲಿ ಚಿಚ್ಛಕ್ತಿಯು ಅವ್ಯಕ್ತಸ್ಥಿತಿಯಲ್ಲಿದ್ದಾಗ್ಗೆ ಅವನು ಭಾವರಹಿತ, ಕ್ರಿಯಾರಹಿತ, ನಿರ್ವಿಕಾರ ಶುದ್ಧ ಅರಿವಿನ ಸ್ಥಿತಿಯಲ್ಲಿರಲು ನಿರ್ಗುಣ ಬ್ರಹ್ಮನೆನಿಸುವನು. ಪರಶಿವನಲ್ಲಿ ಅವ್ಯಕ್ತ ರೂಪದಿಂದಿರುವ ಸಂಕಲ್ಪ ಶಕ್ತಿಯು ಲೀಲಾಮಾತ್ರದಿಂ ಸೃಷ್ಟಿಗೆ ಉನ್ಮುಖವಾಗಲು ವ್ಯಕ್ತರೂಪದಿಂ ಪ್ರಕಟವಾಗುವಳು. ಪರಶಿವನು ಶಕ್ತಿಯ ವ್ಯಕ್ತ ಸ್ಥಿತಿಯಲ್ಲಿದ್ದಾಗ್ಗೆ ಸೃಷ್ಟಿಯ ಉತ್ಪತ್ತ್ಯಾದಿ ಸಮಯದಲ್ಲಿ ಭಾವಸಹಿತ, ಕ್ರಿಯಾಸಹಿತ ಶುದ್ಧ ಅರಿವಿನ ಸ್ವರೂಪ ಸ್ಥಿತಿಯೇ ಸಗುಣಬ್ರಹ್ಮ (ಈಶ್ವರ) ನೆನಿಸುವನು. ಸಾರಾಂಶ: ಶಕ್ತಿಯು ಅವ್ಯಕ್ತ ಸ್ಥಿತಿಯಲ್ಲಿರುವ ಬ್ರಹ್ಮನು ನಿರ್ಗುಣ ಬ್ರಹ್ಮನೆನಿಸುವನು. ಶಕ್ತಿಯು ವ್ಯಕ್ತಸ್ಥಿತಿಯಲ್ಲಿರುವ ಬ್ರಹ್ಮನು ಸಗುಣ ಬ್ರಹ್ಮನೆನಿಸುವನು. ಕರಗಿದ ತುಪ್ಪ, ಹೆತ್ತ ತುಪ್ಪಗಳಂತೆ ನಿರ್ಗುಣ, ಸಗುಣ ಬ್ರಹ್ಮರಲ್ಲಿ ಸ್ವಲ್ಪವೂ ಭೇದವಿಲ್ಲ.

ಶಕ್ತಿಯು ಅವ್ಯಕ್ತ ಸ್ಥಿತಿಯಲ್ಲಿರುವ ನಿರ್ಗುಣ ಬ್ರಹ್ಮನ ಸ್ವರೂಪವೇ ಬ್ರಹ್ಮಾದ್ವೈತವೆನಿಸುವುದು. ಶಕ್ತಿಯು ವ್ಯಕ್ತ ಸ್ಥಿತಿಯಲ್ಲಿರುವ ಸಗುಣಬ್ರಹ್ಮನ ಸ್ವರೂಪವೇ ಶಿವಾದ್ವೈತವೆನಿಸುವದು. ಅಂದರೆ ಶಕ್ತಿಯು ಅವ್ಯಕ್ತ ಸ್ಥಿತಿಯಲ್ಲಿರುವ ಅದ್ವೈತವು ಬ್ರಹ್ಮಾದ್ವೈತವೂ, ಶಕ್ತಿಯು ವ್ಯಕ್ತಸ್ಥಿತಿಯಲ್ಲಿರುವ ಅದ್ವೈತವು ಶಿವಾದ್ವೈತವೂ ಎಂದು ಹೇಳಿಕೊಳ್ಳುವದು. ಶಕ್ತಿಯ ವ್ಯಕ್ತಾವ್ಯಕ್ತಸ್ಥಿತಿಯಲ್ಲಿ ಭೇದವಿಲ್ಲದ ಶಿವಾದ್ವೈತ ಬ್ರಹ್ಮಾದ್ವೈತ ಸ್ವರೂಪದಲ್ಲಿ ಶಬ್ದ ಮಾತ್ರ ಭೇದವಿಲ್ಲ. ಶಿವಬ್ರಹ್ಮರ ಸ್ವರೂಪ

ದಲ್ಲಿ ಭೇದವಿದ್ದರೆ ಮಾತ್ರ ಶಿವಾದ್ವೈತ ಬ್ರಹ್ಮಾದ್ವೈತಗಳಲ್ಲಿ ಭೇದಹೇಳಬಹುದು. ಆದರೆ ಅವರ ಸ್ವರೂಪದಲ್ಲಿ ಭೇದವಿಲ್ಲೆಂಬುವದು ಕೆಳಗಿನ ಶ್ರುತಿಗಳಿಂದ ಕಂಡು ಬರುವುದು.

ಶಿವ ಬ್ರಹ್ಮರಲ್ಲಿ ಶಬ್ದಮಾತ್ರದಿಂದ ಭೇದವಲ್ಲದೆ ಲಾಕ್ಷಣಿಕ ಸ್ವರೂಪದಲ್ಲಿ ಭೇದ ವಿಲ್ಲ. ಬ್ರಹ್ಮ="ಯತೋವಾ ಇಮಾನಿಭೂತಾನಿಜಾಯಂತೇ। ಯೇನ ಜಾತಾನಿ ಜೀವಂತಿ। ಯತ್ ಪ್ರಯಂತ್ಯಭಿಸಂವಿಶಂತಿ....ತದ್ಬ್ರಹ್ಮ" (ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯಂಗಳಿಗೆ ಕಾರಣವಾದದ್ದೇ ಬ್ರಹ್ಮವು. "ತದೇವ ಜಗತ್ಕಾರಣಂ ಬ್ರಹ್ಮೇ ತ್ಯುಚ್ಯತೇ" ಜಗತ್ಕಾರಣವಲ್ಲದ್ದು ಬ್ರಹ್ಮವಲ್ಲ. ಶಕ್ತಿರಹಿತನು ಜಗತ್ಕಾರಣನಲ್ಲ. ಓಂಕಾರಂ ಶಕ್ತಿರುಚ್ಯತೇ" "ಬ್ರಹ್ಮೈವ ಓಮಿತ್ಯುಚ್ಯತೇ" ಇದರಿಂದ ಶಕ್ತಿ ಬ್ರಹ್ಮರು ಏಕಸ್ವರೂಪವೆಂಬುದು ವ್ಯಕ್ತವು. "ಸರ್ವಂ ಖಲ್ವಿದಂ ಬ್ರಹ್ಮ" "ಸರ್ವಂ ಶಿವಮಯಂ ಜಗತ್" "ಶಿವಏಕೋದೇವಃ" "ಏಕೋದೇವಃ ಪರಬ್ರಹ್ಮ" "ಶೇತೆಷ್ಠತೀ ಸರ್ವಂ ಜಗತ್ ಯಸ್ಮಿನ್ ಸಃಶಿವಃ" "ತದೇವ ಪ್ರಥಮಂ ಪ್ರೋಕ್ತಂ ಬ್ರಹ್ಮೈವ ಶಿವಸಂಜ್ಞಿ ತಮ್" ಈ ಎಲ್ಲ ಆಧಾರಗಳಿಂದ ಶಿವಬ್ರಹ್ಮರ ಸ್ವರೂಪ ಏಕವಾದುದರಿಂದ ಶಿವಾ ದ್ವೈತ, ಬ್ರಹ್ಮಾದ್ವೈತ ಇವುಗಳಲ್ಲಿ ಭೇದವಿರುವದೇ ಇಲ್ಲವು.

ಶಂಕಾ—ಬ್ರಹ್ಮವು ಶಕ್ತಿಸ್ವರೂಪ ಎಂಬುವದಕ್ಕೆ ಪ್ರಮಾಣಗಳುಂಟೋ?

ಸಮಾಧಾನ—ಅನೇಕ ಪ್ರಮಾಣಗಳುಂಟು. ಕೆಲವನ್ನು ಮಾತ್ರ ಇಲ್ಲಿ ಹೇಳಿದೆ.

೧. 'ಸ್ವಾಭಾವಿಕೀ ಪರಮ ಶಕ್ತಿಃ ಪರಬ್ರಹ್ಮಣಃ ಶಿವಸ್ವರೂಪಂಚ (ಪರಾಶಕ್ತಿಯು ಪರಬ್ರಹ್ಮನ ಅಗಂತುಕವಲ್ಲದ ಸತ್ಯಸ್ವರೂಪವಾಗಿರುವದು. (ಪೂರ್ವ ಮೀಮಾಂಸಾ).

೨. ಸರ್ವಶಕ್ತಿ ಪರಂಬ್ರಹ್ಮ ನಿತ್ಯಮಾಪೂರ್ಣಮವ್ಯಯಮ್ (ಯೋಗವಾ ಶಿಷ್ಟ) (ನಿತ್ಯ ಸರ್ವಥಾಪೂರ್ಣ ಅವ್ಯಯ ಪರಬ್ರಹ್ಮ ಸರ್ವಶಕ್ತಿಮಯನಿರುತ್ತಾನೆ)

೩. 'ಆಕಾಶ ಶರೀರಂ ಬ್ರಹ್ಮ' ಈ ಶ್ರುತಿಯಿಂದ ಚಿದಾಕಾಶ, ಉಮೆ ಎಂಬ ಪರ್ಯಾಯ ನಾಮವುಳ್ಳ ಚಿಚ್ಛಕ್ತಿಯು ಪರಬ್ರಹ್ಮನ ನಿತ್ಯಶರೀರವಾಗಿ ಅರ್ಧಾಂಗಿನಿ ಎನಿಸುವಳು.

೪. ಶ್ರೀ ಕೃಷ್ಣ ಪರಮಾತ್ಮನವಾಕ್ಯ (ಬ್ರಹ್ಮವೈವರ್ತ ಪುರಾಣ)

ತ್ವಮೇವ ಸರ್ವಜನನೀ ಮೂಲಪ್ರಕೃತಿರೀಶ್ವರೀ।
ತ್ವಮೇವಾದ್ಯಾಸೃಷ್ಟಿ ವಿಧೌ ಸ್ವೇಚ್ಛಯಾ ತ್ರಿಗುಣಾತ್ಮಿಕಾ॥
ಕಾರ್ಯಾರ್ಥೇ ಸಗುಣಾತ್ವಂಚ ವಸ್ತುತೋ ನಿರ್ಗುಣಾಸ್ವಯಂ।
ಪರಬ್ರಹ್ಮಸ್ವರೂಪಾ ತ್ವಂ ಸತ್ಯಾನಿತ್ಯಾಸನಾತನೀ॥

೫. ಬ್ರಹ್ಮಸೂತ್ರ (೨-೨-೪೪)

ಬ್ರಹ್ಮನಲ್ಲಿ ಶಕ್ತಿಯು ಸ್ವರೂಪದಿಂ ಸದಾ ಇರುತ್ತದೆ. ಮತ್ತು ವಿಶ್ವದ ಉತ್ಪತ್ತಿ ಅದೇ ಶಕ್ತಿಯಿಂದಾಗುತ್ತದೆ. ಪರಾಶಕ್ತಿಯನ್ನು ವೇದಾಂತ ಪ್ರತಿಪಾದ್ಯ ಬ್ರಹ್ಮನಿಗೆ ಅಭಿನ್ನವೆಂದು ಉಪನಿಷತ್ತುಗಳೂ ಸ್ವೀಕಾರ ಮಾಡುತ್ತವೆ. ಅವ್ಯಕ್ತ ಅಗ್ನಿಗಿಂತ ವ್ಯಕ್ತ ಅಗ್ನಿಯೇ ಪ್ರಯೋಜನವಾದಂತೆ ಅವ್ಯಕ್ತ ಶಕ್ತಿಯುಳ್ಳ ನಿರ್ಗುಣ ಬ್ರಹ್ಮನಕಿಂತ ಕಾರ್ಯವನ್ನುಂಟುಮಾಡುವ ದಿವ್ಯಶಕ್ತಿಯು ಕಾರಣ ಬ್ರಹ್ಮದಲ್ಲಿ ಉಂಟೆಂದು ಸಿದ್ಧವಾಗುವದರಿಂದ ವ್ಯಕ್ತಶಕ್ತಿಯ ಸಗುಣ ಬ್ರಹ್ಮನಿಂದಲೇ ಮುಮುಕ್ಷುಗಳಿಗೆ ಪರಮ ಪ್ರಯೋಜನವೆಂಬುವ ಉದ್ದೇಶವನ್ನಿಟ್ಟುಕೊಂಡು ಸಗುಣ ಬ್ರಹ್ಮನ ಜಿಜ್ಞಾಸಾ ಮಾಡತಕ್ಕದ್ದೆಂದು "ಅಥಾತೋ ಬ್ರಹ್ಮಜಿಜ್ಞಾಸಾ" ಎಂಬ ಪ್ರಥಮ ಸೂತ್ರದಲ್ಲಿ ವ್ಯಾಸಮಹರ್ಷಿಯು ಸಿದ್ಧಮಾಡಿದ್ದಾರೆ.

೬. ಶ್ರೀ ಶಂಕರಾಚಾರ್ಯರ ಅಭಿಪ್ರಾಯವು.

"ಸತ್ಯಂ ಜ್ಞಾನಮಾನಂದಂ ಬ್ರಹ್ಮ" ಎಂಬ ಶ್ರುತಿಯಲ್ಲಿಯ ಜ್ಞಾನ ಪದದಲ್ಲಿ ತಿಳಿಯುವ ಶಕ್ತಿಯೇ ಇರದಿದ್ದರೆ ವಸ್ತುವಿನ ಜ್ಞಾನವೇ ಆಗದು. "ಏನ ಸರ್ವಮಿದಂ ಭಾತಿತದ್ಬ್ರಹ್ಮ" ಎಂಬ ಶ್ರುತಿಗೆ ವಿರೋಧವಾಗುವದರಿಂದ ಕೇನೋಪನಿಷತ್ತಿನ ಭಾಷ್ಯದಲ್ಲಿ 'ಚಿಚ್ಛಕ್ತಿ ಸ್ವರೂಪಮಾತ್ರಃ ಪ್ರತ್ಯಯೈರೇವ' (ಮೇಲಿನ ಶ್ರುತಿಯಲ್ಲಿರುವ ಜ್ಞಾನವೇ ಚಿಚ್ಛಕ್ತಿ ಸ್ವರೂಪ ಮಾತ್ರವೆಂದು ಹೇಳಿದ್ದಾರೆ.

೭. ಶ್ರೀ ವಿದ್ಯಾರಣ್ಯ ಮುನಿಯ ಅಭಿಪ್ರಾಯವು :

ನ ಕೇವಲಂ ಬ್ರಹ್ಮೈವ ಜಗತ್ಕಾರಣಂ ನಿರ್ವಿಕಾರತ್ವಾತ್ ।
ನಾಪಿ ಕೇವಲಂ ಶಕ್ತಿಃ ಕಾರಣಂ ಸ್ವಾತಂತ್ರ್ಯಾಭಾವಾತ್ ।
ತಸ್ಮಾದುಭಯ ಮಿಲಿತ್ವೈವ ಜಗತ್ಕಾರಣಂ ಭವತಿ ॥

೮. 'ನಿತ್ಯಾಲುಪ್ತಜ್ಞಾನಸ್ವರೂಪ ಜ್ಯೋತಿರಾತ್ಮಾ ಬ್ರಹ್ಮ' ಎಂಬ ಬೃಹದಾರಣ್ಯಕ ಶ್ರುತಿಯಂತೆ ಎಂದೂ ಲೋಪವಿಲ್ಲದ ಜ್ಞಾನಸ್ವರೂಪ ಆತ್ಮನೇ ಬ್ರಹ್ಮವು ಎಂಬುವದರಿಂದ ಅಂಶಾಂಶೀ ಭಾವದಂತೆ ಆತ್ಮನಲ್ಲಿರುವ ಇಚ್ಛಾಜ್ಞಾನಕ್ರಿಯಾಶಕ್ತಿಗಳನ್ನು ಬ್ರಹ್ಮದಲ್ಲಿ ಒಪ್ಪಲೇಬೇಕು. "ಪರಾಸ್ಯಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾಚ' ಎಂಬ ಶ್ರುತಿಯು ಪರಬ್ರಹ್ಮನು ಇಚ್ಛಾಜ್ಞಾನಕ್ರಿಯಾಶಕ್ತಿಗಳ ಸ್ವರೂಪನೆಂದು ಹೇಳುತ್ತದೆ. 'ಜಾಗ್ರತ್ ಸ್ವಪ್ನ ಸುಷುಪ್ತ್ಯಾದಿ ಪ್ರಪಂಚಂ ಯತ್ಪ್ರಕಾಶತೇ ತದ್ಬ್ರಹ್ಮ' ಎಂಬ ಕೈವಲ್ಯೋಪನಿಷತ್ತಿನಂತೆ ತಿಳಿಯುವ ಜ್ಞಾನಶಕ್ತಿಯು ಬ್ರಹ್ಮದಲ್ಲಿರುವದೆಂದು ಸ್ಪಷ್ಟವಾಗುತ್ತದೆ, ಆದರಿಂದಲೇ ಅವನು ಸರ್ವಜ್ಞನೆನಿಸುವನು. ಹೀಗಿದ್ದು ಸರ್ವಜ್ಞನಾದ ಬ್ರಹ್ಮದಲ್ಲಿ ಯಾವದೊಂದು ಶಕ್ತಿಯಿಲ್ಲೆಂಬುವದು ಶ್ರುತಿಯುಕ್ತಿ ಅನುಭವಗಳಿಗೆ ವಿರುದ್ಧವಾದದ್ದು.

ಸ್ವೇತರ ಜ್ಞಪ್ತಿಶೂನ್ಯವೇಜಡ ' ಎಂಬ ವಾಕ್ಯದಂತೆ ಬ್ರಹ್ಮನು ಸ್ವಜ್ಞಪ್ತಿರೂಪ ವಿಮರ್ಶಶಕ್ತಿ (ಚಿಚ್ಛಕ್ತಿ = ಚಿತ್ತಿನ ಶಕ್ತಿ) ರಹಿತನಾದರೆ ಸ್ಫಟಿಕದಂತೆ ಜಡನಾಗುವನು. ಆದರಿಂದ ಅವನಿಗೆ ಬಂಧ ಹೇಳಬೇಕಾಗುವದು. ಬ್ರಹ್ಮದಲ್ಲಿ ಸ್ವರೂಪಾನಂದದನುಭವ ವೆಂಬ ವಿಮರ್ಶ ಶಕ್ತಿಯು ಅನಾದಿ ಸಿದ್ಧವಿರದಿದ್ದರೆ ಅನ್ಯರನ್ನು ಆನಂದವುಳ್ಳವರನ್ನು ಹೇಗೆ ಮಾಡೀತು? ' ಆನಂದೋ ಬ್ರಹ್ಮ ' ಆನಂದದನುಭವ ಸ್ವರೂಪನೇ ಬ್ರಹ್ಮ) ಎಂಬ ಶ್ರುತಿಗೂ ವಿರೋಧವಾಗುವುದು. ಸ್ವರೂಪದನುಭವವೆಂಬ ಶಕ್ತಿಯನ್ನು ಬ್ರಹ್ಮದಲ್ಲಿ ಹೇಳದಿದ್ದರೆ ಪಾಷಾಣಪ್ರಾಯ ಮುಕ್ತಿಯಲ್ಲಿ ಯಾರಿಗೂ ಪ್ರವೃತ್ತಿಯೇ ಆಗಲಾರದು. ಅಂತಹ ಬ್ರಹ್ಮದ ಪೂಜಾಧ್ಯಾನಾದಿಗಳಿಂ ಪ್ರಯೋಜನವೇನು? ' ನಿದ್ದೆಯಲ್ಲಿ ಅರಿವಿಲ್ಲ.' ಎಂಬ ನೈಯಾಯಿಕರ ವಾದವು ಹೇಗೆ ಸಿದ್ಧಿಸಲಿಲ್ಲವೋ ಹಾಗೆ ಬ್ರಹ್ಮದಲ್ಲಿ ಸರ್ವಜ್ಞಾನರೂಪ ಶಕ್ತಿಯು ಇಲ್ಲೆಂಬ ವಾದವೂ ಎಂದೂ, ಯಾರಿಂದಲೂ, ಯಾವ ರೀತಿಯಿಂದಲೂ ಸಿದ್ಧಿಸಲಾರದು. ಬ್ರಹ್ಮವು ಶಕ್ತಿರಹಿತವೆಂಬುದಕ್ಕೆ ಯಾವ ಪ್ರಮಾಣವಿಲ್ಲ. ಅದರಿಂದ ಅನೇಕ ದೋಷಪ್ರಾಪ್ತಿಯು.

## ಶಕ್ತಿಯ ಸ್ವರೂಪ

ಶಕ್ತಿ ಅಂದಲೆ ಚಿದ್ರೂಪ ಬ್ರಹ್ಮನ ಅನುಭವಾತ್ಮಕ ಜ್ಞಾನ, ಪರಬ್ರಹ್ಮನ ಆಲೋಚನೆ, ಅವನ ಇಚ್ಛೆಯು, ಸ್ವರೂಪವೆಚ್ಚರ ಸ್ವಜ್ಞಪ್ತಿಯು.

' ಸರ್ವಂ ಶಕ್ತಿಮಯಂ ಜಗತ್ ' ' ಸರ್ವಂ ಖಲ್ವಿದಂ ಶಕ್ತಿಃ ನೇಹನಾನಾಸ್ತಿ ಕಿಂಚನ ' ಎಂಬಾಗಮೋಕ್ತಿಯಂತೆ ಶಕ್ತಿಯು ಜಗತ್ತಿನ ತುಂಬ ವ್ಯಾಪ್ತಳಾಗಿರುವದರಿಂದ ಶಕ್ತಿಯಿಲ್ಲದ ಸ್ಥಾನವೂ, ಶಕ್ತಿಯಿಲ್ಲದ ವಸ್ತುವೂ ಎಲ್ಲಿಯೂ ಇಲ್ಲ. ಸೂರ್ಯನಲ್ಲಿ ಪ್ರಕಾಶವಿರದಿದ್ದರೆ ಅವನನ್ನು ಯಾರೂ ತಿಳಿಯದಂತೆ ಬ್ರಹ್ಮದಲ್ಲಿ ಜ್ಞಾನಪ್ರಕಾಶ ರೂಪ ಶಕ್ತಿಯು ಇರದಿದ್ದರೆ ಅವನನ್ನು ಯಾರೂ ತಿಳಿಯುತ್ತಿದ್ದಿಲ್ಲ. ಅವನು ಸರ್ವಜ್ಞನೆನಿಸುತ್ತಿದ್ದಿಲ್ಲ. ಸರ್ವವನ್ನು ಸಿದ್ಧಮಾಡುವ ಜ್ಞಾನಶಕ್ತಿಯು ಇಲ್ಲೆಂಬುವದು ನನ್ನ ತಾಯಿ ಬಂಜೆ, ನನ್ನ ಬಾಯಲ್ಲಿ ನಾಲಗೆಯಿಲ್ಲ ಎಂಬುವದಕ್ಕೆ ಸಮಾನವಾದದ್ದು.

ಶಂಕಾ—ಬ್ರಹ್ಮನು ಮಾಯಾರಹಿತ ಎಂದು ಶ್ರುತಿ ಇರುವದಿಲ್ಲವೇ ?

ಸಮಾಧಾನ—ಅದ್ವೈತಿಗಳು ಕಲ್ಪನೆಯಿಂದ ಹೇಳುವ ಬ್ರಹ್ಮಭಿನ್ನವಾದ ಮಾಯಾರಹಿತವೆಂಬರ್ಥವಲ್ಲದೆ ಚಿಚ್ಛಕ್ತಿ ರೂಪಮಾಯೆಯು ಬ್ರಹ್ಮದಲ್ಲಡಗಿ ಸಮರಸವಾಗಿ ಅವ್ಯಕ್ತವಾದ್ದರಿಂದ ದೃಷ್ಟಿಗೋಚರ ಎಂಬರ್ಥವಲ್ಲದೆ ಸದಾ ಇಲ್ಲೆಂಬರ್ಥವಲ್ಲ.

ಶಿವಾದ್ವೈತಿಗಳು ಬ್ರಹ್ಮನಿಗಭಿನ್ನಶಕ್ತಿಗೆ ಮಾಯೆಯೆಂದು ಕೆಲಕಡೆಯಲ್ಲಿ ಪ್ರಯೋಗಿಸಿದ್ದಾರೆ. ಶ್ರೀ ನಿಜಗುಣರು ಆಧಾರವಾ ಬ್ರಹ್ಮ, ಆಧೇಯವೀ ಮಾಯೆ ಆಧಾರದಲ್ಲಿ ಬೆರಿಸಿ ಬೇರಿಲ್ಲದಿರ್ಪುದೆಂದೂ, ದೇವಾತ್ಮ ಶಕ್ತಿಯೆಂದು ಸಾರುವ ವೇದ

ದಲ್ಲಿ ತಿಳಿ ಮಾಯೆ ತತ್ತ್ವದೊಳೋವಿ ಬೇರಿಲ್ಲದಿಹುದೆಂದೂ ಅನುಭವ ಸಾರದಲ್ಲಿ ಹೇಳಿರುವರು. ಆದುದರಿಂದ ಬ್ರಹ್ಮವು ಮಾಯಾಶಕ್ತಿಸ್ವರೂಪವೆಂಬುವುದು ನಿರ್ವಿವಾದವು.

ಸಾರಾಂಶ—"ಶಕ್ತಿಸಂಕೋಚ ಭಾವೇನ ಸೃಷ್ಟೇಃಪೂರ್ವಂಮಹೇಶ್ವರಃ
ನಿರಂಶೋಃ ನಿರ್ಗುಣಶ್ಚೇತಿ ವೇದಾಂತೇಷು ಪ್ರಗೀಯತೇ ||
ಶಕ್ತೇರ್ವಿಕಾಸಭಾವೇನ ಹ್ಯನಂತಗುಣವಾನಿತಿ ಪ್ರೋಚ್ಯತೇ ||

(ಉಪನಿಷತ್ತು ವೇದಾಂತಡಿಂಡಿಮಃ)

"ಸಾಕ್ಷಾನ್ನಿರ್ಲಕ್ಷಣವಹ ನೀನು | ಈಕ್ಷಿಸೆ ನಿರ್ಗುಣವಾಗಿಹ ನೀನು | ಆಜೆಯಿಂ ನಾನಾಗುಣಮಯನೆನಿಸಿ | ನಿಜದಿಂ ಬಹುಲಕ್ಷಣಯುತನೆನಿಸಿ | ನಾನಾಶಕ್ತಿ ಸಮನ್ವಿತನೆನಿಸಿ | ನಾನಾವಿಧಲೀಲಾಸ್ಪದನೆನಿಸಿ | ಸತತಂ ಸರ್ವನಿಯಾಮಕನಾಗಿ | ನೀನೆ ಸಕಲ ಜಗನ್ಮಯನಾಗಿ | ನಿಜದಿಂದ ಮಹೇಶನೆನಿಸಿಪ್ಪೆ || (ನಿಜಗುಣರ ಪರಮಾರ್ಥಗೀತೆ).

ತಾತ್ಪರ್ಯ—ಸೃಷ್ಟಿಯ ಪೂರ್ವದಲ್ಲಿ ಮೂಲ ಸದ್ರೂಪವಸ್ತು ಶಕ್ತಿಯ ಸಂಕೋಚ (ಅವ್ಯಕ್ತ) ಸ್ಥಿತಿಯಲ್ಲಿ ನಿರ್ಗುಣ, ನಿರವಯುವ, ನಿರ್ವಿಶೇಷ, ನಿಷ್ಕ್ರಿಯ, ಮಾಯಾರಹಿತ, ಸೃಷ್ಟಿಯ ಕಾರ್ಯರಹಿತ, ನಿರ್ವಿಕಾರನಾಗಿ ನಿರ್ಗುಣ ಬ್ರಹ್ಮವೆನಿಸುವುದು. ಶಕ್ತಿಯ ವಿಕಾಸ ಸ್ಥಿತಿಯಲ್ಲಿ ಅದೇ ಮೂಲವಸ್ತು ಸಗುಣ, ಸಾವಯುವ, ಸವಿಶೇಷ, ಕ್ರಿಯಾಶೀಲ, ಮಾಯಾಶಕ್ತಿ ಸಹಿತ ಸರ್ವಾತ್ಮಕ, ಸರ್ವನಿಯಾಮಕ, ಜಗನ್ಮಯನಾಗಿ ಸಗುಣ ಬ್ರಹ್ಮನೆನಿಸುವನು. ಶಿವಾದ್ವೈತ (ಶಕ್ತಿವಿಶಿಷ್ಟಾದ್ವೈತ) =ಶಕ್ತಿಯೇ ಪ್ರಧಾನವಾಗಿರುವ ಅದ್ವೈತವು. ಬ್ರಹ್ಮಾದ್ವೈತ—ಶಕ್ತಿಯ ಅವ್ಯಕ್ತ ಹಾಗು ಪ್ರಸರವಿಲ್ಲದಿರುವ ಅದ್ವೈತವು.

———:·:———

# ಶಿವಾದ್ವೈತ ದರ್ಶನ

⁂

ವಿದ್ಯಾವಿಭೂಷಣ ಶ್ರೀ ಓ. ಎಸ್. ಲಿಂಗಣ್ಣಯ್ಯ, ಬಿ.ಎ., (ಆನರ್ಸ್),
ಅಸಿಸ್ಟೆಂಟ್ ಕಮಿಷನರ್, ಮದ್ದೂರು.

ದ್ರಾವಿಡ ಧರ್ಮ ಅತಿ ಪ್ರಾಚೀನ ಕಾಲದಿಂದಲೂ ನಮ್ಮ ಭರತಖಂಡದಲ್ಲಿದೆ. ಈ ಧರ್ಮದ ಇತಿಹಾಸವನ್ನು ಹರಪ್ಪ ಮತ್ತು ಮೊಹೆಂಜದಾರೋ ಎಂಬ ಸ್ಥಳಗಳಲ್ಲಿ ಲಬ್ಧವಾದ ಪ್ರಾಚೀನ ಅವಶೇಷಗಳಿಂದ ನಿರ್ಧರಿಸಲು ಸ್ವಲ್ಪಮಟ್ಟಿಗೆ ಸಾಧ್ಯವಾಗುತ್ತದೆ. ಆರ್ಯರು ಭರತಖಂಡಕ್ಕೆ ಬರುವ ಮೊದಲು ಸಿಂಧೂ ನದೀ ತೀರದಲ್ಲಿ ಹಿಂದೂ ಜನರ ಸಂಸ್ಕೃತಿ ಉಜ್ಜ್ವಲವಾಗಿ ಬೆಳೆದಿತ್ತು. ಹಿಂದೂ ಧರ್ಮವೇ ದ್ರಾವಿಡ ಧರ್ಮವೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ದ್ರಾವಿಡ ಧರ್ಮ ಮತ್ತು ಆರ್ಯ ಧರ್ಮ–ಈ ಎರಡೂ ಪ್ರತ್ಯೇಕ ಧರ್ಮಗಳು. ಆರ್ಯ ಧರ್ಮವನ್ನು ವೈದಿಕ ಧರ್ಮವೆಂದೂ ಕರೆಯುತ್ತಾರೆ. ದ್ರಾವಿಡ ಸಂಸ್ಕೃತಿ ಸುಮಾರು ಐದು ಸಾವಿರ ವರ್ಷಗಳ ಹಿಂದೆ ಸಿಂಧೂ ನದಿಯ ತೀರದಲ್ಲಿ ವ್ಯಾಪಿಸಿತ್ತು. ಇದೇ ಸೈಂಧವ ಸಂಸ್ಕೃತಿ. ಈಗಿನ ಪಂಜಾಬು, ಸಿಂಧೂನದಿಯ ಪ್ರಾಂತ, ಬೆಲೂಚಿಸ್ಥಾನದ ದಕ್ಷಿಣ ಭಾಗ ಮತ್ತು ಸೌರಾಷ್ಟ್ರ ಪ್ರಾಂತಗಳನ್ನು ಒಳಗೊಂಡ ವಿಸ್ತಾರವಾದ ರಾಜ್ಯ ದ್ರಾವಿಡದ ನೆಲೆವೀಡಾಗಿತ್ತು. ಹರಪ್ಪ ಎಂಬುದು ಪಂಜಾಬಿನಲ್ಲಿತ್ತು. ಮೊಹೆಂಜದಾರೋ ನಗರ ಅಲ್ಲಿಂದ ೪೦೦ ಮೈಲಿಗಳ ದೂರದಲ್ಲಿ ಸಿಂಧೂ ನದಿಯ ತೀರದಲ್ಲಿತ್ತು. ಈ ಎರಡು ನಗರಗಳೂ ದ್ರಾವಿಡರ ರಾಜಧಾನಿಗಳಾಗಿದ್ದಿರಬೇಕು. ಸುಮಾರು ಒಂದು ಸಾವಿರ ವರ್ಷಕಾಲ ಈ ಸೈಂಧವ ಸಂಸ್ಕೃತಿ ಅಲ್ಲಿ ಬಾಳಿತೆಂದು ಚರಿತ್ರೆ ತಿಳಿಸುತ್ತದೆ. ಆ ಜನಜೀವನದ ಮತ ಧರ್ಮವನ್ನು ಅಲ್ಲಿ ದೊರೆತಿರುವ ಭಗ್ನಾವಶೇಷಗಳಿಂದ ಅರಿಯಬಹುದು. ಪಶುಪತಿಯಾದ ಶಿವನೇ ಆ ದ್ರಾವಿಡ ಜನಾಂಗದ ಆರಾಧ್ಯ ದೈವವೆಂದು ತಿಳಿದು ಬರುತ್ತದೆ.

ಅವರು ಶಿವನನ್ನು 'ಲಿಂಗ' ರೂಪದಿಂದ ಪೂಜಿಸುತ್ತಿದ್ದರು ಮತ್ತು ಅವರಲ್ಲಿ ಶಕ್ತಿದೇವತಾ ಪೂಜೆಯೂ ಬಳಕೆಯಲ್ಲಿತ್ತು. ಆ ದ್ರಾವಿಡ ಜನರಿಗೆ ಬರೆವಣಿಗೆಯೂ ತಿಳಿದಿತ್ತು. ಅದು ಚಿತ್ರ ಲಿಪಿ. ವಿದ್ವಾಂಸರು ಇನ್ನೂ ಆ ಲಿಪಿಯನ್ನು ಓದಿ ಅರ್ಥ ಮಾಡಿಲ್ಲ. ಆ ದ್ರಾವಿಡ ಜನರು ಭರತಖಂಡದ ಎಲ್ಲ ಭಾಗಗಳಲ್ಲಿಯೂ ನೆಲಸಿದ್ದರು. ಮಲಯಾ, ಜಾವಾ, ಸುಮಾತ್ರಾ, ಸಿಂಹಳ ಮೊದಲಾದ ಪೂರ್ವ ಮತ್ತು ದಕ್ಷಿಣ ದೇಶಗಳಲ್ಲಿಯೂ. ಮಧ್ಯ ಏಷ್ಯಾ ಪ್ರಾಂತಗಳಲ್ಲಿಯೂ ದ್ರಾವಿಡರು ನೆಲಸಿದ್ದರೆಂದು ಇತಿಹಾಸ ತಿಳಿಸುತ್ತದೆ. ಅವರು ತುಂಬ ನಾಗರಿಕರಾಗಿದ್ದರು. ಆರ್ಯರು ಈ ದ್ರಾವಿಡ ಜನಾಂಗವನ್ನು ಜಯಿಸಿ, ಕ್ರಮೇಣ ಇಲ್ಲಿ ನೆಲೆಸಿದರು. ದ್ರಾವಿಡ ಸಂಸ್ಕೃತಿ ಆರ್ಯರ ಮೇಲೆ ತನ್ನ ವರ್ಚಸ್ಸನ್ನು ಬೀರಿತು. ಆರ್ಯರು ಸಿಂಧೂ ನದಿಯ ತೀರದಲ್ಲಿ ನೆಲಸಿದ್ದಾಗ ಋಗ್ವೇದವನ್ನು ರಚಿಸಿದರು. ಅನಂತರ ಗಂಗಾನದಿಯ ಬಯಲಿನಲ್ಲಿ ಅವರು ನಿಂತಾಗ, ಯಜುರ್ವೇದ, ಸಾಮವೇದ ಮತ್ತು ಅಥರ್ವಣ ವೇದಗಳನ್ನು ರಚಿಸಿದರೆಂದು ಇತಿಹಾಸಜ್ಞರು ಹೇಳುತ್ತಾರೆ. ವೇದಗಳ ಕಾಲವನ್ನು ಪಂಡಿತರು ಇನ್ನೂ ನಿರ್ಧಾರವಾಗಿ ತಿಳಿಸಿಲ್ಲ. ಸುಮಾರು ಆರು ಸಾವಿರ ವರ್ಷಗಳ ಹಿಂದೆ ವೇದಗಳ ರಚನೆಯಾಯಿತೆಂದು ಅನೇಕರು ಅಭಿಪ್ರಾಯಪಡುತ್ತಾರೆ. ಆ ಮಾತಿರಲಿ, ಋಗ್ವೇದದಲ್ಲಿ ಹಿಂದೂ ಅಥವಾ ದ್ರಾವಿಡ ಧರ್ಮದ ವಿಚಾರಗಳನ್ನು ಕಾಣಬಹುದು. ಎಂದಮೇಲೆ, ಆರ್ಯ ಧರ್ಮಕ್ಕಿಂತಲೂ ಹಿಂದೆ ದ್ರಾವಿಡ ಧರ್ಮ ಭರತಖಂಡದಲ್ಲಿ ಅತ್ಯಂತ ಪ್ರಬಲವಾಗಿತ್ತೆಂಬುದನ್ನು ಒಪ್ಪಬಹುದು.

ಪ್ರಾಚೀನ ದ್ರಾವಿಡ ಜನಾಂಗ ತನ್ನದೇ ಆದ ಆಧ್ಯಾತ್ಮಿಕ ತತ್ತ್ವ ವಿಚಾರಗಳನ್ನು ನಡೆಸಿಕೊಂಡು ಬರುತ್ತಿತ್ತು. ಈ ಪ್ರಾಚೀನ ಮತಧರ್ಮಗಳಲ್ಲಿ ಚಾರ್ವಾಕ ದರ್ಶನ, ಬೌದ್ಧ ದರ್ಶನ, ಜೈನ ದರ್ಶನ, ಸಾಂಖ್ಯ ದರ್ಶನ ಮತ್ತು ಪಾಶುಪತ ದರ್ಶನ ಈ ಐದೂ ಅತಿ ಮುಖ್ಯವಾದುವುಗಳು- ಅವು ಬಹುಮಟ್ಟಿಗೆ ಸಮಕಾಲೀನ ಧರ್ಮಗಳು. ಒಂದೊಂದೂ ಒಂದೊಂದು ಪ್ರಾಂತದಲ್ಲಿ ವಿಶೇಷ ಪ್ರಚಾರದಲ್ಲಿತ್ತೆಂದು ಕಂಡುಬರುತ್ತದೆ. ಇವು ದ್ರಾವಿಡ ಜನಾಂಗದ ಧರ್ಮಗಳು. ಅತ್ಯಂತ ಪ್ರಾಚೀನ ಕಾಲದಿಂದಲೂ ಮನುಷ್ಯನ ವಿಚಾರಶಕ್ತಿ ಮತ್ತು ಆಧ್ಯಾತ್ಮಿಕ ಮನೋಭಾವ ಹೇಗೆ ವಿಕಾಸವಾಗುತ್ತಿದ್ದುವೆಂಬುದನ್ನು ಈ ದರ್ಶನಗಳಿಂದ ತಿಳಿಯಬಹುದು.

## ದರ್ಶನವೆಂದರೇನು ?

ದರ್ಶನವೆಂದರೆ ತತ್ತ್ವ ವಿಚಾರ. ತತ್ತ್ವವೆಂದರೆ ಸ್ವಾಭಾವಿಕ ವಸ್ತು. ವಸ್ತುವೆಂದರೆ ಯಥಾರ್ಥವಾದ ಪದಾರ್ಥ. ಆದ್ದರಿಂದ ಪದಾರ್ಥ, ವಸ್ತು, ತತ್ತ್ವ ಎಂದರೂ ಒಂದೇ ಅರ್ಥ. ಪ್ರತಿಯೊಂದು ವಸ್ತುವೂ ವಿಚಿತ್ರವಾಗಿರುತ್ತದೆ. ಅದರ ಸ್ವಭಾವ ಅನಂತವಾಗಿರುತ್ತದೆ. ಈ ವಸ್ತು ಸ್ವಭಾವ ವಿಚಾರಗಳನ್ನು ತಿಳಿಸುವುದೇ ತತ್ತ್ವ ದರ್ಶನ. ಆ ಸ್ವಭಾವಗಳ ವ್ಯವಸ್ಥೆಗೆ ಸಿದ್ಧಾಂತವೆಂದು ಹೆಸರು. ಆತ್ಮ-ಪರಮಾತ್ಮ,

ಕರ್ಮ, ಪರಲೋಕ, ಪುಣ್ಯ, ಪಾಪ, ಜನ್ಮಾಂತರ ಮೊದಲಾದ ವಿಚಾರಗಳನ್ನು ಸಾಧನಾ ಬಲದಿಂದ ಅರಿಯಲು ಮಾತ್ರ ಸಾಧ್ಯ. ಇವೆಲ್ಲಾ ಪರೋಕ್ಷ ವಿಚಾರಗಳು. ವಿಚಾರಪರರು ತಮ್ಮ ಅನುಭವವನ್ನು ಲೋಕ ಕಲ್ಯಾಣಕ್ಕಾಗಿ ನಿರೂಪಿಸಿರುತ್ತಾರೆ. ಇಂಥ ಪ್ರಾಜ್ಞರ ಮತವೇ ದರ್ಶನ. ಇವರೇ ಪರಮ ಸಾತ್ವಿಕರು; ಪ್ರಶಾಂತಚಿತ್ತರು; ಮನಶ್ಶಾಂತಿಯನ್ನು ಪಡೆದ ಮಹಾತ್ಮರು. ಲೋಕಶಾಂತಿಯನ್ನು ಬಯಸಿ ಅವರು ತಮ್ಮ ತಮ್ಮ ಮತ ದರ್ಶನವನ್ನು ಅಥವಾ ಮತಸಿದ್ಧಾಂತವನ್ನು ಜಗತ್ತಿಗೆ ನೀಡಿದ್ದಾರೆ. ಇಂಥ ಮಹಾಪುರುಷರೇ ಆ ಮತದ ಆಚಾರ್ಯರು; ಅಥವಾ ಆ ಧರ್ಮ ಸಿದ್ಧಾಂತ ಸ್ಥಾಪಕರು. ಈ ಎಲ್ಲ ಮಹಾ ಪುರುಷರೂ ಸಿದ್ಧ ಪುರುಷರೇ. ಅವರು ಬೋಧಿಸುವುದು ಸಿದ್ಧಾಂತ ಮಾರ್ಗ. ಇದು ಸಾಮಾನ್ಯ ಜನರ ನಿಲುವಿಗೆ ಎಟುಕುವುದು ಪ್ರಯಾಸ. ಆದರಿಂದ ಅವರು ಭಕ್ತಿಮಾರ್ಗವೊಂದನ್ನು ತೋರಿಸಿರುತ್ತಾರೆ. ಈ ಭಕ್ತಿ ಮಾರ್ಗದಲ್ಲಿ ಅನೇಕ ಸಂಪ್ರದಾಯಗಳೂ, ಆಚಾರಗಳೂ ಕಂಡುಬರುತ್ತವೆ. ಎಲ್ಲ ಮತಗಳ ಗುರಿಯೂ ಮೋಕ್ಷ; ಎಲ್ಲ ಆಚಾರ್ಯರ ಸಂದೇಶವೂ ಶಾಂತಿ. ಇಂಥ ಹೃದಯ ವೈಶಾಲ್ಯ ಎಲ್ಲ ಸಾತ್ವಿಕ ಮತಗಳಲ್ಲಿಯೂ ಕಂಡುಬರುತ್ತದೆ. ಆಯಾ ಕಾಲ, ದೇಶ, ಸನ್ನಿವೇಶಗಳನ್ನು ಅನುಸರಿಸಿ, ಆ ಜಿಜ್ಞಾಸುಗಳ ಸಾಧನೆ, ಸಂಸ್ಕಾರ ಮತ್ತು ಬುದ್ಧಿಶಕ್ತಿಗನುಗುಣವಾಗಿ ತತ್ತ್ವದರ್ಶನ ರೂಪುಗೊಳ್ಳುತ್ತದೆಯೆಂಬುದನ್ನು ಮರೆಯಬಾರದು. ಪಾಶುಪತದರ್ಶನ ಸ್ವರೂಪವನ್ನು ಅರಿಯಬೇಕಾದರೆ, ಅದರ ಸಮಕಾಲೀನ ಚಾರ್ವಾಕ, ಬೌದ್ಧ, ಜೈನ ಮತ್ತು ಸಾಂಖ್ಯದರ್ಶನಗಳ ರೂಪರೇಷೆಗಳನ್ನು ಸ್ಥೂಲವಾಗಿಯಾದರೂ ಅರಿಯಬೇಕಾದುದು ಅವಶ್ಯಕ. ಈ ಪಾಶುಪತವೇ ಶಿವಾದ್ವೈತ.

### ಚಾರ್ವಾಕ ದರ್ಶನ :

ಇದು ಇತರ ಎಲ್ಲ ದರ್ಶನಗಳಿಗಿಂತಲೂ ಪ್ರಾಚೀನವಾದುದು. ಈ ಮತದವರು ಆತ್ಮ, ಜನ್ಮಾಂತರ, ಅದೃಷ್ಟ, ಪರಲೋಕ ಮತ್ತು ಈಶ್ವರ ಇವುಗಳನ್ನು ಒಪ್ಪುವುದಿಲ್ಲ. ಇವರು ಪ್ರತ್ಯಕ್ಷ ಪ್ರಮಾಣವನ್ನು ಮಾತ್ರ ನಂಬುತ್ತಾರೆ. ನೆಲ, ನೀರು, ಗಾಳಿ, ಬೆಳಕು–ಎಂಬ ನಾಲ್ಕು ತತ್ತ್ವಗಳನ್ನು ಅವರು ನಿಜವೆಂದು ನಂಬುತ್ತಾರೆ. ಅವರು ಈ ದೇಹವನ್ನು ಮಾತ್ರ ನಿಜವೆಂದು ನಂಬುತ್ತಾರೆ. ಇದು ಅಂದಿನ ಜನಾಂಗದ ವಿಕಾಸ ಲಕ್ಷಣವನ್ನೂ ಬುದ್ಧಿ ಶಕ್ತಿಯ ಪರಿಮಿತಿಯನ್ನೂ ಸೂಚಿಸುತ್ತದೆ.

### ಬೌದ್ಧ ದರ್ಶನ :

ಬುದ್ಧನಿಗಿಂತಲೂ ಬಹಳ ಹಿಂದೆಯೇ ಈ ಸೌಗತ ಧರ್ಮ ಪ್ರಚಾರದಲ್ಲಿತ್ತೆಂದು ವೈದಿಕ ಗ್ರಂಥಗಳಿಂದ ತಿಳಿದು ಬರುತ್ತದೆ. ಬೌದ್ಧ ದರ್ಶನದಲ್ಲಿ ಜೀವಾತ್ಮ, ಪರಮಾತ್ಮ, ಜಗತ್ತು ಮತ್ತು ಪರಲೋಕ ಇವುಗಳನ್ನು ಪರಿಗಣಿಸಲಿಲ್ಲ. ಎಲ್ಲವೂ

ನಶ್ವರ. ಶರೀರದಲ್ಲಿ ಆತ್ಮನಿಲ್ಲ. ಪ್ರಾಣಿಗಳು ಕರ್ಮಾನುಸಾರ ಪುನರ್ಜನ್ಮವನ್ನು ಪಡೆಯುತ್ತವೆ. ಮನುಷ್ಯರು ದಯಾರ್ದ್ರ ಹೃದಯದಿಂದ ಬಾಳಬೇಕು ಎಂಬುದು ಬೌದ್ಧ ದರ್ಶನದ ಸಾರಾಂಶ.

## ಜೈನ ದರ್ಶನ :

ಚಾರ್ವಾಕ ದರ್ಶನ ಮತ್ತು ಬೌದ್ಧ ದರ್ಶನಗಳಿಗಿಂತಲೂ ಜೈನ ದರ್ಶನದಲ್ಲಿ ವಿಚಾರ ಶಕ್ತಿ ಮುಂದೆ ಹೋಗಿದೆ. ಜೈನರು ಆತ್ಮನನ್ನು ಒಪ್ಪುತ್ತಾರೆ; ಜನ್ಮಾಂತರ ಗಳನ್ನು ನಂಬುತ್ತಾರೆ; ಪುಣ್ಯ ಪಾಪಗಳನ್ನು ಅಂಗೀಕರಿಸುತ್ತಾರೆ. ಕರ್ಮ ಅಥವಾ ಅದೃಷ್ಟವನ್ನು ಮನ್ನಿಸುತ್ತಾರೆ. ಸ್ವರ್ಗ, ನರಕ, ಮೋಕ್ಷಗಳನ್ನು ಅನುಮೋದಿಸು ತ್ತಾರೆ. ಸ್ತ್ರೀಯರಿಗೆ ಮಾತ್ರ ಮೋಕ್ಷವಿಲ್ಲ. ಜೈನರು ಸೃಷ್ಟಿಕರ್ತನಾದ ಈಶ್ವರ ನಿದ್ದಾನೆ ಎಂಬುದನ್ನು ನಿರಾಕರಿಸುತ್ತಾರೆ. ಜೈನರು ತಮ್ಮವೇ ಆದ ಜೈನಾಗಮ ಗಳನ್ನು ನಂಬುತ್ತಾರೆ.

## ಸಾಂಖ್ಯ ದರ್ಶನ :

ಸಾಂಖ್ಯರೂ ಬೌದ್ಧ ಮತ್ತು ಜೈನರಂತೆಯೇ ನಿರೀಶ್ವರವಾದಿಗಳು. ಚಾರ್ವಾಕ, ಬೌದ್ಧ, ಜೈನ ಮತ್ತು ಪಾಶುಪತರಂತೆಯೇ ಸಾಂಖ್ಯರೂ ವೇದ ಧರ್ಮಕ್ಕಿಂತಲೂ ಹಿಂದೆ ಇದ್ದ ಮೂಲ ದ್ರಾವಿಡ ಜನಾಂಗದವರೆಂಬುದು ವಿದ್ವಾಂಸರ ಅಭಿಪ್ರಾಯ. ಪಾಶುಪತರನ್ನು ಬಿಟ್ಟು, ಉಳಿದ ನಾಲ್ಕು ಮತದವರೂ ಜೀವಾತ್ಮ, ಪರಮಾತ್ಮ ಮತ್ತು ಜಗತ್ತು–ಈ ವಿಚಾರಗಳಲ್ಲಿ ಭಿನ್ನಭಿನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಿ ದ್ದರೂ, ಸೃಷ್ಟಿಕರ್ತನೆಂಬ ಈಶ್ವರನಿಲ್ಲವೆಂದು ಹೇಳುತ್ತಾರೆ. ಸಾಂಖ್ಯರಲ್ಲಿ ಒಂದು ಪಂಗಡದವರು ಈಶ್ವರನಿದ್ದಾನೆಂಬುದನ್ನು ಅಂಗೀಕರಿಸಿದ್ದರು. ಅದು ಸೇಶ್ವರ ಸಾಂಖ್ಯ ಮತ.

ಈಶ್ವರನಿಲ್ಲವೆಂದು ಈ ನಾಲ್ಕು ಮತದವರೂ ಹೇಳಬೇಕಾದರೆ, ಈಶ್ವರನಿದ್ದಾ ನೆಂದು ನಂಬಿದ್ದ ಮತವೊಂದು ಈ ಮತಗಳಿಗಿಂತಲೂ ಹಿಂದೆ ಅಥವಾ ಸಮಕಾಲದಲ್ಲಿ ದ್ದಿತೆಂದು ವ್ಯಕ್ತವಾಗುತ್ತದೆ. ಜೀವ, ಆತ್ಮ, ಪಾಪ, ಪುಣ್ಯ, ಪುನರ್ಜನ್ಮ, ಪೂರ್ವ ಜನ್ಮ, ಸ್ವರ್ಗ, ನರಕ, ಜಗತ್ತು, ಈಶ್ವರ ಮತ್ತು ಮುಕ್ತಿ–ಇವುಗಳನ್ನು ಅಂಗೀಕರಿಸು ತ್ತಿದ್ದ ಮತವೊಂದು ಆ ಪ್ರಾಚೀನ ಕಾಲದಲ್ಲಿಯೇ ಇದ್ದಿರಬೇಕು. ಅದೇ ಪಾಶುಪತ ಅಥವಾ ಶೈವಧರ್ಮ. ವೇದಯುಗದ ಆರ್ಯಧರ್ಮ ತನಗಿಂತ ಪ್ರಾಚೀನವಾಗಿದ್ದ ಚಾರ್ವಾಕ, ಬೌದ್ಧ, ಜೈನ, ಸಾಂಖ್ಯ ಮತ್ತು ಶೈವ (ಪಾಶುಪತ) ಧರ್ಮಗಳಿಂದ ಪುಷ್ಟಿಯನ್ನು ಹೊಂದಿ ವೇದ ವಾಙ್ಮಯವನ್ನು ರೂಪಿಸಿಕೊಂಡಿತೆಂದು ಊಹಿಸ ಬಹುದು.

**ಪಾಶುಪತ ದರ್ಶನ :**

ಪಶು, ಪತಿ, ಪಾಶ – ಈ ಮೂರು ಈ ಮತದ ಮುಖ್ಯ ತತ್ವಗಳು. ಇದು ಬಹಳ ಪ್ರಾಚೀನ ಮತ. ಪಾಶುಪತ, ಕಾಳಾಮುಖ, ಲಾಕುಳ ಮತ್ತು ಮಾಹೇಶ್ವರ ಈ ನಾಲ್ಕೂ ಶೈವ ಧರ್ಮದ ನಾಲ್ಕು ಮುಖಗಳು. ಶಂಕರಾಚಾರ್ಯರು ತಮ್ಮ ಬ್ರಹ್ಮಸೂತ್ರ ಭಾಷ್ಯದಲ್ಲಿ ಪಾಶುಪತ ಮತೀಯರನ್ನು ಮಾಹೇಶ್ವರರೆಂದು ಕರೆದಿರುತ್ತಾರೆ. ಮಹಾಭಾರತದಲ್ಲಿ ಪಾಶುಪತ ಧರ್ಮದ ವಿಚಾರ ಉಕ್ತವಾಗಿದೆ. ಪಾಶುಪತರನ್ನು ಲಿಂಗಿ ಬ್ರಾಹ್ಮಣರೆಂದು ಅಲ್ಲಿ ಪ್ರಸ್ತಾಪಿಸಿರುತ್ತಾರೆ. ವಾಯು ಪುರಾಣ, ಕೂರ್ಮ ಪುರಾಣ ಮತ್ತು ಲಿಂಗ ಪುರಾಣಗಳಲ್ಲಿ ಪಾಶುಪತ ಧರ್ಮದ ಉಲ್ಲೇಖವಿದೆ. ನೀಲಕಂಠ ಶಿವಾಚಾರ್ಯರೂ ಮತ್ತು ಶ್ರೀಪತಿ ಪಂಡಿತರೂ ಶೈವ ಸಿದ್ಧಾಂತ ತತ್ತ್ವಗಳನ್ನು ತಮ್ಮ ಭಾಷ್ಯಗಳಲ್ಲಿ ಪ್ರತಿಪಾದಿಸಿ, ವೀರಶೈವ ಮಾರ್ಗವನ್ನು ಸ್ಥಾಪಿಸುತ್ತಾರೆ. ಇದೇ ಶಿವಾದ್ವೈತ. ಇದನ್ನು ಶಕ್ತಿ ವಿಶಿಷ್ಟಾದ್ವೈತವೆಂದೂ ಕರೆಯುತ್ತಾರೆ. ಕಾಲಕ್ರಮೇಣ ಪಾಶುಪತ ಶೈವವೇ ವಿಕಾಸವಾಗುತ್ತ ಶೈವಧರ್ಮವನ್ನು ವೈಗೂಡಿಸಿಕೊಂಡು ಬಂದು ಕೊನೆಗೆ ವೀರಶೈವವಾಗಿ ರೂಪುಗೊಂಡಿತೆಂಬುದನ್ನು ಈ ಧರ್ಮದ ಇತಿಹಾಸ ತಿಳಿಸುತ್ತದೆ. ಸಾಹಿತ್ಯ ಗ್ರಂಥಗಳಲ್ಲಿಯೂ, ಮತಶಾಸ್ತ್ರ ಗ್ರಂಥಗಳಲ್ಲಿಯೂ ಶೈವ ಧರ್ಮವನ್ನು ವೀರಶೈವ ಧರ್ಮವೆಂಬಂತೆಯೇ ಕವಿಪಂಡಿತರು ನಿರೂಪಿಸಿರುತ್ತಾರೆ. ಈ ವೀರಶೈವ ಧರ್ಮದ ಮೂಲವನ್ನು ವೇದವಾಙ್ಮಯಕ್ಕಿಂತಲೂ, ಹಿಂದಿನ ಪ್ರಮಥ ವಾಙ್ಮಯದಲ್ಲಿ ಕಾಣಬೇಕಾಗಿದೆ. ಆ ಪ್ರಾಚೀನ ವಾಙ್ಮಯವೆಲ್ಲಾ ವೇದ ವಾಙ್ಮಯದಲ್ಲಿ ಬೆರೆತು ಹೋಗಿದೆ. ಶಿವಪೂಜೆ, ಶಿವನನ್ನು 'ಲಿಂಗ' ರೂಪದಲ್ಲಿ ಪೂಜಿಸುವ ಪದ್ಧತಿ, ಶಿವಗಣಾರಾಧನೆ, ಗುರು, ಲಿಂಗ, ಜಂಗಮ ತತ್ತ್ವನಿರೂಪಣೆ, ಇವು ಅತ್ಯಂತ ಪ್ರಾಚೀನಕಾಲದಿಂದಲೂ ಆಚರಣೆಯಲ್ಲಿದ್ದುವೆಂಬುದು ನಿರ್ವಿವಾದ. ಶೈವ ಮತ್ತು ವೀರಶೈವ ಪದದ್ವಯ ಬಹಳ ಮಟ್ಟಿಗೆ ಒಂದೇ ಅರ್ಥದಲ್ಲಿ ಬಂದಿವೆ. ಶೈವವನ್ನು ವೀರಶೈವ ವೈಗೂಡಿಸಿಕೊಂಡಿದೆ. ಅರುವತ್ತು ಮೂವರು ಪುರಾತನರಲ್ಲಿ ನಾವು ಶೈವವನ್ನು ಪರಿತ್ಯಜಿಸಿಲ್ಲ. ಶೈವ ಧರ್ಮದಲ್ಲಿ ಪ್ರತಿಯೊಬ್ಬ ಮೋಕ್ಷಾಪೇಕ್ಷಿಯೂ ಇಷ್ಟಲಿಂಗಧಾರಿಯಾಗಿರಬೇಕು. ಇದೇ ಈ ಮತದ ವೈಶಿಷ್ಟ್ಯ. ದ್ರಾವಿಡರು ಶಿವನನ್ನು ಸ್ಥಾವರ ಲಿಂಗರೂಪದಿಂದ ಪೂಜಿಸುತ್ತಿದ್ದಂತೆಯೇ ಇಷ್ಟಲಿಂಗರೂಪದಲ್ಲಿಯೂ ದೇಹದಲ್ಲಿ ಧರಿಸಿ ಆರಾಧಿಸುತ್ತಿದ್ದರೆಂದು ನಿರ್ಧರಿಸಬಹುದು. ಆರ್ಯರು ಕಂಡ ಇಂದ್ರ, ಅಗ್ನಿ, ಸೋಮ, ವರುಣ, ಸವಿತೃ, ರುದ್ರ, ಮರುತರು ಇವೇ ಮೊದಲಾದ ದೇವವೃಂದದಲ್ಲಿರುವ ರುದ್ರನನ್ನು ದ್ರಾವಿಡ ಪಾಶುಪತರು ಕಂಡ ಶಿವನೊಂದಿಗೆ ಸಮನ್ವಯ ಮಾಡಿಕೊಂಡರು. ಪ್ರಮಥ ವಾಙ್ಮಯದಲ್ಲಿ ಶಿವನೇ ಸರ್ವಶಕ್ತ ; ಸರ್ವಾಂತರ್ಯಾಮಿ "ಇಂದ್ರನೀಲಮಯಂ ಲಿಂಗಂ ವಿಷ್ಣುಃ ಪೂಜಯತೇ ಸದಾ" ಎಂದು ಹೇಳಿರುವಂತೆಯೇ.

ಬ್ರಹ್ಮಾ ಮಣಿಮಯಂ ಲಿಂಗಂ ಪೂಜಯತ್ಯನಿಶಂ ಶುಭಂ ।
ಇಂದ್ರೋ ರತ್ನಮಯಂ ಲಿಂಗಂ ಚಂದ್ರೋ ಮುಕ್ತಾಮಯಂ ತಥಾ ॥
ಭಾನುಸ್ತಾಮ್ರಮಯಂ ಲಿಂಗಂ ಪೂಜಯತ್ಯನಿಶಂ ಶುಭಂ ।
ರೌಕ್ಮಂ ಲಿಂಗಂ ಕುಬೇರಸ್ತು ಪಾಶೀ ಚಾಲಕ್ತಮೇವಚ ॥
ಯಮೋ ನೀಲಮಯಂ ಲಿಂಗಂ ರಾಜತಂ ನೈಋತಸ್ತಥಾ ।
ಕಾಶ್ಮೀರಂ ಪವನೋ ಲಿಂಗಮರ್ಚಯತ್ಯನಿಶಂ ವಿಭೋ ॥

ವಿಷ್ಣು, ಬ್ರಹ್ಮ, ಇಂದ್ರ, ಚಂದ್ರ, ಸೂರ್ಯ, ಕುಬೇರ, ವರುಣ, ನೈಋತ, ವಾಯು ಮೊದಲಾದವರೂ ಗಂಧರ್ವರೂ ಕಿನ್ನರರೂ ಲಿಂಗವನ್ನು ದೇಹದಲ್ಲಿ ಧರಿಸಿ ಆರಾಧಿಸುತ್ತಾರೆಂದು ಸ್ಕಂದಪುರಾಣದ ಕೇದಾರ ಖಂಡದಲ್ಲಿ ಹೇಳಿದೆ. ಋಷಿ ಮುನಿಗಳೂ ಲಿಂಗಧಾರಿಗಳಾಗಿದ್ದರು. ಲಿಂಗಧಾರಣ ಪದ್ಧತಿ ಬಹು ಪ್ರಾಚೀನತಮವಾದುದೆಂದು ಸಿದ್ಧವಾಗುತ್ತದೆ. ಈ ಮತದ ಮೂಲ ತತ್ವಗಳು ಶಿವಾಗಮಗಳಲ್ಲಿ ಉಕ್ತವಾಗಿವೆ. ಶಿವಾಗಮಗಳು ವೇದಗಳಷ್ಟೇ ಪ್ರಾಚೀನ ಗ್ರಂಥಗಳು. ಈ ಶಿವಾಗಮಗಳನ್ನು ಶಿವನು ಪಾರ್ವತಿಗೆ ಬೋಧಿಸಿದನೆಂದು ಈ ಮತದವರು ನಂಬುತ್ತಾರೆ. ಪತಿ, ಪಶು, ಪಾಶ, ಜೀವ, ಶಿವ, ಮೋಕ್ಷ– ಈ ಎಲ್ಲ ತತ್ವವಿಚಾರಗಳನ್ನು ಶಿವಾಗಮಗಳಲ್ಲಿ ಹೇಳಿವೆ. ಶೈವಧರ್ಮಕ್ಕೆ ಶಿವಾಗಮಗಳೇ ಮೂಲ. ಶಿವಾಗಮಗಳು ಇಪ್ಪತ್ತೆಂಟು. ಅನೇಕ ಉಪಾಗಮಗಳು ಇವೆ. ಈ ಶೈವ ಧರ್ಮವನ್ನು ಪರಮೇಶ್ವರನ ಪಂಚ ಮುಖಗಳಿಂದ ಅವತರಿಸಿದ ಪಂಚಗಣಾಧೀಶ್ವರರು ಪ್ರಚಾರ ಮಾಡಿದರೆಂದು ಶೈವವಾಙ್ಮಯದಿಂದ ಗೊತ್ತಾಗುತ್ತದೆ. ಇವರು ಶಿವಗಣ ಪ್ರಮುಖರು, ಪ್ರಮಥರು. ಈ ಪ್ರಮಥರು ಭೂಲೋಕದಲ್ಲಿ ಶಿವಲಿಂಗಗಳಿಂದ ಉದ್ಭವಿಸಿ ಬಾಳೆಹಳ್ಳಿ, ಉಜ್ಜಯಿನಿ, ಶ್ರೀಶೈಲ, ಹಿಮವತ್ಕೇದಾರ ಮತ್ತು ಕಾಶೀ ಕ್ಷೇತ್ರಗಳಲ್ಲಿ ಮಠಗಳನ್ನು ಸ್ಥಾಪಿಸಿದರೆಂದು ಆ ಮತ ಗ್ರಂಥಗಳಿಂದ ಗೊತ್ತಾಗುತ್ತದೆ. ಇವರೇ ಪಂಚಾಚಾರ್ಯರು. ಈ ಮಠಗಳಿಗೆ ಆಶ್ರಿತರಾದ ಶಿಷ್ಯವರ್ಗವೂ ಇದೆ. ಇವರು ಪ್ರತಿಯುಗದಲ್ಲಿಯೂ ಅವತರಿಸಿ ಶೈವಧರ್ಮವನ್ನು ಉದ್ಧರಿಸುತ್ತಾರೆಂಬ ನಂಬುಗೆ ಇದೆ. ಇದು ಗುರುವರ್ಗ. ಇದರಂತೆಯೇ ಶೈವಧರ್ಮದಲ್ಲಿ ವಿರಕ್ತ ವರ್ಗವಿದೆ. ಗುರು-ವಿರಕ್ತರು ಪೂಜ್ಯರು. ಹನ್ನೆರಡನೆಯ ಶತಮಾನದಲ್ಲಿ ಶೈವಬ್ರಾಹ್ಮಣ ಬಸವಣ್ಣನವರು ವೀರಶೈವವನ್ನು ಅಂಗೀಕರಿಸಿ, ಈ ಧರ್ಮವನ್ನು ಪುನರುದ್ಧಾರ ಮಾಡಿದರು. ಅವರು ವೀರಶೈವ ಮತವನ್ನು ಸ್ಥಾಪಿಸಲಿಲ್ಲ. ಕನ್ನಡ ಭಾಷೆಯಲ್ಲಿ ಈ ಮತ ತತ್ತ್ವಗಳನ್ನು 'ವಚನವಾಙ್ಮಯ' ರೂಪದಲ್ಲಿ ಶಿವಶರಣರು ಪ್ರಸಾರ ಮಾಡಿದರು. ಅಲ್ಲಮ, ಚನ್ನಬಸವಣ್ಣ, ಸಿದ್ಧರಾಮ ಮತ್ತು ಅಕ್ಕಮಹಾದೇವಿ – ಮೊದಲಾದ ಶಿವಶರಣರೂ ಶರಣೆಯರೂ ಕಲ್ಯಾಣದಲ್ಲಿ ಶಿವಾನುಭವ ಮಂಟಪದಲ್ಲಿ ತತ್ತ್ವಾರ್ಥಗಳನ್ನು ಮಥನಮಾಡಿ, ವೀರಶೈವವನ್ನು ಹೆಚ್ಚಿಸಿದರು. ಅನೇಕ ಉಚ್ಚ ಮತ್ತು ನೀಚವರ್ಣದವರು ಈ

ಧರ್ಮವನ್ನು ಅವಲಂಬಿಸಿ ಪುನೀತರಾದರು. ಇದರಿಂದ ಸಮಾಜದಲ್ಲಿ ನೀತಿ ನೈರ್ಮಲ್ಯ ಮೂಡಿತು. ವರ್ಣಾಶ್ರಮ ಭೇದಗಳನ್ನು ನಿರಾಕರಿಸಿತು. ಸಿದ್ಧಾಂತ ಮಾರ್ಗಕ್ಕಿಂತಲೂ ಭಕ್ತಿಮಾರ್ಗ ಜನಪ್ರಿಯವಾಯಿತು. ನೂತನ ಜಗದ್ಗುರು ಪೀಠಗಳು ನಿರ್ಮಾಣವಾದುವು! ಲಿಂಗವಂತ ಧರ್ಮ ಈಗ ಉಚ್ಛ್ರಾಯ ಸ್ಥಿತಿಯಲ್ಲಿದೆ.

## ವೀರಶೈವ ದರ್ಶನ ಅಥವಾ ಶಿವಾದ್ವೈತ ದರ್ಶನ:

ಇದು ಆಗಮ ಪ್ರಧಾನವಾದ ಮತ. ಆದರೂ ವೈದಿಕ ವಾಙ್ಮಯವನ್ನು ಗೌರವಿಸಿತು. ವೇದಗಳ ಜ್ಞಾನಕಾಂಡವನ್ನು ಮನ್ನಿಸಿತು. ಯಜ್ಞಯಾಗಗಳಲ್ಲಿ ಪಶುಬಲಿಯನ್ನು ನಿರಾಕರಿಸಿತು. ಶಿವಪೂಜೆ, ಶಿವಧ್ಯಾನ, ಶಿವನಿಷ್ಠೆ, ಇಷ್ಟಲಿಂಗಧಾರಣ– ಇವುಗಳನ್ನು ಒಪ್ಪಿತು. ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷ, ಮಂತ್ರ–ಇವು ವೀರಶೈವದ ಅಷ್ಟಾವರಣಗಳು. ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ–ಇವು ಷಟ್‌ಸ್ಥಲಗಳು. ಸದಾಚಾರ, ಶಿವಾಚಾರ, ಲಿಂಗಾಚಾರ, ಗಣಾಚಾರ, ಭೃತ್ಯಾಚಾರ ಇವು ಪಂಚಾಚಾರಗಳು. ಇವೆಲ್ಲಾ ಸಮಾಜದ ನೀತಿ, ಧರ್ಮ ಸಂಸ್ಕಾರ ಮತ್ತು ಆತ್ಮದ ಔನ್ನತ್ಯಗಳನ್ನು ಬೆಳಸಲು ಸಹಕಾರಿಯಾಗಿವೆ. ಶಿವಾಗಮಗಳಲ್ಲಿ ಈ ಮತ ಪ್ರಕ್ರಿಯೆಗಳನ್ನು ಹೇಳಿದೆ. ವೀರಶೈವರು ಈ ಜೀವನೇ ಶಿವನಾಗುತ್ತಾನೆಂದು ನಂಬುತ್ತಾರೆ. ಶಿವಜೀವೈಕ್ಯವೇ ಮುಕ್ತಿ. ಇದೇ ಲಿಂಗಾಂಗ ಸಾಮರಸ್ಯ; ಶಿಖಿಕರ್ಪೂರ ಯೋಗ. ಇಷ್ಟಲಿಂಗ ಪೂಜೆ ಅತಿ ಪ್ರಧಾನವಾಗಿದೆ. ಈಶ್ವರನು ಸತ್ಯ; ಅವನಿಂದ ಸೃಷ್ಟಿಯಾದ ಪ್ರಪಂಚವೂ ಸತ್ಯ. ಆತ್ಮ ಅವಿನಾಶಿ. ವೀರಶೈವರಿಗೆ ಪೂರ್ವ ಜನ್ಮವುಂಟು; ಪುನರ್ಜನ್ಮವಿಲ್ಲ. ಸ್ತ್ರೀಯರಿಗೆ ಮೋಕ್ಷವುಂಟು. ಪ್ರಾಣಿಹಿಂಸೆ ನಿಷಿದ್ಧ. ಮದ್ಯ ಮಾಂಸಗಳನ್ನು ನಿರಾಕರಿಸುತ್ತಾರೆ. ಶುದ್ಧ ಸಾತ್ವಿಕ ಮನೋಭಾವದಿಂದ ಸದಾಚಾರ ಸಂಪನ್ನರಾಗಿ, ನೀತಿ ಧರ್ಮಗಳನ್ನು ಮೀರದೆ, ಲೋಕಕಲ್ಯಾಣ ದೃಷ್ಟಿಯಿಂದ ಶಿವಪೂಜಾಸಕ್ತರಾಗಿ ಆತ್ಮ ಕಲ್ಯಾಣವನ್ನು ಎಂದರೆ ಆತ್ಮ ಶಾಂತಿಯನ್ನು ಪಡೆಯುವುದೇ ವೀರಶೈವ ದರ್ಶನದ ಮುಖ್ಯ ಗುರಿ. ಭರತಖಂಡದಿಂದ ಚಾರ್ವಾಕ, ಬೌದ್ಧ ಮತ್ತು ಸಾಂಖ್ಯ ಮತಗಳು ಕಣ್ಮರೆಯಾದುವು. ಜೈನ ಮತ್ತು ವೀರಶೈವ ಮತಗಳು ಪ್ರಾಚೀನ ಕಾಲದಿಂದಲೂ, ಜೊತೆಯಾಗಿ ಬೆಳೆದು ಬರುತ್ತಿವೆ. ಇವೆರಡೂ ಪ್ರಾಚೀನ ದ್ರಾವಿಡ ಸಂಪ್ರದಾಯಗಳೆಂಬುದನ್ನು ಮರೆಯಬಾರದು. ಜೈನರಲ್ಲಿ ಚತುರ್ವರ್ಣಗಳುಂಟು. ಅದರ ಸಹಧರ್ಮವಾದ ಶೈವದಲ್ಲಿಯೂ ಚತುರ್ವರ್ಣಗಳಿದ್ದವೆಂಬುದು ನಿಜ. ಆರ್ಯರು ಈ ಪ್ರಾಚೀನ ದ್ರಾವಿಡ ಮತಗಳಿಂದಲೇ ಚತುರ್ವರ್ಣಗಳನ್ನು ತಿಳಿದಿರಬೇಕು. ಜೈನರು ವೇದವಾಙ್ಮಯವನ್ನು ನಿರಾಕರಿಸಿ, ಸೃಷ್ಟಿಕರ್ತನನ್ನು ಒಪ್ಪದೆ, ಜೈನಾಗಮಗಳನ್ನು ಮನ್ನಿಸಿ–ಸ್ವತಂತ್ರ ಮತವಾಗಿಯೇ ಅವು ಬೆಳೆದುಬಂತು. ವೀರಶೈವ ಧರ್ಮ ಆರ್ಯ

ವಾಙ್ಮಯವನ್ನು ಗೌರವಿಸಿ, ಪ್ರಾಚೀನ ದ್ರಾವಿಡ ಸಂಸ್ಕೃತಿಯನ್ನು ಉಳಿಸಿಕೊಂಡು, ಆರ್ಯ-ದ್ರಾವಿಡ ಸಂಸ್ಕೃತಿ ಮಹಾ ಸಾಗರಗಳ ನಡುವೆ ರಾಮಸೇತುವಿನಂತೆ ನಿಂತಿದೆ. ಆದ್ದರಿಂದ ಇದು ಅವೈದಿಕ ಮತವಲ್ಲ. ತಾಂತ್ರಿಕ-ವೈದಿಕ ಮತ. ಇದು ವೀರಶೈವ ದರ್ಶನದ ವೈಶಿಷ್ಟ್ಯ.

---

# ವಿ ಭೂ ತಿ



ಚಂದ್ರಮನ ಕಾಂಬುದಕೆ ಆ ಚಂದ್ರಮನಿಂದೊದಗಿದ ಬೆಳಗೇ ಮುಖ್ಯ.
ಸೂರ್ಯನ ಕಾಂಬುದಕೆ ಆ ಸೂರ್ಯನಿಂದೊದಗಿದ ಬೆಳಗೇ ಮುಖ್ಯ.
ಜ್ಯೋತಿಯ ಕಾಂಬುದಕೆ ಆ ಜ್ಯೋತಿಯಿಂದೊದಗಿದ ಬೆಳಗೇ ಮುಖ್ಯ.
ರತ್ನವ ಕಾಂಬುದಕೆ ಆ ರತ್ನದಿಂದೊದಗಿದ ಕಳಾಲಹರಿಯೆ ಮುಖ್ಯ.
ನಮ್ಮ ಗುಹೇಶ್ವರ ಲಿಂಗವ ಕಾಂಬುದಕೆ ಆ ಮಹಾ ವಸ್ತುವಿನ ದಿವ್ಯ ತೇಜ
ದಿಂದೊದಗಿದ ಭಸಿತವೇ ಮುಖ್ಯ ಕಾಣಿರಣ್ಣಾ.

—ಪ್ರಭುದೇವ.

ಶ್ರೀ ವಿಭೂತಿಯ ಬಿಟ್ಟು ತಪಸ್ಸು ಮಾಡಿದಡೆ ಆ ತಪಃಸಿದ್ಧಿ ಬಯಲು.
ಶ್ರೀ ವಿಭೂತಿಯ ಬಿಟ್ಟು ದೀಕ್ಷೆಯ ಕೊಂಡಡೆ ಆ ದೀಕ್ಷೆ ಬಯಲು.
ಶ್ರೀ ವಿಭೂತಿಯ ಬಿಟ್ಟು ಮಂತ್ರಗಳ ಸಾಧಿಸಿದಡೆ ಆ ಮಂತ್ರ ಸಿದ್ಧಿ ಬಯಲು.
ಶ್ರೀ ವಿಭೂತಿಯ ಬಿಟ್ಟು ಯಜ್ಞಂಗಳ ಸಾಧಿಸಿದಡೆ ಆ ಯಜ್ಞಸಿದ್ಧಿ ಬಯಲು.
ಭೂತಿಯ ಬಿಟ್ಟು ದೇವತಾರ್ಚನೆಯ ಮಾಡಿದಡೆ ಆ ದೇವತಾರ್ಚನೆ ಬಯಲು.
ಶ್ರೀ ವಿಭೂತಿಯ ಬಿಟ್ಟು ವಿದ್ಯವ ಸಾಧಿಸಿದಡೆ ಆ ವಿದ್ಯಾ ಸಿದ್ಧಿ ಬಯಲು.
ಶ್ರೀ ವಿಭೂತಿಯ ಬಿಟ್ಟು ವೇದವಪಡಿಸಿದಡೆ ಆ ವೇದ ಸಿದ್ಧಿ ಬಯಲು.
ಅದೆಂತೆಂದಡೆ ಲೈಂಗೇ :
" ನ ದೀಕ್ಷಾನತಪೋ ಮಂತ್ರಂ ನ ಯಜ್ಞೋ ನ ಚ ದೇವತಾ
ವಿದ್ಯಾ ನೈವಾಗಮ ಜ್ಞಾನಂ ಭಸ್ಮಮಾಹಾತ್ಮ್ಯವರ್ಜಿತಮ್ "
ಎಂದುದಾಗಿ ಬಸವಪ್ರಿಯ ಕೂಡಲ ಚೆನ್ನ ಸಂಗಮ ದೇವಾ,
ನಿಮ್ಮ ದಿವ್ಯಾಲಂಕಾರ ಮಪ್ಪ ದಿವ್ಯ ಭಸಿತವ ಬಿಟ್ಟ
ಪಂಚಮಹಾಪಾತಕರಿಗೆ ಆವ ಕಾರ್ಯವೂ ಸಿದ್ಧಿಸುವುದಿಲ್ಲ.

—ಹಡಪದಪ್ಪಣ್ಣ.

ಲಿಂ. ಹಾ. ಕುಮಾರ ಶ್ರೀಗಳ

# ಅನುಭಾವ ಅಭಿಪ್ರಾಯಗಳು.

*
* *

*ಸಂಗ್ರಾಹಕರು : ಸೂರ್ಯಸಿಂಹಾಸನಾಧೀಶ್ವರ
ಶ್ರೀ ಜ. ಚ. ನಿ.

## ವೀರಶೈವ ತತ್ತ್ವ ವಿಚಾರ.

೧. ಷಣ್ಮತಗಳಲ್ಲಿ ವೀರಶೈವ ಮತವು, ಶೈವದೊಳಗಿನ ಒಂದು ಭೇದವು. ಸಪ್ತವಿಧ ಶೈವಗಳಲ್ಲಿ ಶಿಷ್ಟತಮವಾದ ಅಪ್ರಾಕೃತವೆನಿಸಿದ ವೀರಶೈವ ಮತವು ವಿಶೇಷವು. ಈ ಮತಕ್ಕೆ ಲಿಂಗಾಂಗ ಸಾಮರಸ್ಯವೆ ಅಸಾಧಾರಣ ಲಕ್ಷಣವು.

೨. ವೀರಶೈವರಿಗೆಲ್ಲ ಅಪ್ರಾಕೃತತ್ವವು ಜನ್ಮದಿಂದಲೂ ಧರ್ಮದಿಂದಲೂ ಉಂಟು ಅಪ್ರಾಕೃತತ್ವವು ಜನ್ಮದಿಂದ ಅವ್ಯಕ್ತ ಸ್ಥಿತಿಯಲ್ಲಿದ್ದು ಧರ್ಮದಿಂದ ವ್ಯಕ್ತಸ್ಥಿತಿಯನ್ನು ಹೊಂದುವುದು. ಇದರಿಂದ ಲಿಂಗಧಾರಣಾದಿಗಳು ವ್ಯರ್ಥವೆನಿಸವು. ಆಗಂತುಕರಿಗೆ ಮಾತ್ರ ಧರ್ಮದಿಂದ ಉಂಟು.

ಈ ಧರ್ಮವು ಅತಿವರ್ಣಾಶ್ರಮಾನುಸಾರವಾದುದು. ಅಂದರೆ ಬ್ರಹ್ಮನಿರ್ಮಿತಗಳಾದ ಪ್ರಾಕೃತ ವರ್ಣಾಶ್ರಮ ಧರ್ಮಗಳನ್ನು ಮೀರಿದುದು. ಶಿವನಿರ್ಮಿತ ವರ್ಣಾಶ್ರಮ ಧರ್ಮವುಳ್ಳುದು. ಆದ್ದರಿಂದ ಅಪ್ರಾಕೃತ ಬ್ರಾಹ್ಮಣ್ಯಕ್ಕೂ ತದ್ಗತ ಗುರುತ್ವಕ್ಕೂ ಹಾನಿಯಿಲ್ಲ.

---

* ಗಿರಿಯಾಪುರದ ಶ್ರೀಗುರು ಕುಮಾರಾಶ್ರಮದಲ್ಲಿರುವ ಭಾಷ್ಯಾಚಾರ್ಯ ಶ್ರೀ ಸದಾಶಿವ ಶಿವಾಚಾರ್ಯ ಸನ್ನಿಧಿಯವರಿಂದ ಸಂಗ್ರಹಿಸಿದುದು.

೩. 'ಶಿವಲಿಂಗವನ್ನು ಧರಿಸಿದೊಡನೆ ಶಿವನೇ ಆಗುವನು' ಎಂಬ ವಾಕ್ಯವು ಶಿವತ್ವದ ಅಂಕುರಾರೋಪಣ ಸೂಚಕವಾಗಿರುವುದು ಕೇವಲ ತನ್ನೊಳಗೆ ಅವ್ಯಕ್ತವಾದ ಕಿಂಚಿತ್ ಶಿವತ್ವವನ್ನೇ ಲಿಂಗಧಾರಣಾದಿ ಸಂಸ್ಕಾರವು, ಅಂಕುರ ರೂಪದಿಂದ ವ್ಯಕ್ತಗೊಳಿಸುವ ಕಾರಣ ಇದು ಅರ್ಥವಾದವಲ್ಲ. "ಶಿವ ಏವ ನ ಸಂಶಯಃ" ಎಂಬ ವಾಕ್ಯವು ಸಾರ್ಥಕವೆನಿಸುವುದು. ಶ್ರೀಗುರು ಸಂಸ್ಕಾರದಿಂದ ಬಂದ ಅಂಕುರರೂಪ ಶಿವತ್ವವನ್ನೆ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಾಂತಗತ ಲಿಂಗಾಂಗ ಸಾಮರಸ್ಯ ಮುಂತಾದವುಗಳು ಆಚಾರ ವಿಚಾರಗಳಿಂದ ಕೇವಲ ವ್ಯಕ್ತಸ್ಥಿತಿಗೆ ತರುವುದರಿಂದ ಶಿವತ್ವದ ವ್ಯಾಪಕಸ್ಥಿತಿಯು ಸ್ಪಷ್ಟಫಲವೆನಿಸುವುದು. ಅಂಕುರರೂಪ ಶಿವತ್ವವನ್ನು ವ್ಯಕ್ತಪಡಿಸುವುದರಿಂದ "ಶಿವ ಏವ ನ ಸಂಶಯಃ" ಎಂಬ ವಾಕ್ಯ ಸಮನ್ವಯಕ್ಕೆ ಭಂಗಬಾರದು.

೪. ಲಿಂಗಧಾರಿಗಳಲ್ಲಿ ಏಳು ಭೇದಗಳಿರುವವು. ಅವುಗಳಲ್ಲಿ ಏಳನೇ ಭೇದವನ್ನು ಹೊಂದುತ್ತಾನೆಂದು ಕೆಲವು ಗ್ರಂಥಗಳಲ್ಲಿ ಉಕ್ತವಾಗಿರುವುದು.

ಅಷ್ಟಾವರಣ ವಿಶಿಷ್ಟ ಪಂಚಾಚಾರವೆ ವೀರಶೈವ ಧರ್ಮವಾದ್ದರಿಂದ ಈ ಧರ್ಮವೇ ಇತರ ಲಿಂಗಧಾರಿಗಳ ಭೇದವನ್ನು ಸೂಚಿಸುವುದು. ಇದರಿಂದಾಗಿ ಇದು ವ್ಯಾವರ್ತಕ ಧರ್ಮವೆನಿಸುವುದು (ಇಲ್ಲಿ ವಿಚಾರವಿದೆ.) ಯೋಗಜ್ಞಾನ ಸಮುಚ್ಚಯವೆ ವ್ಯಾವರ್ತಕ ಧರ್ಮವು.

೫. ಲಿಂಗಧಾರಿಗಳಾದ ಅಪ್ರಾಕೃತರೆಲ್ಲರಿಗೂ ಪ್ರಾಕೃತ ವರ್ಣಾಶ್ರಮಗಳಿರುವುದಿಲ್ಲ. ಅಷ್ಟಾವರಣ, ಪಂಚಾಚಾರಾದಿ ಧರ್ಮವೃತ್ತಿಯಿಂದ ಜೀವಿಸುತ್ತಾರೆ. ಅದು ಹೇಗೆಂದರೆ: ಕೃಷಿ, ವಾಣಿಜ್ಯಾದಿ ವೃತ್ತಿಗಳನ್ನು ವೀರಶೈವರಲ್ಲಿ ಕಂಡರೂ ಗುರು, ಲಿಂಗ, ಜಂಗಮ ಸೇವಾರ್ಥವಾಗಿಯೇ ಆ ವೃತ್ತಿಗಳನ್ನು ಕೈಕೊಂಡಿರುವುದರಿಂದ ಅವು ಪ್ರಾಕೃತವೆನಿಸದೆ ಅಪ್ರಾಕೃತ ವೃತ್ತಿಯಲ್ಲಿ ಗಣನೆಯಾಗಿರುವವು.

೬. ವೀರಶೈವ ನಿಯತಿಯಂತೆ ಲಿಂಗಧಾರಿಗಳಾದ ಅಪ್ರಾಕೃತರಲ್ಲಿಯೂ ಅಷ್ಟಾವರಣವೇ ಅಂಗ; ಪಂಚಾಚಾರವೆ ಪ್ರಾಣವಾದ ಭಕ್ತತ್ವವು ಉಂಟು.

೭. ಗುರು, ಲಿಂಗ, ಜಂಗಮ–ಈ ತ್ರಿವರ್ಗಕ್ಕೂ ಅಷ್ಟಾವರಣ ವಿಶಿಷ್ಟ ಭಕ್ತತ್ವವುಂಟು.

೮. ಗುರು, ಲಿಂಗ, ಜಂಗಮವು–ಪರಶಿವ ಅಥವಾ ಪರಬ್ರಹ್ಮ ತತ್ತ್ವದ ಪರಿಣಾಮವು. ಲಿಂಗ, ಗುರು, ಜಂಗಮತ್ರಯದಲ್ಲಿ ಉಪಾಸಕೋಪಾಸ್ಯಭೇದವು ಕ್ರಮದಿಂದ ಸಂದರ್ಭಾನುಸಾರ ತೋರುವುದು. ಹೇಗಂದರೆ ಲಿಂಗ, ಗುರು, ಜಂಗಮತ್ರಯಗಳಲ್ಲಿ ಒಂದೊಂದು ಮೂರು ಮೂರು ಭೇದವಾಗಿ ನವವಿಧವಾದುದು ಶಾಸ್ತ್ರಾನುಭವ ಸಮ್ಮತವಾಗಿರುವುದರಿಂದ ಲಿಂಗದೊಳಗಿನ ಲಿಂಗಕ್ಕೆ ಗುರುವಿನಲ್ಲಿ ತೋರಿದ ಲಿಂಗವು

ಉಪಾಸ್ಯವಾದುದು. ಅದಕ್ಕಿಂತಲೂ ಜಂಗಮದೊಳಗಿನ ಲಿಂಗವು ಶ್ರೇಷ್ಠ (ಉಪಾಶ್ಯ) ವಾದುದು. ಲಿಂಗದೊಳಗಿನ ಗುರುತ್ವಕ್ಕಿಂತಲೂ ಗುರುವಿನಲ್ಲಿರುವ ಗುರುತ್ವವು ಅಧಿಕ. ಅದಕ್ಕಿಂತಲೂ ಜಂಗಮದೊಳಗಿನ ಗುರುತ್ವವು ಶ್ರೇಷ್ಠ. ಲಿಂಗದೊಳಗಿನ ಜಂಗಮತ್ವಕ್ಕಿಂತಲೂ ಗುರುವಿನಲ್ಲಿರುವ ಜಂಗಮತ್ವವು ಶ್ರೇಷ್ಠವು. ಅದಕ್ಕಿಂತ ಜಂಗಮದೊಳಗಿನ ಜಂಗಮತ್ವವು ಅಧಿಕವು. ಈ ಕ್ರಮವನ್ನನುಸರಿಸಿ ಉಪಾಸಕೋಪಾಸ್ಯ ಭಾವವನ್ನು ತಿಳಿಯತಕ್ಕುದು. ಆದರೂ ಒಂದೊಂದು ವಸ್ತುವಿನಲ್ಲಿರತಕ್ಕ ಲಿಂಗ, ಗುರು, ಜಂಗಮ ಇವು ಸಂದರ್ಭಾನುಸಾರವಾಗಿ ಪೂಜಕ ಪೂಜ್ಯತ್ವವನ್ನು ಹೊಂದುವವು. ಇವುಗಳಿಗೆ ಕ್ರಮವಾಗಿ ಉಪಾಸಕೋಪಾಸ್ಯಭಾವವು ಇರುವುದು. ಸಂದರ್ಭಾನುಸಾರವಾಗಿ ಭಕ್ತವರ್ಗದ ಭಕ್ತಸ್ವರೂಪವಾದ ಲಿಂಗದಲ್ಲಿರುವ ಜಂಗಮಕ್ಕಿಂತಲೂ ಗುರುವಿನಲ್ಲಿರುವ ಲಿಂಗವು ಅಧಿಕವು. ಗುರುವಿನಲ್ಲಿರುವ ಗುರು ಜಂಗಮಕ್ಕಿಂತಲೂ ಜಂಗಮದಲ್ಲಿರುವ ಜಂಗಮವು ಅಧಿಕವಾದುದು ಮತ್ತು ಭಕ್ತವರ್ಗದ ಭಕ್ತನಾದರೂ ಯೋಗ್ಯವೃತ್ತಿಯಿಂದ ಗುರು, ಲಿಂಗ, ಜಂಗಮ ಸ್ವರೂಪನಾಗುವನು. ಗುರು, ಜಂಗಮರು ಯೋಗ ರೂಢಿಯಿಂದ ಗುರು ಲಿಂಗ ಜಂಗಮ ಸ್ವರೂಪರಾಗುವರು. ತತ್ಸ್ವರೂಪವನ್ನೈದದೆ ತತ್ತದ್ದೇವತಾರಾಧನೆ ಮಾಡಲಿಕ್ಕೆ ಬರುವುದಿಲ್ಲ. ಆದ್ದರಿಂದ ಪದಾರ್ಥ ತನುವೆ ಕಾಲಾನುಗುಣವಾಗಿ ಪ್ರಸಾದತನು ಆಗುವಂತೆ ಭಕ್ತನಾದರೂ ಯೋಗ ವೃತ್ತಿಯಿಂದ ಗುರು ಲಿಂಗ ಜಂಗಮ ಸ್ವರೂಪವನ್ನು ಹೊಂದಿ ಸಿದ್ಧನೆನಿಸುವನು. ಇದರಂತೆ ಗುರುವರ್ಗದಲ್ಲಿ ಜನಿಸಿರುವವರು, ಗುರುತ್ವ ಸಂಸ್ಕಾರದಿಂದ ಯೋಗರೂಢಿಯಿಂದ ಗುರುಲಿಂಗ ರೂಪವನ್ನು ಹೊಂದುವರು. ಮರಳಿ ಅವರಿಗೇ ಸಂಸ್ಕಾರ ವಿಶೇಷವಾದರೆ ರೂಢಿಯಿಂದಲೂ ಗುರು ಲಿಂಗ ಜಂಗಮ ಸ್ವರೂಪರಾಗುವರು. ಇವರಾದರೂ ಮೇಲ್ಕಂಡಂತೆ ಸಾಧಕ ಸ್ಥಿತಿಯಲ್ಲಿದ್ದು ಉನ್ನತಾವಸ್ಥೆಯನ್ನು ಹೊಂದುತ್ತ ಮುಂದೆ ಸಿದ್ಧ ಸ್ಥಿತಿಯನ್ನು ಹೊಂದುವರು. ಈ ಪ್ರಕಾರವಾಗಿ ಸಂಸ್ಕಾರವಾಗಿ ಅನುಷ್ಠಾನ ಉಪಾಸಕೋಪಾಸ್ಯ ವ್ಯವಸ್ಥೆಯು.

೯. ಗುರು ಜಂಗಮರಿಗೆ ಮತ್ತೊಂದನ್ನಾಶ್ರಯಿಸಿ ಪೂಜ್ಯತ್ವವಿಲ್ಲ. ಅವರು ಸ್ವಯಂ ಪೂಜ್ಯರು. ನಿತ್ಯ ಮುಕ್ತರು. ಜಗದ್ಧಿತಾರ್ಥವಾಗಿ ಸ್ವಸ್ವರೂಪ ಚಿತ್ಕಲಾ ಲಿಂಗವನ್ನು ಉಪಾಸಿಸುವುದುಂಟು. ವ್ಯಾಪಕವಾದ ಪರಲಿಂಗಕ್ಕೆ ಗುರುಲಿಂಗ ಜಂಗಮವೆಂತಲೂ ಪರ್ಯಾಯ ನಾಮಗಳುಂಟು. ಇದನ್ನೇ ಭೇದೋಪಭೇದಗಳಿಂದ ಸಮಯೋಚಿತವಾಗಿ ಸ್ವಸ್ವರೂಪವಾಗಿ ವ್ಯಾಪ್ಯರಾದ ಗುರು ಜಂಗಮರು ಪೂಜಿಸುವರು.

ಗುರು ಜಂಗಮರು ಪೂಜ್ಯರಾಗಬೇಕಾದರೆ ವ್ಯಾಪಕವಾದ ತಮ್ಮ ನಿಜ ಸ್ವರೂಪವಾದ ಮೂಲ ಲಿಂಗವನ್ನು ತಂತಮ್ಮ ನಿರಾಭಾರಿ–ಸಾಭಾರಿ ಗುರುಗಳ ಪ್ರಯತ್ನ ವಿಶೇಷದಿಂದ ಸಂಸ್ಕರಿಸಿ ಲಿಂಗಾಕಾರಗೊಳಿಸಿ, ಅಂಗತ್ರಯದಲ್ಲಿ ಲಿಂಗತ್ರಯವನ್ನು

ಸಂಬಂಧಗೊಳಿಸಿ ಆಜ್ಞಾಪಿಸಿದಂತೆ ಆಚರಿಸುವುದರಿಂದ ಪೂಜ್ಯರೆನಿಸುವರು. ವಿಶುದ್ಧ ಸತ್ವಸ್ವರೂಪೋಪಾಧಿಯಿಂದೊಪ್ಪುವ ಗುರುಮೂರ್ತಿಯು ಮಲಿನ ಸತ್ವಸ್ವರೂಪ ವಿದ್ಯೋಪಹಿತ ಪುರುಷಾಕಾರ ಶರೀರದಲ್ಲಿದ್ದು ಜೀವಕಲೆಯನ್ನು ಸಂಸ್ಕರಿಸಿ ತಮಃ ಪ್ರಧಾನ ಪ್ರಕೃತಿ ಸ್ವರೂಪ ಶಿಲಾಮಯವಾದ ಲಿಂಗಾಕಾರದಲ್ಲಿ ಸ್ಥಾಪಿಸೋಣದರಿಂದ ಲಿಂಗವು ಪೂಜ್ಯವಾಗಿರುವುದು. ಅಂದರೆ ಗುರು ಜಂಗಮರಿಂದಲೆ ಲಿಂಗಕ್ಕೆ ಪೂಜ್ಯತ್ವವು ಬಂದಿರುವುದೆಂದು ಸ್ಪಷ್ಟವೆನಿಸುವುದು.

ಚತುರ್ವಿಧ ವಾಗ್ವ್ಯವಹಾರ ಪರಬ್ರಹ್ಮಜ್ಞಾನ ಅಧಿಕಾರವುಳ್ಳ ಜೀವ ಚೈತನ್ಯ ವಿಶಿಷ್ಟ ಮನುಷ್ಯರಲ್ಲಿ ಬದ್ಧತ್ವ ಮುಕ್ತತ್ವವಿದ್ದಂತೆ-ಪಶುಪಕ್ಷ್ಯಾದಿ ಮೃತ್ಪಾಷಾಣಾದಿಗಳಲ್ಲಿ ಇಂಥ ಬಂಧತ್ವ ಮುಕ್ತತ್ವವಿರುವುದಿಲ್ಲ. ತಮಃ ಪ್ರಧಾನ ಪ್ರಕೃತಿಯಿಂದ ತೋರಿದ ಜಡಶಿಲೆಯಲ್ಲಿ ಪುರುಷನ ಚೈತನ್ಯಗತವಾಗಿರುವ ಚಿತ್ಕಲೆಯನ್ನು ಪ್ರತಿಷ್ಠಿಸಲು ಆಯಾ ವ್ಯಕ್ತಿಗೆ ಅದು ಪೂಜ್ಯವಾದ ಲಿಂಗವಿರುವುದು. ಚಿತ್ಕಲಾ ಪ್ರತಿಷ್ಠಿತವಾಗುವುದಕ್ಕಿಂತಲೂ ಪೂರ್ವದಲ್ಲಿ ಶಿಲಾಮಯ ಲಿಂಗಾಕಾರದಲ್ಲಿ ಈ ಬಗೆಯ ಬಂಧತ್ವದ ವ್ಯವಹಾರವೇ ಇಲ್ಲವ್ದರಿಂದ ಆ ಲಿಂಗಕ್ಕೆ ಮೋಕ್ಷಾಧಿಕಾರವೇ ಇಲ್ಲ.

ಗುರು ಜಂಗಮರಿಗೆ ಸ್ವಾಮಿತ್ವ ಸ್ವತಂತ್ರತ್ವದ ಅಧಿಕಾರವು, ಗುರುತ್ವ ಜಂಗಮತ್ವ ಸಂಸ್ಕಾರವಾಗುವದಕ್ಕಿಂತಲು ಮೊದಲು ಅವ್ಯಕ್ತಸ್ಥಿತಿಯಲ್ಲಿದ್ದು ಸಂಸ್ಕಾರ ವಿಶೇಷದಿಂದ ಸ್ಪಷ್ಟವೆನಿಸಿರುವ ಅಂದರೆ ವ್ಯಕ್ತವಾಗಿರುವ ಸ್ಥಿತಿಯೇ ಮುಕ್ತಿಯೆನಿಸುವುದು. ವಿಸ್ಮೃತ ಸ್ಥಿತಿಯಲ್ಲಿದ್ದ ಬದ್ಧತ್ವವು ನಾಶವಾಗುತ್ತಾಗುತ್ತ ವ್ಯಾಪಕ ಸ್ಥಿತಿಯ ಸ್ವಾಮಿತ್ವ ಸ್ವತಂತ್ರತ್ವವುಂಟಾದದ್ದೇ ಮುಕ್ತತ್ವವೆನಿಸುವುದು. ಗುರು ಜಂಗಮರಲ್ಲಿ ಅಪ್ರಾಕೃತ ಪುರುಷತ್ವವಿದ್ದಂತೆ ಲಿಂಗದಲ್ಲಿಯಾದರೂ ಅಪ್ರಾಕೃತ ಶಿಲಾತ್ವವಿರುವುದು. ಪುರುಷಾಕಾರದ ಗುರು ಜಂಗಮಾದಿಗಳ ಪ್ರಯತ್ನದಿಂದಲೆ ಶಿಲೆಯಲ್ಲಿದ್ದ ಶಿಲಾಭಾವವು ಹೋಗಿ ಶಿವತ್ವವುಂಟಾಗುವುದು. ಆ ಶಿವತ್ವವು ವ್ಯಾಪಕಸ್ಥಿತಿಗೆ ಬರಬೇಕಾದರೆ ಆ ಭಕ್ತನು ಗುರು ಜಂಗಮರ ಪಾದೋದಕ ಪ್ರಸಾದಾದಿಗಳಿಂದ ಲಿಂಗದಲ್ಲಿ ವ್ಯಾಪಕತ್ವವನ್ನು ತಂದುಕೊಂಡು ತದ್ವಾರಾ ವ್ಯಾಪಕನಾಗುವುದೇ ಮುಕ್ತಿಯು. ಸಾರಾಂಶವಿದು: ಗುರು ಜಂಗಮರು ಅನ್ಯವಾದ ಲಿಂಗಾಶ್ರಯವನ್ನು ಮಾಡದೆ ಸ್ವಸ್ವರೂಪ ಲಿಂಗಾರ್ಚನಾದಿಗಳಿಂದ ಮುಕ್ತರಾಗುವರು. ಲಿಂಗವು ಗುರು ಜಂಗಮರಿಂದ ಸ್ಥಾಪಿಸಲ್ಪಟ್ಟು ಗುರು ಜಂಗಮರ ಕೃಪೆಯಿಂದಲೆ ವ್ಯಾಪಕ ಸ್ಥಿತಿಯನ್ನು ಹೊಂದಿ ತನ್ನನ್ನು ಆಶ್ರಯಿಸಿದ ಭಕ್ತನಿಗೆ ಮುಕ್ತಿಯನ್ನುಂಟು ಮಾಡುವುದು.

೧೦. ಕ್ರಿಯಾಜ್ಞಾನರೂಪ ಗುರು. ಕ್ರಿಯಾರೂಪಲಿಂಗ. ಜ್ಞಾನರೂಪ ಜಂಗಮ. ಹೀಗೆ ಗುರು–ಲಿಂಗ–ಜಂಗಮ ಶಬ್ದದ ಅನ್ವರ್ಥಕವಿರುವುದು. ಮತ್ತು ಭಕ್ತರ ಅನಿಷ್ಟವನ್ನು ಪರಿಹರಿಸಿ ಕೊಡುವುದರಿಂದಲೂ 'ಇಷ್ಟಿ' ಅಂದರೆ ಪೂಜಾ; ಆ ಪೂಜೆಯಿಂದ ನಿರಂತರ ಆರಾಧಿಸಲ್ಪಡುವುದರಿಂದಲೂ ಇಷ್ಟಲಿಂಗವೆಂದು ಅನ್ವರ್ಥಕ

ವಾಗಿರುವುದು. ಮಲತ್ರಯ ರೂಪ ಅಜ್ಞಾನಾಂಧಕಾರವನ್ನು ದೂರಮಾಡಿ ಶಿವಾದ್ವೈತರೂಪ ನಿತ್ಯಾನಂದವನ್ನುಂಟುಮಾಡಿಕೊಡುವುದಕ್ಕೆ ಕರ್ತೃವಾದ್ದರಿಂದಲೂ ಸಂಶಯ ನಿರಸನದ್ವಾರದಿಂದ ನಿತ್ಯ ಮುಕ್ತಿಯನ್ನುಂಟುಮಾಡುವನಾದ್ದರಿಂದಲೂ ಬಾಹ್ಯಾಂತರಗಳಲ್ಲಿ ಹರಿದಾಡುವ ಮನಸ್ಸನ್ನು ಭೇದಿಸಿ ಬೋಧಿಸುವ ಘನ ಸಾಮರ್ಥ್ಯವುಳ್ಳವನಾದ್ದರಿಂದಲೂ ಗುರುವೆಂಬ ಶಬ್ದವು ಅನ್ವರ್ಥಕವಾಗಿರುವುದು.

ತನ್ನ ಪ್ರಕಾಶ ಸಾನ್ನಿಧ್ಯಮಾತ್ರದಿಂದ ಶಿವಶಕ್ತ್ಯಾತ್ಮಕ ಪ್ರಪಂಚವನ್ನು ಬೆಳಗಿ ಅನಿಷ್ಟವನ್ನು ಪರಿಹರಿಸಿ ಇಷ್ಟಾರ್ಥವನ್ನುಂಟುಮಾಡಿ ಅಂತರ್ಬಹಿರ್ಮನಸ್ಸನ್ನು ಭೇದಿಸುವ ಸ್ವಯಂಪ್ರಕಾಶ ಸ್ವರೂಪವೇ ಜಂಗಮದ ಅನ್ವರ್ಥಕವಾಗಿರುವುದು.

ಸಚ್ಚಿದಾನಂದತ್ವವು ಲಿಂಗ-ಗುರು-ಜಂಗಮ ಈ ತ್ರಿವರ್ಗದ ಅಸಾಧಾರಣ ಲಕ್ಷಣಗಳಾಗಿದ್ದರೂ ಪರಸ್ಪರ ಭಿನ್ನಾಭಿನ್ನ ಲಕ್ಷಣಗಳಿಂದ (ಇಲ್ಲಿ ಅಭಿನ್ನವೆಂದರೆ ಅನ್ಯೋನ್ಯವೆಂದರ್ಥ). ಜಗದ್ಧಿತಾರ್ಥವಾಗಿ ದಿವ್ಯ ಚೇಷ್ಟೆಯಿಂದ ಶೋಭಿಸುವವು.

೧೧. ಅಷ್ಟಾವರಣವೇ ಅಂಗವಾಗಿ ಪಂಚಾಚಾರವೇ ಪ್ರಾಣವಾಗಿ ಶೋಭಿಸುವ ಅಂಗನೇ ಭಕ್ತಶಬ್ದವಾಚ್ಯನು. ಶಿವನು, ' ನಾನು ಭಕ್ತನ ಕೇವಲ ಚೈತನ್ಯ ಸ್ವರೂಪವಾದ ಶಿವಕಲೆಯಿಂದಲೂ ಶಿಲಾಮಯವಾದ ಲಿಂಗಾಕಾರದಲ್ಲಿ ಶೋಭಿಸಿ ಪೂಜ್ಯತೆಯ ಪಡೆದಿರುವದರಿಂದ ಆ ಭಕ್ತನ ಜಿಹ್ವಾದ್ವಾರದಿಂದಲೇ ಲಿಂಗರೂಪಿಯಾಗಿ ತೃಪ್ತಿಯನ್ನು ಹೊಂದುವೆನೆಂದು ಹೇಳುವುದೇ ಇದು ಪರ್ಯವಸಿತಾರ್ಥವು.

೧೨. ಅಪ್ರಾಕೃತ ಮುಮುಕ್ಷುಗಳಾದ ಗುರುಜಂಗಮೇತರ ಭಕ್ತವಂಶೀಯರೂ ಆಗಂತುಕರೂ ತಂತಮ್ಮ ಉದ್ಧಾರತೆಯ ದೆಸೆಯಿಂದ ಸ್ವಸ್ವರೂಪ ಲಿಂಗವನ್ನೂ ಆ ಲಿಂಗವನ್ನು ಕರುಣಿಸಿದ ಗುರುಮೂರ್ತಿಗಳನ್ನೂ ಆಲಿಂಗ ಮುಖವಾದ ಜಂಗಮ ಮೂರ್ತಿಗಳನ್ನೂ ಗುರು ಲಿಂಗಜಂಗಮ ಪೂಜಾಧಿಕಾರ ಪ್ರದಾಯಕ ವ್ರತರೂಪ ಭಸ್ಮ ರುದ್ರಾಕ್ಷಗಳ ಧಾರಣವನ್ನೂ ಇಷ್ಟಲಿಂಗವನ್ನು ಜಾಗ್ರತೆಗೊಳಿಸುವ ಸಾಧನವಾದ ಪಂಚಾಕ್ಷರ ಮಂತ್ರ ಜಪವನ್ನೂ ಗುರುಲಿಂಗ ಜಂಗಮರೆಂಬ ಇಷ್ಟ ದೇವತೆಗಳ ಪಾದೋದಕ-ಪ್ರಸಾದರೂಪಫಲವನ್ನೂ! ಭಕ್ತಿಯಿಂದ ಅರ್ಚನಾದಿಗಳ ದ್ವಾರಾ ಸೇವಿಸುವರು.

ಗುರು ಜಂಗಮರಾದರೂ ತಂತಮ್ಮ ಸಾಭಾರಿ ಗುರುಗಳಿಂದ ಮೂರ್ತೀಕರಿಸಿ. ಕೊಡಲ್ಪಟ್ಟ ಸ್ವಸ್ವರೂಪ ಚಿತ್ಕಲಾ ಲಿಂಗವನ್ನು ಪೂಜ್ಯ ಪೂಜಕ ಕ್ರಮವನ್ನತಿಕ್ರಮಿಸದೆ ಗುರು ಜಂಗಮರಿಂದ ಕೊಡಲ್ಪಟ್ಟ ಭಸ್ಮ ರುದ್ರಾಕ್ಷಧಾರಣವನ್ನು ಮತ್ತು ಪಂಚಾಕ್ಷರ ಜಪವನ್ನು ಗುರುಲಿಂಗ ಜಂಗಮರ ಪಾದೋದಕ ಪ್ರಸಾದಗಳನ್ನು ಜಗದ್ಧಿತಾರ್ಥವಾಗಿ ಪವಿತ್ರ ಲೀಲೆಯಿಂದ ಅಪ್ರಾಕೃತ ಮುಮುಕ್ಷುಗಳೆಂಬಂತೆ ಸಿದ್ಧರಾದವರು ಅರ್ಚನಾದಿ ದ್ವಾರದಿಂದ ಸೇವಿಸುವರು. ಇವರು ಸಹ ಮುಂದೆ

ಆಚರಣೆಯ ವಿಶೇಷದಿಂದ ಸಿದ್ಧರಾಗುವರು. ಇದರಿಂದ ಜಂಗಮ ಸಂಪ್ರದಾಯಕರ ಮತ್ತು ಗುರು ಜಂಗಮೇತರ ವಂಶೀಯರ ಅಷ್ಟಾವರಣಾಚರಣೆಯಲ್ಲಿ ತಾರತಮ್ಯ ಭಾವವುಂಟೆಂದು ಸ್ಪಷ್ಟವಾಗಿ ಕಂಡುಬರುವುದು.

ಸಾರಾಂಶವಿದು : ಲಿಂಗಧಾರಿಗಳಾದ ಇತರರು ಧರಿಸಿದ ಲಿಂಗಕ್ಕೂ ವೀರಶೈವರು ಧರಿಸಿದ ಲಿಂಗಕ್ಕೂ ಯಾವ ತಾರತಮ್ಯವುಂಟೋ ಅವೇ ತಾರತಮ್ಯವು ವೀರಶೈವರಲ್ಲಿಯ ಪೂಜ್ಯ ಪೂಜಕರು ಧರಿಸಿರುವ ಲಿಂಗದಲ್ಲಿಯೂ ಉಂಟು. ಎಲ್ಲರೂ ಧರಿಸಿದ ಲಿಂಗದಲ್ಲಿ ತಾರತಮ್ಯವಿಲ್ಲದೆ ಒಂದೇ ಒಂದು ಎಂದು ಹೇಳಲಿಕ್ಕೆ ಬರುವುದಿಲ್ಲ. ಗುರು ಜಂಗಮರನ್ನು ಅಗಲಿದರೆ ಅಥವಾ ಅಪ್ಪಣೆಯನ್ನು ಮೀರಿದರೆ ಅವರಂತೆ ಲಿಂಗವನ್ನಗಲಿದರೆ ಅಪೂಜ್ಯತೆಯುಂಟಾಗುತ್ತದೆ.

೧೩. ಗುರುವು ದೀಕ್ಷಾಕಾಲದಲ್ಲಿ ಶಿಷ್ಯನ ಮಸ್ತಕದಲ್ಲಿದ್ದ ಚಿತ್ಕಲೆಯನ್ನು ಲಿಂಗದಲ್ಲಿ ಸ್ಥಾಪಿಸಿ ಲಿಂಗದಲ್ಲಿದ್ದ ಶಿವಕಲೆಯನ್ನು ಶಿಷ್ಯನ ಪ್ರಾಣದಲ್ಲಿ ಸ್ಥಾಪಿಸಿ ಎರಡನ್ನು ಏಕೀಕರಿಸಿದ ನಂತರ ಲಿಂಗವು ಭಕ್ತನ ಅಂಗವನ್ನು ಬಿಟ್ಟು ಅಗಲಿ ಹೋದಲ್ಲಿ ಪರಸ್ಪರ ಐಕ್ಯತೆಗೂ-ಗುರ್ವಾಜ್ಞಾಪಾಲನೆಗೂ ಭಂಗ ಬರುವುದರಿಂದ ಗುರುವಿನ ಆಜ್ಞೆಗೂ ಲಿಂಗಕ್ಕೂ ಅಪೂಜ್ಯತೆ ಯುಂಟಾಗುವುದಲ್ಲದೆ ಲಿಂಗವನ್ನಗಲಿದ ಸಾಧಕನಿಗೆ ಭಕ್ತತ್ವದಿಂದ ಪಾತಿತ್ಯವುಂಟಾಗುವುದು. ಲಿಂಗವು ಭಕ್ತನ ದೇಹವನ್ನಾಶ್ರಯಿಸಿಕೊಂಡು ಪೂಜ್ಯತ್ವವನ್ನು ಹೊಂದಿರುವುದು. ಭಕ್ತ ದೇಹದಿಂದಗಲಿ ಲಿಂಗವು ಸ್ವತಂತ್ರಿಸಿ ಪೂಜಾರ್ಹವಾಗಲಾರದು. ಭಕ್ತ ದೇಹಸಾಪೇಕ್ಷೆಯುಳ್ಳ ಲಿಂಗವು ಅಗಲಿ ಹೋದಲ್ಲಿ ಲಿಂಗತ್ವವು ಲುಪ್ತವಾಗುವುದು. ಗುರುಕುಲೋತ್ಪನ್ನ ಗುರುಕರಸಂಜಾತ ಗುರುಕುಲವಾಸಿ ಸಾಧಕ ಸ್ಥಿತಿಯ ಗುರು ಜಂಗಮರಿಗೆ ಸ್ವಸ್ವರೂಪವಾದ ಗುರುದತ್ತ ಲಿಂಗವು ವಿಯೋಗವಾದಲ್ಲಿ ಗುರ್ವಾಜ್ಞಾ ಪೂರ್ಣಸಿದ್ಧತೆಯ ಉಳುಮೆಯ ಮೂಲಕ ಕ್ರಿಯಾಲೋಪವೆನಿಸಿದ್ದರಿಂದ ಅಪೂಜ್ಯತೆಯೂ ಲಿಂಗಕ್ಕೆ ಭ್ರಷ್ಟತೆಯೂ ಪ್ರಾಪ್ತವಾಗುವುದು. ಪೂರ್ಣಸಿದ್ಧತೆಯನ್ನು ಹೊಂದಿದವರ ಶರೀರದಲ್ಲಿದ್ದ ಲಿಂಗಕ್ಕೂ ಪ್ರಾಣಕ್ಕೂ ಎಂದೂ ವಿಯೋಗವಾಗಲಾರದು. ಇದರಿಂದ ಸಾಧಕ ದೆಸೆಯಲ್ಲಿ ಅವಧಾನಾದಿಗಳ ಅವಶ್ಯಕತೆ ಬೇಕಾಗಿದ್ದರೂ ಸಿದ್ಧದೆಸೆಯಲ್ಲಿ ವಿಯೋಗವಿಲ್ಲದ್ದರಿಂದ ಅವಧಾನಾದಿಗಳ ಅವಶ್ಯಕತೆಯಿಲ್ಲ. ಲಿಂಗಮೂರ್ತಿಯಲ್ಲಿ ಅವಧಾನಕ್ಕೆ ಅವಕಾಶವೇ ಇಲ್ಲದ್ದರಿಂದ ಸಾಧ್ಯ ಸಾಧಕದೆಸೆಯು ಇಲ್ಲವು. ಭಕ್ತಿಯಲ್ಲಿ ವ್ಯಾಪ್ಯವ್ಯಾಪಕತ್ವವು ಸಿದ್ಧ ಸಾಧಕತ್ವವು ಅವಧಾನಾದಿಗಳ ಪ್ರಯತ್ನದಿಂದ ಉಂಟಾಗಿ ತೋರುವಲ್ಲಿ ಗುರು ಜಂಗಮರಲ್ಲಿ ತೋರುವ ಸ್ಥಿತಿಯನ್ನು ಹೇಳುವುದೇನು ?

೧೪. ಪೂಜಕರಾದ ಅಷ್ಟಾವರಣ-ಪಂಚಾಚಾರವುಳ್ಳ ವೀರಶೈವರಿಗೆಲ್ಲ ಪಾದೋದಕವು ಅವಶ್ಯವಾಗಿ ಬೇಕು. ಅದರಂತೆ ಪೂಜ್ಯರಾದ ಗುರುಲಿಂಗ ಜಂಗಮಗಳಿಗಾದರೂ ಬೇಕು. ಲಿಂಗಕ್ಕೆ ಹೇಗೆ ಬೇಕೆಂದರೆ : ಭಕ್ತನಿಚ್ಛೆಯೇ ಲಿಂಗದಿಚ್ಛೆಯು.

ಭಕ್ತನ ಶಿವವರವುನೆಯು ಚಿತ್ಕಲಾ ವಸ್ತುವೇ ಲಿಂಗವು. ಅದೇ ಅವನ ಕರಗತ ವಾದದ್ದು. ಲಿಂಗವು ಭಕ್ತನನ್ನಾಶ್ರಯಿಸಿಕೊಂಡೇ ಇರಬೇಕಾಗುತ್ತದೆ. ಭಕ್ತನು ಲಿಂಗ ಭೋಗೋಪಭೋಗಿಯಾಗಿರುತ್ತಾನೆ. ಅನ್ಯೋನ್ಯಾಪೇಕ್ಷೆಯಿರುವುದರಿಂದ ಭಕ್ತನಿಗೆ ಪಾದೋದಕ ಬೇಕಾಗಿದ್ದರೆ ಲಿಂಗಕ್ಕಾದರೂ ಬೇಕು. ಇದರಂತೆ ಗುರು ಜಂಗಮರಿಗೂ ಅವಶ್ಯ ಅವರವರ ಸ್ವಸ್ವರೂಪವಾದ ಲಿಂಗಕ್ಕೂ ಬೇಕು.

ಪಾದೋದಕವು ಸಂಬಂಧದಿಂದ ದಶವಿಧವಾಗಿರುವುದು. ಮುಖ್ಯವಾಗಿ ತ್ರಿವಿಧ ವೆನಿಸಿರುವುದು. ಇದು ಸಹಜವು.

೧೫. ಗುರುಲಿಂಗ ಜಂಗಮರಲ್ಲಿ ಅಂತಃಪ್ರಭೇದಗಳಿರುವುದರಿಂದ ಲಿಂಗದಲ್ಲಿದ್ದ ಗುರು ಜಂಗಮರ ಸಾನ್ನಿಧ್ಯದಿಂದ ಅನಿರ್ವಾಹ ಪಕ್ಷದಲ್ಲಿ ಸಂಬಂಧಾಚರಣೆಯಿಂದ ಪಾದೋದಕ ಪ್ರಸಾದಗಳ ನಿರ್ವಾಹವಾಗುತ್ತದೆ.

೧೬. ಮುಖ್ಯವಾಗಿ ಗುರು ಪಾದೋದಕ ಲಿಂಗ ಪಾದೋದಕ ಜಂಗಮ ಪಾದೋದಕಗಳೆಂದು ಮೂರು ಪ್ರಕಾರಗಳು. ಇವು ಒಂದೊಂದೇ ಮೂರು ಮೂರು ಭೇದಗಳಿಂದ ಕೂಡಿ ನವವಿಧವಾಗಿರುವುದು. ಇವೆಲ್ಲವುಗಳ ಸಮಷ್ಟಿಯಾದುದೇ ಮಹಾ ಪಾದೋದಕ ಜಂಗಮ ಪಾದೋದಕವು. ಇದು ಗಣನೆಯಲ್ಲಿ ಸೇರಲು ದಶ ವಿಧವಾಯಿತು. ಈ ದಶವಿಧ ಪಾದೋದಕದಲ್ಲಿ ಸಂಬಂಧದಿಂದಲೂ ಸಹಜದಿಂದಲೂ ಅನೇಕ ರೀತಿಯಿಂದ ಸಂಬಂಧವುಂಟು. ಸಹಜವು ಒಂದೇ ಪ್ರಕಾರವಿದ್ದು ಸಂಬಂಧ ದಿಂದ ಅನೇಕ ವಿಧವಾಗಿರುವುದು. ಸಂದರ್ಭಾನುಸಾರ ಸಂಬಂಧವನ್ನೂ ಮತ್ತೆ ಅನೇಕ ಪ್ರಕಾರ ಮಾಡುವುದುಂಟು. ಮೂರು ಪಾದೋದಕಗಳಲ್ಲಿ ಒಂದೊಂದರೊಳಗೆ ಮೂರು ಮೂರು ಲಿಂಗಗಳ ಸಂಬಂಧ ಮತ್ತು ಪರತರ ಶಿವಲಿಂಗ ಸಂಬಂಧ; ಇವು ಗಳಿಂದ ದಶವಿಧವಾಗಿರುವುದು. ಪಂಚಾಂಗುಲಿಗಳಿಂದ ಅಂದರೆ ಸೂಚಕ ಮುದ್ರೆ ಯಿಂದ ಎರೆದು ಸ್ವೀಕರಿಸುವುದೇ ದೀಕ್ಷಾಪಾದೋದಕ ಅಥವಾ ಗುರು ಪಾದೋದಕ; ಶಂಖಮುದ್ರೆಯಲ್ಲಿ ಲಿಂಗದ ಮೇಲೆ ಅಭಿಷೇಕ ಮಾಡಿ ಪೂಜಿಸಿದ ಪಾದೋದಕವನ್ನು ಲಿಂಗವನ್ನೆತ್ತಿ ಸ್ವೀಕರಿಸುವುದೆ ಶಿಕ್ಷಾಪಾದೋದಕ ಅಥವಾ ಲಿಂಗಪಾದೋದಕ (ಕ್ರಿಯಾ ಪಾದೋದಕ)ವೆಂದು ಪರ್ಯಾಯನಾಮಗಳು. ಜಿಹ್ವಾಗ್ರಕ್ಕೆ ಪಾತ್ರೆ ಯನ್ನೆತ್ತಿ ಇಲ್ಲವೆ ಚಿನ್ಮುದ್ರೆಯಿಂದಾಗಲಿ ಕುರುಂಗ ಮುದ್ರೆಯಿಂದಾಗಲಿ ಮುಟ್ಟಿ ಸ್ವೀಕ ರಿಸುವುದೇ ಮೋಕ್ಷ ಪಾದೋದಕ ಅಥವಾ ಜ್ಞಾನ ಪಾದೋದಕ (ಜಂಗಮ ಪಾದೋ ದಕ)ವೆಂದು ಹೆಸರುಗಳು. ಪಂಚಾಂಗುಲಿಗಳ ಕೂಟದಲ್ಲಿ ನಿರಾಭಾರಿಗಳು ಸಮಷ್ಟಿ ರೂಪ ಪ್ರಣವನನ್ನು ಭಾವಿಸಿ ಅದೇ ತನ್ನ ಗುರುವೆಂಬ ಭಾವನೆಯಿಂದ ಸ್ವೀಕರಿಸುವ ಕಾರಣ ಗುರು ಪಾದೋದಕವು; ಹಸ್ತದಲ್ಲಿಯೆ ಲಿಂಗ ಸಂಬಂಧವಿರುವುದರಿಂದಲೂ ಲಿಂಗಾಭಿಷಿಕ್ತವಾದ್ದರಿಂದಲೂ ಲಿಂಗ ಪಾದೋದಕವು; ಜಿಹ್ವಾಗ್ರದಲ್ಲಿ ಜಂಗಮವಿರು

ವುದರಿಂದ ಜಂಗಮಕ್ಕೆ ಮುಟ್ಟಿಸಿ ತೆಗೆದುಕೊಳ್ಳುವುದರಿಂದ ಜಂಗಮ ಪಾದೋದಕ ವೆಂಬ ಹೆಸರು.

೧೭. ಭ್ರಮಾರೂಪ ಸಂಸ್ಕಾರಕ್ಕೆ ಕಾರಣವಾದ ಕಲ್ಪನೆಯೆ ಪದಾರ್ಥ ಲಕ್ಷಣವು ಅರ್ಥಾತ್ ಕಲ್ಪಿತ ತತ್ತ್ವವೇ ·ಪದಾರ್ಥ ಲಕ್ಷಣವು. ಸಚ್ಚಿದಾನಂದತ್ವವೆ ಪ್ರಸಾದ ಲಕ್ಷಣವು. ಸಾಧಕರಾದ ವೀರಮಾಹೇಶ್ವರರು ಸ್ಥೂಲ ಪದಾರ್ಥವನ್ನು ತ್ಯಜಿಸಿ ಸೂಕ್ಷ್ಮರೂಪ ಪದಾರ್ಥವನ್ನು ಗುರುಲಿಂಗ ಜಂಗಮಕ್ಕೆ ಅರ್ಪಿಸಿ ತನ್ಮುಖದಿಂದ ಒಕ್ಕುಳಿದ ಪ್ರಸಾದವನ್ನು ಸ್ವೀಕರಿಸುತ್ತಾರೆ.

೧೮. ಗುರು ಜಂಗಮರ ಪಾದೋದಕವು ಪ್ರಸಾದವಲ್ಲ ಪದಾರ್ಥವೆಂದರೆ ಗುರು ಲಿಂಗ ಜಂಗಮರಿಗೆ ಅರ್ಪಣವಾದ ಪ್ರತಿಯೊಂದು ಪರಿಶುದ್ಧ ವಸ್ತುವು ಪ್ರಸಾದವಾಗುವುದೆಂಬ ಪ್ರಮಾಣ ಅನುಭವಾದಿಗಳಿಗೆ ವಿರೋಧವಾಗುವುದು. ಪ್ರಸಾದವೆಂದರೆ ಅಷ್ಟಾವರಣಗಳಲ್ಲಿ ಅಂತಿಮವಾದ ಪಾದೋದಕ ಸೇವನಾನಂತರ ಗ್ರಹಿಸಬೇಕಾದ ಪ್ರಸಾದವು ; – ಇದಕ್ಕೆ ಬೇರೆಯಾದುದೊ ? ಒಂದೆಯೊ ? ಒಂದೆಯಾದರೆ ಅದರ ಸ್ವೀಕಾರವೇಕೆ ? ಇದೇ ಪ್ರಸಾದವಾದರೆ ಅಷ್ಟಾವರಣಗಳು ಹೇಗೆ ನಿರ್ವಾಹ ಮಾಡಲ್ಪಡುವವು? ಬೇರೆಯಾದರೆ ಪಾದೋದಕಕ್ಕೆ ಕಲ್ಪಿತತತ್ವದಿಂದ ಪದಾರ್ಥತ್ವ ವುಂಟಾಗುವುದು. ಮತ್ತು ಗುರುಲಿಂಗ ಜಂಗಮಕ್ಕೆ ಅರ್ಪಣವಾದುದು ಪ್ರಸಾದವಾಗುವುದೆಂಬ ಪ್ರಮಾಣಗಳಿಗೆ ವ್ಯರ್ಥತೆಯುಂಟಾಗುವುದು. ಇವಲ್ಲದೆ ಅಷ್ಟಾವರಣವೆ ಅಂಗವಾಗಿ ಪಂಚಾಚಾರವೆ ಪ್ರಾಣವಾದ ವೀರಶೈವತ್ವಕ್ಕೆ ಅಂಗಲೋಪದಿಂದ ದೋಷವುಂಟಾಗುವುದು. ಪಾದೋದಕವು ಪ್ರಸಾದವೆನಿಸುವುದು. ಪಾದೋದಕವು ಪೂಜ್ಯರ ಮಸ್ತಕದಲ್ಲಿ ಸಚ್ಚಿದಾನಂದ ಸ್ವರೂಪವಾಗಿರುವದೆಂದು ಈ ಮೊದಲು ಉಕ್ತವಾಗಿರುವುದು. ಅಂತಹ ಸಚ್ಚಿದಾನಂದ ಸ್ವರೂಪವೆ ಪ್ರಸಾದವೆನಿಸುವುದು. ಆ ಪ್ರಸಾದವೆ ಪೂಜಕನ ಇಚ್ಛಾಜ್ಞಾನ ಕ್ರಿಯಾದಿಗಳಿಂದ ಚಲನಕ್ರಿಯೆಯನ್ನು ಹೊಂದಿ ಚಿದ್ರಸವಾಗಿ ಬಹಿಷ್ಕರಿಸುವುದರಿಂದ ಪ್ರಸಾದವೆನಿಸಿರುವುದು. ಆ ಪೂಜ್ಯರಾದ ಮೂರ್ತಿಗಳಲ್ಲಿ ಈ ಪಾದೋದಕ ಸಂಬಂಧಗಳಿಂದ ಇಚ್ಛಾಜ್ಞಾನಕ್ರಿಯೆಗಳೇನೂ ಇಲ್ಲದೆ ಸ್ವಸ್ವರೂಪಾನುಸಂಧಾನವೇ ಇರುವುದು. ಇಂತಹ ಪೂಜ್ಯರ ಮಸ್ತಕಗತವಾದ ಚಿದ್ಬಿಂದುವೆ ದ್ರವಿಸಿ ಸುಷುಮ್ನಾದ್ವಾರವಾಗಿ ಪಾದಾಂಗುಷ್ಠಗಳಿಂದ ಬಹಿಷ್ಕರಿಸಿದಲ್ಲಿ ಗುರುಲಿಂಗ ಜಂಗಮ ಪಾದೋದಕ ರೂಪವಾಗಿ ಕಂಗೊಳಿಸುವುದರಿಂದ ಪಾದೋದಕ ರೂಪ ಪ್ರಸಾದವೆನಿಸುವುದು. ಇದೇ ಪ್ರಸಾದವಾದರೆ ಮುಂದೆ ಪ್ರಸಾದವನ್ನು ಏಕೆ ಪಡೆಯಬೇಕೆಂದರೆ : ಪ್ರಸಾದವು ಸಾಮಾನ್ಯ ವಿಶೇಷವೆಂದು ಎರಡು ಬಗೆಯಾಗಿರುವುದು. ಈ ಪಾದೋದಕ ರೂಪ ಪ್ರಸಾದದ ಸಾಮಾನ್ಯ ರೂಪದಿಂದ ಪ್ರಸಾದವೆನಿಸಿ ವಿಶೇಷ ರೂಪದಿಂದ ಪಾದೋದಕವೆನಿಸುವುದು. ಇದರಂತೆ ಅಷ್ಟಾವರಣಗಳಲ್ಲಿಯೂ ಪ್ರಸಾದತ್ವವು ಸಾಮಾನ್ಯ ನೀತಿ ರೀತಿಯಿಂದಿರುವುದು. ಅಂದರೆ ಭಸ್ಮ ರುದ್ರಾಕ್ಷಿ ಮಂತ್ರಾದಿಗಳು ಸಾಮಾನ್ಯವಾಗಿ

ಪ್ರಸಾದವಾಗಿದ್ದರೂ ವಿಶೇಷತ್ವದಿಂದ ಭಸ್ಮ ರುದ್ರಾಕ್ಷಿಗಳೇ ಆಗುವುವು. ಕಡೆಯದಾದ ಈ ಪ್ರಸಾದವು ಫಲರೂಪವಾದ್ದರಿಂದ ಇದರಲ್ಲಿ ಸಾಮಾನ್ಯ ವಿಶೇಷ ರೂಪ ಪ್ರಸಾದತ್ವ ವಿರುವುದು. ಸಾಮಾನ್ಯ ವಿಶೇಷತ್ವಗಳೆರಡೂ ಇಲ್ಲಿ ಐಕ್ಯವಾಗಿರುವುದರಿಂದ ಐಕ್ಯ ಸ್ಥಲದಲ್ಲಿ ನಿಲುಕಡೆಯೆನಿಸಿರುವುದು.

೧೯. ವೀರಶೈವ ಸಿದ್ಧಾಂತವು ದ್ವೈತಾದ್ವೈತವಾದ್ದರಿಂದ ಗುರುಲಿಂಗ ಜಂಗಮರಲ್ಲಿ ಭೇದಾಭೇದ ಭಾವನೆಯು ಭಕ್ತನಿಗೆ ಇರಬೇಕು. ಭಕ್ತ ಶಬ್ದವನ್ನು ವಿಚಾರಿಸಿದರೆ ಭಕ್ತಿಪ್ರಧಾನವುಳ್ಳವನೆ ವೀರಶೈವನೆಂದು ತಿಳಿಯುವುದರಿಂದಲೂ, ಭೇದಾ ಭೇದವನ್ನುಂಟುಮಾಡುವುದರಿಂದ ವೀರಶೈವ ಮತವು ಭಾಕ್ತಿಕ ಮತವಾದ್ದರಿಂದಲೂ, ಭಕ್ತ ಪದವು ಭಾಗ-ವಿಭಾಗಮಾಡುವ ಸ್ವಭಾವವುಳ್ಳದ್ದೆಂತೂ, ಪೂಜ್ಯ ಪೂಜಕ ವಸ್ತು ಗಳಲ್ಲಿ ಭೇದಾಬೇದವನ್ನೆಸಗುವ ಸಾಮರ್ಥ್ಯವುಳ್ಳದ್ದೆಂತಲೂ, ಪ್ರಸಾದ ಭಕ್ತಿ-ಮುಕ್ತಿ ಗಳಿಗೆ ಏಕದೇಶ ಸ್ಥಿತಿಯಿರುವುದೆಂತಲೂ, ಮಹದುಕ್ತಿಯಿರುವುದರಿಂದ ಭೇದಾಭೇದ ಭಾವನೆಯು ಅವಶ್ಯ ಇರಬೇಕಾಗುವುದು. ಆದ್ದರಿಂದ ನಿರ್ವಿಶೇಷೋಪಾಸನೆಯು ಘಟಿಸುವುದು.

೨೦. ಲಿಂಗಪಾದೋದಕವನ್ನು ಗುರು ಜಂಗಮರ ಮಸ್ತಕಕ್ಕೆ ಎರೆಯದಿದ್ದರೂ ಅದು ಲಿಂಗ ಪಾದೋಕವಾಗುವುದು ಎಂಬ ವಿಷಯವನ್ನು ಶಾಸ್ತ್ರವು ವಿಧಿಸಿರುವುದಿಲ್ಲ; ವಿಧಿಸಬೇಕಾಗಿಯೂ ಇಲ್ಲ. ಮತ್ತು ಅಂಗರೂಪ ಭಕ್ತನಿಗೆ ಗುರು ಜಂಗಮ ಪಾದೋದಕ ವನ್ನು ಲಿಂಗದ ಮೇಲೆ ಅಭಿಷೇಕ ಮಾಡದಿದ್ದರೆ ಗುರು ಜಂಗಮರ ಪಾದೋದಕ ವಾಗುವುದಿಲ್ಲ. ಆಚಾರದಲ್ಲಿ ಸಂಬಂಧವೆಂತಲೂ, ಸಹಜವೆಂತಲೂ ಎರಡು ವಿಧ ವಾಗಿರುವುದು. ಇವೆರಡನ್ನೂ ಪರಸ್ಪರ ಭಿನ್ನಭಿನ್ನ ಕಾಲದಲ್ಲಿ ಆಚರಿಸಿ ಗುರು ಲಿಂಗ ಜಂಗಮ ತ್ರಿವಿಧ ಪಾದೋದಕವನ್ನು ಹೊಂದಬೇಕು. ಗುರು ಜಂಗಮರು ಪ್ರತ್ಯಕ್ಷ ವಿಲ್ಲದಾಗ ಲಿಂಗಮೂರ್ತಿಯಲ್ಲಿ ಗುರು ಜಂಗಮರನ್ನು ಅನುಸಂಧಾನಿಸಿ ಆ ಲಿಂಗ ಮೂರ್ತಿಯನ್ನು ನಿಯಮಿತ ಸ್ಥಿತಿಯಲ್ಲಿರಿಸಿ ಹಸ್ತ ಪಾದಾದಿಗಳನ್ನು ಭಾವಿಸಿ ವಾಮ ದಕ್ಷಿಣ ಪಾದಾಂಗುಷ್ಠಗಳನ್ನೂ, ತನ್ನ ಧ್ಯೇಯ ಸ್ಥಾನವನ್ನೂ ಕಲ್ಪಿಸಿ ಗುರುಲಿಂಗ ಜಂಗಮರ ಭಾವನೆಯಿಂದ ಪ್ರಾಣಸಂಬಂಧವಾದ ಬಟ್ಟಲದಲ್ಲಿ ಯಥಾವಿಧಿ ಗುರು ಲಿಂಗ ಜಂಗಮ ಸ್ವರೂಪವನ್ನು ಮಂತ್ರಾದಿಗಳ ಅವಧಾನತೆಯಿಂದ ಎರೆದರೆ ಅವ್ಯಕ್ತ ವಾದ ಶಿವಸ್ವರೂಪ ಪಾದೋದಕವು ವ್ಯಕ್ತವಾಗುವುದು. ಹೀಗಾಗುವ ಪೂರ್ವದಲ್ಲಿ ಶಿವನು ಅದೇ ಆತ್ಮನಲ್ಲಿ ತನ್ನೊಡನೆ ಐಕ್ಯವಾಗಬೇಕಾಗಿರುವುದು. ಆದರೆ ಹೇಗೆ ಸೃಷ್ಟಿಯೋ ಹಾಗೆ ಸಂಹಾರವಿರಬೇಕಾಗುವುದು.

೨೧. ಪೂಜ್ಯರಾದ ಗುರು ಜಂಗಮರಲ್ಲಿ ಪಾದೋದಕವನ್ನು ಕೊಡುವ ಇಚ್ಛೆ ಯತ್ನಾದಿಗಳು ಇಲ್ಲವೇ ಇಲ್ಲ. ಪ್ರದಾತೃತ್ವವು ಗುರು ಜಂಗಮರ ಭಾವನೆಯಲ್ಲಿ ಎಂದೂ ಬರುವುದಿಲ್ಲ. ಸುಮ್ಮನೆ ನೋಡುವವರಿಗೆ ಮಾತ್ರ ಇದ್ದಂತೆ ಕಾಣಿಸಬಹುದು.

ಪೂಜ್ಯರಾದ ಗುರು ಜಂಗಮರ ಮಸ್ತಕದ ಮಧ್ಯ ಸುಹೃದಯದಲ್ಲಿ ನೆಲೆಸಿರುವ ಶಿವಾನಂದಾಮೃತವು ಪೂಜಕರ ಇಚ್ಛೆ ಯತ್ನಾದಿಗಳಿಂದ ಸುಷುಮ್ನಾ ಮಾರ್ಗವಾಗಿ ಪಾದಾಂಗುಷ್ಠ ದ್ವಾರದಿಂದ ಬಹಿಷ್ಕರಿಸಿ ಭಕ್ತನ ಹಸ್ತಗತವಾಗುವುದು. ಆ ಭಕ್ತನು ತಾನು ಪಡೆದುಕೊಂಡು ಪರಮಾನಂದ ಶಿವಸ್ವರೂಪವೇ ಪ್ರತ್ಯಕ್ಷವಾಗಿರುವುದನ್ನು ಗುರುಲಿಂಗ ಜಂಗಮಕ್ಕೆ ಅರ್ಪಿಸದೆ ಸ್ವೀಕರಿಸಬಾರದು. ಸ್ವೀಕರಿಸಿದ್ದಾದರೆ ಪಾತಿತ್ಯ ವುಂಟಾಗುವುದೆಂಬ ಶಾಸ್ತ್ರವಿಧಿಗನುಸರಿಸಿ ಆ ಪೂಜ್ಯ ಮೂರ್ತಿಗಳಿಗೆ ಭಕ್ತಿಪೂರ್ವಕ ಶಿವಾನಂದಾಮೃತವನ್ನು ಅರ್ಪಿಸಿದರೆ ಅವರು ಕೈಕೊಳ್ಳಲೇ ಬೇಕು. ಪಕ್ಷಾಂತರ ಕೈಕೊಳ್ಳದಿದ್ದರೆ ಭಕ್ತನ ಸಶಾಸ್ತ್ರೀಯವಾದ ಭಕ್ತಿಯನ್ನು ತಿರಸ್ಕರಿಸಬಾರದೆಂಬ ಶಾಸ್ತ್ರೋಕ್ತಿಯ ಉಲ್ಲಂಘನೆಯೇ ವೀರಶೈವ ಮತದ ಧಾರ್ಮಿಕ ಧರ್ಮಾಚರಣೆಗೆ ಲೋಪ ವುಂಟಾಗುವುದು. ಆದ್ದರಿಂದ ಯೋಗ್ಯವೆಂದು ಅದನ್ನು ಸ್ವೀಕರಿಸಿದರೆ ದತ್ತಾಪಹಾರ ದೋಷವೆನಿಸುವುದು. ಮಧ್ಯ ಸಮಷ್ಟಿಯಿಂದ ಆದಿ ಸಮಷ್ಟಿಗೆ ಹೋಗಬೇಕಾದುದು ಸ್ವಭಾವಸಿದ್ಧವಾದುದು. ದತ್ತಾಪಹಾರ ದೋಷವೆಂದರೆ ದಾನವನ್ನು ಕೊಡತಕ್ಕ ವಸ್ತುವಿನಲ್ಲಿ ತನ್ನದೆಂಬ ಅಧಿಕಾರ – ಮಮಕಾರಗಳನ್ನು ತ್ಯಜಿಸಿ ಕೇವಲ ನಿರಪೇಕ್ಷ ಬುದ್ಧಿಯುಳ್ಳವನಂತೆ ನಟಿಸಿ ಕೊಟ್ಟು ಮರಳಿ ಅನೇಕ ಯುಕ್ತಿ ಪ್ರಯುಕ್ತಿಗಳಿಂದ ತನ್ನದೆಂದು ತೆಗೆದುಕೊಂಡು ತನ್ನ ಸ್ವಾರ್ಥಕ್ಕಾಗಿ ಉಪಯೋಗ ಮಾಡುವುದೆ ದತ್ತಾಪಹಾರ ದೋಷವೆನಿಸುವುದು. ಉದಾಹರಣೆಗಾಗಿ :

ಗುರುಲಿಂಗ ಜಂಗಮಕ್ಕೆ ತನು ಮನ ಧನಗಳನ್ನು ಸಂಕಲ್ಪಪೂರ್ವಕ ಅರ್ಪಿಸಿ ಮರಳಿ ಆ ಗುರು ಜಂಗಮರ ಸೇವೆಗಾಗಿಯೂ ಆ ಗುರು ಜಂಗಮರ ಇಚ್ಛಾನುಸಾರ ವಾದ ವೀರಶೈವ ಧರ್ಮಾರ್ಥ ಕಾರ್ಯಗಳಿಗಾಗಿಯೂ ಆ ತನು ಮನ ಧನಗಳ ವಿನಿಯೋಗಿಸದೆ ತನ್ನ ಮತ್ತು ತನ್ನವರ ಶರೀರಾದಿಗಳ ರಕ್ಷಣಗಾಗಿಯೂ ಬಂಧು ಬಳಗದವರ ಪೋಷಣೆಗಾಗಿಯೂ ಆ ತನು ಮನು ಧನಗಳನ್ನು ಪ್ರಯೋಗಿಸಿದರೆ ದತ್ತಾಪಹಾರ ದೋಷವೆನಿಸುವುದು. ಮತ್ತು ಶಿವನು ಲೋಕದಲ್ಲಿ ಅನೇಕ ಪದಾರ್ಥಗಳನ್ನು ಕೊಟ್ಟಿರುವನಷ್ಟೆ? ಭಕ್ತನು ಭಕ್ತಿಯಿಂದ ಆ ಪದಾರ್ಥಗಳನ್ನು ಶಿವನಿಗೆ ಅರ್ಪಿಸಿದರೆ ಅವುಗಳನ್ನು ಪರಮಾತ್ಮನು ಸ್ವೀಕರಿಸದಿದ್ದರೆ ಆ ಭಕ್ತನು ಹೇಗೆ ಉದ್ಧಾರವಾಗಬೇಕು? ಸ್ವೀಕರಿಸಿದ್ದಾದರೆ ಶಿವನು ದತ್ತಾಪಹಾರಕನಾಗುವನೇನು? ಅದರಂತೆ ಪರಶಿವನ ಆಜ್ಞಾನುಸಾರವಾಗಿಯೂ ಇಚ್ಛಾನುಸಾರವಾಗಿಯೂ ಜಗದ್ಧಿತಾರ್ಥವಾಗಿಯೂ ಅವತರಿಸಿದ ಗುರು ಜಂಗಮರ ಉತ್ತಮಾಂಗಗತ ಚಿದ್ರಸವನ್ನು ಶಿಷ್ಯನ ಪ್ರಾರ್ಥನಾದಿಗಳಿಂದ ಸಾಕ್ಷಾತ್ಕರಿಸಿದ್ದನ್ನು ಭಕ್ತನು ಭಕ್ತಿಪೂರ್ವಕ ಅರ್ಪಿಸಲು ಅದನ್ನು ಆ ಪೂಜ್ಯರು ಸಸ್ವರೂಪವಾದ ಲಿಂಗಕ್ಕರ್ಪಿಸಿ ಆ ಲಿಂಗಮೂರ್ತಿಯ ಕೃಪಾ ಪ್ರಸಾದವನ್ನು ಸೇವಿಸಿದುದಕ್ಕೆ ದತ್ತಾಪಹಾರ ದೋಷವು ಬರುವುದೆಂದು ಹೇಳುವ ಬಗೆ ಹೇಗೆ? ಅಲ್ಲದೆ ನಾವು ನಿತ್ಯಲಿಂಗ ಪೂಜೆಯಲ್ಲಿ ಲಿಂಗಕ್ಕೆ ಅರ್ಪಿಸಿದುವನ್ನೆಲ್ಲ ಲಿಂಗವು ಕೈಕೊಂಡರೆ ಅದೂ ಸಹ ಲಿಂಗದ ದತ್ತಾಪಹಾರವಾದೀತಲ್ಲವೆ?

೨೨ ಗುರು ಕರುಣಿಸಿದ ಲಿಂಗವನ್ನು ಪೂಜ್ಯವೆಂದು ತಿಳಿದು ಆರಾಧಿಸುವರು. ಆ ಲಿಂಗಕ್ಕೆ ಮಾತೃಸ್ಥಾನವಾದ ಗುರುಮೂರ್ತಿಯನ್ನು ಮಾತ್ರ ಧಿಕ್ಕರಿಸುವುದು ತನ್ನ ಜನಕನ ಮುಖ್ಯ ಸಾಮರ್ಥ್ಯವನ್ನು ತಿರಸ್ಕರಿಸಿದವನಿಗಿಂತಲೂ ಅಧಿಕವಾದ ದೋಷವಾಗುವುದು. ಗುರುವಿಲ್ಲದೆ ಲಿಂಗ ದೊರೆಯದು. ಕಾರಣ ಸಾಧಕ ಗುರುವಾಗಿದ್ದರೂ ಆತನಲ್ಲಿ ದೋಷವನ್ನು ಕಲ್ಪಿಸಬಾರದು; ಗುಣವನೆಣಿಸಬಾರದು. ಶಿವಸ್ವರೂಪರಾದರೂ ಸ್ವಸ್ವರೂಪ ಲಿಂಗಭಕ್ತರು ಎಣಿಸಿದ ಗುರು ಜಂಗಮರು ತಮ್ಮ ಅನುಸಂಧಾನದ ನಿಲುಕಡೆಗೆ ಅತೀತವಾದ ಅಣುಚಕ್ರದ ನಿರಂಜನ ಲಿಂಗದಿಂದ ಭಾವಲಿಂಗಕ್ಕೆ ಪ್ರಾಣರೂಪವಾದ ಪರ ಜಂಗಮದಿಂದೊಗೆದ ಚಿತ್ಕಲೆಯೇ ಭಕ್ತನ ಭಕ್ತಿ ಪ್ರಾರ್ಥನಾದಿಗಳಿಂದ ಶಿಖಾಚಕ್ರಕ್ಕೆ ಆವಿರ್ಭವಿಸಿದಲ್ಲಿ ಪ್ರಾಣಲಿಂಗಕ್ಕೆ ಚೇತನಾರೂಪವಾದ ಚರ ಜಂಗಮದಿಂದೊಗೆದು ಚಿನ್ನಾದ ಸ್ವರೂಪವನ್ನು ಧರಿಸಿ ಅಲ್ಲಿಂದ ಭಕ್ತನ ಪ್ರಾರ್ಥನೆಯ ವಿಶೇಷದಿಂದ ಬ್ರಹ್ಮರಂಧ್ರಕ್ಕೆ ಅವತರಿಸಿ ಅಲ್ಲಿಯ ಇಷ್ಟಲಿಂಗಕ್ಕೆ ಚೇತನ ಸ್ವರೂಪವಾದ ಸ್ವಯಜಂಗಮದಿಂದೊಗೆದ ಚಿದ್ಬಿಂದುವೇ ಚಿದ್ರಸವೆನಿಸಿ ಭ್ರೂಮಧ್ಯಾದ್ಯಾಧಾರಾಂತವಾದ ಮಹಾಲಿಂಗಾದಿ ಆಚಾರ ಲಿಂಗಾಂತಮಾದ ಷಡ್ಲಿಂಗಗಳನ್ನು ಭಕ್ತನು ಪ್ರಾರ್ಥಿಸಿ ಭಾವನಾದಿ ಸಂಸ್ಕಾರ ವಿಶೇಷದಿಂದ ಆಯಾ ಲಿಂಗಗಳಿಂದ ಆಯಾ ಸ್ಥಾನಗಳಿಗೆ ಅವತರಿಸುತ್ತ ಮೂಲಾಧಾರಗತವಾದ ಆಚಾರ ಲಿಂಗ ಸ್ಥಾನದಲ್ಲಿ ಇತ್ತರನಾಗಿ ಲಿಂಗಾಂಗ ಶಿವಶಕ್ತಿ ಗುರುಲಿಂಗ ಈ ಅಪರ ಪರ್ಯಾಯ ನಾಮಗಳುಳ್ಳ ಪಾದಾಂಗುಷ್ಠ ದ್ವಯಗಳಿಂದ ಆಯಾ ಸ್ವರೂಪವನ್ನು ಹೊಂದಿ ಬಲದಂಗುಷ್ಠದಲ್ಲಿ ಗುರು ಪಾದೋದಕವಾಗಿ ಎಡದಂಗುಷ್ಠದಲ್ಲಿ ಲಿಂಗಪಾದೋದಕವಾಗಿ ಅವತರಿಸಿದ ನಂತರ ಆ ಎರಡು ಅಂಗುಷ್ಠಗಳ ಮಧ್ಯದಲ್ಲಿ ಸಂಬಂಧದಿಂದುಂಟಾದ ಸಾಮರಸ್ಯರೂಪಾದ ಜಂಗಮ ಪಾದೋದಕವು ಅವತರಿಸಿ ಆಯಾ ಮಂತ್ರ ತಂತ್ರ ಪ್ರಯೋಗಗಗಳಿಂದ ಜಗದ್ಧಿತಾರ್ಥವಾಗಿ ಆ ಪರಬ್ರಹ್ಮ ಸ್ವರೂಪ ಆನಂದದ ರಸವು ಬ್ರಹ್ಮ ಮಂತ್ರಾದಿಗಳಿಂದ ಸಂಸ್ಕರಿಸಿದ ಪರಿಶುದ್ಧ ಪಾತ್ರೆಯಲ್ಲಿ ಕಂಗೊಳಿಸುತ್ತಿರುವುದು.

೨೩. ಲಿಂಗದಲ್ಲಿ ಲಿಂಗ ಪಾದೋದಕವನ್ನು ಗುರುವಿನಲ್ಲಿ ಗುರು ಪಾದೋದಕವನ್ನು ಜಂಗಮದಲ್ಲಿ ಜಂಗಮ ಪಾದೋದಕವನ್ನು ಹೊಂದಬೇಕೆಂಬ ವಿಶೇಷ ವಿಧಿಯುಳ್ಳ. ಶಿವ ಪಾದೋದಕವನ್ನು ಸ್ವೀಕರಿಸಬೇಕೆಂಬ ಸಾಮಾನ್ಯ ವಿಧಿಯಾಗಿರುವುದು. ಗುರುಲಿಂಗ ಜಂಗಮ ತ್ರಿವಿಧ ಪಾದೋದಕವನ್ನು ಸ್ವೀಕರಿಸಬೇಕು. ಅದರಲ್ಲಿ ಒಂದು ಕಡಿಮೆಯಾದರೂ ಅದು ಅನರ್ಪಿತವಾಗುವುದು;—ಎಂಬ ವಿಶೇಷ ವಿಧಿಯು ಮಾತ್ರ ಇರುವುದು. ಗುರುಜಂಗಮರು ಸ್ವಪಾದೋದಕದಿಂದ ಸ್ವಪೂಜ್ಯವಾದ ಲಿಂಗಕ್ಕೆರೆಯುವರೆಂದು ಭ್ರಮಾದೃಷ್ಟಿಯುಳ್ಳವರಿಗೆ ಕಂಡರೂ ಪ್ರಮಾದೃಷ್ಟಿಯುಳ್ಳವರಿಗೆ ಮಾತ್ರ ಹಾಗೆ ಕಾಣದು. ಒಬ್ಬನು ಮಗಳನ್ನೂ ಮಡದಿಯನ್ನೂ ಆಲಂಗಿಸುವನು. ಆದರೆ ದೋಷದೃಷ್ಟಿಯುಳ್ಳವನಿಗೆ ಪುತ್ರಿಯ ಆಲಿಂಗನವೂ ಸಹ ದೋಷವಾಗಿಯೇ ಕಾಣು

ವುದು. ಪ್ರವಾತ್ಯವೃತ್ತಿಯುಳ್ಳ ವಿಚಾರಿಗೆ ಮಾತ್ರ ಆ ಆಲಿಂಗನದ ನಿರ್ದೋಷದ ನಿಜಸ್ಥಿತಿಯು ಗೊತ್ತಾಗುವುದು. ಇದು ಸ್ವಚ್ಛವಾದ ನಂತರ ಪರಬ್ರಹ್ಮಸ್ವರೂಪ ಗುರು ಲಿಂಗಜಂಗಮದ ಪಾದೋದಕವು.

೨೪. ಪತಿಸ್ಥಾನವನ್ನು ಹೊಂದಿದವನು ಪೂಜ್ಯನು. ಪತ್ನಿ ಸ್ಥಾನಾಪನ್ನನಾದವನು ಪೂಜಕನು. ಪತಿರೂಪನಾದ ಪೂಜ್ಯನಿಂದ ಪತ್ನಿಸ್ವರೂಪನಾದ ಪೂಜಕನಲ್ಲಿ ಆವಿರ್ಭವಿಸಿ ಪಾದೋದಕ ಶಿಶುವು ತೋರುವುದು. ಇದಕ್ಕೆ ಉದಾಹರಣೆಗಾಗಿ ಕೊಟ್ಟಿರುವ ಲೋಕಾನುಭವವಾದರೂ ವಿರೋಧಿಸದು. ಸತಿ-ಪತಿಗಳ ಸಾಮರಸ್ಯ ಸಂಯೋಗದಿಂದುಂಟಾಗುವ ಶಿಶುವು ಪತಿಯಲ್ಲಿ ಅವ್ಯಕ್ತರೀತಿಯಿಂದ ಬಿಂದುವಿನಷ್ಟು ಜೀವ ಚೈತನ್ಯರೂಪವಾಗಿ ಮೂರು ತಿಂಗಳು ವಾಸ ಮಾಡಿದ್ದು ಸತಿಪತಿಗಳ ಸಂಯೋಗ ವಿಶೇಷದಿಂದ ಘನೀಭೂತವಾದ ಬಿಂದುವೇ ದ್ರವಿಸಿ ಆ ಜೀವ ಚೈತನ್ಯ ದೊಡಗೊಂಡು ಜನನ ಧೃತಿಯೆನಿಸಿ ಸತಿಯು ಗರ್ಭವನು ಪ್ರವೇಶಿಸಿ ಕ್ರಮದಿಂದ ಸಾವಯವ ರೂಪ ಪಿಂಡವು ವರ್ಧನವಾಗುತ್ತ ಕಡೆಗೆ ಬಹಿಸ್ಕೃತವಾಗಿ ಪುತ್ರರೂಪ ದಿಂದ ತೋರುವಂತೆ ಪೂಜ್ಯನಲ್ಲಿದ್ದ ಪಾದೋದಕವು ಪೂಜಕನಲ್ಲಿ ತೋರುವದಾದ್ದರಿಂದ ವಿರೋಧವೆನಿಸದು.

೨೫. ಅದು ತನ್ನ ಪಾದೋದಕವಲ್ಲ. ಹೇಗೆಂದರೆ: ವ್ಯಾಪ್ಯನಾದ ಗುರುವು ಅಥವಾ ಜಂಗಮವು ಅಭಿನ್ನವಾದ ಪರಲಿಂಗಾನುಭವದಿಂದ ಅನುಸಂಧಾನದಿಂದಿರುವಾಗ ಆ ಪಶ್ಚಿಮ ಚಕ್ರಗತವಾಗಿ ಸ್ವಸ್ವರೂಪದಿಂ ಘನೀಭೂತವಾಗಿದ್ದ ಆನಂದವೇ ದ್ರವಿಸಿ ಭಕ್ತನ ಕ್ರಿಯಾಕಲಾಪಗಳಿಂದ ಭೇದರೂಪವಾಗಿ ಪಾದದ್ವಾರಾ ತೋರುವುದು. ಅಂತಹ ಪರಲಿಂಗ ಸ್ವರೂಪ ಆನಂದ ರಸವನ್ನು ಭಕ್ತನು ಭಕ್ತಿಯಿಂದ ಶಾಸ್ತ್ರ ವಿಧಿಗನುಸರಿಸಿ ಪೂಜ್ಯರಿಗೆ ಅರ್ಪಿಸುವನು. ಅದನ್ನೇ ಆ ಭಕ್ತಿರೂಪವಾಗಿ ಬಂದ ಶಿವಾನಂದ ರೂಪ ತೀರ್ಥವನ್ನೇ ಪೂಜ್ಯರು ತಮಗೆ ಪೂಜ್ಯವೆನಿಸಿದ ಸ್ವಸ್ವರೂಪ ಲಿಂಗಕ್ಕೆ ಅರ್ಪಿಸಿ ಸೇವಿಸುವುದರಿಂದ ದೋಷವೆನಿಸುವುದಿಲ್ಲ. ಆದ್ದರಿಂದ ಸ್ವಪಾದೋದಕವನ್ನು ಶ್ರೇಷ್ಠ ಲಿಂಗಕ್ಕೆ ಅಭಿಷೇಕಿಸಿ ಸ್ವೀಕರಿಸುವುದು-ಭೇದಾಭೇದ ಸಿದ್ಧಾಂತ ವಿರೋಧವೆನಿಸದು. ವೀರಶೈವ ಮತವು ಭೇದಾಭೇದ ಸ್ವರೂಪವುಳ್ಳದ್ದಾದ್ದರಿಂದ ಪಾದೋದಕವಾದರೂ ಸ್ವಸ್ವರೂಪದಲ್ಲಿ ಅಭೇದರೂಪವಾಗಿಯೂ ಕ್ರಿಯೆಯಲ್ಲಿ ಭೇದರೂಪವಾಗಿಯೂ ತೋರುವುದು. ಇಂತಹ ಭೇದಾಭೇದ ಸ್ವರೂಪವೆನಿಸಿದ ಚಿದ್ರಸಕ್ಕೆ ಸ್ವಪಾದೋದಕವೆಂದು ಆಕ್ಷೇಪಿಸುವುದು ವೀರಶೈವಮತ ಸಿದ್ಧಾಂತಕ್ಕೆ ವಿರೋಧವೆನಿಸುವುದು.

---

# ಶೈವ-ವೀರಶೈವ ಸಂಸ್ಕೃತಿಗಿರುವ ಅಂತರ



**ಶ್ರೀ ಸದಾಶಿವ ಶಿವಾಚಾರ್ಯರ ಸ್ವಾಮಿಗಳು, ಸಖರಾಯಪಟ್ಟಣ.**

ಶೈವ ಸಂಸ್ಕೃತಿಯ ಆಚಾರ ವ್ಯವಹಾರಕ್ಕು, ವೀರಶೈವ ಸಂಸ್ಕೃತಿಯ ಆಚಾರ ವ್ಯವಹಾರಕ್ಕು, ಅಜ–ಗಜದಷ್ಟು ಅಂತರವಿದೆ.

೧

"ಜನ್ಮನಾ ಜಾಯತೇ ಶೂದ್ರಃ ಕರ್ಮಣಾ ದ್ವಿಜ ಉಚ್ಯತೇ"ಎಂಬುಕ್ತಿಯಂತೆ–ಹುಟ್ಟನಿಂದ ಶೂದ್ರನಾಗಿ, ಎಂಟನೆಯ ವರ್ಷದಲ್ಲಿ ನಡೆಯುವ ಉಪನಯನ ಕರ್ಮದಿಂದ ದ್ವಿಜನಾದಬಳಿಕ ಜನಿವಾರದ ಸಂಬಂಧವುಳ್ಳವರು ಶೈವರು.

"ಅರ್ಧೋದಯೇಪಿ ತತ್ಕುರ್ಯಾದಥವಾ ಭೂಗತೇಪಿ ವಾ ।
ನಾಭಿಚ್ಛೇದಾತ್ಪೂರ್ವಮೇವಸ್ತನ್ಯಪಾನಾತ್ಪುರಾಥವಾ ॥
ಶಿಶೋಃ ಶ್ರೀವೀರಶೈವಾನಾಂ ಲಿಂಗಧಾರಣಮುಚ್ಯತೇ ॥ "

ಎಂಬೀ ಪ್ರಮಾಣದಂತೆ—ಗರ್ಭಧಾರಣದ ಎಂಟನೆಯ ತಿಂಗಳು ಮೊದಲ್ಗೊಂಡು ಸಂಸ್ಕಾರವು ಉತ್ತರೋತ್ತರ ವಿಶಿಷ್ಟ ರೀತಿಯಲ್ಲಿ ನಡೆದು ವಿಶಿಷ್ಟ ಲಿಂಗಧಾರಣ ಸಂಬಂಧದಿಂದ ಲಿಂಗಾಂಗಿಗಳಾದವರು ವೀರಶೈವರು.

೨

ಪುರುಷರಂತೆ ಉಪನಯನ ಕರ್ಮದಿಂದ ಸಂಸ್ಕೃತರಾಗಿ ಜನಿವಾರದ ಸಂಬಂಧವುಳ್ಳವರಾಗಿ, ಸಂಧ್ಯಾವಂದನೆ ಮೊದಲಾದ ಕರ್ಮದಲ್ಲಿ ಭಾಗಿಗಳಾಗದವರು ಶೈವಸ್ತ್ರೀಯರು.

---

—ಇದನ್ನು ‘ಸಾಹಿತ್ಯಸಮಿತಿ ಪತ್ರಿಕೆ’ ೧೯೪೩ ಸಂಚಿಕೆ ೨ ರಿಂದ ಸಂಗ್ರಹಿಸಿದೆ.

ಪುರುಷರಂತೆ ಶಿವದೀಕ್ಷಾಸಂಸ್ಕಾರಿಗಳಾಗಿ ಲಿಂಗಸಂಬಂಧವುಳ್ಳವರಾಗಿ ಶ್ರೀ ಗುರುಲಿಂಗಜಂಗಮ ಪೂಜೆ, ತೀರ್ಥಪ್ರಸಾದ ಸೇವನೆ ಮುಂತಾದ ಆಚರಣೆಯಲ್ಲಿ ಭಾಗಿಗಳಾಗುವರು ವೀರಶೈವ ಸ್ತ್ರೀಯರು.

೩

ಶೈವ ಗಂಡು-ಹೆಣ್ಣು ಮಕ್ಕಳ ಹಣೆಗೆ ಶೃಂಗಾರವಾದ ಹೆಗ್ಗುರುತೇ ಅರಿಸಿಣಾ ಕ್ಷತೆ, ಕುಂಕುಮ ಚಂದನಾದಿ ತಿಲಕವು.

" ನೀರಿಂಗೆ ನೈದಿಲೆಯೇ ಶೃಂಗಾರ, ಸಮುದ್ರಕ್ಕೆ ತೆರೆಯೇ ಶೃಂಗಾರ, ಗಗನಕ್ಕೆ ಚಂದ್ರಮನೇ ಶೃಂಗಾರ, ನಾರಿಗೆ ಗುಣವೇ ಶೃಂಗಾರ, ನಮ್ಮ ಕೂಡಲ ಸಂಗನ ಶರಣ-ಶರಣೆಯರ ನೊಸಲಿಗೆ ವಿಭೂತಿಯೇ ಶೃಂಗಾರ "

" ಚೆನ್ನಮಲ್ಲಿಕಾರ್ಜುನಯ್ಯಾ ನಾ ಹುಟ್ಟಿದೊಡನೆ ವಿಭೂತಿಯ ಪಟ್ಟವ ಕಟ್ಟಿ ಸದ್ಗುರುಸ್ವಾಮಿ ಲಿಂಗಸ್ವಾಯತವ ಮಾಡಿದನಾಗಿ ಧನ್ಯಳಾದೆನು "

" ಭೂತಿಸ್ತ್ರೀ ಪರಮಪ್ರಕಾರ ಉತರುದ್ರಾಕ್ಷಂ ತ್ವದೀಯಂ ಮುಖಂ ॥ "

" ಪಾಪಾನಾಂ ಭರ್ತ್ಸನಾದ್ಭಸ್ಮ ಶಿವತೇಜಃ ಪ್ರಕಾಶನಾತ್ ॥ "

ಇತ್ಯಾದಿ—ಅಣ್ಣನ-ಅಕ್ಕನ ಅಮೃತವಾಣಿ, ಗೀರ್ವಾಣೋಕ್ತಿಯಂತೆ ವೀರಶೈವ ಗಂಡು-ಹೆಣ್ಣು ಮಕ್ಕಳ ಹಣೆಗೆ ಶೃಂಗಾರವಾದ ಹೆಗ್ಗುರುತೇ ಪವಿತ್ರ ಭಸ್ಮವು.

೪

ಯಜ್ಞಯಾಗ ಹೋಮ ಹವನ ಸ್ಥಾವರಲಿಂಗ ಹಾಗು ವಿಗ್ರಹಗಳ ಪೂಜೆ, ಮೊದಲಾದ ಬಾಹ್ಯಜಡಕರ್ಮಾಸಕ್ತರು ಶೈವರು.

" ಶಿವಾರ್ಚಾಕರ್ಮವಿಜ್ಞೇಯಂ ಬಾಹ್ಯಂ ಯಾಗಾದಿ ನೋಚ್ಯತೇ ॥ "

ಎಂಬೀ ಉಕ್ತಿಯಂತೆ ಗುರು ಕೊಟ್ಟ ಕರದಿಷ್ಟಲಿಂಗಪೂಜೆ, ಗುರುಜಂಗಮಾರ್ಚನೆ ಮುಂತಾದ ಅಜಡಕ್ರಿಯೆಗಳಲ್ಲಿ ತತ್ಪರರು ವೀರಶೈವರು.

೫

" ಅಗ್ನಿಮುಖಾ ವೈ ದೇವಾಃ "

ಎಂದಿರುವ ವಾಕ್ಯದಂತೆ ಅಗ್ನಿಮುಖದಿಂದ ಇಂದ್ರಚಂದ್ರಾದಿ ದೇವತೆಗಳು ಸಂತೋಷ ಹೊಂದುವರು. ಅದರಿಂದ ನಮಗೆ ಸುಖವಾಗುವುದು ಎಂಬ ಸಂಕುಚಿತ ಭಾವನೆ ಯಿಂದ ಐದು ಭೂತಗಳಲ್ಲೊಂದಾದ ಬೆಂಕಿಗೆ ಪ್ರಾಶಸ್ತ್ಯ ಕೊಡುವರು ಶೈವರು.

" ಜಂಗಮಮುಖಂ ಲಿಂಗಂ "

" ಮನ್ಮುಖಂ ಜಂಗಮಂ ದೇವಿ ಭೋಗಭಾಗ್ಯಮಯಂ ಮಮ "

" ಶಿವಯೋಗಿನಿ ಸಂತೃಪ್ತೇ ತೃಪ್ತೋ ಭವತಿ ಶಂಕರಃ ।
ತತ್ತೃಪ್ತ್ಯಾ ತನ್ಮಯಂ ವಿಶ್ವಂ ತೃಪ್ತಿಮೇತಿ ಚರಾಚರಂ ॥ "

ಇತ್ಯಾದ್ಯಾಗಮ ವಚನದಂತೆ ಶ್ರೀಗುರುಜಂಗಮ ಮುಖದಿಂದ ಶಿವನು, ಶಿವನಿಂದ ಇಡೀ ಜಗತ್ತೇ ಸಂತೋಷ ಹೊಂದುವುದೆಂಬ ವಿಶಾಲ ಭಾವನೆಯಿಂದ ಶ್ರೀಗುರು ಜಂಗಮಕ್ಕೆ ಆಧಿಕ್ಯ ಕೊಡುವರು ವೀರಶೈವರು.

೬

ಶ್ರಾದ್ಧಾದಿಕರ್ಮದಲ್ಲಿ ಬಲಿಗೆ ಪಿಂಡದಾನವನೆಸಗುವರು ಅಂದರೆ ಹದ್ದು-ಕಾಗೆ ಗಳಿಗೆ ಅನ್ನ ಹಾಕುವರು ಶೈವರು.

ತಮ್ಮ ಹಿರಿಯರುದ್ದೇಶಿಸಿ ಜಂಗಮಾರಾಧನೆ-ಗಣಾರಾಧನೆ ನಡೆಯಿಸುವರು ಅಂದರೆ ಭಕ್ತ-ಮಾಹೇಶ್ವರ ಸ್ತ್ರೀ ಪುರುಷರಿಗೆ ಅನ್ನ ವಸ್ತ್ರಾದಿಗಳಿಂದ ತೃಪ್ತಿಪಡಿ ಸುವರು ವೀರಶೈವರು.

೭

ಉಪನಯನಸಂಸ್ಕಾರಕರ್ಮದಿಂದ ದಗ್ಧವಾದ ದೇಹಕ್ಕೆ ಮತ್ತೆ ಅಂತ್ಯಕಾಲ ದಲ್ಲಿ (ಪ್ರಾಣಹೋದಬಳಿಕ) ದಹನ ಸಂಸ್ಕಾರ ಮಾಡುವರು ಅಂದರೆ ಆ ದೇಹ ವನ್ನು ಸುಡುವರು ಶೈವರು.

" ದಗ್ಧಸ್ಯ ದಹನಂ ನಾಸ್ತಿ ಪಕ್ವಸ್ಯ ಪಚನಂ ಯಥಾ ।
ಶಿವಜ್ಞಾನಾಗ್ನಿದಗ್ಧಸ್ಯ ಪುನರ್ದಾಹೋ ನ ವಿದ್ಯತೇ ॥ "
" ದೀಯತೇ ಯೇನ ವೈ ಜ್ಞಾನಂ ಕ್ಷೀಯತೇ ಪಾಶಬಂಧನಂ ।
ತಸ್ಮಾತ್ಸಂಸ್ಕಾರ ಏವಾಯಂ ದೀಕ್ಷೇತ್ಯಪಿ ಚ ಕಥ್ಯತೇ ॥ "

ಎಂಬುಕ್ತಿಗಳಂತೆ ಶಿವಜ್ಞಾನ ಸಂಬಂಧ ದೀಕ್ಷಾ ಸಂಸ್ಕಾರದಿಂದ ದಗ್ಧವಾದ ಅಂಗ ವನ್ನು (ಶರೀರವನ್ನು) ಮತ್ತೆ ಸುಡದೆ ಆದರ್ಶನೋಪಾಯಕ್ಕೆ ಸಮಾನವಾದ ಸಮಾಧಿಕ್ರಿಯೆಯಿಂದ ರುದ್ರಭೂಮಿಯಲ್ಲಿ ಹುಗಿಯುವರು ವೀರಶೈವರು.

೮

ಜನನಸೂತಕ, ಮರಣಸೂತಕ, ರಜಸ್ವಲಾಸೂತಕ ಮೊದಲಾದ ಪಂಚ ಸೂತಕಗಳಿಂದ ಕೂಡಿದವರಾಗಿ ತೊಳಲಿ ಬಳಲುವರು ಶೈವರು.

" ಲಿಂಗಧಾರಣಕಂ ನಾಮವ್ರತಂ ಮಾಹೇಶ್ವರಾಭಿಧಂ ।
ಯಾವಜ್ಜೀವಮಿದಂ ದತ್ತ್ವಾ ಇಷ್ಟಲಿಂಗಂ ಸಮರ್ಚಯೇತ್ ॥ "

ಎಂಬುಕ್ತಿಯಂತೆ ತನ್ನ ಜೀವನಾಂತ ಪರ್ಯಂತ ಲಿಂಗಧಾರಣಾದ್ಯಷ್ಟಾವರಣ ವ್ರತ

ಶಾಲಿಯಾದ್ದರಿಂದ ಜನನ – ಮರಣ – ರಜಸ್ವಲಾದಿ ಪಂಚಸೂತಕವಿಲ್ಲದವರಾಗಿ ವಿರಾಜಿಸುವರು ವೀರಶೈವರು.

೯

ಪತಿವಿಯೋಗವಾದರೆ (ಗಂಡನು ಸತ್ತರೆ) ತಲೆ ಬೋಳಿಸಿಕೊಂಡು ಬೋಳಿಯರಾಗುವರು ಅಂದರೆ— ಎಲ್ಲ ಕರ್ಮಕ್ಕೂ ಅನಧಿಕಾರಿಗಳಾಗುವರು ಶೈವ ಸ್ತ್ರೀಯರು.

" ಅತಿ ಹಿತದಿಂ ಕೂಡಿದ ಪತಿ ‖ ಮೃತನಾಗಲ್ ಸತಿಗೆ ಪರಪತಿಲಿಂಗಂ ‖
ಸತಿಶರಣಂ ಪತಿಲಿಂಗಂ । ಇತಿ ನ್ಯಾಯಮಿದು ಬಹುಪ್ರಸಿದ್ಧಂ ಬದ್ಧಂ ‖ "
" ಶರಣ ಸತಿ ಲಿಂಗ ಪತಿ "

ಎಂಬೀ ನ್ಯಾಯದಂತೆ— ಶ್ರೀಗುರುವಿತ್ತ ಕರದಿಷ್ಟಲಿಂಗಪತಿಯಲ್ಲಿ ನಮ್ಮ ಲೌಕಿಕ ಪತಿಯು (ಗಂಡನು) ಅಡಗಿರುವನೆಂದು ಭಾವಿಸಿ ಮನಮುಖ್ಯವಾದೈದು ಇಂದ್ರಿಯಗಳ ವಿಕಾರೋಪಟಳಕ್ಕೆ ತಾವೀಯದ ಲಿಂಗಪೂಜಾದಿ ಸತ್ಕ್ರಿಯಾಸಂಪನ್ನರಾಗಿರುವರು ವೀರಶೈವ ಸ್ತ್ರೀಯರು.

೧೦

" ವೀರಶೈವಾನಾಂ ಗುರುಕೃತಸಕಲೀಕರಣಸ್ಯೈವಾನುದಿನಮನುಸ್ಮರಣಂ ।
ಇತರೇಷಾಂ ಶೈವಾನಾಂ ತಾತ್ಕಾಲಿಕ ಸಕಲೀಕರಣಮಿತಿ ವಿಶೇಷಃ ‖ "

ಎಂಬೀ ವಾಕ್ಯಾಭಿಪ್ರಾಯದಂತೆ ತಾತ್ಕಾಲಿಕ ಸಕಲೀಕರಣವುಳ್ಳವರು ಅಂದರೆ ಆಯಾ ಸಮಯಾನುಸಾರ ಮಂತ್ರ–ತಂತ್ರಾದಿ ನುಡಿ – ನಡೆ ಕಾರ್ಯಕಲಾಪಶೀಲರು ಶೈವರು.

ಗುರುಕೃತಸಕಲೀಕರಣವನ್ನೇ ಪ್ರತಿದಿನ ನಡೆಯಿಸುವವರು ಅಂದರೆ ಭಸ್ಮಧಾರಣಾದ್ಯಷ್ಟಾವರಣ ಪಂಚಾಚಾರಗಳ ಕಟ್ಟಿಗೊಳಪಟ್ಟು, ಗುರೂಪದೇಶ ಮಂತ್ರ–ತಂತ್ರಪ್ರಕಾರ, ನುಡಿದಂತೆ ನಡೆಯುವ ಶೀಲಸ್ವಭಾವವುಳ್ಳವರು ವೀರಶೈವರು.

" ಸ್ವರ್ಗಕಾಮೋ ಯಜೇತ "

ಎಂದಿರುವಂತೆ ಸ್ವರ್ಗದ ಬಯಕೆಯಿಂದ ಗುಡಿ–ಗುಂಡಾರ ಮನೆಗಳಲ್ಲಿರುವ ತಮಗೆ ಭಿನ್ನವಾದ ಸ್ಥಾವರಲಿಂಗ ಹಾಗು ಪ್ರತಿಮೆಗಳನ್ನು ಪೂಜಿಸಿ ಅವಕ್ಕೆ ಹಿಡಿದ ನೈವೇದ್ಯೋಪಭೋಗಿಗಳು ಶೈವರು.

" ದೇಹೋ ದೇವಾಲಯಃ ಪ್ರೋಕ್ತೋ ಜೀವಸ್ತತ್ರ ಶಿವಃ ಸ್ಮೃತಃ ‖ "
" ಕ್ಷಯಿಸದೆ ಸರ್ವಕಾಮಿತ ಸಮೃದ್ಧಿ ಸಮನ್ವಿತ ತತ್ತದೈಹಿಕಾ ।
ಶ್ರಯ ಘನಸೌಖ್ಯಮಂ ಬಿಡದೆ ಭೋಗಿಸಿ ತತ್ತ್ವನಿಜಸ್ವರೂಪ ನಿ ‖

ಕ್ಷಯ ಪದಮಂ ಶರೀರದವಸಾನದೊಳೊಂದಿ ಮಹಾ ಮಹೇಶ್ವರ |
ರ್ಬಯಿಸದೆ ಭೋಗ ಮೋಕ್ಷಪರರಪ್ಪುದು ಚಿತ್ರವಲಾ ಶಿವಾಧವಾ ||

ಎಂಬುಕ್ತಿಗಳಂತೆ ಇಹ ಪರದ ಬಯಕೆ ಇಲ್ಲದೆ ಶ್ರೀಗುರುವು ಶಿಷ್ಯನ ಶಿರದರಮನೆಯ ಲ್ಲಿದ್ದ ಚೈತನ್ಯ ಚಿತ್ಕಲಾವಸ್ತುವನ್ನು ತನ್ನ ಕರಮನಭಾವಗಳಿಂದ ಆಕರ್ಷಿಸಿ ತಂದು ಶಿಷ್ಯನ ಕರಮನಭಾವಸ್ಥಾನಗಳಲ್ಲಿ ಇಷ್ಟಪ್ರಾಣಭಾವಲಿಂಗವನ್ನಾಗಿರಿಸಿರುವ ತಮಗೆ ಅಭಿನ್ನವಾದ ಶಿವಾರ್ಚನ, ಶಿವಾರ್ಪಣ, ಶಿವಾನುಭವನಿಷ್ಠ ಲಿಂಗಭೋಗೋಪಭೋಗಿಗಳು ವೀರಶೈವರು.

೧೨

ಉಪನಯನ ಕರ್ಮದಿಂದ ಪ್ರಾಪ್ತವಾದ – ಕೊರಳಲ್ಲಿ ಹಾಕಿಕೊಂಡ–ಜನಿವಾರ ವನ್ನು ಕ್ಲುಪ್ತವಾದೊಂದೊಂದು ಕಾಲವನ್ನನುಸರಿಸಿ ಮತ್ತೆ ಮತ್ತೆ ಅದನ್ನು ಕಿತ್ತೊಗೆದು ಮಗದೊಂದು ಹೊಸ ಜನಿವಾರವನ್ನು ಹಾಕಿಕೊಳ್ಳುವರು ಶೈವರು.

"ಪ್ರಾಣವದ್ಧಾರಣೀಯಂ ತತ್ಪ್ರಾಣಲಿಂಗಮಿದಂ ತವ ||"

ಎಂದಿರುವ ವಚನದಂತೆ ದೀಕ್ಷಾಸಂಸ್ಕಾರದಿಂದ ಶ್ರೀ ಗುರೂಪದೇಶಲಬ್ಧ ಶಿವಲಿಂಗ ವನ್ನು ಒಂದರಗಳಿಗೆಯೂ ಅಂಗದಿಂದ ಅಗಲಿಸದಂತೆ ಸಾವಧಾನ ಭಕ್ತಿಯಿಂದ ತಮ್ಮ ಜೀವಮಾನದವರೆಗೂ ಎಡಬಿಡದೆ ಧರಿಸಿಕೊಂಡಿರುವರು ವೀರಶೈವರು.

ಶೈವ–ವೀರಶೈವ ಸಂಸ್ಕೃತಿ, ಆಚಾರ ವ್ಯವಹಾರಾದಿ ಸತ್ಕ್ರಿಯಾ ಕಲಾಪ ದಲ್ಲಿ ಇಷ್ಟು ವಿಶೇಷ ಅಂತರ ಇದೆ ಎಂಬುದನ್ನು ಶ್ರೀಗುರು ಕೃಪೆಯಿಂದ ಅರಿತ ಮಟ್ಟಿಗೆ ದಿಗ್ದರ್ಶನ ಮಾಡಲಾಗಿದೆ.



# ಇಷ್ಟಲಿಂಗೋಪಾಸನೆಯಲ್ಲಿ ಆತ್ಮವಿಕಾಸ.

ಸೂರ್ಯಸಿಂಹಾಸನಾಧೀಶ್ವರ ಶ್ರೀ ಜ. ಚ. ನಿ.

ನಾವೀಗ ಹೊಸ ಯುಗದಲ್ಲಿ ಹೆಜ್ಜೆ ಹಾಕಿದೇವೆ. ಕ್ರಾಂತಿ ಕಾಲದಲ್ಲಿದ್ದೇವೆ. ವಿಜ್ಞಾನ ಪ್ರಪಂಚದಲ್ಲಿ ಬಾಳುತ್ತಿದ್ದೇವೆ. ಬೆಳಗಾದರೆ ಬೇರೊಂದನ್ನು ಶೋಧಿಸಿ ವಸ್ತು ಸಾಧಿಸುವಷ್ಟು ವಿಜ್ಞಾನ ವಿಜೃಂಭಿಸಿ ನಿಂತಿದೆ. ಯಾವುದನ್ನೂ ವಿಚಾರಕ್ಕೆ ವಿಮರ್ಶೆಗೆ ತಂದು ತೀರುವ – ತೆರೆದು ತೋರುವ ಸಮಯವಿದಾಗಿದೆ. ಮೂಢ ನಂಬುಗೆಯ ಯುಗ ಹಿಂದುಳಿಯಿತು. ರೂಢಿಯಾಚಾರಗಳಲಿ ಹಲವು ಹಳಸುವಂತಾಯಿತು. ಹಳೆಯವೇ ಹಲವು ಹೊಸದಾಗಿ ತೋರುವಂತಾಯಿತು. ಯಾವ ತತ್ವವೇ ಆಗಲಿ, ಎಷ್ಟೇ ಹಳೆಯದೇ ಆಗಲಿ ಅದಕ್ಕೆ ಹೊಸ ಮೆರಗು ಬೇಕೇ ಬೇಕು. ಹೊಸ ದೃಷ್ಟಿಯಿಂದ ನೋಡಬೇಕು. ಬಾಳಿಗೆ ಬೆಳಗನು ತರುವದಾಗಬೇಕು. ಒಂದು ವೇಳೆ ಮೊತ್ತಮೊದಲಿಗೆ ಆ ಶಕ್ತಿ ಆ ಬೆಳಕು ಇದ್ದು ಮಧ್ಯದಲ್ಲಿ ಮುಚ್ಚಿದ್ದರೆ ಆ ಮುಸುಗನ್ನು ಓರೆ ಮಾಡಬೇಕು. ಕಣ್ಣಿಗೆ ಕಾಣಿಸುವಂತಾಗಬೇಕು. ಕೈಗೆ ನಿಲುಕುವಂತಾಗಬೇಕು. ಒಂದು ದೃಷ್ಟಿಯಿಂದ ನೋಡಿದರೆ ಇದುವೇ ದಿಟ, ಇದವೇ ಸ್ಫುಟವೆಂದು ವ್ಯಕ್ತವಾಗುತ್ತದೆ. ಇದುವೇ ಪ್ರಯೋಜಕವೆಂದು ಪರಿಣಾಮಕಾರಿಯೆಂದು ಪರಿಗಣಿಸಬೇಕಾಗಿದೆ.

ಈ ದಿಸೆಯಲ್ಲಿ ಇಷ್ಟಲಿಂಗದ ವಿಷಯವಾಗಿಯೂ ಹೊಸ ನೋಟವನ್ನು ಚೆಲ್ಲಬೇಕಾಗಿದೆ. ಮುಚ್ಚಿದ ಮುಸುಗನ್ನು ತೆರೆಯಬೇಕಾಗಿದೆ. ಹೊಸ ತರುಣರು ಹೃದಯಾರೆ ಒಪ್ಪುವಂತೆ ಹೇಳಬೇಕಾಗಿದೆ. ಎಸೆಯಿಂಪೆತ್ತಿ ಎಲ್ಲಿಯೋ ಇಟ್ಟುಬಿಟ್ಟ ಲಿಂಗಗಳು ಮರಳಿ ಎದೆಗೆ ಬರುವಂತೆ ಬರೆಯಬೇಕಾಗಿದೆ. ಯುವಕರ ಮನಸ್ಸನ್ನು ಒಪ್ಪಿಸಿ ಆಕರ್ಷಿಸಬೇಕಾಗಿದೆ. ಆದರೆ ಜೊಳ್ಳು ಬಗೆಯಲ್ಲಲ್ಲ; ಮುಳ್ಳು ಮಾತಿ

ನಲ್ಲಲ್ಲ. ಸತ್ಯ ಪಥವಲ್ಲಿಯೆ ಸಾಧಿಸಬೇಕಾಗಿದೆ. ಹೊಸದನ್ನು ಹೇಳದಿದ್ದರೆ ಹೋಗಲಿ ಹಿಂದಿದ್ದ ನಿಜಸ್ವರೂಪು ಮಧ್ಯದಲ್ಲಿ ಮಾಯವಾಗಿ ಅಂದೆರೆ ಹಿನ್ನೆಲೆಯಾಗಿ ನಿಂತು ಹೋಗಿದ್ದುದನ್ನೇ ಮತ್ತೆ ಮನವಟ್ಟಾಗುವಂತೆ ಇಂದಿನ ಭಾಷೆ ಬಗೆಗಳಲ್ಲಿ ಬಿತ್ತರಿಸಬೇಕಾಗಿದೆ. ಈ ಕೆಲಸ ಆಂಗ್ಲ ಭಾಷೆಯನ್ನರಿಯದ ನಮ್ಮಂಥವರಿಂದ ಕಷ್ಟ ಸಾಧ್ಯವಾದರೂ ಕರ್ತವ್ಯ ದೃಷ್ಟಿಯಿಂದ ಕೈಕೊಂಡುದಾಗಿದೆ. ಕನ್ನಡ ಕರುಳಿಗೆ ಆದೆಷ್ಟು ಸಾಧ್ಯವೋ ಅಷ್ಟನ್ನು ಮಾತ್ರ ಇಲ್ಲಿ ಮಾಡಬಯಸಿದೇವೆ. ಕಂಡರಿತಷ್ಟನ್ನೆ ಕಾಣಬಯಸಿದೇವೆ. ಲಿಂಗವನ್ನು ನಿರೀಕ್ಷಿಸುವ ದೃಷ್ಟಿ ಇಬ್ಬಗೆಯಾಗಿದೆ. ಒಂದು ವಿಶ್ವಾಸ ದೃಷ್ಟಿ! ಇನ್ನೊಂದು ವಿಮರ್ಶ ದೃಷ್ಟಿ! ಇಂದು ಇವೆರಡೂ ಅಗತ್ಯ. ಈ ಎರಡು ದೃಷ್ಟಿಗಳ ಸಮನ್ವಯದೊಡನೆ ಮುಂದೆ ಸಾಗುತ್ತೇವೆ.

ಆತ್ಮ ವಿಕಾಸಕ್ಕೂ ವಿಶ್ವ ಪ್ರಕಾಶಕ್ಕೂ ಕಾರಣವಾದ ಲಿಂಗ ತತ್ತ್ವವಿಚಾರ ವೈಶಾಲ್ಯ ಅಪಾರವಾದುದು: ಅಷ್ಟೇ ಅತ್ಯಂತ ಆತ್ಮೀಯವಾದುದು. ಆತ್ಮ ಜ್ಯೋತಿ ರೂಪಾದ ಲಿಂಗವು ಆತ್ಮ ಪ್ರಗತಿಯ ಕುರುಹಾಗಿದೆ. ಅಖಂಡ ಮಹಾ ಚೈತನ್ಯ ರೂಪಾದ ಲಿಂಗವು ವಿಶ್ವ ತತ್ತ್ವಕ್ಕೆ ಭಾಂಡಾರದಂತಿದೆ. ವ್ಯಕ್ತಿ – ವಿಶ್ವಗಳೆರಡರ ಶಕ್ತಿ ಸಮನ್ವಯ ಕಾರಣವಾಗಿದೆ ಈ ಇಷ್ಟಲಿಂಗ. ವ್ಯಕ್ತಿ ವಿಕಾಸಕ್ಕೆ ಯಾವ ಯಾವ ಸಾಧನ ಸಂಪತ್ತುಗಳು ಬೇಕೋ ಅವೆಲ್ಲ ಈ ಇಷ್ಟಲಿಂಗದಲ್ಲಿವೆ. ವಿಶ್ವ ಪ್ರಕಾಶ ಗೊಳಿಸುವ ಮಹಾ ಬೆಳಗಿದೆ ಈ ಇಷ್ಟಲಿಂಗದಲ್ಲಿ! ಆ ಮಹಾ ಚೈತನ್ಯದ ಲೀಲೆಯೇ ಈ ಇಷ್ಟಲಿಂಗ!

ಆ ಮಹಾ ಚೈತನ್ಯವ ಬಿಟ್ಟು ವಿಶ್ವವಿಲ್ಲ. ವಿಶ್ವವನ್ನು ಬಿಟ್ಟು ಆ ಮಹಾ ಚೈತನ್ಯವಿಲ್ಲ. ವಿಶ್ವ ತಾಯಿ, ಆ ಮಹಾ ಚೈತನ್ಯ ತಂದೆ. ಇವೆರಡನ್ನೂ ಒಳ ಗೊಂಡು ರೂಪಿತವಾದ ಲಿಂಗವು ಇಷ್ಟಲಿಂಗವಲ್ಲದೆ ಮತ್ತೇನು? ಇಷ್ಟಲಿಂಗವೆಂದರೆ ಬೇಕಾದ ಲಿಂಗ; ಬೇಡಿದ್ದನ್ನು ಕೊಡುವ ಲಿಂಗ. ಅಲ್ಲದೆ ಅನಿಷ್ಟಗಳನೆಲ್ಲ ಓಡಿಸುವ ಲಿಂಗ. ಆದ್ದರಿಂದ ಅರ್ಚನಾರ್ಹಲಿಂಗ. ಈ ಎಲ್ಲ ಅರ್ಥಗಳಲ್ಲಿ ಇಷ್ಟಲಿಂಗವು ಸಾರ್ಥಕವಾಗಿದೆ; ಅನ್ವರ್ಥಕವಾಗಿದೆ.

ಉಪಾಸನೆ ಹಲವು ಬಗೆಯಾಗಿದೆ. ಅವೆಲ್ಲವನ್ನು ಮುಖ್ಯವಾಗಿ ಬಾಹ್ಯೋಪಾಸನೆ – ಆತ್ಮೋಪಾಸನೆ ಎಂದು ಎರಡು ಬಗೆಯಾಗಿ ವಿಂಗಡಿಸಬಹುದು. ಬಾಹ್ಯೋಪಾಸನೆಗಿಂತ ಆತ್ಮೋಪಾಸನೆ ಆತ್ಯಂತಿಕವಾದುದು, ಆವಶ್ಯಕವಾದುದು. ಮೊದಲು ಆತ್ಮೋಪಾಸನೆಯನ್ನಾಡಿ ಆತ್ಮಪ್ರಗತಿ, ಆತ್ಮಜ್ಯೋತಿಗಳನ್ನು ಪಡೆಯದಲೆ ಬಾಹ್ಯೋಪಾಸನೆಯು ಪರಿಣಾಮಕಾರಿಯಾಗದು.

ಆತ್ಮೋಪಾಸನೆಯೆಂದರೆ ತನ್ನ ಅಂಗ – ಆತ್ಮಗಳೆರಡರ ಉಪಾಸನೆ. ಇವೆರಡರ ಅಸ್ತಿತ್ವವನ್ನು ಪರಿಪಾಲಿಸಿಕೊಳ್ಳುವುದೇ ಆತ್ಮೋಪಾಸನೆ. ಅಂತೆಯೆ ಅನುದಿನ

ಬಳಕೆಯಿಂದ ಕಳೆದುಕೊಳ್ಳುವ ಅಂಗ ಆತ್ಮಗಳೆರಡೂ ತಮ್ಮ ಶಕ್ತಿಯನ್ನು (ಸವಕಳಿಯನ್ನು) ಮರಳಿ ತುಂಬಿಕೊಳ್ಳುವ ಕಾರ್ಯವೇ ಆತ್ಮೋಪಾಸನೆ. ಆತ್ಮವೇ ಲಿಂಗ. ಲಿಂಗೋಪಾಸನೆಯೆ ಆತ್ಮೋಪಾಸನೆ. ಲಿಂಗೋಪಾಸನೆಯಿಂದ ಅಂಗ ಆತ್ಮಗಳೆರಡೂ ಪುಷ್ಟಿಗೊಳ್ಳುತ್ತವೆ; ತುಷ್ಟಿಗೊಳ್ಳುತ್ತವೆ, ಅಂಗಾಂಗಗಳಲ್ಲೆಲ್ಲ ಆತ್ಮನಿರುವಂತೆ. ಆತ್ಮರೂಪಾದ ಲಿಂಗವೂ ಇರುತ್ತದೆ. ಆ ಆ ಲಿಂಗೋಪಾಸನೆಯಿಂದ ಆ ಆ ಅಂಗಾಂಗಗಳು ತಂತಮ್ಮ ಕೊರತೆಗಳನ್ನು ಕಳೆದುಕೊಳ್ಳುತ್ತವೆ. ಕಾಂತಿಯುಳ್ಳವಾಗುತ್ತವೆ.

ಅಂಗದಂತಿರುವ ಅಷ್ಟಾವರಣದಲ್ಲಿ ಇಷ್ಟಲಿಂಗವು ಎರಡನೆಯದು. ಇದನ್ನು ಮೊದಲಿನವರಾದ ಗುರುದೇವನು ಕರುಣಿಸುವನು. ಕರುಣಿಸಿದ ಕರದಿಷ್ಟವು ತನ್ನದೇ ಆದ ಆತ್ಮಶಕ್ತಿ! ತನ್ನ ಅಂತಃ ಶಕ್ತಿಯನ್ನು ತಾನೇ ಬಹಿಷ್ಕರಿಸಿಕೊಳ್ಳಲು ಸಾಧ್ಯವಿಲ್ಲ. ಇದು ಸೃಷ್ಟಿಯ ನಿಯಮವೂ ಅಲ್ಲ. ಚೇತನ ಸ್ವರೂಪವಾದ ತನ್ನ ಆ ಶಕ್ತಿಯನ್ನು ಜ್ಞಾನಾಂಗಕ್ಕೆ ತಂದು ಅಲ್ಲಿಂದು ಕ್ರಿಯಾಂಗಕ್ಕೆ ತಂದು ಕೊಡುವ ಕೆಲಸ ಗುರುವಿನದು. ಕ್ರಿಯಾಪ್ರಧಾನವಾದ ಇಷ್ಟಲಿಂಗವನ್ನು ಗುರು ಕರಕ್ಕೆ ಕರುಣಿಸುವನು. ಕಣ್ಣಾರೆ ಕಾಣೆಂದು ಭೋಧಿಸುವನು. ಶಿಲೆ – ಕಂಥೆಗಳಲ್ಲಿ ಮಂತ್ರವನಿರಿಸಿ ಆತ್ಮಕಳೆಯ ಅಳವಡಿಸಿ ಕೊಡುವನು. ಕಲ್ಲು ಕಾಂತಿಗಳು ನೆಲೆಯಾದರೆ ಆತ್ಮಜ್ಯೋತಿಯು ಕಳೆಯಾಗಿ ಅದರಲ್ಲಿರಿಸಲಾಗುತ್ತದೆ. 'ಸಂಗದಿಂದಲ್ಲದೆ ಅಗ್ನಿ ಹುಟ್ಟದು. ಸಂಗದಿಂದಲ್ಲವೆ ಬೀಜ ಮೊಳೆದೋರದು....' ಎಂಬ ಮಹಾದೇವಿಯಕ್ಕನ ಮಾತಿನಂತೆ ಗುರುಶಿಷ್ಯರಿಬ್ಬರ ದೃಷ್ಟಿ ಮನಭಾವಗಳ ಸಂಗದಿಂದ ಆತ್ಮಕಳೆಯು ಹೊಮ್ಮಿ ಶಿಲೆಕಂತೆಗಳಲ್ಲಿ ನಿಂದು ಲಿಂಗವಾಗುತ್ತದೆ. ಲಿಂಗಾರಾಧನೆಯೆಂದರೆ ಆತ್ಮಾರಾಧನೆ. ಆತ್ಮ ಬೇರಲ್ಲ; ಲಿಂಗ ಬೇರಲ್ಲ. ಆತ್ಮ ಪ್ರಗತಿಗಾಗಿ ಲಿಂಗಾರಾಧನೆಯ ಮಾಡಬೇಕಾಗಿದೆ. ಆತ್ಮ ಪ್ರಗತಿ ಕ್ರಿಯೆಯಲ್ಲಿದೆ. ಆ ಕ್ರಿಯೆಯನ್ನು ಮಾಡಿಸುವುದೆ ಇಷ್ಟಲಿಂಗದ ನಿಜ ನೆಲೆ, ಕಲೆ! ಕ್ರಿಯೆಯೆಂದರೆ ಜಡಕರ್ಮವಲ್ಲ. ತನ್ನ ಪ್ರಗತಿಗೆ ಪ್ರಪೂರ್ಣತೆಗೆ ಕಾರಣವಾದ ಪೂಜೆ ಮತ್ತು ಕಾಯಕ. ಇವೆರೆಡೂ ಕೈಯಿಂದಲೇ ನಡೆಯಬೇಕು. ಕಾರಣ ಕೈಗೆ ಈ ಕ್ರಿಯಾಚರಣೆಯ ಬೋಧಿಸುವುದೇ ಕ್ರಿಯಾಲಿಂಗಧಾರಣದ ಗುರಿ. ಕರ್ಮೇಂದ್ರಿಯ ಜ್ಞಾನೇಂದ್ರಿಯಗಳೆಲ್ಲ ಸತ್‌ಕ್ರಿಯಾನಿರತವಾಗಬೇಕು, ಹಾಗಾಗುವುದರಿಂದ ಅವೆಲ್ಲವೂ ಚಿರಕಾಲ ಶಕ್ತಿಸಂಪನ್ನವಾಗಿ ಶಾಂತಿಯಿಂದ ಬಾಳಬಲ್ಲವು. ಈ ಶಕ್ತಿಯನ್ನು ಸಂಪಾದಿಸುವುದೆ ಶಕ್ತಿವಿಶಿಷ್ಟಾದ್ವೈತದ ಸಿದ್ಧಾಂತ!

ಶಕ್ತಿ ಅನಂತ. ಅವುಗಳಲ್ಲಿ ದೃಷ್ಟಿಶಕ್ತಿ ಮೊದಲಿನದು. ದೃಷ್ಟಿಯಿಂದ ಸೃಷ್ಟಿ. ಸೃಷ್ಟಿ ಮೂಲವಾದ ದೃಷ್ಟಿಗೆ ಶಕ್ತಿಯನ್ನು ಸಂಗಳಿಸುವುದು ಲಿಂಗೋಪಾಸನೆಯ ಮೊದಲು ಕೆಲಸ. ದೃಷ್ಟಿ ಶಕ್ತಿ ದ್ವಿವಿಧ. ನೂರು ವರುಷ ಕಾಣುವಂತೆ ಮಾಡಿಕೊಳ್ಳುವುದು ಒಂದು. ಕಣ್ಣಿಂದ ಕಂಡ ವಸ್ತು ವ್ಯಕ್ತಿ ಇವೆರಡು ಪಾವನವಾಗು

ವುದು ಮತ್ತೊಂದು. ಇವೆರಡನ್ನು ಒದಗಿಸಿಕೊಡುತ್ತದೆ ಲಿಂಗನಿರೀಕ್ಷಣೆಯ ರೂಪ ಇಷ್ಟಲಿಂಗೋಪಾಸನೆ.

## ಕರದಿಷ್ಟದಲ್ಲಿ ಕಣ್ಬೆಳಗು.

ಉಪಾಸನೆಯ ವಸ್ತುಗಳು ಹಲವಿವೆ. ಅವುಗಳಲ್ಲಿ ಬೆಳಕು, ಚೇತನ, ಜಡ ವಸ್ತುಗಳು ಮುಖ್ಯ; ಮೂಲ. ಈ ಮೂರು ಒಂದಾದ ವಸ್ತುವೇ ಕರದಿಷ್ಟ ಲಿಂಗ!

ಬೆಳಕು ಬೇಕಾದಷ್ಟಿವೆ. ಅವುಗಳಲ್ಲಿ ಕಣ್ಬೆಳಕು ಮೊದಲಿನದು ಮಾನವ ಜೀವನಕ್ಕೆ! ಅದಿಲ್ಲದ ಮೇಲೆ ಇನ್ನಾವ ಬೆಳಕಿದ್ದರೂ ಉಪಯೋಗವಿಲ್ಲ. ಅಂತಹ ಕಣ್ಬೆಳಕನು ಕಳೆಯೇರಿಸುವ ಕಮ್ಮಿಯಾಗದಂತಿರಿಸುವ ಬೆಳಕು ಇಷ್ಟಲಿಂಗ; ಇದರಲ್ಲಿ ಕಣ್ಣಿಗೆ ಬೇಕಾಗುವ ಕಾಂತಿಯಿದೆ; ವಿದ್ಯುತ್ತಿದೆ. ಅದನ್ನು ಕಂತೆ (ಕಂಥೆ) ಅಥವಾ ಅಷ್ಟಬಂಧ – ಸಜ್ಜರಸವೆಂದು ಹೇಳುತ್ತಾರೆ, ಅದರಲ್ಲಿ ಕಣ್ಣಿಗೆ ಬೇಕಾದ ಜ್ಯೋತಿಯಿದೆ. ಆ ಕಪ್ಪು ಕಂಥೆಯಲ್ಲಿ ಕಣ್ಣನ್ನು ಆಕರ್ಷಿಸುವ ಶಕ್ತಿಯಿದೆ; ಆಕರ್ಷಿಸಿ ತನ್ನ ಬೆಳಕನ್ನು ಕಣ್ಣಿಗೆ ತುಂಬಿ ತರುವ ಶಕ್ತಿಯಿದೆ. ಸೃಷ್ಟಿಯಲ್ಲಿ ದೃಷ್ಟಿಯಲ್ಲಿ ಅನೇಕ ಬಣ್ಣಗಳಿವೆ. ಆದರೆ ಅವುಗಳಲ್ಲೆಲ್ಲ ದೃಷ್ಟಿಗೆ ಬೇಕಾದ ಪೋಷಕವಾದ ಅಪಾಯ ರಹಿತವಾದ ಬಣ್ಣ ಕಪ್ಪು. ಕಪ್ಪಿನಲ್ಲಿ ಕಳೆಯಿದೆ. ಎರಡು ಕಪ್ಪು ಕೂಡಿದರೆ (ಮಥಿಸಿದರೆ) ಕಾಂತಿ ಹೊಮ್ಮುತ್ತದೆ. ಎರಡು ಮೋಡಗಳು ಮುಗಿಲಲ್ಲಿ ಕೂಡಿದರೆ ಮಿಂಚು ಹೊರಹೊಮ್ಮಿ ಬರುವಂತೆ ಬರುತ್ತವೆ. ಮಿಂಚು ಕ್ಷಣಬಂಗುರ! ಆದರೆ ಕರದಿಷ್ಟ ಮತ್ತು ಕಣ್ಣಕನೀನಿಕೆಗಳ ಸಮ್ಮಿಲನದಿಂದ ಸಂಭವಿಸುವ ಕಾಂತಿ (ಜ್ಯೋತಿ) ಕ್ಷಣಿಕವಲ್ಲ. ಅದುವೇ ಅರಿವಾಗಿ ಅಂತರಂಗದಲ್ಲಿ ಅಳವಡುತ್ತದೆ. ಅದೇ ಅನುಭೂತಿಯಾಗಿ ಆತ್ಮನಲ್ಲಿ ನೆಲೆನಿಲ್ಲುತ್ತದೆ. ಕರದಿಷ್ಟದಲ್ಲಿ ದೃಷ್ಟಿ ನಟ್ಟು ಸ್ಥಿರವಾದಾಗ ಕರದಿಷ್ಟವೇ ಶಿರದಿಷ್ಟವಾಗಿ ಅಂದರೆ ಅರುವಿನ ಅಚ್ಚಿಯಾಗಿ ಅಚ್ಚೊತ್ತುತ್ತದೆ. ಅಲ್ಲದೆ ನಿತ್ಯ ನೋಡುವುದರಿಂದ ಕಮ್ಮಿಯಾಗುವ ಕಣ್ಣಿನ ಬೆಳಕನ್ನು ಬಲವನ್ನು ತುಂಬಿ ತರುತ್ತದೆ ಇಷ್ಟಲಿಂಗದ ನಿರೀಕ್ಷಣೆ; ಈ ಲಿಂಗ ನಿರೀಕ್ಷಣೆಯ ರೂಪ ಉಪಾಸನೆ! ಇಷ್ಟಲಿಂಗದ ನಿರೀಕ್ಷಣೆಯ ಉಪಾಸನೆಯಿಂದ ಬಾಹ್ಯಬಾಳಿನ ಸರ್ವಸ್ವವಾದ ಕಣ್ಣುಗಳು ಎಂದಿಗೂ ರೋಗವಿಲ್ಲದೆ ನೂರು ವರುಷ ಮಂದವಾಗದೆ ಕಳೆಯಿಂದ ಕಾಣುವ ಶಕ್ತಿ ಸಂಪನ್ನವಾಗಿ ಬಾಳುತ್ತವೆ. ಜತೆಗೆ ಅಂತರಂಗದ ಬಾಳಿಗೆ ಆ ಅರುವಿನ ಕಣ್ಣು ಮೂಡಿ ಬರುತ್ತವೆ. ಅಷ್ಟೇ ಅಲ್ಲ ಕರದಿಷ್ಟವೇ ಕಣ್ಣಾಗುತ್ತದೆ:

"ಕಣ್ಣಿಂಗೆ ಕಣ್ಣು, ಕಣ್ಣೊಳು ಕಣ್ಣು ; ಕಣ್ಣೇ ನೇತ್ರ.
ನೇತ್ರವೇ ಸೂತ್ರ ; ಸೂತ್ರವೇ ಲಿಂಗ ; ಲಿಂಗವೇ ಗುಹ್ಯ....
ಈ ನೇತ್ರ ಮಹಿಮೆಯಂ ಗುಹ್ಯೇಶ್ವರ ಬಲ್ಲನಲ್ಲದೆ,
ಕಣ್ಣುಗೆಟ್ಟಣ್ಣಗಳೆತ್ತ ಬಲ್ಲರು ನೋಡೈ ಗುಹ್ಯೇಶ್ವರಾ!"

ಕಣ್ಣೇ ಕರದಿಷ್ಟ; ಕರದಿಷ್ಟವೇ ಕಣ್ಣಿಗೆ ಕಣ್ಣು; ಪ್ರಾಣಕ್ಕೆ ಪ್ರಾಣ ಎಂದು ಹೇಳುವ ಪ್ರಭುದೇವರ ಈ ಅನುಭೂತಿ ಅಗಾಧವಾದುದು. ಅವರು ಮುಂದು ವರಿದು,

"ನೋಟವೆ ಕೂಟ; ಕೂಟವೆ ಪ್ರಾಣ; ಪ್ರಾಣವೆ ಏಕ.
ಏಕವೆ ಸಮರಸ; ಸಮರಸವೆ ಲಿಂಗ; ಲಿಂಗವೆ ಪರಿಪೂರ್ಣ.
ಪರಿಪೂರ್ಣವೆ ಪರಬ್ರಹ್ಮ; ಪರಬ್ರಹ್ಮವೆ ತಾನು.
ಇಂತೀ ನಿಜವ ಗುಹ್ಯೇಶ್ವರ ಬಲ್ಲನಲ್ಲದೆ
ಕಣ್ಣುಗೆಟ್ಟಣ್ಣಗಳೆತ್ತ ಬಲ್ಲರು ನೋಡೈಗುಹ್ಯೇಶ್ವರ."

ನೋಟಕ್ಕೂ ಲಿಂಗಕ್ಕೂ ತನಗೂ ಇರುವ ಸಾಮರಸ್ಯ ಸಂಪೂರ್ಣತೆ ಸರ್ವಜ್ಞತೆಗಳನ್ನು ಚಿತ್ರಿಸುವ ಈ ವಚನದ ಮುಂದೆ ಮತ್ತೆ ಮಾತಿಲ್ಲ.

ಜೀವನದಲ್ಲಿ ಎಲ್ಲ ಸೂತ್ರಗಳಿಗಿಂತ ಲಿಂಗ ಸೂತ್ರವೇ ಮಿಗಿಲು. ಆ ಲಿಂಗ ಸೂತ್ರವು ಹರಿದು ಹೋಗದಂತೆ ಇರಿಸಬಲ್ಲುದು ನೇತ್ರಸೂತ್ರ. ಇವೆರಡಿಲ್ಲದೆ ಜೀವನ ಸೂತ್ರ ಭದ್ರವಾಗದು; ಶುಭ್ರವಾಗದು.

ಜೀವನದಲ್ಲಿ ಏನು ಕೆಟ್ಟರೂ ಬಾಳಬಹುದು. ಕಣ್ಣು ಕೆಟ್ಟರೆ ಬಾಳುವುದು ಕಷ್ಟ! ಕಡುಕಷ್ಟ! ಕುರುಡು ಬಾಳು ಬಾಳಿದರೇನು? ಬಾಳದಿದ್ದರೇನು? ಕಲಾಹೀನ ಬಾಳಿಗೆ ಕಳೆಯಿದೆಯೆ? ಬಹಿರಂಗದ ಕಲೆಯನ್ನೇ ಆಗಲಿ ಅಂತರಂಗದ ಕಲೆಯನ್ನೇ ಆಗಲಿ ಅವನ್ನು ಕಾಣುವ ಕಣ್ಣು ಇಲ್ಲದ ಜೀವನ ಅದೊಂದು ಜೀವನವಲ್ಲ. ಅಂತಹ ಕಣ್ಣಿಗೆ ಕಣ್ಣಾದ ಕರದಿಷ್ಟಲಿಂಗವಿಲ್ಲದ ಬಾಳು ಹಾಳು. ಆದ್ದರಿಂದ ಕರದಿಷ್ಟಲಿಂಗದಲ್ಲಿ ಕಣ್ಣಿಟ್ಟು ಕಣ್ಣಿನ ಕಳೆಯನ್ನು ಕಲಿತನವನ್ನು ಕಾಪಾಡಿಕೊಳ್ಳಬೇಕು. ಈ ದೃಷ್ಟಿಯಿಂದ ಇಷ್ಟಲಿಂಗಧಾರಣೆ ಅತ್ಯವಶ್ಯ; ನಿತ್ಯ ನಿರೀಕ್ಷಣೆ ಅತ್ಯಗತ್ಯ.

## ಚಿಲ್ಲಿಂಗದಲ್ಲಿ ಚೇತನ.

ಬಾಳಿಗೆ ಬೆಳಕು ಬೇಕೆಂದಾಗ ಆ ಬೆಳಕನ್ನು ಕಾಣುವ ಚೈತನ್ಯದ ಅಪೇಕ್ಷೆ ಅನಿವಾರ್ಯ. ಚೈತನ್ಯವೇ ಚರಾಚರಕ್ಕೆ ಮೂಲ. ಇದಿಲ್ಲದ ಮೇಲೆ ಇನ್ನಾವುದಿಲ್ಲ. ಆ ಅಖಂಡ ಚೈತನ್ಯ ಒಂದೇ ಆಗಿದ್ದರೂ ಉಪಾಧಿಯಿಂದ ಅನಂತವಾಗಿದೆ; ಅಲ್ಪಶಕ್ತಿಗಿಳಿದಿದೆ, ಈ ಜೀವನು ಈ ಅಲ್ಪಶಕ್ತಿಯಿಂದ ಅನಲ್ಪಶಕ್ತಿಗೇರುವುದೇ ಗಮ್ಯಗುರಿ.

ಚೇತನಗಳಲ್ಲಿ ಆತ್ಮ ಚೇತನವೇ ಚೇತನ. ಅದನರಿವ ಸಾಧನವೇ ಸಾಧನ. ಆತ್ಮ ಚೇತನದ ಹತ್ತಿರಕ್ಕೊಯ್ಯುವ ವಸ್ತುಗಳಲ್ಲಿ ಇಷ್ಟಲಿಂಗದ ಪಾತ್ರ ಪ್ರಧಾನವಾದುದು. ಚೇತನವೇ ಚಿದ್ಬ್ರಹ್ಮ. ಚೇತನವೇ ಬಾಳು. ಚೇತನವೇ ಬದುಕು. ಆ ಚಿದ್ಬ್ರಹ್ಮನ ಬಳಿಗೊಯ್ಯುವ ಕುರುಹೇ ಇಷ್ಟಲಿಂಗ! 'ಈಶ್ವರಃ ಸರ್ವಭೂತಾನಾಂ ಹೃದ್ದೇಶೇ ತಿಷ್ಠತಿ' ಎಂಬಂತೆ ಎದೆಯಲ್ಲಿದ್ದ ಲಿಂಗವು ಚೇತನವನ್ನು ಚೇತನ

ಸ್ಥಾನವನ್ನು ನೇರವಾಗಿ ಗುರುತಿಸುವ ನಿಜಕುರುಹಾಗಿದೆ. ತನ್ನ ಅಸ್ತಿತ್ವವನ್ನೇ ಅರುಹುವ ಕುರುಹಾಗಿದೆ ಈ ಇಷ್ಟಲಿಂಗ! ತನ್ನನ್ನೇ ತಾನೋಡಿಕೊಳ್ಳುವ ತತ್ವಕ್ಕೆ ಭಾಗ್ಯಕ್ಕೆ ತಂದಿರಿಸುತ್ತದೆ ಈ ಕರದಿಷ್ಟಲಿಂಗ!

ವಿಶ್ವದ ವಸ್ತುಗಳಲ್ಲೆಲ್ಲಾ ಎರಡಂಗಗಳಿವೆ. ಒಂದು ಜಡಾಂಗ; ಇನ್ನೊಂದು ಅಜಡ ಅಂದರೆ ಚೇತನಾಂಗ. ಈ ಚೇತನಾಂಗವ ಗುರುತಿಸುವುದೇ ವಿಜ್ಞಾನ. ಇದನರಿಯದೆ ಬರೀ ಜಡಾಂಗವನರಿತಿರುವುದೇ ಅಜ್ಞಾನ. ಇದರಿಂದ ಪೂರ್ಣಫಲ ವಿಲ್ಲ. ಇದರಿಂದಾಗಿ ಚೇತನ ಜ್ಞಾನ ಬೇಕು. ಅದನರಿತವನೇ ಸರ್ವಜ್ಞ.

ಅಂತಹ ಆ ಚೇತನವ ಗುರುತಿಸುವ ಸಾಧನ ನಾದ. ಆ ನಾದವನ್ನು ಹಿಡಿದಿ ಪುವುದು ಶಬ್ದ. ಈ ಶಬ್ದವು ಆ ಚೇತನದ ಬಳಿಸಾರಲು ಮಂತ್ರವಾಗಿದೆ. ಈ ಮಂತ್ರ ಮಾಯವಾಗಿರುವುದೇ ಇಷ್ಟಲಿಂಗಾಕಾರ. ಇದನರುಹುವವನೆ ಶ್ರೀ ಗುರು.

"ಲಿಂಗಗರ್ಭೋದ್ಭವೋ ಮಂತ್ರೋ ಮಂತ್ರಗರ್ಭೋದ್ಭವಶ್ಶಿವಃ
ಲಿಂಗಮಂತ್ರದ್ವಯೋರೈಕ್ಯಂ ವೀರಶೈವಮಿತಿ ಸ್ಮೃತಂ"

ಇದರಿಂದ ತೇಲುವುದೇನೆಂದರೆ: ಚೇತನದ ಅಭಿವ್ಯಕ್ತಿ ನಾದದಲ್ಲಿ ನಾದಮಯ ಮಂತ್ರದಲ್ಲಿ ಆಗುವಷ್ಟು ಇನ್ನಾವುದರಲ್ಲಿಯೂ ಆಗುವುದಿಲ್ಲ. ಮಂತ್ರಾಭಿವ್ಯಕ್ತಿ ಮಾನವನಲ್ಲಿ. ಆದ್ದರಿಂದ ಮಂತ್ರ ಲಿಂಗಗಳಿಗೆ ಅಭೇದವಿದೆ. ವಾಗರ್ಥಗಳಂತೆ ಹೊಂದಾಣಿಕೆಯಿದೆ; ಸಂಬಂಧವಿದೆ.

ಆತ್ಮವೇ ಲಿಂಗ. ಲಿಂಗವೆ ಆತ್ಮ. ಆ ಅಖಂಡ ಮಹಾಚೈತನ್ಯವು ಮಾನವನಲ್ಲಿ ಮೂರು ಬಗೆಯಾಗಿ ಇರುತ್ತದೆ. ಶಿಖಾಚಕ್ರದಲ್ಲಿರುವ ಊರ್ಧ್ವಹೃದಯದಲ್ಲಿ ಪರ ಮಾತ್ಮನಾಗಿ ಆಜ್ಞಾ (ತ್ರಿಕೂಟ) ಚಕ್ರದಲ್ಲಿರುವ ಮಧ್ಯ ಹೃದಯದಲ್ಲಿ ಅಂತರಾತ್ಮ ನಾಗಿ ಅನಾಹತ ಚಕ್ರದಲ್ಲಿರುವ ಅಧೋಹೃದಯದಲ್ಲಿ ಜೀವಾತ್ಮನಾಗಿ ಆ ಚೈತನ್ಯ ವಿರುತ್ತದೆ. ಅಧೋ ಹೃದಯ (ಎದೆ) ದಲ್ಲಿರುವ ಜೀವಾತ್ಮನು ಪರಮಾತ್ಮನಾಗಲು ಮಾಡುವ ಕ್ರಿಯಾಜ್ಞಾನೋಪಾಸನೆಗಳೆ ಇಷ್ಟ - ಪ್ರಾಣಲಿಂಗೋಪಾಸನೆಗಳು. ಇದ ಕ್ಕಾಗಿ ಶ್ರೀಗುರುವು ಶಿಷ್ಯ ಶಿರದರಮನೆಯಲ್ಲಿರುವ ಶಿವಕಳೆಯನ್ನೇ ತನ್ನ ದಿವ್ಯದೃಷ್ಟಿ ಯಿಂದ ಯೋಗಶಕ್ತಿಯಿಂದ ಬಹಿಷ್ಕರಿಸಿ ಇಷ್ಟಲಿಂಗದಲ್ಲಿ ಇರಿಸುತ್ತಾನೆ. ಕ್ರಿಯಾ ರಾಧನೆಯ ಮಾಡ ಹಚ್ಚುತ್ತಾನೆ. ಮಹಾಚೈತನ್ಯ (ಮಹಾತ್ಮ) ನಾಗ ಹಚ್ಚುತ್ತಾನೆ.

ಆದ್ದರಿಂದ ತಾನು ಬೇರಲ್ಲ. ಲಿಂಗ ಬೇರಲ್ಲ. ತನ್ನ ಸ್ವಸ್ವರೂಪವೇ ಲಿಂಗ. ತನ್ನ ಸ್ವರೂಪ ದರ್ಶನವೇ ಲಿಂಗದರ್ಶನ. ಅದುವೇ ಷಡ್ದರ್ಶನ. ಆತ್ಮಸಾಕ್ಷಾ ತ್ಕಾರವೇ ಲಿಂಗಸಾಕ್ಷಾತ್ಕಾರ. ಅಂಗವೇ ಶಕ್ತಿ. ಅಂಗತ್ವವೆ ಲಿಂಗ. ಕರಣೇಂದ್ರಿ ಯಗಳೇ ಶಕ್ತಿ. ಆ ಕರಣೇಂದ್ರಿಯತ್ವವೇ ಲಿಂಗ.

"ಅಂಗಂ ಶಕ್ತಿರಿತಿಪ್ರೋಕ್ತಂ ಶಕ್ತಿಮಾನ್ ಲಿಂಗಮುಚ್ಯತೇ
ಅನಯೋರೈಕ್ಯ ವಿಜ್ಞಾನಂ ಸಂಬಂಧ ಇತಿಕಥ್ಯತೇ"

ಇದೇ ಅಭಿಪ್ರಾಯವನ್ನು ವಾತುಳಾಗಮವೂ ಸಮರ್ಥಿಸಿದೆ;

"ಶಿವ ಏವ ಸ್ವಯಂ ಲಿಂಗಮಾತ್ಮೈವಾಂಗಂ ಭವೇತ್ಖಲು
ತಯೋಶ್ಶಿವಾತ್ಮನೋಸ್ಸವ್ಯಗ್ಯೋಗಸ್ಸಂಯೋಗ ಏವ ಹಿ"

ಅಂಗ ಅಂಗತ್ವವೆ ಅಂದರೆ ಶಕ್ತಿ - ಶಿವಸ್ವರೂಪವೆ ಲಿಂಗವೆಂದಂತಾಯಿತು. ಲಿಂಗವು ಅಂಗಾಂಗಗಳಲ್ಲಿಯೂ ವ್ಯಾಪಿಸಿದೆ. ನಮ್ಮ ಮುಖದಲ್ಲಿ ಶಬ್ದವಾಗಿ ಲಿಂಗವಿದೆ. ಅದನ್ನು ಗುರುಲಿಂಗವೆಂದರು. 'ಮಾತೆಂಬುದು ಜ್ಯೋತಿರ್ಲಿಂಗ' ಎಂದರು ಪ್ರಭುದೇವರು. ಕಿವಿಯಲ್ಲಿ ನಾದವಾಗಿ ಲಿಂಗವಿದೆ. ಅದಕ್ಕೆ ಪ್ರಸಾದ ಲಿಂಗವೆಂದು ಹೆಸರು. 'ನಾದಮಯ ಲಿಂಗಂ.' ಕಣ್ಣಲ್ಲಿ ತೇಜಸ್ಸೇ ಲಿಂಗವಾಗಿದೆ. ಇದಕ್ಕೆ ಶಿವಲಿಂಗವೆನ್ನುವರು. "ದಿವ್ಯತೇಜೋಮಯಂ ಲಿಂಗಂ." ಘ್ರಾಣದಲ್ಲಿ ಗಂಧ ಗ್ರಾಹಕ ಶಕ್ತಿಯುಳ್ಳ ಘ್ರಾಣತ್ವವೇ ಆಚಾರ ಲಿಂಗ. ತ್ವಕ್ಕಿನಲ್ಲಿ ಸ್ಪರ್ಶಶಕ್ತಿಯುಳ್ಳುದೇ ಸಂಚಾರಿ (ಜಂಗಮ) ಲಿಂಗ. ಅಂತೆಯೇ ತನ್ನ ಸ್ಥೂಲ ತನವೂ ಸಹ ಲಿಂಗಮಯವಾಗಿದೆ. ಅಂದರೆ ಲಿಂಗಾಕಾರವಾಗಿದೆ. ಲಿಂಗವೇ ಆಗಿದೆ. ಇದಕ್ಕೆ ಸದ್ರೂಪತ್ವಸಿದ್ಧವಾಗಿದೆ. ಹೀಗೆ ಅಂಗಾಂಗವಲ್ಲಿರುವ ಲಿಂಗಗಳನ್ನು ಉಪಾಸನಾ ಮಾಡಬೇಕು. ಅಂದರೆ ಸದಾಚಾರದಿಂದ ಇರಬೇಕು. ಇದೇ ಲಿಂಗ ಪೂಜೆ. ಇದರಿಂದ ಈ ಜೀವಾತ್ಮ ಅಂದರೆ ಅಲ್ಪಾತ್ಮ ಪರಮಾತ್ಮನಾಗುತ್ತಾನೆ.

ಕರಿಯು ಕನ್ನಡಿಯಲ್ಲಿ ಅಡಗುವಂತೆ ಆ ಅಖಂಡ ಪರವಸ್ತು ಗುರುಕರುಣೆಯಿಂದ ಕರಸ್ಥಲಕ್ಕೆ ಬಂದು ಕಾಣಿಸಿಕೊಂಡಿದೆ.

"ಜಗದಗಲ; ಮುಗಿಲಗಲ; ಮಿಗೆಯಗಲ.
ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ.
ಆಕಾಶದಿಂದತ್ತತ್ತ ನಿಮ್ಮ ಮಣಿಮುಕುಟ.
ಅಗಮ್ಯ ಅಗೋಚರ ಅಪ್ರಮಾಣ ಕೂ. ಸಂ. ದೇವ,
ಎನ್ನ ಕರಸ್ಥಲಕ್ಕೆ ಚುಳಕಾಗಿ ನೀವು ಬಂದಿರಲ್ಲಾ!"

ಹೀಗೆ ಪಿಂಡಾಂಡ - ಬ್ರಹ್ಮಾಂಡ ಜಗತ್ತುಗಳೆರಡನ್ನೂ ವ್ಯಾಪಿಸಿದ ಆ ಅಗಮ್ಯ ಲಿಂಗವು ಗಮ್ಯಕ್ಕೆ ಬಂದಿದೆ; ಅಗೋಚರ ಲಿಂಗವು ಗೋಚರಕ್ಕೆ ಬಂದಿದೆ. ಅಪ್ರಮಾಣ ಲಿಂಗವು ಪ್ರಮಾಣಕ್ಕೆ ಸಂದಿವೆ. ಕರಸ್ಥಳಕ್ಕೆ ಕಾಣಿಸಿವೆ. ಇದು ಕರಸ್ಥಳದ ಭಾಗ್ಯ. ಕರಕ್ಕೆ ಬಂದ ಲಿಂಗ ಕ್ರಿಯಾಪ್ರಚೋದಕವಾಗಿ ಪರಿಣಮಿಸುತ್ತದೆ. ಕಾರಣ ಕರದಲ್ಲಿಯೆ ಇರಿಸಿ ಪೂಜಿಸಬೇಕೆಂದು ಶ್ರೀ ಗುರುವಿನ ಕಟ್ಟಪ್ಪಣೆ! ಇಲ್ಲಿ ಕರಪೂಜೆಯೆಂದರೆ ಕೈಯಿಂದ ಒಳ್ಳೆಗೆಲಸಗಳನ್ನೇ ಮಾಡುವುದು. ಕೈಯಿಂದ ಮಾತ್ರವಲ್ಲ;

ಕರಣೇಂದ್ರಿಯಗಳೆಲ್ಲವುಗಳಿಂದ ಆ ಆ ಸತ್ಕ್ರಿಯೆಗಳ ಪೂಜೆ ಸಾಗಬೇಕು. ಹೃದಯಕ್ಕೆ (ಎದೆಗೆ) ಬಂದ (ಧರಿಸಿದ) ಲಿಂಗವು ಕರುಣೆಯ ರಸವನ್ನು ಹೊಮ್ಮಿಸುತ್ತದೆಯಲ್ಲದೆ ಅಲ್ಲಿರುವ ಜೀವಾತ್ಮನಿಗೆ ಪರಿಶುದ್ಧಿಯನ್ನುಂಟುಮಾಡುತ್ತದೆ. ನಿರೀಕ್ಷಣೆಯಿಂದ ನೇತ್ರಕ್ಕೆ ಬಂದ ಲಿಂಗ ಜ್ಞಾನವೃದ್ಧಿಯನುಂಟುಮಾಡುತ್ತದೆ. ಅದುವೇ ಅಗ್ನಿನೇತ್ರವೆಂದು ಹೆಸರಾಗುತ್ತದೆ. ಅಲ್ಲಿ ಆ ಮಧ್ಯಹೃದಯದಲ್ಲಿರುವ ಅಂತರಾತ್ಮನನ್ನು ಅತ್ಯಂತ ಉಜ್ವಲಗೊಳಿಸುತ್ತದೆ. ಹೀಗೆ ಕರ ಉರ ಶಿರಗಳಲ್ಲಿ ಲಿಂಗವು ಸುಸ್ಪರ್ಶವಾಗಿ ಕ್ರಿಯೇ - ಕರುಣೆ - ಜ್ಞಾನಗಳನ್ನುಂಟು ಮಾಡುತ್ತದೆ. ಇದರಿಂದ ಮಾನವ ಜೀವನ ಪ್ರಗತಿ ಸಾಧ್ಯವಾಗುತ್ತದೆ; ವಿಕಾಸವಾಗುತ್ತದೆ. ಈ ಕಾರಣದಿಂದ ಎದೆಯಲ್ಲಿ ಲಿಂಗವನ್ನು ಕರಡಿಗೆಯ ಸಂಪುಟವಲ್ಲಿಟ್ಟು ಧರಿಸುವುದು ಸರಿಯಲ್ಲ. ಕರದಲ್ಲಿ ಪೂಜಿಸುವಾಗ ಕರಕ್ಕೆ ನೇರವಾಗಿ, ನಿರೀಕ್ಷಿಸುವಾಗ ನೇತ್ರಕ್ಕೆ ನೇರವಾಗಿ ಸಂಬಂಧವಿರುವಂತೆ ಎದೆಯಲ್ಲಿ ಧರಿಸುವಾಗ ಎದೆಗೆ ನೇರ ಸಂಬಂಧವಿರಬೇಕು. ತಾಮ್ರ ತಂತಿಯ ನಾಗವಾಸದಲ್ಲಿ ಪೀಠಿಕೆಯನ್ನಿಟ್ಟು ಕಂಥೆ ಧರಿಸಿದ ಲಿಂಗವನ್ನೆ ಕರಡಿಗೆಯಿಲ್ಲದೆ ನೇರವಾಗಿ ಎದೆಯ ಮೇಲೆ ಧರಿಸುವುದು ಉತ್ತಮ ಪಕ್ಷ. ಇದರಿಂದ ಲಿಂಗವು ಅಂಗಕ್ಕೆ (ಎದೆಗೆ ಅಂದರೆ ಹೃದಯಕ್ಕೆ) ಸೋಂಕಿ ಲಿಂಗಗತ ದಿವ್ಯ ತೇಜಸ್ಸು ಕರುಣೆಗಳು ಜೀವಾತ್ಮನಿಗೆ ಉಂಟಾಗಲು ಅನುಕೂಲವಾಗುತ್ತದೆ. ಹೀಗೆ ಧರಿಸುವ ವಾಡಿಕೆ ಕೆಲವೆಡೆಗಳಲ್ಲಿದೆ. ತಾಮ್ರ ತಂತಿಯ ಬಳಸುವುದೂ ಸಹ ಕಂಥೆಯು ಕಳೆ ಹೆಚ್ಚಲು ಹೆಚ್ಚು ಅನುಕೂಲವಿದೆ. ಮತ್ತು ಅದರ ಮುಖಾಂತರ ಆ ಲಿಂಗ ಕಳೆ ಹರಿದು ಬಂದು ಹೃದಯ ಸೇರಲು ಸಾಧನವಾಗುತ್ತದೆ.

## ಆಕಾರದಲ್ಲಿ ಅರ್ಚನೆ.

ಆಕಾರವೆಂದರೆ ಇಷ್ಟಲಿಂಗ. ಇಷ್ಟವೆಂದರೆ ಅರ್ಚನಾರ್ಹ. ಅರ್ಚನೆ ಅನೇಕ ವಿಧ. ಅವುಗಳಲ್ಲಿ ಪಂಚಭೂತ ತತ್ತ್ವಾರ್ಪಣೆಯೆ ಪರಮ ಮೂಲವಾದ ಅರ್ಚನೆ! ಕರಸ್ಪರ್ಶನವೆ ಪೃಥ್ವಿ ತತ್ತ್ವಾರ್ಚನೆ! ಹೃದಯ (ಉರ) ಅರ್ಪಣವೆ ಜಲತತ್ತ್ವಾರ್ಪಣ ರೂಪಾರ್ಚನೆ! ಲಿಂಗದಲ್ಲಿ ದೃಷ್ಟಿಯನ್ನಿಡುವುದೆ ಲಿಂಗವನರಿವುದೆ ಅಗ್ನಿ ತತ್ತ್ವಾರ್ಪಣಾರ್ಚನೆ! ಪ್ರಾಣಾರ್ಪಣವೆ ಅಂದರೆ ಪ್ರಾಣಗತ ಪ್ರೇಮಾರ್ಪಣವೆ ಮನೋನಿರೋಧವೆ ವಾಯುತತ್ತ್ವಾರ್ಪಣ ಪೂಜೆ! ಮಂತ್ರೋಚ್ಚಾರಣ - ನಾದಾರ್ಪಣಗಳೇ ಆಕಾಶ ತತ್ತ್ವಾರ್ಪಣ ಪೂಜೆ! ಇವುಗಳ ನೆಪದಲ್ಲಿ ಪತ್ರ ಪುಷ್ಪ, ಜಲ, ಧೂಪ - ದೀಪ, ಛತ್ರಿ - ಚಾಮರ, ಗಂಟಾನಾದ ಇವುಗಳನ್ನು ಕ್ರಮವಿಡಿದು ಅರ್ಪಿಸುವ ಬಾಹ್ಯವಿಧಿ ಬಳಕೆಯಲ್ಲಿ ಬಂದಿದೆ. ಭಸ್ಮ - ರುದ್ರಾಕ್ಷ, ಮಂತ್ರಗಳೇ ಮನ ಚಿತ್ತ ಬುದ್ಧಿಗಳು. ಪಾದೋದಕ ಪ್ರಸಾದಗಳೇ ಆತ್ಮ. ಈ ಅರಿವಿಲ್ಲದೆ ಅರ್ಚನೆ ಘಟಿಸದು; ಫಲಿಸದು. ಲಿಂಗಕ್ಕರ್ಪಿಸಿದ ಧೂಪ ಪುಷ್ಪಗಳ ಗಂಧದಿಂದ ಪ್ರಾಣಗತ

ಶಕ್ತಿ ಸ್ಫುಟವಾಗುತ್ತದೆ. ಲಿಂಗಸ್ಪರ್ಶದಿಂದ ಚರ್ಮಗತ ಶಕ್ತಿ, ಲಿಂಗಕ್ಕರ್ಪಣವಾದ ಮಂತ್ರ ಗಂಟಾ ನಾದಗಳಿಂದ ಕರ್ಣಗತಶಕ್ತಿ, ಲಿಂಗಾವಲೋಕನದಿಂದ ದೃಷ್ಟಿಗತ ಶಕ್ತಿ, ಲಿಂಗೋದಕದಿಂದ ರಸನೇಂದ್ರಿಯ ಶಕ್ತಿ, ಲಿಂಗಪ್ರಸಾದದಿಂದ ಸರ್ವಾಂಗ ಶಕ್ತಿ ಸಂಗಳಿಸಿ ಬರುತ್ತವೆ. ಇದರಿಂದ ಅಂಗಾಂಗವಿಕಾಸವಾಗುತ್ತದೆ. "ಪಶ್ಯೇಮ ಶರ ದಶ್ಶತಮ್, ಶೃಣುವಾಮ ಶರದಶ್ಶತಮ್...." ಎಂಬೀ ಉಪನಿಷತ್ ಋಷಿ ಸಂಕ ಲ್ಪವು ಈ ಲಿಂಗೋಪಾಸನೆಯೊಂದರಲ್ಲಿ ಸಿದ್ಧಿಸುತ್ತದೆ. ಸರ್ವೇಂದ್ರಿಯ ಸೌಷ್ಠವ ಉಂಟಾಗಿ ಶತವರ್ಷ ಪರ್ಯಂತರ ಆ ಆ ಇಂದ್ರಿಯ ಕಾರ್ಯ ಚ್ಯುತಿಯಿಲ್ಲದೆ ಸಾಗಿ ಬರುತ್ತದೆ. ಇದಕ್ಕಿಂತ ಇಹದ ಅಭ್ಯುದಯವಿಲ್ಲ.

## ಜಗದ್ರೂಪ ಲಿಂಗ.

'ಲಿಂಗರೂಪಂ ಜಗದ್ರೂಪಂ' ಎಂಬ ಆಗಮವಾಣಿ ಲಿಂಗಕ್ಕೆ ಜಗದ್ರೂಪ ವನ್ನಿತ್ತಿದೆ. ಇದು ನಂಬುವ ನುಡಿಯಲ್ಲ ಎನ್ನಬಹುದು. ವಿಚಾರ ಮುಖದಲ್ಲಿ ನಂಬದೆ ಬಿಡುವಂತಿಲ್ಲ. ಪಿಂಡಾಂಡ ಸ್ವರೂಪವಾದ ಲಿಂಗವು ಬ್ರಹ್ಮಾಂಡ ಸ್ವರೂಪ ವೆಂದು ಹೇಳವಲ್ಲಿ ಅತಿಶಯೋಕ್ತಿಯೇನಿಲ್ಲ. ಬೃಹತ್ತಾದ ಬ್ರಹ್ಮಾಂಡವನ್ನು ಅಣು ವಾಗಿಸಬಲ್ಲ, ಅಣುವಾಗಿಸಿ ತನ್ನೊಳಗೆ ಅಡಗಿಸಿಕೊಳ್ಳಬಲ್ಲ ಆ ಲಿಂಗರೂಪಿ ಪರ ಮಾತ್ಮ! ಬೀಜ ಮರವಾಗಿ ತೋರುವಂತೆ ಲಿಂಗವಿಕಾಸವಾಗಿ ಅಂಡ, ಪಿಂಡ, ಬ್ರಹ್ಮಾಂಡವಾಗಿ ತೋರುತ್ತದೆ. ಬೆಳೆದು ನಿಂತ ಬ್ರಹ್ಮಾಂಡ ಮರಳಿ ಲಿಂಗ ಬೀಜ ದಲ್ಲಿ ಅಡಗುತ್ತದೆ. ಈ ಅರ್ಥದಲ್ಲಿ ಲಿಂಗೈಕ್ಯಪದ ಪ್ರಯೋಗವಿದೆ.

"ಲಿಂಗಮಧ್ಯೇ ಜಗತ್ಸರ್ವಂ ತ್ರೈಲೋಕ್ಯಂ ಸಚರಾಚರಂ
ಲಿಂಗಬಾಹ್ಯಾತ್ಪರಂ ನಾಸ್ತಿ ತಸ್ಮೈ ಲಿಂಗಾಯ ತೇ ನಮಃ
ಲೀಯತೇ ಗಮ್ಯತೇ ಯತ್ರ ಜಗದೇತಚ್ಚರಾಚರಂ
ಸೂಕ್ಷ್ಮಕಾರಣರೂಪಂಚ ಶಿವಲಿಂಗಾಯ ತೇ ನಮಃ
ಆಕಾಶಂ ಲಿಂಗಮಿತ್ಯಾಹುಃ ಪೃಥಿವೀ ತಸ್ಯ ಪೀಠಿಕಾ
ಆಲಯಃ ಸರ್ವಭೂತಾನಾಂ ಲಯನಾಲ್ಲಿಂಗಮುಚ್ಯತೇ"

ಈ ವಿವರಣೆಯಿಂದ ಆತ್ಮರೂಪವು ಲಿಂಗವೆಂಬುದು ಅಭಿವ್ಯಕ್ತವಾಗುತ್ತದೆ. ಆತ್ಮ ನಿಂದಲೇ ಆಕಾಶಾದಿ ಪಂಚಭೂತೋತ್ಪತ್ತಿ ಸ್ಥಿತಿ! ಆತ್ಮನಲ್ಲಿಯೆ ಅಂತರ್ಭೂತವಾಗು ವಿಕೆ! ಆದ್ದರಿಂದ ಲಿಂಗ ಜಗದ್ರೂಪ! ಜಗತ್ತೇ ಲಿಂಗ ರೂಪ! ಇದನ್ನು ಈ ಕೆಳಗಿನ ವಚನವು ವಿಸ್ಪಷ್ಟಗೊಳಿಸುತ್ತದೆ. "ಏನೆಂದೆನಲಿಲ್ಲದ ಮಹಾಘನವು ತನ್ನ ಲೀಲೆಯಿಂದ ತಾನೇ ಸ್ವಯಂಭು ಲಿಂಗವಾಯಿತ್ತು. ಆ ಲಿಂಗದಿಂದಾಯಿತ್ತು ಶಿವಶಕ್ತ್ಯಾತ್ಮಕ. ಆ ಶಿವಶಕ್ತ್ಯಾತ್ಮಕದಿಂದಾದುದು ಆತ್ಮ. ಆತ್ಮನಿಂದಾದುದು ಆಕಾಶ. ಆಕಾಶದಿಂ ದಾದುದು ವಾಯು. ವಾಯುವಿನಿಂದಾದುದು ಅಗ್ನಿ. ಅಗ್ನಿಯಿಂದಾದುದು ಅಪ್ಪು

ಅಪ್ಪುವಿನಿಂದಾದುದು ಪೃಥ್ವಿ. ಪೃಥ್ವಿಯಿಂದಾದುದು ಸಕಲ ಜೀವವೆಲ್ಲಾ! ಇವೆಲ್ಲ ನಿನ್ನ ನೆನಹು ಮಾತ್ರದಿಂದಾದುವು ಚಿಮ್ಮಲಿಗೆಯ ಚೆನ್ನರಾಮಾ."

ಬೆಳಗಿನಿಂದ (ಜ್ಯೋತಿಯಿಂದ) ಚೇತನ. ಚೇತನದಿಂದ ಜಡ ಪ್ರಪಂಚ; ಆ ಬೆಳಗುಳ್ಳ ಚೇತನವು ಸಾಕಾರದಲ್ಲಿ ನೆಲೆ ನಿಲ್ಲಲು ಜಡವಸ್ತು ಬೇಕು. ಜೀವಾತ್ಮ ನಿಲ್ಲಲು ದೇಹ ಹೇಗೋ ಹಾಗೆ ಶಿವಾತ್ಮನಿರಲು ಶಿಲೆಯು ಹಾಗೆ! ಆದ್ದರಿಂದ ಇಷ್ಟ ಲಿಂಗದಲ್ಲಿ ಮಣಿರೂಪ ಶಿಲೆಯಿದೆ. ಈ ಶಿಲೆಯ ಆಧಾರದಲ್ಲಿ ಶಿವಚೇತನ – ಜ್ವಲನ ಗಳನ್ನು ಹಿಡಿದಿರಿಸಲಾಗಿದೆ. ಇದರಿಂದಾಗಿ ಲಿಂಗಕ್ಕೆ ಮಣಿ ಮಂತ್ರ ಔಷಧಿಗಳು ಈ ಮೂರು ಮುಖ್ಯಾಂಗವಾಗಿವೆ. ಶಿಲೆಯೆ ಜಡಾಂಗ. ಮಂತ್ರವೇ ಚೇತನ. ಕಂಥೆಯೇ ಜ್ಯೋತಿ. ಈ ಮೂರಳ್ಳ ಇಷ್ಟಲಿಂಗೋಪಾಸನೆ ಇಷ್ಟವಾದುದು; ಇಷ್ಟ ಫಲಪ್ರದವಾದುದು.

ಮಾನವನಿಗೆ ಮುಖ್ಯವಾಗಿ ಚೇತನ ಬೇಕು. ಜ್ಯೋತಿ (ಬೆಳಕು) ಬೇಕು. ಅಂಗ ಮತ್ತು ಜಗತ್ತು ಬೇಕು. ಜೀವ ಜಗತ್ತು ಜಗದೀಶ್ವರ ಸ್ವರೂಪವೆ ಇಷ್ಟ ಲಿಂಗ! ಜೀವವೆಂದರೆ ಜ್ಯೋತಿ! ಜಗತ್ತೆಂದರೆ ಜಡಾಂಗ! ಜಗದೀಶ್ವರನೆಂದರೆ ಚೈತನ್ಯ! ಈ ಮೂರುಳ್ಳದೇ ಇಷ್ಟಲಿಂಗ! ಜಗತ್ ಸ್ವರೂಪವೆ ಶಿಲೆ! ಜೀವ ಸ್ವರೂಪವೆ ಕಂಥೆ! ದೇವ ಸ್ವರೂಪವೆ ಮಂತ್ರ! ಹೀಗೆ ಸಮಷ್ಟಿ ತತ್ತ್ವ ಸ್ವರೂಪ ವಾದಂತೆ ವ್ಯಷ್ಟಿ ತತ್ತ್ವತ್ರಯ ಸ್ವರೂಪವೂ ಆಗಿದೆ. ಶಿಲೆಯೇ ಕಲೆಯುಳ್ಳ ಮೈ. ಕಂತೆಯೇ ಕಳೆಯುಳ್ಳ ಮನ. ಮಂತ್ರವೇ ಚೇತನವುಳ್ಳ ಮಾತು. ಈ ಮೂರುಳ್ಳದೇ ಇಷ್ಟಲಿಂಗ ಸ್ವರೂಪ!

ಒಂದು ಮೂರಾಗಿ, ಮೂರು ಆರಾಗಿ, ಆರು ಮೂವತ್ತಾರಾಗಿ, ಮೂವತ್ತಾರು ಇನ್ನೂರು ಹದಿನಾರಾಗಿ ಅಂಗವನ್ನೆಲ್ಲ ಲಿಂಗವು ವ್ಯಾಪಿಸುತ್ತದೆ. ಅಂಗ – ಲಿಂಗ, ಶಕ್ತಿ – ಭಕ್ತಿ, ಹಸ್ತ – ಮುಖ, ಪದಾರ್ಥ – ಪ್ರಸಾದ ಎಂದು ಎಂಟು ಬಗೆಯ ಸಕೀಲಗಳು ಲಿಂಗಕ್ಕಿವೆ. ಈ ಅಷ್ಟಾಂಗ ರೂಪನ್ನು ಬೋಧಿಸಲೋ ಏನೋ ಅಷ್ಟ - ಬಂಧ (ಕಂಥೆ)ವ ಧರಿಸುವ, ಅಷ್ಟೋಪಚಾರ ಮಾಡುವ ರೂಢಿ ಬಂದಿರಬೇಕು.

## ಲಿಂಗಧಾರಿ ಚಿರಂಜೀವಿ

ಇಷ್ಟಲಿಂಗೋಪಾಸನೆಯ ಇನ್ನೊಂದು ಪ್ರಧಾನ ಗುರಿ ಚಿರಂಜೀವಿಯಾಗು ವುದು. ಚಿರಂಜೀವಿಯೆಂದರೆ ಸಾಯುದಿರುವುದೆಂದರ್ಥವಲ್ಲ. ಬಹುಕಾಲ ಬಾಳು ವುದು; ಬದುಕುವುದು. ನಿರೋಗಿಯಾಗಿರುವುದು; ನಿಶ್ಶಕ್ತಿಯ ನೀಗುವುದು. ಲಿಂಗೋಪಾಸನೆಯಲ್ಲಿ ಇವೆಲ್ಲ ಘಟಿಸುತ್ತವೆ. ಮಣಿ ಮಂತ್ರ ಔಷಧಿಗಳು ರೋಗ ನಿವಾರಣೋಪಾಯಗಳು. ಈ ಮೂರುಳ್ಳ ಇಷ್ಟಲಿಂಗವನ್ನು ಸೂರ್ಯೋದಯಕ್ಕೆ

ಮೊದಲು ಅರ್ಚಿಸಿ ಆ ಮೇಲೆ ಅದರ ಮೇಲೆ ಮಂತ್ರೋದಕವ ನೆರೆದು ಆ ಮಂತ್ರೋದಕವನ್ನು ನಿತ್ಯ ಸ್ವೀಕರಿಸುವುದರಿಂದ ಉದರವ್ಯಾಧಿಗಳೆಲ್ಲ ವಾಸಿಯಾಗುತ್ತವೆ. ಜಠರಾಗ್ನಿ ಜ್ವಲಿಸುತ್ತದೆ. ಅರ್ಚನೆಯ ಕಾಲದ ಅಷ್ಟೋಪಚಾರಗಳಿಂದ ಅಷ್ಟಾಂಗಗಳು ಅಭಿವೃದ್ಧಿ ಅಂದರೆ ಪುಷ್ಟಿಯಾಗುತ್ತವೆ. ಬೇರೆ ಇನ್ನಾವ ರೋಗಗಳಿದ್ದರೂ ಅವೆಲ್ಲ ನಿವಾರಣೆಯಾಗಿ ನಿರೋಗಿಯಾಗಿ ಬಹುಕಾಲ ಬಾಳುವ ಭಾಗ್ಯ ಇಷ್ಟಲಿಂಗೋಪಾಸಕನಿಗೆ ಖಂಡಿತ ಬರುತ್ತದೆ. ನಿತ್ಯ ನಿಯಮಿತ ವೇಳೆಗೆ ಲಿಂಗವನು ಪೂಜಿಸಿ ಬಳಿಕ ಆ ಲಿಂಗದ ಮೇಲೆ ಶುದ್ಧ ಜಲವನ್ನೆರೆದು ಸ್ವೀಕರಿಸಿದರೆ ಅದೇ ದಿವ್ಯೌಷಧಿ. ಅದೇ ದಿವ್ಯಾಮೃತ. ಅದರಿಂದ ಶಾರೀರಕ ಮಾನಸಿಕ ರೋಗಗಳೆಲ್ಲ ಪರಿಹಾರವಾಗುತ್ತವೆ. ಲಿಂಗಕ್ಕೆರೆದ ಆ ಜಲದಲ್ಲಿ ಆ ಲಿಂಗದ ಮಣಿಶಕ್ತಿ, ಮಂತ್ರಶಕ್ತಿ, ಔಷಧಿ ಅಂದರೆ ಕಂಥೆಯ ಶಕ್ತಿ ಸಮ್ಮಿಳಿತವಾಗಿ ಬರುತ್ತದೆ. ಆ ಲಿಂಗ ಜಲಪಾನದಿಂದ ಅದು ಅಂಗಾಂಗಕ್ಕೆಲ್ಲ ವ್ಯಾಪಿಸಿ ಜೀರ್ಣಬಲವನ್ನು ವರ್ಧಿಸುತ್ತದೆ. ಜೀರ್ಣಾಂಗ ವರ್ಧನದಿಂದ ಆಯುಷ್ಯಾಭಿವೃದ್ಧಿಯಾಗುತ್ತದೆ. ಶಕ್ತಿ ವೃದ್ಧಿಯಾಗುತ್ತದೆ. ಶಕ್ತಿ ವೃದ್ಧಿಯಿಂದ ಜ್ಯೋತಿ ವೃದ್ಧಿಯಾಗುತ್ತದೆ. ಆ ಜ್ಯೋತಿಯಿಂದ ರೋಗ – ಪಾಪಗಳು ನಿವೃತ್ತಿಯಾಗುತ್ತವೆ. ಹೀಗೆ ಅಂತರಂಗ ಬಹಿರಂಗವೆರಡನ್ನು ಶುದ್ಧಿಗೊಳಿಸಿ ವೃದ್ಧಿಗೊಳಿಸಿ ಚಿರಕಾಲ ಶಾಂತಿ ತೃಪ್ತಿಗಳಿಂದ ಬಾಳುವಂತೆ ಮಾಡುವ ಏಕೈಕ ದಿವ್ಯೌಷಧಿ ಇಷ್ಟಲಿಂಗ! ದಿವ್ಯನಿಧಿ ಇಷ್ಟಲಿಂಗ!

ವೈದ್ಯಶಾಸ್ತ್ರವು ವಿಶೇಷವಾಗಿ ಬಾಹ್ಯಶರೀರ ಚಿಕಿತ್ಸೆಯನ್ನೇ ಗುರಿಯಾಗಿಸಿಕೊಂಡಿದೆ. ಇಷ್ಟಲಿಂಗರೂಪಾದ ಈ ವೈದ್ಯಶಾಸ್ತ್ರವು ಬಹಿರಂಗ – ಅಂತರಂಗಗಳೆರಡರ ಚಿಕಿತ್ಸೆಗೂ ಮಹತ್ವವನ್ನು ಕೊಟ್ಟಿದೆ. ಮತ್ತು ಅದನ್ನೇ ಸಾಧಿಸುತ್ತದೆ. ಆದ್ದರಿಂದ ಶಿವಾರ್ಚನ, ಶಿವಲಿಂಗೋದಕ ಪ್ರಾಶನ ಪ್ರತಿಯೊಬ್ಬ ಚಿರಂಜೀವಿಯಾಗುವ ಅಭಿಲಾಷಿಗೆ ಅತ್ಯಗತ್ಯ. ಈ ವಿಷಯದಲ್ಲಿ ವೈದ್ಯ ಸಂಗಣ್ಣನೆಂಬ ಶಿವಶರಣ ಸಪ್ರಮಾಣನಾಗಿದ್ದಾನೆ.

> “ ನಾನಾ ರೋಗಗಂಗಳು ಬಂದು ದೇಹವ ಹಿಡಿದಲ್ಲಿ
> ಶಿವಾರ್ಚನೆಯ ಬೇರ ಕೊಳ್ಳಿ !
> ಸಕಲ ಪುಷ್ಪಂಗಳಿಂದ ಪೂಜೆಯ ಮಾಡಿಕೊಳ್ಳಿ !
> ಪಂಚಾಕ್ಷರಿಯ ಪ್ರಣವವ ತಪ್ಪದೆ ತ್ರಿಸಂಧಿಯಲ್ಲಿ ನೆನಹುಗೊಳ್ಳಿ !
> ಇದರಿಂದೆ ರುಜೆದರ್ಪಂಗೆಡಗು ;
> ಮರುಳ ಶಂಕರಪ್ರಿಯ ಸಿದ್ಧರಾಮೇಶ್ವರಲಿಂಗ ಸಾಕ್ಷಿಯಾಗಿ ! ”

ಭವರೋಗ – ತನುರೋಗಗಳೆರಡನ್ನು ಕಳೆಯಬಲ್ಲದು ಶಿವಾರ್ಚನೆ. ತನುರೋಗಗಳಿಗೆ ತುದಿ ಮೊದಲಿಲ್ಲ. ಅವೆಲ್ಲವನ್ನೂ ಕಳೆಯಬಲ್ಲ ಒಂದೇ ಒಂದು ದಿವ್ಯೌಷಧಿಯೆಂದರೆ ಶಿವಾರ್ಚನೆ! ಪತ್ರೆ ಪುಷ್ಪಗಳ ಧರಿಸುವದರಿಂದ ಪ್ರಣವ ಪಂಚಾಕ್ಷರಿಯ

ಜಪಿಸುವುದರಿಂದ ರೋಗನಿವೃತ್ತಿಯಾಗುವುದು ನಿಶ್ಚಯಕ್ಕೂ ನಿಜ. ನಾರು ಬೇರುಗಳಿಗಿಂತ ತೊಗಟೆ ಎಲೆಗಳಿಗಿಂತ ಮಿಗಿಲಾದ ಔಷಧಶಕ್ತಿ ಬಿಲ್ವ ಮತ್ತು ಬಗೆಬಗೆಯ ಹೂಗಳಲ್ಲಿದೆ. ಬಿಲ್ವ ಬೃಹತ್ತಾದ ಔಷಧಿ. ಹೂವಿನ ಮಕರಂದದಿಂದಾದ ಜೇನಿಗೆ ಆಯುರ್ವೇದ ಚಿಕಿತ್ಸೆಯ ಅನುಪಾನದಲ್ಲಿ ಅಗ್ರಸ್ಥಾನವಿದೆ. ಇವೆರಡನ್ನೂ ಶಿವಾರ್ಚಕ ಶಿವಾಚಾರ್ಯರು ಕಂಡು ಹಿಡಿದು ಬಿಲ್ವದಳಗಳ ಹೂವುಗಳ ಬಳಕೆಯನ್ನು ಪೂಜೆಯಲ್ಲಿ ಮುಖ್ಯವಾಗಿ ತಂದಿರಿಸಿದಾರೆ. ಬಿಲ್ವೌಷಧಿಯ ಹಿರಿಮೆಯನ್ನು ಬಲ್ಲ ಪಂಡಿತರಿಂದ ಅರಿಯಬೇಕು. ಸ್ವತಸ್ಸಿದ್ಧವಾಗಿ ಶ್ರೇಷ್ಠ ಔಷಧಿಗಳಾದ ಪತ್ರೆ ಪುಷ್ಪಗಳು ಶಿವಲಿಂಗ ಸ್ಪರ್ಶನದಿಂದ ಇನ್ನೂ ಹೆಚ್ಚಿನ ಶಕ್ತಿಯನ್ನು ಸಂಗಳಿಸುತ್ತವೆ. ಆ ಲಿಂಗ ಪ್ರಸಾದ ಪತ್ರೆ ಪುಷ್ಪಗಳ ಸ್ವೀಕಾರದಿಂದ ಸರ್ವರೋಗ ನಿವಾರಣೆಯಾಗುವುದು ನಿಜಕ್ಕೂ ನಿಶ್ಚಯ. ಅಂಗರುಜೆಯ ನಿವಾರಣೆಗೆ ಲಿಂಗಕ್ಕೆ ಧರಿಸಿದ ಪತ್ರೆ ಪುಷ್ಪಗಳು ಕಾರಣವಾದರೆ ಆತ್ಮರುಜೆಗೆ ಅಂದರೆ ಭವರೋಗಕ್ಕೆ ಲಿಂಗವು ನೇರವಾಗಿ ದಿವ್ಯ ಔಷಧಿಯಾಗಿದೆ.

“ ಅಷ್ಟೋತ್ತರ ಶತವ್ಯಾಧಿಗಳ ಧರಿಸಿಕೊಂಡಿಪ್ಪುದು ಆತ್ಮನೋ
ಘಟವೋ ? ಆತ್ಮನೆಂದಡೆ ಅದು ಸಾವಿಲ್ಲದ ಚಿತ್ತು.
ಘಟನೆಂದಡೆ ಅದು ಆತ್ಮನಿಲ್ಲದೆ ಅರಿಯದು.
ಇಂತೀ ಒಂದು ಕಳೆದು, ಒಂದಕ್ಕೆ ಔಷಧಿಯ
ರುಜೆ ಮಾಣದು ; ಪ್ರಮಾಣವಿದು,
ಇಂತೀ ಶರೀರ, ಆತ್ಮ ಇವು ಆದಿಯಾಗಿ ಬಂದ ವ್ಯಾಧಿಗೆ
ನಾನೊಂದು ಔಷಧಿಯ ಭೇದವ ಹೇಳಿಹೆ :
ಆಧಾರದಲ್ಲಿ ಮೂಲಿಕೆಯ ಬೇರನರಿದು, ಐದಿಂದ್ರಿಯವ ಕೂಡಿಕೊಂಡು
ಮಲ ಮೂರು ಮುಟ್ಟದ ತಟ್ಟೆಯಲ್ಲಿ ಅದನು ಕೊಳ್ಳಿ !
ಆ ಮುದ್ದು ವಾಂತಿಗೆ ಸಲ್ಲ. ವಿರೋಚನವಿಲ್ಲ.
ಇದು ಸಿದ್ಧಾಂತ. ಇದನು ಸಾಧಿಸಿಕೊಳ್ಳಿ.
ಎಂದೆಂದಿಗು ರುಜೆಯಿಲ್ಲ ; ಸಂದು ಸಂಶಯವಿಲ್ಲ.
ಮರುಳ ಶಂಕರ ಪ್ರಿಯ ಸಿದ್ಧರಾಮೇಶ್ವರ ಲಿಂಗದಲ್ಲಿ ! ”

ಮಾನವನಿಗೆ ರೋಗ ಬಂದಿರುವುದು ಬರೀ ದೇಹಕ್ಕಲ್ಲ. ದೇಹಿಗೂ ಬಂದಿದೆ. ಆದ್ದರಿಂದ ಬರೀ ದೇಹಕ್ಕೆ ಔಷಧಿಯ ಕೊಟ್ಟರೆ ಸಾಲದು. ದೇಹಿಗೂ ಔಷಧಿ ಬೇಕು. ತ್ರಿದೋಷಗಳು ತನುರೋಗವಾದರೆ ತ್ರಿಮಲಗಳು ತನ್ನಾತ್ಮ ರೋಗಗಳು. ಇವೆರಡೂ ಸೇರಿ ಆರಾದ ಈ ರೋಗಗಳು ಒಂದೊಂದು ಆರಾರಾಗಿ ಮೂವತ್ತಾರಾಗುವವು. ಅವು ಮತ್ತೆ ಒಂದೊಂದು ಮೂರು ಮೂರಾಗಿ ನೂರೆಂಟು ರೋಗಗಳಾಗುತ್ತವೆ. ಈ ರೋಗಗಳ ರಹಸ್ಯವ ತಿಳಿದು ಸಮೂಲಕಳೆಯಬಲ್ಲ ಪಂಡಿತ ಶ್ರೀ ಗುರುವೊಬ್ಬನೇ ಒಬ್ಬ. ಈ ನೂರೆಂಟು ರೋಗಗಳಿಗೆಲ್ಲ ಒಂದೇ ಒಂದು ಮಾತ್ರೆ ಇಷ್ಟಲಿಂಗ! ಇದು

ಶ್ರೀ ಗುರುವಿನ ಕರಸ್ಥಲದಲ್ಲಿ ತಯಾರಾಗುತ್ತದೆ. ಜೀವನ ನೂರೆಂಟು ವ್ಯಾಧಿಗಳ
ಕಳೆವ ನೂರೆಂಟು ತತ್ತ್ವ ಶಕ್ತಿಯುಳ್ಳ ಇಷ್ಟಲಿಂಗವೆಂಬ ದಿವ್ಯ ಔಷಧಿಯ ಮಾತ್ರೆ
ಯೊಂದನ್ನು ತಯಾರಿಸಿ ಕೊಡಬಲ್ಲ ಸಮರ್ಥ ವೈದ್ಯ ಶ್ರೀ ಗುರು. ಆದ್ದರಿಂದ ಆತನ
ನೂರೆಂಟು ಜಗದ್ಗುರು ನಾಮ ಸಾರ್ಥಕ. ಶ್ರೀ ಗುರು ಚತುರ ಚಿಕಿತ್ಸಕ! ಅಂಗ
ವೆಂಬ ತಟ್ಟೆಯ ತ್ರಿಮಲಗಳ ತ್ರಿವಿಧ ದೀಕ್ಷೆಗಳಿಂದ ಕಳೆದು ತ್ರಿಲಿಂಗಗಳೆಂಬ ಮಾತ್ರೆ
ಗಳನಿತ್ತು ವಾಂತಿ-ವಿರೋಚನಗಳ ಮಾಡಿಸಿದೆ ತ್ರಿದೋಷಗಳ ಪರಿಹರಿಸುತ್ತಾನೆ.
ತಿರುಗಿ ರೋಗ ಬಾರದಂತೆಸಗುತ್ತಾನೆ.

ಇದು ದೇವರಲ್ಲ; ಇದು ಬ್ರಹ್ಮವಲ್ಲ ಎಂದು ವಿಷಯೇಂದ್ರಿಯಗಳ ನೇತಿಗಳೆ
ವುದೇ ವಾಂತಿ! ಜಗತ್ತು ಸುಳ್ಳೆಂಬುದೆ ವಿರೋಚನ. ಇವೆರಡನ್ನೂ ಮಾಡಿಸದು ಈ
ಲಿಂಗತತ್ತ್ವ ಔಷಧಿ! ವಿಷಯಗಳನ್ನೆಲ್ಲ ವಿರುದ್ಧವಾಗಿಸಿ ಪ್ರಸಾದವಾಗಿಸಬಲ್ಲದು;
ಇಂದ್ರಿಯಗಳನ್ನೆಲ್ಲ ಇಷ್ಟವಾದ ಲಿಂಗಗಳನ್ನಾಗಿಸಬಲ್ಲುದು - ಇಷ್ಟಲಿಂಗ; ಪದಾರ್ಥ
ಗಳೆಲ್ಲ ಪ್ರಸಾದವಾದ ಬಳಿಕ ತ್ರಿದೋಷಗಳ ಉಲ್ಬಣಕ್ಕೆ ಅವಕಾಶವಿಲ್ಲ. ಹೀಗಾದ
ಮೇಲೆ ರೋಗಕ್ಕೆ ಎಂದೆಂದಿಗೂ ಇಂಬಿಲ್ಲ. ಅಂತೆಯೇ ಇಂದ್ರಿಯಗಳಲ್ಲಿರುವ ಇಂದ್ರಿ
ಯತ್ವವೆ ಇಲ್ಲವಂತಾದ ಬಳಿಕ ಕಾಮಾದಿಗಳ ಕಾಟವಿಲ್ಲ. ಇದಿಲ್ಲದ ಬಳಿಕ ಭವ
ರೋಗವಿಲ್ಲ. ಇದರಲ್ಲಿ ಇನ್ನಾವ ಸಂದೇಹವಿಲ್ಲ. ಆದ್ದರಿಂದ ಅಂಗ ಆತ್ಮಗಳೆರಡರ
ರೋಗವ ಕಳೆವಾತನೇ ವೈದ್ಯ. ಕಳೆಯಬಲ್ಲುದೇ ಔಷಧಿ. ಆ ವೈದ್ಯನ ಬಲ್ಲಿ
ಗುರು. ಆತನ ದಿವ್ಯ ಔಷಧಿ ಇಷ್ಟಲಿಂಗ! ಆ ಇಷ್ಟಲಿಂಗದ ಇಂಗಿತವ ಅರಿದು ಅರ್ಚಿ
ಸುವಾತನೆ ಚಿರಂಜೀವಿ.

ಸೃಷ್ಟಿ, ಸ್ಥಿತಿ, ಲಯಗಳೇ ನಿಜವಾದ ನಾಡಿಗಳು ಮಾನವನಿಗೆ! ಈ ತ್ರಿವಿಧ
ನಾಡಿಗಳ ಶುದ್ಧವಿಸುವುದೇ ಶ್ರೀ ಗುರುವಿನ ಕೆಲಸ. ಇದಕ್ಕಾಗಿ ಆ ಗುರುವಿನ ಬಳಿ
ಯಿರುವ ಔಷಧಿ ಇಷ್ಟಲಿಂಗ! ಶ್ರೀ ಗುರುವು ಇಷ್ಟಲಿಂಗವ ಕರುಣಿಸಿ ಸೃಷ್ಟಿಯ
ಅಂದರೆ ಹುಟ್ಟುವಿಕೆಯ ಕಳೆಯಬಲ್ಲ; 'ಲಿಂಗೋದ್ಭವ' ಎಂದೆನಿಸಬಲ್ಲ. ಇಷ್ಟ
ದಲ್ಲಿ ಪ್ರಾಣವ, ಪ್ರಾಣದಲ್ಲಿ ಇಷ್ಟವ ಇರಿಸಿ ಅನಿಷ್ಟ ಸ್ಥಿತಿಯ ಅಳಿಯಬಲ್ಲ; (ಲಿಂಗ
ಭೋಗೋಪಭೋಗಿ) ಎಂದೆನಿಸಬಲ್ಲ. ಭಾವಲಿಂಗದಲ್ಲಿಯೆ ಶಾಶ್ವತವಾಗಿರಿಸಿ
ಲಯವ ಕಳೆಯಬಲ್ಲ; 'ಲಿಂಗೈಕ್ಯ' ನೆಂದೆನಿಸಬಲ್ಲ. ಲಿಂಗೋದ್ಭವ – ಲಿಂಗಭೋ
ಗೋಪಭೋಗಿ - ಲಿಂಗೈಕ್ಯರಾಗಿ ಬಾಳುವವರಿಗೆ ಸೃಷ್ಟಿ ಸ್ಥಿತಿ ಲಯಗಳೆಂಬ ನಾಡಿಗಳ
ಮಿಡಿತವಿಲ್ಲ. ಅಂದರೆ ಹುಟ್ಟಿಲ್ಲ ಭವಜೀವನವಿಲ್ಲ. ಲಯವಿಲ್ಲ. ಹುಟ್ಟು ಸಾವು
ಗಳನ್ನೇ ಮೆಟ್ಟುವ ಲಿಂಗೌಷಧಿಯ ಮಹಿಮೆ ಮಹತ್ತರವಾದುದಲ್ಲವೆ? ಇಲ್ಲಿ
ಇನ್ನೊಂದು ವಿಚಾರವಿದೆ.

'ಲಿಂಗೋದ್ಭವ' ಇದು ತಪ್ಪಲ್ಲ. ಲಿಂಗ ಅಂದರೆ ಶಿಲೆ. ಶಿಲೆ ಅಂದರೆ
ಪೃಥ್ವಿ; ಇದರಲ್ಲಿ ಹೇಗೆ ಹುಟ್ಟುವುದು ಎಂದು ಹಲವರು ಕೇಳುತ್ತಾರೆ. ಎಲ್ಲರೂ

ಹುಟ್ಟುವುದು ಪೃಥ್ವಿಯಲ್ಲಿಯೆ! ಮಾನವ ದೇಹವೇ ಪೃಥ್ವ್ಯಂಗ. ಮಾತೃಗರ್ಭ ರೂಪ ಪೃಥ್ವ್ಯಂಗವ ಇಬ್ಭಾಗಿಸಿ ತಾನೇ ಈಚೆಗೆ ಎಲ್ಲ ಜೀವಿಗಳೂ ಬರಬೇಕು. ಇದರಲ್ಲಿ ಆಶ್ಚರ್ಯವೇನಿದೆ? ಇದನ್ನು ಬೋಧಿಸುವುದೇ ಲಿಂಗೋದ್ಭವ ತತ್ತ್ವದ ತಿರುಳು. ಪ್ರಪಂಚವೆಲ್ಲವೂ ಲಿಂಗ, ವಿಶ್ವಲಿಂಗ. ಪೃಥ್ವಿ ಜಲ ಅಗ್ನಿ, ವಾಯು ಆಕಾಶ ಆತ್ಮ ಇವಾರು, ಲಿಂಗಗಳೆ! ಅಂತೆಯೆ ಇವಾರರಿಂದಾದ ದೇಹವೂ ಲಿಂಗ! ಇದರಿಂದ ಲಿಂಗೋದ್ಭವ - ಲಿಂಗಭೋಗೋಪಭೋಗ - ಲಿಂಗೈಕ್ಯಗಳು ಸಮನ್ವಯ ವಾಗುತ್ತದೆ. ಸೃಷ್ಟಿ ಸ್ಥಿತಿ ಲಯಗಳು ಲಿಂಗಮಯವಾಗಿ ಪ್ರಾಕೃತತತ್ವವನ್ನು ಕಳೆದು ಕೊಳ್ಳುತ್ತವೆಯೆಂಬುದು ಸಿದ್ಧಾಂತವಾಗುತ್ತದೆ. ಶ್ರೀಗುರುವಿನ ಕರಸ್ಥಲವೇ ಪೃಥ್ವಿ ತತ್ತ್ವ. ಆ ಪೃಥ್ವಿ ತತ್ತ್ವದಲ್ಲಿಪ್ಪ ಕರದಿಷ್ಟದ ಶಿಲೆಯಲ್ಲಿನ ಜ್ಯೋತಿಯಿಂದ ಉದಯಿ ಸುವುದೆ ಅಂದರೆ ಕರಕಂಜಾತರಾಗುವುದೆ ಲಿಂಗೋದ್ಭವ ಶಬ್ದದರ್ಥ.

“ ಲಿಂಗದೊಳಿರ್ದು ಲಿಂಗಮನೆ ತಾಳ್ದು ನಿರಂತರ ಲಿಂಗಪೂಜೆಯಂ
ಲಿಂಗದಿನೊಲ್ದು ವಿಸ್ತರಿಸಿ ಲಿಂಗಕೆ ಲಿಂಗಮನರ್ಪಿಸುತ್ತ ಮಾ -
ಲಿಂಗಪದಾರ್ಥಮಂ ಸವಿದು ಲಿಂಗಸುಖಾಸ್ಪದನಾಗಿ ರಾಜಿಪಂ
ಲಿಂಗನಿಜೈಕ್ಯನಯ್ಯ ಪರಮ ಪ್ರಭುವೇ ಮಹದೈಪುರೀಶ್ವರಾ ”

ಲಿಂಗವೆಂಬುದು ಕೇವಲ ಕಾಣದ ಒಂದು ವಸ್ತುವಲ್ಲ. ಬಾಳನು ಬೆಳಗಿಸದ ನಿರರ್ಥಕ ವಸ್ತುವಲ್ಲ. ಕೇವಲ ಆಕಾಶ ಪುರಾಣವಲ್ಲ. ಲಿಂಗ ನಮ್ಮ ಕಣ್ಣಿಗೆ ಕಾಣುವ ವಸ್ತು. ಕಣ್ಣಿಗೆ ಕಳೆಯನೀವ ವಸ್ತು. ಲಿಂಗ ಕೈಗೆ ನಿಲುಕಿದ ವಸ್ತು. ಕ್ರಿಯೆಯ ಕಲಿಸುವ ವಸ್ತು. ಲಿಂಗದಿಂದ ಇಹದ ಅಭ್ಯುದಯವಿದೆ; ಅಚ್ಚ ಸೊಗ ವಿದೆ. ಲಿಂಗದಿಂದ ಅಂಗವು ಆರೋಗ್ಯದಿಂದ ಇರುತ್ತದೆ. ಲಿಂಗಾರ್ಚನೆಯಿಂದ ಅಂಗಾಂಗಗಳು ತಮ್ಮ ಸವಕಳೆಯನ್ನು ತುಂಬಿಕೊಳ್ಳುತ್ತವೆ. ಲಿಂಗದಿಂದ ಅಂಗ ಆತ್ಮಗಳೆರಡಕ್ಕೂ ಸತ್ಪ್ರಯೋಜನವಿದೆ. ಲಿಂಗವು ಸಾಕಾರವೂ ಅಹುದು; ನಿರಾ ಕಾರವೂ ಅಹುದು. ಕ್ರಿಯಾಜ್ಞಾನಗಳೆರಡನ್ನೂ ಒದಗಿಸುತ್ತದೆ ಲಿಂಗತತ್ತ್ವಾ ಭ್ಯಾಸ. ಭೋಗ–ಯೋಗ ಸಮನ್ವಯವಿದೆ ಲಿಂಗತತ್ತ್ವದಲ್ಲಿ! ಆರೋಗ್ಯ-ಆಯುಷ್ಯ ಗಳನ್ನು ವರ್ಧಿಸುವ ದಿವ್ಯತತ್ತ್ವಲಿಂಗ! ಇಹದಶಕ್ತಿ ಪರದ ಮುಕ್ತಿಗಳನ್ನು ಅನುಗ್ರಹಿ ಸುತ್ತದೆ ಲಿಂಗ! ಅರ್ಥ, ಆರೋಗ್ಯ, ಆನಂದಗಳನ್ನು ಕೊಡಬಲ್ಲುದು ಲಿಂಗ!

“ ಲಿಂಗವೆಂಬುದು ಪರಶಕ್ತಿಯುಕ್ತ.
ಲಿಂಗವೆಂಬುದು ಪರಶಿವನ ನಿಜದೇಹ.
ಲಿಂಗವೆಂಬುದು ಪರಶಿವನ ನಿರತಿಶಯಾನಂದ ಸುಖ.
ಲಿಂಗವೆಂಬುದು ಪರಶಿವನ ಪರಮ ಜ್ಞಾನ; ಲಿಂಗವೆಂಬುದು ಪರಶಿವನು ತಾನು.
ಲಿಂಗವೆಂಬುದು ಷಡಧ್ವಮಯ ಜಗಜ್ಜನ್ಮಭೂಮಿ ತಾನು.
ಲಿಂಗವೆಂಬುದು ಅಖಂಡಿತ ಅಭೇದ್ಯ ಪಂಚಸಂಜ್ಞೆ ತಾನು.

ಲಿಂಗವೆಂಬುದು ಹರಿಬ್ರಹ್ಮರ ನಡುವೆ ನೆಗಳ್ದ ಜ್ಯೋತಿರ್ಮಯ ಲಿಂಗ.
ಶ್ರುತಿಃ 'ಆಲಯಂ ಸರ್ವಭೂತಾನಾಂ ಲಯಾನಾಂ ಲಿಂಗಮುಚ್ಯತೇ'
ಎಂಬುದಾಗಿ ಇದು ಲಿಂಗದ ಮರ್ಮ.
ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರ ಲಿಂಗದೊಳಿಂತು
ತಿಳಿಯಬಲ್ಲಾತನೆ ಬಲ್ಲವನು."

ಚಿತ್ತುವೆಂಬ ಬಿತ್ತು ಬಲಿದು ಎರಡಾದಲ್ಲಿ
ಲಿಂಗವೆಂಬ ಕಳೆ ಅಂಕುರಿಸಿ ಮೂರ್ತಿಯಾಯಿತ್ತು.
ಆ ಮೂರ್ತಿಯ ಘನತೆಯನೇನೆಂದುಪಮಿಸಬಾರದು.
ನೋಡಿದಡೆ ಮೂರ್ತಿ; ಹಿಡಿದಡೆ ಬಯಲು.
ಆ ಮೂರ್ತಿಯೊಳಗಿದೆ ಈರೇಳು ಲೋಕದ ಪ್ರಾಣಕಳೆ!
ಆ ಕಳೆಯ ಬೆಳಗು ತಾನೆ ನಮ್ಮ
ಗುಹ್ಯೇಶ್ವರ ಲಿಂಗದ ಲೀಲಾಮೂಲದ ಪ್ರಥಮ ಭಿತ್ತಿ.

ಮರದೊಳಗಣ ಪತ್ರಫಲಂಗಳು ಮರಕಾಲವಶದಲ್ಲಿ
ತೋರುವಂತೆ ಹರನೊಳಗಣ ಲೀಲಾಪ್ರಕೃತಿ ಸ್ವಭಾವಂಗಳು
ಹರಲೀಲಾವಶದಲ್ಲಿ ತೋರುವವು.
ಲೀಲೆಯಾದಡೆ ಉಮಾಪತಿ; ಲೀಲೆ ನಿಂದಡೆ ಸ್ವಯಂಭು;
ನಮ್ಮ ಗುಹ್ಯೇಶ್ವರ ಲಿಂಗವು."

" 'ಲಿ'ಕಾರವೆ ಶೂನ್ಯ, ಬಿಂದುವೆ ಲೀಲೆ;
ಗಕಾರವೆ ಚಿತ್ತು; ಈ ತ್ರಿವಿಧದೊಳಗಿದೆ
ಲಿಂಗವೆಂಬ ಸಕೀಲ; ಅದರ ಸಂಚವನಾವಾತ ಬಲ್ಲ-
ಆತನೇ ಲಿಂಗಸಂಗಿ! ಕೂ. ಚೆ. ಸಂಗಮದೇವಾ,
ಲಿಂಗಾನುಭಾವಿಗಳ ಶ್ರೀಚರಣಕ್ಕೆ ನಮೋನಮೋ ಎಂಬೆ!"

ಈ ನಾಲ್ಕು ವಚನಗಳಲ್ಲಿ ಕಾಣಬಹುದು ಲಿಂಗದ ಸಂಪೂರ್ಣ ಸ್ವರೂಪದರ್ಶನ! ಲಿಂಗ ಹೇಗೆ ಆತ್ಮವಿಕಾಶಕ್ಕೆ ವಿಶ್ವಪ್ರಕಾಶಕ್ಕೆ ಕಾರಣವಾಗಿವೆಯೆಂಬುದನ್ನು ಮಾನವ ಜೀವನದ ಕಳೆಯಾಗಿದೆಯೆಂಬುದನ್ನು ಚೆನ್ನಾಗಿ ಚಿತ್ರಿಸಿವೆ ಈ ನಾಲ್ಕು ವಚನಗಳು. ಷಡಧ್ವಮಯವಾದ ಲಿಂಗ ಸಕಲ ವಿದ್ಯಾಸ್ವರೂಪವೆಂಬುದನ್ನು ಉಗ್ಗಡಿಸಿದೆ. ಈರೇಳು ಲೋಕದ ಪ್ರಾಣಕಳೆ ಇಷ್ಟಲಿಂಗ! ಆದ್ದರಿಂದ ಇಷ್ಟಲಿಂಗಧಾರಣೆ ಆವಶ್ಯಕ. ಅದರ ಉಪಾಸನೆ ಆವಶ್ಯಕ! ಅದರಿಂದ ಆಗುತ್ತದೆ ಆತ್ಮವಿಕಾಸ!

———::———

# ಶಿವಾನುಭವ.



ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್



೧

ಶಿವಾನುಭವ ಶಿವವಾದ ಅನುಭವ; ಶಿವದ ಅನುಭವ, ಶಿವನ ಅನುಭವ. ತನ್ನ ಸಮಗ್ರ ಜೀವನ ಶಿವಾನುಭವವಾಗಲಿ ಎನ್ನುವುದು ಎಲ್ಲ ಚೇತನದ ಅಪೇಕ್ಷೆ. ನಮ್ಮನ್ನು ಪಡೆದ ಈ ಆವರಣದ ಉದ್ದಿಷ್ಟ ಧರ್ಮಕ್ಕೆ ಅನುಸಾರವಾಗಿ ನಡೆದರೆ ಶಿವನ ಅನುಭವ ಆಗುತ್ತದೆ. ಶಿವದ ಅನುಭವ ಆದದ್ದರಿಂದ ಅದು ಶಿವ ಆಗಿರುತ್ತದೆ. ಅನುಭವಕ್ಕೆ ನಿಲುಕಿದ ತತ್ತ್ವವನ್ನು ತತ್ತ್ವವಾಗಿ ಗ್ರಹಿಸಿದೆವಾದರೆ ಅದನ್ನು ಶಿವದ ಅನುಭವ ಎನ್ನುತ್ತೇವೆ, ಪುರುಷಾಕಾರದಿಂದ ಗ್ರಹಿಸಿದೆವಾದರೆ ಶಿವನ ಅನುಭವ ಎನ್ನುತ್ತೇವೆ. ಶಿವದ ಎಂದೇ ತೃಪ್ತಿಪಡುವ ಚೇತನರೂ ಉಂಟು; ಶಿವನ ಎನ್ನ ಬಯಸುವ ಚೇತನರೂ ಉಂಟು. ಒಂದನ್ನೆಂದರೆ ಹೆಚ್ಚಲ್ಲ; ಇನ್ನೊಂದನ್ನೆಂದರೆ ಕಡಮೆಯಲ್ಲ. ಸೃಷ್ಟಿಯ ಧರ್ಮಕ್ಕೆ ಅನುಸಾರವಾಗಿ ನಡೆಯಬೇಕೆಂಬ ಹಂಬಲು ಮುಖ್ಯ. ಇದನ್ನು ಹಿರಿಯರು ಹೀಗೆಂದು ಹೇಳಿಕೊಂಡರು:

ಯೇನೇದಂ ಭೂತಂ ಭುವನಂ ಭವಿಷ್ಯತ್
ಪರಿಗೃಹೀತಂ ಅಮೃತೇನ ಸರ್ವಂ
ಯಸ್ಮಿನ್ ಶ್ಚಿತ್ತಮೋತಂ ಪ್ರಜಾನಾಂ
ತನ್ಮೇಮನಃ ಶಿವಸಂಕಲ್ಪಮಸ್ತು.



೨

ಸೃಷ್ಟಿ ಶಿವಸಂಕಲ್ಪ ಎನ್ನುವುದು ಮನವುಟ್ಟಬೇಕಾದರೆ ದೃಷ್ಟಿ ಸಮಗ್ರವಾಗಿರಬೇಕು. ಅಂಶ ಕೊಂಕಾಗಿ ಕಾಣಬಹುದು; ಪೂರ್ಣ ಅದನ್ನು ಒಳಗೊಂಡು ಸೌಂದರ್ಯ

ವನ್ನು ಸಾಧಿಸಿರುತ್ತದೆ. ಆ ಶಿವವನ್ನು ಕಂಡು ಅತೃಪ್ತ ಆಗುವುದು ಅಸಮಗ್ರದೃಷ್ಟಿ. ಅಶಿವ ಅಷ್ಟನ್ನೇ ತೋರುವುದು ತಪ್ಪಲ್ಲ; ಇರುವುದು ಅದಷ್ಟೇ ಎನ್ನುವುದು ತಪ್ಪು. ಸಾವು ಇದೆ; ಅದನ್ನು ಒಳಗೊಂಡು ಜೀವ ಇದೆ. ಸರಳ ಜೀವಿಯಾದ ಸೋದರಿಯೊಬ್ಬರು ಗಂಡ ತೀರಿಕೊಂಡಿದಾರೆ ಎನ್ನಬೇಕಾದರೆ 'ಶಿವನ ಪುರಿಗೆ ಹೋಗಿದಾರೆ' ಎಂಬ ಮಾತುಗಳನ್ನು ಬಳಸಿದರು. ಆ ಹೆಣ್ಣುಸಿರಿಗೆ, ಪತಿ ಇಲ್ಲಿಲ್ಲ ಎನ್ನುವುದು ಎಷ್ಟು ದಿಟ ಅಷ್ಟೇ ದಿಟ, ಆತ ದೈವದ ಸಾನ್ನಿಧ್ಯದಲ್ಲಿದಾರೆ ಎನ್ನುವುದು. ಇದೇ ಕಾರಣದಿಂದಲೇ ನಮ್ಮ ಜನ ನಾಟಕ ದುರಂತವಾಗಿ ನಿಲ್ಲಬಾರದು ಎಂದರು; ಪಿಂಡದ ಶ್ರಾದ್ಧ ಮುಗಿದ ಮಾರನೆಯ ದಿನ 'ಶುಭ ಸ್ವೀಕಾರ'ವನ್ನು ಇರಿಸಿದರು. ಮಂಗಳವೇ ಸೂತ್ರ; ಅಮಂಗಳ ಅದರ ವಿಚ್ಛೇದ. ಹರಿದ ಸೂತ್ರ ಹರಿದೇ ನಿಲ್ಲುವುದಿಲ್ಲ; ಜೀವನ ಅದಕ್ಕೆ ಹರಿದು ಬರುತ್ತದೆ; ಹರಿದದ್ದನ್ನು ಮತ್ತೆ ಬೆಸೆಯುತ್ತದೆ; ಮತ್ತೆ ಮುಂದೆ ಹರಿಸುತ್ತದೆ.

೩

ಮನುಜಕುಲದ ಎಲ್ಲ ಅನ್ವೇಷಣದ ಗುರಿ ಶಿವದ ಅನುಭವವನ್ನು ಸಾಧಿಸುವುದೇ. 'ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ; ಭದ್ರಂ ಪಶ್ಯೇಮ ಅಕ್ಷಭಿಃ ಯಜತ್ರಾಃ; ಸ್ಥಿರೈಃ ಅಂಗೈಃ ತುಷ್ಟುವಾಂಸಃ ತನೂಭಿಃ, ವ್ಯಶೇಮ ದೇವ ಹಿತಂ ಯದಾಯುಃ' ಎಂದ ಋಷಿ ಮಾನವಸಾಮಾನ್ಯವಾದ ಆಕಾಂಕ್ಷೆಯನ್ನು ನುಡಿದನು. ಎಲ್ಲ ಮತಗಳೂ ಈ ಆಕಾಂಕ್ಷೆ ಸಿದ್ಧಿಸುವುದು ಹೇಗೆ ಎನ್ನುವುದನ್ನು ಕಲಿಸಲು ಹೊರಟವು. 'Seek ye first things first', ಎಂದ ಗುರು ಈ ಒಳ್ಳೆಯದನ್ನು ಬಿಟ್ಟು ಬೇರೆ ಒಳ್ಳೆಯದನ್ನು ಪಡೆ ಎಂದು ಹೇಳಲಿಲ್ಲ. ಎಲ್ಲ ಒಳ್ಳೆಯದೇ ಆಗಬೇಕು. ಎಂದಮೇಲೆ ನಾವೂ ಎಲ್ಲ ವೇಳೆಯೂ ಒಳ್ಳೆಯದನ್ನೇ ಮಾಡಬೇಕು. ಒಳ್ಳೆಯದನ್ನೇ ಎಣಿಸಬೇಕು; ಒಳ್ಳೆಯದನ್ನೇ ನುಡಿಯಬೇಕು. ಹೀಗೆ ಮಾಡಿದೆವೋ ನಮಗೆ ಸದಾ ಶಿವ ಸಿದ್ಧಿಸುತ್ತದೆ. ಎಲ್ಲರೂ ಒಳ್ಳೆಯದನ್ನೇ ಎಣಿಸಬೇಕು ಮುಂತಾಗಿ ಹೇಳುವುದರ ಅರ್ಥ, ಎಲ್ಲರ ಎಣಿಕೆ ಒಂದೇ ಎಂದಲ್ಲ. ಅವರವರಿಗೆ ತಕ್ಕ ಎಣಿಕೆ, ನುಡಿ, ನಡೆ, ಅವರವರದು ಬೇರೆ ಇರುತ್ತದೆ. ಪರಿಸ್ಥಿತಿ ಬೇರೆಯಾದಂತೆ ತಕ್ಕ ಎಣಿಕೆ, ತಕ್ಕ ನುಡಿ, ತಕ್ಕ ನಡೆ ಎನ್ನುವುದು ಬೇರೆ ಆಗುತ್ತದೆ. ಮಹಾಭಾರತ ಹೇಳುವಂತೆ, 'ದೇಶಕಾಲ ನಿಮಿತ್ತಾನಾಂ ಭೇದೈಃ ಧರ್ಮೋ ವಿಭಿದ್ಯತೇ, ಅನ್ಯೋಧರ್ಮಃ ಸಮಸ್ಥಸ್ಯ ವಿಷಮಸ್ಥಸ್ಯಚಾಪರಃ' ಆದರೆ, ಈ ಬೇರೆ ಆ ಬೇರೆ ತಮ್ಮ ಒಟ್ಟನಲ್ಲಿ, ಚಿತ್ರದಲ್ಲಿಯ ಬೇರೆಬೇರೆಯ ಬಣ್ಣಗಳಂತೆ, ಒಂದೆ ಆದ ಒಂದು ಉದ್ದೇಶದ ಸಾಧನದಲ್ಲಿ ಜೊತೆ ನಡೆಯುತ್ತವೆ.

೪

ದೃಷ್ಟಿ ಸಮಗ್ರ ಆಗಬೇಕು ಎನ್ನುವುದರ ಉದ್ದೇಶ, ದರ್ಶನ ಸರಿಯಾಗಲಿ ಎನ್ನುವುದು; ದರ್ಶನ ಸರಿಯಾಗಲಿ ಎನ್ನುವುದರ ಉದ್ದೇಶ, ಸ್ವಧರ್ಮ ತಿಳಿಯಲಿ

ಎನ್ನುವುದು. ಸ್ವಧರ್ಮ ತಿಳಿಯಲಿ ಎನ್ನುವುದರ ಉದ್ದೇಶ, ನಡತೆ ಸರಿಯಾಗಲಿ ಎನ್ನುವುದು. ಇದು ಸಿದ್ಧಿಸುವ ವೇಳೆಗೆ ಮನುಷ್ಯನ ತಿಳಿವು ಯಾವ ವಿವರದಲ್ಲಿ ಎಂದರೂ ಒಂದು ನಿಶ್ಚಯಕ್ಕೆ ಬಂದಿರುತ್ತದೆ. ದೈವವೆಂದರೇನು, ಜೀವವೆನ್ನುವುದೇನು, ಮಾನವನ ಗುರಿಯೇನು, ಅವನ ಕರ್ತವ್ಯವೇನು, ಎಂಬ ವಿಷಯಗಳಲ್ಲೆಲ್ಲಾ ಸ್ಪಷ್ಟವಾದ ಒಂದು ನಿರ್ಣಯಕ್ಕೆ ಬಂದಿರುವುದು ಉಚಿತವಾದ ಸದ್ವರ್ತನಕ್ಕೆ ತಳಹದಿ. ಎಂದರೆ ಇದನ್ನು ಒಬ್ಬೊಬ್ಬನೂ ಮಾಡಿಯಾನು ಎಂದಲ್ಲ, ಮಾಡಬೇಕು ಎಂದೂ ಅಲ್ಲ. ಆದರೂ ಒಬ್ಬೊಬ್ಬನೂ ಇದನ್ನು ಕುರಿತು ಯೋಚಿಸಿ, ತಾನೇ ಕಾಣಲಾಗದ ಸಂಗತಿಯನ್ನು ತನಗಿಂತ ಹೆಚ್ಚು ಬಲ್ಲವರಿಂದ ಪಡೆದು, ಒಪ್ಪಿಕೊಳ್ಳಬೇಕು. ಹೀಗೆ ಆದಾಗ, ತಾನೇ ಕಂಡ ಋಷಿ, ಅವನಿಂದ ಸತ್ಯವನ್ನು ಗ್ರಹಿಸಿದ ಅನುಯಾಯಿ, ತಮ್ಮ ಒಂದು ದರ್ಶನದ ಪ್ರತಿಪಾದಕರಾಗುತ್ತಾರೆ. ನಾನೇ ಕಾಣುತ್ತಿದ್ದೇನೆ, ನನಗೆ ಬೇರೆಯವರು ಹೇಳಬೇಡ ಎನ್ನುವ ಕೆಚ್ಚಿನಷ್ಟೇ ಹಿರಿಯಗುಣ, ನಾನು ಕಾಣೆ, ಇವನಿಗೆ ಕಾಣುತ್ತಿದೆಯಂತೆ, ಇವನು ಜಾಣ, ಇವನ ಮಾತು ನನಗೆ ಒಪ್ಪಿಗೆ, ಎನ್ನುವವನ ವಿನಯ. ಮನುಷ್ಯ ಇದನ್ನಾದರೂ ಸಾಧಿಸಬೇಕು. ತಾನೂ ಕಾಣದೆ, ಕಂಡವನ ಮಾತನ್ನೂ ಒಪ್ಪದೆ, ಬಾಳುವೆನೆನ್ನುವುದು ಮೂರ್ಖತನ. ಇಂಥವರು ಶೃಣ್ವಂತೋಽಪಿ ನ ಶೃಣ್ವಂತಿ, ಜಾನಂತೋಽಪಿ ನ ಜಾನತೇ, ಪಶ್ಯಂತೋಽಪಿ ನ ಪಶ್ಯಂತಿ! ಇದರ ಕೊನೆಯ ಮಾತು "ಪಶ್ಯಂತಿ ಜ್ಞಾನ ಚಕ್ಷುಷಃ". ಮೂಲ ಪ್ರಾಯಶಃ ಈ ವಾಕ್ಯವನ್ನು, ತಾನೇ ಕಾಣುವ ಋಷಿಯನ್ನು ಕುರಿತು ಹೇಳಿತೆಂದು ಕಾಣುತ್ತದೆ. ಇದಕ್ಕೆ ಸ್ವಲ್ಪ ವಿಸ್ತಾರವಾದ ಅರ್ಥವನ್ನು ಕೊಟ್ಟರೆ ತಪ್ಪಾಗಲಾರದು. ತಾನೇ ಕಂಡವನು ಋಷಿ ಸರಿ; ತಾನು ಕಾಣಲಾರದವನು, ಇವನು ಕಾಣಬಲ್ಲ ಋಷಿ, ಎಂಬುದನ್ನು ಕಾಣುವವನೂ ಒಂದು ಮುಖ್ಯ ವಿಷಯವನ್ನೇ ಕಂಡನೆನ್ನಬೇಕು. ಇವನಂಥವರೂ "ಪಶ್ಯಂತಿ". ಅವನು ಜ್ಞಾನವನ್ನೇ ಕಂಡ; ಇವರು ಜ್ಞಾನಿಯನ್ನು ಕಂಡರು. ಇವರೂ ಒಂದು ಮುಖ್ಯವಾದ ರೀತಿಯಲ್ಲಿ ಜ್ಞಾನ ಚಕ್ಷುಸ್ಸುಳ್ಳವರೇ, ಅವನನ್ನು ಕಾಣುವ ದರ್ಶನ ಇವರನ್ನು ಕಾಯುತ್ತದೆ.

[illegible]

ದೈವವನ್ನು ಕುರಿತ ಸಮಗ್ರ ದೃಷ್ಟಿ ಕಾಣುವ ಒಂದು ಮುಖ್ಯ ಸಂಗತಿ 'ಸರ್ವಂ ಖಲ್ವಿದಂ ಬ್ರಹ್ಮ' ಎನ್ನುವುದು. ಇನ್ನೊಂದು 'ನ ತತ್ರ ವಾಕ್ ಗಚ್ಛತಿ, ಯತೋ ವಾಚೋ ನಿವರ್ತಂತೇ' ಎನ್ನುವುದು. ಇನ್ನೊಂದು: 'ಪೂರ್ಣಮದಃ ಪೂರ್ಣಮಿದಂ' ಎನ್ನುವುದು. ಮತ್ತೊಂದು 'ಅಣೋರಣೀಯಾನ್ ಮಹತೋ ಮಹೀಯಾನ್' ಎನ್ನುವುದು. ನವಣೆಯ ಕಾಳಿನ ಕೊನೆಯಲ್ಲಿರುವುದಾದನ್ನು ಸೂಕ್ಷ್ಮವಾಗಿದ್ದೂ, ಈ ತತ್ತ್ವ ಸಮಸ್ತ ಲೋಕವನ್ನೂ ತನ್ನ ಒಳಕ್ಕಿರಿಸಿಕೊಂಡಿದೆ. 'ವನವೆಲ್ಲ ನೀನೆ,

ಅದರಲ್ಲಿರುವ ತರುವೆಲ್ಲ ನೀವೆ' ಎಂದರು ಶಿವನನ್ನು ನಲ್ಲ ಮಲ್ಲಿಕಾರ್ಜುನನಾಗಿ ಕಂಡ ಅಕ್ಕ. ಎಲ್ಲಕ್ಕಿಂತ ಹಿರಿಯಳಾದ ಪಾರ್ವತಿಯನ್ನು ಅರ್ಧಾಂಗ ಮಾಡಿಕೊಂಡ ಕೂಡಲಸಂಗ ಶಿವಶರಣರ ಮನದ ಕೊನೆಯ ಮೊನೆಯ ಮೇಲಡಗಿದ್ದನೆಂದು ಬಸವಣ್ಣ ಕಂಡರು. "ಗುಹೇಶ್ವರ ಶಿವ ಕಣ್ಣಿ ಕಾಂಬಡೆ ರೂಪಲ್ಲ,! ಕೈಗೆ ಸಿಲುಕುವಡೆ ದೇಹಿ ಯಲ್ಲ, ಅವನ ನಿಲುವು ಮಾತಿನ ಮಾಲಿಗೆ ಸಿಲುಕುವಂಥದಲ್ಲ", ಎಂದರು ಪ್ರಭುದೇವ. ರಾಮನಾಥ ಶಿವಮಣಿಗಳ ಸೂತ್ರದಂತೆ ವಿಶ್ವವನ್ನು ಹೊಕ್ಕು ಹಿಡಿದಿದಾನೆ ಎಂದರು ದೇವರ ದಾಸಿಮಯ್ಯ. ದೈವ ಅಚಿಂತ್ಯ, ಅದ್ಭುತ, ಅನಿರ್ವಚನೀಯ, ಅನಾದಿ, ಅನಂತ ಸತ್ಯಜ್ಞಾನ ಆನಂದ. ಅದನ್ನು ಇದಕ್ಕಿಂತ ಕಡಿಮೆಯಾಗಿ ಕಾಣುವ ದೃಷ್ಟಿ ತಪ್ಪು; ಕ್ಷುದ್ರ ದೈವಗಳು ಮೂಡುವುದು ಇಂಥ ದೃಷ್ಟಿಯಿಂದ. ಇದಕ್ಕಿಂತ ಕಡಮೆಯಾಗಿ ವರ್ಣಿಸುವುದು ಭಾಷೆಯಲ್ಲಿ ಅನಿವಾರ್ಯ ದೋಷ; ರೂಪಿಸುವುದು ಉಪಾಸನೆಯ ಸೌಲಭ್ಯಕ್ಕಾಗಿ ಅವಶ್ಯಕ. ಪಾಂಚರಾತ್ರ ಆಗಮದಲ್ಲಿ ಹೇಳಿರುವಂತೆ, 'ನ ತೇ ರೂಪಂ ನ ಚಾಕಾರೋ ನಾಯುಧಾನಿ ನ ಚಾಸ್ಪದಂ; ಪುರುಷಾಕಾರೋ ಭಕ್ತಾನಾಂ ತ್ವಂ ಪ್ರಕಾಶಸೇ' ಉಪಾಸಕ ಈ ನಿತ್ಯ ಅನಂತ ಸರ್ವವ್ಯಾಪ್ತಿ ತತ್ತ್ವ ವನ್ನು ತನ್ನಲ್ಲಿ ಕಾಣಲು ಹವಣಿಸಬೇಕು. ಶಿವನನ್ನು ಒಳಗಿರಿಸಿಕೊಂಡು ಹೊರಗೆ ಹುಡುಕುವರು ಪ್ರಭು ಹೇಳಿವಂತೆ 'ಎತ್ತನೇರಿ ಎತ್ತನರಸುವರು.' ಅನುಭಾವಿ ಫ್ರ್ಯಾನ್ಸಿಸ್ ಥಾಮ್ಸ್‌ಸನ್ ಹೇಳಿದಂತೆ "Does the fish soar to find the ocean? or the eagle fly to find the air? That we ask the stars in their motion to tell us if he is there?" ಪುರಾಣ ಹೇಳಿದೆ: 'ಆತ್ಮಸ್ಥಂ ಯೇ ನ ಪಶ್ಯಂತಿ ತೀರ್ಥೇ ಮಾರ್ಗಂತಿ ತೇ ಶಿವಂ'.

೬

ಸರ್ವಂ ಖಲ್ವಿದಂ ಬ್ರಹ್ಮ ಎನ್ನುವುದು ಮನಮುಟ್ಟಿದವನಿಗೆ ತನ್ನಲ್ಲಿ ದೈವ ಇರುವುದು ಎಷ್ಟು ನಿಜ ಅಷ್ಟೇ ನಿಜ ಎದುರ ಎಲ್ಲದರಲ್ಲೂ, ಮುಖ್ಯವಾಗಿ ಎಲ್ಲ ಜೀವ ದಲ್ಲೂ, ದೈವ ಇರುವುದು. ಮಾನವರಲ್ಲಿ ಮಾತ್ರ ಅಲ್ಲ, ಎಲ್ಲ ಜೀವರಾಶಿಯಲ್ಲಿ ದೈವ ವನ್ನು ಉಪಾಸಿಸುವುದು ಈ ಬುದ್ಧಿಗೆ ಸಹಜವಾಗುತ್ತದೆ. ಪರತತ್ತ್ವವನ್ನು ವಿಷ್ಣು ಎಂದು ವರ್ಣಿಸಿದ ಹಿರಿಯರು ಹೇಳಿದರು 'ಸರ್ವ ಭೂತೇಷು ಯಃ ಪಶ್ಯೇತ್ ಭಗವ ದ್ಭಾವಮಾತ್ಮನಃ ಭೂತಾನಿ ಭಗವತ್ಯಾತ್ಮನ್ಯ ಸೌಭಾಗವತೋತ್ತಮಃ'. ಇವರೇ ಹೇಳಿದರು ಎದುರಾಳಿಯಲ್ಲಿ ವಿಷ್ಣುವನ್ನು ಕಾಣದವನು ನರಾಧಮನಾಗುತ್ತಾನೆ ಎಂದು: 'ಸರ್ವಸ್ಯೈವ ಜನಸ್ಯಾಸ್ಯ ವಿಷ್ಣುರಭ್ಯಂತರೇ ಸ್ಥಿತಃ ತಂ ಪರಿತ್ಯಜ್ಯ ಯೇ ಯಾಂತಿ ಬಹಿರ್ವಿಷ್ಣುಂ ನರಾಧಮಾಃ' ವಿಷ್ಣು ಶಬ್ದಕ್ಕೆ ಪ್ರತಿ ಶಂಭು ಶಬ್ದವನ್ನಿರಿಸಿದರೆ ಈ ವಾಕ್ಯಗಳು ಪರತತ್ತ್ವವನ್ನು ಶಿವ ಎನ್ನುವವರ ವಾಕ್ಯಗಳಾಗುತ್ತವೆ. ಎದುರಾಳಿ ಎಲ್ಲ ಎಂದಮೇಲೆ ದೇಶ, ಕಾಲ, ಕುಲ, ಗೋತ್ರ, ವಯಸ್ಸು, ಲಿಂಗ ಇತ್ಯಾದಿ ಭೇದದಿಂದ

ಅಂತರ್ಯಾಮಿ ತತ್ತ್ವ ಬೇರೆಯಾಗುವುದಿಲ್ಲ ಎಂದು ಬೇರೆಯಾಗಿ ಹೇಳಬೇಕಾಗಿಲ್ಲ. ಉಪಾಧಿ ಬೇರೆ; ಒಳಗಣ ಸತ್ವ ಒಂದೇ. ಉಪನಿಷತ್ತು ಸಾರಿದಂತೆ 'ನೈವ ಸ್ತ್ರೀ ನ ಪುಮಾನೇಷಃ ನ ಚೈವಾಹಂ ನಪುಂಸಕಃ; ಯದ್ಯತ್ ಶರೀರಮಾದತ್ತೇ ತೇನ ತೇನ ಸಯುಜ್ಯತೇ! ಮೈ ಗಂಡು-ಹೆಣ್ಣು. ಆತ್ಮಕ್ಕೆ ಈ ಭೇದ ಇಲ್ಲ. ದಾಸಿಮಯ್ಯ ನುಡಿವಂತೆ: "ಮೊಲೆ ಮುಡಿ ಬಂದರೆ ಹೆಣ್ಣೆಂಬರು; ಗಡ್ಡ ಮೀಸೆ ಬಂದರೆ ಗಂಡೆಂಬರು" ನಡುವೆ ಸುಳಿವಾತ್ಮನು ಗಂಡೂ ಅಲ್ಲ–ಹೆಣ್ಣೂ ಅಲ್ಲ."

೭

ಶಿವ ಸರ್ವವ್ಯಾಪಿ ಸರ್ವಶಕ್ತ ತತ್ತ್ವ ಎಂದು ಕಂಡುಕೊಂಡವರು ಅವರವರ ಸ್ವಭಾವಕ್ಕೆ ಅನುಗುಣವಾಗಿ ಅವನ್ನು ನಿರ್ಗುಣ ಎಂದು ಸಗುಣ ಎಂದು ಬೇರೆ ಬೇರೆ ರೀತಿಯಲ್ಲಿ ಅನುಭವಿಸಿದಾರೆ. ಆ ತತ್ತ್ವ ನನ್ನಲ್ಲಿದೆ, ಎದುರ ಎಲ್ಲದರಲ್ಲಿದೆ, ಎಂದು ಕೊಂಡು ಕೆಲವರು, "ಎಲ್ಲ ಅದು ಒಂದೇ, ನಾನು ಎಂಬುದು ಬೇರೆ ಒಂದು ಇಲ್ಲ" ಎಂದು; ಇನ್ನು ಕೆಲವರು, "ಅದು ಇದೆ, ಅದರಲ್ಲಿ ಒಂದು ಅಂಗವಾಗಿ ನಾನು ಎನ್ನು ವುದು ಇದೆ" ಎಂದು; ಮತ್ತೆ ಕೆಲವರು, "ಅದು ಇದೆ, ಅದರಲ್ಲಿ ಅನುಗ್ರಹದಿಂದ ನಾನು ಎನ್ನುವ ಇದೂ ಇದೆ. ಇದರಿಂದ ನಾನು ಅದರ ಸೇವೆಯನ್ನು ಮಾಡುತ್ತೇನೆ" ಎಂದು ಮೂರು ತೆರನ ನಿಲವನ್ನು ಹಿಡಿದಿರುವುದು ಕಾಣುತ್ತದೆ. ಈ ನಿಲುವುಗಳನ್ನು ಪೂರ್ವಿಕರು ಅದ್ವೈತ, ವಿಶಿಷ್ಟಾದ್ವೈತ, ದ್ವೈತ ಎಂದು ಕರೆದಿದಾರೆ. ಶಿವಾನುಭವಿ ಯಾವನೂ ತನ್ನ ನಿಲುವು ಸರಿ ಎಂದು ಹೇಳಲೇಬೇಕು. ಮೂರು ನಿಲುವಿನವರೂ ಶಿವಾನುಭವಿಗಳೇ. ಆದ್ದರಿಂದ ಮೂರು ನಿಲುವೂ ಸರಿಯೇ. ಈ ನಿಲುವುಗಳನ್ನು ಸೇರಲು ಮಾರ್ಗ ಜ್ಞಾನ ಎಂದು ಒಬ್ಬರು, ಭಕ್ತಿ ಎಂದು ಒಬ್ಬರು, ಕರ್ಮ ಎಂದು ಒಬ್ಬರು ಸಾರುತ್ತಾರೆ. ಯಾರ ಉಪದೇಶವೂ ತಪ್ಪಲ್ಲ. ಸ್ವಭಾವಕ್ಕೆ ಅನುಗುಣ ವಾಗಿ ಇವುಗಳಲ್ಲಿ ಯಾವುದನ್ನೂ ಮುಖ್ಯವೆನ್ನಬಹುದು. ದಿಟದಲ್ಲಿ ಯಾವ ಒಂದು ಮಾರ್ಗವನ್ನು ಹಿಡಿದವನೂ ಇನ್ನೆರಡನ್ನು ಬಿಟ್ಟು ನಡೆಯುವಂತಿಲ್ಲ. ಎಂಥ ನಿಷ್ಠುರ ಅದ್ವೈತವಾದಿಯೂ ಸಿದ್ಧಿಯ ಕೊನೆಯ ಹಂತವನ್ನು ಮುಟ್ಟುವ ಮುನ್ನಿನ ಕ್ಷಣದ ವರೆಗೆ ದ್ವೈತವನ್ನೇ ಅನುಭವಿಸಬೇಕು. ಎಂಥ ನಿಷ್ಠುರ ದ್ವೈತಿಯೂ ಪರತತ್ತ್ವ ವನ್ನು ಬಿಟ್ಟು ತಾನು ಇಲ್ಲ ಎನ್ನುವುದನ್ನು ಕಂಡೇ ಇದಾನೆ. ವಿಶಿಷ್ಟಾದ್ವೈತ, ಜಗಳ ಬೇಡ ಎನ್ನುವ ಸಮಾಧಾನಕಾರನ ಉಪಾಯದ ವಾದ ಎಂಬಂತೆ ಕಾಣುತ್ತದೆ ಯಾದರೂ, ಪರಸ್ಪರ ವಿರುದ್ಧವಾದ ಎರಡು ವಾದಗಳೂ ಸರಿ ಎನ್ನುವ ಏಕೈಕ ಸಮ ನ್ವಯದ ಆಗುತ್ತದೆ. ಪರತತ್ತ್ವ ಎಷ್ಟು ಹಿರಿದೆಂದು ಕಂಡ ಜ್ಞಾನಿ ಅದರೆದುರಲ್ಲಿ ಭಕ್ತಿಯನ್ನು ಅನುಭವಿಸಲೇ ಬೇಕು. ಜ್ಞಾನ ಕರ್ಮ ಭಕ್ತಿ ಪರಿಶೀಲನದಲ್ಲಿ ಬೇರೆ ಯಾಗಿ ಕಾಣುತ್ತವೆ. ಅನುಭವದಲ್ಲಿ ಒಂದೇ ಹುರಿಯಾಗಿ ಕೂಡುತ್ತವೆ.

೮

ವ್ಯಕ್ತಿಯ ನಿಲುವಿನ ವಿಷಯ ಇಷ್ಟು ಸಿದ್ಧವಾದ ವೇಳೆಗೆ ಅವನ ವ್ಯವಹಾರಕ್ಕೆ ಒಂದು ವಿಶಿಷ್ಟ ರೂಪ ಬಂದಿರುತ್ತದೆ. ಇದರ ಮುಖ್ಯ ಲಕ್ಷಣ, ಆ ವ್ಯವಹಾರ ಸದಾ ಶಿವದ ಅನುಸಂಧಾನವಾಗಿರುತ್ತದೆ ಎನ್ನುವುದು. ವಸ್ತುಸ್ಥಿತಿಯಲ್ಲಿ ಅವನಿಗೆ ಶಿವದ ಸಾಧನಕ್ಕೆ ಅವಕಾಶವನ್ನು ಒದಗಿಸುತ್ತದೆ. ಉಪನಿಷತ್ತು ಹೇಳಿದಂತೆ 'ಪ್ರಣವೋ ಧನುಃ; ಶರೋಹ್ಯಾತ್ಮಾ; ಬ್ರಹ್ಮ ತಲ್ಲಕ್ಷ್ಯಮುಚ್ಯತೇ; ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್'. ಸಾವಿರ ಕಾಲದಿಂದ ಸತ್ಯದ ಅನುಷ್ಠಾನ ಮಾಡಿಕೊಂಡು ಬಂದ ಹಿರಿಯರು ಇವನಿಗೆ ಮೇಲ್ಪಂಕ್ತಿ ಆಗುತ್ತಾರೆ. ಜ್ಞಾನದಿಂದ ಸಿದ್ಧಿ ಪಡೆದ ಪ್ರಭುದೇವರು, ಭಕ್ತಿಯಿಂದ ಸಿದ್ಧಿ ಪಡೆದ ಬಸವಣ್ಣ-ಅಕ್ಕಮಹಾದೇವಿಯರು, ಕರ್ಮದಿಂದ ಸಿದ್ಧಿ ಪಡೆದ ಸಿದ್ಧರಾಮಣ್ಣನವರು ಈ ಮೇಲ್ಪಂಕ್ತಿಯ ಸಾಲಿನ ಹೊಸ ಕಾಲದ ಮಹಾ ಮೂರ್ತಿಗಳು. ಈ ಹಿರಿಯರು ಎಷ್ಟು ಹಿರಿಯರು ಎಂಬುದನ್ನು ಕಂಡವನು ನಿರಹಂಕಾರಿ ಆಗುತ್ತಾನೆ; ಇವರ ನಿಸ್ವಾರ್ಥವನ್ನು ಕಂಡವನು ನಿರ್ಮಮನಾಗುತ್ತಾನೆ, ಇವರ ನಿಷ್ಠೆಯನ್ನು ಕಂಡವನು ಧೀರನಾಗುತ್ತಾನೆ; ಇವರ ಔದಾರ್ಯವನ್ನು ಅರಿತವನು ಎಲ್ಲ ಒಳ್ಳಿದರ ದಾಸನಾಗುತ್ತಾನೆ. ಸನಾತನ ಧರ್ಮ ಹೊಗಳಿರುವ ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ; ಅದು ನಿಯಮಿಸಿರುವ ಶೌಚ, ಸಂತೋಷ, ತಪ, ಸ್ವಾಧ್ಯಾಯ, ಈಶ್ವರ ಪ್ರಣಿಧಾನ; ಇವು ಇಂಥವನ ನಿರಂತರ ಸಾಧನದ ಸೂತ್ರಗಳಾಗುತ್ತವೆ. ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ತನ್ನ ಹೊಗಳಲು ಬೇಡ, ಇದಿರ ಹಳಿಯಲು ಬೇಡ, ದುಷ್ಟವಾದದ್ದು ಬೇಡ ಎಂಬ ಮನೋಧರ್ಮ ಬಲಿಯುತ್ತದೆ. ಇವನಿಗೆ ತನ್ನವರು ಇತರರು ಎಂಬ ಭೇದ ಇಲ್ಲ. ಕೆಲವರು ಹೆಚ್ಚಾಗಿ ತನ್ನವರು ಎನ್ನುವುದಾದರೆ ಅವರು ತನ್ನಂತೆ ಸತ್ಯಕ್ಕೆ ಮೀಸಲಾಗಿರುವವರು. ಕ್ರಿಸ್ತಗುರು ತನ್ನ ಜೊತೆಯ ಧರ್ಮ ಪ್ರೇಮಿಗಳನ್ನು ತೋರಿ 'These are my mother and my brethern' ಎಂದನು. ಇವನು ಜೀವರಾಶಿಯ ಕಷ್ಟವನ್ನು ನಿವಾರಿಸಲು ತೊಡಗುತ್ತಾನೆ. ಸನಾತನ ಧರ್ಮ ಹೇಳಿದಂತೆ 'ಸರ್ವಭೂತಹಿತೇ ರತ' ಆಗಲು ಯತ್ನಿಸುತ್ತಾನೆ. ತಾನು ಹಿರಿಯ, ಕಡಮೆಯ ಜೀವಕ್ಕೆ ಉಪಕಾರ ಮಾಡುತ್ತಿದ್ದೇನೆ ಎಂಬ ಮನೋಧರ್ಮದಿಂದ ಅಲ್ಲ. ಪರಮಹಂಸ ರಾಮಕೃಷ್ಣದೇವ ಹೇಳಿದರು: 'ಎದುರಿಗಿರುವುದು ಜೀವ ಅಲ್ಲ ಶಿವ; ಅದಕ್ಕೆ ನೀನು ದಯೆ ತೋರಬೇಡ, ಸೇವೆಮಾಡು' ಎಂದು. 'ದಾಸ್ಯಮೈಶ್ವರ್ಯವಾದೇನ ಬಾಂಧವಾನಾಂ ಕರೋಮ್ಯಹಂ' ಎಂದನಂತೆ ಕೃಷ್ಣ. ಪಾಂಡವರು ಅವನನ್ನು ಹಿರಿಯ ಹಿರಿಯ ಎಂದೇ ಪೂಜಿಸಿದರು; ಅವನು ಅವರ ಮನೆಯ ಕುದುರೆಗಳನ್ನು ನೋಡಿಕೊಳ್ಳುವುದೇ ತನ್ನ ಕೆಲಸ ಎಂದು ನಿಂತನು. ಶಿವಾನುಭವಿಯ ಹೃದಯ ಕರುಣೆಯಿಂದ, ವಾತ್ಸಲ್ಯದಿಂದ ತುಂಬಿರುತ್ತದೆ. "ಏತಾವಾನ್ ಅವ್ಯಯೋ ಧರ್ಮಃ ಸದ್ಭಿಃ ನಿತ್ಯಮನುಷ್ಠಿತಃ ಯಲ್ಲೋಕ

ಶೋಕಸಂಪರ್ಶಾಭ್ಯಾಂ ತತ್ರ ಶೋಚತಿ ಹೃಷ್ಯತಿ." ಶಿವನನ್ನು ಪ್ರತ್ಯಕ್ಷ ಅನುಭವಿಸಿದವನು ಎದುರ ಜೀವದ ನೋವನ್ನು ಸಹಿಸಲಾರದೆ ಅದನ್ನು ತಾನೇ ತಿಂದೆನೆಂದು ಮುಂದೆ ಬರುತ್ತಾನೆ. 'ಕೋನು ಸಸ್ಯಾತ್ ಉಪಾಯೋತ್ರ ಯೇನಾಹಂ ದುಃಖಜೀವಿನಾಂ ಅಂತಃ ಪ್ರವಿಶ್ಯ ಭೂತಾನಾಂ ಭವೇಯಂ ದುಃಖಭಾನ್ ಸದಾ'

೬

'ಅಹಿಂಸಾ ಪರಮೋ ಧರ್ಮಃ' ಆದ್ಯರ ವಚನ. ಆನೆಯ ಹೆಜ್ಜೆಯ ಒಳಗೆ ಇನ್ನೆಲ್ಲ ಪ್ರಾಣಿಗಳ ಹೆಜ್ಜೆ ಅಡಗುವಂತೆ ಅಹಿಂಸೆಯಲ್ಲಿ ಇನ್ನೆಲ್ಲ ವ್ರತ ಅಡಗಿದೆ ಎಂದಿದೆ ಇತಿಹಾಸ. ಈ ಸತ್ಯವನ್ನು ಬಸವಣ್ಣನವರು ಎರಡು ವಾಕ್ಯದಲ್ಲಿ ನಿರೂಪಿಸಿದರು. "ದಯೆ ಇಲ್ಲದ ಧರ್ಮ ಯಾವುದಯ್ಯ, ದಯೆಯೇ ಧರ್ಮದ ಮೂಲವಯ್ಯ!" ಅಹಿಂಸೆ ವ್ರತವಾದ ಶಿವಾನುಭವಿ ಎದುರ ಜೀವಕ್ಕೆ ಹಿಂಸೆಮಾಡಿ ತಾನು ಬದುಕುವುದಿಲ್ಲ. ಎಂದರೆ ಅವನು ಮಾಂಸವನ್ನು ತಿನ್ನಲಾರ. ಹಿಂಸೆ ಎಂದರೆ ಪ್ರಾಣ ತೆಗೆಯುವುದೆಂತ ಮಾತ್ರ ಅಲ್ಲ; ತನಗಾಗಿ ದುಡಿಸುವುದು ಕೂಡ ಹಿಂಸೆಯೇ. ಎಂದ ಮೇಲೆ ಇವನು ಇನ್ನೊಬ್ಬನ ಗಳಿಕೆಯಿಂದ ತಾನು ಜೀವಿಸುವುದಿಲ್ಲ. ಅಪರಿಗ್ರಹಿ ಆಗುತ್ತಾನೆ. ತಾನೇ ದುಡಿಯುತ್ತಾನೆ. ಅವನಿಗೆ ಒಂದು ಕಾಯಕ ಇರಬೇಕಾಗುತ್ತದೆ. "ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಂ ಸಮಾಃ". ಗಳಿಸಿದ್ದನ್ನು ಅವನು ತೀರ ತನಗಾಗಿ ಮಾತ್ರ ಬಳಸುವುದಿಲ್ಲ. ಇಲ್ಲದವರಿಗೆ ಕೊಡುತ್ತಾನೆ. ತನಗೆ ಅವಶ್ಯಕವಲ್ಲದ್ದನ್ನು ಕೂಡಿಸಿಡುವುದು ಸ್ತೇಯ, ಕಳವು. ಇವನು ಇಂಥ ಕಳ್ಳನಾಗದೆ ಬಾಳುತ್ತಾನೆ. ಇಂಥವನು ಅಸತ್ಯವನ್ನು ಏಕೆ ತಾನೆ ಹೇಳಿಯಾನು? ಅಷ್ಟೇ ದಿಟವಾಗಿ ಇವನು ಹೆಣ್ಣ ವಿಷಯಕ್ಕೆ ಶುಚಿಯಾಗಿ ನಡೆಯುತ್ತಾನೆ. ಇವನ ಧಾರ್ಮಿಕ ಕ್ರಿಯೆಗೂ ಒಂದು ವಿಶಿಷ್ಟ ರೂಪ ಬರುತ್ತದೆ. ಶಿವಾನುಭವಿ ತನಗಿಂತ ಹೆಚ್ಚು ಬಲ್ಲವನನ್ನು ಗುರುವೆಂದು ಕಾಣುತ್ತಾನೆ. ತಾನು ಅವನ ಶಿಷ್ಯನಂತೆ ನಡೆಯುತ್ತಾನೆ. ಸರಿಯವರನ್ನು ಕಿರಿಯುವರನ್ನು ಹಿರಿಯರೆಂಬಂತೆ ಗೌರವದಿಂದ ಕಾಣುತ್ತಾನೆ. ಅವನ ಎಲ್ಲ ಕಾರ್ಯವೂ ದೈವದ ಸೇವೆ ಆಗುತ್ತದೆ. ಹೀಗಿದ್ದೂ ಇವನು ದೈವವನ್ನು ಅನುಭವಿಸುವ ಸುಖಕ್ಕಾಗಿ ಅದನ್ನು ದೃಷ್ಟ ಮಾಡಿಕೊಳ್ಳುತ್ತಾನೆ. ಅದು ಇವನ ಅಂಗೈಯ ಶೃಂಗಾರವಾಗುತ್ತದೆ; ಇವನ ಪೂಜೆಯನ್ನು ಸ್ವೀಕರಿಸುತ್ತದೆ. ಬದುಕುವುದಕ್ಕಾಗಿ ಹಿಂಸೆ ಮಾಡದವನು ದೈವದ ಹೆಸರಲ್ಲಿ ಹಿಂಸೆ ಮಾಡಿಯಾನೆ? ಇವನ ಸಾಧನದಲ್ಲಿ ಪಶುಘಾತಕ ಯಜ್ಞ ಇಲ್ಲ. ಭಗವಂತನಲ್ಲಿ ಮೊರೆಯಿಡು ಎಂದು ಬಸವಣ್ಣನವರು ಸನಾತನ ಧರ್ಮದ ಈ ಸಾರತಮ ಸತ್ಯವನ್ನು ಸಾರಿದರು. "ಬೀಜೈಃ ಯಜ್ಞೇಷು ಯಷ್ಟವ್ಯಂ ಇತಿ ವೈ ವೈದಿಕೀ ಶ್ರುತಿಃ. ಅಜ ಸಂಜ್ಞಾನಿ ಬೀಜಾನಿ. ಛಾಗಂ ನೋಹಂತು ಮರ್ಹಥ." "ನೈಷ ಧರ್ಮಃ ಸತಾಂ ದೇವಾಃ ಯತ್ರ ಬಾಧ್ಯೇತ ವೈ ಪಶುಃ"

ಯೇಹೂದ್ಯರ ಧರ್ಮಗ್ರಂಥ ಹೇಳುತ್ತದೆ: "God says, If I were hungry I would not tell you, for the world is mine and the fullness thereof. Will I eat the flesh of goats or drink the blood of bulls? Offer unto God thanks giving and pay thy vows unto the most high." ಇವನ ಪೂಜೆಯಲ್ಲಿ ಕ್ಲೇಶ, ಆಪ್ರುಟ, ತೋರಿಕೆ ಆಡಂಬರ ಇರುವುದಿಲ್ಲ. ಹೊತ್ತಾರೆ ಎದ್ದುದು ಮೊದಲು ನಿದ್ದೆಗೆಂದು ಹಾಸಿಗೆಯಲ್ಲಿ ಕೆಡೆಯುವವರೆಗೆ ಇವನು ಮಾಡುವ ಎಲ್ಲ ಕಾರ್ಯ ಶಿವದ ಉಪಾಸನ, ಶಿವದ ಸಾಧನ, ಶಿವನ ಆರಾಧನ ಆಗುತ್ತದೆ. ಎದುರ ಜೀವದಲ್ಲಿ ಇವನು ಶಿವನನ್ನು ಕಾಣುವುದರಿಂದ ಹೆರವರ ದುಃಖ ಇವನದೇ ದುಃಖ ಆಗುತ್ತದೆ. ಜೀವರಾಶಿಗೆ ಎಲ್ಲ ರೀತಿಯಲ್ಲಿ ಸಂತೋಷ ನೀಡಲು ಇವನು ಯತ್ನಿಸುತ್ತಾನೆ. ಪೂರ್ವಿಕರು ಹೇಳಿದಾರೆ "ಪ್ರಾಯಶೋ ಲೋಕತಾಪೇನ ತಪ್ಯಂತೇ ಸಾಧವೋ ಜನಾಃ; ಪರಮಾರಾಧನಂ ತದ್ಧಿ ಪುರುಷಸ್ಯಾಖಿಲಾತ್ಮನಃ" "ಯೇನಕೇನ ಪ್ರಕಾರೇಣ ಯಸ್ಯ ಕಸ್ಯಾಪಿ ಜಂತುನಃ ಸಂತೋಷಂ ಜನಯೇತ್ ಪ್ರಾಜ್ಞಃ ತದೇವೇಶ್ವರ ಪೂಜನಂ."

೧೦

ಶಿವಾನುಭವಿಗೆ ಜೀವನ ಸಾಧನದ ರಂಗ ಆಗುತ್ತದೆ. ಲೋಕ ವ್ಯವಹಾರ ತನ್ನನ್ನು ಪರೀಕ್ಷಿಸುತ್ತಿದೆ ಎಂದು ತಿಳಿದು ಅವನು ಎಲ್ಲ ವೇಳೆ ಎಚ್ಚರದಿಂದ ತಾಳ್ಮೆಯಿಂದ ನಡೆದುಕೊಳ್ಳುತ್ತಾನೆ. ಅವನು ತನ್ನ ದೌರ್ಬಲ್ಯವನ್ನು ಬಲ್ಲನು. ವಿಷಯವೆಂಬ ಹಸುರ ಎನ್ನ ಮುಂದೆ ಪಸರಿಸದಿರಯ್ಯ ಎಂದ ಅಣ್ಣನವರು ಈ ಎಚ್ಚರಕ್ಕೆ ಮೇಲ್ಪಂಕ್ತಿ. ಮನೆಯ ಕಿಚ್ಚು ಮನೆಯನ್ನು ಸುಡದೆ ನೆರೆಮನೆಯನ್ನು ಸುಡದು ಎಂದೂ ಈ ಹಿರಿಯರು ಹೇಳಿದರು. ಲೋಕ ಸರಿಯಾಗಿ ನಡೆಯಲಿಲ್ಲ ಎಂದು ಇವನು ಬೇಸರ ಪಡುವುದಿಲ್ಲ. ಕಡಲ ಕರೆಯಲ್ಲಿ ಮನೆಕಟ್ಟಿ ಅದರ ಮೊರೆತಕ್ಕೆ ಹೇಸಿ ಪ್ರಯೋಜನವೇನು ಎಂದ ಅಕ್ಕ ಈ ವಿಷಯಕ್ಕೆ ಮೇಲ್ಪಂಕ್ತಿ. ಜೀವನದಲ್ಲಿ ಬರುವ ಕಷ್ಟಕ್ಕೆ ಅನುಭಾವಿ ಅಂಜಲಾಗದು. ತನುಮನ ಧನ ನಿನ್ನದೆಂದು ಭಕ್ತ ಹೇಳಿದನೆ? ಶಿವ ತನುವನ್ನು ಮನವನ್ನು ಧನವನ್ನು ಅಲ್ಲಾಡಿಸಿ ನೋಡುತ್ತಾನೆ. ಇದರಿಂದ ನಡುಗದೆ ನಿಂತರೆ ಭಕ್ತಿಯನ್ನು ಒಪ್ಪುತ್ತಾನೆ. ಲಾಂಛನ ಮುಖ್ಯವಲ್ಲ, ಮನೋಧರ್ಮ ಮುಖ್ಯ, ಎನ್ನುವುದನ್ನು ಅನುಭವಿ ಸದಾ ನೆನಪಿನಲ್ಲಿರಿಸಿ ಲಾಂಛನ ಅಷ್ಟರಿಂದ ತೃಪ್ತನಾಗದೆ ಮನೋಧರ್ಮವನ್ನು ಸರಿಮಾಡಿಕೊಳ್ಳಲು ದುಡಿಯುತ್ತಾನೆ. "ಕೇಶ ಕಾಷಾಯಾಂಬರವನಿಕ್ಕಿದೊಡೇನೋ? ಅರಿವು ಆಚಾರವುಳ್ಳಡೇ ಜಂಗಮ;" "ಶೀಲವಾವುದೆಂದರಿಯರಿ ಕೇಳಿರಣ್ಣ;" "ಇಟ್ಟ ಕಲ್ಲು ಮೆಳೆಯ ಮೇಲೆ ಸಿಕ್ಕಿದಡೆ ಆ ಕಲ್ಲು ಲಿಂಗವೆ? ಆ ಮೆಳೆ ಭಕ್ತನೆ? ಇಟ್ಟಾತ ಗುರುವೆ?" "ರೂಪ ಬರೆಯ ಬಹುದು, ಪ್ರಾಣವ ಬರೆಯಬಹುದೇ?" ಇಂಥ ಗುರುವಚನ ಹಗಲಿಗೆ ಸೂರ್ಯನಾಗಿ, ಇರುಳಿಗೆ ತಾರೆಯಾಗಿ ಇವನ ಜೀವನಕ್ಕೆ ಬೆಳಕನ್ನು ನೀಡುತ್ತವೆ. ಸಿದ್ಧಿ ಸುಲಭವಲ್ಲ.

ಆದರೆ ಅದು ಕಷ್ಟಸಾಧ್ಯ ಎಂದು ಇವನು ಸೋತು ನಿಲ್ಲುವುದಿಲ್ಲ. ಚಿಟ್ಟಕ್ಕೆ ಚಳಿಯಾಗಬಾರದು. ಸಾಧಕನ ಆತ್ಮ ಕೆಚ್ಚನ್ನು ಬಿಡಬಾರದು. "If the salt bath lost its savour where with shall it be salted?" ಭಕ್ತಾಗ್ರಣಿಗಳು ಹೇಳಿದಾರೆ: "ನಂಬಿ ಕರೆವರೆ ಓ ಎಂಬ ಶಿವನು" "ಒಂದೇ ಕೂಗಳತೆ ಶ್ರೀ ವೈಕುಂಠ." ನಂಬು ; ಕರೆ; ಕೂಗು ನೆರವು ದೊರೆಯುತ್ತದೆ ; ಎದೆಗೆಡದೆ ಮುಂದೆ ನಡೆ ; ಗುರಿ ನಿಲುಕುತ್ತದೆ.

೧೧

ಪರತತ್ತ್ವವನ್ನು ಶಿವ ಎಂದು ಅನುಭವಿಸುವವರೂ ಅದನ್ನು ವಿಷ್ಣು ಎಂದು ಅನುಭವಿಸುವವರೂ ಪರಸ್ಪರ ವಿರೋಧಿಗಳಲ್ಲ. ವಿರೋಧಿಗಳಂತೆ ನಡೆದುಕೊಳ್ಳಬೇಕಾದದ್ದಿಲ್ಲ. ಪರಮಾರ್ಥದ ಹಂತದಲ್ಲಿ ಶಿವ ವಿಷ್ಣು ಒಂದೇ ಎನ್ನುವುದು ಮಾತ್ರ ಅಲ್ಲ; ದಿನದ ಜೀವನದಲ್ಲೂ ಶಿವ ವಿಷ್ಣು ಒಂದೇ. ಸಾಧನದ ಸೌಕರ್ಯಕ್ಕಾಗಿ ಶಿವ ಎಂದರೆ ಒಂದು ಮೂರ್ತಿ, ಒಂದು ಆಭರಣ, ಒಬ್ಬ ಪತ್ನಿ, ಒಬ್ಬ ಪುತ್ರ, ಒಂದು ನಿವಾಸ ಎಂದು ಕಲ್ಪಿಸಿ, ವಿಷ್ಣು ಎಂದರೆ ಇನ್ನೊಂದು ಮೂರ್ತಿ, ಇನ್ನೊಂದು ಆಭರಣ, ಇನ್ನೊಬ್ಬ ಪತ್ನಿ, ಇನ್ನೊಬ್ಬ ಪುತ್ರ, ಇನ್ನೊಂದು ನಿವಾಸ ಎಂದು ಕಲ್ಪಿಸಿದ್ದುಂಟು. ನಮ್ಮ ಆಚಾರ ಶಿವ ವಿಷ್ಣುಗಳನ್ನು ವಿರೋಧಿ ವ್ಯಕ್ತಿಗಳನ್ನಾಗಿ ಮಾಡಿದ್ದುಂಟು. ಸಂಪ್ರದಾಯಗಳ ಹಿರಿಯರು ಕೂಡ ಕೆಲವು ವೇಳೆ ತಮಗೆ ಶಿವ ಇರಲಿ ವಿಷ್ಣು ಬೇಡ, ವಿಷ್ಣು ಇರಲಿ ಶಿವ ಬೇಡ, ಎಂಬಂತೆ ನಡೆದದ್ದು ನುಡಿದದ್ದು ಉಂಟು. ಆದರೆ ಸನಾತನ ಧರ್ಮದ ಮಧ್ಯವಾಹಿನಿ ಈ ವಿರೋಧವನ್ನು ಎಂದೂ ಒಪ್ಪಿಲ್ಲ. ಏಕಂ ಸದ್ವಿಪ್ರಾಃ ಬಹುಧಾ ವದಂತಿ ಎಂದು ವೇದ ಸಾರಿದ ಸತ್ಯ, ಯಂ ಶೈವಾಸ್ಸಮುಪಾಸತೇ ಶಿವ ಇತಿ ಸೋಯಂ ಶ್ರೀ ಕೇಶವೇಶಃ ಎಂದು ವೈಷ್ಣವರ ಕಲ್ಲಲ್ಲಿ ಕೊರೆದ ಶ್ಲೋಕದಲ್ಲಿ, ದೇವನೊಬ್ಬ ನಾಮ ಹಲವು ಎಂದು ವೀರಶೈವರು ನುಡಿದ ವಚನದಲ್ಲಿ, ಅವತಾರ ತಳೆಯಿತು. "ರುದ್ರೋ ನಾರಾಯಣಶ್ಚೈವ ಸತ್ವವೇಕಂ ದ್ವಿಧಾಕೃತಂ" ಎಂದಿತು ಭಾರತ. ಶಾಶ್ವತಂ ಶಿವಮಚ್ಯುತಂ ನಾರಾಯಣಂ ಎಂದು ಶಿವನಾರಾಯಣ ಒಂದು ವಸ್ತು ಎಂದು ಘೋಷಿಸಿತು ಉಪನಿಷತ್ತು. ಶಿವ ವಿಷ್ಣು ಪದಗಳು ಎಷ್ಟೋ ಬೇರೆಯಾದರೂ ಅವು ನಿರ್ದೇಶಿಸುವ ವಸ್ತು ಒಂದೇ ಎಂದು ಶಿವದ ಉಪಾಸಕನೂ ನಿಶ್ಚಯ ಮಾಡಿಕೊಳ್ಳಬೇಕು, ವಿಷ್ಣುವಿನ ಉಪಾಸಕನೂ ನಿಶ್ಚಯ ಮಾಡಿಕೊಳ್ಳಬೇಕು.

೧೨

ಇದನ್ನು ನಿಶ್ಚಯ ಮಾಡಿಕೊಂಡ ಶಿವಾನುಭವಿ ತನ್ನ ನಿಶ್ಚಯವನ್ನೂ ಆ ನಿಶ್ಚಯದಿಂದ ತನಗೆ ದೊರಕಿದ ಶುಭವನ್ನೂ ಲೋಕದಗಲ ಹರಡಲು ಆಶಿಸಬೇಕು. ಶಿವ ವಿಷ್ಣು ಒಂದು ನಾಡ ದೇವರಲ್ಲ; ಒಂದು ದೇಶದ ದೇವರಲ್ಲ; ಬರಿಯ ಭೂಲೋಕದ ದೇವರಲ್ಲ. ಶಿವ ಮೂರ್ಲೋಕದ ದೇವರು. ಅವನ ಅಭಯಹಸ್ತ

ಎಲ್ಲ ಲೋಕಗಳನ್ನು ಕುರಿತಿದೆ. ಎಲ್ಲ ಹಿರಿಯ ಮನಗಳ ಗುರುಗಳಿಗೂ ಒಂದೇ ಆಕರದಿಂದ ಪ್ರೇರಣೆ ಬಂದಿದೆ. ಆದರ ಹೆಸರು ಶಿವ, ವಿಷ್ಣು, ಬ್ರಹ್ಮ, ಅಲ್ಲಾ, ಗಾಡ್, ಇತ್ಯಾದಿ ಇತ್ಯಾದಿ; ಏನೇ ಆಗಲಿ, ಯಾರೇ ಆಗಲಿ, ಎಲ್ಲಿಯೇ ಆಗಲಿ, ತಮ್ಮ ಅತ್ಯುನ್ನತ ಆದರ್ಶದ ಆಕಾರಕ್ಕೆ ಕೊಟ್ಟ ಎಲ್ಲ ಹೆಸರೂ ಇದನ್ನು ಮನಗಂಡ ಶಿವಾನುಭವ, ಶಿವ ಎಂಬ ಶಬ್ದವನ್ನೇ ಕಾಣದವರಲ್ಲಿಯೂ ಶಿವಾನುಭವ ಸಿದ್ಧಿಸುವುದು ಸಾಧ್ಯ ಎನ್ನುವುದನ್ನು ಕಾಣುತ್ತದೆ. ಶಿವ ಶಿವ ಎಂದೇ ಬಾಯಲ್ಲಿ ಹೇಳುತ್ತ ಅಶಿವವನ್ನು ಆಚರಿಸುವವನು, ವಿಷ್ಣು ವಿಷ್ಣು ಎಂದು ಬಾಯಲ್ಲಿ ಹೇಳುತ್ತ ಎದುರಾಳಿಯಲ್ಲಿ ವಿಷ್ಣುವನ್ನು ಕಾಣದವನು, ಶಿವ ವಿಷ್ಣುವನ್ನು ಕಾಣುವ ಮುನ್ನ ಮನವನ್ನು ತಿದ್ದಿಕೊಳ್ಳಬೇಕು. "Not all who say Lord Lord, shall enter the kingdom of Heaven." ಎಲ್ಲ ಲೋಕದ ಎಲ್ಲ ಕಾಲದ ಎಲ್ಲ ಒಳ್ಳೆಯ ಜನ ಒಂದೇ ಗುರಿಯನ್ನು ಕುರಿತು ನಡೆದಿದ್ದಾರೆ. ಇಂದೂ ಇದೇ ನಿಜ. ಇವರೆಲ್ಲ ಶಿವದ ಉಪಾಸಕರು. ಶಿವದ ಸಾಧಕರು, ಶಿವದ ಅನುಭವಿಗಳು. ಇಂಥ ಎಲ್ಲ ಜನ ಒಂದು ಮನದಿಂದ ಬಾಳಬೇಕು; ಶಿವವನ್ನು ಪೂರ್ಣಪ್ರಮಾಣದಲ್ಲಿ ಅನುಭವಿಸಬೇಕು. ಶಿವಾನುಭವಿ ತನ್ನ ಶಿವನನ್ನು ತೆಗೆದುಕೊಂಡು ಬೇರೆಯಾಗಿ ಬಾಳುವುದು ಸಾಲದು. ಅಂಥ ಅನುಭವ ಅಪೂರ್ಣ ಆಗುತ್ತದೆ. ಭೇದ ಕಂಡಲ್ಲಿ ಸಮನ್ವಯವನ್ನು ಸಾಧಿಸಿ ಅನುಭವವನ್ನು ವಿಸ್ತಾರ ಮಾಡಿಕೊಂಡರೆ ಅದು ಪೂರ್ಣ ಆಗುತ್ತದೆ. "ಸರ್ವದಾ ಸರ್ವಭಾವಾನಾಂ ಸಾಮಾನ್ಯಂ ವೃದ್ಧಿ ಕಾರಣಂ. ಹ್ರಾಸಹೇತುಃ ವಿಶೇಷಸ್ತು ಪ್ರವೃತ್ತಿರುಭಯಸ್ಯ ಚ." ಭೇದಗಳನ್ನು ಮುಖ್ಯಮಾಡುವುದು ವಿಭಾಗಕ್ಕೆ ಕಾರಣ ಆಗುತ್ತದೆ. ಸಾಮಾನ್ಯ ಗುಣಗಳನ್ನು ಮುಖ್ಯಮಾಡುವುದು ಮೈತ್ರಿಗೆ ಕಾರಣ ಆಗುತ್ತದೆ. ಶಿವಾನುಭವಿ ವಿಶ್ವಮೈತ್ರಿಗೆಂದೇ ಆಶಿಸಬೇಕು. ಜೊತೆಯ ಎಲ್ಲ ಜೀವಕ್ಕೂ, "ಸಂಗಚ್ಛಧ್ವಂ ಸಂವದಧ್ವಂ ಸಂವೋ ಮನಾಂಸಿ ಜಾನತಾಂ", ಎನ್ನಬೇಕು. ಆ ಜೀವ ಈ ಕರೆಯನ್ನರ್ಥಮಾಡಿಕೊಳ್ಳಲಾರದೆ ದೂರ ನಿಲ್ಲುವೆನೆಂದರೂ ಅಷ್ಟರಿಂದ ಸೋಲದೆ "ನಾವು ಸೋದರರೆಂದು ಇದು ಕಾಣದು, ದೂರ ನಿಲ್ಲುತ್ತಿದೆ, ಸೋದರರೆಂದು ಬಲ್ಲ ನಾನು ಇಷ್ಟಕ್ಕೆ ಬಿಡುವಂತಿಲ್ಲ," ಎಂದು ಅದನ್ನು ಒಲಿಸಿಕೊಳ್ಳಲು ಶತಯತ್ನ ಮಾಡಬೇಕು. ಮಾಡಬೇಕು ಎನ್ನಲಿ ಏಕೆ? ಮಾಡುವುದೇ ದಿಟ. ಶಿವವನ್ನು ಅನುಭವಿಸ ಹೊರಟ ಜೀವಕ್ಕೆ ಶಿವ ಈ ಪ್ರೇರಣೆಯನ್ನು ತಾನೆ ತಪ್ಪದೆ ನೀಡುತ್ತದೆ.

———:: ———

# ಜೀವನದಲ್ಲಿ ಶಿವಾನುಭಾವ ದೃಷ್ಟಿಯ ಬೆಳವಣಿಗೆ.

●

**ಶ್ರೀ ಬಿ. ನಂಜುಂಡಪ್ಪ,** ಕನಕಪುರ.

## ಜೀವ ಜಗತ್ತಿನಲ್ಲಿ ಮಾನವನಿಗೆ ಆದ್ಯಸ್ಥಾನ.

ಮಾನವ ನಿರ್ಮಿತವಲ್ಲದ ಈ ಜಗತ್ತಿನಲ್ಲಿ ಅತಿ ಮಾನವ ಶಕ್ತಿಗಳು ಅಡಗಿರುವುದು ವಿಚಾರಪರರಿಗೆ ವೇದ್ಯವೇ ಆಗಿದೆ. ಜಡವೆನಿಸುವ ಪಾಂಚಭೌತಿಕ ವಸ್ತುಗಳಲ್ಲೂ ಅಸದೃಶ ಗುಣ ಧರ್ಮ ಸ್ವಭಾವಗಳಿರುವ ವಿಚಾರವನ್ನು ನಮ್ಮ ಹಿರಿಯರಾದ ಋಷಿ ಮುನಿಗಳು ತಿಳಿಸಿದ್ದಾರೆ. ಅದನ್ನು ಆಧುನಿಕ ವಿಜ್ಞಾನಿಗಳೂ ಸಾಧನೆಗಳಿಂದ ಕಂಡು ಕೊಳ್ಳುತ್ತಿರುವುದು ನಮಗೆ ಕಾಣಬರುತ್ತಿರುವ ವಿಷಯ. ಆದರೆ ಜಡಪ್ರಪಂಚಕ್ಕಿಂತ ಚೇತನ ಪ್ರಪಂಚವು ಅತಿಶಕ್ತಿಯುತವಾದುದೂ ಮಹತ್ವವಾದುದೂ ಆಗಿದೆ ಎಂಬ ವಿಚಾರ ನಿರ್ವಿವಾದವಾದುದು. ಆದುದರಿಂದ ಚೇತನ ಪ್ರಪಂಚದಲ್ಲಿ ಮಹಾಶಕ್ತಿ ಅಡಗಿರುವುದರಲ್ಲಿ ಸಂದೇಹವೇ ಇಲ್ಲ. ಆದರೆ ಅದರ ಸ್ಫುರಣೆ ಮಾತ್ರ ಜೀವರಾಶಿಗಳ ವಿವಿಧ ಮಟ್ಟಗಳಲ್ಲಿ ವಿವಿಧ ಬಗೆಯಲ್ಲಿ ಗೋಚರವಾಗುತ್ತದೆ.

ಜೀವಿಗಳಿಗೆ ಸಹಜ ಪ್ರವೃತ್ತಿಗಳು ಕೆಲವಿವೆ. ಹುಟ್ಟುವುದು, ಬೆಳೆಯುವುದು, ಸಂತಾನ ಪಡೆಯುವುದು, ಕೊನೆಗೆ ಮುಪ್ಪು–ಅದಾದ ಬಳಿಕ ಸಾವು ಇಂತಿಷ್ಟು ಜೀವಿಗಳ ಸಹಜ ವರ್ತನೆಯಾಗಿದೆ. ಆದರೆ, ಜಡಜಗತ್ತಿಗೆ ಈ ವರ್ತನೆಗಳಿಲ್ಲ. ಈ ಹೇಳಿದವು ಎಲ್ಲಾ ಜೀವರಾಶಿಗೂ ಹುಟ್ಟಿನೊಡನೆ ಬೀಜರೂಪವಾಗಿ ಅನುಸರಿಸಿ ಬರುವ ಗುಣಧರ್ಮವೇ ಆಗಿದೆ. ಕೇವಲ ಕ್ಷುದ್ರಜೀವಿಗಳಾದ ಕ್ರಿಮಿಕೀಟ ಪತಂಗಗಳಿಂದ ಹಿಡಿದು ಮಾನವನವರೆಗಿರುವ ಎಂಭತ್ತು ನಾಲ್ಕು ಲಕ್ಷ ಜೀವರಾಶಿಗಳಾಗಿ ತೋರುತ್ತಿ

ರುವ ಉದ್ಭಿಜ, ಸ್ವೇದಜ, ಅಂಡಜ, ಪಿಂಡಜಗಳೆನಿಸುವ ಸಕಲಕ್ಕೂ ಈ ಗುಣ ಧರ್ಮಗಳು ಸಾಮಾನ್ಯ.

ಆದರೆ, ಈ ಎಲ್ಲಾ ಪ್ರಾಣಿ ವರ್ಗಗಳಿಗಿಂತಲೂ ಮಾನವ ಜನ್ಮವು ಅತ್ಯಂತ ಶ್ರೇಷ್ಠತಮವಾದುದೆಂಬುದನ್ನು ಎಲ್ಲರೂ ಒಪ್ಪುವರು. ಅದೇ ಹಿರಿಯರೂ ಜ್ಞಾನಿಗಳೂ ಆದ ಋಷಿ ಮುನಿಗಳೂ ಸಾಧಕ ತಪಸ್ವಿಗಳೂ ನಿರ್ಧರಿಸಿ ಹೇಳಿರುವ ವಿಷಯ ವೇದಾಗಮೋಪನಿಷತ್ತುಗಳೂ ಸಕಲ ಶಾಸ್ತ್ರಗಳೂ ಒಪ್ಪಿರುವ ಅಂಶ. ಆಧುನಿಕ ವಿಜ್ಞಾನಿಯೂ ತತ್ತ್ವವೇತ್ತರೂ ಈ ಅಭಿಪ್ರಾಯಕ್ಕೆ ಭಿನ್ನಮನೋಭಾವನೆಯುವರಲ್ಲ. ಆದರೆ ಕ್ಷುದ್ರ ಪ್ರಾಣಿಗಳ ಜೀವಿತವು ಸಾಮಾನ್ಯ ರೀತಿಯದು. ಅಲ್ಲಿ ಜ್ಞಾನದ ತಿರುಳಿಲ್ಲ. ದೈಹಿಕ ಸುಖೇಚ್ಛೆ ಮಾತ್ರ ಕಾಣುತ್ತದೆ. ಅವೆಲ್ಲವೂ ಹುಟ್ಟು ಸಾವಿನ ರಾಟಣದೊಳಗೆ ಸುತ್ತುವ ಕ್ಷುದ್ರ ವಸ್ತುಗಳು. ಮಾಯಾ ಸಂಬಂಧವಾದ ಆ ಪಂಜರದಿಂದ ಬಿಡಿಸಿ ಕೊಳ್ಳುವ ಅಸದೃಶವಾದ ಶಕ್ತಿ-ಜ್ಞಾನ ಮಾನವನಿಗೆ ಮಾತ್ರ ಲಭ್ಯ. 'ನಾನು ಯಾರು, ಜೀವನದ ಅಂತಿಮ ಗುರಿ ಯಾವುದು ?' ಎಂಬ ಪರಿವೆ ಮಾನವನಿಗೆ ಮಾತ್ರ ಸಾಧ್ಯ. ಮಹಾಕವಿ ಹರಿಹರನ ವಾಕ್ಯವಿದು :

" ತಿರುಗುತ್ತೆಂಭತ್ತು ನಾಲ್ಕುಂ ದಶಶತ ಶತ ಜನ್ಮಂಗಳೋಳ್ ಪುಟ್ಟಿ ನಿಮ್ಮೊಂದಿರವಂತಿಂತೆಂತುಟೆಂದುಮೇನುವನರಿಯದೆ ಮಣ್ಣಾಗಿ ಕಲ್ಲಾಗುತುಂ ದುರ್ಧರ ಗುಲ್ಮಂ ಭೂರಿ ಭೂಜಂ ಪುಳು ಖಗ ಮೃಗವಾಗುತ್ತುಮೆಂತಕ್ಕೆ ಬಂದೆ ನರ ಜನ್ಮಕ್ಕಯ್ಯ...."

—ರಕ್ಷಾಶತಕ-೨.

## ಮಾನವನಲ್ಲಿ ಅರಿವು.

ಮಾನವನಾಗಿ ಬಂದು ನಾಯಿನರಿಗಳಂತೆ, ಕ್ಷುದ್ರಜಂತುಗಳಂತೆ ಬಾಳುವೆ ನಡೆಸುವುದು ಕೇವಲ ಹೀನವರ್ತನೆ. ಹಿಂದೆ ನಾನಾ ಯೋನಿಗಳಲ್ಲಿ ಬಂದ ಹೀನತನವೇ ಸಾಕು. ಆಯಾಯ ಜನ್ಮಗಳಲ್ಲಿ ಬಂದು ಅನುಭವಿಸಿದ ಕಷ್ಟಗಳ ಮಧ್ಯೆ ಕಿಂಚಿತ್ ಕಿಂಚಿತ್ ಗಳಿಸಿದ ಪುಣ್ಯ ಫಲದಿಂದ ಅವುಗಳಿಗಿಂತ ಮಿಗಿಲಾದ ಜನ್ಮ ಪರಂಪರೆಗಳು ಲಭಿಸಿ, ಕೊನೆಗೆ ಎಲ್ಲಕ್ಕೂ ಮಿಗಿಲಾದ ಮಾನವ ಕುಲದಲ್ಲಿ ಹುಟ್ಟಿ ಬಂದುದಾಗಿದೆ. ಹಿಂದಿನ ಹೊಲಸು, ಕಷ್ಟಕಾರ್ಪಣ್ಯ ನೆನಸತಕ್ಕದ್ದಲ್ಲ. ಪೂಜ್ಯ ಸರ್ಪ ಭೂಷಣ ಶಿವಯೋಗಿಗಳೆನ್ನುವಂತೆ—

" ಬರಬಾರದತಿಹೀನ ಯೋನಿಗಳೊಳು ಬಂದು
ಧರಿಸಬಾರದ ದೇಹಗಳನೆ ತೊಟ್ಟು
ಸ್ಮರಿಸಲುಚಿತವಲ್ಲದಾಹಾರಗಳ ನುಂಡು
ತಿರುಗುತಿರ್ಪುದು...."

—ಕೈವಲ್ಯ ಕಲ್ಪವಲ್ಲರಿ.

ಆಯಿತು. ಇಷ್ಟಾಗಿ, ಆ ಕಷ್ಟದ ನೆನಹು ಈಗಲಾದರೂ ಬಾರದಿದ್ದರೆ ಏನು ಫಲ? ಇನ್ನಾದರೂ ಅಂತಹ ಕಷ್ಟದ ದಾರಿ ಬೇಡವೆನ್ನದಿದ್ದರೆ ಅದೆಂತಹ ಬಾಳುವೆ? ಏನಾದರೂ ಮಾಡಿ ಆ ಕಷ್ಟದಿಂದ ಪಾರಾಗಬೇಕು. ಈ ಭವದ ಬಂಧನದಿಂದ ಬಿಡಿಸಿಕೊಳ್ಳುವುವೇ ವಿಹಿತ ಎಂಬ ಪ್ರಜ್ಞೆ ಜೀವನಿಗೆ ಉಂಟಾಗುವುದು ಮಾನವನಾಗಿ ಜನ್ಮವೆತ್ತಿದಾಗ ಮಾತ್ರ. ಆ ಅರಿವೇ ಅವನನ್ನು ಉದ್ಧಾರ ಮಾಡುವ ಹೊಲಬು.

## ಶಿವಕಾರುಣ್ಯ ಪ್ರಾರ್ಥನೆ.

ಭವಬಂಧನ ಬಹು ಕಠಿನತರವಾದುದು. ಅದು ನೂಲ ಹಗ್ಗವಲ್ಲ. ಬಹು ಜನ್ಮಗಳಿಂದ ಬೆಂಬಿಡದೆ ಬಂದ ಮಾಯೆಯ ತೊಡಕು. ಅದನ್ನು ಹರಿದು ಸ್ವತಂತ್ರವಾಗುವುದು ಸುಲಭದ ಮಾತಲ್ಲ. ಶಿವನ ಕೃಪೆ ಲಭಿಸದೆ ಅದು ಹರಿಯುವುದಿಲ್ಲ. ಆದುದರಿಂದ ಶಿವನೇ ಅನುಗ್ರಹಿಸಿ, ಅದನ್ನು ದಾಟುವ ಬಗೆಯನ್ನು ಅರುಹಬೇಕು ಎಂಬೊಂದು ಹಂಬಲ ಮೂಡಬೇಕು. ಶಿವನ ಕೃಪೆ ಎಂದು ಆದೀತೋ ಜನ್ಮಜಾಡ್ಯ ಎಂದು ಪರಿಹಾರವಾದೀತೋ ಎಂಬ ನಿರಂತರ ಚಿಂತೆ ಬಾಧಿಸುತ್ತಿರಬೇಕು. ಶಿವನಲ್ಲಿ ಮೊರೆಯಿಡಬೇಕು.

## ದಾರಿ ತೋರುವ ಗುರು.

ಶಿವನ ಕೃಪಾದೃಷ್ಟಿಯನ್ನು ಬೇಡುವ ಹಂಬಲ ಹೃದಯಾಂತರಾಳದಿಂದ ಮೂಡಿ ಬಂದರೆ, ಶಿವನ ಕರುಣೆಯೊದಗುವುದು ಖಚಿತ. ನಿಷ್ಕಲನೂ, ನಿರಾಕಾರಿಯೂ, ನಾದಬಿಂದು ಕಲಾತೀತನೂ ಆದ ಪರಮಾತ್ಮನು ಭವಬಂಧನದಿಂದ ಬೇಸತ್ತು ಬಿಡುಗಡೆ ಬಯಸಿದ ಜೀವಿಯನ್ನು ಉದ್ಧಾರ ಮಾಡುವ ಸಲುವಾಗಿ ಅವನ ಕೋರಿಕೆಯನ್ನು ಈಡೇರಿಸುವ ಸಲುವಾಗಿ, ತಾನೂ ಸಾಕಾರನಾಗಿ ಬರುವನು. ದೂರದಲ್ಲಿರುವ ತಾಯಿಯನ್ನು ನೆನೆಸಿ ಕೂಗಿದ ಕರುವನ್ನು ತೃಪ್ತಿಪಡಿಸಲು ಓಡಿಬರುವ ಹಸುವಿನಂತೆ, ಶಿವನು ತನ್ನ ಅಂಶೀಯನೇ ಆದ ಭಕ್ತನ ಮನದ ಬೇಡಿಕೆಯನ್ನು ಪೂರೈಸಲು ಮಾನವಾಕಾರನಾಗಿ–ಗುರುವಾಗಿ ದರ್ಶನವೀಯುವನು.

## ಗುರು ಕರುಣೆ.

ಶ್ರೀ ಗುರುವು, ವೀರಶೈವ ಸಂಪ್ರದಾಯ ರೀತ್ಯಾ, ದೀಕ್ಷಾನುಗ್ರಹದಿಂದ ಶಿಷ್ಯನ ಅಜ್ಞಾನರೂಪವಾದ ಆಣವ, ಮಾಯಾ, ಕಾರ್ಮಿಕ ಮಲಗಳ ಮರವೆಯನ್ನು ತನ್ನ ತೇಜಸ್ಸಿನ ಪ್ರಭಾವದಿಂದ ದೂರೀಕರಿಸಿ, ಶಿಷ್ಯನಲ್ಲಿ ಅಡಗಿರುವ ಪರಬ್ರಹ್ಮಸ್ವರೂಪವಾದ ಮಹಾಜ್ಞಾನ ಪ್ರಕಾಶವನ್ನು ಬಹಿಷ್ಕರಿಸಿ, ಇಷ್ಟಲಿಂಗ ರೂಪದಲ್ಲಿ ಹಸ್ತದಲ್ಲಿರಿಸುವನು. ಪ್ರಸಾದರೂಪವಾದ ಮಂತ್ರೋಪದೇಶಮಾಡುವನು. ಲಿಂಗಾಂಗಗಳ ಸಂಬಂಧ ಸಕೀಲುಗಳ ಅರಿವು ಆಚರಣೆಗಳ ತಿಳಿವನ್ನುಂಟುಮಾಡುವನು. ಅಂದಿಗೆ, ಶಿಷ್ಯನ

ತಂದೆತಾಯಿಗಳಿಂದ ಬಂದ ರಕ್ತಮಾಂಸಮಯ ದೇಹವನ್ನು ಮಂತ್ರಪಿಂಡವಾಗಿ ಪರಿವರ್ತಿಸುವನು. ಜನ್ಮದ ಜಾಡ್ಯ ಜವನಿಕೆ ಹರಿಯುವ ಸುಯೋಗ ಅಂದು ಲಭಿಸುವುದು.

## ಚರಮ ಶರೀರ—ಶಿವಯೋಗ ಸಾಧನೆ.

ಶ್ರೀಗುರೂಪದೇಶದಿಂದ ಪುನೀತನಾಗಿ, ಇಷ್ಟ ಪ್ರಾಣ ಭಾವಲಿಂಗಗಳ ಉಪಾಸನೆ ಧ್ಯಾನಗಳಿಂದ ಶಿಷ್ಯನು ಶಿವಯೋಗ ಸಾಧನೆಯನ್ನು ನಿರಂತರವಾಗಿ ನಡೆಸುವನು. ಆ ಸಾಧನೆಗೆ ನೆರವಾದ ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ಮಂತ್ರ ಪಾದೋದಕ ಮತ್ತು ಪ್ರಸಾದವೆಂಬ ಅಷ್ಟಾವರಣಗಳ ವಿವೇಕವನ್ನೂ, ಲಿಂಗಾಚಾರ, ಶಿವಾಚಾರ, ಗಣಾಚಾರ, ಭೃತ್ಯಾಚಾರ, ಮತ್ತು ಸದಾಚಾರವೆಂಬ ಪಂಚಾಚಾರಗಳ ನೆಲೆಯನ್ನೂ, ನೂರೊಂದು ಸ್ಥಲಗಳಾಗಿ ತೋರುವ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯ ಎಂಬ ಷಟ್‌ಸ್ಥಲಗಳ ಸಾಧನಾಮಾರ್ಗವನ್ನೂ ಆಚರಣೆಯನ್ನೂ ಶ್ರೀಗುರುವು ಬೋಧಿಸುವನು. ಆ ಸಾಧನೆಯ ಫಲವೇ ಲಿಂಗಾಂಗ ಸಾಮರಸ್ಯ. ಅದರಂತೆ ಲಿಂಗಾಂಗಿಯು ಚರಮ ಶರೀರಿಯಾಗುವನು. ಪೂಜ್ಯ ಮಗ್ಗೆಯ ಮಾಯಿದೇವರ ವಚನದಂತೆ "ತನಗವಸಾನಭೂಮಿ ಶಿವಲಿಂಗಮದಕ್ಕವಸಾನಭೂಮಿ ತಾನೆನಿಸು"ವನು.

## ಸತ್ಯ ಸನಾತನ ಧರ್ಮ

ಆದುದರಿಂದ ವೀರಶೈವ ಧರ್ಮವು ಸತ್ಯವೂ ಸನಾತನವೂ ಆದುದು. ಬಲವಾದ ತಳಹದಿಯುಳ್ಳದ್ದು. ದೊಡ್ಡದೊಂದು ಗುರಿಯತ್ತ ಮಾನವನನ್ನು ಸಾಗಿಸತಕ್ಕದು. ವಿಶಾಲ ತತ್ತ್ವದೃಷ್ಟಿಯುಳ್ಳುದು. ಮೇಲುಕೀಳುಗಳ ತಾರತಮ್ಯವನ್ನು ಪರಿಹರಿಸಿ, ಕೃತಕಪರಂಪರೆಯ ಸಂಕುಚಿತ ಮಾರ್ಗವನ್ನು ಮೀರಿ, ಉನ್ನತವಾದ ವಿಶಾಲವಾದ ಹೆದ್ದಾರಿಯುಳ್ಳದ್ದು. ಬಡವ ಬಲ್ಲಿದ ಪಂಡಿತ ಪಾಮರರೆನ್ನದೆ, ಸಕಲರಿಗೂ ತೆರೆದ ಹೆಬ್ಬಾಗಿಲುಳ್ಳದ್ದು. ಸುವ್ಯವಸ್ಥಿತವೂ ಸುಭದ್ರವೂ ಆದುದು. ತಪ್ತ ಜೀವರಿಗೆ ಚಿರಶಾಂತಿದಾಯಕವಾದುದು. ಆತ್ಮೋನ್ನತಿಯ ಜಿಜ್ಞಾಸೆಯುಳ್ಳ ಮುಮುಕ್ಷುಗಳಿಗೆ ತನ್ನ ತಾನರಿವುದರ ಮೂಲಕ ಸಚ್ಚಿದಾನಂದದ ನಿಜಸ್ವರೂಪವನ್ನು ಸಾಕ್ಷಾತ್ಕರಿಸಿಕೊಡತಕ್ಕದ್ದು. ವೇದಾಗಮೋಪನಿಷತ್ತುಗಳು ಹೊಗಳುವ ಅನುಭವಗಮ್ಯವೂ "ವಾಚಾತೀತ ಮನೋತೀತ ವರ್ಣಾತೀತ ಜ್ಞಾನಾತೀತ"ವೂ, ನಿರಾಕಾರ ಸ್ವರೂಪವೂ ಆದ "ಏಕಮೇವಾದ್ವಿತೀಯ ಪರಂಬ್ರಹ್ಮ"ದೆಡೆಗೆ ಒಯ್ಯುವಂತಹುದು. ಜ್ಞಾನ-ಕ್ರಿಯೆಗಳ ಸಮನ್ವಯ ದೃಷ್ಟಿಕೋನಕ್ಕೆ ವೇದ್ಯವಾದುದು. ಐಹಿಕ ಜೀವನದ ಅಸತ್ಯತೆಯನ್ನರಿತು, ಅನಿತ್ಯತೆಯಿಂದ ನಿತ್ಯತೆಯನ್ನು ಸಾಧಿಸುವ, ಕಂಡುದರಿಂದ ಕಾಣದುದನ್ನರಸುವ ಸೂಕ್ಷ್ಮದೃಷ್ಟಿಯುಳ್ಳುದು. ಸಾರ್ವತ್ರಿಕವೂ ಸರ್ವಕಾಲಿಕವೂ

ಅನುದು. ಇಲ್ಲಿ ಹಿಂಸೆಗೆ ಕಿಂಚಿತ್ತೂ ಎಡೆಯಿಲ್ಲ. ಕರ್ಮದ ಬಂಧನವಿಲ್ಲಿಲ್ಲ. ಸಂಕಲ್ಪ ವಿಕಲ್ಪಗಳ, ವಿಷಯ ವಿಕಾರಗಳ, ಮಾಯಾಜನಿತ ವಿಧಿ ನಿಷೇಧಗಳ ಗೊಂದಲವಿಲ್ಲ. ಫಲಪದಗಳಲ್ಲಿ ಅನಾಸಕ್ತಿಯುಂಟು. ತ್ಯಾಗ ಭೋಗ ಸಮನ್ವಯ ದೃಷ್ಟಿಯುಂಟು.

## ನಮ್ಮ ಹಿಂದಿನವರು.

ನಮ್ಮ ಹಿಂದಿನ ಗುರು ಹಿರಿಯರಾದ ಆಚಾರ್ಯರೂ ಶರಣರೂ ಈ ಧರ್ಮದ ತಾತ್ತ್ವಿಕ, ಸಾಮಾಜಿಕ ವ್ಯವಸ್ಥೆಯನ್ನು ಸುಗಮವಾಗಿ ಮಾಡಿದ್ದರು. ತತ್ತ್ವದರ್ಶನ–ಅನುಭವದೃಷ್ಟಿಯನ್ನು ವಿವರಿಸುವ ಸಾವಿರಾರು ಧರ್ಮಗ್ರಂಥಗಳನ್ನು ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ಮುಖ್ಯವಾಗಿ ರಚಿಸಿದರು. ತಾವು ನಡೆದು ನುಡಿದ ಸಾಧನಾ ಮಾರ್ಗವನ್ನು ಮುಂದಿನ ಪೀಳಿಗೆಗಾಗಿ ಆದರ್ಶವಾಗಿ ಮಾಡಿದರು. ಶಿವಯೋಗ ಪರಂಪರೆಯನ್ನು ಕಾಪಾಡಿಕೊಂಡು ಬಂದರು.

ಅವರು ಸಮಾಜ ಶಿಕ್ಷಣದತ್ತ ಪೂರ್ಣಗಮನವಿತ್ತರು. ಸಮಾಜಶಿಕ್ಷಣವು ಬಹುಮಟ್ಟಿಗೆ ಮಠಗಳೇ ಮುಂತಾದ ಧಾರ್ಮಿಕ ಸಂಸ್ಥೆಗಳ ಮೂಲಕ ನಡೆಯುತ್ತಿತ್ತು. ಅವುಗಳ ಹರಗುರು ಚರಮೂರ್ತಿಗಳೂ ವ್ಯವಸ್ಥಾಪಕರೂ ಭಕ್ತರಿಗೆ ಆಚಾರ ಮತ್ತು ತತ್ತ್ವವಿಚಾರಗಳನ್ನು ಪರಿಚಯ ಮಾಡಿಕೊಡುತ್ತಿದ್ದರು. ಶಿಷ್ಯರೂ ಗುರು ಲಿಂಗ ಜಂಗಮದಲ್ಲಿ ಅನನ್ಯವಾದ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು. ಗುರು ಜಂಗಮರ ಸೇವೆಯೇ ಪರಮಾತ್ಮನ–ತಾವು ಉಪಾಸಿಸುತ್ತಿರುವ ಇಷ್ಟಲಿಂಗದ ಸೇವೆಯೆಂದು ಕಾಯೇನ ಮಾನಸಾ ವಾಚಾ ಅರಿತು ಆಚರಿಸುತ್ತಿದ್ದರು. ಭಕ್ತರು 'ಬಿನ್ನಹ' ಮಾಡಿದರೆ, ಗುರುಜಂಗಮರು ಅವರ ಭವ ಬಂಧನವನ್ನು ಪರಿಹ(ಬಿಡುಗಡೆ)ಸುವ ಮಾರ್ಗವನ್ನು ಅರುಹುತ್ತಿದ್ದರು–ಈ ಬಗೆಯ ಗುರು ಶಿಷ್ಯ ಸಂಬಂಧ ನಮ್ಮ ಸಮಾಜದಲ್ಲಿ ಅನಂತಕಾಲದಿಂದ ಬಂದ ಸಂಪ್ರದಾಯ ವೈಶಿಷ್ಟ್ಯವಾಗಿದೆ. ಆ ಕಾರಣಗಳಿಂದಲೇ, ವೀರಶೈವರಿದ್ದೆಡೆಗಳಲ್ಲೆಲ್ಲಾ ಬಹುಮಟ್ಟಿಗೆ ವಿರಕ್ತ ಚರಮೂರ್ತಿಗಳ, ಪಟ್ಟಾಧಿಕಾರಿಗಳ ಮತ್ತು ಮಹಾಂತಿನ ಮಠಗಳಿದ್ದೇ ಇರುತ್ತವೆ. ತಕ್ಕಮಟ್ಟಿಗೆ ಅವುಗಳ ವ್ಯವಸ್ಥೆ ನಡೆದೇ ಇರುತ್ತದೆ.

ಇದಿಷ್ಟನ್ನೂ "ಕೇವಲ ಆದರ್ಶ"ವಾಗಿ ಭಾವಿಸಿ, ಕೈಬಿಡಬಾರದು. ಇದು ಪ್ರಾಯೋಗಿಕವಾದದ್ದೇ. ಮನೋಬಲವನ್ನು ಮೀರಿಸುದು ಯಾವುದು? ಇನ್ನು ಮುಂದಿನ ಜನಜೀವನದಲ್ಲಿ ಧಾರ್ಮಿಕ ಶ್ರದ್ಧೆ ಉಳಿಯುವುದೋ ಅಳಿಯುವುದೋ ಹೇಳುವುದು ಕಷ್ಟ. ಎಲ್ಲವೂ ಶಿವನ ಲೀಲೆ, ಆದರೂ, ಜಗತ್ತಿನಲ್ಲಿ ವಿವೇಕಿಗಳೂ, ಜ್ಞಾನಿಗಳೂ, ಆತ್ಮಬಲವುಳ್ಳ ತಪೋನಿಷ್ಠರೂ ಶಿವಯೋಗಿಗಳೂ ಸರ್ವಕಾಲದಲ್ಲೂ ಪ್ರಕಟವಾಗಿಯೋ ಗೋಚರವಿಲ್ಲದಂತೆಯೋ ಇದ್ದೇ ಇರುವರು. ನೋಡುವ ಕಣ್ಣು,

ಮಾಡುವ ಮಾಟ-ಶುದ್ಧವಾಗಬೇಕು. ಫಲ ದೊರೆಯದ ಕ್ರಿಯೆಯಿಲ್ಲ. ಶ್ರೀ ಮುಪ್ಪಿನ ಷಡಕ್ಷರಿ ಶಿವಯೋಗಿಗಳ ಪ್ರಸಾದವಾಣಿಯಂತೆ:

"ಅಂದಿನವರಿಗಿಂದಿನವರು.
ಹೊಂದಿಹೋಲಲರಿಯರೆಂಬ
ಕುಂದು ನುಡಿಯ ಕಿವಿಯನೊಡ್ಡಿ ಕೇಳಲಾಗದು ॥"
"ಅಂದಿಗೊಬ್ಬ.ಶಿವನು ಮೇಣು, ಇಂದಿಗೊಬ್ಬ ಶಿವನದುಂಟೆ?"

ಆದ್ದರಿಂದ, "ಅಂಥವರು ಈಗ ಎಲ್ಲಿದ್ದಾರೆ?" ಎಂಬ ವ್ಯರ್ಥಾಲಾಪದಿಂದ ಕಾಲ ಹರಣ ಮಾಡದೆ, ಅಂತರ್ದೃಷ್ಟಿಯಿಂದ ಕಾರ್ಯಸಾಧನೆ ಮಾಡಬೇಕಾಗಿದೆ. ಹಿರಿಯರ ಆಶೀರ್ವಚನ ಪ್ರತ್ಯಕ್ಷವಾಗಿಯೋ ಅಪ್ರತ್ಯಕ್ಷವಾಗಿಯೋ ದೊರತೇ ದೊರೆಯುತ್ತದೆ ಎಂಬ ಆಶಾಭಾವನೆ ನಮ್ಮದಾಗಬೇಕು. ಕಾಲವಾಹಿನಿಯ ಭೀಕರ ಸುಳಿಗೆ ಸಿಕ್ಕಿ ನಮ್ಮ ಜೀವನ ಹಾಳಾಗಬಾರದು, ವಿಷಯಾಭಿರತಿಯಲ್ಲಿ ಮುಳುಗಿಹೋಗಬಾರದು. ಆಧ್ಯಾತ್ಮಿಕತೆ ನಮ್ಮ ಜೀವನದ ಹಾಸುಹೊಕ್ಕಾಗಬೇಕು. ಶಿವಾನುಭವದ ಸ್ವಯಂ ಪ್ರಭೆಯು ಉಜ್ವಲವಾಗಬೇಕು.

——::——

## ಅದು ಸಿಗದು

ಶ್ರೀ ಗುರುವರ ನಡಿದಾವರೆಯೊಳ್
ಬಾಗಾರಡಿಯಾಗುತೆ ಮುದದೊಳ್ ॥ ಪ ॥
ಪರಶಿವ ಸಖವೆಂಬುವ ಸಿರಿಯು
ಪರಿಪರಿ ಶ್ರಮದಿಂದದು ಸಿಗದು ॥
ಕರಣ ವಿಜಯದಿಂದದು ಸಿಗದು
ವರಗುರು ಕರುಣೆಯು ದೊರೆಯುವಲೆ ॥ ೧ ॥

———

# ಶಿವಶರಣರ ಸಮಾಜ ದರ್ಶನ



ಪ್ರೊ. ಎಸ್. ಎಂ. ವೃಷಭೇಂದ್ರಸ್ವಾಮಿ, ಎಂ.ಎ., ಬಳ್ಳಾರಿ.

ಲೋಕದಲ್ಲಿ ಒಂದು ಸಮಾಜ ಸುವ್ಯವಸ್ಥಿತವಾಗಿ ಸಾಗಬೇಕಾದರೆ, ಅದಕ್ಕೆ ಒಂದು ಪರಂಪರೆ ಇರಬೇಕು; ಸರ್ವಸಾಮಾನ್ಯವಾದ ಒಂದು ಸಾಮಾಜಿಕ ಗುರಿ ಇರಬೇಕು; ಸಾರ್ವತ್ರಿಕವೂ, ಸರ್ವಕಾಲೀನವೂ ಆದ ಜೀವನ ದರ್ಶನವಿರಬೇಕು; ಹಳೆಯದನ್ನು ಕಳಚಿ ಹೊಸದನ್ನು ಅಳವಡಿಸಿಕೊಳ್ಳುವ ಸ್ಥಿತಿಸ್ಥಾಪಕ ಗುಣವಿರಬೇಕು; ಸರ್ವಸಮಾನತೆಯ ತಳಹದಿಯ ಮೇಲೆ ಕಟ್ಟಿದ ಸುಸಂಘಟಿತ ಐಕ್ಯತೆ ಮೂಡಿಬಂದಿರಬೇಕು; ಕಾಲಕಾಲಕ್ಕೆ ಸಮಾಜದ ಆಗು-ಹೋಗುಗಳನ್ನು ಪರಿಶೀಲಿಸಿ ಮಾರ್ಗದರ್ಶನ ನೀಡುವ ವ್ಯವಸ್ಥೆ ಇರಬೇಕು. ಉದ್ಯೋಗಶೀಲವಾದ ಸ್ವಪರಿಪೂರ್ಣತೆ, ತ್ಯಾಗ ಮೂಲವಾದ ಸ್ವಾತಂತ್ರ್ಯ, ಸೇವಾ ಮನೋಭಾವದ ಕಾರ್ಯತತ್ಪರತೆ ಒಡಮೂಡಿ ಜನಾಂಗವನ್ನು ಮುನ್ನಡೆಸಬೇಕು. ಹನ್ನೆರಡನೆಯ ಶತಮಾನದ ಶಿವಶರಣರು, ವಿಚಾರದಲ್ಲಿ ಕಂಡು, ಆಚಾರದಲ್ಲಿ ಕಂಡರಿಸಿದ ಸಮಾಜ ಈ ಮೇಲಿನ ವೈಜ್ಞಾನಿಕ 'ಬೇಕು'ಗಳನ್ನು ಪೂರ್ಣಗೊಳಿಸಿದೆಯೆ ಎಂದು ವಿಚಾರಿಸಬೇಕು. ಯಾವೊಂದು ವಿಷಯ, ತತ್ವ, ನಂಬಿಕೆ, ಸಿದ್ಧಾಂತ, ಸಂಪ್ರದಾಯಗಳನ್ನೂ, ತನ್ನ ವೈಜ್ಞಾನಿಕ, ವೈಚಾರಿಕ, ಕೊಕ್ಕಿನಿಂದ ಹೆಕ್ಕಿ, ಕುಕ್ಕಿ, ಹೊಕ್ಕುನೋಡುವ ಆಧುನಿಕದೃಷ್ಟಿಗೂ ಸತ್ಯವೆನಿಸುವ, ಸಕ್ರಮವೆನಿಸುವ ಸನ್ಮಾರ್ಗ ದರ್ಶಕವೆನಿಸುವ ಅಂಶಗಳು ಶರಣರ ಸಮಾಜ ರಚನೆಯಲ್ಲಿವೆಯೇ ಎಂದು ವಿಚಾರಮಾಡಬೇಕಾಗಿದೆ. ಅದಕ್ಕಿದೊಂದು ಪ್ರಯತ್ನ ಅಷ್ಟೆ.

ಭರತಖಂಡದಲ್ಲಿ ಧರ್ಮವೇ ಜೀವದ್ರವ್ಯ. ಧರ್ಮಮೂಲವಲ್ಲದ, ಧರ್ಮರೂಢಿಯಲ್ಲದ, ಧರ್ಮದ್ಯೋತಕವಲ್ಲದ ಯಾವ ಮಾತಿಗೂ ಮಾನ್ಯತೆ ಇಲ್ಲ; ಕೃತಿಯ ಮಾತು ಇನ್ನೂ ದೂರ. ಕಾರಣ, ಶಿವಶರಣರು ಮೊದಲು ರೂಪಿಸಿದ್ದು ಧರ್ಮವನ್ನು.

ಶರಣರ ಕಾಲದಲ್ಲಿ ರಾಜಕೀಯ ಪರಿಸ್ಥಿತಿಯ ಸ್ಥಿತ್ಯಂತರಗಳು ಮುಗಿದು, ಚಾಳುಕ್ಯರ ರಾಜ್ಯ, ಬಿಜ್ಜಳನಿಗೆ 'ದತ್ತು' ಬಂದಂತಿತ್ತು ! ಅವನು ಸ್ವತಃ ಜೈನಧರ್ಮಿಯಾಗಿದ್ದರೂ, ಸಾಮಾನ್ಯ ಜನರ ಧರ್ಮವಾಗಿರಲಿಲ್ಲ ಜೈನಧರ್ಮ. ವೈದಿಕಧರ್ಮವೂ ಶುಷ್ಕ ಆಚಾರಗಳಿಗೆ ಬಲಿಯಾಗಿ ಬಿಲವಾಗುತ್ತಿತ್ತು. ಶೈವಧರ್ಮ ಮುಂಗಾಣವೆ, ಛಿದ್ರ ವಿಚ್ಛಿದ್ರವಾಗಿ ಸಂಘಟನೆ ಶಿಥಿಲವಾಗಿ, ಗತವೈಭವವನ್ನು ಆಹ್ವಾನಿಸಲಿದ್ದಿತು. ಶೈವರಲ್ಲಿ ಒಂದು ಪಂಗಡವಾದ, ಕಾಳಾಮುಖರು ಅನ್ನಸತ್ರ, ವಿದ್ಯಾಕೇಂದ್ರಗಳನ್ನು ಸ್ಥಾಪಿಸಿ, ಜನಪ್ರಿಯರಾಗಿ, ರಾಜಕೀಯ ಸೂತ್ರವನ್ನೂ ಕೈಯಲ್ಲಿ ಹಿಡಿದಿದ್ದರು. ಉತ್ತರದೇಶದಲ್ಲಿ ಮಹಮ್ಮದೀಯರ ದಾಳಿಗಳನ್ನು ಸಹಿಸದೆ, ಕಾಶ್ಮೀರ ಶೈವರು, ದಕ್ಷಿಣ ದೇಶಕ್ಕೆ ಎದ್ದು ಓಡಿಬಂದು, ಕನ್ನಡ ನೆಲದಲ್ಲಿ ಮೊರೆಹೊಕ್ಕು ನೆಲಸಿದರು. ವಂಗದೇಶದಿಂದ ಶಾಕ್ತೇಯ ಪಂಥವೂ ದಕ್ಷಿಣಕ್ಕೆ ಬಂದು ಕನ್ನಡ ನಾಡಿನಲ್ಲಿ ಕಾಲೂರಿತು. ಶ್ರೀ ರಾಮಾನುಜ ಪ್ರಣೀತ ವೈಷ್ಣವ ಧರ್ಮಕ್ಕೆ ಹೊಯ್ಸಳ ವಿಷ್ಣುವರ್ಧನನ ರಾಜರಕ್ಷೆ ದೊರಕಿದ್ದಿತು. ಪಶು-ಪತಿ ಅಥವಾ ದಾಸ-ಈಶ ಸಿದ್ಧಾಂತದ ಪಾಶುಪತರೂ, ಸೂರ್ಯ ಪೂಜಕರಾದ ಸೌರರೂ, ಗಣಪತಿ ಆರಾಧಕರಾದ ಗಾಣಪತ್ಯರೂ, ಮಾಯ, ಮಂತ್ರ, ಕಟ್ಟು, ಮಾಟಗಳಲ್ಲಿ ನಿಷ್ಣಾತ ವಾಮಮಾರ್ಗಿಗಳಾದ ಕಾಪಾಲಿಕರೂ ಕರ್ನಾಟಕದಲ್ಲಿ ದ್ದರು. ಭಕ್ತಿಯ ಆಧಿಕ್ಯವನ್ನು ಸಾರುವ, ತಮಿಳು ದೇಶದ ಶೈವ ಸಂಪ್ರದಾಯವೂ, ವೈದಿಕ ಹಾಗೂ ಶೈವ ಸಂಪ್ರದಾಯಗಳ ಸಂಗಮವಂತಿದ್ದ ಆರಾಧ್ಯ ಪಂಥವೂ ಕರ್ನಾಟಕಕ್ಕೆ ಕಾಲಿರಿಸಿದುವು. ಹೀಗೆ 'ಕರ್ನಾಟಕ ಬಗೆ ಬಗೆಯ ಸಣ್ಣ ಮತ ಸಂಪ್ರ ದಾಯಗಳ ಕೂಡಲ ಸಂಗಮವಾಗಿದ್ದಿತು. ಈ ಅನಿರ್ದಿಷ್ಟತೆಯ ಕಾರ್ಮೋಡವನ್ನು ಬಿರಿದು, ವೀರಶೈವದ ಸೂರ್ಯಪ್ರಭೆ ದಕ್ಷಿಣ ಭಾರತದಲ್ಲಿ ವೈದೋರಿತು.

ಶಿವಶರಣರು, ಧರ್ಮಕ್ರಾಂತಿಯ ಕಹಳೆಯನ್ನು ಮೊಳಗಿಸಲೇಬೇಕಾದ ಪರಿಸ್ಥಿತಿ ಕಾದಿದ್ದಿತು ಅಂದು. ಸಾಮಾಜಿಕ ಅನಿರ್ದಿಷ್ಟತೆ, ಧಾರ್ಮಿಕ ಕುದಿಗಡಿಗೆ ಸ್ಥಿತಿ, ರಾಜಕೀಯ ಸ್ಥಿತ್ಯಂತರ, ಶರಣರನ್ನು ಆಹ್ವಾನಿಸಿತು, ವಿಚಾರಪರರನ್ನಾಗಿಸಿತು. ಅಷ್ಟ ರಲ್ಲಿ ಬಸವಣ್ಣ ಬಿಜ್ಜಳನ ಮಂತ್ರಿಯೂ ಆಗಿದ್ದರು. ಅವರ ಸ್ವಾನುಭವ ಶಿವಾನುಭಾವ ವಾಗಿ ಬೆಳಗುತ್ತಿತ್ತು. ಕಲ್ಯಾಣದಲ್ಲಿ ನೂರಾರು ಶರಣ-ಶರಣೆಯರು ಒಂದುಗೂಡಿದರು, ವಿಚಾರ ಸಂಕಿರಣಗಳೇರ್ಪಟ್ಟವು. ಪ್ರತಿವಾದಿಗಳ, ಜೈನ, ವೈದಿಕ ಧರ್ಮಿಯರ ಕಪಟ ಚಟುವಟಿಕೆಗಳಿಗೆ ಕೈಕಾಲು ಬಂದುವು. ವೈದಿಕ ಧರ್ಮದ ಯಜ್ಞ, ವರ್ಣ-ಆಶ್ರಮ, ವ್ಯರ್ಥಕರ್ಮ, ಪೇಟೆಯ ಹಳೆಯ ಸರಕು ಆಗಿದ್ದುವು. ಹಿಂದೂ ಧರ್ಮ ಬ್ರಾಹ್ಮಣ ಧರ್ಮವಾಗದೆ, ಸರ್ವಧರ್ಮ ಸಮಾಗಮವಾಗಲೆಂಬ ಬಯಕೆ ಮೂಡು ತ್ತಿತ್ತು ಜನಮನೋಮಂದಿರದಲ್ಲಿ. ಪಂಡಿತರ ಸ್ವತ್ತು ಆಗಿದ್ದ, ಸಂಸ್ಕೃತ ಭಾಷೆಯ ವೇದ, ಆಗಮ, ಪುರಾಣಗಳಲ್ಲಿ ಜ್ಞಾನ ಮಡುಗಟ್ಟಿದ್ದಿತು. ಸಾಮಾನ್ಯರ ಆಧ್ಯಾತ್ಮಿಕ ತೃಷೆ ಯನ್ನು ತೀರಿಸಲಾರದೆ, ಆ ಜ್ಞಾನ, ಆಳದ ಬಾವಿಯ ನೀರಾಗಿದ್ದಿತು. ಜ್ಞಾನಿಗಳಾದ

ಕೆಲ 'ಆಸಕ್ತಹಿತ'ಗಳು, ಅಸಂಖ್ಯಾತ ಅಜ್ಞಾನಿಗಳನ್ನು, ಧರ್ಮದ ಹೆಸರಿನಲ್ಲಿ, ಕರ್ಮದ ನೆಲದಲ್ಲಿ ಆಶೀರ್ವಾದದ ಆಶಾವಾದದಲ್ಲಿ, ಶೋಷಿಸುತ್ತಿದ್ದುವು. ಹೀಗೆ, ಟೆನಿಸನ್ ಕವಿ ಎಂದಂತೆ 'ಹೊಸ ವ್ಯವಸ್ಥೆಗೆ ದಾರಿ ಮಾಡಿಕೊಡಲು ಹಳೆಯ ಸಂಪ್ರದಾಯ ಕಾಲು ಕೀಳುವ' ಪರಿಸ್ಥಿತಿ ಸಿದ್ಧವಾಗಿತ್ತು. ಇದಕ್ಕೂ ಹಿಂದೆ, ವ್ಯಕ್ತಿಪ್ರಧಾನವಾದ ಬೌದ್ಧಧರ್ಮ ಹಾಗೂ ಶಕ್ತಿಪ್ರಧಾನವಾದ ಜೈನಧರ್ಮಗಳು ಬಂಡಾಯವನ್ನು ಎಬ್ಬಿಸಿದ್ದುವು ಇಂಥ ವೈದಿಕ ಧರ್ಮದ ವಿರುದ್ಧ. ಅಂತೆಯೇ, ಹಿಂದಿನೆರಡು ಬಂಡಾಯಗಳ ಲೋಪದೋಷಗಳನ್ನು ಗಮನಿಸಿ, 'ಸಮಾಜಪ್ರಧಾನ'ವಾದ ಒಂದು ಕ್ರಾಂತಿಯ ಮುಂಗೋಳಿಗಳಾದರು ಶರಣರು.

ಕ್ರಾಂತಿಯಲ್ಲೂ, ಶಾಂತಿಯಲ್ಲೂ ಧರ್ಮವೇ ನೆಲಗಟ್ಟು ನಮ್ಮಲ್ಲಿ. ಕಾರಣ, ಶಿವಶರಣರು ಪೂರ್ವ ವೀರಶೈವ ಧರ್ಮಕ್ಕೊಂದು 'ಕಾಯಕಲ್ಪ' ಚಿಕಿತ್ಸೆ ಮಾಡಿದರು. ಅಂದು ಪ್ರಚಾರದಲ್ಲಿದ್ದ, ಜನಪ್ರಿಯವಾಗಿದ್ದ, ಶೈವಪಂಗಡ, ಸಂಪ್ರದಾಯಗಳ ಉತ್ತಮ ಅಂಶಗಳ ಭಟ್ಟಿ ಇಳಿಸಿದರು. ಕಾಳಾಮುಖರ ಲಿಂಗಧಾರಣೆ, ವಿಭೂತಿ, ಪೂಜೆ, ದಾಸೋಹ, ವಿದ್ಯಾದಾನ, ನವವೀರಶೈವದ ಮುಖ್ಯ ಅಂಗಗಳಾದುವು, ಆರಾಧ್ಯ ಸಂಪ್ರದಾಯ ತತ್ತ್ವಚಿಂತನೆ, ಆತ್ಮ-ಪರಮಾತ್ಮ ವಿಚಾರ, ಪಾಶುಪತರ ಪಶು–ಪತಿ ಸಿದ್ಧಾಂತ, ಪೂರ್ವ ವೀರಶೈವಾಚಾರ್ಯರಲ್ಲಿ ಪ್ರಮುಖರಾದ ಶ್ರೀ ರೇಣುಕಾಚಾರ್ಯರ ಷಟ್‌ಸ್ಥಲ ಸಿದ್ಧಾಂತ, ತಮಿಳು ಶೈವ ಸಂಪ್ರದಾಯದ ಅರವತ್ತು ಮೂರು ಪುರಾತನರ ಕಥೆ, ಹಾಗೂ ಭಕ್ತಿಗಳನ್ನು ಬೆಸೆದರು ಶರಣರು. ತಮ್ಮ ನವೀನ ಸಿದ್ಧಾಂತವನ್ನು 'ಶಕ್ತಿ ವಿಶಿಷ್ಟಾದ್ವೈತ'ವೆಂದು ಕರೆದರು. ದ್ವೈತವಿದ್ದಿತು, ಅದ್ವೈತವಿದ್ದಿತು, ವಿಶಿಷ್ಟಾದ್ವೈತವಿದ್ದಿತು, ಆದರೆ, ಈ ಹೊಸ ಸಿದ್ಧಾಂತವನ್ನು 'ಶಕ್ತಿ' ಎಂಬ ವಿಶೇಷಣದಿಂದ ಕರೆದುದಕ್ಕೆ ತತ್ವಶಾಸ್ತ್ರದ ಕಾರಣಗಳೇನೋ ಇವೆ. ಆದರೆ, 'ಶಕ್ತಿ' ಎಂದರೆ 'ಕ್ರಾಂತಿಕಾರಿ' (Revolutionary) ಎಂದರ್ಥ ಮಾಡಿದರೆ ಉಚಿತವೆಂದು ತೋರುತ್ತದೆ. ವಿಶಿಷ್ಟಾದ್ವೈತಕ್ಕೆ 'ಶಕ್ತಿ' ತುಂಬಿದರು, ಚೇತನ ಬರಿಸಿದರು, ಕ್ರಾಂತಿಕಾರಕವಾದ ಬದಲಾವಣೆ ತಂದರು ಎಂದರೆ ಸರಿಯಲ್ಲವೆ?

ವೀರಶೈವ ಧರ್ಮದಲ್ಲಿ ಕ್ರಾಂತಿಯಾಯಿತು. ಜ್ವಲಂತ ಜ್ವಾಲಾಮುಖಿ ನಡೆಸಿದ ಮೇಲೆ, ಬದಲಾವಣೆಗಳೆಷ್ಟೋ ಆಗುವುದು ಸಹಜ. ಅಂಥ ಹೊಸ ಅಂಶಗಳೇನು? ಆಗಿದ್ದುದಕ್ಕಿಂತ ಇವು ಎಷ್ಟರಮಟ್ಟಿಗೆ ಪ್ರಗತಿಪರವಾದುವು? ಎಷ್ಟರಮಟ್ಟಿಗೆ ಪ್ರಾಯೋಗಿಕವಾದುವು? ವಿಚಾರ ಮಾಡೋಣ. ಮೊದಲನೆಯದಾಗಿ, 'ತನು ಬಿಡುದು ಕಾಂಬುದು ಸಮಸ್ತವಸು' ಎಂದು ಹೇಳಿ, 'ಹುತ್ತವ ಬಡಿದಡೆ ಹಾವು ಸಾಯಬಲ್ಲುದೆ?' ಎಂದು ಕೇಳಿ, ಜೈನಧರ್ಮ ಸಾಧನೆಯ ಮೂಲವಾದ 'ದೇಹದಂಡನೆ', 'ಸ್ವಹಿಂಸೆ'ಗಳನ್ನು ಖಂಡಿಸಿದರು. 'ದಯವೇ ಧರ್ಮದ ಮೂಲ' 'ಸಕಲ ಜೀವಾತ್ಮರಿಗೆ ಲೇಸನೆ ಬಯಸು' ಎಂದು ಬೋಧಿಸಿ, ಹಿಂಸಾಮೂಲವಾದ ಯಜ್ಞಯಾಗಾದಿ

ಗಳಿಗೆ ತಡೆ ಇಟ್ಟರು. ನಿಷ್ಪಾಪಿಗಳಾದ ಹೋತಗಳು ಶರಣರ ಪಾದಗಳಲ್ಲಿ ಕೃತಜ್ಞತೆಯ ಕಣ್ಣೀರು ಹರಿಸಿರಬೇಕು! ತತ್ವಶಃ ವರ್ಣಾಶ್ರಮ ಧರ್ಮಗಳು ಹಿಂದಿನ ಕಾಲಕ್ಕೆ ಯೋಗ್ಯ ಸಾಮಾಜಿಕ ಸೂತ್ರಗಳಾಗಿದ್ದಿರಬಹುದು. ಆದರೆ, ಶರಣರ ಕಾಲಕ್ಕೆ ಅವು ಪ್ರಯೋಗದಲ್ಲಿ ನಿರ್ವೀರ್ಯವಾಗಿ, ಸಮಾಜವನ್ನು ಒಡೆಯುವ, ಕಾಯಕ ನೋಡಿ ಕುಲ ಹೇಳುವ, ವರ್ಗಕಲಹ ಪ್ರಚೋದಕಗಳಾಗಿದ್ದವು! ಕಾರಣ, ಅವುಗಳನ್ನು ದಿಟ್ಟತನದಿಂದ ದೂರ ತಳ್ಳಿದರು. '....the leader of the Lingayat movement, Basava, was up agains these social inequalities' ಎಂದಿದ್ದಾರೆ ಪ್ರೊ. ಸಾಕ್ರೆ* ಇನ್ನು ಶೈವರ ಸ್ಥಾವರ ಲಿಂಗಪೂಜೆ, ಅದರ ಕೇಂದ್ರವಾದ 'ದೇವಾಲಯ', ಅದರ ಪರಿಕರಗಳಾದ ಸೇವೆ, ಕಾಣಿಕೆ, ಮುಂತಾದ 'ಅರ್ಚಕಾರ್ಪಣೆ'ಗಳನ್ನು ತೊಲಗಿಸಿದರು. ದೇವಸ್ಥಾನಗಳು ಮೇಲು ಕೀಳುಗಳನ್ನು ಪ್ರಚೋದಿಸುತ್ತಿದ್ದಿರಬೇಕು. ಅದಕ್ಕೆ ಬಸವಣ್ಣ 'ಉಳ್ಳವರು ಶಿವಾಲಯವ ಮಾಡುವರು....ದೇಹವೆ ದೇಗುಲ... ಕಾಲೇ ಕಂಬ....ಶಿರವೇ ಹೊನ್ನ ಕಳಸ' ಎಂದು ಹೇಳಿದರು. 'ಸ್ಥಾವರಲಿಂಗಪೂಜೆ'ಯ ಸಿದ್ಧಾಂತ ಹಾಗೂ ಪ್ರಾಯೋಗಿಕತೆಗಳನ್ನು ಅಲ್ಲಗಳೆದು 'ಇಷ್ಟಲಿಂಗ ಪೂಜೆ'ಯನ್ನು ಬಳಕೆಗೆ ತಂದರು. 'ಕಟ್ಟಿದ ಲಿಂಗವ ಬಿಟ್ಟು ಬಿಟ್ಟಿದ ಲಿಂಗ'ಕ್ಕೆ ಹೋದೀರಾ ಎಂದು ಎಚ್ಚರಿಸಿದರು. ಆಗ ವೀರಶೈವ ಧರ್ಮ 'ಸಾಮೂಹಿಕ ಧರ್ಮ' ಸ್ಥಾನದಿಂದಿಳಿದು, 'ವೈಯಕ್ತಿಕ ಧರ್ಮ'ದ ಪಟ್ಟಕ್ಕೇರಿತು. ಅಂದರೆ, ವೈಯಕ್ತಿಕ ಉಪಾಸನೆಗೆ ಸೌಲಭ್ಯವಿತ್ತು, ಉಪಾಸನಾ ಸ್ವಾತಂತ್ರ್ಯವನ್ನು ಆಗುಮಾಡಿತು. ಪೂಜೆಗಾಗಿ, ಸೇವೆಗಾಗಿ, ಧ್ಯಾನಕ್ಕಾಗಿ ದೇವಸ್ಥಾನಕ್ಕೆ, ತೀರ್ಥಕ್ಷೇತ್ರಕ್ಕೆ, ಅಂಡಲೆಯುವ ಪರಿಸ್ಥಿತಿ ಓಡಿತು. ವೈಯಕ್ತಿಕ ಧ್ಯಾನಕ್ಕೆ ದೇವಸ್ಥಾನ ಪ್ರಶಸ್ತ ಸ್ಥಾನವೆಂದಿಗೂ ಅಲ್ಲ ಎಲ್ಲರಿಗೆ, ಅಲ್ಲದೆ, ಇಷ್ಟಲಿಂಗ, ಧ್ಯಾನಕ್ಕೆ ಬಾಹ್ಯಸಾಧನ, ಗಣೆಯ ಹಿಡಿದು ಮೇಲೇರುವಂತೆ. ಹೀಗೆ ಧ್ಯಾನ ಧಾರಣ, ಸಮಾಧಿಗಳಿಗೆ, ದಾರಿ ಮಾಡಿಕೊಟ್ಟಿತು ಈ ಬದಲಾವಣೆ. ಇನ್ನು ಇಂಥ ಉಪಾಸನಾ ಮಾರ್ಗಕ್ಕೊಂದು ಶಾಸ್ತ್ರೀಯ ಅವಲಂಬನ ಬೇಕಿತ್ತು, ಸಾಧಕರಿಗೆ ಮಾರ್ಗದರ್ಶಕವಾಗಲು, ಮತ್ತು ಧರ್ಮದ ತಾತ್ವಿಕತೆಗೊಂದು ಆಕರವಾಗಲು. ಆಗ, ಪಂಚಾಚಾರ, ಷಟ್‌ಸ್ಥಲ, ಅಷ್ಟಾವರಣಗಳನ್ನು ಸ್ವಾನುಭವದ ನುಡಿಗಳಿಂದ ಸಾಧಕ ಶರಣರು ರೂಪಿಸಿದರು. (ಬರಬರುತ್ತಾ ಅವು ಶುಷ್ಕ ಶಾಸ್ತ್ರೀಯ ಅಂಕೆ-ಸಂಖ್ಯೆಗಳ ಅಂತರ್ಜಾಲಗಳಾಗಿವೆ!)

ವೀರಶೈವ ಧರ್ಮದ ಈ ಹೊಸ ಮುಖ, ಮುಕ್ತದ್ವಾರ ಎಲ್ಲರನ್ನೂ ಆಹ್ವಾನಿಸಿತು. ನೂರಾರು ಜನ ನುಗ್ಗಿದರು. ಹೊಸ ಧರ್ಮ ತತ್ವಗಳನ್ನು ಮಾನಸಿಕವಾಗಿ ಒಪ್ಪಿಕೊಂಡರೂ, ಅನುಷ್ಠಾನದಲ್ಲಿ ಹಿಂದಿನ ವಾಸನೆ ಉಳಿದಿತ್ತು. 'ನೀರನು ಕಂಡಲ್ಲಿ ಮುಳುಗುವ' ಜನರಿದ್ದರು; 'ಮರನ ಕಂಡಲ್ಲಿ ಸುತ್ತುವ ಜನ' ಬಂದರು. ಕಲ್ಲು,

---

* 'History and Philosophy of Lingayat Religion'-by Prof. Sakhre as quoted by Dr. S. M. Hunasal.

ಮಣ್ಣು, ಲೋಹದ ಸ್ಥಾವರ ದೇವರುಗಳನ್ನು ಕೈಬಿಡದವರಿದ್ದರು. 'ಎಲವೋ' ಎಂಬ ಜಂಬಗಾರರಿದ್ದರು. ತಮ್ಮನ್ನು ತಿದ್ದಿಕೊಳ್ಳದೆ 'ಲೋಕದ ಡೊಂಕ ತಿದ್ದುವ' 'ಪರಚಿಂತೆ'ಯ ವಂಚಕರಿದ್ದರು. 'ಆಸೆ ಹರಿಯದ ರೋಷ ಬಿಡದ' ಭಕ್ತರಿದ್ದರು. 'ವೇದಪ್ರಿಯರು, ನಾದಪ್ರಿಯರು' ಭಕ್ತಿಪ್ರಿಯರಿನ್ನೂ ಆಗಬೇಕಿದ್ದಿತು. ಕುಲ ಹದಿನೆಂಟು ಜಾತಿಯವರು ಸೇರಿ, ಮುನ್ನಿನ ಕುಲದ ಆಧಾರದಿಂದ 'ಮೇಲುಕೀಳನರಸುವವರು' ಇದ್ದರು. ಗಂಡ ಶಿವಲಿಂಗ ಭಕ್ತನಾಗಿಯೂ, ಹೆಂಡತಿ ಮಾರಿ ಮಸಣಿಯ ಭಕ್ತೆಯಾಗಿಯೂ ಇದ್ದ ಇಜ್ಜೋಡಿ ಸಂಸಾರಗಳೆಷ್ಟೋ ಇದ್ದುವು. ಕಾಯಕದಿಂದ ಕುಲವನರಸುವವರೂ ಬಂದಿದ್ದರು. 'ಆವ ಕುಲವಾದಡೂ ಅರಿದಲ್ಲಿಯೆ ಪರತತ್ವಭಾವಿ, ಮರೆದಲ್ಲಿಯೇ ಮಲ ಮಾಯಾ ಸಂಬಂಧಿ' ಎಂದು ಮಾದಾರ ಚನ್ನಯ್ಯ ಗದರಿಸಬೇಕಾಗಿತ್ತು. 'ಹಠಯೋಗ, ಲಂಬಿಕೆ, ಎಂದು ಅಕುಂಚನವ ಮಾಡಿ, ವಜ್ರ ಅಮರಿಯ ಕಲ್ಪವೆಂದು ಮಲಮೂತ್ರಂಗಳ ಸೇವಿಸುವ ........ ನವನಾಥ ಸಿದ್ಧ, ಕಾಪಾಲಿಕ'ರೂ ನುಗ್ಗಿದರು. ಇಂಥ ಕಲಸು ಮೇಲೋಗರದಲ್ಲಿ ತತ್ವದ ಗತಿಯೇನು? ಧರ್ಮದ ಪಾಡೇನು? ಸಮಾಜ ಯಾರಿಗೆ ಶರಣು? ಇಂಥ 'ಸಂತೆಯ ಗದ್ದಲ' ಶರಣರ ವಿಚಾರ ಕೆರಳಿಸಿತು. ಈ ಧರ್ಮ, ಸಿದ್ಧಾಂತ ಬೆಳೆದು ಬಾಳಬೇಕಾದರೆ, ಸಮಾಜ ಸುಧಾರಣೆ, ಸಂಘಟನೆ ಆಗಬೇಕಲ್ಲವೆ?

ಆರ್ಥರ್ ಮೈಲ್ಸ್ ಅವರು ಸಮಾಜ ಸುಧಾರಕ ಬಸವಣ್ಣನನ್ನು ಕುರಿತು ಹೀಗೆನ್ನುತ್ತಾರೆ: "Whatever legend may say about Basava, the fact is very clear that he was the first Indian free thinker. He might be called the Luther of India"* 'ಭಾರತದ ಲೂಥರ್' ಎಂದು ಭಾರತೀಯರಲ್ಲದವರಿಂದ ಹೊಗಳಿಸಿಕೊಂಡ ಬಸವಣ್ಣ ಕೈಕೊಂಡ ಸಮಾಜ ಸುಧಾರಣೆ ಏನು? ಅದು ಎಷ್ಟರ ಮಟ್ಟಿಗೆ ಫಲಕಾರಿಯಾಗಿತ್ತು? ವಿಚಾರಿಸೋಣ.

ಸಮಾಜ ಗಂಡು-ಹೆಣ್ಣುಗಳ ಮಿಶ್ರಣ. ಅದರಲ್ಲಿ ಒಂದಧಮ, ಒಂದಧಿಕವೆ? ತನ್ನ ಕಣ್ಣ ಮುಂದಿದ್ದ ಜೈನರಲ್ಲಿ, ತನ್ನ ಹಿಂದಿದ್ದ ವೈದಿಕರಲ್ಲಿ ಸ್ತ್ರೀಯರಿಗೆ ಧರ್ಮಾಧಿಕಾರವಿಲ್ಲ! ಎಲ್ಲರಿಗೆ ಜನ್ಮ ಕೊಡುವ ತಾಯಿ ಪಾಪಕೂಪವಂತೆ! ಯಾವುದೇ ವರ್ಣದಲ್ಲಿದ್ದರೂ ಆಕೆ ಶೂದ್ರಳು!! ಧಾರ್ಮಿಕ ಹಾಗೂ ಸಾಮಾಜಿಕ ಸ್ಥಾನಮಾನಗಳಿಲ್ಲ!! ಆಗ ಶರಣರು ಎಲ್ಲ ಸ್ತ್ರೀಯರಿಗೆ ದೀಕ್ಷೆ ಇತ್ತು, ಇಷ್ಟಲಿಂಗ ನೀಡಿದರು. ಸಮಾಜದಲ್ಲಿ ಸಮಾನ ಅಧಿಕಾರ ತಂದುಕೊಟ್ಟರು. ಉಪನಿಷತ್ ಕಾಲದ, ಗಾರ್ಗಿ, ಮೈತ್ರೇಯಿಯರಿಗೆ ಧರ್ಮಾಧಿಕಾರವಿತ್ತೆಂದು ಕೇಳಿದ್ದೇವೆ. ಆದರೆ, ಅಲ್ಲಿಂದೀಚೆಗೆ, ಸ್ತ್ರೀ ಜಾತಿಯೆಲ್ಲ ಸಮಾಜ ಬಾಹಿರವಾದ ಮಟ್ಟಕ್ಕಿಳಿದಿದ್ದಿತು. ಮನುಧರ್ಮ ಶಾಸ್ತ್ರವೂ ಅವರ

---

* The land of Lingam—by Arter Miles (1933).

ದುಸ್ಥಿತಿಗೆ ತನ್ನ ಮುದ್ರೆಯೊತ್ತಿತ್ತು! ಆದರೆ ಶರಣರ ಸಮಾಜದಲ್ಲಿ 'ಸ್ತ್ರೀ' ಶರಣೆಯಾದಳು! ಅಕ್ಕಮಹಾದೇವಿ, ನಿಲಾಂಬಿಕೆ, ಅಕ್ಕನಾಗಮ್ಮ, ಮುಕ್ತಾಯಿ, ಸತ್ಯಕ್ಕ, ರೇಚವ್ವೆ, ರೆಮ್ಮವ್ವೆಯರೇ ಇದಕ್ಕೆ ಜ್ವಲಂತ ಸಾಕ್ಷಿಗಳು! ನಮ್ಮ ಆಧುನಿಕ ಮಹಿಳಾಮಣಿಗಳಿಗೆ, ಶರಣೆಯರು ಮುನ್ನುಡಿ ನುಡಿದಿಲ್ಲವೆ? ಶರಣರು, ಸ್ತ್ರೀ ಸಮಾಜದ ಕುತ್ತಗಳಾದ 'ಬಾಲ್ಯ ವಿವಾಹ' 'ವಿಧವಾ ವಿವಾಹ ನಿಷೇಧ'ಗಳನ್ನು ಖಂಡಿಸಿ, ನೇರ್ಪುಗೊಳಿಸಿದರು. ಇದರಿಂದ ಸಮಾಜ ಇನ್ನೂ ಹೆಚ್ಚು ಕಾರ್ಯತತ್ಪರವಾಯಿತು. ಜಗತ್ತಿನ ಯಾವ ಸಾಹಿತ್ಯದಲ್ಲಿಯೂ ಇಲ್ಲದಷ್ಟು ಸಂಖ್ಯೆಯ ಅಂದರೆ ಸುಮಾರು ಅರವತ್ತು ಮಂದಿ ಸ್ತ್ರೀ ಸಾಹಿತಿಗಳು ಒಡಮೂಡಿ ಬಂದರು. ಇದು ಬಸವನ ಸುಧಾರಣೆಯ ಫಲಶ್ರುತಿ!

'ಉದ್ಯೋಗಶೀಲವಾದ ಸ್ವಪರಿಪೂರ್ಣತೆ, ಸ್ವಾಯತ್ತತೆ', ಸುಭದ್ರ ಸಮಾಜದ ಅವಶ್ಯಕತೆ. ಕಾರಣ, ಶರಣರು ಕೈ ಕಸಬುಗಳಿಗೆ, ಕೃಷಿ, ವಾಣಿಜ್ಯಗಳಿಗೆ 'ಕಾಯಕ' ವೆಂಬ ಮಹತ್ವದ ಹೆಸರನ್ನಿತ್ತರು. ಕೆಲಸ ತನ್ನ ಜೀವನಕ್ಕಾಗಿಯೇ ಆದರೂ, ಅದೊಂದು ಸಾಮಾಜಿಕ ಕರ್ತವ್ಯವೆಂದು ಮಾಡಿದರೆ ಅದು 'ಕಾಯಕ.' 'ಕಾಯಕದಿಂದ ಕುಲವಲ್ಲ' 'ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಳಿಗನಾದ' 'ಮಾಳ್ಪ ಕೆಲಸಗಳೆಲ್ಲ' ಸಮಾಜಕ್ಕೆ 'ನೈವೇದ್ಯ'ವಾದರೆ, "ಹೆಚ್ಚು ಕಡಿಮೆಯ ಹೆಮ್ಮೆಯ ವಿಭೇದಗಳಿನ್ನೆಲ್ಲಿ?" ಗುಡಿ ಕೈಗಾರಿಕೆಗಳು ನಮ್ಮ ದೇಶದ ಅಭಿವೃದ್ಧಿಗೆ ಎಷ್ಟರಮಟ್ಟಿನ ನೆರವೀಯಬಲ್ಲುವೆಂದು ಅರಿತು, ಸ್ವದೇಶಿ ಚಳವಳಿಯನ್ನೆಬ್ಬಿಸಿದ ಗಾಂಧೀಜಿಯ ತತ್ವವನ್ನು ಮನಗಂಡಿದ್ದರು. ಸಂಸಾರಿಗಳಾದವರಂತೂ ಒಂದಲ್ಲ ಒಂದು ಕಾಯಕದಲ್ಲಿ ತೊಡಗಲೇ ಬೇಕು. ಅಷ್ಟಲ್ಲದೆ, 'ಶಿವಯೋಗಿಯ ಶರೀರಂ ವೃಥಾ ಸವೆಯಲಾಗದು. ಅನುಗೊಂಬನಿತು ಕಾಯಕಂ ನಡೆಯುತಿರಬೇಕು' ಎಂದು ನುಡಿದು, ಅದರಂತೆ ನಡೆದರು. ಶಿವದಾರ, ಉದಕ ಪಾವುಡ, ಮಡಿ, ಗದ್ದಿಗೆ ಕಂಬಳಿಗಳೆಲ್ಲ ಸ್ವಂತ ಕೈಯಿಂದ ತಯಾರಿಸಿ, ಧರಿಸಬೇಕೆಂಬ ನಿಯಮವಿತ್ತು. ಲಿಂಗಕ್ಕೆ ಕಂತೆ ಇಡುವುದು ವಿಭೂತಿ ತಯಾರಿಸುವುದು, ರುದ್ರಾಕ್ಷ ಮಾಲೆಗಳ ತಯಾರಿ, ಬೆತ್ತ, ಜಂಗು, ಜೋಳಿಗೆ, ಊದುಬತ್ತಿ, ಸಾಂಬ್ರಾಣಿ ತಯಾರಿ ಇವೆಲ್ಲ ಪವಿತ್ರ ಕೈ ಕಸಬುಗಳಾಗಿಯೇ ಬೆಳೆದುವು. ಸಮಾಜ ಸ್ವಾಯತ್ತ, ಸ್ವಯಂ ಪೂರ್ಣವಾಗಬೇಕಿದ್ದರೆ, ಸಾಮಾಜಿಕ ಅವಶ್ಯಕತೆಗಳೆಲ್ಲ, ಸಮಾಜದಲ್ಲಿಯೇ ಉತ್ಪತ್ತಿಯಾಗಬೇಕು, ಬೇರೆಯವರ ಕೈ ಕಾಯಕೂಡದು. ಆದ ಕಾರಣ, ವೀರಶೈವ ಸಮಾಜದಲ್ಲಿ, ಸಮಗಾರನಿಂದ ಹಿಡಿದು ಸುವರ್ಣಕಾರನವರೆಗೆ, ಶಿಂಪಿಗನಿಂದ ಹಿಡಿದು ಸಂಪಿಗೆ-ಮಾರುವವನವರೆಗೆ, ವ್ಯಾಪಾರಿಯಿಂದ ಹಿಡಿದು ವೈದ್ಯನವರೆಗೆ, ಎಲ್ಲ ಕಸಬುಗಳನ್ನು ಮಾಡುವ ಜನರಿದ್ದರು. ಆ ಒಂದೊಂದು ಕಸಬಿನವರೂ ಮಹಾಶರಣರಾಗಿದ್ದಾರೆ. ಜಾಡರ ದಾಸಿಮಯ್ಯ, ಮಡಿವಾಳ ಮಾಚಯ್ಯ, ಮೇದಾರ್ಕೇತಯ್ಯ, ಹಡಪದ

ಆಪ್ಪಣ್ಣ, ಢಕ್ಕೆಯ ಬೊಮ್ಮಣ್ಣ, ತುರುಗಾಹಿ ರಾಮಣ್ಣ, ಸುಂಕದ ಬಂಕಣ್ಣ, ಕಿನ್ನರಿ ಬೊಮ್ಮಣ್ಣ (ಅಕ್ಕಸಾಲಿ), ಜೋಧರ ಮಾದಯ್ಯ (ಸೈನಿಕ), ಡೋಹರ ಕಕ್ಕಯ್ಯ ಮತ್ತು ಹರಳಯ್ಯ (ಸಮಗಾರರು), ತಳವಾರ ರಾಮದೇವ, ಮೋಳಿಗೆ ಮಾರಯ್ಯ (ಸೌದೆ ಕೆಲಸ), ಕುಂಬಾರ ಗುಂಡಯ್ಯ, ಕದಿರೆ ರೆಮ್ಮವ್ವೆ – ಇತ್ಯಾದಿ ಶರಣ ಶರಣೆಯರ ಹೆಸರುಗಳನ್ನೇ ನೋಡಿದರೆ, ಶರಣರ ಸಮಾಜದಲ್ಲಿ ಸರ್ವಕಾಯಕದವರಿದ್ದರೆಂದು ಅರ್ಥವಾಗುತ್ತದೆ; ಇಂದಿಗೂ ಈ ಎಲ್ಲ ವೃತ್ತಿಯವರು ಉಳಿದಿರುವುದೇ ಹಿಂದಿದ್ದರೆಂಬುದಕ್ಕೆ ನಿದರ್ಶನ. ಈಚೆಗೆ ಕುಂಬಾರ, ಸಮಗಾರ, ಮೇದಾರ, ಒಕ್ಕಲಿಗ ಮುಂತಾದವರು ಬೇರೆಯ ಕುಲದವರಾಗಿ ವ್ಯವಹರಿಸುತ್ತಿದ್ದರೂ, ಅವರೆಲ್ಲ ಇಂದಿಗೂ ಭಸ್ಮಧಾರಿಗಳೂ, ಶಿವೋಪಾಸಕರೂ ಆಗಿದ್ದಾರೆ. ಹೀಗೆ, ಕುಲಭೇದ ನಿವಾರಿಸಿ, ಕಾಯಕಕ್ಕೆ ಮಹತ್ವದ ಸ್ಥಾನ ನೀಡಿ, ಸಮಾಜದಲ್ಲಿ ನವಚೇತನ ತುಂಬಿದರು. ಸಮಾಜದಲ್ಲಿ ಉದ್ಯೋಗಶೀಲವಾದ ಸ್ವಪರಿಪೂರ್ಣತೆ, ತ್ಯಾಗಮೂಲವಾದ ಸ್ವಾತಂತ್ರ್ಯ, ಸೇವಾ ಮನೋಭಾವದ ಕಾರ್ಯತತ್ಪರತೆ ನೆಲಸಿತು, ನಲಿಯಿತು.

ಹೀಗೆ, ಅಡ್ಡ ಉದ್ದವಾಗಿ ಬೆಳೆದ ಸಮಾಜದ ಜನರಿಗೆ ಮಾರ್ಗದರ್ಶನ ನೀಡುವುದೆಂತು? ವೀರಶೈವ ಧರ್ಮದ, ತತ್ವ, ಸಿದ್ಧಾಂತ, ಸುಧಾರಣೆ, ಸಮಸ್ಯೆಗಳು ಸಮಾಜ ಬಾಂಧವರಿಗೆ ತಿಳಿಯುವುದೆಂತು? ವಿಚಾರ ವಿಮರ್ಶೆ ನಡೆಯುವುದೆಂತು? ತಕ್ಷಣವೇ ಶರಣರು, ಧರ್ಮಪ್ರಚಾರಕ್ಕಾಗಿ ಬುದ್ಧ, ಅಶೋಕರು, ಪಾಳಿ ಎಂಬ ಜನನುಡಿಯನ್ನು ಬಳಸಿದ್ದುದನ್ನು ನೆನೆದರು. ದೇವಭಾಷೆಯಾದ್ದರಿಂದ ಮಾನವರಿಗೆ ಕೊಂಚ ದೂರವೆಂದು ತಿಳಿದು, ಸಾಮಾನ್ಯ ಜನರ ಆಡುಮಾತಾದ ಕನ್ನಡ ನುಡಿಗೆ ಚಲಾವಣೆ ನೀಡಿದರು. ವೇದದ ಜ್ಞಾನ ಬೀದಿಯ ಮಾತಾಯಿತು. ಮಡುಗಟ್ಟಿದ ಜ್ಞಾನ ಕರಗಿ ಹರಿಯಿತು. ಅವರ ಅನುಭವಗಳೆಲ್ಲ ಸರಳಗನ್ನಡದ 'ವಚನ'ರೂಪವೆತ್ತುವು. ಶರಣರ ನುಡಿಯಂತೆ ನಡೆ, ಆ ನಡೆಯ ಪಡಿ, ಈ ವಚನ ನುಡಿ. ಅದೇ ಜನವ್ಯವಹಾರದ ಮಾಧ್ಯಮವಾಯಿತು. ಸುಮಾರು ೨೫೦ ಜನ ಶರಣರು, ಈ ವಚನರಾಶಿಯನ್ನು ನಿರ್ಮಿಸಿದ್ದಾರೆ. ಬೇರೆಬೇರೆಯ ಕಾಯಕದವರು, ವಚನ ರಚನೆಯಲ್ಲಿ ತೊಡಗಿದ್ದರಿಂದ, ಅವುಗಳಲ್ಲಿ ವೈವಿಧ್ಯತೆ ಮೈದೋರಿತು. ವಚನಗಳು ಜನಪ್ರಿಯವಾದುವು, ಶರಣರಿಗೆ, ವಚನಗಳ ಮೂಲಕ, ಜನರೂ ಪ್ರಿಯರಾದರು. ಹೀಗಾಗಿ, ಅರಮನೆ, ಗುರುಮನೆ, ಗರಿಮನೆಗಳಲ್ಲಿ ನಿಕಟ ಸಂಪರ್ಕವುಂಟಾಯಿತು. ಶಿಕ್ಷಣಮಾಧ್ಯಮ, ಸರಕಾರದ 'ವ್ಯವಹಾರಭಾಷೆ', ತಾಯ್ನುಡಿಯಾಗಿರಬೇಕೆಂದು ಬಡಬಡಿಸುವ ನಮಗಿಂದು ಶರಣರ ಹೆಜ್ಜೆ ಮಾರ್ಗದರ್ಶಕವಲ್ಲವೆ? ಎಂಟುನೂರು ವರ್ಷಗಳ ಹಿಂದೆಯೇ ಇದರ ಮರ್ಮವನ್ನರಿತು, ಅಳವಡಿಸಿದ ಶರಣರು ಎಂಥ ಕ್ರಾಂತಿದರ್ಶಿಗಳು!

ಇಷ್ಟಲ್ಲದೆ, ಸಮಾಜದ ಅಭಿವೃದ್ಧಿ, ನೆಮ್ಮದಿಗೆ ಕಾರಣವಾದ ಸಂಸಾರ ಧರ್ಮಕ್ಕೆ, ನೀತಿ ಮತ್ತಿಗೆ, ಪ್ರಾಮುಖ್ಯತೆ ಕೊಟ್ಟರು. ತತ್ತ್ವಸಾಧಕನಾದವನು, ಸಂಸಾರತ್ಯಾಗಿ

ಯಾಗಬೇಕೆಂಬ ನಿಯಮವನ್ನು ಅಲ್ಲಗಳೆದರು. ಸಂಸಾರ, ಜೀವನಕ್ಕೆ ಕೋಟಲೆಯಲ್ಲ, ಕೋಟೆ; ಅದು ಆಧ್ಯಾತ್ಮಕ್ಕೇರುವ ಸುಲಭಮಾರ್ಗವೆಂದರು. ಅದರಂತೆ, ಬಸವ–ನೀಲಾಂಬಿಕೆಯರು ನಡೆದು ತೋರಿಸಿದರು. ಇನ್ನು ಸಮಾಜದ ಐಕ್ಯತೆಯನ್ನು ಕಾಪಾಡಲು, ಅಂತರ್ ಜಾತೀಯ ವಿವಾಹ, ಪಂಕ್ತಿಭೇದವಿಲ್ಲದ ಸಹಭೋಜನೆ, ಸರ್ವ ಸಮಾನವಾದ ಲಿಂಗಲಾಂಛನ, ಎಲ್ಲರ ಅನುಷ್ಠಾನಕ್ಕೆ ಸುಲಭವಾದ ಭಕ್ತಿಮಾರ್ಗಗಳನ್ನು ಬಳಸಿದರು, ಬೆಳೆಸಿದರು.

ಈ ಎಲ್ಲ ನವೀನ ವ್ಯವಸ್ಥೆಗಳು, ಸುಗಮವಾಗಿ ಸಾಗಿಹೋಗುವುದು ಹೇಗೆ? – ಶರಣರು ವಿಚಾರಪರರಾದರು. ದೊಡ್ಡ ರಾಜ್ಯದ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದ ಮಂತ್ರಿ ಬಸವಣ್ಣನಿಗೆ ತಕ್ಷಣವೇ ಹೊಳೆಯಿತು. ರಾಜಕೀಯದಲ್ಲಿ ಒಂದು ಆಡಳತೆಯ ವ್ಯವಸ್ಥೆ ಇರುವಂತೆ ಧಾರ್ಮಿಕವಾದ ಒಂದು ವ್ಯವಸ್ಥೆಯೂ ಇದ್ದರೆ ಸಮಾಜದಲ್ಲಿ ಐಕ್ಯತೆ ಉಳಿಯುತ್ತದೆ. ಕಾರಣ, ಸಂಘಟನೆ ಬೇಕೆಂದುಕೊಂಡರು. ಬುದ್ಧ, ರಾಜಕುಮಾರನಾಗಿದ್ದರೂ, ತನ್ನ ಧರ್ಮಪ್ರಚಾರ, ಧರ್ಮವಿಚಾರದಲ್ಲಿ, ಆಡಳಿತೆಯ ವ್ಯವಸ್ಥೆಯನ್ನು ಅಳವಡಿಸಿದಂತೆ ತೋರುವುದಿಲ್ಲ. ಆದರೆ ಮಂತ್ರಿಯಾದ ಬಸವಣ್ಣ, ಒಂದು ಬಗೆಯ ಧಾರ್ಮಿಕ ಆಡಳಿತೆಯ ಯಂತ್ರವನ್ನು ನಿರ್ಮಿಸಿದ. ಆ ವ್ಯವಸ್ಥೆಯ ಕ್ರಮ ಹೀಗೆ :

ಅನುಭವ ಮಂಟಪ
|
ಪ್ರಾದೇಶಿಕ ಮಠಗಳು
|
ಚರಂತಿ ಮಠಗಳು
|
ಗ್ರಾಮ ಮಠಗಳು

ಅನುಭವ ಮಂಟಪವನ್ನು ಇಂದಿನ ಕೇಂದ್ರ ಸರಕಾರಕ್ಕೆ ಹೋಲಿಸಬಹುದು. ಧರ್ಮದ ಸಂಘಟನೆ, ಶುಚಿ–ರುಚಿ, ಧ್ಯೇಯ–ಧೋರಣೆಗಳ ಜವಾಬ್ದಾರಿಯೆಲ್ಲ ಅನುಭವ ಮಂಟಪದ್ದು. ಅಲ್ಲಮ, ಬಸವ, ಚನ್ನಬಸವ, ಸಿದ್ಧರಾಮ, ಮಹಾದೇವಿ ಮುಂತಾದ ಶರಣರು ಅದರ ಸದಸ್ಯರು. ಅದನ್ನು ಇಂದಿನ ಕೇಂದ್ರಮಂತ್ರಿ ಮಂಡಲಕ್ಕೆ ಹೋಲಿಸಬಹುದು. ಅದರ ನಿರ್ದೇಶನದಂತೆ, ಕಾರ್ಯನಿರ್ವಹಿಸಲು ಪ್ರಾದೇಶಿಕ ಮಠಗಳು ಇದ್ದುವು. ಅವುಗಳಿಗೆ ಒಬ್ಬೊಬ್ಬ 'ಶರಣ' ಮುಖ್ಯಸ್ಥನಾಗಿರುತ್ತಿದ್ದ. ಅಂಥ ಒಂದೊಂದು ಮಠದ ಆಡಳಿತೆಯಲ್ಲಿ, ಹತ್ತಾರು ಗ್ರಾಮಗಳ ಮೇಲೆ ವಹಿವಾಟ ವಿರಿಸಿಕೊಂಡ ಚರಂತಿ ಮಠಗಳು, ಗವಿಮಠಗಳು ಇದ್ದುವು. ಕೊನೆಯದಾಗಿ, ಪ್ರತಿಯೊಂದು ಹಳ್ಳಿಗೂ ಒಂದೊಂದು ಮಠ, ಅದಕ್ಕೆ ಒಬ್ಬ ಮಠದಯ್ಯ ಮುಖ್ಯಸ್ಥನಾಗಿರುತ್ತಿದ್ದ. ಅವನ ಕೆಲಸ, ಅನುಭವ ಮಂಟಪದ ನಿರ್ದೇಶನಗಳನ್ನು, ಅಳವಡಿಸಿ

ಸಮಾಜದ ನೀತಿ-ನಡತೆಗಳನ್ನು ಕಾಪಾಡುವುದು. ಅವನು ವಾರಕ್ಕೊಮ್ಮೆಯಾದರೂ ಭಕ್ತರ ಮನೆಗೆ ಹೋಗಬೇಕಿತ್ತು. ಅವರು ಲಿಂಗಪೂಜೆ, ಧರ್ಮಕ್ರಮಗಳನ್ನು ನಡೆಯಿಸುವರೋ ಇಲ್ಲವೋ ಎಂಬ ಉಸ್ತುವಾರಿ ವಹಿಸಬೇಕಾಗಿತ್ತು. ಸಣ್ಣ ಪುಟ್ಟ ಅಧರ್ಮಕಾರ್ಯಗಳಿಗೆ 'ಪ್ರಾಯಶ್ಚಿತ್ತ' ವಿಧಿಸುವುದು ಅವನ ಅಧಿಕಾರದಲ್ಲಿತ್ತು. ಭಕ್ತರಿಂದ 'ಕಾಣಿಕೆ' ವಸೂಲು ಮಾಡಿ, ಪಾವತಿ ಮಾಡಬೇಕಿತ್ತು. ಹಳ್ಳಿಯ ಮದುವೆ, ಉತ್ಸವ, ದೀಕ್ಷೆ, ಮುಂತಾದ ಕೆಲಸಗಳು ಅವನ ನೇತೃತ್ವದಲ್ಲಿಯೇ ನಡೆಯಬೇಕಿತ್ತು. ಇಷ್ಟೆಲ್ಲ ಮಠಗಳ, ಧರ್ಮಾಚಾರ್ಯರ ಮೇಲೆ ಶಿಸ್ತಿನ ತನಿಖೆಗಾಗಿ, ಅನುಭವ ಮಂಟಪದ ನೇತೃತ್ವದಲ್ಲಿ ಗಣಾಚಾರಿಗಳು, ಗುಪ್ತಾಚಾರಿಗಳು, ಕಾಯಕದಯ್ಯಗಳು ದೇಶಸಂಚಾರ ಮಾಡುತ್ತಿದ್ದರು. ಇಂಥ ಗಣಂಗಳು ಲಕ್ಷದ ಮೇಲೆ ತೊಂಬತ್ತಾರು ಸಾವಿರವಿದ್ದರಂತೆ! ಗಣಾಚಾರಿಗಳು ಒಂದು ಬಗೆಯಲ್ಲಿ ಇಂದಿನ ಪೋಲೀಸು ಸಿಬ್ಬಂದಿಯ ಪ್ರತೀಕ, ಗುಪ್ತಾಚಾರಿಗಳು ಇಂದಿನ ಸಿ.ಐ.ಡಿ. ಗಳಂತೆ. ಇನ್ನು ಕಾಯಕದಯ್ಯಗಳಲ್ಲಿ ಹಲವು ವಿಧಗಳುಂಟು. ಅವರೆಲ್ಲ ಶಿವಾನುಭವ ಶಿಬಿರದಲ್ಲಿ ತಯಾರಾದವರು. 'ಸತ್ಯಾಗ್ರಹ' 'ವಚನ ಬೋಧೆ', 'ಕಾಲಜ್ಞಾನ ವಿವರಣೆ' ಅವರ ಕೆಲಸ. ಲಿಂಗಬಿಟ್ಟವರ ಮನೆಯ ಕಟ್ಟೆಯಮೇಲೆ, ಕೈಕಟ್ಟಿ, ಕುಳಿತು ಬಿಡುವುದು, ಮೂರು ದಿನವಾದರೂ, ಹಸಿವೆ, ನೀರಡಿಕೆ ಇಲ್ಲದೆ ಮೇಲೇಳದ ಸತ್ಯಾಗ್ರಹ ಮಾಡುವವರನ್ನು ಕಟ್ಟೆಯ ಕಾಯಕದವರು ಎನ್ನುವರು. ಕಂಬಕ್ಕೆ ತೆಕ್ಕೆ ಹಾಕಿಕೊಂಡು ಸತ್ಯಾಗ್ರಹ ಮಾಡುವುದನ್ನು ಕಂಬದ ತೆಕ್ಕೆಯ ಕಾಯಕ ಎನ್ನುವರು. ಈ ಎರಡು ಅಸ್ತ್ರಗಳನ್ನು, ಒಬ್ಬ ವ್ಯಕ್ತಿಯ, ಒಂದು ಸಂಸಾರದ ಧರ್ಮಚ್ಯುತಿಯನ್ನು ಸರಿಗೊಳಿಸುವುದಕ್ಕಾಗಿ ಬಳಸುತ್ತಿದ್ದರು. ಇನ್ನು ಒಂದು ಊರು ಒಂದು ಓಣಿ ಅನೀತಿಯಲ್ಲಿ ನಡೆಯುತ್ತಿದ್ದರೆ, ಆ ಊರ ಮುಂದೆ, ಆ ಓಣಿಯ ಮಧ್ಯೆ, ಒಬ್ಬ ಶರಣ, ಮುಳ್ಳಿನ ಆವುಗೆಗಳ ಮೇಲೆ ನಿಂತು, ಸತ್ಯಾಗ್ರಹ ಮಾಡುತ್ತಿದ್ದ. ಇಂಥ 'ಕಾಯಕ'ಗಳು ಇಂದು 'ವೃತ್ತಿ'ಗಳಾಗಿಯಾದರೂ ಉಳಿದಿರುವುದನ್ನು ನೋಡಿದರೆ ಹಿಂದಿನ ವ್ಯವಸ್ಥೆಯ ಅರಿವಾಗಬಹುದು. ಈ ಕಾಯಕದವರೆಲ್ಲ, ಗುಪ್ತಾಚಾರಿ, ಗಣಾಚಾರಿಗಳು, ಪ್ರಾದೇಶಿಕ ಮಠಗಳಿಗೆ, ಅನುಭವ ಮಂಟಪಕ್ಕೆ ವರದಿ ಒಪ್ಪಿಸಬೇಕಿತ್ತು! ಆ ಬಗ್ಗೆ ಅಲ್ಲಿ 'ಚರ್ಚೆ' ನಡೆದು, ನಿರೂಪಗಳು ಹೊರಡುತ್ತಿದ್ದುವು. ಶಿಥಿಲವಾಗಿಯಾದರೂ ಇನ್ನೂ ಉಳಿದಿರುವ ಧಾರ್ಮಿಕ ಆಡಳಿತೆಯ ವ್ಯವಸ್ಥೆ, ಹಿಂದಿದ್ದುದರ ಕುರುಹು. ಸಮಾಜದ ಸಂಘಟನೆ, ಐಕ್ಯತೆಯನ್ನು ಕಾಪಾಡಲು ಇದಕ್ಕಿಂತ ಹೆಚ್ಚಿನ ವ್ಯವಸ್ಥೆಯನ್ನೇನನ್ನು, ಆಧುನಿಕ ಕಾಲದಲ್ಲಿ ಮಾಡಿಕೊಂಡಿದ್ದೇವೆ? ಇಂದಿನ ವಾಹನ ಸೌಕರ್ಯ ಸುದ್ದಿವಾಹಕ ವ್ಯವಸ್ಥೆಗಳೇನೂ ಇಲ್ಲದ ಅಂದಿನ ಕಾಲದಲ್ಲಯೇ ಇಂಥ ವ್ಯವಸ್ಥೆಯನ್ನು ತಂದ ಶರಣರು ಅದೆಂಥ ದೂರದರ್ಶಿಗಳು! ಅದೆಂಥ ಸಮಾಜ ಸುಧಾರಕರು! ಅದೆಂಥ ವ್ಯವಸ್ಥಾಪಕರು!! ಹೀಗೆ, ಸಮಾಜ ಪ್ರಧಾನವಾದ ಧಾರ್ಮಿಕ ಕ್ರಾಂತಿಯನ್ನು ತಂದ

ಕೀರ್ತಿ ಶಿವಶರಣರಿಗಲ್ಲದೆ ಮತ್ತಾರಿಗೆ ? ಅವರು ನಡೆದು ಬಂದ ದಾರಿ, ನಮಗಿಂದು ಹೆದ್ದಾರಿಯಾಗಲಾರದೆ ?

ಕೊನೆಯದಾಗಿ, ಆಧುನಿಕ ಭಾರತದ ಜನಪ್ರಿಯ ಹಾಗೂ ಭಾರತ ಜನ ಜೀವನದ ಪ್ರಾತಿನಿಧಿಕ ಪತ್ರಿಕೆಯಾದ ಟೈಂಸ್ ಆಫ್ ಇಂಡಿಯ (Times of India) ಪತ್ರಿಕೆಯು, ೧೭-೫-೧೯೧೮ರ ತನ್ನ ಸಂಪಾದಕೀಯದಲ್ಲಿ ವ್ಯಕ್ತಪಡಿಸಿರುವ ಈ ಅಭಿಪ್ರಾಯಗಳನ್ನು ಗಮನಿಸಿ. "It is the distinctive feature of his (Basava's) mission that while illustrions, religions and social reformers in India before him, had each laid his emphasis on one or other items of religious and social reform, either subordinating more or less other items to it, or ignoring then altogether, BASAVA sketched and boldly tried to work out a large and comprehensive programmes of social reform with the elevation and independence of woman-hood as its guiding point.

Neither social conferences which are annually held in these days in several parts of India, or Indian social reformers, can improve upon that programme as to the essentials. As was in substance remarked by the late Sir James Campbell, whose knowledge of Indian History, customs and manners was almost phenominal, the present day social reformers in India is but speaking the language and seeking to enforce the mind of Basava."

ನಿಜ, ಆದರೆ, ಇಂದಿನ ವೀರಶೈವ ಸಮಾಜದ ಅನೈಕಮತ್ಯ, ಒಡಕು ವೈಷಮ್ಯ ಗಳಿಗೆ ಕಾರಣರಾರು ? ಕ್ರಾಂತಿಯ ಕೊನೆಯ ದಿನಗಳಲ್ಲಿ ತಮ್ಮ ಮಾತನ್ನು ಮೀರಿ ಉದ್ರಿಕ್ತತೆಯಿಂದ ವರ್ತಿಸಿದ ಸಮಾಜಕ್ಕೆ ಶರಣರೇನಾದರೂ ಶಾಪ ಹಾಕಿರಬಹುದೆ ? ಇದರಿಂದ ನಮ್ಮನ್ನು ಬಿಡುಗಡೆ ಮಾಡಲು ಒಬ್ಬ ಅಲ್ಲಮ, ಒಬ್ಬ ಬಸವ, ಒಬ್ಬ ಸಿದ್ಧ ರಾಮ, ಒಬ್ಬ ಮಹಾದೇವಿ ಮೂಡಿ ಬರಬಹುದೆ ? ಆ ಪುಣ್ಯದಿನವಿನ್ನೆಂದಿಗೋ ?

---

# ಸೃಷ್ಟಿಯ ಕಾಯಕತತ್ತ್ವ.



ಲೇಖಕರು : 'ಅಚಲ ಶರಣ್'

ವಿಶ್ವವೈಶಿಷ್ಟ್ಯಗಳ ಮಾಲೆಯಲ್ಲಿ ಕಾಯಕದ ನೆಲೆ ಇರುವುದೆಂದರೆ; ಅದು ಸಹಜವೇ ಸರಿ. ಜೀವನ ವೈವಿಧ್ಯತೆಯ ಭಂಡಾರದಲ್ಲಿ ಕಂಗೊಳಿಸುವ ಕಾಯಕ, ವಿಶ್ವ ವೈಶಿಷ್ಟ್ಯತೆಗೂ ಮೆರುಗಾಗಿ ಬೆಳೆದಿದೆ. ಇದರ ಸತ್ಯಾಸತ್ಯತೆಯನ್ನು ವಿವೇಚಿಸುವ ಕಾರ್ಯ ನಮ್ಮದಾದರೆ, ಸಂತೋಷವು ನಮ್ಮ ಪಾಲಿಗೆ ಬಂದೀತು. ಅಲ್ಲದೆ ಈ ದಿಶೆಯಲ್ಲಿ ನಡೆವ ವಿಚಾರ ವಿವೇಚನ ಮಂಥನಗಳಿಂದ 'ಕಾಯಕ ಜ್ಞಾನ' ನವನೀತವನ್ನು ಪಡೆದರೆ, ನಡೆಸುವ ನಮ್ಮ 'ಕಾಯಕವೂ' ಸಾರ್ಥಕವೇ ಸೈ.

ಸೃಷ್ಟಿಯ ವಿವಿಧೋದ್ದೇಶಗಳ ಮೂಲವೇ 'ಕಾಯಕ'ವೆನ್ನುವುದು ಅಣುವಿನಿಂದ ಅತಿಮಾನಸ ಅಥವಾ ಅದಕ್ಕಿಂತ ಹೆಚ್ಚಿನ ಸ್ಥಿತಿಗೇರಿದರೂ ಕಂಡು ಬರುವುದೆಂದರೆ ಅಸತ್ಯವೇನಲ್ಲ. ಈ ಸತ್ಯದ ಉಲ್ಲೇಖವನ್ನು ಅನುದಿನದ ಬಾಳಿನಲ್ಲಿ ವೀಕ್ಷಿಸಿದಾಗ ಸುಗೋಚರವಾಗುವುದು.

ಶಿಲೆಯೊಂದಕ್ಕೆ ಶಿಲ್ಪಿ ಕೊಟ್ಟ ಉಳಿಯ ಸಹಸ್ರಾರು ಪೆಟ್ಟುಗಳಿಗೆ ಒಂದು ಸುಂದರ ಪಾವನ ಮೂರ್ತಿ ಅವತಾರವಾದರೆ ಅಥವಾ ಅದೇ ಶಿಲೆ ನೂರು ಉಳಿಯ ಪೆಟ್ಟುಗಳಿಂದ ಭಕ್ತರ ಹೃದಯದಲ್ಲಿಳಿವ ವಾತ್ಸಲ್ಯ ಶಿವಲಿಂಗದಾಕೃತಿಯಂತೆ ಕಂಡು ಬಂದರೆ, ಆಗ ಆ ಶಿಲೆಯು ಶಿಲ್ಪಿಗೆ ಕೊಟ್ಟ ಸಹಕಾರವೆನ್ನಬಾರದೇಕೆ? ಹೀಗೆಯೇ ಮರದ ತುಂಡೊಂದನ್ನೂ ತಂದು ಉರಿಸಿ ಬೂದಿ ಮಾಡಿದಾಗಾಗಲಿ, ಅಥವಾ ಅದೇ ಮರದ ತುಂಡೊಂದನ್ನು ಕೆತ್ತಿ ಸುಂದರಾಕೃತಿಯನ್ನು ಕಾಣಿಸಿದಾಗಾಗಲಿ, ಈ ಎರಡು ಸನ್ನಿವೇಶಗಳಲ್ಲೂ ವಿಭಿನ್ನ ಕಲ್ಪನೆ (ಭಾವನೆ)ಗಳಿದ್ದರೂ ಕಾಯಕದ ಮೌಲ್ಯ ಅವುಗಳಿಗನುಗುಣವಾಗಿ ಅಸ್ತಿತ್ವದಲ್ಲಿರುವುದು ಸ್ಪಷ್ಟವಾಗಿದೆ. ಈ ಉದಾಹರಣೆಗಳಿಂದ

ತಿಳಿಯಬರುವ ಮತ್ತೊಂದು ಅಂಶವೆಂದರೆ ಚೇತನದಲ್ಲಿ ಅಗೋಚರವಾಗಿರುವ ಕಾಯಕಶಕ್ತಿ, ಅಚೇತನದಲ್ಲಿ ಗೋಚರವಾಗಿ ಕಾಣಸಿಗುವುದು ಎಂಬುದೇ ಆಗಿದೆ. ಈ ಸ್ವರೂಪಸತ್ಯತೆಯನ್ನು ಕಂಡ ಕವಿಯ ಬಾಯಲ್ಲಿ 'ಜಡವೇಂದು ಚೇತನದ ಲೀಲೆ' ಎಂದಾಗಿ, ನುಡಿ ಬಂದರೆ ಆಶ್ಚರ್ಯವೇನು?

ಇನ್ನೊಂದು ಹೆಜ್ಜೆ ಮುಂದುವರಿದು ಹೇಳುವುದಾದರೆ, ಈ ಶಿಲಾಮೂರ್ತಿ ಶಿವಲಿಂಗ, ಸುಂದರಾಕೃತಿಗಳು, 'ಮೌನಕ್ಕೆ ಮಾತು ಬಂದ' ಫಲ–ಸಾಹಸ–ಎನ್ನ ಬೇಕು. ಈ ಸಂದರ್ಭದಲ್ಲಿ ಕವಿಯೋರ್ವನ ಸಾಲುಗಳು ನೆನಪಿಗೆ ಬರುವುವು—

'ಮೌನಕ್ಕೆ ಮಾತುಂಟು,'
ನೋಡು ಬಾ ಇಲ್ಲುಂಟು—
ಶಿಲೆಯ, ಕಲೆಯಾಗಿಸುವ ನಂಟಿ
ಮಾತು ಮೌನಕಿಳಿಸಿದ ಗಂಟಿ.

—ಸಾಹಸ ನಡೆದ ರೀತಿ ಹೀಗೆ ಕವಿಗಣ್ಣಿಗೆ ಗೋಚರವಾಗಿದೆ.

ಹೀಗೆಯೇ ಇನ್ನೊಂದು ಉಲ್ಲೇಖವನ್ನು ಮಾಡೋಣ. ಒಬ್ಬ ಸುಂದರ ಹೆಣ್ಣು ಮಗಳ ಸೌಂದರ್ಯವನ್ನು ಕಂಡು ಮುಗ್ಧನಾಗುವ ಯುವಕನ ಭಾವದಲ್ಲಿಯೂ ಅದೇ ಕುರೂಪಿ ಹೆಣ್ಣನ್ನು ಕಂಡು ಹಿಂಡರಿಸುವವನ ಭಾವದಲ್ಲಿಯೂ, ಅಡಗಿರುವ ಹಿನ್ನಲೆ ಏನು? ಎರಡನ್ನು ಕಾಣುವಾಗಿನ ಮನೋಧರ್ಮ ದೃಷ್ಟಿಭಾವಗಳು, ಬೇರೆ ಬೇರೆಯಾದರೂ ನೋಟವಲ್ಲಿನ ಕಾಯಕ ಭಾವವು ಒಂದೇ ಆಗಿಲ್ಲವೇ? ಅಂತೇ ಕುರೂಪಿಯಲ್ಲಿನ ಕುರೂಪ ಸುಂದರಿಯಲ್ಲಿನ ಸೌಂದರ್ಯವು 'ದರ್ಶನಕೃತಿ' ಯ ಅರ್ಥಾತ್ 'ಕಾಯಕ ಶಕ್ತಿಯ' ಅಭಿವ್ಯಕ್ತಿಯಾಗಿದೆ.

ಇಂತು ಸೃಷ್ಟಿಯ ನಿಯತಿ–ಜೀವನದ ಯಾವ ಭಾಗದಲ್ಲಿಯೂ ಈ ಪ್ರಾಥಮಿಕ ತತ್ತ್ವವು ಅಡಗಿರುವುದನ್ನು ಕಾಣಬಹುದು. ಮಾನವನು ಸೃಷ್ಟಿಯ ಮೇಲೆ ತನ್ನ ಕೃತಿ ದರ್ಶನದ ಹಂಬಲಕ್ಕೆ ಹಾತೊರೆವನೇಕೆ ಎಂಬ ಪ್ರಶ್ನೆಯ ಮೇಲೆ ಇದು ಬೆಳಕು ಚೆಲ್ಲುವುದು.

ಇಂದು ಮಾನವ ತನ್ನೊಂದು ಹಂಬಲದಲ್ಲಿ ಸೃಷ್ಟಿಯನ್ನೇ ಪಾದಾಕ್ರಾಂತ ಮಾಡಿಕೊಳ್ಳ ಹೊರಟಿದ್ದಾನೆ. ಒಂದು ದೃಷ್ಟಿಯಿಂದ ಇದು ಹಾಸ್ಯಾಸ್ಪದವೆನಿಸದಿರ ಲಾರದು. ಆದರೆ ಸೃಷ್ಟಿ ತನ್ನ ಉದ್ದೇಶಕ್ಕನುಗುಣವಾಗಿ, ಮಾನವನಿಂದ ಬಯಸುವ ಚರ್ಯೆ ಇದೇ ಹೌದು–ಇದಕ್ಕೂ ಒಂದು ಮಿತಿ ಇದೆ. ಇರಲಿ ಅದು ಮುಂದಿನ ವಿಚಾರ. ಸೃಷ್ಟಿದೇವಿಗೆ ಅದಾವ ಆನಂದವೋ ಸಂತೋಷವೋ, ಏನೋ ತನ್ನ ಈ ಮನು ಮಕ್ಕಳ ರೀತಿಯನ್ನು ನೋಡುತ್ತಾ ಸಹಿಸುವಳು. ತಾಯಿಗೆ ತನ್ನ ಮಕ್ಕಳು ತನ್ನ ಮೇಲೆ ಲಗ್ಗೆ ಹತ್ತಿ ಕುಣಿದು ಕುಪ್ಪಳಿಸಿದರೂ ಅವಳ ಸಂತೋಷಕ್ಕೆ ಭಂಗಬಾರದು.

ಬವಲು ಮಕ್ಕಳನ್ನು ಪ್ರೋತ್ಸಾಹಿಸುವಳು. ಅದರಿಂದಾಗಿ, ಮಕ್ಕಳಿಗಾದರೋ ತಮ್ಮ ಕಾರ್ಯದಲ್ಲಿ ವಿಜಯಿಗಳಾದೆವೆಂಬ 'ಬಾಲಸಂತೋಷ'ವಾಗುವುದೂ ಸಹಜವಾಗಿದೆ. ಹೀಗೆಯೇ ಸೃಷ್ಟಿಯ ಮಾತೃಹೃದಯ ಮಿಡಿಯುವುದು.

ಈ ದೃಷ್ಟಿಯಿಂದ, ವಿಜ್ಞಾನಿಯಾಗಲಿ, ಸತ್ಯಶೋಧಕನಾಗಲಿ ಸೃಷ್ಟಿಯ ಆಳ ತಿಳಿವ ಸನ್ನಾಹ ಮಾಡಿದಾಗ, ಸೃಷ್ಟಿಮಾತೆಗೆ ಸಂತೋಷವೇ ಆದೀತೆಂದು ಹೇಳ ಬಹುದು. ಅಂದರೆ, ಅವರುಗಳಲ್ಲಿ ಬೆಳಸುಗೊಂಡ 'ಕಾಯಕ ಪ್ರವೃತ್ತಿ' ಸೃಷ್ಟಿಗೆ ಎಂದೂ ಬೇಕಾದ ಶುಭ ಕಾರ್ಯ. ವಿಜ್ಞಾನಿಯಾದರೋ ವೈಜ್ಞಾನಿಕವಾಗಿ ವಿಶ್ವದ ಸತ್ಯಾನ್ವೇಷಣೆಗೆ ತೊಡಗಿ, ಶಾಂತಿಯ ಪ್ರೇರಕನಾಗಬಹುದು ; ಅಥವಾ, ಬಾಂಬುಗಳ ನಿರ್ಮಾಣಗಳಿಂದ, ವಿನಾಶದ ಕಹಳೆ ಊದಬಹುದು. ಅಂತೇ ಅವನು ಸೃಷ್ಟಿಸುವ ಪರಮಾಣು ಶಕ್ತಿ ಶಾಂತಿಗೂ ಪೂರಕ, ವಿನಾಶಕ್ಕೂ ಪ್ರೇರಕ. ಸತ್ಯಶೋಧಕ ನಾದರೊ, ಸತ್ಯಶೋಧನೆಯ ನೆಪದಲ್ಲಿ, ಜನತೆಯನ್ನು ವಂಚಿಸಿ ದುರುದ್ದೇಶದ ಶಿಖರ ವನ್ನೇರಿ ಕುಕ್ರಾಂತಿ ಪ್ರೇರಕನಾಗಬಹುದು ಅಥವಾ ತಾನು ಹಿಡಿದ ಗುರಿಯನ್ನು, ನಿರ್ವಂಚನೆಯಿಂದ – ಸಾಕ್ಷಾತ್ಕಾರದಿಂದ – ನಿರಂತರ ತಪಸ್ಸಿನಿಂದ ಸಾಧಿಸಿ ಜನತಾ ಜಗತ್ತಿನ ಸತ್ಕ್ರಾಂತಿಗೆ ಕಾರಣನಾಗಬಹುದು. ಇಲ್ಲಿ ವಿಜ್ಞಾನಿ ಹಾಗೂ ಸತ್ಯಶೋಧಕನ ಪ್ರವೃತ್ತಿಗಳು ಸೌಮ್ಯ ಮತ್ತು ಅಸೌಮ್ಯಗಳಾಗಿದ್ದಾಗ ಒದಗುವ ಫಲ ತಿಳಿದಂತಾ ಯಿತು. ಅಂದರೆ, ಪರಿಣಾಮಗಳು ಭಿನ್ನವಾದರೂ, ನಡೆಸುವ 'ಕಾಯಕ' ಶಕ್ತಿ ಒಂದೇ ಆಗದೆ. ಸೃಷ್ಟಿಗೆ, ಪರಿಣಾಮ ಗೌಣವಾದರೂ, 'ಕಾಯಕ' ಗೌಣವಾಗಬಾರ ದೆಂದೇ ಅದರ ಇಚ್ಛೆ. ಅಂತೇ ಸೃಷ್ಟಿಯ ಮೂಲದಲ್ಲಿ 'ಕಾಯಕ' ತತ್ತ್ವದ ಅಸ್ತಿತ್ವ ವಿದೆ ಎನ್ನಬೇಕು.

ಇನ್ನು ಈ 'ಮಾನವ ಕಾಯಕ' ವ್ಯಾಪ್ತಿ ಎಲ್ಲಿಯವರೆಗೆ ಎಂಬುದನ್ನು ನೋಡೋಣ. ಒಂದು ಕಾಲಕ್ಕೆ, ಭೂಮಿ, ಸೂರ್ಯ, ಒಬ್ಬರೂ ಇಲ್ಲದಂತೆ ವಿಶ್ವಗರ್ಭ ದಲ್ಲಿ ಅಡಗಿಹೋದಾಗ, ಸೃಷ್ಟಿಯ ಮೇಲೆ ವಿಜಯದ ಹಂಬಲವುಳ್ಳ, ಈ ವಿಜಯ ಪ್ರವೃತ್ತಿಕಾರರ ವೈಭವದ ಹೆಸರೆಲ್ಲಿ ?........ನುಚ್ಚುನೂರಿನಾಳದಲ್ಲಿ ! ಅಣುವಿನಿಂದ ವಿಕಾಸಗೊಂಡ ಮಾನವ ಜೀವನ ಹಾಗೂ ಅವನ ಭವಿತವ್ಯವೆಲ್ಲವೂ, ಆ ಮಹಾ ಪ್ರಲಯದಲ್ಲಿ ವಿಲೀನವಾಗಿ ಹೋಗುವ ಸನ್ನಿವೇಶದ ಕಲ್ಪನೆ ಮಾಡಿಕೊಂಡರೆ, ಮಾನ ವನು ಹೆಸರಿಸಿಕೊಳ್ಳುವ, ಸೃಷ್ಟಿಯ ಮೇಲಿನ ವಿಜಯ ವೈಜಯಂತಿಯು, ಸೃಷ್ಟಿಯು ಅವನಿಗೆ ಮಾಡುವ ಅಂತರಿಕ ಅಪಹಾಸ್ಯವೋ, ಅಗೋಚರ ವ್ಯಂಗ್ಯವೋ ಎನಿಸುವುದು. ಹೀಗೆಂದಾಕ್ಷಣ, ತನ್ನ ರುದ್ರಭೀಷಣತೆಯಿಂದ ಮಾನವ ಹೃದಯವನ್ನು ತಲ್ಲಣಿಸುವಂತೆ ಮಾಡಿ ಅವನನ್ನು ನಿರಾಶೆಯ ಕಂದರಕ್ಕೆ ತಳ್ಳುವ ಕೀಳು ಸಾಹಸ ಸೃಷ್ಟಿಯದಲ್ಲ. ಅದಾ ಗಿದ್ದರೆ, ಸೃಷ್ಟಿಯ ಬೆಲೆ ಕೀಳಾಗುತ್ತಿತ್ತು. ಇರಲಿ. ಅದರ ಶಕ್ತಿಯಾದರೂ ಎಂಥಹದು ? ತನ್ನ ವಿರುದ್ಧವೇ ಕತ್ತಿ ಎತ್ತಿ, ತುಳಿಯಲೆಳಸುವ ಮಾನವ ಪ್ರವೃತ್ತಿಯನ್ನು ಋಜು

ಮಾರ್ಗದೆಡೆ ದಿಗ್ದರ್ಶಿಸಿ, ತನ್ನ ಉದ್ದೇಶಕ್ಕೆ ಭಂಗಬಾರದಂತೆ, ಅವನಲ್ಲಿ ಹೋರಾಟ ಪ್ರವೃತ್ತಿಯನ್ನು ಪ್ರಚೋದನಗೊಳಿಸಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಬೇಕಾದ ಸೃಷ್ಟಿಗೆ, ಸಹಸ್ರಾಕ್ಷನಗಳಿದ್ದರೂ ಸಾಲದು. ಕೋಟಿ ಸವ್ಯಸಾಚಿಗಳ ಶಕ್ತಿಯೂ ಅದಕ್ಕೆ ಕಡಮೆಯೇ. ಸೃಷ್ಟಿಯು ಈ ಕಾಯಕನೀತಿಯನ್ನು ಗಮನಿಸಿದಾಗ, ನಾಶ ಅದರ ಗುರಿಯಲ್ಲ; ಆಶಯವೇ ಅದರ ಸಿರಿ, ಎಂದು ತಿಳಿಯುವುದು. ಮಾನವನ ಕಾಯಕದ ವ್ಯಾಪ್ತಿಗಾದರೂ ಇದೇ ನೀತಿ ಅನ್ವಯಿಸುವುದು. ಅಂದರೆ ಅವನ ಕಾಯಕ ನಡೆಯಬೇಕಾದುದು ವಿನಾಶಕ್ಕಲ್ಲ; ಆಶಯಕ್ಕೆ. ಈ ತತ್ತ್ವವನ್ನು ಚೇತನ ಅಚೇತನಗಳಲ್ಲಿ ಸಮನಿಸಲು ಸೃಷ್ಟಿ ಶಕ್ತಿಯು ಮಾಡುವ ಕಾಯಕವನ್ನು ಕಂಡಾಗ ಕಾಯಕದ ಅಮೂಲ್ಯ ಬೆಲೆ-ವೈಶಿಷ್ಟ್ಯ-ನಮಗರಿಯವೇನು? ಚೇತನಕ್ಕಾಗಲಿ, ಅಚೇತನಕ್ಕಾಗಲಿ, ಈ 'ಕಾಯಕ ತತ್ತ್ವ' ಮೂಲ. ಅಂತೇ ಕಾಯಕ ತತ್ತ್ವ ವೈಶಿಷ್ಟ್ಯಪೂರ್ಣವಾಗಿದೆ.

ಕಾಯಕದ ಬಾಳು ಅಮರ. ಕೇವಲ ಹಿಡಿಕೂಳಿಗಾಗಿ ಯತ್ನಿಸುವ ಮಾನವನ ಕಾಯಕ, ಕಾಯಕವೆನಿಸದು. ತನ್ನ ಬಾಳನ್ನು ಮೇಲೆ ಏಳಿಸುವುದು ಬಾಳಿನ ಮೂಲೋದ್ದೇಶವನ್ನು ಅರಿತು ಅದರಂತೆ ನಡೆಯುವುದು ಕಾಯಕ.

ಕಾಯಕದ ಬೆಲೆ ನೂರೊಂದಕ್ಕಿಲ್ಲ; ಕೋಟಿಗಿಲ್ಲ; ಶುದ್ಧ ಕಾಯಕ ಒಂದಾದರೆ ಅದೇ ಅಗಣಿತ ಕೈಲಾಸ.

ಕಾಯಕದ ಮಹತ್ವವನ್ನು ಹೀಗೆ ಅರಿತ ನಮ್ಮ ಹಿರಿಯರು ನುಡಿದ ಮಾತುಗಳಿವು :—

'ಕಾಯಕವೇ ಕೈಲಾಸ'
ಕರ್ಮಕೌಶಲವೇ ಪ್ರಜ್ಞೆ
ಕ್ರಿಯೆಯೇ ಸರ್ವಪೂರ್ಣ
'ಕಾಯಕ' ನಾಮವೆ ಸಂಜೀವನ.

---

# ಸದಾಶಿವ ತತ್ತ್ವ - ಸತ್ವ.



ಸೂರ್ಯಸಿಂಹಾಸನಾಧೀಶ್ವರ ಶ್ರೀ ಜ. ಚ. ನಿ.

" ಸದಾಶಿವ ಮುಖಾಶೇಷ ತತ್ತ್ವೋನ್ಮೇಷ ವಿಧಾಯಿನೇ
ನಿಷ್ಕಲಂಕ ಸ್ವಭಾವಾಯ ನಮಃ ಶಾಂತಾಯ ಶಂಭವೇ "

—ಸಿದ್ಧಾಂತ ಶಿಖಾಮಣಿ.

**ಮೂ**ವತ್ತಾರು ತತ್ತ್ವಗಳಲ್ಲಿ ಮೂರನೆಯ ತತ್ತ್ವ ಸದಾಶಿವ. ಮೂವತ್ತು ಮೂರು ತತ್ತ್ವಗಳಿಗೂ ಮೂವತ್ತು ಮೂರು ಕೋಟಿ ದೇವತೆಗಳಿಗೂ ಮೂಲವಾದ ಸದಾಶಿವ ತತ್ತ್ವ ಮಹತ್ವ ಮಾತಿಗೆ ನಿಲುಕದಂತಹದು. ಸರ್ವಸೃಷ್ಟಿಸಂಭವ ವಿಭವವುಳ್ಳ ಸಮ್ಯಕ್ ದೃಷ್ಟಿ ಪ್ರಭಾವವುಳ್ಳ ಸದಾಶಿವ ಸತ್ವವು ವರ್ಣನೆಯ ಸೀಮೆಯ ಮೀರಿದಂತಹದು.

ಶಿವನು ಸಾಕಾರನಾಗಬೇಕಾದರೆ ಸಕಲ ಸೃಷ್ಟಿಕರ್ತನಾಗಬೇಕಾದರೆ ಸದಾಶಿವ ಮುಖದಿಂದಲೆ! ಸೃಷ್ಟಿ ಸಂಬಂಧವಿದ್ದರೂ ಆತ ಅಕಲಂಕ; ಸದಾ ಶಾಂತ; ಸುಖ ಪ್ರದಾತ.

ಇತಿಹಾಸದ ಹಿಡಿತಕ್ಕೆ ಸಿಕ್ಕದ-ಸೃಷ್ಟಿಯ ಸೆಳತಕ್ಕೂ ಸಿಕ್ಕದ ಮೂಲ ಆ ಸದಾ ಶಿವ ವ್ಯಕ್ತಿತ್ವ ತಾತ್ವಿಕ ಪುಸ್ತಕಗಳಲ್ಲಿ ಸಾಂಸ್ಕೃತಿಕ ಸಾಹಿತ್ಯ ಪ್ರಪಂಚದಲ್ಲಿ ತುಂಬಿ ತುಳು ಕಾಡಿದೆ. ಸಿರಿಸಂತೆ ಬಹುವಾಗಿ ಬಳಕೆಯಿದ್ದರೂ ನಿತ್ಯದ ತಿಳುವಳಿಕೆಗೆ ನಿಲುಕ ದಂತಿದೆ. ಆ 'ಸದಾಶಿವ' ಎಂಬ ನಿರ್ಮಲ ನಾಮವು ನಿಗಮಾಗಮಾದಿ ಗ್ರಂಥಗಳಲ್ಲೆಲ್ಲ ಗಂಭೀರವಾಗಿ ಘೋಷಿತವಾಗಿದೆ; ಭಾವುಕರ ಭಾವಾಕರ್ಷಿತವಾಗಿದೆ. ಆ ನಿರ್ಮಲ ನಾಮದಲ್ಲಿ ಅದೆಂತಹ ಅಚ್ಚಳಿಯದ ಮಂಗಳತೆ ಮಡುಗಟ್ಟಿ ನಿಂತಿದೆ; ಮನೋಹರತೆ

ಮನೆ ಮಾಡಿದೆ; ಮಹಾ ಸತ್ಯತೆ ಶಾಶ್ವತಗೊಂಡಿದೆ? ಅದು ಸದಾ-ಸತ್ಯಂ, ಅದು ಸದಾ-ಶಿವಂ; ಅದು ಸದಾ-ಸುಂದರಂ!

ಆ ಸದಾಶಿವನು ಶೈವ ಸಂಸ್ಕೃತಿಯ ಹೃದಯ; ಶೈವಧರ್ಮದ ದಿವ್ಯ ನಿಲಯ· ಸರ್ವ ವಿದ್ಯೆಗಳ ಒಡೆಯ; ಸರ್ವ ಪ್ರಾಣಿಗಳ ಒಡೆಯ. ಶಿವಶಕ್ತಿಯರಿಂದ ಮುಮ್ಮೊದಲು ವ್ಯೆದೋರಿದವನು ಸದಾಶಿವನು; ಮೊತ್ತಮೊದಲ ಮಗನು. ಸಾಕಾರ ನಿರಾಕಾರಗಳೆರಡನ್ನೂ ಪ್ರತಿನಿಧಿಸುವ ಏಕೈಕ ಮೂರ್ತಿ ಆ ಸದಾಶಿವನು.

" ಮೂರ್ತಾಮೂರ್ತ ಸ್ವರೂಪೇಣ ಯಥಾ ವಾಯುರ್ವಿರಾಜತೇ
ಸದಾಶಿವ ಸ್ತಥಾಭಾತಿ ಸರ್ವಾನುಗ್ರಹಕಾರಕಃ |
ಶಿವತತ್ತ್ವಂ ಮಹಾಸೇನ ನಿಷ್ಕಲಂ ಚೇತಿ ಕೀರ್ತಿತಂ
ಸಕಲಂ ನಿಷ್ಕಲಂ ಚೈವ ಸದಾಶಿವಮಿಹೋಚ್ಯತೇ || "

ಸರ್ವಾನುಗ್ರಹ ಸಾಮರ್ಥ್ಯವುಳ್ಳವನು ಆ ಸದಾಶಿವನು. ಸಂಸ್ಕೃತ ಸಾಹಿತ್ಯದಲ್ಲಿ ವಚನ ವಾಙ್ಮಯದಲ್ಲಿ ಸದಾಶಿವನಿಗೆ ಸರಿಮಿಗಿಲಿಲ್ಲದ ಅಗ್ರಸ್ಥಾನವಿದೆ. ಆ ಸದಾಶಿವ ತತ್ತ್ವ ಹೇಗೆ ಹಿರಿದೋ ಹಾಗೆ ಸತ್ವವೂ ಹಿರಿದಾಗಿದೆ. ಮಹತ್ವವೂ ಮಹೋನ್ನತ ವಾಗಿದೆ.

" ಸರ್ವೇಶ್ವರಾಯ ಸದಾಶಿವಾಯ ಶ್ರೀಮನ್ಮಹಾದೇವಾಯ ನಮೋನಮಃ "
ಎಂದು ಯಜುರ್ವೇದೀಯ ಶ್ರುತಿಯು ಭಜಿಸಿದೆ. ಆ ಸದಾಶಿವನು ಸರ್ವೇಶ್ವರ, ಮಹೇಶ್ವರ ಆತನಿಗೆ ನಮಸ್ಕಾರ ಎಂದು ಎದೆಯಾರ ಬಣ್ಣಿಸಿದೆ; ಎಲ್ಲಕ್ಕೂ ಮಾನ್ಯ ನನ್ನಾಗಿಸಿದೆ.

ಮೂವತ್ತಾರು ತತ್ತ್ವಗಳಲ್ಲಿ ಮೊದಲಿನ ಶಿವತತ್ತ್ವನಾದ. ಎರಡನೆಯ ಶಕ್ತಿ ತತ್ತ್ವ ಬಿಂದು. ಮೂರನೆಯ ಈ ಸದಾಶಿವ ತತ್ತ್ವ ಕಲೆ; ಕಳೆ. ಇದಲ್ಲದೆ ಕ್ರಮ ವಾಗಿ ನಾಮರೂಪು ಕ್ರಿಯೆ ಎಂಬುದಾಗಿಯೂ ಹೇಳುವುದುಂಟು. ಕಳಾ ಮತ್ತು ಕ್ರಿಯಾರೂಪ ಸದಾಶಿವ ತತ್ತ್ವಸತ್ವಗಳ ಘನತೆ ಗೌರವತೆಗಳನ್ನು ಗಣಿಸಬೇಕಾಗಿಲ್ಲ. ನಿರ್ಗುಣ ಶಿವಕಲೆಯು ಸಗುಣ ಸದಾಶಿವ ಕಳೆಯಾಗಿ ಕಮನೀಯವಾಗಿ ಕಂಪು ಹೂವಾಗಿ ಅರಳುತ್ತದೆ. ಆ ಅಗೋಚರ ಜ್ಞಾನರೂಪ ಶಿವತತ್ತ್ವವು ಗೋಚರಿಸುವ ಕ್ರಿಯಾರೂಪ ಕಲಾರೂಪ ಸದಾಶಿವ ತತ್ತ್ವವಾಗಿ ರಸಫಲವಾಗುತ್ತದೆ. 'ಕಲಾ ವಿದ್ಯೇ ಸದಾಶಿವಃ' ಶ್ರೀ ತಂತ್ರಾಲೋಕ ಕೃತಿ ಹೀಗೆಂದಿದೆ.

" ಸದಾಶಿವಃ ಸ್ವಕಾಲಾಂತೇ ಬಿಂದ್ವರ್ಧೇಂದು ನಿರೋಧಿಕಾಃ
ಆಕ್ರಮ್ಯ ನಾದೇ ಲೀಯೇತ ಗೃಹೀತ್ವಾ ಸಚರಾಚರಮ್ "

—ಶ್ರೀ ತಂತ್ರಾಲೋಕ.

ಸದಾಶಿವನು ಕಲಾತ್ಮಕನಾದ ಕಾರಣ ಆತನಲ್ಲಿ ನಾದ ಬಿಂದುಗಳೂ ಬೆರದಿವೆ. ಕ್ರಿಯಾತ್ಮಕನಾದ ಕಾರಣ ನಾಮರೂಪಗಳೂ ರಂಜಿಸಿವೆ. ಬಿಂದು ಕಲೆಗಳೊಡನೆ ನಾದದಲ್ಲಿ ಲೀನನಾಗಬಲ್ಲನು ಸದಾಶಿವನು. ಅಷ್ಟೇ ಅಲ್ಲ ಸಚರಾಚರವನ್ನೂ ನಾದದಲ್ಲಿ ಲೀನಗೊಳಿಸಬಲ್ಲನು ಸದಾಶಿವನು. ನಾದಬಿಂದು ಕಳಾತ್ಮಕನಾದ ಸದಾಶಿವನು ಚಿದಾಕಾಶ ಸ್ವರೂಪನು. ನಾದದ ನೆಲೆ ಮುಗಿಲು. ಆ ಮುಗಿಲಲ್ಲಿ ಮೂಡಿದ ಚಿತ್ಕಳಾ ಭಾನು ಆ ಸದಾಶಿವನು. ಆ ಭಾನು ಮೂಡಿದುದೆ ಸೃಷ್ಟಿ ; ಮುಳುಗಿದುದೇ ಲಯ. ಲಯವೆಂದರೆ ಇಲ್ಲಿ ನಾಶವಲ್ಲ : ಸುಷುಪ್ತಿ.

" ತತಃ ಸದಾಶಿವೋ ದೇವಃ ಸ್ವಮಾನೇನ ಚ ಸಂಹರೇತ್
ಸೃಜತೇ ಚ ಪುನರ್ಭೂಯ ಆತ್ಮೀಯೇ ದೇವ್ಯಹರ್ಮುಖೇ "

ಹೀಗೆ ಸೃಷ್ಟಿ ಸಂಹಾರಗಳಿಗೆ ಕಾರಣನಾದ ಸದಾಶಿವನು ಸ್ಥಿತಿಗೂ ಕಾರಣನಾಗಿದಾನೆ. ಸರ್ವಾವಕಾಶ ಸ್ವರೂಪನಾಗಿದಾನೆ. ಬ್ರಹ್ಮಾಂಡಾಕಾಶವಾಗಲಿ, ಪಿಂಡಾಂಡಾಕಾಶವಾಗಲಿ ಅವರ ಸ್ಥಾನ ಹಿರಿಯದು. ಆ ಆಕಾಶಾಂಗದಲ್ಲಿ ಆಕಾರಗೊಂಡ ಸದಾಶಿವನ ಸ್ಥಾನವೂ ಹಿರಿಯದು ; ಸ್ವರೂಪವೂ ಹಿರಿಯದು.

" ಪೃಥ್ವ್ಯಾಂ ಬ್ರಹ್ಮಾ, ಜಲೇ ವಿಷ್ಣುಸ್ತಥಾ ರುದ್ರೋ ಹುತಾಶನೇ
ಈಶ್ವರಃ ಪವನೇ ದೇವೋ ಹ್ಯಾಕಾಶೇ ತು ಸದಾಶಿವಃ "
" ಸೋಮ ಸೂರ್ಯಾಗ್ನಿ ಮಧ್ಯಸ್ಥ ವ್ಯೋಮ ವ್ಯಾಪಿನ್ ಸದಾಶಿವಃ "

ಸದಾಶಿವನ ಸೃಷ್ಟ್ಯಂಗ ವ್ಯೋಮ. ಆತ ಸೂರ್ಯಧಾಮ. ಮಂಗಳನಾಮ. ಪಂಚಬ್ರಹ್ಮರಿಗೆ ಪ್ರಪ್ರಥಮ. ಆತನ ಪಿಂಡಾಂಡಾಕಾಶಕ್ಕೂ ಆತನಿಗೂ ಇರುವ ಅಂಗಾಂಗಿ ಭಾವ ವರ್ಣನೆಯನ್ನು ಇಲ್ಲಿ ನೋಡಿ :

" ಆ ಭ್ರೂಮಧ್ಯಾತ್ತು ಮೂರ್ಧಾಂತಮಾಕಾಶಸ್ಥಾನಮುಚ್ಯತೇ
ವ್ಯೋಮವೃತ್ತಂ ಚ ಧೂಮ್ರಂ ಚ ಹಕಾರಾಕ್ಷರಭಾಸುರಂ
ಆಕಾಶೇ ವಾಯುಮಾರೋಪ್ಯ ಹಕಾರೋಪರಿ ಶಂಕರಂ
ಬಿಂದುರೂಪಂ ಮಹಾದೇವಂ ವ್ಯೋಮಾಕಾರಂ ಸದಾಶಿವಂ "

—ಯೋಗ ತತ್ತ್ವೋಪನಿಷತ್.

ಭ್ರೂ ಮಧ್ಯದಿಂದ ಮೇಲೆ ಸದಾಶಿವನ ಸ್ಥಾನ. ಆತನ ಆ ಅಂಗರೂಪ ಆಕಾಶ ಬ್ರಹ್ಮಾಂಡದಾಕಾಶದಂತೆ ವೃತ್ತಾಕಾರವಾಗಿದೆ. ಧೂಮ್ರವರ್ಣವುಳ್ಳದಾಗಿದೆ. ಪ್ರಸಾದ ಮಂತ್ರವಾದ ಹಕಾರಾಕ್ಷರದಿಂದ ಬೆಳಗಿದೆ. ಅದು ನಾದಮಯವಾಗಿದೆ. ಅಲ್ಲಿ ಪ್ರಾಣರೂಪ ಸಮೀರಣದ ಸುಳುಹಿದೆ. ಆ ಸುಳುಹಿನಲ್ಲಿ ಹಕಾರವನೇರಿಸ ಎಲ್ಲೆಲ್ಲಿಯೂ ಸುಳಿದು ಅಂದರೆ ಪಿಂಡಾಂಡವನ್ನೆಲ್ಲ ಸುಳಿದು ಸುಖವೀಯುತ್ತ ಬಿಂದು ರೂಪನೆನಿಸುತ್ತ ಇರುವ ಆ ಮಹಾದೇವ ಸದಾಶಿವನು ವ್ಯೋಮಾಕಾರನಾಗಿದಾನೆ.

ಎಂತಹ ಸುಂದರವಾದ ವರ್ಣನೆಯಿದು? ಪ್ರಸನ್ನ ಜೀವಿಗೆ ಅಂದರೆ ಪ್ರಸಾದಿಗೆ ಪ್ರಾಣ ಲಿಂಗಿಗೆ ಇದಕ್ಕಿಂತ ಬೇರೆ ಮಹೋನ್ನತ ಜೀವನವಿಲ್ಲ.

"ಆದೌ ವ್ಯೋಮ್ನಿ ಸ್ಥಿತೋ ಭಾತಿ ಸಾಕ್ಷಾದ್ದೇವಸ್ಸದಾಶಿವಃ
ಸದಾಶಿವಾದೀಶ್ವರೋ ಭೂತ್ಸಂಭೂತಃ ಪವನೇ ಸ್ಥಿತಃ
ಈಶ್ವರಾದಭೂದ್ರುದ್ರೋ ವನ್ಹಿ ತತ್ತ್ವೇ ವ್ಯವಸ್ಥಿತಃ
ರುದ್ರಾದ್ವಿಷ್ಣುರ್ಮಹಾತೇಜೋ ವಾರಿತತ್ತ್ವೇ ವ್ಯವಸ್ಥಿತಃ
ವಿಷ್ಣುತತ್ತ್ವೋದಿತೋ ಬ್ರಹ್ಮಾ ಪೃಥ್ವೀ ತತ್ತ್ವೇ ವ್ಯವಸ್ಥಿತಃ
ಏವಂ ಪರಾಶಕ್ತಿಜಾತಾ ವಿಶ್ವರೂಪಾಃ ಪಂಚಮೂರ್ತಯಃ"

—ವಾತುಲಾಗಮ.

ಪಂಚಮೂರ್ತಿಗಳಿಗೂ ಪಂಚಕೃತ್ಯಗಳಿಗೂ ಪ್ರಪಂಚಕ್ಕೂ ಮೂಲ ಮೂರ್ತಿಯಾದ ಸದಾಶಿವನು ಆ ನಿರಾಕಾರ ಪರಶಿವನ ಚಿಚ್ಛಕ್ತಿಯಿಂದ ಜನಿಸುವನು. ಆ ಪರಶಿವನಿಗೆ ದ್ವಿತೀಯನೆನಿಸುವನು. ಸಾಕಾರಮೂರ್ತಿ, ಸಗುಣ ಬ್ರಹ್ಮ, ಮಹಾದೇವ, ಮೂಲಮೂರ್ತಿ, ವೇದವೇದ್ಯ, ಪಂಚಕೃತ್ಯಾಧೀಶ್ವರ, ಪಂಚವಿಂಶತಿ ಲೀಲಾಧಾರಿ, ಜಗದ್ಗುರು ಎಂದು ಮುಂತಾಗಿ ಹೆಸರು ತಳೆವನು.

"ಧೃತ ಕಾಠಿಣ್ಯವನ್ಮೂರ್ತಿ ಸಚ್ಚಿದಾನಂದ ಲಕ್ಷಿತಃ
ಮೂಲಮೂರ್ತಿ ರ್ಮಹಾದೇವೋ ವೇದವೇದ್ಯ ಸ್ಸದಾಶಿವಃ
ಆದಿಕರ್ತಾ ಜಗನ್ನಾಥ ಶೂಲಪಾಣಿರಿತಿಶ್ರುತಿಃ" —ಸ್ಕಾಂದ.

ಸದಾಶಿವನ ಸ್ವರೂಪವನ್ನು ಲಕ್ಷಣವನ್ನು ಸ್ಥಾನವನ್ನು ಮಾನವನ್ನು ನಾಮಗಳನ್ನು ಜಾನಕ್ರಿಯಾಧಿಕಾರವನ್ನು ಬಿಚ್ಚಿಬಿಚ್ಚಿ ಬಣ್ಣಿಸಿದೆ ಈ ಸ್ಕಾಂದಪುರಾಣ ವಚನ.

ಎಲ್ಲಕ್ಕೂ ಆದಿಕರ್ತನು ಸದಾಶಿವನು. ಸದ್ಯೋಜಾತಾದಿಗಳು ಸದಾಶಿವನ ಪಂಚಮುಖಗಳು. ಇದರಿಂದಾಗಿ ಸದಾಶಿವನೇ ಪಂಚವಕ್ತ್ರ ಗಣಾಧೀಶನು. ಇವನ ಆ ಮುಖಗಳಿಂದ ನಾಲ್ಕು ವೇದಗಳು, ಇಪ್ಪತ್ತೆಂಟು ಆಗಮಗಳು, ಸಕಲ ದೇವತೆಗಳು ಸಕಲ ಲೋಕಗಳು, ಸಕಲ ಪ್ರಾಣಿಗಳು ಸೃಷ್ಟಿಗೊಳ್ಳುವವು. ಇದರಿಂದಾಗಿ ಸದಾಶಿವನು ಸಕಲ ಜಗಜ್ಜನಕನು; ನಾಯಕನು. ಭೋಗಮೋಕ್ಷ ಪ್ರದಾಯಕನು.

"ನಿರ್ಗುಣಶ್ಶಿವ ಇತ್ಯುಕ್ತ ಸ್ಸಗುಣಸ್ತು ಸದಾಶಿವಃ
ಸಾದಾಖ್ಯಂ ಚಾತ ಏವೋಕ್ತಂ ಧ್ಯಾನ ಪೂಜಾದಿ ಕಾರಣಂ"

—ಸೂಕ್ಷ್ಮಾಗಮ.

ಸಗುಣನಾಗಿ ಸಕಲರಿಂದ ಪೂಜ್ಯನಾಗಿದಾನೆ ಸದಾಶಿವನು.

ಸ್ಥಾವರ ಜಂಗಮಾತ್ಮಕ ಸರ್ವಜಗತ್ ಸ್ರಷ್ಟೃತ್ವ, ತದಂತರ್ಯಾಮಿತ್ವ, ತದಧಿಷ್ಠಾನತ್ವ, ತನ್ನಿಯಾಮಕತ್ವ, ಸರ್ವ ದೇವತಾಧಿಕ್ಯತ್ವ, ವೇದವೇದ್ಯತ್ವಾದಿ ಗುಣಗಳು ಸದಾಶಿವ ಮಹಾದೇವನಿಗೆ ಮೀಸಲಾಗಿವೆ. ಇದು ಆತನ ಸತ್ವಶರಧಿ, ಸಾರನಿಧಿ.

ಮೂಲೋಕದವರು ಮರವೆಯ ಮಹಾಂಧಕಾರದಲ್ಲಿ ಮಲಗಿ ನಿದ್ದೆಹೋಗಿದ್ದರೂ, ಕುರುಡರಾಗಿದ್ದರೂ ಸಕಲ ವಿದ್ಯಾ ಸ್ವರೂಪನಾದ ಆ ಸದಾಶಿವನು ತನ್ನ ಚಿಚ್ಚಕ್ಷುವನ್ನು ತೆರೆದು ಎಚ್ಚರವಾಗಿದ್ದು ಎದ್ದಿರುತ್ತಾನೆ; ಪಾವನಾಚಾರ ಪರನಾಗಿರುತ್ತಾನೆ:

"ಪಾಶಬದ್ಧೋ ಭವೇಜ್ಜೀವಃ ಪಾಶಮುಕ್ತ ಸ್ಸದಾಶಿವಃ"

ಅಜ್ಞಾನ ಅನಾಚಾರಗಳಿಗೆ ಒಳಗಾದವನೇ ಜೀವ. ಅವೆರಡಕ್ಕೆ ಒಳಗಾಗದವನೇ ಸದಾಶಿವ. ದುಃಖದ ದಾರಿ ಜೀವರತಿ; ಸುಖದ ಹೆದ್ದಾರಿ ಸದಾ-ಶಿವರತಿ.

"ಅನಾಶ್ರಿತಃ ಶೂನ್ಯಮಾತಾ, ಬುದ್ಧಿಮಾತಾ ಸದಾಶಿವಃ
ಈಶ್ವರಃ ಪ್ರಾಣಮಾತಾ ಚ ವಿದ್ಯಾದೇಹ ಪ್ರಮಾತೃತಾ"

ಶ್ರೀ ತಂತ್ರಾಲೋಕೋಕ್ತಿಯಿದು. ಸದಾಶಿವನು ಬುದ್ಧಿಗೆ ತಾಯಿಯಾಗಿದ್ದಾನೆ. ಬುದ್ಧಿ ಬರುವುದು ಸದಾಶಿವನಿಂದ. ಬುದ್ಧಿಜನಕ-ಜನನೀ ಸದಾಶಿವನು. ಬುದ್ಧಿ ಶುದ್ಧಿಯೇ, ಬುದ್ಧಿ ವೃದ್ಧಿಯೇ ಜೀವನ ಪ್ರಗತಿಗೆ ಸಾಧನ; ಸುಗತಿಗೆ ಸಾಧನ. ಆ ಸದ್ಬುದ್ಧಿಪ್ರದಾತನು ಸದಾಶಿವನು.

"ತ್ರಿಷು ಧಾಮಸು ಯದ್ಭೋಜ್ಯಂ ಭೋಕ್ತಾ ಭೋಗಶ್ಚ ಯದ್ಭವೇತ್
ತೇಭ್ಯೋ ವಿಲಕ್ಷಣಃ ಸಾಕ್ಷೀ ಚಿನ್ಮಾತ್ರೋಽಹಂ ಸದಾಶಿವಃ"

ಈ ವೀರಲಿಂಗೋಪನಿಷತ್ ವಾಣಿಯು ಜೀವನು ಸದಾಶಿವನಾಗುವ ಮಾರ್ಗವನ್ನು ಮನಮುಟ್ಟುವಂತೆ ಬೋಧಿಸಿದೆ. ಇಂದ್ರಿಯ ಇಚ್ಛೆಯ ಭೋಗ ಭವಬೀಜ. ಹಾಗೆಳಸುವವ ಜೀವ. ಜಗದ ಜಂಜಡಕ್ಕೆ ಸಿಲುಕುವವ. ಅದರಿಂದ ಭೋಗಾಭಿಲಾಷೆಯ ಬಿಡಬೇಕು. ಭೋಕ್ತೃವಾಗಿ ಭವದಲ್ಲಿ ಬೀಳಬಾರದು. ಅವುಗಳಲ್ಲಿರುವ ಭೋಜ್ಯತ್ವ ಭೋಗತ್ವ ಭಾವವನ್ನು ತನ್ನಲ್ಲಿರುವ ಭೋಕ್ತೃತ್ವ ಕಲ್ಪನೆಯನ್ನು ಮಾರ್ಪಡಿಸಿಕೊಂಡು ಅವುಗಳಿಗೆ ಸಾಕ್ಷಿಯಾಗಿ ನಿಲ್ಲಬೇಕು. ಅಂದರೆ ಲಿಂಗಭೋಗೋಪಭೋಗಿಯಾಗಬೇಕು. ಇದುವೆ ಆಚಾರ; ಇದುವೆ ವಿಚಾರ. ಇವುಳ್ಳವನೇ ಸದಾಶಿವ ಸ್ವರೂಪ; ಸಚ್ಚಿದ್ರೂಪ. 'ದಾತಾ ಭೋಕ್ತಾ ಸದಾಶಿವಃ' ಎಂದರಿವುದೇ ಆಚರಿಸುವುದೇ ಶಿವಪ್ರದೀಪ; ಶಿವಸ್ವರೂಪ.

"ಎರಡು ಕಣ್ಣುಳ್ಳರೆ ಚತುರ್ಭುಜನೆಂಬೆನು.
ಮೂರು ಕಣ್ಣುಳ್ಳರೆ ಮಹೇಶ್ವರನೆಂಬೆನು.
ಮೈಯೆಲ್ಲ ಕಣ್ಣಾದರೆ ಸದಾಶಿವನೆಂಬೆನು...." —ಪ್ರಭುದೇವ.

ಮೈಯೆಲ್ಲ ಎಚ್ಚರುಳ್ಳವ ಸದಾಶಿವ. ಒಂದರಲ್ಲಿ ಎರಡರಲ್ಲಿ ಮೂರರಲ್ಲಿ ಎಚ್ಚರುಳ್ಳವರು ಎಲ್ಲೆಲ್ಲಿಯೂ ಎದುರಾಗುವರು. ಆದರೆ ಅಂಗಾಂಗವೆಲ್ಲ ಅರಿವುಳ್ಳವರು ಕಾಣುವುದು ಕಠಿಣ. ಆಚಾರವುಳ್ಳವರು ಅವಗಾಹನೆಗೆ ಬರುವುದು ಅಪರೂಪ. ಪ್ರಭಾವ ಪೂರ್ಣ

ನಾದ ಪ್ರಭುದೇವನಿಗೆ ಸದಾಶಿವ ತತ್ತ್ವದಲ್ಲಿ ಸತ್ವದಲ್ಲಿ ಇರುವ ದೃಷ್ಟಿ ತಳೆದ ಭಾವ ಎಂತಹವೆಂಬುದು ಮೇಲಿನ ಅವರ ವಚನದಿಂದ ವ್ಯಕ್ತವಾಗುತ್ತದೆ. ಅಲ್ಲದೆ ಮೈಯಲ್ಲ ಕಣ್ಣುಳ್ಳ ಆ ಸದಾಶಿವ ತತ್ತ್ವವೇ ಗುರುತತ್ತ್ವ. ಗುರುತತ್ತ್ವಕ್ಕೆ ಅದೆಷ್ಟು ಕಣ್ಣಿದ್ದರೂ ಸಾಲದು. ಆ ಅಖಂಡ ಅರಿವುಳ್ಳ ಗುರುದೇವನಿಗೆ ಮಿಗಿಲು ದೇವರಿಲ್ಲ.

"ಗುರುದೇವೋ ಮಹಾದೇವೋ ಗುರುದೇವಸ್ಸದಾಶಿವಃ
ಗುರುದೇವಾತ್ಪರಂ ನಾಸ್ತಿ ತಸ್ಮೈ ಶ್ರೀ ಗುರವೇ ನಮಃ"

ಈ ಜಗದ ದೇವರಲ್ಲಿ ಗುರುದೇವನೇ ಸದಾಶಿವನು. ಶ್ರೇಷ್ಠದೇವನು. ಇದರಿಂದ ಗುರು ಸದಾಶಿವನೇ ಆದಿದೇವ. ಅಭಿಜ್ಞಾನದೇವ. ಗುರುದೇವನ ಪರಾಕಾಷ್ಠದೆಸೆ ಸದಾಶಿವತ್ವ.

"ಆದ್ಯರ ವಚನ ಪರುಷ ಕಂಡಯ್ಯ.
ಸದಾಶಿವನೆಂಬ ಲಿಂಗವ ನಂಬುವುದು;
ನಂಬಲೊಡನೆ ನೀ ವಿಜಯ ಕಂಡಯ್ಯ...." —ಬಸವಣ್ಣ.

ಆ ಗುರು ಸದಾಶಿವನೇ ಲಿಂಗವಾಗುತ್ತಾನೆ. ಲಿಂಗ ಬೇರಲ್ಲ; ಸದಾಶಿವ ಬೇರಲ್ಲ. ಆತನೇ ಲಿಂಗವೆಂದು ನೆರೆನಂಬುವುದು. ನಂಬಿದರೆ ವಿಜಯ ನಿಶ್ಚಿತ; ಎಂದು ಹೇಳಿದೆ ಅಣ್ಣನ ಅಮೃತವಚನ. ಇಂತಿದೆ ಪ್ರಮಥ ಪುಂಗವನ ಆಶ್ವಾಸನ.

"ಮಹಾಲಿಂಗ ಸ್ವರೂಪೋಽಯಂ ಶಂಕರಸ್ಸ ಸದಾಶಿವಃ"
ಸದಾಶಿವನು ಬರೀ ಲಿಂಗವಲ್ಲ; ಮಹಾಲಿಂಗವೂ ಆಗಿದಾನೆ.

"ಇಂದ್ರಿಯೇಭ್ಯಃ ಪರಂ ಮನೋ ಮನಸಃ ಸತ್ವಮುತ್ತಮಂ
ಸತ್ವಾದಧಿ ಮಹಾನಾತ್ಮಾ ಮಹತೋಽವ್ಯಕ್ತಮುತ್ತಮಂ
ಅವ್ಯಕ್ತಾತ್ತು ಪರಃಪುರುಷೋ ವ್ಯಾಪಕೋ ಲಿಂಗ ಏವಚ
ಯದ್ಜ್ಞಾತ್ವಾ ಮುಚ್ಯತೇ ಜಂತುರಮೃತತ್ವಂ ಚ ಗಚ್ಛತಿ"
—ಕಠೋಪನಿಷತ್.

ಎಲ್ಲಕ್ಕೂ ಮಿಗಿಲಾಗಿ ವ್ಯಾಪಕವಾದ ತತ್ತ್ವ ಸದಾಶಿವನೆಂಬ ಆ ಲಿಂಗತತ್ತ್ವ. ಅದೆಷ್ಟು ವ್ಯಾಪಕವೋ ಅಷ್ಟೇ ವಿಶಿಷ್ಟವೂ ಆಗಿದೆ. ಅಂತೆಯೇ ಅತಿ ಸೂಕ್ಷ್ಮವೂ ಆಗಿದೆ. ಅಂತಹ ಆ ಸದಾಶಿವ ರೂಪ ಲಿಂಗೋಪಾಸನೆಯು ಮಾಡಿದಲ್ಲಿ ಅಮೃತತತ್ತ್ವವು ಅಳವಡುತ್ತದೆ. ಅಮರತೆಯು ಕೊಡುವ ಆ ಸದಾಶಿವ ಲಿಂಗವು ಅಕ್ಷರವೂ ಆಗಿದೆ; ಅಖಂಡವೂ ಆಗಿದೆ. ಅನನ್ಯ ಸದೃಶವಾಗಿದೆ. ಅವ್ಯಕ್ತ ತತ್ತ್ವಕ್ಕಿಂತ ಅತಿಶಯವಾಗಿದೆ.

"ಸರ್ವಕರ್ತಾ ಸದಾಶಿವಃ ಸರ್ವಾನುಗ್ರಹಕಾರಕಃ"
'ನಿರಾಕಾರಃ ಸದಾಶಿವಃ' ಎಂಬೀ ಉಕ್ತಿಗಳಿಂದ ಸದಾಶಿವನು ಜಂಗಮ ಸ್ವರೂಪಿಯೂ ಆಗಿರುವನು. ಸ್ವಯಂಭುವೂ ಆಗಿರುವನು. ಆತನ ನಿರಾಕಾರತ್ವವು ಆತನ ಜಂಗಮತ್ವದ ಕುರುಹು.

"ಓಂ ಅಸ್ಯಶ್ರೀ ಷಡಕ್ಷರೀ ಮಹಾ ಮಂತ್ರಸ್ಯ
ವಾಮದೇವ ಋಷಿಃ ಪಂಕ್ತಿಶ್ಛಂದಃ ಶ್ರೀ ಸದಾಶಿವೋಽಧಿದೇವತಾ...."

ಮಂತ್ರಜಾಪಕರು ಶ್ರೀ ಸದಾಶಿವ ದೇವನನ್ನು ಮರೆತು ಮುನ್ನಡೆವಂತಿಲ್ಲ. ನೆನೆಯದೆ ನಿಲ್ಲುವಂತಿಲ್ಲ. ಮಂತ್ರ ತಂತ್ರಗಳಲ್ಲಿಯೂ ಸದಾಶಿವನದೇ ಆಧಿದೇವತ್ವ. ಅಲ್ಲದೆ ಮಂತ್ರರೂಪನೂ ಆಗಿದಾನೆ. ಲಿಂಗರೂಪನಾದ ಬಳಿಕ ಮಂತ್ರವಾದಂತೆಯೆ ! ವಾಚ್ಯ ವಾಚಕ ರೂಪವಿದೆ ಲಿಂಗ ಮಂತ್ರಗಳಿಗೆ! ಅಕ್ಷರ ಶಕ್ತಿ ; ಅರ್ಥ ಸದಾಶಿವ. ಮಂತ್ರ ದೇವ ಆ ಸದಾಶಿವ. ಮಂತ್ರಜೀವ ಆ ಸದಾಶಿವ.

"ಏನೇನೂ ಇಲ್ಲದಂದು ಶೂನ್ಯನಿಶ್ಶೂನ್ಯಕ್ಕೆ ನಿಲುಕದ ಘನವು,
ಕೋಟಿ ಚಂದ್ರಸೂರ್ಯರ ಬೆಳಗಾಗಿ ಬೆಳಗುತ್ತಿಪ್ಪಲ್ಲಿ
ಓಂಕಾರವೆಂಬ ನಿರಕ್ಷರ ಪುಟ್ಟಿತ್ತು. ಓಂಕಾರದಿಂದ
ನಕಾರ, ಮಕಾರ, ಶಕಾರ, ವಕಾರ, ಯಕಾರವೆಂಬ
ಪಂಚಾಕ್ಷರಪುಟ್ಟಿದವು. ಆ ಪಂಚಾಕ್ಷರಿಗೆ ಪರಾಶಕ್ತಿರೂಪಾದಳು.
ಆ ಪಂಚಾಕ್ಷರಕ್ಕು ಪರಾಶಕ್ತಿಗು ಇಬ್ಬರಿಗೂ ಸದಾಶಿವನಾದ...."

—ಹಡಪದಪ್ಪಣ್ಣ.

ಹೀಗೆ ಮಂತ್ರ ಮಂತ್ರಶಕ್ತಿಗಳೆರಡೂ ಸದಾಶಿವರೂಪಾಗಿ ಮೈದಾಳಿ ಬಂದಿವೆ. ಅಂತೆಯೇ ಆತನು ಎಲ್ಲಕ್ಕೂ ಒಡೆಯ.

"ಈಶಾನಃ ಸರ್ವವಿದ್ಯಾನಾಮೀಶ್ವರಃ ಸರ್ವಭೂತಾನಾಂ
ಬ್ರಹ್ಮಾಧಿಪತಿರ್ಬ್ರಹ್ಮಣೋಽಧಿಪತಿರ್ಬ್ರಹ್ಮಾ ಶಿವೋಮೇ ಅಸ್ತು ಸದಾಶಿವೋಂ"

ಎಂಬುದು ಆತನ ಆಧಿಪತ್ಯದ ಶಾಸನವಿದು. ಆ ಸದಾಶಿವನು, ಈಶಾನ ಮುಖೋತ್ಪನ್ನನಾಗಿ ಬ್ರಹ್ಮ-ಬ್ರಾಹ್ಮಣರಿಗೆಲ್ಲ ಈಶನಾಗಿದ್ದಾನೆ. ಇಲ್ಲಿ ಬ್ರಾಹ್ಮಣ ರೆಂದರೆ ಬ್ರಹ್ಮವೇತ್ತರು.

ವೀರಶೈವ ತತ್ತ್ವದಲ್ಲಿ ಗೋಪ್ಯ ವಕ್ತ್ರೋತ್ಪತ್ತಿಯನ್ನು ಶ್ರೀ ಸದಾಶಿವನಿಗೆ ಹೇಳುತ್ತಾರೆ. ಷಡಕ್ಷರ ಮಂತ್ರಮೂರ್ತಿ, ಷಟ್‌ಸ್ಥಲ ಬ್ರಹ್ಮ, ಘನಲಿಂಗ ಚಕ್ರವರ್ತಿ, ಅನಾದಿ ವೀರಶೈವ ಜಂಗಮತತ್ತ್ವವರ್ತಿ, ಇತ್ಯಾದಿ ಅಭಿಧಾನಗಳನ್ನು ಆ ಸದಾಶಿವ

ತತ್ತ್ವವೊಂದಕ್ಕೆ ಹೊಂದಿಸುತ್ತಾರೆ. ಇವಲ್ಲದೆ ವೀರಶೈವರಲ್ಲಿ ಶಿವ–ಅಮೂರ್ತ–ಸಮೂರ್ತ–ಕರ್ತೃ–ಕರ್ಮ ಎಂಬುದಾಗಿ ಐದು ಸಾದಾಖ್ಯಗಳನ್ನು ಹೇಳುತ್ತಾರೆ. ಇವು ಆ ಶಿವ-ಶಕ್ತಿ ಸಮ್ಮೇಳನದಿಂದ ಸೃಷ್ಟಿಯಾಗುತ್ತದೆ. ಇವುಗಳಲ್ಲಿ ಶಿವಸಾದಾಖ್ಯ ತತ್ತ್ವಕ್ಕೆ ಸದಾಶಿವನೇ ಅಧಿದೇವನಾಗಿದ್ದಾನೆ. ಅಥವಾ ಆ ಶಿವಸಾದಾಖ್ಯಕ್ಕೆ ಸದಾಶಿವನೆಂದು ಮತ್ತೊಂದು ಹೆಸರಿದೆಯೆಂದು ಸೂಕ್ಷ್ಮಾಗಮ ಸೂಚಿಸುತ್ತದೆ.

"ಸದಾಶಿವೇಶ ಬ್ರಹ್ಮೇಶ ಈಶ್ವರೇಶಾನ ಭೇದತಃ
ಮೂರ್ತಯೋ ವೈ ಮತಾ ದೇವಿ ಸಾದಾಖ್ಯಾಪರನಾಮಕಾಃ ।
ನಾದರೂಪಃ ಶಿವಃ ಪ್ರೋಕ್ತೋ ಬಿಂದುರೂಪಃ ಸದಾಶಿವಃ
ನಾದಬಿಂದುಯುತಂ ರೂಪಂ ಧ್ಯಾನಪೂಜಾದಿಕಾರಣಂ ॥"

ಬಿಂದುರೂಪ ಸಗುಣ ಸದಾಶಿವನ, ಧ್ಯಾನಪೂಜಾಯೋಗ್ಯ ಸದಾಶಿವನ ಸ್ವರೂಪವನ್ನಿಲ್ಲಿ ಕಾಣುತ್ತೇವೆ.

"ತೇನ ನಿರವಯುವ ಮಹಾಲಿಂಗೇನ ಪರಶಕ್ತಿ ಪರನಾದಬಿಂದು–
ಕಲಾಃ ಏಕೀಭೂತ್ವಾ ಸದಾಶಿವ ಮೂರ್ತಿರಭವತ್ ।
ತಸ್ಯ ಸದಾಶಿವಸ್ಯ ಪಂಚಮುಖೈಃ ದೀಕ್ಷಿತಾಃ
ಗೌತಮಾದಿ ಪಂಚಮುನಯಃ ।" —ಅನಾದಿ ವೀರಶೈವಸಾರಸಂಗ್ರಹ

ಸದಾಶಿವ ತತ್ತ್ವ ಸತ್ವ ಎಂತಹ ಎ ಗ್ಗ ಳ ವಾ ದು ದು, ಎನಿತು ಏಕೀಕೃತವಾದುದು? ಆ ನಿರವಯ ಮಹಾಲಿಂಗ ಮತ್ತು ಪರಶಕ್ತಿ, ಪರನಾದ, ಪರಬಿಂದು, ಪರಕಲಾ ಈ ಅಯ್ದು ಶಕ್ತಿ ಸಂಕಲಿತವಾದ ಸತ್ವ ಸದಾಶಿವನದು. ಸುಮೂರ್ತಿತ್ವ ಸದಾಶಿವನದು. ಈ ಪಂಚತತ್ತ್ವಗಳೇ ಸದಾಶಿವನ ಪಂಚಮುಖಗಳು. ಆ ಮುಖಗಳಿಂದ ದೀಕ್ಷಿತರಾಗಿದ್ದಾರೆ ಸ್ಮೃತಿಕಾರರಾದ ಗೌತಮಾದಿ ಪಂಚಮುನಿಗಳು.

"ಹಂಸ ಹಂಸೇತಿ ಯೋ ಬ್ರೂಯಾತ್ ಹಂಸೋನಾಮ ಸದಾಶಿವಃ"

ಎಂದು ಶುಕ್ಲ ಯಜುರ್ವೇದೀಯ ನಿರಾಲಂಬೋಪನಿಷದ್ವರ್ಣನೆಯಿದು. ಹಂಸಪದವು ನಾದಮಯ. ಮಂತ್ರಮೂಲ. ಜೀವನುಸಿರು. ಇದನ್ನು ಬಿಟ್ಟು ಮಂತ್ರಪ್ರಪಂಚವಿಲ್ಲ. ಮೂಲೋಕದ ಜೀವಕೋಟಿಯಿಲ್ಲ. ಅಂತಹ ಹಂಸಸ್ವರೂಪನು ಸದಾಶಿವನು. ಇತ್ತ ಜೀವಕೋಟಿಗೆ ಜೀವನಾಗಿದಾನೆ. ಅತ್ತ ದೇವಕೋಟಿಗೆ ದೇವನಾಗಿದಾನೆ. ಅಲ್ಲದೆ ಜೀವ–ದೇವ ಸಮನ್ವಯ–ಸಮರಸಕರ್ತನೂ ಆಗಿದಾನೆ. ಷಡಕ್ಷರ ಮಂತ್ರದಲ್ಲಿ ಯಕಾರ ಮಂತ್ರಾಕ್ಷರ ಸ್ವರೂಪ ಸದಾಶಿವ. ಆ ಯಕಾರವು ಜೀವ-ದೇವರ ಸಮರಸ ಮಾಡುವ ಮಂತ್ರ. ಅಂತೆಯೇ ಸದಾಶಿವನು ಜೀವ-ದೇವ ಸಮರಸ ಕಾರಣಕರ್ತ; ಜಗದ್ಭರ್ತ. ಅಂತಹ ಆ ಸದಾಶಿವ ಸತ್ತ್ವ ವಿಷಯವಾಗಿ

ಇದಕ್ಕಿಂತ ಮಿಗಿಲಾಗಿ ಮಾತನಾಡಲು ನಾವು ಮೂಕರಾಗಿದೇವೆ; ಮುಂಗಾಣದವ ರಾಗಿದೇವೆ.

"ಓಂ ನಮೋ ಭಗವತೇ ಸದಾಶಿವಾಯ
ಸಕಲ ತತ್ತ್ವಾತ್ಮಕಾಯ ಸರ್ವಮಂತ್ರಸ್ವರೂಪಾಯ
ಸರ್ವಯಂತ್ರಾಧಿಷ್ಠಿತಾಯ ಸರ್ವತಂತ್ರ ಸ್ವರೂಪಾಯ
....ನಮಸ್ತೇ ನಮಸ್ತೇ ನಮಸ್ತೇ !" —ಶಿವಕವಚಸ್ತೋತ್ರ.

"ಸದಾಶಿವ ಮಹಾಮೂರ್ತಿ ಗುರುದೇವ ನಮೋಽಸ್ತುತೇ"

ಓಂ ಶಾಂತಿಃ

---

## ಕಾ ಣಿ ರೆ !

ನುಡಿ ನಡೆಯೊಂದಾಗಿ ಮಾಡುವ ಭಕ್ತಿಯು ಮಾಟ
ಶಾಶ್ವತ ಸಫಲವಲ್ಲದೆ, ಅಸೂಯೆ ಅಸಮಾಧಾನದಿಂದೆಸಗುವ
ಕಾರ್ಯ ನಿಷ್ಫಲ ಕೇಳಿರೇ ! ಇದನರಿದು ಸಹಜಭಕ್ತಿ–
ಸತ್ಕ್ರಿಯೆಗಳ ನಿಶ್ಚಲ ಚಿತ್ತದಿಂದ ಗೈವುದೆ ನೆರೆ ಲೇಸು ನೋಡಿರೆ !

ಸದಾಚಾರ ಸುವಿಚಾರ ಶೀಲಸ್ವಭಾವ ಸತ್ಕ್ರಿಯೆ
ಸಿರಿಗೆ ಮೂಲವೆಂದರಿಯದೆ, ಸತ್ಯ ಸುಜ್ಞಾನ ಸತ್ಕ್ರಿಯೆಗಳ ಆಚರಿಸದೆ
ಬಡತನದ ಬವಣೆಗೀಡಾಗಿ ತೊಳಲುವರು ;
ಬಳಲಿ ಕೊರಗಿ ಕುಂದಿ ಬೆಂದು ಬೆಂಡಾಗುವರು ನೋಡಿರೆ !

ದಿನದಿನ ಮನೆಗೆಲಸವೆಸಗುವ ವೇಳೆಯಲಿ
ಶಿವ ಶಿವ, ಹರಹರ ಮಹಾದೇವನೆಂದು ಅನ್ನುತ್ತ ನಗುತ್ತ
ಸದಾ ಸಂತೋಷದಿಂದ ತುಂಬಿರುವ ಮನೆ ಹೊನ್ನಾಗದಿರದು :
ಇದು ಸುಳ್ಳಲ್ಲ ಸತ್ಯ ಕಾಣಿರೆ !

'ಆಲಸ್ಯಮಮೃತಂ ವಿಷಂ' – ಇಂತಿರುವುದರಿಂದ
ಇಂದು ನಾಳೆಯೆನ್ನದೆ ಗುರುಲಿಂಗ ಜಂಗಮ ಸೇವಾ–
ದಾಸೋಹ ಸತ್ಕಾರ್ಯಕೆ ತನು ಮನ ಧನವ ಸವಿಸಿ
ಮುಕ್ತಿವಡೆವುದೆ ಕರ ಲೇಸು ಕೇಳಿರೆ !

ನಶಿಸುವ ದೇಹ ಸ್ಥಿರವಲ್ಲ–ಚಿರವಲ್ಲ ಎಂಬುದ ತಿಳಿದು
ಎಸೆವ ಶಿವನಿತ್ತ ಒಡವೆಯ ಶಿವನನವರಿಗೆ ಸಲ್ಲಿಸುತ್ತ–
ಮುಕ್ತರಾಗುವ ಮನುಜರ ಬದುಕು ಹಾಲುಹಳ್ಳ ಕಾಣಿರೆ !

—ಶ್ರೀಮತಿ ಓಂಕಾರಮ್ಮನವರು, ಅಧ್ಯಕ್ಷಿಣಿಯರು :
'ಶ್ರೀ ಮಲ್ಲಿಕಾಂಬಾ ಮಂಡಳಿ', ಗಿರಿಯಾಪುರ.

# ಶಕ್ತಿ ವಿಶಿಷ್ಟಾದ್ವೈತದ ಪ್ರಾಚೀನತೆ.

ಲೇಖಕರು :
ಸರ್ವಭಾಷಾರತ್ನ ಪಂಡಿತ ಶ್ರೀ ಹಿತ್ತಲಮನಿ ಮಲ್ಲಣಾರ್ಯರು, ಬಾಗಿಲುಕೋಟಿ.

ಆಸೇತು ಪ್ರಾಲೇಯಾಚಲದವರೆಗೆ ಅಟಕದಿಂದ ಕಟಕದವರೆಗೆ ವ್ಯಾಪಿಸಿದ ವಿಶಾಲ ಭಾರತ ದೇಶದ ಪುರಾತನೇತಿಹಾಸವನ್ನು ಹಾಗೂ ಅನಾದಿ ಕಾಲದಿಂದ ಅವ್ಯಾಹತ ವಾಗಿ ಅಸ್ತಿತ್ವದಲ್ಲಿದ್ದ ಧಾರ್ಮಿಕ, ನೈತಿಕ, ಅಧ್ಯಾತ್ಮಿಕ, ಸಾಂಸ್ಕೃತಿಕ ಪರಂಪರೆಯನ್ನು ಸೂಕ್ಷ್ಮ ರೀತಿಯಿಂದ ನಿರ್ವ್ಯಾಜ, ನಿಷ್ಪಕ್ಷ, ನಿರ್ಮಲ ಭಾವದಿಂದ ನಿರೀಕ್ಷಿಸಿದಾಗ ಆರ್ಯ ಜನಾಂಗದವರು ಆರ್ಯಾವರ್ತವೆಂದೆನಿಸಿಕೊಳ್ಳುವ ಭಾರತ ಭೂಪ್ರದೇಶಕ್ಕೆ ಆಗಮಿಸುವ ಪೂರ್ವದಲ್ಲಿಯೇ ಸಹಸ್ರಾರು ಸಂವತ್ಸರಗಳಿಂದಲೂ ಭಾರತದಲ್ಲಿ ಅನೇಕ ಜನಾಂಗದವರು ವಾಸಮಾಡಿಕೊಂಡಿದ್ದರೆಂಬ ವಿಷಯವು ಅಸಂದಿಗ್ಧವಾಗಿ ಗೋಚರ ವಾಗುತ್ತದೆ. ಈ ವಿಚಾರವನ್ನೇ ಪಂಡಿತಗಣ ಮಂಡನಾಯಮಾನರಾದ ಶ್ರೀ ರಾಹುಲ ಸಾಂಕೃತ್ಯಾಯನರು ತಮ್ಮ "ದರ್ಶನ ದಿಗ್ದರ್ಶನ"ವೆಂಬ ಗ್ರಂಥವಲ್ಲಿ ಮತ್ತು ಡಾ|| ಯದುವಂಶೀಯವರು "ಶೈವಮತ"ವೆಂಬ ಗ್ರಂಥದಲ್ಲಿ ವಿಶದೀಕರಿಸಿದ್ದಾರೆ. ಪಾಶ್ಚಾತ್ಯ ಪಂಡಿತರನೇಕರ ವಿಚಾರವಂತೂ ಸರ್ವಶ್ರುತವೇ ಇದೆ. ಆದರೆ ಶ್ರೀ ರಾಮ ದಾಸಗೌಡರೇ ಮೊದಲಾದ ಹಲವು ಭಾರತೀಯ ಪಂಡಿತರು, "ಆರ್ಯರು ಭಾರತಕ್ಕೆ ಆಗಮಿಸುವ ಪೂರ್ವದಲ್ಲಿ ಭಾರತದಲ್ಲಿ ವಾಸಿಸುತ್ತಿದ್ದ ಜನಾಂಗದವರು ಆರ್ಯರೇ" ಎಂದು ಅಭಿಪ್ರಾಯ ಪಟ್ಟಿದ್ದಾರೆ. "ಮೂಲ ನಿವಾಸಿಗಳು ಆರ್ಯೇತರರೆಂದು ಸಿದ್ಧ ಗೊಳಿಸುವ ಸ್ವಯಂ ಸಿದ್ಧವಾದ ಅನೇಕ ಸಬಲ ಪ್ರಮಾಣಗಳಿದ್ದರೂ ಇಂಥ ಪಂಡಿತ ವರ್ಯರು ಕೇವಲ ತಮ್ಮದೇ ಆದ ಒಂದು ವಿಶಿಷ್ಟ ಸಂಪ್ರದಾಯ ನಿಯಮಗಳನ್ನು

ಪುಷ್ಟೀಕರಿಸುವ ಉದ್ದೇಶದಿಂದ ನಿರತಿಶಯ ಅಭಿಮಾನಕ್ಕೆ ಒಳಪಟ್ಟು ಸತ್ಯ ಸಂಗತಿಯನ್ನು ಸಮಾಧಿ ಮಾಡಿ ವಿರುದ್ಧ ಅಭಿಪ್ರಾಯವನ್ನು ವ್ಯಕ್ತಗೊಳಿಸಿರುವದು ಸಂಶೋಧಕರಿಗೆ, ಯಥಾರ್ಥ, ಸತ್ಯ ಮತ್ತು ಸಮಂಜಸವೆಂದೆನಿಸುವದಿಲ್ಲ. ಆರ್ಯೇತರ ಮೂಲ ನಿವಾಸಿಗಳು ಪ್ರವಿಡರು, ಆದಿ ದ್ರವಿಡರು ಮತ್ತು ಅನೇಕ ಜನಾಂಗದವರಾಗಿದ್ದರೆಂಬ ಸಂಗತಿಯು ಋಗ್ವೇದದಿಂದಲೇ ಆರ್ಯರು ಬುದ್ಧಿಪೂರ್ವಕ ಅನಾದರದಿಂದ ಉಲ್ಲೇಖಿಸಿದ "ದಾಸ, ದಸ್ಯು, ವ್ರಾತ್ಯ" ಮೊದಲಾದ ಶಬ್ದಗಳಿಂದ ಸ್ಫುಟವಾಗಿ ಗೋಚರವಾಗುತ್ತದೆ. ಈ ವಿಷಯವು ಪುರಾವೃತ್ತಜ್ಞರಿಗೆ ಮತ್ತು ಭೂಗರ್ಭ ಶಾಸ್ತ್ರಜ್ಞರಿಗೆ ವಿದಿತವಾಗಿ (ಋ ೮–೭೦–೧೧) (೪–೧೬–೯) (೧-೫೧-೮) (೬-೧೪-೩) (೯-೪೧-೨) (೭–೬–೩) ನಿಶ್ಚಯಿಸಿದ ವಿಷಯವೇ ಆಗಿದೆ. ಭಾರತವು ಆರ್ಯರ ಆಗಮನ ಸಮಯಕ್ಕೆ ವಿಜನ ಪ್ರದೇಶವಾಗಿದ್ದಿಲ್ಲವೆಂದೂ, ಭಾರತದಲ್ಲಿ ವಾಸಿಸಿದ್ದ ಆರ್ಯೇತರ ಮೂಲ ಜನಾಂಗದವರು ಅತ್ಯಂತ ಬಲಾಢ್ಯರು, ಬುದ್ಧಿವಂತರು, ವೀರಾಧಿವೀರರು, ಪ್ರಕಾಂಡ ಪಂಡಿತರು, ಅಧ್ಯಾತ್ಮ ವಿದ್ಯಾಪಾರಗರು, ಧಾರ್ಮಿಕ, ನೈತಿಕ, ಆರ್ಥಿಕ, ಸಾಮಾಜಿಕ, ರಾಜಕೀಯ, ಔದ್ಯೋಗಿಕ, ಕಲಾತ್ಮಕ, ಸೈನಿಕಾದಿ ಸಮಸ್ತ ಕ್ಷೇತ್ರಗಳಲ್ಲಿ ಉನ್ನತಿಯ ಉನ್ನತಗಿರಿ ಶಿಖರದ ಮೇಲೆ ರಾರಾಜಿಸುತ್ತಿದ್ದರೆಂದೂ ಇವರು ತಮ್ಮದೇ ಆದ ಅಗಾಧ ಪಾಂಡಿತ್ಯ, ಅಸಾಧಾರಣ ಬುದ್ಧಿಮತ್ತೆ, ಲೋಕೋತ್ತರ ವಿವೇಕ ಶಕ್ತಿಗಳ ಪ್ರಾಬಲ್ಯದಿಂದ ಲೋಹಪಾಷಾಣ ವಿನಿರ್ಮಿತ ಅಭೇದ್ಯ, ಅಜಿಂತ್ಯ ದುರ್ಗಗಳನ್ನು ಹರ್ಮ್ಯ ಪ್ರಾಸಾದಗಳನ್ನು ವಿಶಾಲಾರಾಮಗಳನ್ನು ಭವ್ಯ ಭವನಗಳನ್ನು ದೇವಾಯತನಗಳನ್ನು ನಿರ್ಮಿಸಿಕೊಂಡಿದ್ದರೆಂಬ ವಿಷಯವು ಋಗ್ವೇದದಲ್ಲಿ ಇಂದ್ರನನ್ನು ಕುರಿತು ಆರ್ಯರು ಮಾಡಿದ ಪ್ರಾರ್ಥನೆಗಳಿಂದಲೇ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. "ಇಂದ್ರನೇ, ನಮ್ಮ ಅತ್ಯಂತ ಬಲಾಢ್ಯ ಶತೃಗಳನ್ನು ಸಂಹರಿಸಿ ನಮಗೆ ಸಮರದಲ್ಲಿ ಜಯವು ಲಭಿಸುವಂತೆ ಅನುಗ್ರಹಿಸು. ನಾವು ಪುತ್ರ, ಪೌತ್ರ, ಪ್ರಪೌತ್ರ, ಕಲತ್ರ, ಧನಧಾನ್ಯ ಸಮೃದ್ಧರಾಗಿ ಸುಖದಿಂದ ಶತಸಂವತ್ಸರ ಜೀವಿಸೋಣ. ನಮ್ಮ ಜೀವನದಲ್ಲಿ ಅಭ್ಯುದಯವನ್ನೇ ವಿತರಿಸು" (ಋಗ್ವೇದ ೨–೧೪–೬) (ಜರ್ಮನ್ ವಿದ್ವಾನ್ ಡಾ|| ಹೌವರ ದರ ವ್ರಾತ್ಯಃ) (ಎೞ. ಎೞ. ಘೋಷ, ಇಂಡೋ ಆರ್ಯನ್ ಲಿಟರೇಚರ ಆ್ಯಂಡ ಕಲ್ಚರ ಓರಿಜಿನ್ಸ ೧೯೩೪).

೨. ಜರ್ಮನರು ಸಭ್ಯರು, ಸುಶೀಲರು, ಉದ್ಯೋಗಪ್ರಿಯರು, ಸರಳರು, ಸರ್ವತಂತ್ರ ಸ್ವತಂತ್ರರು, ಸುಧಾರಕರು ಆದ ರೋಮರನ್ನು ಅವರದೇ ಆದ ಮಾತೃಭೂಮಿಯಿಂದ ಧೈರ್ಯ, ಶೌರ್ಯ, ಕ್ರೌರ್ಯ ಮೊದಲಾದ ಸಾಧನಗಳಿಂದ ನಿರ್ವಾಸಿತರನ್ನಾಗಿ ಪರಿವರ್ತಿಸಿ ತಮ್ಮ ಶಾಸನವನ್ನು ಪ್ರಾರಂಭಿಸಿದಂತೆ ಆರ್ಯರಾದರೂ ಭಾರತದ ಮೂಲ ನಿವಾಸಿಗಳಾದ ದ್ರವಿಡರನ್ನು ತಮ್ಮ ಪರಾಕ್ರಮ, ಕುಟಿಲ ನೀತಿ ಪ್ರಭಾವದಿಂದ ತಮ್ಮ ಅಧೀನದಲ್ಲಿ ತರಲು ಅನೇಕಾನೇಕ ವರ್ಷಗಳವರೆಗೆ ಅವಿರತ

ಪರಿಶ್ರಮ ಮಾಡಿದರು. ಆದರೆ ಇದು ಸಾಧ್ಯವಾಗಲಿಲ್ಲ. (ಸರ್ ಜಾರ್ಜ ಮಾರ್ಸೆಲ್ ಇ. ಪೂ. ೧೮೦೦) ಆರ್ಯರು ಸತತ ಪ್ರಯತ್ನಮಾಡಿ ಸಾಮ, ದಾನ, ಭೇದ, ದಂಡೋಪಾಯಗಳಿಂದ ಕೆಲವು ಮೂಲ ನಿವಾಸಿಗಳನ್ನು ತಮ್ಮ ಪಕ್ಷಕ್ಕೆ ತೆಗೆದು ಕೊಂಡರೂ ಪ್ರಬಲ, ಅಜಿಂಕ್ಯ, ಶಸ್ತ್ರಶಾಸ್ತ್ರ ಪ್ರವೀಣರಾದ ಮೂಲ ನಿವಾಸಿಗಳೊಡನೆ ಸಾಮೋಪಚಾರದಿಂದ ಕೆಲವು ಪ್ರಸಂಗಗಳಲ್ಲಿ ಸಂಧಿ ಮಾಡಿಕೊಂಡರು. (ಋ. ದಶ ರಾಜ್ಞ ಯುದ್ಧ) ಅನೇಕ ಆರ್ಯರು ವೈದಿಕರ ಹಿಂಸಾತ್ಮಕ ಯಜ್ಞಯಾಗಾದಿ ಕರ್ಮ ಕಾಂಡ ಪ್ರಚೋದಕ ಧಾರ್ಮಿಕ ರೀತಿನೀತಿಗಳು ತಮಗೆ ಅಸಹ್ಯ ಮತ್ತು ಅಸಮಂಜಸ ವೆನಿಸಿದ್ದರಿಂದ ಜ್ಞಾನಪ್ರಚುರ ಕ್ರಿಯಾನುಷ್ಠಾನ ನಿರತರಾದ ಮೂಲ ನಿವಾಸಿಗಳೊಡನೆ ಸಮ್ಮಿಲಿತರಾದರು. ಈ ರೀತಿಯಾಗಿ ಅನಾದಿ ಕಾಲದಿಂದ ಅಸ್ತಿತ್ವದಲ್ಲಿದ್ದ ದ್ರಾವಿಡರ ಹಾಗೂ ವೈದಿಕ ಕಾಲದಿಂದ ಪ್ರಾರಂಭಿಸಿದ ಆರ್ಯರ ಸಂಸ್ಕೃತಿಗಳು ಭಾರತದಲ್ಲಿ ಸ್ವತಂತ್ರವಾಗಿ, ಅಖಂಡವಾಗಿ, ಅನಂತಕಾಲದಿಂದಲೂ ಅಸ್ತಿತ್ವದಲ್ಲಿವೆ.

## ವೈದಿಕ ಕಾಲ.

(೧೫೦೦-೧೦೦೦ ಇ.ಪೂ.) ಋಕ್, ಯಜುಸ್, ಸಾಮ, ಅಥರ್ವವೆಂಬ ನಾಲ್ಕು ವೇದಗಳಿವೆ. ಇವುಗಳಲ್ಲಿ ಋಗ್ವೇದವು ಪ್ರಾಚೀನತಮವಾದದ್ದೆಂದು ವಿಶ್ವದ ವಿಚಕ್ಷಣರು ವಿಚಾರಾಂತದಲ್ಲಿ ನಿಶ್ಚಯಿಸಿದ್ದಾರೆ. ಭಾರತೀಯ ವಿಚಾರಸರಣಿಯಲ್ಲಿ ವಿಶ್ವಾಸವುಳ್ಳ ಭಾವುಕ ವಿದ್ವಾಂಸರು ವೇದಗಳು ಅಪೌರುಷೇಯ ಅನಾದ್ಯನಂತ ಎಂದು ಭಾವಿಸುತ್ತಾರೆ. "ಅಸ್ಯ ನಿಃಶ್ವಸಿತಂ ವೇದಾಃ" ಅಂದರೆ ವೇದಗಳು ಬ್ರಹ್ಮನ ಮುಖಾರವಿಂದದಿಂದ ಉದ್ಭವಿಸಿದ ಉಸಿರು." ಆದರೆ ಇಂಥ ವಿಚಾರವನ್ನು ಭಾವು ಕೇತರರು ಒಪ್ಪುವುದಿಲ್ಲ. ಅಂಥವರು ವೇದಗಳ ಕಾಲನಿರ್ಣಯ ಮಾಡಲು ಅವಿ ಕ್ಲಾಂತ ಪರಿಶ್ರಮ ಮಾಡಿದ್ದಾರೆ. ಋಗ್ವೇದದಲ್ಲಿ ಇದ್ದ ದಶವಿಭಾಗಗಳಿಗೆ ಮಂಡಲ ಗಳೆನ್ನುತ್ತಾರೆ. ಋಗ್ವೇದದಲ್ಲಿ ೧೦೨೮ ಸೂಕ್ತಗಳಿವೆ. ಈ ಸಮಸ್ತ ಸೂಕ್ತಗಳನ್ನು ರಚಿಸಿದವರು ಸುಮಾರು ೩೦೦ ಋಷಿಗಳಿದ್ದಾರೆ. (ರಾಮದಾಸಗೌಡ, ಹಿಂದುತ್ವ) ಈ ಮಂತ್ರ ಋಷಿಗಳಲ್ಲಿ ಪ್ರಮುಖರು ಅತ್ಯಂತ ಪ್ರಾಚೀನರೆಂದರೆ ವಿಶ್ವಾಮಿತ್ರ, ವಶಿಷ್ಠ, ಭಾರದ್ವಜ, ಗೌತಮ (ದೀರ್ಘತಮಾ), ಅತ್ರಿ ಮೊದಲಾದವರಾಗಿರುತ್ತಾರೆ. ಅಂಗಿರಾಋಷಿಯ ಪೌತ್ರ ಮತ್ತು ಬೃಹಸ್ಪತಿಯ ಪುತ್ರನಾದ ಭರದ್ವಾಜನ ಸಮಯವು ೧೫೦೦ ಇ.ಪೂ. ಇರುತ್ತದೆ. ಭಾರದ್ವಾಜನು ಉತ್ತರ ಪಂಚಾಲ (ವರ್ತಮಾನ ರೋಹಿಲ ಖಂಡದ ನರಪತಿಯಾದ ದಿವೋದಾಸನ ಪುರೋಹಿತನಾಗಿದ್ದನು. ವಿಶ್ವಾ ಮಿತ್ರನು ದಕ್ಷಿಣ ಪಂಚಾಲ (ಆಗ್ರಾ ಕಮೀಶನರಿಯ ಅಧಿಕ ಭಾಗ)ಕ್ಕೆ ಸಂಬಂಧಿಸಿ ದವನು. ವಶಿಷ್ಠನು ಕುರುರಾಜನ ಪುರೋಹಿತನಾಗಿದ್ದನು. (ಕುರುರಾಜ-ಮೀರಠ ಮತ್ತು ಅಂಬಾಲಾ ಕಮೀಶನರೀಯ ಅಧಿಕ ಭಾಗ) ಸಂಪೂರ್ಣ ಋಗ್ವೇದವನ್ನು ಬೃಹಸ್ಪತಿಯ ವಂಶದಿಂದ ೬-೭ ತಲೆಮಾರುಗಳಲ್ಲಿ ಆಗಿಹೋದ ಋಷಿಗಳು ಸಂಪೂರ್ಣ

ಗೊಳಿಸಿವ ಸಂಗತಿಯು ಸ್ಪಷ್ಟವಾಗುತ್ತದೆ. (ರಾಹುಲ ಸಾಂಕೃತಾಯನರ ದರ್ಶನ ದಿಗ್ದರ್ಶನ).




ಮೇಲೆ ನಿರ್ದಿಷ್ಟಪಡಿಸಿದ ಋಷಿಗಳಲ್ಲಿ ಬೃಹಸ್ಪತಿ, ಭಾರದ್ವಾಜ, ನರ, ಗೌರವೀತ ಪ್ರಭೃತಿಗಳು ಋಗ್ವೇದದ ಋಷಿಗಳಾಗಿದ್ದು ಈ ವೇದದ ಅಧಿಕ ಭಾಗವನ್ನು ಪೂರ್ತಿಗೊಳಿಸಿದ್ದಾರೆ. ಡಾ|| ಮ್ಯಾಕ್ಸಮುಲರರ ಅಭಿಪ್ರಾಯದಂತೆ ಋಗ್ವೇದದ ರಚನಾಕಾಲವು ಇಂದಿನಿಂಗ ೩೨೦೦ ವರ್ಷಗಳ ಪೂರ್ವದ್ದಾಗಿದೆ. ಲೋಕಮಾನ್ಯ ಬಾಳಗಂಗಾಧರ ಟಿಲಕ ಮತ್ತು ಜರ್ಮನಿಯ ವಿಖ್ಯಾತ ವಿದ್ವಾನರಾದ ಡಾ|| ಯಾಕೋಬಿಯುವರು ವೇದಕಾಲವು ವಿಕ್ರಮ ಪೂರ್ವ ೪೦೦೦ ವರ್ಷವೆಂದು ಅಭಿಪ್ರಾಯ ಪಟ್ಟಿದ್ದಾರೆ. ಮಹಾರಾಷ್ಟ್ರದ ವಿಖ್ಯಾತ ಜ್ಯೋತಿರ್ವಿದ ಪಂಡಿತರಾದ ಶಂಕರ ಬಾಳಕೃಷ್ಣ ದೀಕ್ಷಿತರು ಋಗ್ವೇದದ ಕಾಲವು ಇಂದಿನಿಂದ ೫೫೦೦ ವರ್ಷ ಪ್ರಾಚೀನವಾದದ್ದೆಂದು ತಮ್ಮ ವಿಚಾರವನ್ನು ವ್ಯಕ್ತಗೊಳಿಸಿದ್ದಾರೆ. ಭೂಗರ್ಭ ಶಾಸ್ತ್ರಜ್ಞರು ಋಗ್ವೇದ ಕಾಲವು ೨೫ ಸಾವಿರ ವರ್ಷಗಳ ಪೂರ್ವಕಾಲದ್ದೆಂದು ಅಭಿಪ್ರಾಯಪಡುತ್ತಾರೆ. (ಡಾ|| ಅವಿನಾಶ್ಚಂದ್ರದಾಸ ಋಗ್ವೇದಿಕ್ ಇಂಡಿಯಾ ಕಲಕತ್ತಾ ೧೯೨೨) ಬಲದೇವ ಉಪಾಧ್ಯಾಯ, ಹಿಂದೂ ವಿಶ್ವವಿದ್ಯಾಲಯ, ಕಾಶಿ, ಇವರು ಋಗ್ವೇದ ಕಾಲವು ಇ.ಪೂ. ೧೨,೦೦೦ ವರ್ಷಗಳೆಂದು ಮನ್ನಿಸುತ್ತಿದ್ದಾರೆ. ಇದರಿಂದ ವೇದಪೂರ್ವ ಕಾಲೀನ ಸಂಸ್ಕೃತಿಯ ಪ್ರಾಚೀನತ್ವವನ್ನು ಅರಿಯಬಹುದಾಗಿದೆ.

೩. ಪ್ರಾಗ್ವೈದಿಕ ಸಮಯದಲ್ಲಿದ್ದ ಜನಾಂಗದವರು ಪ್ರಕೃತಿ ಲೀಲಾವಿಲಾಸಿಗಳಾಗಿದ್ದರು. ಅವರು ಐಹಿಕ ವಿಷಯಗಳಲ್ಲಿ ಅರ್ಥಾತ್ ಭೌತಿಕ ಶಾಸ್ತ್ರದಲ್ಲಿ ಪಾರಂಗತರಾದಂತೆ ಆ-ಮುಷ್ಮಿಕ ವಿಷಯಗಳನ್ನು ಕುರಿತು ಅನ್ವೇಷಣ ಮಾಡಲಾರಂಭಿಸಿದರು. ತಮ್ಮ ಸುತ್ತಲೂ ವ್ಯಾಪಿಸಿದ ವಿಶಾಲವಿಶ್ವವನ್ನು ಜ್ಞಾನದೃಷ್ಟಿಯಿಂದ ನಿರೀಕ್ಷಿಸಿದಾಗ್ಗೆ ಅವರ ಹೃತ್ ಪಯೋರಾಶಿಯಲ್ಲಿ ಅಧ್ಯಾತ್ಮಿಕ ವಿಚಾರೋರ್ಮಿಗಳು ಉದ್ಭವಿಸಲಕ್ಕೆ ಹತ್ತಿದವು. "ಈ ವಿಶಾಲ ವಿಶ್ವವೆಂದರೇನು ? ನಿರಾಧಾರದಿಂದ

ನಿರ್ಮಿತ ಈ ವಿಶ್ವದ ಜನಕನಾರು? ಬುದ್ಧಿ ಬಲವುಳ್ಳವನಾರು? ಮಾನವ, ವಿಶ್ವ, ವಿಶ್ವಜನಕರಲ್ಲಿ ಪಾರಸ್ಪರಿಕ ಸಂಬಂಧವೇನು?" ಇವೇ ಮೊದಲಾದ ಗಹನ ಗಂಭೀರ ವಿಚಾರಗಳು ಆ ಸಮಯದ ಜನರ ಮನೋ-ಮಂದಿರದಲ್ಲಿ ನೃತ್ಯ ಮಾಡಲಾರಂಭಿಸಿದವು. ಹೀಗೆ ಅನೇಕ ವರ್ಷಗಳ ಅವಿಶ್ರಾಂತ ಅಧ್ಯಾತ್ಮಿಕ ಪರಿಶ್ರಮದಿಂದ ಆರ್ಯೇತರ ಜನಾಂಗದವರು ವಿಶ್ವಕರ್ತೃವಿನ ಬಗ್ಗೆ ಒಂದು ನಿಶ್ಚಿತ ಸಿದ್ಧಾಂತಕ್ಕೆ ಬಂದರು. ಒಂದು ಭವ್ಯ ಭವನದ ನಿರ್ಮಿತಿಯಾಗಬೇಕಾದರೆ ಆ ಭವನಾಧಿಪತಿಯ ಮನೋಭೂಮಿಕೆಯಲ್ಲಿ ಸರ್ವ ಪ್ರಥಮ ಸಂಕಲ್ಪ ಒಂದು ಅಂಕುರಿಸುತ್ತದೆ. ಆ ಅಧಿಪತಿಯ ಸಂಕಲ್ಪವೇ ಅವನ ಇಚ್ಛಾಶಕ್ತಿ. ಭವನದ ರಚನೆ ಹಾಗೂ ವಿಸ್ತಾರದ ಬಗ್ಗೆ ಅವನಲ್ಲಿ ಜ್ಞಾನೋದಯವಾಗುತ್ತದೆ. ಅದುವೇ ಜ್ಞಾನಶಕ್ತಿ. ಇಚ್ಛಾಜ್ಞಾನ ಸಾಧನಗಳ ಪ್ರೇರಣೆಯಿಂದ ಭವನಾಧಿಪತಿಯು ಕ್ರಿಯಾಶಕ್ತಿ ಸಂಪನ್ನನಾಗುತ್ತಾನೆ. ಹೀಗೆ ಶಕ್ತಿತ್ರಯವು ಆ ಭವನದ ಪ್ರಭುವಿನ ಆತ್ಮದಲ್ಲಿಯೇ ಜನಿಸಿದೆ. ಅವನನ್ನು ವರ್ಜಿಸಿ ಪೃಥಕ್ ವಾಗಿರುವದಿಲ್ಲ. ಅವನಲ್ಲಿಯೇ ಅವಿನಾಭಾವ ಸಂಬಂಧದಿಂದ ನಿತ್ಯನಿರಂತರ ನೆಲೆಸಿದೆ. ಈ ಪ್ರತ್ಯಕ್ಷ ಪ್ರಮಾಣದಿಂದಲೇ ತಮ್ಮ ಆಧ್ಯಾತ್ಮಿಕ ವಿಚಾರಗಳನ್ನು ಮುಂದುವರೆಯಿಸಿ, ಅಪರಿಮಿತ ಚರಾಚರ ವಸ್ತು ಸಂಘಾತ ಪರಿಪೂರ್ಣ, ಅನಂತಕೋಟಿ ಬ್ರಹ್ಮಾಂಡಮಯವಾದ ವಿಶ್ವವನ್ನು ಸೃಜಿಸುವವನು ಒಬ್ಬನೇ ಒಬ್ಬ ಮಹಾದೇವನಿದ್ದಾನೆ ಮತ್ತು ಇಚ್ಛಾಜ್ಞಾನಕ್ರಿಯಾಖ್ಯ ಶಕ್ತಿತ್ರಯವು ಅವಿನಾಭಾವ ಸಂಬಂಧದಿಂದ ಆ ಮಹಾದೇವನಲ್ಲಿಯೇ ಅಂತರ್ಗತವಾಗಿದೆಯೆಂಬ ಅನುಭೂತಿಯನ್ನು ಹೊಂದಿ ಒಂದು ವಿಶಿಷ್ಟ ತತ್ತ್ವಾಚಲೋನ್ನತ ಕೂಟಸ್ಥರಾಗಿ ಭೂಮಂಡಲದಲ್ಲಿ ರಾರಾಜಿಸಹತ್ತಿದರು.

ಮುಂದೆ ನಿರಂತರ ಭಕ್ತಿಪ್ರವಣ ಚಿತ್ತದಿಂದ ಮಹಾದೇವನನ್ನು ಚಿಂತನೆ ಮಾಡುತ್ತಿರುವಾಗ್ಗೆ ಅವರಿಗೆ ಅನಂತ ಶಕ್ತಿಯುಕ್ತವಾದ ಭೂಮಿ, ಅಪ, ಅನಲ, ವಾಯು, ಆಕಾಶ, ಸೂರ್ಯ, ಚಂದ್ರ, ಆತ್ಮವೆಂಬ ಅಷ್ಟ ಪ್ರಕೃತಿಗಳನ್ನು ಮಹಾದೇವನು ವಿಶ್ವದಲ್ಲಿ ವಿನಿರ್ಮಿಸಿದ ವಿಷಯವು ವಿದಿತವಾಯಿತು. ಅಪರಿಮಿತ ಭೂವ್ಯಾಕಾಶಗಳು ಅವರಿಗೆ ಗೋಲಾಕಾರದವುಗಳಾಗಿ ಗೋಚರವಾದದ್ದರಿಂದ ಮತ್ತು ಜಗತ್ತಿನ ಪ್ರತಿಯೊಂದು ವಸ್ತುವು ತನ್ನ ಮುಂಡಾಕಾರವನ್ನೇ ಕಾಯ್ದುಕೊಂಡು ಹೋಗುತ್ತಿರುವದರಿಂದ ಸತ್ಯಸ್ವರೂಪನಾದ ಸೃಷ್ಟಿಕರ್ತನು ಅಷ್ಟಾತ್ಮಗಳ ರೂಪ ಸದೃಶನಾಗಿದ್ದಾನೆ ಎಂಬ ತತ್ತ್ವವು ಆ ತತ್ತ್ವ ಜಿಜ್ಞಾಸುಗಳಿಗೆ ಹೊಳೆದದ್ದರಲ್ಲೇನೂ ಆಶ್ಚರ್ಯವಿಲ್ಲ. ಆದ್ದರಿಂದಲೇ ಅವರು ಅಪಾರ ವಿಶ್ವವು ಸತ್ಯವಾಗಿದೆ ಎಂದು ನಿರ್ಧರಿಸಿದರು. ಮತ್ತು ವಿಶ್ವವು ಮಹಾದೇವನ ವಿಶಿಷ್ಟ ಶಕ್ತಿಯಿಂದ ವಿನಿರ್ಮಿತವಾದದ್ದರಿಂದ ವಿಶ್ವದ ಸಕಲ ಜಡಾಜಡವಸ್ತುಜಾತವು ಶಕ್ತಿಮಯವಾಗಿರುವದರಿಂದ ಕಲ್ಪಾಂತರದಲ್ಲಿ ಆ ಮಹಾದೇವನ ಶಕ್ತಿಯಲ್ಲಿಯೇ ಲಯಹೊಂದುವದರಿಂದ ಪ್ರಕೃತಿಲೀಲಾ ವಿಲಾಸಿಗಳಾದ ಅವರಿಗೆ ಆ ಅವ್ಯಕ್ತ ವಸ್ತುವು ಶಕ್ತಿ ಸಮೇತವಾಗಿರುವದು ಸತ್ಯವೆಂದು ಹೊಳೆದದ್ದು

ಯಥಾರ್ಥವೇ ಆಗಿದೆ. ಇಂಥ ದಿವ್ಯ ತತ್ವ ಪ್ರೇರಿತರಾಗಿ ಪ್ರಾಗ್ವೈದಿಕ ಕಾಲದ ವಿಚಾರವಂತರು ಆ ಸತ್ಯ ತತ್ವವನ್ನು ನಿತ್ಯವಾಗಿ ಪೂಜಿಸಿ ಸದಾಸುಖಿಗಳಾಗಬೇಕೆಂಬ ಉತ್ಕಟೇಚ್ಛೆಯಿಂದ ಅನಂತವಾದ ಖಗೋಳಾಕಾರದ ಪಾಷಾಣಮಯ, ಅಪಾರವಾದ ಭೂಗೋಲಕಾಕಾರದ ಮೃಣ್ಮಯವಾದ ತಮತಮಗಿಷ್ಟ ಪ್ರಮಾಣವುಳ್ಳ ಮಹಾದೇವನ ಗೋಲಕ ಚಿನ್ಹ ಅರ್ಥಾತ್ ಮಹಾಲಿಂಗವನ್ನು ವಿಶ್ವೋದ್ಭವ ಸ್ಥಿತಿಲಯಾದಿಗಳಿಗೆ ಕಾರಣನೂ ನಿತ್ಯ, ಶುದ್ಧ, ಬುದ್ಧ, ಮುಕ್ತ, ನಿರ್ಲೇಪ, ನಿರಾಕಾರ, ನಿಷ್ಕಲ, ನಿರ್ಗುಣ, ನಿರ್ವಿಶೇಷ, ನಿರಾಮಯ, ನಿರಾಲಂಬ, ಸಚ್ಚಿದಾನಂದ ಘನ, ಸರ್ವಾಧಾರ, ಸರ್ವಗತ, ಸರ್ವಜ್ಞ, ಸರ್ವಸಮರ್ಥ, ಸರ್ವೇಶ್ವರ, ಮನೋವಾಗಗೋಚರನಾದ ಮಹಾದೇವನ ಅವ್ಯಕ್ತರೂಪದ ಪ್ರತಿರೂಪವನ್ನಾಗಿ ಭಾವಿಸಿ ಅರ್ಚಿಸಲಾರಂಭಿಸಿದರು. ಈ ಪ್ರಕಾರ ಜಗದುದ್ಧಾರಕ್ಕಾಗಿ ಮತ್ತು ಆತ್ಮ ಸುಖಕ್ಕಾಗಿ ಲಿಂಗ ತತ್ವವನ್ನು ಸಿದ್ಧಾಂತ ಗೊಳಿಸಿದ ವಿಶ್ವದ ಪ್ರಪ್ರಥಮ ದರ್ಶನಕಾರರೆಂದರೆ ಆ ಲಿಂಗಲೀಲಾ ವಿಲಾಸಿಗಳಾದ ಆರ್ಯೇತರ ಮಹರ್ಷಿಗಳೇ ಆಗಿದ್ದಾರೆ.

೪. ತತ್ಕಾಲೀನ ತತ್ವಜ್ಞಾನಿಗಳು ಲಿಂಗವು ಸ್ಥೂಲಕ್ಕಿಂತಲೂ ಸ್ಥೂಲ, ಸೂಕ್ಷ್ಮಾತಿಸೂಕ್ಷ್ಮವಾಗಿದೆಯೆಂದು ವಿಶ್ವಕ್ಕೆ ವಿಶ್ವಾಸವಾಗುವಂತೆ ಸ್ಥೂಲ ಹಾಗೂ ಸೂಕ್ಷ್ಮಲಿಂಗಗಳನ್ನು ನಿರ್ಮಿಸಿದರು. ಕೆಲವರು ಸ್ಥಾವರ ಲಿಂಗಗಳನ್ನು ಪೂಜಾ ಗೃಹಗಳಲ್ಲಿ ಸ್ಥಾಪಿಸಿ ಅವುಗಳನ್ನು ಪೂಜಿಸಹತ್ತಿದರು. ಇವರೇ ಲಿಂಗೋಪಾಸಕರು ಅಥವಾ ಮಹಾದೇವೋಪಾಸಕರು. ಮತ್ತೆ ಕೆಲವರು ಸೂಕ್ಷ್ಮಲಿಂಗವನ್ನು (ಲಘು ಆಕಾರದ) ಶಿರೋಭಾಗದಲ್ಲಿ (ಅರ್ಥಾತ್ ಜ್ಞಾನಿಗಳಾಗಿ) ಧರಿಸಹತ್ತಿದರು. ಅವರೇ ಲಿಂಗಧಾರಿಗಳು ಅಥವಾ ನಿರಾಕಾರ ಶೂನ್ಯೋಪಾಸಕ ಲಿಂಗವಂತರು. ಇವರು ಲಿಂಗವನ್ನು ಅಂಗದ ಮೇಲೆ ನಿರಂತರ ಧರಿಸುವವರು. ಲಿಂಗಭೋಗೋಪಭೋಗಿಗಳೂ ಆಗಿದ್ದರು. ಲಿಂಗದ ಬಗ್ಗೆ ಆ ಜನರಿಗೆ ಅಚಲ, ಅಸೀಮ, ಭಕ್ತಿ, ಶ್ರದ್ಧೆ ವಿಶ್ವಾಸಗಳಿದ್ದವು. ಲಿಂಗಕ್ಕಾಗಿ ತಮ್ಮ ಜೀವ ಜ್ಯೋತಿಯನ್ನೂ ಸಹ ಪರಂಜ್ಯೋತಿಯಲ್ಲಿ ವಿಲೀನಗೊಳಿಸಲು ಅವರು ಸದಾ ಬದ್ಧಪರಿಕರರಾಗಿದ್ದರು. ಈ ಜನಾಂಗದಲ್ಲಿ ಕುಲ, ಗೋತ್ರಾದಿ ಯಾವ ಸಂಗತಿಗಳೂ ಇದ್ದಿಲ್ಲ. ಅವರು ಕೇವಲ ಮಾನವ ಕುಲವನ್ನು ಮನ್ನಿಸುತ್ತಿದ್ದರು. ಅವರು ವಿಶ್ವಕುಟುಂಬಿಗಳು. ಅತಿವರ್ಣಾಶ್ರಮಿಗಳು. ಶ್ರೇಷ್ಠ-ನೀಚ ಭಾವನೆಗಳನ್ನು ಮೀರಿದವರೆನ್ನುವ "ಜಗತಾ ಕುಟುಂಬಿನಂ ಮನ್ಯತೆ ಆತ್ಮಾನಂ ಸಾಧುಃ" "ಅಯಂ ನಿಜಃ ಪರೋವೇತಿ ಗಣನಾ ಲಘುಚೇತಸಾಂ। ಉದಾರ ಚರಿತಾನಾಂ ತು ವಸುಧೈವ ಕುಟುಂಬಕಂ" "ಆತ್ಮೌಪಮ್ಯೇನ ಪುರುಷಃ ಪ್ರಮಾಣಮಧಿಗಚ್ಛತಿ।" "ಆತ್ಮವತ್ ಸರ್ವ ಭೂತೇಷು ಯಃ ಪಶ್ಯತಿ ಸ ಪಂಡಿತಃ।" "ಸರ್ವಂ ಖಲ್ವಿದಂ ಬ್ರಹ್ಮ।" "ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್" ಮೊದಲಾದ ಶೃತಿ ಕಾವ್ಯಾಂತರ್ಗತವಾದ ಸಕಲ ವಚನಗಳು ತತ್ಪೂರ್ವದ

ಲಿಂಗೋಪಾಸಕರಾದ ಲಿಂಗವಂತರ ಆಚಾರ ವಿಚಾರಗಳನ್ನು ಸಂಶೋಧಿಸಿ ಹಾಡಿದವುಗಳಾಗಿವೆ. ಲಿಂಗ ಪೂಜೆಯಲ್ಲಿ ನಿತಾಂತ ಶ್ರದ್ಧೆ, ವಿಶ್ವಾಸ, ಭಕ್ತಿಗಳೇ ಆ ಜನರ ಪ್ರಮುಖ ಲಕ್ಷಣಗಳಾಗಿದ್ದವು. ಅವರಿಗೆ ಯಜ್ಞ ಯಾಗಾದಿ ಹಿಂಸಾತ್ಮಕ ಕರ್ಮಕಾಂಡ, ಮಾನವ ಮಾನವರ ವರ್ಗೀಕರಣ ಜನನ–ಮರಣ ರಜಸ್ವಲತೆ ಮೊದಲಾದ ಸೂತಕಗಳು ಕಲ್ಪನೆಯಲ್ಲಿಯೂ ಸಹ ಬಂದಿರಲಿಲ್ಲ. ತಮ್ಮದೇ ಆದ ವಿಶಿಷ್ಟ ಆಚಾರ ಪದ್ಧತಿಯನ್ನು ಅನುಸರಿಸಿ ನಡೆಯುತ್ತಿದ್ದರು. ಅಂದಿನ ಪದ್ಧತಿಗಳು ಚೀನ, ಜಪಾನ, ಬ್ರಹ್ಮದೇಶ, ಸಿಯಾಮ, ಮಲಾಯಾ, ಜಾವಾ, ಸುಮಾತ್ರಾ, ಲಂಕಾ, ಇರಾಣ, ಅರಬಸ್ತಾನ, ಅಫಗಾನಿಸ್ಥಾನ, ಈಜಿಪ್ತ, ಗ್ರೀಸ, ಜರ್ಮನಿ, ಇಟಲಿ, ಸ್ಪೇನ, ಮೆಕ್ಸಿಕೋ ಮೊದಲಾದ ಪ್ರದೇಶಗಳಲ್ಲಿ ಸಾರಾಂಶ ತತ್ಕಾಲೀನ ಸಮಗ್ರ ಭೂಮಂಡಲದಲ್ಲಿ ಒಂದಿಲ್ಲೊಂದು ರೂಪದಲ್ಲಿ ಪ್ರಚಾರದಲ್ಲಿದ್ದವು. ಸಮಸ್ತ ಸಂಸಾರವೇ ಲಿಂಗಮಯವಾಗಿತ್ತು. "ಲಿಂಗಮಧ್ಯೇ ಜಗತ್ ಸರ್ವಂ" ವೆಂಬ ಸೂಕ್ತಿಯು ಅಂದಿನಿಂದಲೇ ಪ್ರಚಾರಕ್ಕೆ ಮೊದಲಾಯಿತು. ವಿದೇಶಗಳಲ್ಲಿಯೂ ಸಹ ನಾನಾ ರೀತಿಯಿಂದ ಲಿಂಗಪೂಜೆಯು ಪ್ರಚಾರದಲ್ಲಿರುವದು, ಮಕ್ಕಾಮದೀನಾದಲ್ಲಿರುವ ಪಾಷಾಣಮಯ ಲಿಂಗದಿಂದಲೇ ವ್ಯಕ್ತವಾಗುತ್ತದೆ.

೫. ಸದ್ಯದ ಲಿಂಗಭೋಗೋಪಭೋಗಿಗಳಾದ ವೀರಶೈವರ ಅದೃಷ್ಟವೆನ್ನುವಂತೆ ವಿದ್ಯಮಾನ ೨೦ನೆಯ ಶತಮಾನದ ಪೂರ್ವಾರ್ಧದಲ್ಲಿ ಒಂದು ಅತ್ಯಂತ ಅದ್ಭುತ ಮಹತ್ವ ಪೂರ್ಣವಾದ ಘಟನೆಯು ಘಟಸಿದೆ. ಸಿಂಧೂ ಉಪತ್ಯಕೆಯಲ್ಲಿ ವಾಸಿಸುತ್ತಿದ್ದ ಜನರ ಪರಿಪೂರ್ಣ ವಿಕಾಸ ಹೊಂದಿದ ವಿಷಯವನ್ನು ಸ್ಪಷ್ಟವಾಗಿ ವ್ಯಕ್ತಗೊಳಿಸುವ ಆಧಾರಗಳು ದೊರೆತಿವೆ. ಮೊಹೋಂಜದಾರೊ ಮತ್ತು ಹರಪ್ಪಾ ಸ್ಥಾನಗಳ ಉತ್ಖನನದಿಂದ ಪ್ರಾಗ್ವೈದಿಕ ಕಾಲದ ಭವ್ಯ ಭವನಗಳ ಭಗ್ನಾವಶೇಷಗಳು, ಸ್ಥಾವರ ಸೂಕ್ಷ್ಮಲಿಂಗಗಳು, ಅಷ್ಟಾಕಾರದ ಲಿಂಗಗಳನ್ನು ಇಡುವ ಕರಂಡಕಗಳು, ವೃಷಭ, ಮಹಾದೇವ ಅಥವಾ ಶಿವ, ಶಕ್ತಿ ಮೊದಲಾದ ಮೂರ್ತಿಗಳು ಮತ್ತೆ ಅನೇಕ ವಸ್ತುಗಳು ಲಬ್ಧವಾಗಿವೆ. ಈ ಸಿಂಧೂ ಘಟ್ಟದ ಸುಧಾರಣೆಯು ಮೆಸೋಪೋಟೋಮಿಯಾ ಮತ್ತು ಸಿರಿಯಾದಲ್ಲಿಯ ಪ್ರಾಚೀನ ಸುಧಾರಣೆಯನ್ನೇ ಹೋಲುತ್ತದೆ. ಭೂಗರ್ಭ ಶಾಸ್ತ್ರಜ್ಞರು, ಪುರಾವೃತ್ತ ಕೋವಿದರು ಏಕಕಂಠದಿಂದ ಈ ಅವಶೇಷಗಳು, ಚಿತ್ರಗಳು, ಮುದ್ರಿಕೆಗಳು, ಅನ್ಯ ಅನೇಕ ವಸ್ತುಗಳು ವೈದಿಕ ಕಾಲಕ್ಕಿಂತಲೂ ಅನೇಕಾನೇಕ ಸಹಸ್ರ ವರ್ಷಗಳ ಪೂರ್ವಕಾಲೀನದವುಗಳೆಂದು ಅಸಂದಿಗ್ಧವಾಗಿ ಅಭಿಪ್ರಾಯಪಟ್ಟಿದ್ದಾರೆ. ಈ ವಿಷಯವನ್ನೇ ಭಾರತದ ಪ್ರಧಾನ ಮಂತ್ರಿಗಳೂ, ಅಸಾಧಾರಣ ಮೇಧಾವಿಗಳೂ, ವಿಶ್ವದ ಪ್ರಥಮ ಶ್ರೇಣಿಯ ರಾಜನೀತಿ ಪಟುಗಳೂ ಆದ ಶ್ರೀ ಪಂಡಿತ ಜವಾಹರಲಾಲ ನೆಹರೂರವರು ತಮ್ಮ "ಡಿಸ್ಕವರಿ ಆಫ್ ಇಂಡಿಯಾ" ಎಂಬ ಸುಖ್ಯಾತ ಗ್ರಂಥದಲ್ಲಿ ಪುಷ್ಟೀಕರಿಸಿದ್ದಾರೆ. ಈ ಉತ್ಖನನದ ವಿಷಯವು ವಿಶ್ವಕ್ಕೆ

ವಿದಿತವಾಗುವ ಪೂರ್ವದಲ್ಲಿ ವಿಶೇಷವಾಗಿ ವಿದ್ವಾಂಸರು ವೇದಗಳೇ ಸಕಲ ಧರ್ಮಗಳ ಉಗಮ ಸ್ಥಾನಗಳೆಂದು ವಿಶಿಷ್ಟ ರೀತಿಯಿಂದ ವಿಶದೀಕರಿಸುತ್ತಿದ್ದರು. ಮೊಹೋಂಜ ದಾರೋ, ಹರಪ್ಪಾಗಳ ಉತ್ಖನನದಿಂದ ಉಪಲಬ್ಧವಾದ ವಸ್ತುಗಳು ಯಕ್ಷಿಣಿ ಯಷ್ಟಿ ಯಂತೆ ಸಕಲ ವಿದ್ವಾಂಸರನ್ನು ಚಕಿತಗೊಳಿಸಿವೆ. ಇದರಿಂದ ಸ್ಥಾವರ ಹಾಗೂ ಇಷ್ಟ ಲಿಂಗೋಪಾಸಕರಾದ ಲಿಂಗಧಾರಕರ ಸಂಸ್ಕೃತಿ ಮತ್ತು ಧರ್ಮಗಳು ಎಷ್ಟು ಪ್ರಾಚೀನ ತಮವಾಗಿವೆ ಎಂಬ ಸಂಗತಿಯು ದಿವಾಕರನ ದೇದೀಪ್ಯಮಾನ ಕರನಿಕರದಂತೆ ಸ್ವಯಂ ಸಿದ್ಧವಾಗುತ್ತದೆ. ಇದಲ್ಲದೇ ಮೇಲೆ ಉಲ್ಲೇಖಿಸಿದ ಸ್ಥಾನಗಳಲ್ಲಿ ಲಬ್ಧವಾದ ಕಂಥೆ ಧರಿಸಿದ ಲಿಂಗವು ವೀರಶೈವರು ಸಾಂಪ್ರತ ಧರಿಸುವಂಥ ಲಿಂಗವೇ ಆಗಿದೆ. ಇದನ್ನು ಮೈಸೂರು ಸರಕಾರದ ಪುರಾತನ ವಸ್ತು ಸಂಗ್ರಹಾಲಯದಲ್ಲಿ ನೋಡಬಹುದೆಂದು ಡಾ|| ಅಣ್ಣಾಜಪ್ಪ, ಪ್ರೊಪ್ರಾಯಿಟರ ಮಾಡರ್ನ ಫಾರ್ಮಸಿ, ಮೈಸೂರು ಇವರು "ಅನಾದಿ ವೀರಶೈವ ಸಂಗ್ರಹ" ದಲ್ಲಿ ಉಲ್ಲೇಖಿಸಿದ್ದಾರೆ. ದಿನಾಲು ಪೂಜಿಸು ತ್ತಿರುವ ಲಿಂಗವನ್ನು ಕರಂಡಕದಲ್ಲಿಟ್ಟು ಅದನ್ನು ಸದಾ ದೇಹದಲ್ಲಿ ಧರಿಸಿ ಸಂಚರಿಸು ತ್ತಿರುವ ಜನಾಂಗವು ಜಗತ್ತಿನ ಯಾವದೇ ಧರ್ಮದ ಇತಿಹಾಸದ ಪುಟಗಳಲ್ಲಿ ಕಂಡು ಬಂದರೆ ಅವರು ವೀರಶೈವರೇ ಎಂಬುದು ಗಮನಾರ್ಹ ವಿಷಯವಾಗಿದೆ.

೬. ವೇದ ಪೂರ್ವದ ಲಿಂಗೋಪಾಸಕರಾದ ಸನಾತನಿಗಳಲ್ಲಿ ಅನೇಕ ಮುನಿ ಗಳಿದ್ದರು. ಅವರಿಗೆ "ಕೇಶಿ" ಗಳೆಂದು ಅಭಿದಾನವಿತ್ತು. ಮುಂದೆ ಅದೇ ಪರಂ ಪರೆಯ ವೇದಕಾಲದ ಮುನಿಗಳು ಜಟಾಧಾರಿಗಳಾಗಿದ್ದರು. ಇವರ ಯೋಗಾಭ್ಯಾಸ, ಯೋಗಸಾಧನೆ, ಪರಿಪೂರ್ಣತೆ ಹೊಂದಿದ್ದವು. ಇದಲ್ಲದೇ ಅವರು ಶಾಪಾನುಗ್ರಹ ಶಕ್ತಿಯುಳ್ಳವರಾಗಿದ್ದರು. ಆರ್ಯೇತರ ಈ ಮುನಿಗಳ ಯೋಗಸಾಧನವು ಸಮ ಕಾಲೀನರಾದ ಆರ್ಯ ಜನಾಂಗದವರ ಮೇಲೆ ಸೀಮಾತೀತ ಪ್ರಭಾವವನ್ನು ಬೀರಿತು. ಆರ್ಯರು ಜಟಾಧಾರಿ ಮುನಿಗಳನ್ನು ನೋಡಿದಾಕ್ಷಣವೇ ಭಯ ಭಕ್ತಿಯಿಂದ ಪೂಜ್ಯ ಭಾವನೆಯುಳ್ಳವರಾಗಿ ಆದರದಿಂದ ಶರಣಾಗತರಾಗುತ್ತಿದ್ದರು. ಈ ಮುನಿಗಳೇ ಲಿಂಗಯೋಗಿಗಳು. ಅವರು ಲಿಂಗಯೋಗದಲ್ಲಿ ಸಾಫಲ್ಯಹೊಂದಿ ಮೇದಿನಿಯಲ್ಲಿ ಲಿಂಗಯೋಗದ ಅರ್ಥಾತ್ ಶಿವಯೋಗದ ಮಹಾತ್ಮ್ಯವನ್ನು ಶಾಶ್ವತವಾಗಿ ಪ್ರಸ್ಥಾಪಿ ಸಿದರು. ಈ ಮುನಿಗಳು ತಮ್ಮ ಪ್ರತಿಸ್ಪರ್ಧಿಗಳನ್ನು ಶಪಿಸುವಾಗ್ಗೆ ಅತ್ಯಂತ ಉಗ್ರ ಹಾಗೂ ಕೃದ್ಧರಾಗುತ್ತಿದ್ದರು. ಇದನ್ನು ಕಂಡು ಆರ್ಯರು ಆ ಮುನಿಗಳನ್ನು ತಮ್ಮ ಪುರೋಹಿತರಿಗಿಂತಲೂ ಶ್ರೇಷ್ಠರೆಂದು ಮನ್ನಿಸಹತ್ತಿದರು. ಮುನಿ ಶಬ್ದವು ಯೋಗಿ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಈ ಶಬ್ದದ ಉತ್ಪತ್ತಿಯನ್ನು ಸಂಸ್ಕೃತದ ಪದ್ಧತಿಯಂತೆ ವೈಯಾಕರಣಿಗಳು ಬಹಳ ಕಷ್ಟದಿಂದ ಸಿದ್ಧಗೊಳಿಸಿದ್ದಾರೆ. ಆದರೆ ಅವರ ಉಗ್ರಸ್ವಭಾವ ಮತ್ತು ಕ್ರೋಧಾವಸ್ಥೆಗಳನ್ನು ನೋಡಿದರೆ ಮುನಿಯೆಂದರೆ ಕೋಪಗೊಳ್ಳು ಎಂದಿರಬೇಕೆಂದು ಅನುಮಾನವಾಗುತ್ತದೆ. ಅಂತೆಯೇ "ಮುನಿ"

ಎಂದರೆ ದ್ರಾವಿಡ ಭಾಷೆಯೊಡದ ಕನ್ನಡಲ್ಲಿ ಕೋಪಗೊಳ್ಳು, ಸಿಟ್ಟಾಗು ಎಂದು ಆಗುವುದನ್ನು ಜ್ಞಾಪಿಸಿಕೊಂಡರೆ ದ್ರಾವಿಡ ಭಾಷೆಗೂ ಆ ಮುನಿಗಳಿಗೂ ಇರುವ ಸಂಬಂಧವು ಸ್ಪಷ್ಟವಾಗಬಹುದು. ಅಸೂಯಾಪರರಾದ ಆರ್ಯರಿಂದ "ವ್ರಾತ್ಯ" ರೆಂದು ಹೇಳಿಸಿಕೊಂಡ ಈ ಲಿಂಗಯೋಗಿಗಳ ಯೋಗ ಪ್ರಭಾವದಿಂದ ಪ್ರಭಾವಿತರಾಗಿ ಮುಂದೆ ಆ ಆರ್ಯರೇ ಅವರಿಗೆ ಮಹಾದೇವ, ಈಶಾನ, ರುದ್ರ, ಶಿವರೆಂದು ಸಂಬೋಧಿಸಿ ಪೂಜಿಸತ್ತಿದರೆಂಬ ವಿಷಯವು ವೇದಗಳಲ್ಲಿ (ಅಥರ್ವ ೧೫-೧-೪-೫) ಬರುತ್ತದೆ. ಹೀಗೆ ವ್ರಾತ್ಯರಿಗೆ ಪೂಜ್ಯಭಾವದಿಂದ ಆರ್ಯರು ಕರೆಯಲ್ಪಟ್ಟ ಹೆಸರುಗಳನ್ನು ಇಂದಿನ ವೀರಶೈವರಲ್ಲಿ ವಿಶೇಷವಾಗಿ ಕಾಣಬಹುದು. ಪುರಾತನ ಲಿಂಗವಂತರಲ್ಲಿ ಲಿಂಗಾರಾಧಕ ಹಾಗೂ ಮುನಿ ಅಥವಾ ಲಿಂಗ ಯೋಗಿಶ್ವರ ಎಂಬ ಎರಡೇ ವರ್ಗಗಳಿದ್ದವು. ಲಿಂಗಭಕ್ತ, ಲಿಂಗಯೋಗಿಗಳಲ್ಲಿ ಯಾವ ಅಭ್ಯಂತರವೂ ಇದ್ದಿಲ್ಲ. ತಮ್ಮ ನಿರ್ಮಲಾಚರಣೆ, ಪರಿಶುದ್ಧ ಹೃದಯ, ಲಿಂಗಭಕ್ತಿ, ವಿಶ್ವಬಂಧುತ್ವ, ಸಮತೆ, ಮಮತೆ, ದಯಾಲುತ್ವ, ನಿಷ್ಕಾಮ ಕರ್ಮ, ಪರೋಪಕಾರ, ಪರಮ ವೈರಾಗ್ಯಾದಿ ಸದ್ಗುಣಗಳಿಂದ ಸದ್ಭಕ್ತನು ಲಿಂಗ ಸಾಕ್ಷಾತ್ಕಾರ ಹೊಂದಿ ತನ್ನ ಅನುಭವಾಮೃತವನ್ನು ಅನ್ಯ ಜನರಿಗೆ ಬೋಧಿಸುತ್ತಿದ್ದನು. ಇವನು ಪುರೋಹಿತ, ಮುನಿ ಅಥವಾ ಲಿಂಗಯೋಗಿಯಾಗಿ ಪರಿಣಮಿಸುತ್ತಿದ್ದನು. ಪುರೋಹಿತನಾದಾಗ್ಯೂ ಭಕ್ತನು ಮಾಡುವ ಕ್ರಿಯೆಗಳನ್ನು ಅವನು ವಿಸರ್ಜಿಸುತ್ತಿದ್ದಿಲ್ಲ. ಸಾರಾಂಶ ಭಕ್ತನು ಲಿಂಗಯೋಗಿಯಾಗುತ್ತಿದ್ದನು. ಲಿಂಗಯೋಗಿಯು ಭಕ್ತನ ಕರ್ತವ್ಯಗಳನ್ನು ನಿತ್ಯ ನೆರವೇರಿಸುತ್ತಿದ್ದನು. ಭಕ್ತ ಹಾಗೂ ಮುನಿ (ಗುರು)ವೆಂಬ ಸ್ವತಂತ್ರ ಜಾತಿಗಳಿದ್ದಿಲ್ಲ. ಭಕ್ತತ್ವ, ಗುರುತ್ವ, ಜಾತಿಗತವಾಗಿರದೇ ಗುಣಕರ್ಮಗಳನ್ನೇ ಆಶ್ರಯಿಸಿದ್ದವು. "ನಕೋಪಿ ನೀಚೋ ಭುವಿ ವಿದ್ಯತೇತ್ರ । ನಕೋಪಿ ಶ್ರೇಷ್ಠೋ ಭುವಿ ವಿದ್ಯತೇಽತ್ರ । ಸರ್ವೇ ಸಮಾನಾ ಭುವಿ ಭೌತಿಕತ್ವಾತ್ । ತತಃ ಪ್ರಯತ್ನೋ ಗುಣ ಸಂಗ್ರಹೇಸ್ತು ॥" "ಗುಣಾಃ ಪೂಜಾಸ್ಥಾನಂ" ಮುಂತಾದ ವಚನಗಳು ಪುರಾತನ ಲಿಂಗಭಕ್ತರ ಆಚರಣೆಯನ್ನು ಸ್ಮರಿಸಿ ಹಾಡಿದವುಗಳೆಂದು ನಂಬುವದಾದರೆ ಇಂದು ಅವೇ ಮೂಲ ತತ್ತ್ವಗಳನ್ನು ಅಕ್ಷರಶಃ ಸಿದ್ಧಾಂತ ರೂಪನಲ್ಲಿ ಪಾಲಿಸುತ್ತಿರುವ ವರ್ಣಾಶ್ರಮಾತೀತ ಲಿಂಗಧಾರಿಗಳಾದ ವೀರಶೈವರಲ್ಲಿ ಕಂಡುಬರುವ ಭಕ್ತ, ಗುರು ಅಥವಾ ಶರಣ, ಜಂಗಮಾದಿ ಸ್ಥಲಗಳ ಮರ್ಮವು ವಿಶ್ವದ ಮಾನವರಿಗೆ ವಿಶೇಷವಾಗಿ ಅರಿವಾಗಬಹುದಾಗಿದೆ.

೭. ವೇದಪೂರ್ವಕಾಲದಲ್ಲಿ ಲಿಂಗೋಪಾಸಕರಾದ ಲಿಂಗಭಕ್ತರು ಮಹಾದೇವ ನಿರ್ಮಿತ ಸೃಷ್ಟಿಯಲ್ಲಿ ಪ್ರಾಕೃತಿಕ ಆಧಾರದಿಂದಲೇ ಅವ್ಯಕ್ತ ಶಕ್ತಿಸಮೇತ ಮಹಾದೇವನ ವ್ಯಕ್ತರೂಪವಾದ ಲಿಂಗವನ್ನು ಪೂಜಿಸುತ್ತಿದ್ದಂತೆ ವೇದಕಾಲೀನ ಆರ್ಯರಾದರೂ ವೈಚಿತ್ರ್ಯ ಪೂರ್ಣ ವಸುಂಧರೆಯಲ್ಲಿದ್ದ ಅಗಣಿತ ವಸ್ತು ಸಂಘಾತವನ್ನು ಈಕ್ಷಿಸಿ ಇವುಗಳನ್ನು ಸೃಜಿಸಿದವನಾರು ಎಂದು ವಿಚಾರಮಾಡಲಾರಂಭಿಸಿದರು.

ಆರ್ಯರಿಗೆ ಪ್ರಥಮತಃ ನಭೋಮಂಡಲದಲ್ಲಿದ್ದ ಕೃಷ್ಣಮೇಘಜಾಲವು ತದ್ ಘರ್ಷಣೆಯಿಂದ ಜನಿಸಿದ ಸೌದಾಮಿನಿ, ಬಲಾಹಕ-ಘನಗಂಭೀರ, ಘೋಷ, ಇವೇ ಮೊದಲಾದ ವಸ್ತುಗಳು ಗೋಚರವಾದವು. ಈ ಭಯಂಕರ ದೃಶ್ಯವನ್ನು ನೋಡಿ ಅವರು ಈ ದೃಶ್ಯದ ಹಿಂದೆ ಒಂದು ಭೀಷಣ ಶಕ್ತಿಯು ಕಾರ್ಯಮಾಡುತ್ತದೆಂದು ಕಲ್ಪಿಸಿ ಆ ಶಕ್ತಿಗೆ "ರುದ್ರ" ಎಂಬ ನಾಮಕರಣಮಾಡಿ ಉಪಾಸಿಸಹತ್ತಿದರು. ರುದ್ರನಿಗೆ ಸಾಕಾರ ಮೂರ್ತಿಯೆಂದು ಭಾವಿಸಿ ಜಟಾಜೂಟ, ಕಪರ್ದಿ, ಧೂರ್ಜಟಿ, ಪಿನಾಕಿ, ಭವ, ಶರ್ವ ಎಂದು ಸಂಬೋಧಿಸಹತ್ತಿದರು ತಮ್ಮ ಪಶುಗಳು ವಜ್ರಾಘಾತದಿಂದ ನಿಧನ ಹೊಂದುವದನ್ನು ಅನುಭವಿಸಿ ರುದ್ರನನ್ನೇ "ಪಶುಪತಿ" ಎಂದು ಆರಾಧಿಸಹತ್ತಿದರು. **ಆರ್ಯೇತರ ಜನಾಂಗದವರು ಯಾವ ಮಹಾದೇವನಿಗೆ ಲಿಂಗನೆನ್ನುತ್ತಿದ್ದರೋ ಆ ದೇವನಿಗೆ ಆರ್ಯರು ರುದ್ರನೆಂದು ಸಂಬೋಧಿಸುತ್ತಿದ್ದರು. ರುದ್ರನೇ ಪರಮ ಆರಾಧ್ಯ ದೇವನಾದನು.** ಲಿಂಗೋಪಾಸಕರು ಏಕೇಶ್ವರವಾದಿಗಳಾಗಿದ್ದರು. ಆದರೆ ಆರ್ಯರು ಅನೇಕ ದೇವತೋಪಾಸಕರಾಗಿದ್ದರು. ಮಹಾಲಿಂಗನೇ ಅರ್ಥಾತ್ ಮಹಾದೇವನೇ ವಿಶ್ವಕರ್ತಾ ಎಂದು ಲಿಂಗಭಕ್ತರು ನಿಶ್ಚಯಿಸಿದ್ದನ್ನೇ ಆರ್ಯಋಷಿಗಳನೇಕರು ಒಪ್ಪಿಕೊಂಡು "ನಾಸದೀಯ" ಸೂಕ್ತವನ್ನು ರಚಿಸಿದರು. ನಾಸದೀಯ ಸೂಕ್ತದಲ್ಲಿ ವಿಶ್ವರಚನೆಯ ವರ್ಣನೆ ಇದೆ. ಇದಲ್ಲದೇ ಪರಮೇಶ್ವರನು ಇಚ್ಛಾ, ಜ್ಞಾನ, ಕ್ರಿಯಾಖ್ಯ ಶಕ್ತಿತ್ರಯ ಸಂಪನ್ನನೆಂದು ಉಲ್ಲೇಖವಿದೆ (ಸ್ವಾಮಿ ದಯಾನಂದ ಸರಸ್ವತಿ).

೮. ಆರ್ಯ ಮುನಿಗಳನೇಕರು ಆರ್ಯೇತರರ ಏಕೇಶ್ವರ ವಾದವನ್ನು ಮನಗಂಡು "ಏಕಂ ಸದ್ ವಿಪ್ರಾ ಬಹುಧಾ ವದಂತಿ, ಅಗ್ನಿಂ ಯಮಂ ಮಾತರಿಶ್ವಾನಮಾಹುಃ।" (ಋ. ೧-೧೬೪-೪*) ಎಂದು ಮಂತ್ರರಚನೆ ಮಾಡಿದರು. ಆರ್ಯೇತರರ ಲಿಂಗೋಪಾಸನೆಯ ಕ್ರಮವು ಅಖಂಡ ಅವ್ಯಾಹತ ಅಪ್ರತಿಹತವಾಗಿ ಮುಂದುವರೆದದ್ದನ್ನು ಮನಗಂಡು ಅಪ್ರಬುದ್ಧ ಆರ್ಯರು ಆರ್ಯೇತರರ ಆರಾಧ್ಯ ದೇವತೆಯನ್ನೇ ಅನಾದರಿಸ ಹತ್ತಿದರು. ಬಹು ಪ್ರಯತ್ನಮಾಡಿ ರುದ್ರನಿಗೆ "ಶಿವ" ಎಂದರೆ ಮಂಗಲಕಾರಿ ಎಂದು ನಾಮಕರಣಮಾಡಿ ಆರ್ಯೇತರರನ್ನು ಒಲಿಸಿಕೊಳ್ಳಹತ್ತಿದರು. ಆರ್ಯೇತರರಾದ ಲಿಂಗಭಕ್ತರು ಲಿಂಗವೆಂದರೆ ಶಿವ, ಶಿವ ಎಂದರೆ ರುದ್ರ ಎಂದು ತತ್ವತಃ ತಿಳಿದು ರುದ್ರದೇವನನ್ನು ಲಿಂಗದೇವನೆಂದು ಆರಾಧಿಸಹತ್ತಿದರು. ಆದರೆ ತಮ್ಮದೇ ಆದ ಲಿಂಗಾರ್ಚನೆಯನ್ನು ತ್ಯಜಿಸಲಿಲ್ಲ. ಇದನ್ನು ಕಂಡು ಅಸಹಿಷ್ಣುಗಳಾದ ಆರ್ಯರು ಕೋಪಾವಿಷ್ಟರಾಗಿ ಲಿಂಗೋಪಾಸಕರಾದ ಶಿವಲಿಂಗ ಭಕ್ತರಿಗೆ "ಶಿಶ್ನ ದೇವಾಃ" ಇತ್ಯಾದಿ ಹೇಯವಚನಗಳಿಂದ ಸಂಬೋಧಿಸಹತ್ತಿದರು. ಮತ್ತು ಅವರ ಆರಾಧ್ಯ ದೇವತೆಯಾದ ಲಿಂಗವನ್ನು ತುಚ್ಛೀಕರಿಸಿ ಅದಕ್ಕೆ ಅಲ್ಲಸಲ್ಲದ ಅರ್ಥವನ್ನು ಕಲ್ಪಿಸಿ ಅಪಪ್ರಚಾರ ಮಾಡಲಾರಂಭಿಸಿದರು (ಋ. ೭-೨೧-೫) (೧೦-೯೯-೩).

ಆದರೂ ಅಧಿಕಾಧಿಕ ಜನರು ಲಿಂಗೋಪಾಸಕರಾಗಿಯೇ ಉಳಿದರು. ಇಷ್ಟಕ್ಕೂ ಸಾಲದೇ ಲಿಂಗ ಅಥವಾ ಶಿವೋಪಾಸನೆಯನ್ನು ತೊಡೆದುಹಾಕಲು ಸ್ವಾರ್ಥ ಧರ್ಮೋನ್ಮತ್ತರಾದ ಆರ್ಯರು " ವಿಷ್ಣು " ಎಂಬ ದೇವತೆಯನ್ನು (ಋ. ೧-೨೨-೧೮) ಕಲ್ಪನೆ ಮಾಡಿ ಪ್ರಚಾರದಲ್ಲಿ ತಂದು ತಮ್ಮದೇ ಆದ ಪಶು ಹಿಂಸಾಚಾರ-ವ್ಯಭಿಚಾರ ಪ್ರಚುರ ಯಜ್ಞಯಾಗಾದಿ ಕರ್ಮಗಳಲ್ಲಿ ಅವನಿಗೆ ಮಹತ್ವ ಕೊಡಹತ್ತಿದರು. ಮತ್ತು ತಮ್ಮ ಸಂಗಡವನ್ನು ಬಲಪಡಿಸಲು ಚತುರ್ವರ್ಣಾಶ್ರಮಗಳೆಂಬ ಪ್ರತಿಬಂಧಕ ಕೋಟೆಗಳನ್ನು ಬಲವಾಗಿ ನಿರ್ಮಿಸಿದರು. ಆ ಕೋಟೆಗಳು ಶಾಶ್ವತವಾಗಿ ಉಳಿಯಲು ಸತ್ಯಸ್ವರೂಪನಾದ ಆ ದೇವನೇ ಅವುಗಳನ್ನು ನಿರ್ಮಿಸಿದನೆಂದು ಹೇಳಿ ದ್ರೋಹ ಬಗೆದರು. (ಋ. ಯ. ಯ. ೧೧). ಆ ರೀತಿಯಾದ ಅನೇಕ ವೇದಮಂತ್ರಗಳನ್ನು ರಚಿಸಿ ಪ್ರಚಾರ ಮಾಡಹತ್ತಿದರು. ಇದು ಇಂದಿಗೂ ಜಗತ್ತಿನ ಧಾರ್ಮಿಕ ತತ್ವಜ್ಞಾನಿಗಳಿಗೆ ಬಿಡಿಸಲಾಗದ ಒಗಟಾಗಿ ಅನೇಕ ಜನಾಂಗವನ್ನು ಕಾಡುತ್ತಿದೆ. ಆ ಕೋಟೆಗಳನ್ನು ಸಹಸ್ರಾರು ವರ್ಷಗಳ ಪೂರ್ವದಲ್ಲಿ ಸ್ವಯಂ ನಿರ್ಮಿತ ಸ್ವಾನುಭವ ಸತ್ಯ, ಅಹಿಂಸೆ ಎಂಬ ವಜ್ರಾಯುಧದಿಂದ ಒಡೆಯಲು ಪ್ರಯತ್ನಪಟ್ಟು ಸಫಲರಾದ ಭಾರತೀಯ ಮಹರ್ಷಿ ಅವತಾರಿಗಳಾದ ಮಹಾವೀರ, ಗೌತಮ ಬುದ್ಧ ಮತ್ತು ಮಹಾತ್ಮಾ ಬಸವೇಶ್ವರರಿಗೆ ಸಂಪೂರ್ಣ ಮಾನವ ಜನಾಂಗವೇ ಋಣಿಯಾಗಬೇಕಾಗಿದೆ. ಲಿಂಗೋಪಾಸಕರಾದ ಲಿಂಗಭಕ್ತರಲ್ಲಿ ಅನೇಕ ಶಿವಯೋಗಿಗಳಿದ್ದರು. ಅವರು ಜಟಾಧಾರಿಗಳಾಗಿ ಯೋಗಾಭ್ಯಾಸ ಬಲದಿಂದ ಶಿವಸಾಕ್ಷಾತ್ಕಾರ ಹೊಂದಿ ತಮ್ಮ ಶಿವಾನುಭವ ಪಿಯೂಷವನ್ನು ಜಗತ್ತಿಗೆ ವಿತರಿಸಲು ಯಾವಾಗಲೂ ಚರಿಸುತ್ತಿದ್ದರು. ಇವರ ಮಹಿಮೆಯನ್ನು ಕಂಡು ಆರ್ಯರು ಇವರಿಗೆ ಮಹಾದೇವ, ಈಶಾನ, ರುದ್ರ, ಶಿವರೆಂದು ಆದರಿಸಹತ್ತಿದರೆಂಬ ವಿಷಯವನ್ನು ನಾವು ಈ ಮೊದಲೇ ಪ್ರತಿಪಾದಿಸಿದ್ದೇವೆ. ಇವರೇ ವೇದಕಾಲೀನ ಚರಮೂರ್ತಿಗಳು (ಸದ್ಯದ ಜಂಗಮರು). (ಮಹಾಮಹೋಪಾಧ್ಯಾಯ ಶ್ರೀ ಹರಿಪ್ರಸಾದಶಾಸ್ತ್ರಿ, ಜೆ.ಎಸ್.ಎ.ಬಿ. ೧೯೨೧ ಪೃಷ್ಠ ೧೭) ಮುಂದೆ ಬರಬರುತ್ತ ವೈದಿಕ ಕಾಲದಲ್ಲಿ ಕಲ್ಪಿಸಿದ ಇಂದ್ರ, ಸೂರ್ಯ, ಯಮ, ಅಗ್ನಿ ಇತ್ಯಾದಿ ಸಮಸ್ತ ದೇವತೆಗಳು ರುದ್ರನಲ್ಲಿಯೇ ವಿಲೀನಗೊಂಡರು ಮತ್ತು ಲಿಂಗೋಪಾಸನೆಯ ಪ್ರಭಾವವು ಅಚ್ಚಳಿಯದೇ ತನ್ನ ಗಂಭೀರಗತಿಯಿಂದ ಮುಂದುವರೆಯಿತೆನ್ನುವ ವಿಚಾರವನ್ನು ವೇದ ಮಂತ್ರಗಳಲ್ಲಿಯೇ ನೋಡುವದಾದರೆ ಅವುಗಳನ್ನು ಸಂಗ್ರಹಿಸಿದ " ಲಿಂಗಧಾರಣ ಚಂದ್ರಿಕೆ " ಎಂಬ ಗ್ರಂಥವನ್ನು ನೋಡಬಹದು.

೯. ಆರ್ಯೇತರ ಮಹರ್ಷಿಗಳು ಕಂಡ ದಾರ್ಶನಿಕ ತತ್ವಗಳನ್ನು ಅನುಸರಿಸಿ ತಮ್ಮದೇ ಆದ ವಿಚಾರ ಶೈಲಿಯಲ್ಲಿ ವೇದಾಂತ ಕಾಲದ ಕೆಲವು ಋಷಿಗಳು ಶಕ್ತಿತ್ರಯ ಸಂಪನ್ನನಾದ ಪರಮೇಶ್ವರನ ಸೃಜನಶಕ್ತಿಗೆ ಪ್ರಕೃತಿಯೆಂದು, ಅದು ಪುರುಷನಂತೆ ಸ್ವತಂತ್ರವೆಂದು ಹೇಳಿ ಅದರಿಂದ ಮುಕ್ತನಾಗುವದೇ ಮೋಕ್ಷವೆಂದು ಅಭಿಪ್ರಾಯ

ವ್ಯಕ್ತಪಡಿಸಿದರು. ಮತ್ತೆ ಕೆಲವರು ಈಶ್ವರನ ಶಕ್ತಿಗೆ ಮಾಯಾ, ಅವಿದ್ಯಾ ಎಂದು ಸಂಬೋಧಿಸಿ ಜಗನ್ಮಿಥ್ಯಾ ಎಂದು ಹೇಳಿ ಕೇವಲ ಜ್ಞಾನವೇ ಮೋಕ್ಷದಾಯಕವೆಂದು ಕಲ್ಪನೆ ಮಾಡಿದರು. ಪ್ರಾಚೀನ ಆರ್ಯೇತರ ಜನಾಂಗದ ಪರಂಪರೆಯವರಾದ ಲಿಂಗಭಕ್ತರು (ಶಿವಯೋಗಿಗಳು) ಶಕ್ತಿ ಮತ್ತು ಶಿವರ ಅವಿನಾಭಾವ ಸಂಬಂಧವನ್ನು ಸಿದ್ಧಮಾಡುತ್ತ ಜ್ಞಾನಕರ್ಮಗಳೆರಡೂ ಮೋಕ್ಷಕ್ಕೆ ಕಾರಣವೆಂದು ತಿಳಿದು ಜಗತ್ತು ಸತ್ಯವೆಂಬ ಪ್ರಾಚೀನ ಸಿದ್ಧಾಂತವನ್ನು ಪ್ರತಿಪಾದಿಸಹತ್ತಿದರು. ಈ ಪ್ರಕಾರ ಆರ್ಯೇತರ ಮಹರ್ಷಿಗಳ ತತ್ವಸಿದ್ಧಾಂತವೇ ಉಪನಿಷದ್ದರ್ಶನಕ್ಕೆ ನಾಂದಿಯಾಯಿತು. ವಿವಿಧ ದರ್ಶನಗಳ ಪ್ರಾದುರ್ಭಾವವು ಇಲ್ಲಿಂದಲೇ ಪ್ರಾರಂಭವಾಯಿತೆನ್ನಬಹುದು. ಶಿವಾಗಮಗಳಲ್ಲಿ ದೊರಕುವ ಸಿದ್ಧಾಂತಗಳು ಶೃತಿಪ್ರತಿಪಾದಿತ ವಿಷಯಗಳೇ ಆಗಿವೆ. ಅಲ್ಲಲ್ಲಿ ಗೋಚರವಾಗುವ ಶಿವ, ಶಕ್ತಿ, ಶರಣ ಎಂಬ ಶಬ್ದಗಳ ಪರ್ಯಾಯ ರೂಪಗಳು ಮೂಲತಃ ಆರ್ಯೇತರ ಜನಾಂಗದವರಾಡುವ ದ್ರಾವಿಡ ಭಾಷೆಯಲ್ಲಿ 'ಆನ್' ಎಂದರೆ ಶಿವ. 'ಅಮ್ಮಾ' ಎಂದರೆ ಶಕ್ತಿ. 'ಆನಿಲ್' ಎಂದರೆ ಶರಣ ಎಂಬ ತತ್ವಗಳನ್ನೇ ಪ್ರತಿನಿಧೀಕರಿಸುತ್ತವೆಂದು ಅನೇಕ ತತ್ವಜ್ಞಾನಿಗಳು ಅಭಿಪ್ರಾಯಪಡುತ್ತಾರೆ. ಈ ತತ್ವವು ಇಂದಿಗೂ ವೀರಶೈವರಲ್ಲಿ ಪ್ರಚಾರದಲ್ಲಿದೆ. ಶಿವಾಗಮಗಳು ಆರ್ಯೇತರ ಜನಾಂಗದವರಾದ ಲಿಂಗವಂತ ಶಿವಭಕ್ತರ ಮೂಲತತ್ವಗಳನ್ನೇ ಪ್ರತಿಪಾದಿಸುತ್ತವೆ.

ರಾಮಾಯಣದಲ್ಲಿ ಲಿಂಗೋತ್ಕರ್ಷ ಸೂಚಕ ಸಂಗತಿಗಳು ವಿಪುಲವಾಗಿ ಉಪಲಬ್ಧ ಅವೆ. ಭಾರತದಲ್ಲಿ ಸತ್ಯನಿಷ್ಠರಾಜನೆಂದು ಮತ್ತು ಆರ್ಯಶ್ರೇಷ್ಠನೆಂದು ವೈದಿಕರಲ್ಲಿ ಪ್ರಸಿದ್ಧನಾದ ದಶರಥರಾಜನ ಹಿರಿಯ ಮಗನಾದ ರಾಮಚಂದ್ರನೇ ಲಂಕಾಗಮನ ಪೂರ್ವದಲ್ಲಿ ಮಹಾ ಲಿಂಗಭಕ್ತನಾದ ರಾವಣನನ್ನು ಯುದ್ಧದಲ್ಲಿ ಗೆಲ್ಲುವದಕ್ಕಾಗಿ ಲಿಂಗಪೂಜೆಯನ್ನು ಮಾಡಿ ಶಿವಾನುಗ್ರಹವನ್ನು ಪಡೆದುಕೊಂಡಿದ್ದಾನೆ. ರಾಮನು ಸ್ಥಾಪಿಸಿ ಪೂಜಿಸಿದ ಲಿಂಗಕ್ಕೆ ಈಗಲೂ ರಾಮೇಶ್ವರ ಲಿಂಗ ಎನ್ನುತ್ತಾರೆ. ಪ್ರಾಗ್ವೈದಿಕ ಕಾಲದಲ್ಲಿ ಆರ್ಯೇತರ ಜನಾಂಗದವರು ಅನುಸರಿಸುತ್ತಿದ್ದ ಲಿಂಗತ್ವವೇ ರಾಮಾಯಣದಲ್ಲಿ ಕಂಡುಬರುತ್ತದೆ.

ಮಹಾ-ಭಾರತದಲ್ಲಿ ಪುರಾತನ ಲಿಂಗಪೂಜಾ ವಿಧಾನವು ಸ್ಪಷ್ಟ ಕಂಡು ಬರುತ್ತದೆ. ಕೃಷ್ಣ, ಉಭಿಮನ್ಯು, ಅರ್ಜುನ, ಅಶ್ವಥ್ಥಾಮ, ಯುಧಿಷ್ಠಿರ ಮೊದಲಾದವರು ಲಿಂಗೋಪಾಸಕರಾಗಿದ್ದರು. ಹಾಗೂ ಮಹಾಭಾರತದಲ್ಲಿ ಲಿಂಗತತ್ವದ ಪ್ರಾಚೀನತೆಯನ್ನು ತೋರಿಸುವ ಅಧೋಲಿಖಿತ ವಿವರಣೆ ಇದೆ. "ಅಸಂಖ್ಯಾತಾ ಭವಿಷ್ಯಂತಿ ಭಿಕ್ಷವೋ ಲಿಂಗಿನಸ್ತಥಾ। ಆಶ್ರಮಾಣಾಂ ವಿಕಲ್ಪಾಶ್ಚ ವೃತ್ತೇಽಸ್ಮಿನ್ ವೈಕೃತೇ ಯುಗೇ" (ಶಾಂತಿ ೬೪-೨೫) ಇದರಿಂದ ಸತ್ಯಯುಗದಲ್ಲಿ ಸಹ ಲಿಂಗಧಾರಣ ಮಾಡುವವರು ಅಸಂಖ್ಯಾತರಾಗಿದ್ದರೆಂದು ಸ್ಪಷ್ಟವಾಗುವದಲ್ಲದೇ ವೀರಶೈವರ ಪ್ರಾಚೀನತೆಯು ಸ್ವಯಂಸಿದ್ಧವಾಗುತ್ತದೆ. ಇದರಂತೆ "ಕರಂಡ ದಂಡಪಾನೀಯ ಪಾತ್ರ ಮಾತ್ರ

ಪರಿಗ್ರಹಾನ್ । ಕ್ವಚಿತ್ ತ್ರಿದಂಡಿನೋ ದೃಷ್ಟ್ವಾ ನಿಃ ಸಂಗಾನ್ ನಿಷ್ಪರಿಗ್ರಹಾನ್" (ಕಾಶೀ ಖಂಡ ಅಧ್ಯಾಯ ೮೫-೯) ಈ ಶ್ಲೋಕದ ಟೀಕಾಕಾರನು ಕರಂಡ ಶಬ್ದಕ್ಕೆ ವೀರಶೈವರು ಲಿಂಗವನ್ನು ಇಡುವ ಕರಡಿಗೆ (ಪಾತ್ರೆ) ಎಂದು ಬರೆದಿದ್ದಾನೆ. ಇದರಂತೆ ಇನ್ನೂ ಅನೇಕ ಆಧಾರಗಳು ಶಕ್ತಿ ವಿಶಿಷ್ಟಾದ್ವೈತದ ಪುರಾತನತ್ವವನ್ನು ಸ್ಪಷ್ಟಗೊಳಿಸುತ್ತವೆ.

ಪುರಾಣ ಕಾಲದಲ್ಲಿ ಶಿವ ಮತ್ತು ವಿಷ್ಣು ದೇವತೆಗಳು ಪ್ರಮುಖರಾಗಿದ್ದಾರೆ. ಕೆಲವರು ಲಿಂಗ ಅಥವಾ ಶಿವೋಪಾಸಕರಾಗಿದ್ದಾರೆ. ಮತ್ತೆ ಕೆಲವರು ವಿಷ್ಣು ಪೂಜಕರಾಗಿದ್ದಾರೆ. ಮತ್ತೆ ಕೆಲವರು ಶಿವ, ವಿಷ್ಣು ದೇವತೆಗಳು ಭಿನ್ನವಾಗಿರದೇ ಒಬ್ಬನೇ ಒಬ್ಬ ಪರಶಿವನ ಪರ್ಯಾಯ ರೂಪಗಳೆಂದು "ಏಕೋ ದೇವಃ ಕೇಶವೋ ವಾ ಶಿವೋವಾ" ಇತ್ಯಾದಿ ವಾಕ್ಯಗಳಿಂದ ಪ್ರತಿಪಾದಿಸುತ್ತಾರೆ. ಇನ್ನೂ ಅನೇಕ ಸಿದ್ಧಾಂತ ಗ್ರಂಥಗಳೂ ಸಹ ಲಿಂಗ ಧರ್ಮವನ್ನೇ ಪ್ರತಿಪಾದಿಸುತ್ತವೆ. ಅವುಗಳಲ್ಲಿ ಅಗಸ್ತ್ಯರಿಗೆ ಉಪದೇಶಿಸಲ್ಪಟ್ಟ ಶ್ರೀ ಶಿವಯೋಗಿ ಶಿವಾಚಾರ್ಯರಿಂದ ಸಂಪಾದಿಸಿ ರಚಿತವಾದ ಸಿದ್ಧಾಂತ ಶಿಖಾಮಣಿ ಗ್ರಂಥವು ತನ್ನ ಹೆಸರಿಗೆ ತಕ್ಕಂತೆ ಸರ್ವ ಸಿದ್ಧಾಂತಗಳ ಸಾರಭೂತವಾಗಿದೆ. ಅದರಲ್ಲಿ "ವೇದಶಾಸ್ತ್ರ ಪುರಾಣೇಷು ಕಾಮಿಕಾದ್ಯಾಗಮೇಷು ಚ । ಲಿಂಗಧಾರಣಮಾಖ್ಯಾತಂ ವೀರಶೈವಸ್ಯ ನಿಶ್ಚಯಾತ್ ॥". ವೀರಶೈವವು ವೇದಶಾಸ್ತ್ರ ಪುರಾಣಗಳಲ್ಲಿಯೂ, ಕಾಮಿಕಾದಿ ಆಗಮ-ಗಳಲ್ಲಿಯೂ ಪ್ರತಿಪಾದಿತವಾಗಿದೆ. "ವಿಷ್ಣುಬ್ರಹ್ಮಾದಯೋ ದೇವಾ ಮುನಯೋ ಗೌತಮಾದಯಃ। ಧಾರಯಂತಿ ಸದಾಲಿಂಗಂ ಉತ್ತಮಾಂಗೆ ವಿಶೇಷತಃ॥". ಎಂದು ಹೇಳಿದ್ದಾರೆ. ವಿಷ್ಣುಬ್ರಹ್ಮಾದಿ ದೇವತೆಗಳು, ಗೌತಮಾದಿ ಮುನಿಗಳು* ಲಿಂಗ ಧಾರಿಗಳಾಗಿದ್ದಾರೆಂಬುದೇ ಈ ಶ್ಲೋಕದ ಅರ್ಥವು. ಈ ಶ್ಲೋಕದಲ್ಲಿದ್ದ ಗೌತಮ ಮುನಿಯ ಕಾಲವು ತ್ರೇತಾಯುಗವೆಂದು ಸಿದ್ಧವಾಗುತ್ತದೆ. ಯಾಕೆಂದರೆ "ಕೃತೇತು ಮಾನವಾ ಧರ್ಮಾಸ್ತ್ರೇತಾಯಾಂ ಗೌತಮಾಃ ಸ್ಮೃತಾಃ॥ ದ್ವಾಪರೆ ಶಾಂಖ ಲಿಖಿತಾಃ ಕಲೌ ಪಾರಾಶರಾಃ ಸ್ಮೃತಾಃ॥" (ಪಾರಾಶರ ಸ್ಮೃತಿ. ಅಧ್ಯಾಯ ೧, ಶ್ಲೋಕ ೨೪) ಎಂದು ಹೇಳಿದೆ. ಈ ಶ್ಲೋಕದಲ್ಲಿ ಉಲ್ಲೇಖಿಸಲ್ಪಟ್ಟ ಗೌತಮನು ಬೌದ್ಧಧರ್ಮ ಸ್ಥಾಪಕನಾದ ಗೌತಮನಂತೂ ಅಲ್ಲವೇ ಅಲ್ಲ. ಯಾಕೆಂದರೆ ಅವನು ನಿರೀಶ್ವರವಾದಿ ಆಗಿದ್ದು, ಲಿಂಗಧಾರಣಕ್ಕೂ, ಅವನಿಗೂ ಯಾವ ಸಂಬಂಧವೂ ಇಲ್ಲ. ಬೌಧಾಯನ ಸೂತ್ರದಲ್ಲಿ ಬರುವ ಗೌತಮನ ಕಾಲವು ಇ.ಪೂ. 300 (ಜೆ.ಆರ್. ಘಾರ ಪುರೆ-ಹಿಂದೂ ಲಾ ೧೯೧೦) ಇವನೂ ಅಲ್ಲ. ತ್ರೇತಾಯುಗದಲ್ಲಿ ಅಹಲ್ಯಾಪತಿಯಾದ

---

* ಅಗಸ್ತ್ಯ, ಗೌತಮ, ದೂರ್ವಾಸ, ದಧೀಚಿ, ಸಾನಂದ, ವ್ಯಾಸ, ಕಶ್ಯಪ, ಉಪಮನ್ಯು, ಪರಕಂಠ, ಜಮದಗ್ನಿ ಮುಂತಾದವರು (ಸಂ. ಮಂ, ಅಧ್ಯಕ್ಷರು.)

ಗೌತಮನೆಂಬ ಒಬ್ಬ ಮುನಿ ಇದ್ದನು.* ಅವನೇ ಪ್ರಸ್ತುತ ಶ್ಲೋಕದಲ್ಲಿಯ ಲಿಂಗ ಧಾರಿಯಾದ ಮುನಿಯು, ಕೃತಯುಗವು ೧೭೨೮೦೦೦ ವರ್ಷ ಪರಿಮಿತಿಯುಳ್ಳದ್ದು. ತ್ರೇತಾಯುಗವು ೧೨೯೬೦೦೦ ವರ್ಷ ಪ್ರಮಾಣದ್ದು, ದ್ವಾಪರವು ೮೬೪೦೦೦ ವರ್ಷಗಳ ಪ್ರಮಾಣದ್ದು, ಕಲಿಯುಗವು ೪೩೨೦೦೦ ವರ್ಷ ಆಯುಷ್ಯ ಉಳ್ಳದ್ದು (ಆಪ್ಟೆ ಸಂಸ್ಕೃತ ಕೋಶ). ಈಗಿರುವ ಕಲಿಯುಗದ ಪೂರ್ವದಲ್ಲಿ ಗತಿಸಿಹೋದ ದ್ವಾಪರ, ತ್ರೇತಾ ಹಾಗೂ ಸತ್ಯಯುಗವನ್ನು ಸಹ ಕೂಡಿಸಿದರೆ ೩೮೮೮೦೦೦ ವರ್ಷಗಳಾಗುತ್ತವೆ. ಇಷ್ಟು ವರ್ಷಗಳ ಪೂರ್ವದಲ್ಲಿಯೇ ಲಿಂಗವಂತರ ಧರ್ಮವಿತ್ತೆಂದು ಸಿದ್ಧವಾಗುತ್ತದೆ. ಇದಲ್ಲದೇ ಲಿಂಗ ಧಾರಣ ಚಂದ್ರಿಕೆ, ಸಿದ್ಧಾಂತ ಶಿಖೋಪನಿಷತ್, ವೀರ–ಲೈಂಗ್ಯೋಪನಿಷತ್, ವಾತುಲಾ ಗಮ, ಪರಮೇಶ್ವರಾಗಮ, ವೀರಾಗಮ, ಸೂಕ್ಷ್ಮಾಗಮ, ಶಿವಪುರಾಣ, ಲಿಂಗಪುರಾಣ, ಸ್ಕಂದಪುರಾಣ, ಪದ್ಮಪುರಾಣ, ಗೌತಮಸ್ಮೃತಿ, ಹಾರೀತಸ್ಮೃತಿ – ಮೊದಲಾದ ಪ್ರಸಿದ್ಧ ಧಾರ್ಮಿಕ ಗ್ರಂಥಗಳಲ್ಲಿ ಶಕ್ತಿ ವಿಶಿಷ್ಟಾದ್ವೈತ ಮತದ ಪುರಾತನತ್ವದ ವಿಚಾರಗಳು ಓತಪ್ರೋತವಾಗಿವೆ. ಪಂಢರಪುರದ ಪಾಂಡುರಂಗ, ಅನಂತಶಯನದ ಪದ್ಮನಾಭ, ತುಳಜಾಪುರದ ಭವಾನಿದೇವಿ, ಕೊಲ್ಹಾಪುರದ ಲಕ್ಷ್ಮಿದೇವಿ, ಗವಿಪುರದ ಆಂಜನೇಯ ಮೊದಲಾದ ವೈಷ್ಣವ ಹಾಗೂ ಶೈವ ಮೂರ್ತಿಗಳ ಮಸ್ತಕಗಳ ಮೇಲೆ ಲಿಂಗಧಾರಣವು ಕಂಡು ಬರುತ್ತದೆ. ವಿಷ್ಣು ಲಕ್ಷ್ಮಿಗಳ ಶಿರೋಭಾಗದಲ್ಲಿ ಲಿಂಗ ವಿರುವದು. ಆರಾಧಕರ ಲಿಂಗದ ಬಗ್ಗೆ ಇರುವ ಆದರ ಭಾವವನ್ನೇ ವ್ಯಕ್ತಗೊಳಿಸುವ ದಲ್ಲದೇ ವೇದಗಳಲ್ಲಿ ಬಂದ ವಿಷ್ಣು ದೇವತೆಯ ಮಸ್ತಕದ ಮೇಲೆ ಲಿಂಗವನ್ನು ಧರಿಸಿ ಪೂಜಿಸಿದ ಸಂಗತಿಯು ಪುರಾತನ ಕಾಲದಿಂದಲೂ ಪ್ರಸಿದ್ಧವಿರುವದು ಕಂಡು ಬರುತ್ತದೆ. ಇದರಿಂದ ಲಿಂಗವಂತರ ಮಹಿಮೆ ಮತ್ತು ಪುರಾತನತ್ವದ ಕಲ್ಪನೆ ಸಹಜವಾಗಿ ಬರುವದು

ಆರ್ಯರ ವೈದಿಕ ಮತದಿಂದೀಚೆಗೆ ಅನೇಕ ಮತ ಮತಾಂತರಗಳ ಕಲಹ ಕೋಲಾಹಲದಲ್ಲಿ ಕಲಿಕಾಲದ ದುರ್ವಾದದ ವಾತಾವರಣದಲ್ಲಿ ವೇದಾಗಮೋಪನಿಷತ್ ಬ್ರಹ್ಮ ಸೂತ್ರಾದಿಗಳ ಭಾಷ್ಯಕರ್ತೃಗಳ ತಿಕ್ಕಾಟದಲ್ಲಿ ಅನೇಕ ನವೀನ ಸಂಪ್ರದಾಯ ಸಿದ್ಧಾಂತಗಳ ಗ್ರಂಥಪ್ರಚಾರ ಯುಗದಲ್ಲಿ ಮಾನವರು ವೇದ ಪೂರ್ವಕಾಲದ ಲಿಂಗೋಪಾಸಕರಾದ ಲಿಂಗವಂತರ ಅತಿ ಪ್ರಾಚೀನ ಮೂಲ ಸಿದ್ಧಾಂತ ತತ್ವಗಳನ್ನು ಮರೆಯಲಾರಂಭಿಸಿದಾಗ್ಯೆ ಮರ್ತ್ಯಲೋಕದ ಉದ್ಧಾರಾರ್ಥವಾಗಿ ಇಂದಿಗೆ ಸಹಸ್ರಾರು ವರ್ಷಗಳ ಪೂರ್ವದಲ್ಲಿ ಮೂಲ ನಿವಾಸಿಗಳ ಪರಂಪರೆಯಲ್ಲಿ ಬಂದ ಮಹಾಯೋಗಿ ಗಳಾದ ರೇವಣ ಬಸವಾಲ್ಲಮಾದಿ ಸಹಸ್ರಾರು ವೀರ ಶಿವಶರಣರು, ವಿಭೂತಿಗಳು

---

* ನ್ಯಾಯ ಶಾಸ್ತ್ರವನ್ನು ರಚಿಸಿದ ಗೌತಮ ನೊಬ್ಬನಿದ್ದಾನೆ (ಸಂ.ಮಂ. ಅಧ್ಯಕ್ಷರು)

ತಮ್ಮ ನಿತಾಂತ ನಿರ್ಮಲಾಂತಃಕರಣಗಳಿಂದ ಜಗತ್ತಿನ ಪ್ರಥಮ ಮಹದ್ ಗ್ರಂಥವಾದ ವೇದದಿಂದ ಹಿಡಿದು, ಆಗಮ, ಉಪನಿಷತ್, ಸ್ಮೃತಿ, ಪುರಾಣ, ಬ್ರಹ್ಮ ಸೂತ್ರಾದಿಗಳಲ್ಲಿ ಅಳಿಯದೇ ಉಳಿದುಕೊಂಡು ಬಂದಿರುವ ವೇದ ಪೂರ್ವ ಕಾಲೀನ ಮಹರ್ಷಿಗಳು ಕಂಡ ತತ್ವಗಳನ್ನೆತ್ತಿಕೊಂಡು ಅವುಗಳಿಗೆ ವಿರೋಧವಾಗಿದ್ದ ವೇದಾಗಮೋಪನಿಷತ್ ಪುರಾಣೇತಿಹಾಸಗಳಲ್ಲಿಯ ನವಾಗಂತುಕ ಸ್ವಾರ್ಥಿಗಳಿಂದ ಸೇರಿಸಲ್ಪಟ್ಟ ತತ್ವಗಳನ್ನು ಖಂಡಿಸಿ, ಯೋಗ್ಯವಾದ ಪ್ರಾಚೀನ ತತ್ವಗಳನ್ನೇ ಅಂಗೀಕರಿಸಿ, ಅನುಭವಿಸಿ, ಜಗತ್ತಿನಲ್ಲಿ ಅವ್ಯಕ್ತ ಪರಮೇಶ್ವರನ ಅಥವಾ ಪರಬ್ರಹ್ಮನ ವ್ಯಕ್ತ ರೂಪವಾದ ಲಿಂಗತತ್ವವನ್ನು ವಿಶ್ವದ ಜನರು ವಿಶಾಲ ಭಾವನೆಯಿಂದ ಅರಿತುಕೊಳ್ಳುವ ಹಾಗೆ ಎರಡೆಂಭತ್ತು ಕೋಟಿ ವಚನ ಗೀತಗಳಿಂದ ತತ್ವನಿರ್ಣಯ ಮಾಡಿ ಮರ್ತ್ಯಲೋಕದವರ ಕಲ್ಯಾಣಕ್ಕಾಗಿ, ಕಲ್ಯಾಣಕ್ಕೆ ಬಂದು ಅನುಭವ ಮಂಟಪ ದ್ವಾರಾ ಪ್ರಚಾರಗೊಳಿಸಿ ಜಗಜ್ಯೋತಿಗಳೆಂದೆನಿಸಿಕೊಂಡು ಹೋಗಿದ್ದಾರೆ. ಅನಾದಿಯಾದ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವು ಅದ್ಯಯಾವತ್ ಶಾಶ್ವತ ಅಪ್ರತಿಹತ ಗತಿಯಿಂದ ಅಜಿಂಕ್ಯವಾಗಿ ಜಗತ್ತಿನಲ್ಲಿ ಬೆಳಗುತ್ತ ಬಂದಿದೆ.

೧೦. ಜಗತ್ತಿನ ಸರ್ವಧಾರ್ಮಿಕ ತತ್ವಜ್ಞಾನಿಗಳಿಗೆ ಸಮಗ್ರ ಸಿದ್ಧಾಂತಗಳು, ಅಂದರೆ ಸಾಂಖ್ಯ, ಯೋಗ, ಪಾಂಚರಾತ್ರ, ವೇದ ವೇದಾಂತ, ಸಿದ್ಧ ಸಿದ್ಧಾಂತ, ಇಸ್ಲಾಂ, ಕ್ರೈಸ್ತ, ಯಹೂದಿ ಜೈನ, ಬೌದ್ಧ, ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ದ್ವೈತಾದ್ವೈತ, ಶುದ್ಧಾದ್ವೈತ, ಅಜಿಂತ್ಯ, ಭೇದಾಭೇದ, ಲಕುಲೀಶ, ಸ್ಮಾರ್ಥ, ಕಾಪಾಲಿಕ, ಕಾಳಾಮುಖ, ಪ್ರತ್ಯಭಿಜ್ಞಾದರ್ಶನ, ಶಿವಾದ್ವೈತವಾದ, ಶಬ್ದದ್ವೈತ ವಾದ, ಸಮಾಜವಾದ, ನಾಥಪಂಥ, ಚರಣದಾಸೀಪಂಥ, ಗಾಣಪತ್ಯ, ಸೌರ, ಶಾಕ್ತ, ತುಳಸೀದಾಸ, ತುಕಾರಾಮ, ಸಮರ್ಥ ರಾಮದಾಸ, ದತ್ತ ಸಂಪ್ರದಾಯ, ನರಸಿಂಹ ಸಂಪ್ರದಾಯ, ಕಬೀರ ಪಂಥ, ನಾನಕ ಪಂಥ, ದಾದೂ ಪಂಥ, ಅಘೋರ ಪಂಥ, ಬ್ರಹ್ಮ ಸಮಾಜ, ರಾಧಾಸ್ವಾಮಿ ಪಂಥ, ಆರ್ಯ ಸಮಾಜ, ಬ್ರಹ್ಮ ವಿದ್ಯಾ ಸಭಾ ಅಥವಾ ಥಿಯೋಸಾಫಿಕಲ್ ಸೊಸಾಯಿಟಿ ಇತ್ಯಾದಿ ಸುಧಾರಕ ಮತ ಪಂಥಗಳ ಸಮಸ್ತ ತತ್ವಗಳನ್ನು ಜಗತ್ ಕಲ್ಯಾಣಕ್ಕಾಗಿ ಒಂದೆಡೆ ಸಮನ್ವಯ ಮಾಡಿ, ಏಕಮೇವ ಧರ್ಮವನ್ನು ಜಗತ್ತಿನಲ್ಲಿ ಘೋಷಣೆ ಮಾಡಬೇಕೆಂಬ ಸದ್ಬುದ್ಧಿ ಉದಯಿಸಿದಾಗ ಅವರೆದುರಿಗೆ ಏಕಕಾಲದಲ್ಲಿ ಕಾಣುವ ಸರ್ವ ಧರ್ಮ ಸಮನ್ವಯ ಧರ್ಮವೆಂದರೆ ವೇದ ಪೂರ್ವಕಾಲೀನ ಲಿಂಗಾರಾಧಕರ ಧರ್ಮವೇ ಅಂದರೆ ಸದ್ಯದ ವೀರಶೈವ ಅಥವಾ ಲಿಂಗಾಯತರ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತವೇ ಎಂದು ಯಾರಾದರೂ ಹೇಳಬಹುದು.

ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತವು ಕ್ರಿಯಾ, ಭಕ್ತಿ, ಜ್ಞಾನ, ವೈರಾಗ್ಯವನ್ನು, ಜಗತ್ ಸತ್ಯತ್ವವನ್ನು, ಅಹಿಂಸಾ ವ್ರತವನ್ನೂ, ವರ್ಣಾಶ್ರಮಾತೀತ ಭಾವವನ್ನೂ,

ಭಾವವನ್ನೂ, ಸಮತಾ, ಮಮತಾ ಗುಣಗಳನ್ನು, ಸಾಕಾರ ನಿರಾಕಾರೋಪಾಸನೆಯನ್ನೂ ಯಜ್ಞಯಾಗಾದಿ ಹಿಂಸಾ ಪ್ರಧಾನ ಕರ್ಮಕಾಂಡ, ನಿರಾಕರಣವನ್ನು, ಲೋಕ ಕಲ್ಯಾಣಕಾರಕ, ನಿಷ್ಕಾಮ, ಕರ್ಮದ, ಪುರಸ್ಕಾರವನ್ನು, ಸೂತಕಾಸ್ಪೃಶ್ಯತಾದಿ ಭ್ರಾಮಕ ಕಲ್ಪನೆಯ ನಿರಸನವನ್ನು ವಿಶ್ವಬಂಧುತ್ವ ವಿಚಾರವನ್ನು, ಸತ್ಯಪ್ರೇಮದ ಮಹತ್ವವನ್ನೂ, ಏಕೇಶ್ವರ ವಾದವನ್ನೂ, ಬೋಧಿಸುತ್ತಿರುವದರಿಂದ ವಿಶ್ವದಲ್ಲಿ ಸರ್ವಾಂಗ ಸುಂದರ, ಸರಲ, ಸರಸ, ಸಮಂಜಸ, ಸರ್ವಾನುಕೂಲ, ಸರ್ವಸಮ್ಮತ ಸಮರ್ಥ, ಓಜಸ್ವಿ, ತೇಜಸ್ವಿ ಮತವಾಗಿದೆ. ವಿಶ್ವದ ಸಮಸ್ತ ಮತ ಪಂಥಗಳ ಅಶೇಷ ಪ್ರಮುಖ ತತ್ವಗಳನ್ನು, ತನ್ನಲ್ಲಿಟ್ಟುಕೊಂಡು, ವಿಶ್ವಧರ್ಮವಾಗುವ ಪೂರ್ಣ ಅರ್ಹತೆಯುಳ್ಳದ್ದಾಗಿದೆಯಲ್ಲದೇ ಯುಗ ಯುಗಾಂತರದಿಂದ ಅಸ್ತಿತ್ವದಲ್ಲಿ ಬಂದಿದೆ. ವೇದ ಪೂರ್ವ ಕಾಲದ ಲಿಂಗಾರಾಧಕರು ಕಂಡ ಸಿದ್ಧಾಂತವನ್ನು ಚಾಚೂ ತಪ್ಪದೇ ಅನೂಚಾನವಾಗಿ ವಿವರಿಸುತ್ತಬಂದ ಮತವಿದಾಗಿದೆ. "ಶಾಸ್ತ್ರಾದ್‌ರೂಢಿರ್ಬಲೀಯಸೀ" ಇದಕ್ಕಿಂತಲೂ ಶಕ್ತಿ-ವಿಶಿಷ್ಟಾದ್ವೈತದ ಪ್ರಾಚೀನತೆಯನ್ನು ಮತ್ತು ಯೋಗ್ಯತೆಯನ್ನು ಸಿದ್ಧಗೊಳಿಸಲು ಅಧಿಕ ಪ್ರಮಾಣಗಳ ಅವಶ್ಯಕತೆಯೇ ಇಲ್ಲ. ಈ ಮೀಮಾಂಸೆಯನ್ನು ಮೀಮಾಂಸಕರು ಕೂಲಂಕಷವಾಗಿ ಪರಿಶೀಲಿಸಿದರೆ ಸತ್ಯ ಸಂಗತಿಯು ವ್ಯಕ್ತವಾಗದೆ ಇರದೆಂದು ನಮ್ಮ ಸ್ಪಷ್ಟವಾದ ಅಭಿಮತವಿದೆ.

ಸತ್ಯಂ ಶಿವಂ ಸುಂದರಂ.

---::---

# ಶಾಸನೋಕ್ತ ವೀರಶೈವರು

●

ಡಾ|| ಬಿ. ಎಸ್. ಗದ್ದಗಿಮಠ, ಎಂ.ಎ., ಪಿ.ಹೆಚ್.ಡಿ.,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಜನಾಂಗವು ನಡೆದು ಬಂದದಾರಿಯೇ ಇತಿಹಾಸವು, ಎಂದು ಸಾಮಾನ್ಯವಾಗಿ ಹೇಳಬಹುದು. ನಾಗರಿಕತೆಯನು ಕಾಣದ ಪ್ರಾಕ್ತನ ಮಾನವನಿಂದ ನಾಗರಿಕತೆಯ ಪಟ್ಟವನ್ನೇರಿದ ಇಪ್ಪತ್ತನೆಯ ಶತಮಾನದ ವಿಜ್ಞಾನಯುಗದ ಸುಸಂಸ್ಕೃತ ಮಾನವನ ವರೆಗೆ, ಇತಿಹಾಸವು ಮಾನವನ ಅದ್ಭುತಗಳನ್ನೂ ನಾಗರಿಕತೆಯ ಸಾಧ್ಯಾಸಾಧ್ಯ ಗಳನ್ನೂ ಪಡೆಗೆ (Achievements) ಗಳನ್ನೂ ಹೇಳುತ್ತ ಬಂದಿವೆ. ಇತಿಹಾಸದ ಮಹತಿಯನ್ನು ಅರಿತ ಜನಾಂಗಗಳು ಆಯಾಕಾಲದ ಸಾಧನಗಳ ಮೂಲಕ ಐತಿಹಾ ಸಿಕ ಪ್ರಸಂಗಾದಿಗಳನ್ನು ಉಳಿಸಿಕೊಂಡು ಬಂದಿವೆ. ಈ ಸಂದರ್ಭದಲ್ಲಿ ಪ್ರಾಕ್ತನ ಮಾನವನ ಚಿತ್ರಕಲೆ (Primitive paintings) ನಾಗರಿಕತೆಯು ಪ್ರಾರಂಭವಾದ ಮೇಲೆ ಬೆಳೆದು ಬಂದ ಶಿಲ್ಪ (ವಾಸ್ತುಶಿಲ್ಪ-ಮೂರ್ತಿಶಿಲ್ಪ) (Architecture) ಜೀವ ನೋಪಕರಣ (Implenents), ಸಾಹಿತ್ಯ-ಲಲಿತಕಲಾ (Fine Arts and Literature), ದಿಗಳು ಮಾನವ ಇತಿಹಾಸವನ್ನು ಅರಿಯಲು ಮೂಲ ಸಾಧನಗಳಾಗಿವೆ. ಉಲ್ಲೇಖನಾ (Records) ದಿನಗಳನ್ನು ಬಿಟ್ಟಲ್ಲಿ ಐತಿಹಾಸಿಕ ಸತ್ಯತೆಗೆ ಉಳಿದೆಲ್ಲವು ಅಹುದು-ಗಿಹುದಿನ ಸಂಶಯವೆಂದು ಕೆಲವರು ಅಭಿಪ್ರಾಯ ಪಟ್ಟರೂ ಸತ್ಯಸಾಧನೆಯ ಸಂಶೋಧಕನು ಸಂಶೋಧನೆಯ ಕ್ಷೇತ್ರದಿಂದ ಅವನ್ನು ಬದಿಗಿಡಲಾರ. ಅವು ಸತ್ಯ ಹುದುಗಿದ ಸಿಂಪೆಂದು ಬಗೆದು ಸಾಧ್ಯವಾದಲ್ಲಿ ಆ ಸಿಂಪೊಡೆದು ಅದರ ಮುತ್ತುಗಳನ್ನು ಒರೆಗೆ ಹಚ್ಚಲು ಯತ್ನಿಸಿದ್ದಾನೆ.

ಶಿಲಾಶಾಸನ (Lithic Records) ಗಳೂ ತಾಮ್ರ ಕಂಚಿನ ಪಟ (Copper plates) ಗಳೂ ನಾಣ್ಯಾ (Coins) ದಿಗಳೂ ಐತಿಹಾಸಿಕ ಉಲ್ಲೇಖವುಳ್ಳ ಒಡವೆಗಳಾ

ಗಳಾಗಿವೆ. ಕನ್ನಡ ಐತಿಹಾಸಿಕ ಉಲ್ಲೇಖಗಳನ್ನು ಈ ಎಲ್ಲವುಗಳಲ್ಲಿಯೂ ನಾವು ಕಾಣುತ್ತೇವೆ. ಕನ್ನಡ ಜನಾಂಗವನ್ನು ಅಭ್ಯಸಿಸುವಾಗ ಬಹುಸಂಖ್ಯಾಕರಾದ ವೀರಶೈವರ ಇತಿಹಾಸವು ಮಸುಕಾಗಿ ಕಾಣುತ್ತಿರುವುದಕ್ಕೆ ಅವರು ಇತಿಹಾಸಕ್ಕೆ ಮಹತ್ವ ಕೊಡದಿರುವುದು, ಅವರು ಶಿವಶರಣರ ಮಾರ್ಗದಲ್ಲಿ ಬಂದುದೇ ಮೂಲ ಕಾರಣವಾಗಿದೆ. 'ನುಡಿಯೇ ನಡೆ' ಎಂದು ಉಸಿರುಳ್ಳ ಈ ಮಾರ್ಗವು ಜನಮನದ ಲ್ಲಿಳಿದು ರಕ್ತಗತವಾಗಿರುವುದರಿಂದ ವೀರಶೈವರ ಇತಿಹಾಸವು ಜನತೆಯ ಭಕ್ತಿ-ಪರಂ ಪರೆ-ಸಂಪ್ರದಾಯಾದಿಗಳಲ್ಲಿ ಹಾಸುಹೊಕ್ಕಾಗಿದೆ. ಶಾಸನೋಕ್ತ ಉಲ್ಲೇಖಗಳು ಅಲ್ಲೊಂದು ಇಲ್ಲೊಂದು ದೃಷ್ಟಿಗೆ ಬಿದ್ದರೂ ಶೈವಾಚ್ಛಾದನದಲ್ಲಿ ಮಬ್ಬಾಗಿವೆ. ತೀರ ಇತ್ತೀಚೆಗೆ ಕೆಲವನ್ನು ಮಾತ್ರ ಅಲ್ಲಲ್ಲಿ ಸೂಚಿಸಿ ಸಂಶೋಧಕರು ಉಲ್ಲೇಖಿಸಿದ್ದರೂ ಅವುಗಳನ್ನು ಸಂಪೂರ್ಣ ವಿಂಗಡಿಸಿ ಪ್ರತ್ಯೇಕವಾಗಿ ಬರೆಯುವ ಸಾಹಸವು ನಡೆದಂತೆ ಕಂಡುಬಂದಿಲ್ಲ. ಇದು ಅತಿ ಪರಿಕಷ್ಟ ಸಾಹಸವಾಗಿರುವುದರಿಂದಲೂ ಸಾಹಸ ಮಾಡಿದರೂ ಶ್ರಮ-ಧನಾದಿಗಳ ಹಾನಿಯೇ ತೋರುವುದರಿಂದಲೂ ಸರಕಾರ-ಸಂಘ-ಸಂಸ್ಥಾನಾದಿಗಳ ಸಮಯೋಚಿತ ಸಹಾಯ-ಪ್ರೋತ್ಸಾಹವು ದೊರೆಯುದುದರಿಂದಲೂ ಸಂಶೋಧಕನಿಗೆ ನಿರುತ್ಸಾಹವಾಗುವುದರಲ್ಲಿ ಸೋಜಿಗವೇನು ? ಹೀಗಿದ್ದರೂ ಆತ್ಮ ತೃಪ್ತಿಯ ಸ್ವಾರ್ಥಕ್ಕಾಗಿ ನನ್ನ ದೃಷ್ಟಿಗೆ ಬಂದ ಎಲ್ಲ ಈ ಐತಿಹಾಸಿಕ ಉಲ್ಲೇಖಗಳನ್ನು ಒಂದೆಡೆಗೆ ಸಂಗ್ರಹಿಸಿ "ವೀರಶೈವರ ಶಿಲಾಶಾಸನಗಳು" * ಎಂಬ ಮಹಾಗ್ರಂಥವನ್ನು ರಚಿಸಲು ಯತ್ನಿಸಲಾಗಿದೆ.

ಈಗ ದೊರೆತ ಶಿಲಾಶಾಸನಗಳನ್ನು ಪರಿಶೀಲಿಸಿದಾಗ ಶಿಲಾಶಾಸನಗಳಲ್ಲಿ ಉಲ್ಲೇ ಖಿಸಲ್ಪಟ್ಟ ಪ್ರಪ್ರಥಮ ವೀರಶೈವನೆಂದರೆ, ಶಿವಶರಣ ದೇವರ ದಾಸಿಮಯ್ಯ. ಈ ಶಿವ ಶರಣನು ಪಶ್ಚಿಮಚಾಲುಕ್ಯರ ಜಗದೇಕಮಲ್ಲ, ಎರಡನೆಯ ಜಯಸಿಂಹನ ಕಾಲ (ಕ್ರಿ. ಶ. ೧೦೧೮-೧೦೪೪) ದಲ್ಲಿದ್ದನು. ಈ ಚಕ್ರವರ್ತಿ ಜಯಸಿಂಹನ ಪಟ್ಟದರಸ, ಸುಗ್ಗಲಾದೇವಿಯು ಜೇಡರ ದಾಸಿಮಯ್ಯನ ಪರಮ ಶಿಷ್ಯಳಾಗಿದ್ದಳು. ಜಯಸಿಂಹ (ದೇಸಿಂಗ) ಸುಗ್ಗಲಾದೇವಿ (ಸುಗ್ಗಲೆ) ಯವರಿಗೆ ದಾಸಿಮಯ್ಯನು ವೀರಶೈವ ದೀಕ್ಷೆ ಯನ್ನು ಕೊಟ್ಟ ಸಂದರ್ಭವು ವೀರಶೈವರ ಪುರಾಣಗಳಲ್ಲಿ ಬರುವುದು. ಈ ಸುಗ್ಗಲಾ ದೇವಿಯು ವಿಜಾಪುರ ಜಿಲ್ಲೆಯ ಹಿಪ್ಪರಗಿ ಶಿಲಾಶಾಸನದಲ್ಲಿಯೂ ಹಾಸನ ಜಿಲ್ಲೆಯ ಬೇಲೂರ ತಾಲ್ಲೂಕಿನ ೧೧೩ ನಂಬರಿನ ಶಿಲಾಶಾಸನದಲ್ಲಿಯೂ ಉಲ್ಲೇಖಿಸಲ್ಪಟ್ಟಿದ್ದಾಳೆ. ಮುದೇನೂರ ಸಮೀಪದ ಗೊಬ್ಬೂರ ಗ್ರಾಮದ ಕೊರವರ ಬಾವಿಯ ಥರಕ್ಕೆ ಹಾಕಿ ಒಂದು ಕಲ್ಲಿನಲ್ಲಿರುವ ಶಿಲಾಶಾಸನ (ಕ್ರಿ. ಶ. ೧೧೪೮) ದಲ್ಲಿ "....ಜಾಡ ಕುಲತಿಲಕ ಜಾಡರ ದಾಸಿಮಯ್ಯ...." ಎಂದು ಉಲ್ಲೇಖವಿದೆ. ಇನ್ನೊಂದು ಶಿಲಾಶಾಸನ

(* ಈವರೆಗೆ ಪ್ರಕಟವಾದ ವೀರಶೈವರ ಸಂಬಂಧದ ಶಿಲಾಶಾಸನಗಳನ್ನೂ ನನ್ನ ಸಂಗ್ರಹ ದಲ್ಲಿರುವ ಪ್ರಕಟವಾಗದ ಶಿಲಾಶಾಸನಗಳನ್ನೂ ಈ ಗ್ರಂಥದಲ್ಲಿ ಬಳಸಿಕೊಳಲಾಗಿದೆ)

(ಕ್ರಿ. ಶ. ೧೧೬೭) ಚಿಕ್ಕ ಮುದೇನೂರ ಗೋಪಾಲಸ್ವಾಮಿಯ ದೇಗುಲದ ಮೂರನೆಯ ಕಂಬದಲ್ಲಿದೆ. ಇದರಲ್ಲಿ "ಮುದೇನೂರ ದಾಸಯ್ಯ" ಎಂದು ಉಲ್ಲೇಖ ಬರುವುದು. ಹಾಸನ ಜಿಲ್ಲೆಯ ಹಿರಿಯೂರಿನ ಶಿಲಾಶಾಸನ (ಕ್ರಿ. ಶ. ೧೧೬೫) ದಲ್ಲಿ ಸಿರಿಯಾಳ, ಬಸವಯ್ಯ, ದಾಸಿಮಯ್ಯ ಮೊದಲಾದವರು ಉಲ್ಲೇಖಿಸಲ್ಪಟ್ಟಿದ್ದಾರೆ.

ಬಸವಾದಿ ಪ್ರಮಥರ ಸಮಕಾಲೀನರಲ್ಲಿ ಬಲದೇವ, ಬಸವಣ್ಣ, ರೇವಣಸಿದ್ಧೇಶ್ವರ, ಪಂಡಿತಾರಾಧ್ಯ, ಸಿದ್ಧರಾಮ, ಏಕಾಂತದ ರಾಮಯ್ಯ, ಅಮುಗಿದೇವ, ನಿಜಗುಣದೇವ, ಕುರುಗೋಡ ನೃಪರಾಚಮಲ್ಲ, ಕೇತಿರಾಜ, ವರದಾನಿ ಗುಡ್ಡವ್ವೆ ಇವರು ಶಿಲಾಶಾಸನಗಳಲ್ಲಿ ಕಾಣಿಸಿಕೊಂಡಿದ್ದಾರೆ. ಕುಕನೂರ ಮಲ್ಲಿಕಾರ್ಜುನ ದೇಗುಲದಲ್ಲಿಯ ಶಿಲಾಶಾಸವ (ಕ್ರಿ. ಶ. ೧೧೬೪) ದಲ್ಲಿ ಬಸವೇಶ್ವರನ ಸೋದರಮಾವನಾದ ಬಲದೇವನ ಉಲ್ಲೇಖ ಬರುವುದು. ಇದೇ ಶಾಸನದಲ್ಲಿ ವೀರಶೈವರ ಅತಿ ಮಹತ್ವವಾದ "ಶಿವಾನುಭವ" ಹಾಗು "ಶಿವಭಕ್ತಿ" ಎಂಬೆರಡು ಪದಗಳು ನನಗೆ ತಿಳಿದ ಮಟ್ಟಿಗೆ ಪ್ರಪ್ರಥಮವಾಗಿ ಶಿಲಾಶಾಸನದಲ್ಲಿ ಉಲ್ಲೇಖಿಸಲ್ಪಟ್ಟಿವೆ. ವೀರಶೈವ ಮತೋದ್ಧಾರಕರೆಂದೂ ಕಲಚೂರಿ ಬಿಜ್ಜಳನ ಮಹಾಪ್ರಧಾನರೆಂದೂ ಖ್ಯಾತಿವೆತ್ತ ಬಸವಣ್ಣನವರ ಅರ್ಜುನವಾಡಾ ಶಿಲಾಶಾಸನ (ಕ್ರಿ. ಶ. ೧೨೬೦) ದಲ್ಲಿಯೂ ಚೌಡದಾನಪುರದ ಮುಕ್ತೇಶ್ವರ ದೇಗುಲದಲ್ಲಿಯ ಶಿಲಾಶಾಸನ (ಕ್ರಿ. ಶ. ೧೨೬೦) ಗಳಲ್ಲಿಯೂ ಉಲ್ಲೇಖಿಸಲ್ಪಟ್ಟಿದ್ದಾರೆ. ಈ ಎರಡೂ ಶಿಲಾಶಾಸನಗಳಲ್ಲಿ ಜಂಗಮ–ಲಿಂಗ–ಪ್ರಸಾದ–ಲಿಂಗಾರ್ಚನೆ ಮೊದಲಾದ ಶಬ್ದಗಳು ಷಟ್‌ಸ್ಥಲ ಸಿದ್ಧಾಂತದ ಪ್ರಕಾರ ಪ್ರಪ್ರಥಮವಾಗಿ ಕಾಣಿಸಿಕೊಂಡಿವೆ. ಸಿದ್ಧರಾಮದೇವರ ಸಂಪ್ರದಾಯದ ಸುಮಾರು ಹದಿನೇಳು ಶಿಲಾಶಾಸನಗಳು ಈಗ ದೊರೆತಿವೆ. "ಕಪಿಲಸಿದ್ಧ ಮಲ್ಲಿಕಾರ್ಜುನ" ಎಂದು ಸಿದ್ಧರಾಮನ ಇಷ್ಟದೇವರ ನಾಮಾಂಕಿತವು ಇವುಗಳಲ್ಲಿಯ ಔಚಿತ್ಯವಾಗಿದೆ. ಈ ನಾಮಾಂಕಿತವು ಅವನ ವಚನಗಳ ವಚನಾಂಕಿತವೂ ಆಗಿದೆ. ಈ ಎಲ್ಲ ಶಾಸನಗಳು ಕ್ರಿ.ಶ. ಹದಿಮೂರನೆಯ ಶತಮಾನದ ಕೊನೆಯುವರೆಗೂ ಹರವಿಕೊಂಡಿವೆ. ಶಿರಸಪವಾಡ (ಗಂಡಗತ್ತರಿ) ಕಾಯಕದ ಅದ್ಭುತವನ್ನು ಪ್ರದರ್ಶಿಸಿ ಜೈನರನ್ನು ಗೆದ್ದು ವೀರಶೈವವನ್ನು ಹಬ್ಬಿಸಿದ ಏಕಾಂತದ ರಾಮಯ್ಯನ ಸುಪ್ರಸಿದ್ಧ ಶಿಲಾಶಾಸನ (ಕ್ರಿ. ಶ. ೧೧೮೦) ವು ಅಬ್ಬಲೂರ ಬ್ರಹ್ಮೇಶ್ವರಲಿಂಗ ದೇಗುಲದಲ್ಲಿದೆ. ಈ ಶಿಲಾಶಾಸನದಲ್ಲಿ ದಾಸಿಮಯ್ಯ, ಚನ್ನಯ್ಯಾದಿಗಳು ಉದಾಹರಿಸಲ್ಪಟ್ಟಿದ್ದಾರೆ. ಇದೇ ಶಿಲಾಶಾಸನದಲ್ಲಿ ಪ್ರಪ್ರಥಮವಾಗಿ "ಪುರಾತನ-ನೂತನರಪ್ಪ-ಶಿವಭಕ್ತರ" ಎಂಬ ಪದಪ್ರಯೋಗ ಬಂದಿದೆ. ಅಲ್ಲದೆ ಇದೇ ದೇಗುಲದಲ್ಲಿರುವ ಒಂದೆರಡು ಸಾಲುಗಳುಳ್ಳ ಕಿರಿಯ ಶಾಸನಗಳಲ್ಲಿ "ಶಿರಿಯಾಳಶೆಟ್ಟಿ, ಚೆಂಗಳವ್ವೆ, ಜೇಡರ ದಾಸಿಮಯ್ಯ, ಕುಂಬಾರಗುಂಡಯ್ಯ" ಈ ಶಿವಶರಣರ ಉಲ್ಲೇಖ ಬರುವುದು.

ಸಿರಿವಾಳದ ಸಿದ್ಧಲಿಂಗೇಶ್ವರ ದೇಗುಲದಲ್ಲಿಯ ಶಿಲಾಶಾಸನ(ಕ್ರಿ.ಶ. ೧೧೮೭)ದಲ್ಲಿ "ಶಿವಯೋಗಿ ಶಾಂತಿಮಯ್ಯಗಳ ಪುತ್ರ ರೇಣುಕಾಚಾರ್ಯರ" * ಎಂದು ಉಲ್ಲೇಖ ಬರುವುದು. ಅದೇ ಶಿಲಾಶಾಸನದಲ್ಲಿ ಈ ರೇಣುಕಾಚಾರ್ಯರನ್ನು "ರೇವಣದೇವ" ಹಾಗು "ಸಿದ್ಧರೇವಣ" ಎಂದು ಸಂಬೋಧಿಸಿದುದೂ ಬಂದಿದೆ. ಈ ರೇವಣಸಿದ್ಧನೇ ಪಂಚಾಚಾರ್ಯರಲ್ಲಿಯ "ರೇಣುಕಾಚಾರ್ಯ"ನೆಂದು ಸಂಶೋಧಕರು ವ್ಯಕ್ತಪಡಿಸಿದ್ದಾರೆ. ರೇವಣಸಿದ್ಧರಂತೆ, ಮರುಳಸಿದ್ಧರೂ ಕೆಲವು ಶಿಲಾಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿದ್ದಾರೆ. ಮರುಳಸಿದ್ಧರು ಸುಮಾರು ನಾಲ್ವರು ಆಗಿಹೋಗಿರುವರು. ಆದುದರಿಂದ ಪಂಚಾಚಾರ್ಯರಲ್ಲಿ ಒಬ್ಬರಾದ ಮೂಲ ಮರುಳಾರಾಧ್ಯರ ಇತಿಹಾಸವನ್ನು ಗುರುತಿಸಿ ಹೇಳುವುದು ಅಸಾಧ್ಯವಾಗಿದೆ. ಉಜ್ಜಯಿನಿ (ಕೊಟ್ಟೂರು) ಯಲ್ಲಿ ಹೂಳಿರುವ ನೆಲಮನೆಯ ಶಿವಲಿಂಗ ಶಿಲಾರೇಖಾದಿಗಳನ್ನು ಅಗಿಯಿಸಿ ಸಂಶೋಧಿಸಬೇಕು. ಲಕ್ಷ್ಮೇಶ್ವರದ ಗೊಡಚಿಯ ವೀರಭದ್ರ ದೇವಾಲಯದಲ್ಲಿರುವ ಶಿಲಾಶಾಸನ (ಕ್ರಿ. ಶ. ೧೫೧೩) ದಲ್ಲಿ ಓರ್ವ ಹೂಲಿಯ ಮರುಳಸಿದ್ಧನ ಉಲ್ಲೇಖಬರುವುದು. ಹೂಲಿಯಲ್ಲಿರುವ ಒಂದೆರಡು ಶಿಲಾಶಾಸನಗಳಲ್ಲಿಯೂ ಓರ್ವ ಮರುಳಸಿದ್ಧನ ಉಲ್ಲೇಖವು ಬರುವುದು. ವೀರಶೈವ ಪರಂಪರೆಯ ಪ್ರಕಾರ ಪಂಡಿತರಾಧ್ಯರೂ ಪಂಚಾಚಾರ್ಯರಲ್ಲಿ ಒಬ್ಬರು. ಪಂಡಿತಾರಾಧ್ಯರ ಸಂಬಂಧ ಶ್ರೀಶೈಲದಲ್ಲಿಯೂ, ಶ್ರೀಶೈಲದ ಸುತ್ತುಮುತ್ತಲೂ ಅನೇಕ ಶಿಲಾಶಾಸನಗಳಿದ್ದುದು ತಿಳಿದು ಬಂದಿದೆ. ಬನವಾಸಿಯ ಮಧುಕೇಶ್ವರ ದೇಗುಲದ ಸಭಾಮಂಟಪದ ಒಂದು ಕಂಬದಲ್ಲಿಯ ಶಿಲಾಶಾಸನದಲ್ಲಿ ಪಂಡಿತಾರಾಧ್ಯರ ಉಲ್ಲೇಖವಿದೆ. ಈ ಶಿಲಾಶಾಸನವು ನಾಲ್ಕು ಭಾಷೆಗಳಲ್ಲಿ ಬರೆಯಲ್ಪಟ್ಟಿದೆ. ಇದೇ ದೇಗುಲದಲ್ಲಿರುವ ಶಿವೋತ್ಸವ-ನಾಗಲಿಂಗ-ಶಿಲಾಮಂಟಪದ ಗಗ್ಗರಿಯ ಕಲ್ಲಿನಲ್ಲಿ "ದಾಸಿಮಯ್ಯ, ಮೋಳಿಗೆಯ್ಯ, ನುಲಿಯ ಚೆಂದಯ್ಯ, ಆಯ್ದಕ್ಕಿ ಮಾರಯ್ಯ, ಹಡಪದ ಅಪ್ಪಣ್ಣ, ಹಾಳಿನ ಹಂಪಣ್ಣ, ಅಗ್ಗವಣಿ ಹೊನ್ನಯ್ಯ, ಗುಂಡಬ್ರಹ್ಮಯ್ಯ" ಎಂದು ನಾಮಾಂಕಿತ ಬರೆಹವುಳ್ಳ ಗೊಂಬೆಗಳನ್ನು ಕೊರೆದಿದ್ದಾರೆ. ಇನ್ನೊಂದು ಸಾಲಿನಲ್ಲಿರುವ ಗೊಂಬೆಗಳ ನಾಮಾಂಕಿತಗಳನ್ನು ಯಾರೊ ಆಗದವರು ಕೆತ್ತಿ ಓದಲು ಬಾರದಂತೆ ಮಾಡಿದ್ದಾರೆ. ಶಿವಶರಣ, ಅಮುಗಿದೇವನ ಹೂಳಜೆಯ ಶಿಲಾಶಾಸನ (ಕ್ರಿ. ಶ. ೧೨೦೦) ಸುಪ್ರಸಿದ್ಧವಾದುದು. "ಶಿವಾಚಾರ ಲಿಂಗೈಕ್ಯ" ವೆಂಬ ಪದಗಳು ಈ ಶಾಸನದಲ್ಲಿ ಬಂದಿವೆ. ನಿಜಗುಣದೇವನು ಹಂಸಬಾವಿಯ ಶಿಲಾಶಾಸನ (ಕ್ರಿ. ಶ. ೧೧೫೦) ದಲ್ಲಿ ಬಂದಿರುವನು. ವಚನಕಾರರು 'ನಿಜಗುಣನ ನಿಜ್ಜೆರಗು' ಎಂದು ತಮ್ಮ ವಚನಗಳಲ್ಲಿ ಉಲ್ಲೇಖಿಸಿದ್ದಾರೆ. ಕುರಗೋಡ ರಾಚಮಲ್ಲನು ವೀರಶೈವನಾಗಿದ್ದನು. ಕುರಗೋಡ ಶಿಲಾಶಾಸನ (ಕ್ರಿ.ಶ. ೧೧೮೦) ದಲ್ಲಿ ಅವನು ಲಿಂಗದೇವನಾದ ಧರ್ಮನಿಷ್ಠತೆಯು ಬರುವುದು.

* ಇವರೇ ಬೇರೆ. ಆದಿರೇಣುಕರೇ ಬೇರೆ. —ಸಂ. ಮಂ. ಅಧ್ಯಕ್ಷರು.

ಇಂದು ಆ ಶಿವಲಿಂಗವು 'ರಾಚಮಲ್ಲೇಶ್ವರ' ಎಂದು ಪ್ರಸಿದ್ಧವಿದೆ. ವರದಾನಿ ಗುಡ್ಡವ್ವೆಯು ಏಕಾಂತದ ರಾಮಯ್ಯನಂತೆ ಕ್ರಾಂತಿಕಾರಳು. ಅಲಂಪುರದಲ್ಲಿ ಆವಳು ಜೈನರನ್ನು ಗೆದ್ದು ಸ್ಥಾಪಿಸಿದ ಬಾಲ ಬ್ರಹ್ಮೇಶ್ವರಲಿಂಗವು ಸುಪ್ರಸಿದ್ಧವಾದುದು. ಇಂಗಳಗಿಯ ಶಿಲಾಶಾಸನ (ಕ್ರಿ.ಶ. ೧೨೪೯) ದಲ್ಲಿ "ಶ್ರೀ ಸಿದ್ಧರಾಮದೇವರ್ಗಂ, ದಸಗಣ ಸಿಂಗದೇವ, ಬಿಜ್ಜೇಶ್ವರದೇವರು, ರೇವಣೇಶ್ವರ, ಕನ್ನೇಶ್ವರ, ಕೇದಾರದೇವರು, ನಾಗೇಶ್ವರದೇವರು ಇಂತೀ ಸಕಲ ಲಿಂಗದೇವರಿಗೆ ಗುಡ್ಡವ್ವೆಗಳು ಮುಖ್ಯವಾಗಿ...." ಎಂದು ಉಲ್ಲೇಖ ಬರುವುದು. ನನಗೆ ತಿಳಿದಮಟ್ಟಿಗೆ 'ಶರಣರು' ಈ ಶಬ್ದವು ಮೊಟ್ಟ ಮೊದಲು ಈ ಶಾಸನದಲ್ಲಿ ಬಂದಿದೆ. ಅಲ್ಲದೆ ಈ ಶಾಸನದಲ್ಲಿ ಬರುವ 'ಗಣಂಗಳು, ಅಸಂಖ್ಯಾತರು, ಗಣಮಠ' ಈ ಶಬ್ದಗಳು ವೀರಶೈವ ದೃಷ್ಟಿಯಿಂದ ಬಹಳ ಮಹತ್ವದುವು. ವಾತಾಖ್ಯಾಪುರದ ಶಿಲಾಶಾಸನ (ಕ್ರಿ.ಶ. ೧೨೭೮) ದಲ್ಲಿಯೂ ಗುಡ್ಡಾಪುರದ ವರದಾನಿ ಗುಡ್ಡವ್ವೆಯ ಉಲ್ಲೇಖ ಬರುವುದು. ಈ ಶಾಸನದಲ್ಲಿಯೂ 'ಗಣಮಠ, ಲಿಂಗಪ್ರಸಾದ, ಗಣಂಗಳು' ಈ ಪದಗಳು ಉಪಯೋಗಿಸಲ್ಪಟ್ಟಿವೆ.

ಕಲ್ಯಾಣಕ್ರಾಂತಿಯಾದನಂತರ ಕೆಲವೇ ದಿನಗಳಲ್ಲಿ ಕರ್ನಾಟಕದ ತುಂಬೆಲ್ಲ ವೀರಶೈವ ಧರ್ಮದ ಉತ್ಕ್ರಾಂತಿಗಳಾದುದನ್ನು ಶಿಲಾಶಾಸನಗಳಲ್ಲಿ ಕಾಣಬಹುದು. ಈ ಸಂದರ್ಭದಲ್ಲಿ ತಾಳಿಕೋಟೆಯ ವಿರೂಪರಸನ ಶಾಸನ ಹಾಗೂ ಅಣ್ಣಿಗೇರಿಯ ವೀರಗೊಗ್ಗಿ ದೇವರಸನ ಶಾಸನಗಳು ಗಮನಾರ್ಹವಾಗಿವೆ. ವೀರಗೊಗ್ಗಿ ದೇವರಸನು ಜೈನರನ್ನು ಧ್ವಂಸಮಾಡಿದ ಉಲ್ಲೇಖವು ಅಣ್ಣಿಗೇರಿಯ ಪುರದ ವೀರಪ್ಪನ ದೇವಾಲಯದ ಮುಂದಿರುವ ಶಿಲಾಶಾಸನ (ಕ್ರಿ.ಶ. ೧೧೮೦) ದಲ್ಲಿ ಬಂದಿದೆ. ತಾಳಿಕೋಟೆಯ ವಿರೂಪರಸನ ಶಿಲಾಶಾಸನ (ಕ್ರಿ.ಶ. ಸು. ೧೧೮೦) ವಂತೂ ವೀರಶೈವರಿಗೆ ಅತಿ ಮಹತ್ವವಾದುದು. ಅವರಲ್ಲಿ ಶಿವಶರಣರು ಮಾಡಿದ ಉತ್ಕ್ರಾಂತಿ ಸ್ಥಳಗಳ ಉಲ್ಲೇಖ ಬರುವುದು "ಪರಿಯಳಿಗೆ, ಅಣಲೆವಾಡ, ಉಣಕಲ್ಲು, ಸಂಪಗಾವಿ, ಬೇಲೂರು ಮಾರುಡಿಗೆ, ಅಣಂಪೂರು, ಕರಹಾಡ ಕೆಂಬಾವಿ, ಬಮ್ಮಕೂರು" ಈ ಊರುಗಳಲ್ಲಿ ಪರಸಮಯಗಳೊಡನೆ ಶಿವಶರಣರು ಹೋರಾಡಿದ್ದಾರೆ. ಈ ಶಿಲಾಶಾಸನದಲ್ಲಿಯೂ "ಪುರಾತನ ನೂತನರೆನಿಸಿದ ಅಸಂಖ್ಯಾತ ಗಣಂಗಳ...." ಎಂಬ ಪದಪ್ರಯೋಗವೂ ಬಂದಿದೆ. ಚಾಲುಕ್ಯ ನಾಲ್ಕನೆಯ ಸೋಮೇಶ್ವರನು (ಕ್ರಿ.ಶ. ೧೧೮೦) ಅಬ್ಬಲೂರ ಶಾಸನದಲ್ಲಿ "....ಧರ್ಮಗೋಷ್ಠಿಯೊಳ್ ಪುರಾತನ ನೂತನರಪ್ಪ ಶಿವಭಕ್ತರ ಸ್ತವನಂ ಮಾಡುತ್ತಮಿರ್ದು...." ಎಂದು ಬರುವುದರಿಂದಲೂ ಏಕಾಂತರಾಮಯ್ಯಗಳನ್ನು ಪೂಜ್ಯ ಭಕ್ತಿಯಿಂದ ಪೂಜಿಸಿದುದನ್ನು ವಿಚಾರಿಸಿದಲ್ಲಿ, ವೀರಶೈವನೆಂಬುದು ವಿದಿತವಾಗದಿರದು. ಈ ಅಬ್ಬಲೂರ ಶಿಲಾಶಾಸನದಲ್ಲಿ ಚಾಲುಕ್ಯ ರಾಜ್ಯ ಪ್ರತಿಷ್ಠಾಪಕನೆಂದು ಬರುವ ಕುಮಾರ ಬರ್ಮಯ್ಯನೂ ವೀರಶೈವನಾಗಿರಲು ಸಾಧ್ಯವಿದೆ. ಇದೇ ಬರ್ಮಯ್ಯನು ಅಣ್ಣಿಗೇರಿಯ ವೀರಗೊಗ್ಗಿ ದೇವರಸನ ಶಾಸನದಲ್ಲಿಯೂ ಬರುವನು. ಕೊಪ್ಪಳ ತಾಲೂಕ

ಕೌಲೂರ ಶಾಸನ (ಕ್ರಿ.ಶ. ೧೧೭೭) ದಲ್ಲಿ ಬರುವ ಮಾಸವಾಡಿ ರೇಚಿದೇವ, ಹಂಪರಸರು, ಸಿಂಗಟಾಲೂರ ಬಾಚಿದೇವರು ವೀರಶೈವರೆಂದು ಶಂಕಿಸಲಾಗಿದೆ. ಸಿಂಗಟಾಲೂರ ಬಾಚಿದೇವರು ವಚನಕಾರರಾಗಿದ್ದಾರೆ. ಈ ಶಾಸನದಲ್ಲಿ ಬರುವ 'ಜಗಲಿ' ಶಬ್ದವು ಗಮನಾರ್ಹವಾಗಿದೆ.

ಕ್ರಿ.ಶ. ಹದಿಮೂರನೆಯ ಶತಮಾನದ ಶಿಲಾಶಾಸನಗಳಲ್ಲಿ ಬರುವ ಗಣ್ಯವ್ಯಕ್ತಿಗಳೆಂದರೆ "ಗೋಪೆಯ ಶಿವದೇವ, ಶಿವಮುದ್ದು, ಶಿವದೇವ, ಹಾಲಬಸವಿದೇವ, ಪುಲಿಗೇರೆಯ ಪುರಾಣದ ಮಾಯಿಭಟ್ಟರು, ಚೆವುಡಸೆಟ್ಟಿ, ಕರಣದ ನಾಗರಸ, ಹೊನ್ನಬೊಮ್ಮಿಸೆಟ್ಟಿ" ಯರಾಗಿದ್ದಾರೆ. ಗೋಪೆಯ ಶಿವದೇವನ ಉಲ್ಲೇಖವು ಹಾಸನಜಿಲ್ಲೆ, ಬೇಲೂರ ತಾಲೂಕ ಮಾದಿಹಳ್ಳಿ ಹೋಬಳಿ ಸಿದ್ಧಾಪುರ ಗ್ರಾಮದ ವೀರಭದ್ರದೇಗುಲದ ಸಮೀಪದಲ್ಲಿ ಬಿದ್ದಿರುವ ಶಿಲಾಶಾಸನ (ಕ್ರಿ.ಶ. ೧೨೮೫) ದಲ್ಲಿ ಬಂದಿದೆ. ಇದೇ ಶಾಸನದಲ್ಲಿ ಹುಲಿಗೆರೆಯ ಪುರಾಣದ ಮಾಯಿದೇವ ಪಂಡಿತ, ಶಿವರಾತ್ರಿ ಮಾಯಿದೇವ, ಗೋಪೆಯ ಶಿವದೇವರ ಮಗ ಶಿವಶರಣ—ಎಂದು ಉಲ್ಲೇಖ ಬರುವುದು. ಇಲ್ಲಿ ಬರುವ 'ಶಿವಶರಣ' ಶಬ್ದವು ಅತಿ ಮಹತ್ವವಾದುದು. ನನಗೆ ತಿಳಿದ ಮಟ್ಟಿಗೆ ಈ 'ಶಿವಶರಣ' ಶಬ್ದವು ಪ್ರಪ್ರಥಮವಾಗಿ ಉಪಯೋಗಿಸಲ್ಪಟ್ಟದ್ದು ದಾವಣಗೇರಿಯ ೮೭ನೆಯ ಶಾಸನದಲ್ಲಿ. ಹದಿಮೂರನೆಯ ಶತಮಾನದ ಮಧ್ಯದಲ್ಲಿ. ಆಗಲೆ 'ಶಿವಶರಣ' ಶಬ್ದವು ತನ್ನ ಆದರೀಯತೆಯ ತುತ್ತುದಿಯನ್ನು ಮುಟ್ಟಿ ಜನತೆಯಲ್ಲಿ ಪೂಜ್ಯವಾಗಿ ಹೋಗಿತ್ತೆಂಬುದಕ್ಕೆ ಅದು ವ್ಯಕ್ತಿನಾಮವಾಗಿ ಈ ಶಾಸನದಲ್ಲಿ ಬಳಸಲ್ಪಟ್ಟದ್ದೇ ಬಲವಾದ ದೃಷ್ಟಾಂತವು. ಶಿವಮುದ್ದು ಶಿವದೇವನು ಚೌಡದಾನಪುರದ ಮುಕ್ತೇಶ್ವರ ದೇಗುಲದ ಶಿಲಾಶಾಸನ (ಕ್ರಿ.ಶ. ೧೨೬೦) ಗಳಲ್ಲಿ ಉಲ್ಲೇಖಿಸಲ್ಪಟ್ಟಿದ್ದಾನೆ. ಇವನು ಬಸವಣ್ಣನವರ ಪ್ರತಿ ಅವತಾರವೆಂದು "ಸಂಗಮೇಶನ ಪುತ್ರಂ ಬಸವಯ್ಯ....ಶಿವಮುದ್ದುವೇವಂ ಜನಕ್ಕೆ ನಿಮಿತ್ತ ಶಿವದೇವನಾಗಿ-ದೇವಗಿರಿ ಯಾದವ ಚಕ್ರವರ್ತಿ ಮಹಾದೇವನ ಕಾಲದ ಇಲ್ಲಿಯ ಒಂದು ಶಿಲಾಶಾಸನದಲ್ಲಿ ಉಲ್ಲೇಖಬರುವುದು. ಇದೇ ಶಾಸನದ ಪ್ರಾರಂಭದ ಚಿತ್ರಗಳ ಮೇಲ್ಭಾಗದಲ್ಲಿ ಬರುವ ಚವುಡಶೆಟ್ಟಿ, ಕರಣದ ನಾಗರಸ, ಹಾಗು ಹೊನ್ನಬೊಮ್ಮಿಶೆಟ್ಟಿಯರು ವೀರಶೈವರಾಗಿದ್ದಾರೆ. ಚವುಡಶೆಟ್ಟಿ ಹಾಗು ಕರಣದ ನಾಗರಸರ ಉಲ್ಲೇಖವು ಅರ್ಜುನವಾಡ ಶಿಲಾಶಾಸನದಲ್ಲಿಯೂ ಬರುವುದು. ಹಾಲಬಸವೀದೇವರು ಬಸವಣ್ಣನವರ ವಂಶಜರೆಂದು ಇದೇ ಅರ್ಜುನವಾಡ ಶಿಲಾಶಾಸನದಲ್ಲಿ ಉಲ್ಲೇಖಿಸಲ್ಪಟ್ಟಿದೆ. ಹೊನ್ನಬೊಮ್ಮಿ ಶೆಟ್ಟಿಯು ಜಂಗಮ ಪರಮಭಕ್ತನೆಂಬ ಉಲ್ಲೇಖವು ರಟ್ಟಿಹಳ್ಳಿಯ ಕದಂಬೇಶ್ವರ ದೇವಾಲಯದ ದೇವಗಿರಿ ಯಾದವ ಚಕ್ರವರ್ತಿ ಸಿಂಘಣನ ಕಾಲ (ಕ್ರಿ.ಶ. ೧೨೧೦-೧೨೪೭) ದಲ್ಲಿ ಬರೆದ ಒಂದು ಶಿಲಾಶಾಸನ (ಕ್ರಿ.ಶ. ೧೨೩೮) ದಲ್ಲಿ "ಹೊನ್ನಬೊಮ್ಮಂ ಶಿವಭಕ್ತ ವರಪ್ರಸಾದನೆಂದೆನಿಸುತ್ತಂ" ಎಂದೂ ಇನ್ನೊಂದು ಶಾಸನದಲ್ಲಿ—

" ಜಂಗಮದಿಚ್ಛೆ ಜಂಗಮದ ನಚ್ಚಿ ಜಂಗಮ ಮಚ್ಚು ಮತ್ತರಾ
ಜಂಗಮದಾಟ ಜಂಗಮದ ನೋಟಮೆ ಜಂಗಮ ಕೂಟವಾಗಳುಂ ||
ಜಂಗಮದಾಸೆ ಜಂಗಮದ ಬಾಸೆಯೊಳುದ್ಭ ವಿಕಾಶರಾಜಸಿ
ಪ್ಪಂಗಡನೆಂದು ಬಣ್ಣಿಪುದು ಭೂತಳವೆನ್ನುವೆ ಹೊನ್ನ ಬೊಮ್ಮಣಂ ||"

ಎಂಬುದನ್ನು ಗಮನಿಸಿದಾಗ ಹೊನ್ನಬೊಮ್ಮನ ಜಂಗಮಭಕ್ತಿಯು ವ್ಯಕ್ತವಾಗ ದಿರದು. ಈ ಹೊನ್ನಬೊಮ್ಮನು ಚೌಡದಾನಪುರದ ಶಿವದೇವನ ಪರಮ ಶಿಷ್ಯನಾಗಿ ದತ್ತಿಬಿಟ್ಟ ಉಲ್ಲೇಖವು ಬರುವುದರಿಂದ ಶಿವದೇವನ ಕಾಲದಲ್ಲಿಯ ವೀರಶೈವ ಮಹ ತಿಯು ಒಡಮೂಡದಿರದು. ಈ ಶಾಸನಗಳಲ್ಲಿ ಬರುವ "ಶಿವಭಕ್ತ ವರಪ್ರಸಾದ" ಹಾಗು "ಜಂಗಮ" ಈ ಶಬ್ದಗಳು ವೀರಶೈವ ದೃಷ್ಟಿಯಿಂದ ಅತಿ ಮಹತ್ವದುವು.

ಸುಮಾರು ಇದೇ ಕಾಲ (ಕ್ರಿ.ಶ. ೧೨೬೧) ದ ಮಲಿಕಾಪುರ ಶಿಲಾಶಾಸನದಲ್ಲಿ 'ವಿಶ್ವೇಶ್ವರ ಶಿವಾಚಾರ್ಯ'ರು ಉಲ್ಲೇಖಿಸಲ್ಪಟ್ಟಿದ್ದಾರೆ. ಈ ಶಾಸನದಲ್ಲಿ 'ವೀರಶೈವ' ಶಬ್ದವು ಬರುವುದು. ಈವರೆಗೂ ಇದಕ್ಕೂ ಮೊದಲು 'ವೀರಶೈವ' ಶಬ್ದವು ಯಾವ ಶಾಸನದಲ್ಲಿಯೂ ಉಲ್ಲೇಖಿಸಲ್ಪಟ್ಟಿಲ್ಲವೆಂದು ಸಂಶೋಧಕರ ಅಭಿಪ್ರಾಯವಾಗಿದೆ. ಆದುದರಿಂದ ಇದಕ್ಕೆ ಒಂದು ವಿಶಿಷ್ಟ ಮಹತ್ವದ ಸ್ಥಾನವು ವೀರಶೈವರ ಇತಿಹಾಸ ದಲ್ಲಿದೆ.

ವಿಜಯನಗರ ಅರಸರಲ್ಲಿ ಎರಡನೆಯ ಪ್ರೌಢರಾಯನೂ ಮಲ್ಲಿಕಾರ್ಜುನ ದೇವನೂ ವೀರಶೈವರಾಗಿದ್ದರು. ಅವರ ಕಾಲದಲ್ಲಿ ಜಕ್ಕಣಾರ್ಯ, ಲಕ್ಕಣದಂಡೇಶ ಇವರ ಆಶ್ರಯದಲ್ಲಿ ವೀರಶೈವರ ನೂರೊಂದು ವಿರಕ್ತರು ಖ್ಯಾತಿವೆತ್ತರು. ಲಕ್ಕಣ ದಂಡೇಶನ ವಿಜಯದಂಡ ಯಾತ್ರೆಯ ಮುಳಬಾಗಿಲ ಶಿಲಾಶಾಸನ (ಕ್ರಿ.ಶ. ೧೪೩೬) ಸುಪ್ರಸಿದ್ಧವಾಗಿವೆ. ಕ್ರಿ.ಶ. ಹದಿನೈದನೆಯ ಶತಮಾನದ ಅಂತ್ಯದಲ್ಲಿ ಆಗಿಹೋದ ತೋಂಟದಾರ್ಯರ ಶಿಲಾಶಾಸನಗಳು ಎಡೆಯೂರಲ್ಲಿವೆ. ತೋಂಟದಾರ್ಯರನಂತರ ವೀರಶೈವರಲ್ಲಿ ಸಮಯ ಭೇದಗಳಾಗಿ ಬುಡಕಟ್ಟಿನ ಮಠಗಳ ಅನೇಕ ಉಲ್ಲೇಖಗಳೂ ಶಿಲಾಶಾಸನಗಳಲ್ಲಿ ಬರುವುವು. ಧಾರವಾಡದ ಸಮೀಪದ ಹಾರೊಬೆಳವಡಿಯ ಲಿಂಗ ಮುದ್ರೆಯ ಒಂದು ಕಲ್ಲಿನಲ್ಲಿ 'ಕೊಡ್ಲಿ ಬುಡಕಟ್ಟು' ಇದರ ಉಲ್ಲೇಖ ಬಂದಿದೆ.

ಕೆಳದಿಯ ಅರಸರು ತಮ್ಮ ರಾಜ್ಯಗಳಲ್ಲಿ ಮಹತ್ತಿನ ಮಠಗಳನ್ನು ಸ್ಥಾಪಿಸಿ, ದತ್ತಿಯ ಬಿಟ್ಟ ಉಲ್ಲೇಖಗಳುಳ್ಳ ಶಿಲಾಶಾಸನಗಳೂ, ತಾಮ್ರಪಟಗಳೂ ಅನೇಕ ದೊರೆಯುವುವು. ಇವರಂತೆ ಬೀಳಗಿ, ಸ್ವಾದಿ, ಹಾಗಲವಾಡಿ, ಚಿತ್ರದುರ್ಗ, ಸುರ ಪುರ, ಕಿತ್ತೂರು, ಶಿರಸಂಗಿ, ವಂಟಮುರಿ, ವಿಜಾಪುರದ ಆದಿಲಶಾಹಿ ಮೊದಲಾದ ಅರಸು ಮನೆತನಗಳು ಅನೇಕ ಮಠಗಳಿಗೆ ದತ್ತಿ ಮಾನ್ಯಗಳನ್ನು ಹಾಕಿಕೊಟ್ಟ ಅನೇಕ ತಾಮ್ರಪಟಗಳು ಇನ್ನೂ ಪ್ರಕಟವಾಗಿಲ್ಲ ಇವುಗಳನ್ನೂ ಸಂಗ್ರಹಿಸಿ ಪ್ರಕಟಿಸಬೇಕು.

ಬೀಳಗಿ ಅರಸರಲ್ಲಿ ಎರಡನೆಯ ಘಂಟೇಂದ್ರನ ಮಗನಾದ ತಮ್ಮರಸ ಒಡೆಯರ ಕಾಲದ ಒಂದು ತಾಮ್ರಶಾಸನ (ಕ್ರಿ.ಶ. ೧೬೦೪) ದಲ್ಲಿ "....ಸಜ್ಜನ ಶುದ್ಧ ಶಿವಾಚಾರ.... ಮಹಾಮಹಂತಿನೊಳಗಾದ ಗೂಳೂರು ಉಪ್ಪಲಿಕೆ ಮಠದ ಶಾಂತ ದೇವರ ಶಿಷ್ಯನಾದ ಗೂಳೂರು ಸಿದ್ಧವೀರಣ್ಣೊಡೆಯರಿಗೆ ಬಿಟ್ಟ ಧರ್ಮ........" ಎಂದು ಉಲ್ಲೇಖಿಸಿದ್ದಾರೆ. ಈ ಗೂಳೂರ ಸಿದ್ಧವೀರಣ್ಣೊಡೆಯರೇ ಶೂನ್ಯ ಸಂಪಾದನೆಯನ್ನು ರಚಿಸಿದ್ದಾರೆ. ಇದೇ ಮನೆತನದ ಇಮ್ಮಡಿ ಶಿವಪ್ಪನಾಯಕನ ಕಾಲದ ಇನ್ನೊಂದು ತಾಮ್ರಪಟದಲ್ಲಿ (ಕ್ರಿ. ಶ. ೧೬೭೨) .... ಸಜ್ಜನ ಶುದ್ಧ ಶಿವಾಚಾರ ಸಂಪನ್ನರಾದ ಮಹಾಮಹತ್ತಿನ ಒಳಗಾದ ಪುರಾಣದ ಸಿದ್ಧನಂಜ ದೇವರ ಶಿಷ್ಯರು ಚೆನ್ನವೀರೇಂದ್ರ ದೇವರಿಗೆ...." ಎಂದು ಬರುವುದು. ಈ ಚೆನ್ನವೀರೇಂದ್ರರು ಆಚಾರ ವಚನಗಳನ್ನು ಸಂಪಾದಿಸಿದ್ದಾರೆ. ಅಲ್ಲದೆ ಇನ್ನೂ ಅನೇಕ ಜನರ ಉಲ್ಲೇಖಗಳು ಶಾಸನಗಳಲ್ಲಿ ದೃಷ್ಟಿಗೆ ಬೀಳುವುವು.

ವೈಷ್ಣವ-ಜೈನ ಮೊದಲಾದ ಸಹೋದರ ಮತಗಳ ಅಸಹನತೆಯಿಂದಲೂ ಮುಸಲ್ಮಾನರ ದಬ್ಬಾಳಿಕೆಯಿಂದಲೂ ವೀರಶೈವರ ಅಸಹಾಯ ಪರಿಸ್ಥಿತಿಯಿಂದಲೂ ಶಿವಶರಣರ ಸಂಬಂಧದ ಅನೇಕ ಉಲ್ಲೇಖಗಳು ಕಣ್ಮರೆಯಾದವು. ಕಣ್ಣಿಗೆ ಬೀಳದೆ ಉಳಿದುಕೊಂಡ ಶಿಲಾಶಾಸನಗಳ ಪರಿಶೀಲನೆ ಈ ವರೆಗೂ ನೆಡೆದಿಲ್ಲ. ಬೀದರ, ಕಲ್ಲಬುರಗಿ, ರಾಯಚೂರು, ಆಂಧ್ರದಲ್ಲಿ ಸೇರಿದ ಕನ್ನಡ ಗಡಿನಾಡು, ಆಂಧ್ರ ಶ್ರೀಶೈಲ ಭಾಗ, ಮಹಾರಾಷ್ಟ್ರದಲ್ಲಿ ಸೇರಿದ ಕನ್ನಡ ಗಡಿನಾಡು, ಕೊಲ್ಹಾಪುರ ಹಾಗು ಕರ್ನಾಡ ಭಾಗಗಳು ಸಂಶೋಧನೆಯ ದೃಷ್ಟಿಯಿಂದ ಪರಿಶೀಲಿಸಲ್ಪಟ್ಟರೆ ವೀರಶೈವರ ಅನೇಕ ಶಿಲಾಶಾಸನಗಳು ಬೆಳಕಿಗೆ ಬರಬಹುದು. ವೀರಶೈವರ ಧರ್ಮಕ್ಷೇತ್ರ-ಪೀಠ-ಮಠ-ಮನೆಗಳನ್ನು ಸಂಶೋಧನ ದೃಷ್ಟಿಯಿಂದ ಪರಿಶೀಲಿಸಬೇಕು. ಧರ್ಮಕ್ಷೇತ್ರಗಳಾದ ಕುಲ್ಯಪಾಕ, ರಂಭಾಪುರಿ, ಶ್ರೀಶೈಲ, ಉಜ್ಜಯಿನಿ, ಕಾಶಿ, ಕೇದಾರ, ಮೊದಲಾದ ಆಚಾರ್ಯ ಪೀಠಗಳನ್ನೂ ಶಿವಶರಣರ ವಾಸಸ್ಥಾನಗಳಾದ ಸಂಗಮ, ಕೆಂಭಾವಿ, ಏತಗಿರಿ, ಆಳಂದ, ಇಂಡಿ, ಹಿಪ್ಪರಗಿ, ಲಕ್ಕುಂಡಿ, ಇಲಿಹಾಳ, ಮೊದಲಾದ ಗ್ರಾಮಗಳನ್ನು ಶಿವಶರಣರ ಕೇಂದ್ರಗಳಾದ ಕಲ್ಯಾಣ, ಪರಳಗಿ, ಅಲಂಪೂರ, ಮುದೇನೂರು, ಪೊಟ್ಟಲಕೆರಿ ಬಿಜ್ಜವಾಡ, ಮಾರುಡಗಿ, ಹಂಪಿ, ವಿಜಯನಗರ, ಚೌಡದಾನಪುರ, ಬನವಾಸಿ, ಬಳ್ಳಿಗಾವಿ, ಉಡುತಡಿ, ಹಿರಿಯೂರು, ಗುಬ್ಬಿ, ಸೋಸಲೆ, ಹರಪನಹಳ್ಳಿ, ಕಾಂಚಿ, ಹಳೇಬೀಡು, ಓರಂಗಲ್ಲು, ಸೊನ್ನಲಗೆ, ಸೊಗಲ, ಗೊಡಚಿ, ಹೂಲಿ, ಅಬ್ಬಲೂರು, ಲಕ್ಷ್ಮೇಶ್ವರ, ಸಂಪಗಾಂವಿ, ಕಾದರೊಳ್ಳಿ, ಉಳವಿ, ಬೇಲೂರು, ಮಂಗಳವಾಡ, ಮಾಸೂರು, ಹೂಳಜೆ ಮೊದಲಾದ ಸ್ಥಳಗಳಲ್ಲಿ ವೀರಶೈವರ ಅವಶೇಷಗಳಿರುವುದು ತಿಳಿದುಬಂದುದರಿಂದ ಈ ಎಲ್ಲ ಕ್ಷೇತ್ರಗಳನ್ನು ಪರಿಶೀಲಿಸಿದರೆ ಅನೇಕ ಹೊಸ ಸಂಗತಿಗಳು ದೊರೆಯಬಹುದೆಂದು ಆಶಿಸಲಾಗಿದೆ.

ಶಿವಶರಣರಲ್ಲಿ ಪ್ರಮುಖರಾದ ಕೆಲವರು ತಮ್ಮ ಸಮಾಜಕಾರ್ಯಕ್ಕಾಗಿ ಕರ್ನಾಟಕದ ತುಂಬೆಲ್ಲ ಅಲೆದಾಡಿದ್ದಾರೆ. ಅವರು ಹೋದ ಹೋದಲ್ಲಿ ಹಲಕೆಲವು ಸ್ಥಳಗಳಲ್ಲಿ ಅವರ ಅವಶೇಷಗಳೂ ಸಂಪ್ರದಾಯಗಳೂ ಈಗಲೂ ಬಳಕೆಯಲ್ಲಿರುವುವು. ಈ ಮಾರ್ಗಗಳನ್ನೂ ಸ್ಥಳಗಳನ್ನೂ ಗುರುತಿಸಿ ನಕಾಶಗಳನ್ನು ತಗೆದು ಜನತೆಯ ಮುಂದೆ ಇಡುವುದೂ ಒಂದು ಸಾಹಸದ ಕೆಲಸ.

೧. ಬಸವಣ್ಣನವರು — ಸಂಗಮಕ್ಕೆ — ಬನವಾಸಿಗೆ—ಮಂಗಳವಾಡಕ್ಕೆ—ಕಲ್ಯಾಣಕ್ಕೆ—ಮರಳಿ ಸಂಗಮಕ್ಕೆ—

೨. ಅಲ್ಲಮಪ್ರಭುದೇವರು—ಬಳ್ಳೇಗಾವಿ— ಬನವಾಸಿ—ಲಕ್ಕುಂಡಿ — ತೇರದಾಳ—ಸೊನ್ನಲಿಗೆ—ಮಂಗಳವಾಡ—ಕಲ್ಯಾಣಕ್ಕೆ—ಕಲ್ಯಾಣದಿಂದ ಶ್ರೀಶೈಲಕ್ಕೆ.

೩. ಅಕ್ಕಮಹಾದೇವಿ—ಉಡುತಡಿ—ಬನವಾಸಿ—ತೇರದಾಳ — ಉಪ್ಪರಗಿ ಹಿಪ್ಪರಗಿ—ಮಾರುಡಗಿ—ಆಳಂದ—ಕಲ್ಯಾಣ—ಕಲ್ಯಾಣದಿಂದ—ಶ್ರೀಶೈಲ.

೪. ಚೆನ್ನಬಸವಣ್ಣ—ಕಲ್ಯಾಣ—ಆಳಂದ—ಕೆಂಭಾವಿ— ನಾಲತವಾಡ-ಸಂಗಮ—ಗೊಡಚಿ—ಸೊಗಲ -- ಕಾದರೊಳ್ಳಿ—ಧಾರವಾಟಕ — ಯಲ್ಲಾಪುರ—ಉಳವಿ.

೫. ಸಕಲೇಶಮಾದರಸು—ಕಲ್ಲಿಕುರಕಿ—ಸೊನ್ನಲಗಿ—ಅಂಚೆ— ಶ್ರೀಶೈಲ-ಕಲ್ಯಾಣ—ಶ್ರೀಶೈಲ.

೬. ಏಕಾಂತರಾಮಯ್ಯ—ಆಳಂದ—ಕೆಂಭಾವಿ—ಸಂಗಮ—ಪುಲಿಗೇರಿ - ಅಬ್ಬಲೂರು.

ಇದೇ ರೀತಿಯಲ್ಲಿ ರೇವಣಸಿದ್ಧ, ಮರುಳಸಿದ್ಧ, ಗೋರಕ್ಷ ಮೊದಲಾದವರು ಹೋದ ಮಾರ್ಗಗಳನ್ನೂ ಗುರುತಿಸಬಹುದು. ಇವೆಲ್ಲವೂ ಕಾರ್ಯಗತವಾಗ ಬೇಕಾದರೆ ಜನತೆಯ ಸಹಕಾರ ಹಾಗು ವೀರಶೈವ ಸಮಾಜದ ಧನಸಹಾಯ ಅನಿವಾರ್ಯ. ಇತ್ತಕಡೆಗೆ ವೀರಶೈವ ಸಮಾಜವು ಮನಸ್ಸು ಮಾಡಿ ಈ ಐತಿಹಾಸಿಕ ಸಂಗತಿಗಳನ್ನು ಸಂಶೋಧಿಸಿ ಪ್ರಕಟಿಸಿದರೆ ಸತ್ಯವು ಬಯಲಿಗೆ ಬರುವುದೆಂದು ಆಶಿಸಲಾಗಿದೆ.

---

# ಅದ್ವೈತ



ಲೇಖಕರು : **ಶ್ರೀ ವೆಂಕಪ್ಪ ವಾಸಪ್ಪ ಸಕ್ಕರಿ,** ಬಾಗಲಕೋಟೆ.

**ಈ** ಭೂಗೋಲದ ಮೇಲಿರುವ ನಮ್ಮೀ ಭಾರತ ಭೂಮಿಯು ಪರಮ ಪವಿತ್ರವಾದುದು. ಪ್ರಾಚೀನ ಕಾಲದಲ್ಲಿ ನಮ್ಮ ಆರ್ಯರು ಅಖಿಲ ಮಾನವ ಕೋಟಿಗೆ ಇಹಪರಗಳಲ್ಲಿ ಹಿತಪ್ರದವಾದ ತತ್ತ್ವಗಳನ್ನೀ ವೇದೋಪನಿಷತ್ತುಗಳಲ್ಲಿ ಬಿತ್ತರಿಸಿ ಮಹದುಪಕಾರ ಮಾಡಿರುವರು. ಭಾರತವು ತತ್ತ್ವವೇತ್ತರ ತವರ್ಮನೆಯು. ಮತಸ್ಥಾಪಕರ ಉಗಮ ಭೂಮಿಯು. ಮಹಾ ವಿಭೂತಿಗಳ ಮಹಾ ಮನೆಯು. ಭರತನಾಳಿದ ದೇಶವು ಭಾರತವು ಎಂಬ ಅರ್ಥವು ಸಾಮಾನ್ಯವಾಗಿ ರೂಢಿಯಲ್ಲಿ ಇದ್ದರೂ ಪಂಡಿತರು ಈ ಅರ್ಥವನ್ನು ಪರಿಗ್ರಹಿಸದೆ 'ಭಾ' ಅಂದರೆ ಅಧ್ಯಾತ್ಮ ವಿದ್ಯೆಯು 'ರತ' ಎಂದರೆ ವಿಲೀನವಾದುದು ಎಂದು ವಿಶಿಷ್ಟಾರ್ಥವನ್ನು ಮಾಡಿರುವರು. ಆಧುನಿಕ ಪಡುವಣ ನಾಡಿನ ಮಹಾ ವಿದ್ವಾಂಸರೂ ಸಹ ಭಾರತ ದೇಶವನ್ನು ಎದೆ ದುಂಬಿ ಹಾಡಿರುವರು. "ಆರ್ಯಾವರ್ತಃ ಪುಣ್ಯಭೂಮಿಃ" ಎಂದು ಅಮರಸಿಂಹನು ಅಮರಕೋಶದಲ್ಲಿ ಭಾರತವು ಪುಣ್ಯ ಭೂಮಿಯು ಎಂದು ಅಮರವಾಣಿಯಿಂದ ಹೇಳಿರುವನು.

ವೇದಕಾಲದಲ್ಲಿ ತತ್ತ್ವದ್ರಷ್ಟಾರರು "ಏಕಂ ಸದ್ವಿಪ್ರಾ ಬಹುಧಾ ವದಂತಿ" "ಸದೇವ ಸೌಮ್ಯೇದಮಗ್ರ ಆಸೀತ್" ಮುಂತಾಗಿ ಹೇಳಿ ಈಶ್ವರನ ಅಸ್ತಿತ್ವವನ್ನು ಹೇಳುತ್ತಿದ್ದರೆ ಈಗಣ ವಾದಕಾಲದಲ್ಲಿ ಕೆಲ ವಿಚಾರ ವಿಚಕ್ಷಣರು "ಈಶ್ವರ ಸತ್ತಾಯಾ ಕಿಂ ಪ್ರಮಾಣಂ" ಎಂದು ಸಂವಾದ ವಿವಾದಗಳನ್ನು ಮಾಡುತ್ತಿರುವರು. ಹೇಗಿದ್ದರೂ ಭಾರತೀಯರ ವಿಚಾರ ವಾಹಿನಿಯು ಈಶ್ವರ ಸತ್ತೆಯನ್ನು ಅಂಗೀಕರಿಸಿ ತತ್ಪ್ರಾಪ್ತಿಗಾಗಿ ಹೆಣಗುವಲ್ಲಿಯೇ ಅದು ಪರ್ಯವಸಾನ ಹೊಂದಿದೆ.

ವಿಶ್ವಪ್ರಪಂಚದಲ್ಲಿಯೇ ಆದರ್ಶ ದೇಶವೆಂದು ಕೀರ್ತಿವೆತ್ತ ಭರತ-ಖಂಡದಲ್ಲಿ ಅನೇಕ ಧರ್ಮ, ಮತ, ಪಂಥಗಳು ನೆಲಸಿರುವವು. ಭಾರತದಲ್ಲಿ ಮುಖ್ಯವಾಗಿ ಷಡ್ದರ್ಶನಗಳು ಸುಪ್ರಸಿದ್ಧವಿವೆ.

(೧) ಜೈಮಿನಿಯ ಮೀಮಾಂಸಾ ದರ್ಶನ. (೨) ಕಣಾದನ ವೈಶೇಷಿಕ ದರ್ಶನ. (೩) ಗೌತಮನ ನ್ಯಾಯ ದರ್ಶನ. (೪) ಕಪಿಲನ ಸಾಂಖ್ಯ ದರ್ಶನ. (೫) ಪತಂಜಲಿಯ ಯೋಗ ದರ್ಶನ. (೬) ವ್ಯಾಸನ ವೇದಾಂತ ದರ್ಶನ. ಇವೇ ಷಡ್ದರ್ಶನಗಳು.

ಇವುಗಳಲ್ಲಿ ವೇದಾಂತ ದರ್ಶನವೂ ಒಂದು ತಜ್ಞರ ಮತ. "ಶುಕ ವಾಮದೇವಾದಿ....| ಅಕಲಂಕ ವೆನಿಸುವದ್ವೈತತತ್ತ್ವವನಿಲ್ಲಿ ಪ್ರಕಟಿಸುವೆನು....|" ಎಂದು ಶ್ರೀ ಮನ್ನಿಜಗುಣ ಶಿವಯೋಗಿಗಳು ತಮ್ಮ ಪರಮಾನುಭವ ಬೋಧೆಯಲ್ಲಿ ಹೇಳಿದುದನ್ನು ನೋಡಿದರೆ ಅದ್ವೈತ ಸಿದ್ಧಾಂತವು ಅಕಲಂಕವೆಂದು ಕಂಡುಬರುವುದು. "ತತ್ತ್ವವ ಬೋಧನಕಲಾ ಭವತೀಽಮೃತಾಯ" ಎಂದು ಶ್ರೀ ಸರ್ಪಭೂಷಣರು ಅದ್ವೈತ ಸಿದ್ಧಾಂತದ ಮೇಲ್ಮೆಯನ್ನು ತಮ್ಮ ಜ್ಞಾನ ಶತಕದಲ್ಲಿ ಹೇಳಿರುವರು.

## ಅದ್ವೈತಮತ

ಮೇಲ್ಕಾಣಿಸಿದ ಷಡ್ದರ್ಶನಗಳಲ್ಲಿ ಅದ್ವೈತ ದರ್ಶನ ಅಥವಾ ಮತವೇ ಮೇಲಾದುದು. ದಶೋಪನಿಷತ್ತುಗಳು, ಬ್ರಹ್ಮಸೂತ್ರಗಳು, ಭಗವದ್ಗೀತೆ ಈ ಪ್ರಸ್ಥಾನ ತ್ರಯವು ಅದ್ವೈತ ಪರವೆಂದು ಸೋಪಪತ್ತಿಕವಾಗಿ ಭಾಷ್ಯವನ್ನು ಬರೆದ ಶ್ರೀ ಶಂಕರಾಚಾರ್ಯರಿಂದ ಸ್ಥಾಪಿಸಲ್ಪಟ್ಟ ಸುಪ್ರಸಿದ್ಧವಾದ ಅದ್ವೈತ ಸಿದ್ಧಾಂತವೇ ಅದ್ವೈತ ಮತವು. ಮತವೆಂದರೆ ಭಗವತ್ಸಾಕ್ಷಾತ್ಕಾರ ಮಾಡಿಕೊಳ್ಳಲಿಕ್ಕೆ ಅಥವಾ ಭಗವತ್ಸ್ವರೂಪಿಗಳಾಗಲಿಕ್ಕೆ ಆಯಾಯ ಆಚಾರ್ಯರು ಹೇಳಿದ ವಿಶಿಷ್ಟ ಪ್ರಮೇಯಗಳು ಅಥವಾ ಅಭಿಪ್ರಾಯ ಎಂದು ಅರ್ಥ ಮಾಡಬಹುದು. ವಿಶಿಷ್ಟ ಅಭಿಧಾನದಿಂದ ಕರೆಯಿಸಿಕೊಳ್ಳಲ್ಪಡುವ ಆಯಾಯ ಮತಗಳ ನಾಮ ಮಾತ್ರದ ವ್ಯುತ್ಪತ್ತಿಯಿಂದಲೇ ಆಯಾಯ ದರ್ಶನಗಳ ನಿಗೂಢ ತತ್ತ್ವಗಳು ತಿಳಿದು ಬರುವುವು. ಅದ್ವೈತವೆಂದರೆ ಎರಡಿಲ್ಲದಿರುವಿಕೆ. ಒಂದು ಎಂದು ಅರ್ಥವು. ದ್ವಯೋರ್ಭಾವಃ, ದ್ವಿತಾ, ದ್ವಿತೈವ ದ್ವೈತಂ, ನದ್ವೈತಂ ಅದ್ವೈತಂ, ಪರಬ್ರಹ್ಮ ತತ್ತ್ವವು ಒಂದೇ ಒಂದು ಸತ್ಯವಾದುದು ಉಳಿದುವೆಲ್ಲವೂ ಸ್ವಪ್ನ ಪ್ರಪಂಚದಂತೆ ಮಿಥ್ಯಾಭೂತವಾದುಗು. ಅನೇಕ ಮುಖವಾಗಿ ವಿಶ್ವವೂ, ಜೀವಾತ್ಮರೂ ತೋರುತ್ತಿರುವರಲ್ಲ ಅಂದರೆ ಅದು ಉಪಾಧಿ ಮೂಲಕವಾಗಿಯೇ ಹೊರತು ನಿಜವಾಗಿ ಅಲ್ಲ. "ಏಕಮೇವಾ ದ್ವಿತೀಯಂ ಬ್ರಹ್ಮ" ಮುಂತಾದ ಶೃತಿ ವಾಕ್ಯಗಳು ಬ್ರಹ್ಮವು ಸ್ವಗತ, ಸಜಾತೀಯ, ವಿಜಾತೀಯ ಭೇದತ್ರಯ ಶೂನ್ಯವೆಂದು ಪ್ರತಿಪಾದಿಸುತ್ತವೆ.

"ಯತೋಃ ಜನ್ಮಾದಿರ್ಭವತಿ ತದ್ಬ್ರಹ್ಮ" ಜನ್ಮಾದ್ಯಸ್ಯಯತಃ, ಮುಂತಾದ ಶೃತಿ ಸೂತ್ರಗಳು ಪರಮಾತ್ಮನೇ ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯಗಳಿಗೆ ಕಾರಣನೆಂದು ಹೇಳುತ್ತವೆ. ಪ್ರಪಂಚದಲ್ಲಿ ಯಾವದೇ ಒಂದು ಕಾರ್ಯವಾಗಬೇಕಾದರೆ ಅದಕ್ಕೆ ಓರ್ವ ಕರ್ತನು ಬೇಕೇ ಬೇಕು. ಹೊಗೆಯನ್ನು ಕಂಡು ಪರ್ವತದಲ್ಲಿ ಬೆಂಕಿಯನ್ನು ಊಹಿಸುವಂತೆ ಕಾರ್ಯರೂಪ ಜಗತ್ತಿನ ಮೇಲಿಂದ ಓರ್ವ ಕರ್ತನನ್ನು ಒಪ್ಪಬೇಕಾಗುವುದು. ಜಗತ್ಕರ್ತೃವಾದ ಬ್ರಹ್ಮವು ಅವಾಙ್ಮಾನಸಗೋಚರವಿದ್ದು "ಸದ್ರೂಪಂ ಪರಮಂ ಬ್ರಹ್ಮ ತ್ರಿಪರಿಚ್ಛೇದವರ್ಜಿತಂ" ಎಂಬ ಶೃತ್ಯುಕ್ತಿಯಂತೆ ಅದು ದೇಶ ಪರಿಚ್ಛೇದ, ಕಾಲಪರಿಚ್ಛೇದ, ವಸ್ತು ಪರಿಚ್ಛೇದ ಹೀಗೆ ಪರಿಚ್ಛೇದತ್ರಯ ಶೂನ್ಯವಿರುವದು. ಅದ್ವೈತವೆನಿಸಿದ ಪರಬ್ರಹ್ಮ ಒಂದೇಒಂದು ಸತ್ಯವು. ಉಳಿದುದೆಲ್ಲವೂ ಸುಳ್ಳು. ಇದು ವೇದಾಂತ ಮತದ ಸಾರ ಸರ್ವಸ್ವ.

## ಜೀವಾತ್ಮ

ನಾದವು ಅನಂತವಾಗಿದ್ದರೂ ಅದು ರಾಗದ ಪೆಟ್ಟಿಗೆಯಲ್ಲಿಯ ಸ್ಥಾನ ಭೇದದಿಂದ ಷಡ್ಜ, ನಿಷಾದಾದಿ ಸಪ್ತಸ್ವರಗಳ ಭೇದವನ್ನು ಹೊಂದುವಂತೆ, ಕಾಲವು ನಿರವಯವವಾಗಿದ್ದರೂ ಅದು ಗಾಯಕನ ಮಾತ್ರಾಗಣನೆಯ ಉಪಾಧಿಯಿಂದ ತ್ರಿತಾಳ ಏಕತಾಳ ಮೊದಲಾಗಿ ಭೇದೋಪಭೇದಗಳನ್ನು ಹೊಂಗುವಂತೆ ಬ್ರಹ್ಮವು ಪಂಚಲಕ್ಷಣ ಲಕ್ಷಿತವಿದ್ದರೂ ಮಾಯೋಪಾಧಿಯಿಂದ ಅನಂತಬಗೆಯಾಗಿ ತೋರುವದು. "ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ" ಎಂಬ ಭಗವದುಕ್ತಿಯೂ "ಅಂಶೋ ನಾನಾವ್ಯಪದೇಶಾತ್" ಈ ಬ್ರಹ್ಮಸೂತ್ರವೂ "ಭ್ರಮೇಣಾಹಂ ಭ್ರಮೇಣತ್ವಂ ಭ್ರಮೇಣೋಪಾಸಕಾ ಜನಾಃ । ಭ್ರಮೇಣೇಶ್ವರ ಭಾವತ್ವಂ ಭ್ರಮಮೂಲಮಿದಂ ಜಗತ್" ಎಂಬ ಯೋಗ ವಾಶಿಷ್ಠದ ಉಕ್ತಿಯೂ ಇದನ್ನೇ ಸಮರ್ಥಿಸುತ್ತದೆ. "ಒಂದು ಗಣಿತಕ್ಕೆ ಮುಂ । ದೊಂದೆರಡು ಮೂರಾದ । ಬಿಂದು ಬರೆ ಪತ್ತು ನೂರು ಸಾಸಿರ ವೆನಿಸಿ । ದಂದವಾ ಬ್ರಹ್ಮದೊಳಗಿಂತು ॥ ಒಂದೇ ಒಂದಾದ ಸಂಖ್ಯೆಯು ಬಿಂದುರೂಪ ಉಪಾಧಿಯಿಂದ ದಶ, ಶತ, ಸಹಸ್ರ, ಮೊದಲಾದ ಭೇದಗಳನ್ನು ಹೊಂದುವಂತೆ ಏಕಮೇವಾ ದ್ವಿತೀಯ ಬ್ರಹ್ಮವು ಉಪಾಧಿ ವಶದಿಂದ ನಾನಾಪ್ರಕಾರವಾಗಿ ತೋರುವದು ಎಂದು ನಿಜಗುಣ ಶಿವಯೋಗಿಗಳೂ ಪರಮಾನುಭವ ಬೋಧೆಯಲ್ಲಿ ಹೇಳಿದ್ದಾರೆ. ಋಕ್, ಯಜುರ್ ಸಾಮ, ಅಥರ್ವಣಗಳೆಂಬ ನಾಲ್ಕು ವೇದಗಳಲ್ಲಿ ಕ್ರಮವಾಗಿ "ಪ್ರಜ್ಞಾನಂ ಬ್ರಹ್ಮ" "ಅಹಂ ಬ್ರಹ್ಮಾಸ್ಮಿ" "ತತ್ತ್ವಮಸಿ" "ಅಯಮಾತ್ಮಾ ಬ್ರಹ್ಮ" ಎಂಬ ವಾಕ್ಯ ಸಮುದಾಯವು ಹೇಳಲ್ಪಟ್ಟಿರುವದು. ಈ ನಾಲ್ಕು ವಾಕ್ಯಗಳೇ ಮಹಾವಾಕ್ಯ ಚತುಷ್ಟಯವೆಂದು ಹೇಳಿಲ್ಪಟ್ಟಿರುವುದು. ಇವುಗಳಲ್ಲಿ ಶ್ವೇತಕೇತುವೆಂಬ ಯೋಗ್ಯ ಅಧಿಕಾರಿಗೆ ಒಂಬತ್ತು ಸಾರೆ ಉಪದೇಶಿಸಲ್ಪಟ್ಟ ಸಾಮವೇದೋಕ್ತ ತತ್ತ್ವಮಸಿ ಮಹಾವಾಕ್ಯವೇ ಶ್ರೇಷ್ಠವಾದುದು. ಜೀವಾತ್ಮನು ತನ್ನ

ಮರವೆಯಿಂದ ಅಥವಾ ಮಾಯೆಯಿಂದ ಬಿಡುಗಡೆಯನ್ನು ಹೊಂದಿದರೆ ಅದೇ ಮುಕ್ತಿಯು. ಯಜ್ಞಮಂಟಪದಲ್ಲಿ ಹವಿರ್ದ್ರವ್ಯಗಳನ್ನು ತಕ್ಕೊಳ್ಳುವ ಜಗದ್ವಂದ್ಯನಾದ ಅಗ್ನಿನಾರಾಯಣನು ಅಶುದ್ಧವಾದ ಕಬ್ಬಿಣದ ಸಹವಾಸದಿಂದ ಕಮ್ಮಾರನ ಸುತ್ತಿಗೆಯ ಪೆಟ್ಟನ್ನು ತಿನ್ನುವಂತೆ ಮಾಯೆಯ ಸಹವಾಸದಿಂದ ಜೀವಾತ್ಮನೂ ಕಷ್ಟಪಡುತ್ತಿರುವನು.

## ಮಾಯಾ

ಮಾಯೆಯೆಂದರೆ ಜೀವಾತ್ಮನಿಗೆ ಮರವೆಯನ್ನುಂಟುಮಾಡಿರುವ ತಾಮಸೀ ಶಕ್ತಿಯು "ನಾಸ್ತ್ಯೇವ ಯಾ ವಿಚಾರೇಣ ಸಾಮಯಾ ಇತ್ಯಭಿಧೀಯತೇ" ಯಾವದು ಅವಿಚಾರದಿಂದ ಇದ್ದಂತೆ ತೋರಿ ವಿಚಾರ ಮಾಡಿದರೆ ಇಲ್ಲವೋ ಅದೇ ಮಾಯೆಯು. ಈ ವಿಷಯದಲ್ಲಿ ಆಧುನಿಕ ಕಾಲದ ಸಂತರೆನಿಸಿದ ಶ್ರೀ ರಾಮಕೃಷ್ಣಪರಮಹಂಸರು ಒಂದು ಸುಂದರವಾದ ದೃಷ್ಟಾಂತವನ್ನು ಕೊಟ್ಟಿರುವರು. ರಾಮ, ಸೀತೆ, ಲಕ್ಷ್ಮಣರು ದಂಡಕಾರಣ್ಯದಲ್ಲಿ ಸಂಚರಿಸುವಾಗ ಪ್ರೀತಿಯ ಅಣ್ಣನನ್ನು ನೋಡುವ ಇಚ್ಛೆಯು ತಮ್ಮನಾದ ಲಕ್ಷ್ಮಣನಿಗೆ ಆಗುತ್ತಿತ್ತಂತೆ. ಆಗ ಲಕ್ಷ್ಮಣನು ನಡುವಿನ ಸೀತೆಗೆ ಮೆಲ್ಲನೆ ಸರಿಯಲು ಹೇಳುತ್ತಿದ್ದನಂತೆ. ಪರಮಾತ್ಮ ಮಾಯಾ, ಜೀವಾತ್ಮ ಹೀಗೆ ಇಲ್ಲಿಯೂ ಕ್ರಮವುಂಟು. ಜೀವಾತ್ಮನಿಗೆ ಪರಮಾತ್ಮನ ಸಾಕ್ಷಾತ್ಕಾರವಾಗಬೇಕಾದರೆ ನಡುವಿದ್ದ ಮಾಯೆಯು ದೂರ ಹೊರಟುಹೋಗಬೇಕು. ಅಂತರ ಗಂಗೆಯಿಂದ ಮುಚ್ಚಲ್ಪಟ್ಟ ಜಲವು ಅದು ಹೋದಾಕ್ಷಣ ನಿಚ್ಚಳವಾಗಿ ಕಾಣುವಂತೆ ಅಥವಾ ಮೇಘಾಚ್ಛಾದಿತ ಸೂರ್ಯನು ಅದು ಚದರಿ ಹೋದಾಕ್ಷಣ ಸ್ಪಷ್ಟವಾಗಿ ಕಾಣುವಂತೆ ಮಾಯೆಯ ಪಟಲವು ಸರಿದು ಹೋದಾಕ್ಷಣ ಸ್ವಸ್ವರೂಪ ಸಾಕ್ಷಾತ್ಕಾರವಾಗುವದು. ಅವಿದ್ಯಾಕಾರ್ಯಗಳಾದ ಮಲವಿಕ್ಷೇಪಾದಿಗಳ ದೋಷದಿಂದ ದೂಷಿತವಾದ ಚಿತ್ತವನ್ನು ಶುದ್ಧೀಕರಿಸುವುದು, ತದ್ವಾರಾ ಸ್ವಸ್ವರೂಪ ಸಾಕ್ಷಾತ್ಕಾರವನ್ನು ಮಾಡಿಕೊಳ್ಳುವದು. ಇವುಗಳಿಗಾಗಿಯೆ ಶಾಸ್ತ್ರದಲ್ಲಿ ಕರ್ಮೋಪಾಸನೆಗಳೂ, ವಿಧಿವಿಧಾನಗಳೂ, ಅನಂತ ಸಂಸ್ಕಾರಗಳೂ ಹೇಳಲ್ಪಟ್ಟಿವೆ. ಅವಿದ್ಯಾ ನಿವೃತ್ತಿಯೇ ಮೋಕ್ಷವು. ಅವಿದ್ಯಾ ಸಂಬಂಧವೇ ಬಂಧವು. ಲಕ್ಷೋಪಲಕ್ಷ ಗ್ರಂಥ ರಾಶಿಯಿಂದ ಪ್ರತಿಪಾದಿಸಲ್ಪಟ್ಟ ಅದ್ವೈತ ಸಿದ್ಧಾಂತವು ಕೇವಲ ಒಂದೇ ಒಂದು ಅನುಷ್ಟುಪ್ ಶ್ಲೋಕದ ಅರ್ಧಚರಣದಿಂದಲೇ ಪ್ರತಿಪಾದಿಸಲ್ಪಟ್ಟಿರುವುದು.

ಶ್ಲೋಕಾರ್ಧೇನ ಪ್ರವಕ್ಷ್ಯಾಮಿ ಯದುಕ್ತಂ ಗ್ರಂಥಕೋಟಿಭಿಃ ।
ಬ್ರಹ್ಮಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವನಾಪರಃ ॥

ಇದೇ ಅದ್ವೈತ ಸಿದ್ಧಾಂತದ ರಹಸ್ಯವು.

——::——

# ವಚನ ರಚಿಸಿದ
# ಗುರುದೇವ - ಗುರುದೇವಿಯರು.



ಸೂರ್ಯಸಿಂಹಾಸನಾಧೀಶ್ವರ **ಶ್ರೀ ಜ. ಚ. ನಿ.**

### ವಚನ ರಚನೆಯ ಮೂಲ.

**ಕ**ನ್ನಡ ಕತ್ತುರಿ. ಕನ್ನಡ ನುಡಿದೇವಿ ಸುಂದರಿ. ಕನ್ನಡ ನುಡಿ ಚಿನ್ನ-ಎಂದು ಮುಂತಾಗಿ ಹೇಳಿಕೊಳ್ಳುವ ಜೇನಿನಂತಹ ಸವಿನುಡಿಗೆ ಹೆಚ್ಚು ಕಳೆ ಕೊಟ್ಟಿದೆ ವಚನ ವಾಙ್ಮಯ; ಸೊಗಸು-ಸಾರ್ಥಕತೆಗಳ ತಂದಿದೆ ವಚನ ವಾಙ್ಮಯ. ನುಡಿಗೆ ನಿಸರ್ಗ ಸೌಂದರ್ಯವನ್ನು ನಿಜಮಾಧುರ್ಯವನ್ನು ತಂದ ಕೀರ್ತಿ ವೈಶಿಷ್ಟ್ಯ ವಚನ ವಾಙ್ಮಯಕ್ಕಿದೆ. ಅಂತಹ ವಚನ ವಾಙ್ಮಯದ ಉದಯಕಾಲ ಸದ್ಯಕ್ಕೆ ಸಿಕ್ಕಿರುವ ವಚನಗಳ ಮುಖಾಂತರ ಸುಮಾರು ಹತ್ತನೆಯ ಶತಮಾನವೆಂದು ಹೇಳಬಹುದಾಗಿದೆ. ಹನ್ನೊಂದನೆಯ ಶತಮಾನದ ಶ್ರೀ ದೇವರ ದಾಸಮಯ್ಯನವರಿಗಿಂತ ಹಿಂದಿದ್ದ ಜಗದ್ಗುರು ಪಂಡಿತಾರಾಧ್ಯರು ಬರೆದ ವಚನವೊಂದು 'ಸರ್ವ ಪುರಾತನರ ವಚನ' ಕಟ್ಟಿನಲ್ಲಿ ಸಿಕ್ಕಿದೆ. ಇದನ್ನು 'ಸದ್ಧರ್ಮ ದೀಪಿಕೆ'ಯ ಸಂಪಾದಕರಾದ ಶ್ರೀ ಚೆನ್ನಮಲ್ಲಿಕಾರ್ಜುನರು ದೊರಕಿಸಿದ್ದಾರೆ. ಇದನ್ನು ಮುಂದೆ ನಾವು ಉದ್ಧರಿಸಿದ್ದೇವೆ. ಹೀಗೆ ಹತ್ತನೆಯ ಶತಮಾನದಲ್ಲಿ ಉದಯವಾದ ವಚನ ರಚನೆಯು ೧೧ ಮತ್ತು ೧೨ನೆಯ ಶತಮಾನಗಳೆರಡರಲ್ಲಿ ಮುಂದುವರಿದು ಹಬ್ಬುಗೆಯಾಗಿದೆ.

ಕ್ರಿ. ಶ. ೧೦೦೧ರಿಂದ ೧೦೪೦ರ ಕಾಲದಲ್ಲಿದ್ದವರು ದೇವರ ದಾಸಮಯ್ಯನವರು. ಇವರ ದೀಕ್ಷಾ ಗುರುಗಳು ಶ್ರೀ ಜ. ಚಂದ್ರಗುಂಡ ಶಿವಾಚಾರ್ಯರು. ಇವರ ಗುರುಗಳು ಜಗದ್ಗುರು ವಿರೂಪಾಕ್ಷ ದೇಶಿಕೇಂದ್ರ ಶಿವಾಚಾರ್ಯರು. ಇವರ ಮೂಲಗುರುವೇ

ಶ್ರೀ ಜಗದ್ಗುರು ಪಂಡಿತಾರಾಧ್ಯರು. ಹೀಗಿರುವಾಗ ಇವರ ಕಾಲ ಹತ್ತನೆಯ ಶತಮಾನವೆಂದು ಹೇಳಲು ಯಾವ ಅಭ್ಯಂತರವಿಲ್ಲ. ಇವರು ಮಲ್ಲಿಕಾರ್ಜುನ ಪಂಡಿತಾರಾಧ್ಯರಿಗೆ ಭಿನ್ನರು; ತೀರ ಪೂರ್ವದವರು. ಇದಕ್ಕೆ ಸಾಕ್ಷಿಯಾಗಿ ಇವರಿಬ್ಬರ ವಚನಗಳು ಬೇರೆ ಬೇರೆಯಾಗಿವೆ. ವಚನ ಮುದ್ರಿಕೆಗಳೂ ಬೇರೆ ಬೇರೆಯಾಗಿವೆ. ಶ್ರೀ ಜ. ಚಂದ್ರಗುಂಡದೇಶಿಕೇಂದ್ರರ ಗುರುವಿನ ಗುರುವಾದ ಮೂಲ ಜ. ಪಂಡಿತಾರಾಧ್ಯರ ಕಾಲವನ್ನು ಹತ್ತನೆಯ ಶತಕದಿಂದೀಚೆಗೆ ಹಾಕಲು ಆದಾರಿಂದಲೂ ಸಾಧ್ಯವಿಲ್ಲ.

ಶ್ರೀ ಜಗದ್ಗುರು ಪಂಡಿತಾರಾಧ್ಯರಿಂದ ವಚನ ರಚನೆ ಮೊದಲಾದುದೊಂದು ಅತ್ಯಂತ ಅಭಿಮಾನದ ಸಂಗತಿ. ಆದರೆ ಇವರ ವಚನಗಳು ಹೆಚ್ಚಾಗಿ ಸಿಕ್ಕಿಲ್ಲ. ಇದು ದುರದೃಷ್ಟ. ಹನ್ನೆರಡನೆಯ ಶತಕದಂತೆ ಅಂದು ಬರೆದಿರಿಸುವ ವ್ಯವಸ್ಥೆ ಇದ್ದಂತೆ ಕಾಣಲಿಲ್ಲ. ಅಲ್ಲಲ್ಲಿ ಒಬ್ಬೊಬ್ಬರು ಬರೆದಿರಿಸಿದ್ದರೆ ಬಹುಕಾಲ ಗತಿಸಿದ ಕಾರಣ ನಷ್ಟಕ್ಕೆ ಈಡಾಗಿರುವುದು ಸಹಜ. ಹನ್ನೆರಡನೆಯ ಶತಕಕ್ಕೆ ಹಿಂದೆ ಹೋದಂತೆ ಆ ಕಾಲದವರ ಸಮಗ್ರ ಕೃತಿಗಳು ಸಿಕ್ಕುವುದು ದುರ್ಲಭ, ವಚನಗಳು ಹೆಚ್ಚಾಗಿ ಸಿಕ್ಕದಿರುವುದೂ ಸಹ ಪ್ರಾಚೀನತೆಯ ಒಂದು ಕುರುಹು. ಹೀಗಿದ್ದರೂ ಈ ದಿಸೆಯಲ್ಲಿ ಇನ್ನೂ ಹೆಚ್ಚಿನ ಸಂಶೋಧನೆ ಸಾಗಿದರೆ ಸಿಕ್ಕಬಹುದೇನೋ ಎಂಬ ನಿರೀಕ್ಷಣೆ ಮೂಡಿಬರುವಂತಿದೆ.

ಆಚಾರ್ಯರಿಂದ ಆರಂಭವಾದ ವಚನ ರಚನಾ ಲಹರಿಯು ಈಚೆಗೆ ಶಿವಶರಣರಲ್ಲಿ ಹರವಾಗಿ ಹಬ್ಬಿ ಹರಿದಿದೆ. ಹೀಗಿದ್ದರೂ ವಚನ ವಾಙ್ಮಯದಲ್ಲಿ ಅನೇಕ ಜನ ಶಿವಾಚಾರ್ಯರು ಸೇವೆ ಸಲ್ಲಿಸಿದಾರೆ, ಇವರುಗಳ ಹೆಸರುಗಳು ಶರಣ ಸಮೂಹದಲ್ಲಿ ಸಮಾವೇಶವಾಗಿಹೋಗಿವೆ. ಇದರಿಂದಾಗಿ ಆಚಾರ್ಯರಿಂದ ವಚನ ವಾಙ್ಮಯರೂಪದಲ್ಲಿ ನುಡಿಸೇವೆ ಸಂದಿಲ್ಲವೆಂಬ ಸಂದೇಹವು ಜನತೆಯಲ್ಲಿ ಮೂಡಿ ಬೇರೂರಿನಿಂತಿದೆ. ಈ ಭಾವನೆಯು ಬಯಲಾಗಲೆಂದು ಭಾವಿಸಿ ಈ ವಿಂಗಡಣೆಯ ವ್ಯವಸಾಯುವನ್ನು ಇಲ್ಲಿ ಮಾಡಲಾಗಿದೆ.

ಸುಮಾರು ಮುನ್ನೂರು ಮಂದಿ ವಚನಕಾರರನ್ನು ಹೇಳುವುದುಂಟು. ಇವರುಗಳಲ್ಲಿ ಮೂರು ಭಾಗವನ್ನು ಮಾಡಬೇಕು. ಬಸವಣ್ಣನಗಿಂತ ಪೂರ್ವದವರು, ಬಸವಣ್ಣನ ಸಮಕಾಲೀನರು; ಬಸವಣ್ಣನ ಬಳಿಕ ಬರೆದವರು. ಹತ್ತು ಮತ್ತು ಹನ್ನೊಂದನೆಯ ಶತಮಾನದ ವಚನಕಾರರು ಆದ್ಯರು; ಪುರಾತನರು. ಇವರ ಸಂಖ್ಯೆಯು ಸಾಕಷ್ಟಿದೆ. ಇವರ ವಚನಗಳು ಖಂಡ ಖಂಡವಾಗಿ ಸಿಕ್ಕುತ್ತವೆ. ಹನ್ನೆರಡನೆಯ ಶತಮಾನದ ವಚನ ರಚನೆಗೆ ಆ ಆದ್ಯರ ಆ ಪುರಾತನರ ವಚನಗಳು ದೋಹದವಾಗಿದ್ದವು. ದಿವ್ಯಜ್ಞಾನದ ನೆಲೆಯು ತೆರೆದು ತೋರಿದ್ದವು :

"ನಮ್ಮ ಆದ್ಯರ ವಚನ ಜ್ಞಾನದ ನೆಲೆಯು ತೆಗೆದಿರಿಸಿತ್ತು....
ಇಂತಪ್ಪ ಆದ್ಯರ ವಚನ ಭಂಡಾರವ ನಮ್ಮ ಪ್ರಭು ಮುಖ್ಯ
೭೭೦ ಅಮರಗಣಂಗಳು ಅಸಂಖ್ಯಾತ ಪ್ರಮಥಗಣಂಗಳು ಕೇಳಿಕೇಳಿ
ಕೊಂಡಾಡಿದ ಕಾರಣ ನಮ್ಮ ಕೂ. ಚೆ. ಸಂ.ನಲ್ಲಿ
ಸರ್ವಸುಖವ ಸೂರೆಗೊಂಡು ಸ್ವಯಲಿಂಗವಾದರು.
ಇಂತಪ್ಪ ಪುರಾತನರ ವಚನಂಗಳ ಎರಡಿಲ್ಲದೆ ಕೊಂಡಾಡಿ
ತನು ಮನ ಧನವ ಎರಡಿಲ್ಲದೆ ಸಮರ್ಪಿಸುವ
ಭೃತ್ಯರ ಭೃತ್ಯ ನಾನು; ಆಳಿನಾಳಯ್ಯ ನಾನು."

ಮೇಲಿನ ನಮ್ಮ ಅಭಿಪ್ರಾಯವನ್ನು ಪೋಷಿಸುತ್ತದೆ ಈ ಚೆನ್ನಬಸವಣ್ಣನವರ ವಚನವು. ಹೀಗೆ ಹನ್ನೆರಡನೆಯ ಶತಮಾನದ ವಚನ ರಚನೆಗೆ ಹಾದಿ ಹಾಕಿಕೊಟ್ಟ ಹತ್ತು ಹನ್ನೊಂದನೆಯ ಶತಮಾನದ ವಚನಕಾರರು ಹೆಚ್ಚಾಗಿಯೆ ಸಿಕ್ಕುತ್ತಾರೆ. ಅವರಲ್ಲಿ ಈಗ ಸಿಕ್ಕಮಟ್ಟಿಗೆ ದೇವರ ದಾಸಮಯ್ಯನವರಲ್ಲಿ ವಿಶ್ವಾಸವುಳ್ಳವರು ಕೆಲವರು; ರೇವಣಸಿದ್ಧ ಶಿವಾಚಾರ್ಯರಲ್ಲಿ ಭಕ್ತಿಭಾವವುಳ್ಳವರು ಕೆಲವರು, ಅಲ್ಲದೆ ಬಸವಣ್ಣನವರ ಕಾಲದಲ್ಲಿಯೂ ಈಚೆಗೂ ಸಹ ಹಲಕೆಲವರು ಶಿವಾಚಾರ್ಯರು ವಚನ ರಚಿಸಿದ್ದಾರೆ. ಹನ್ನೆರಡನೆಯ ಶತಮಾನದಿಂದೀಚೆಗೆ ಅನೇಕ ವಚನಕಾರರು ಬಸವಣ್ಣನವರಲ್ಲಿ ಭಕ್ತಿ ಶ್ರದ್ಧೆಗಳ ತೋರಿದಾರೆ. ಸ್ವತಂತ್ರವಾಗಿ ವಚನ ರಚಿಸಿದವರೂ ಇದಾರೆ.

ಹೀಗೆ ವಚನ ರಚಿಸಿದವರೆಲ್ಲರಲ್ಲಿ ಎಲ್ಲರೂ ಶರಣ ವರ್ಗದವರೇ ಇಲ್ಲ. ಗುರು ವರ್ಗದರು–ಗುರುಮಾರ್ಗದವರು ಇದಾರೆ. ಇವರನ್ನೆಲ್ಲ ಶರಣ ಸಮೂಹದಲ್ಲಿಯೇ ಸೇರಿಸಿ ಹೇಳುವ ವಾಡಿಕೆ ಬಂದುಬಿಟ್ಟದೆ. ಈ ಸಾಮರಸ್ಯ ಲೇಸಾದರೂ ಇದು ಇತ್ತೀಚೆಗೆ ಬೇರೊಂದು ಭಾವವನ್ನು ಬೆಳಸಿವೆ; ಆಕ್ಷೇಪಣೆಯ ಮಾತಹಚ್ಚಿದೆ. ಅನೇಕರು, ಗುರುವರ್ಗದವರು ವಚನ ರಚಿಸಿಲ್ಲೆಂದು ಆಕ್ಷೇಪಿಸಿ ಅಲ್ಲಗಳೆದು ಆಡು ವಂತೆ ಮಾಡಿದೆ. ಬರೀ ಬಾಯಿಂದ ಆಡುವುದೇ ಅಲ್ಲ ಬರೆದುದೂ ಉಂಟು. ಗುರು ವರ್ಗದವರು ಕನ್ನಡಿಗರೇ ಅಲ್ಲ; ಅವರಿಂದ ಕನ್ನಡ ನುಡಿ ಸೇವೆ ಸಂದಿಲ್ಲ ಎಂದು ಹೇಳಿದವರೂ ಉಂಟು.

"ಪಂಚಾಚಾರ್ಯರು ಕನ್ನಡ ನಾಡಿನವರೆ? ಕನ್ನಡಿಗರೆ? ಕನ್ನಡದಲ್ಲಿ ವಚನ ಗಳನ್ನು ಬರೆದಿದ್ದಾರೆಯೆ? ಎಂಬ ಪ್ರಶ್ನೆಗಳಿಗೆ ಉತ್ತರವನ್ನು ಖಚಿತವಾಗಿ ಹೇಳ ಲಾರೆವು...." ವಚನ ಧರ್ಮಸಾರ, ಪುಟ ೬೨.

ಎಂಬೀ ಮರ್ಮಭೇದಕ ಮಾತುಗಳನ್ನು ಓದಿ ಮನಸ್ಸು ಮಮ್ಮಲ ಮರುಗಿತು. ಗ್ರಂಥಕರ್ತರ ಈ ದುರಾಗ್ರಹ ಇಷ್ಟಕ್ಕೆ ಮುಗಿಯದೆ ಮುಂದುವರಿದು,

"ಅವರು (ಆಚಾರ್ಯರು)....ಸಂಸ್ಕೃತಾಭಿಮಾನಿಗಳು. ಹಲವು ಭಾಷ್ಯಗಳನ್ನು ಬರೆದು ಸಿದ್ಧಾಂತವನ್ನು ಸ್ಥಾಪಿಸಿ ಆಚಾರ್ಯ ಪದವಿಯಲ್ಲಿರತಕ್ಕವರು."

ಎಂದು ಆಚಾರ್ಯರು ವಚನಗಳನ್ನು ಬರೆದೇ ಇಲ್ಲೆಂದು ಹೇಳಿ ದೂಷಿಸುವ ನೆಪದಲ್ಲಿ ಭಾಷ್ಯರಚನೆ, ಆಚಾರ್ಯ ಪದ ನಿರ್ವಹಣೆಯಂತಹ ಮುಖ್ಯ ವಿಷಯಗಳನ್ನು ಅಂಗೀಕರಿಸಿ ಭೂಷಣವನ್ನೇ ಪ್ರಸ್ಥಾಪಿಸಿದ್ದಾರೆ. ಈ ಮಾತು ಹೇಗೇ ಇರಲಿ, ಮೇಲಿನ ಪ್ರಶ್ನೆಗಳಿಗೆ ಉತ್ತರವಾದಿಗಳಾಗಿ ನಾವೀ ಕಾರ್ಯವನ್ನು ಕೈಕೊಳ್ಳಬೇಕಾಯಿತು. ನಮ್ಮೀ ಕಾರ್ಯದಿಂದ ಈ ಯುಗದ ಪಂಚಾಚಾರ್ಯರು ಕನ್ನಡ ನಾಡಿನವರು, ಕನ್ನಡಿಗರು; ಕನ್ನಡದಲ್ಲಿ ವಚನ ರಚಿಸಿದವರು ಎಂಬುದು ಖಚಿತವಾಗುತ್ತದೆ. ಅಲ್ಲದೆ ವಚನ ರಚನೆಗೆ ಮೂಲಕರ್ತರೆಂಬುದು ನಿಸ್ಸಂದೇಹವಾಗಿ ನಿರ್ಣಯವಾಗುತ್ತದೆ.

ನಾವೀ ಬರೆಹದಲ್ಲಿ ಆಯ್ದ ಗುರು–ಗುರುದೇವಿಯರಲ್ಲಿ ಕೆಲವರು ವೈಯಕ್ತಿಕ ಗುರುಗಳು, ಕೆಲವರು ಸಾಮಾಜಿಕ ಗುರುಗಳು ಆದವರಿದ್ದಾರೆ. ಅಲ್ಲದೆ ಹಲವರು ಮಠಾಧಿಪತಿಗಳಾಗಿ ಗುರುಗಳೆನಿಸಿದ್ದರೆ ಬೇರೆ ಹಲವರು ಮಠಾಧಿಪತಿಗಳಾಗದೆ ಗುರುಗಳಾಗಿದಾರೆ. ಲಿಂಗಧಾರಣ–ದೀಕ್ಷಾಧಿಕರಣ ಕ್ರಿಯಾನಿರತರಾದವರೆಲ್ಲರೂ ಗುರುಗಳು. ಅಲ್ಲದೆ ಗುರುಗಳು ಬ್ರಹ್ಮಚಾರಿಗಳಾಗಿಯೇ ಇರಬೇಕೆಂಬ ನಿಯಮವಿಲ್ಲ. ಗೃಹಸ್ಥರಾಗಿಯೂ ಇರಬಹುದು; ಇರಬಲ್ಲರು.

"ಯಥಾ ಕಾತ್ಯಾಯನೀ ಕಾಂತೋ ಗೃಹಸ್ಥಾಶ್ರಮಧಾರಕಃ
ತಥಾರಾಧ್ಯೋ ಗುರುರ್ಭೂಯಾದ್ಗೃಹಸ್ಥಾಶ್ರಮಧಾರಕಃ ||"
"ದಾರಾಯುಕ್ತೋ ಮಠಾಧ್ಯಕ್ಷ ಆರಾಧ್ಯೋಹಿ ಗುರೂತ್ತಮಃ
ದಾರಾಹೀನಸ್ತು ಸನ್ಯಾಸಿ ವೀರಶೈವಾಂತರೋ ಮತಃ ||"

ಈ ಬರೆಹದಲ್ಲಿ ಬರುವ ಪುಣ್ಯಾಂಗನೆಯರನ್ನು ಗುರುಪತ್ನಿಯರು, ಗುರುದೇವಿಯರು ಎಂದು ಎರಡು ಬಗೆಯಾಗಿ ವಿಂಗಡಿಸುತ್ತೇವೆ. ಗುರುಪತ್ನಿಯರಾಗಬಹುದು ಗುರುದೇವಿಯರಾಗುವುದು ಸಾಹಸದ ಕೆಲಸ; ಅಪೂರ್ವ ಪವಾಡ. ತಿಲಕವ್ವೆ, ವೈಜವ್ವೆ, ಗೊಗ್ಗವ್ವೆ ಇವರುಗಳು ಗುರುದೇವಿಯರ ಮಾಲೆಯಲ್ಲಿ ಬರುತ್ತಾರೆ. ಶಾಂಭವೀದೇವಿ, ಆಗಮಮೋಹಿನೀ, ಕಾಳವ್ವೆ ಮುಂತಾದವರು ಗುರುಪತ್ನಿಯರ ಮಾಲೆಯಲ್ಲಿದ್ದಾರೆ.

ಗುರುಗಳಂತೆ ಗುರುಪತ್ನಿಯರು ವಚನಗಳ ರಚಿಸಿ ಕನ್ನಡ ನುಡಿ ಸೇವೆ ಸಲ್ಲಿಸಿದ್ದಾರೆ. ಶರಣ ಶರಣೆಯರಲ್ಲಿ ಶ್ರೀ ಮಹಾದೇವಿಯಕ್ಕಗಳು ಪ್ರಸಿದ್ಧರಾಗಿರುವಂತೆ ೧೧ನೆಯ ಶತಮಾನದ ಗುರು–ಗುರುಪತ್ನಿಯರಲ್ಲಿ ಶಾಂಭವಿದೇವಿಯು ಸರ್ವೋತ್ಕೃಷ್ಟಳೆನಿಸಿದಾಳೆ. ಗುರುದೇವಿಯರಿಗೆ ಗುರುತರ ಕೀರ್ತಿ ತಂದಿದಾಳೆ. ಇವಳ ಅನುಭವ ಅಗಾಧವಾದುದು; ಜೀವನ ಅನ್ಯಾದೃಶವಾದುದು; ಆದರ್ಶವಾದುದು. ಇವಳು ಸಿಂಹವಿಕ್ರಮ ಚೋಳನ ಮಗಳು. ಶ್ರೀ ಜ. ರೇವಣಸಿದ್ಧರ ಪರಮ ಪುಣ್ಯಾಂಗನೆ.

"ದೀಕ್ಷೆಗೆ ಬೆಲೆಯುಂಟೆ? ಮೋಕ್ಷಕ್ಕೆ ಎಣೆಯುಂಟೆ?
ಭಕ್ತಿಗೆ ಭವವುಂಟೆ? ಮುಕ್ತಿಗೆ ಮೇಲುಂಟೆ?
ಸತ್ಯಕ್ಕೆ ಸರಿಯುಂಟೆ? ಶಾಂಭವಿದೇವಿಗೆ ಸಮನುಂಟೆ?"

ಎಂಬೀ ಪುರಾತನೋಕ್ತಿಯು ಮೇಲಿನ ನಮ್ಮ ಮಾತನ್ನು ಸಮರ್ಥಿಸುತ್ತದೆ. ಶಾಂಭವಿದೇವಿಯು ಹೆಚ್ಚುಕಾಲ ಬದುಕಿರಬಹುದೆಂದು ತಿಳಿಯುತ್ತದೆ. ಏಕೆಂದರೆ ಇವಳು ಮುಂದೆ ಕಲ್ಯಾಣದಲ್ಲಿ ಪ್ರಭು ಚೆನ್ನಬಸವಣ್ಣನವರೊಡನಾಡಿ ಅವರಿಂದಲೂ ಮೆಚ್ಚುಗೆ ಮನ್ನಣೆಗಳನ್ನು ಪಡೆದಿದಾಳೆ.

"....ನಿನ್ನ ಮರುಜೀವಣೆಯಂ ಕಂಡು ಗೋಹೇಶ್ವರಲಿಂಗ ರೋಮ ರೋಮ ಪುಳಕಿತನಾದ ತಂಗಿಯೇ" ಮತ್ತು

"ಎಲ್ಲವನರಿವ ಮಹಾ ಮಹಂತನಾನಾದರೇನು ಫಲ ?
ಸಿದ್ಧಶರಣರ ನಿಮಿತ್ತ ಬಂದೆ. ಲಿಂಗಸಮರಸವ ತೋರುವ ನಿಮಿತ್ತ
ಇಲ್ಲಿ ನೀ ಬಾಲೆಯಾಗಿ ಗೋಹೇಶ್ವರ ಲಿಂಗದ ಕೂಟವರಿದುದೆಂತು ಸುರವ್ವಾ !"
"ಇಂತಪ್ಪ ಆ ಶಾಂಭವಿಯು ಅಡಿದಾವರೆಯ ಕಂಡು ಧನ್ಯನಾ...."

ಎಂದು ಪ್ರಭುದೇವರು ಬಣ್ಣಿಸಿದರೆ;

"....ಅಲ್ಲಿ ಆರಿಲ್ಲದ ಬಯಲು; ಅಲ್ಲಿ ಮೂಲ ಪ್ರಣವದ ಘೋಷ-ಕೇಳಿದರೆ ಬರ್ಪುದು; ಕೇಳದಿದ್ದರೆ ಇಲ್ಲ. ಇದರಿಂದ ಚಂದ ಕೂಡಲ ಚೆನ್ನಸಂಗನ ಶರಣೆ ಶಾಂಭವೀ ಬಲ್ಲಳು. ಇದು ಕಾರಣ ನಿಮ್ಮ ಪಾದಕ್ಕೆ ನಿಮ್ಮ ಶಾಂಭವಿಯ ಪಾದಕ್ಕೆ ನಮೋನಮೋ ಎಂದು ಬದುಕಿದೆ ಪ್ರಭುವೇ!" ಅದನ್ನೆ ಮುಂದು ಮಾಡಿ ಚೆನ್ನಬಸವಣ್ಣನವರು ಇನ್ನೂ ಚೆನ್ನಾಗಿ ಶ್ರೀ ಶಾಂಭವಿದೇವಿಯನ್ನು ಸ್ತುತಿಸಿ ನಮಿಸಿದ್ದಾರೆ. ಹೀಗೆ ಪ್ರಭುದೇವ – ಚೆನ್ನಬಸವ ಪ್ರಮುಖರಿಂದ ಹಾರ್ದಿಕವಾಗಿ ವಂದ್ಯಳೆನಿಸಿದಾಳೆ. ಅಲ್ಲದೆ ಆ ಶಾಂಭವಿದೇವಿಯ ಶ್ರೇಷ್ಠತೆಗೆ ಇದೊಂದು ನಿದರ್ಶನ. ಶಾಂಭವೀದೇವಿಯು ಮೂಲಪ್ರಣವದ ಅನಾಹತನಾದನು ಸಂಧಾನಶೀಲಳಾದ ಕಾರಣ ಆಕೆಯ ಹೆಸರಿನ 'ಶಾಂಭವೀ ಮುದ್ರೆ'ಯೊಂದು ಪ್ರಧಾನ ವಾಗಿ ಯೋಗ-ಶಿವಯೋಗಗಳೆರಡರಲ್ಲಿಯೂ ಉಕ್ತವಾಗಿದೆ. ಅಂತೆಯೇ ಆಚರಣೆ ಯಲ್ಲಿಯೂ ಬಂದಿದೆ. ಅಷ್ಟಾಂಗ ಯೋಗಿಗಳು ಶಾಂಭವೀ ಮುದ್ರೆಗೆ ಶ್ರೇಷ್ಠತೆಯ ಇತ್ತಿದಾರೆ; ಇಷ್ಟಲಿಂಗಾರ್ಚಕರೂ ಕೊಟ್ಟಿದಾರೆ. ಲಿಂಗಪೂಜೆಯ ಮೊದಲು ಮತ್ತು ಕೊನೆಯಲ್ಲಿ ಲಿಂಗವನ್ನು ಶಾಂಭವೀ ಮುದ್ರೆಯಿಂದ ತಲ್ಲೀನ ಮನಸ್ಕನಾಗಿ ನೋಡ ಬೇಕು. ಪ್ರಾಣಲಿಂಗದಲ್ಲಿ ಅಂತರ್ಲಕ್ಷ್ಯವನ್ನಿಡಬೇಕು. ಹೀಗೆ ಮಾಡುವುದೇ ಶಾಂಭವೀ ಮುದ್ರೆ.

"ಅಂತರ್ಲಕ್ಷ್ಯಂ ಬಹಿರ್ದೃಷ್ಟಿರ್ನಿಮೇಷೋನ್ಮೇಷ ವರ್ಜಿತಾ
ಏಷಾ ಸಾ ಶಾಂಭವೀ ಮುದ್ರಾ ವೇದಶಾಸ್ತ್ರೇಷು ಗೋಪಿತಾ"

—ಹಠಯೋಗ ಪ್ರದೀಪಕಾ.

ಇದರಿಂದ ಶಾಂಭವೀದೇವಿಯ ಶ್ರೇಷ್ಠತೆ ವ್ಯಕ್ತವಾಗುತ್ತದೆ. ಈ ದಿಸೆಯಲ್ಲಿ ಶಾಂಭವೀ ದೇವಿಯ ನಿಲವು ನಿಜಕ್ಕೂ ನೀಳಾದುದು. ಹೀಗಿದ್ದರೂ ಆ ಮಹಾ ಗುರುದೇವಿಯನ್ನು ಗುರುತಿಸದಿರುವುದು ಪ್ರಕಾಶಕ್ಕೆ ತಾರದಿರುವುದು ದುರದೃಷ್ಟ!

ವಚನ ರಚಿಸಿದ ಗುರುದೇವ-ಗುರುದೇವಿಯರು ಕೇವಲ ಕನ್ನಡ ನಾಡಿನವರಿರುವುದಿಲ್ಲ. ಜತೆಗೆ ಓಡಿಸಾ, ಆಂಧ್ರ, ದ್ರವಿಡ, ಮರಾಠಿ, ಉತ್ತರ ಭಾರತದವರೂ ಇದ್ದಾರೆ. ಕನ್ನಡ ಹೊರನಾಡಿನ ಆ ಆ ಪ್ರಾಂತಗಳಲ್ಲಿ ಅವರವರುಗಳಿಂದ ವೀರಶೈವ ಪ್ರಸಾರಕಾರ್ಯ ಜರಗಿರುವುದು ವಿಶೇಷ ಗಮನಾರ್ಹ ವಿಷಯ. ಕನ್ನಡನಾಡಿನಾಚೆ ವೀರಶೈವ ಪ್ರಸಾರ ಮಾಡಿದ ಕೀರ್ತಿ-ಪುಣ್ಯಗಳು ಗುರುವರ್ಗದವರದಲ್ಲದೆ ಭಾರತದಾಚೆ ಪರದೇಶಗಳಲ್ಲಿಯೂ ಸಹ ಪ್ರಸಾರಮಾಡಿದ ಕೀರ್ತಿ ಗುರುವರ್ಗದವರದಾಗಿದೆ. ಕನ್ನಡ ಸಂಸ್ಕೃತವೆರಡು ಭಾಷಾಸೇವೆ ಸಂದಿದೆ. ಗುರುವರ್ಗದವರು ಸಂಕುಚಿತ ಸ್ವಭಾವದವರಲ್ಲ, ವಿಶಾಲ ಹೃದಯರು. ಮತದ ಎಲ್ಲೆಯನ್ನು ಮೀರಿ ಆಚೆಯ ಅಂತ್ಯಜ-ಅಗ್ರಜಾದಿ ಜನಗಳಿಗೂ ಶಿವದೀಕ್ಷಾ ಸಂಸ್ಕಾರವಿತ್ತು ಉದ್ಧರಿಸಿದವರು. ಕನ್ನಡಿಗರಾಗಿ ಕನ್ನಡ ವಚನ ರಚನೆಯ ಮಾಡುವುದೊಂದು ಹೆಚ್ಚಲ್ಲ; ಕನ್ನಡಿಗರಲ್ಲದವರು, ಕನ್ನಡ ಕಲ್ತು ವಚನ ರಚಿಸಿದ ಸಾಹಸ ಸಣ್ಣದಲ್ಲ. ಗುರುಗಳನೇಕರು ಈ ಮಣಿಹ ಮಾಡಿದಾರೆ. ಮುಂದಿನ ವಿವರಣೆಯಲ್ಲಿ ಅಂಥವರನ್ನು ಕಾಣಬಹುದು.

## ಪಂಡಿತಾರಾಧ್ಯರು :

ಇವರ ಕಾಲ ೧೦ನೆಯ ಶತಮಾನ. ಶ್ರೀ ಶೈಲ ಸೂರ್ಯಸಿಂಹಾಸನಾಧೀಶರಿವರು. ವಚನಕಾರರಲ್ಲಿ ಇವರೆ ಮೊದಲಿಗರು. ಸರ್ವಪುರಾತನರ ವಚನ ಕಟ್ಟಿನಲ್ಲಿ ಇವರದೊಂದು ವಚನ ಲಭ್ಯವಾಗಿದೆ. ಅದು ಹೀಗಿದೆ :

ಇಲ್ಲದ ಕುತ್ತವ ಕೊಂಡ ಬಲ್ಲವರ
ಬಾಯ ಹೋಗಹೋದರೆ ಆ ಬಲ್ಲ ಬಲ್ಲವರೆಲ್ಲಾ
ಆ ಬಲ್ಲಲ್ಲಿಯೆ ಅಲ್ಲತ್ತಗೊಳುತಿದ್ದರು.
ಇದೆಲ್ಲಿಯ ಕುತ್ತು ಎಂದು ತಿಳಿದು ವಿಚಾರಿಸಲು
ಅದಲ್ಲೇ ಬಯಲಾಗಿತ್ತು ಗುರುಸಿದ್ಧಮಲ್ಲು.

'ಗುರುಸಿದ್ಧಮಲ್ಲು' ಎಂಬುದು ಇವರಿಟ್ಟುಕೊಂಡ ವಚನಾಂಕಿತ. ಇದು ಕೇವಲ ಸ್ಥಾವರಲಿಂಗ ಸೂಚಕವಾಗಿರದೆ ಗುರುದೇವ ನಾಮಾಂಕಿತವೂ ಆಗಿದೆ.

ಹತ್ತನೆಯ ಶತಮಾನದ ವಚನಗಳು ಹೆಚ್ಚಾಗಿ ಸಿಕ್ಕುತ್ತಿಲ್ಲ. ಹನ್ನೊಂದನೆಯ ಶತಮಾನದ ದೇವರ ದಾಸಮಯ್ಯನವರ ವಚನಗಳೇ ಪೂರ್ತಿ ಸಿಕ್ಕದಿರುವಾಗ ಹತ್ತನೆಯ ಶತಮಾನದ ವಚನಗಳ ಮಾತೇನು ಹೇಳಬೇಕು? ಒಂದೊಂದಾಗಿ ಆದರೂ ಹೀಗೆ ಸಿಕ್ಕುವುದು ನಮ್ಮ ಪುಣ್ಯ. ಕ್ರಿ.ಶ. ೧೦೦೧ ರಿಂದ ೧೦೪೦ ರಲ್ಲಿದ್ದ ಶ್ರೀ ಜ. ಚಂದ್ರಗುಂಡ ಶಿವಾಚಾರ್ಯರ ಹಿಂದೆ ಒಂದು ತಲೆಮಾರಿನ ಪೂರ್ವದಲ್ಲಿರುವ ಪಂಡಿತಾರಾಧ್ಯರ ಕಾಲವನ್ನು ೧೦ನೆಯ ಶತಮಾನವೆಂದೆ ಹೇಳಬೇಕು. ಅಂದೆ ಪಂಡಿತಾರಾಧ್ಯರು ೨೧ ಸಾವಿರ ಜಂಗಮರಿಗೆ ಗುರು (ಒಡೆಯ) ವಾಗಿದ್ದರು.

### ಮರುಳಸಿದ್ಧ ಶಿವಾಚಾರ್ಯರು :

ಇವರು ಉಜ್ಜಯನಿ ಪೀಠಾಧೀಶರು. ಇವರು ರೇವಣಸಿದ್ಧ ಶಿವಾಚಾರ್ಯರ ಸಮಕಾಲೀನರು. ಅಂದರೆ ಹನ್ನೊಂದನೆಯ ಶತಮಾನದವರು. ಇವರಿಗೆ ರೇವಣ ಪ್ರಭುವಿನ ಮೇಲೆ ಹೆಚ್ಚು ವಿಶ್ವಾಸ. ಅಂತೆಯೆ ಅವರ ಅಂಕಿತದಲ್ಲಿ ವಚನ ಬರೆದಿದ್ದಾರೆ.

"ಆಲಿ ಆಲಯದಲ್ಲಿ ಕರಿಗೊಳಲು
ಆಲಿಸುವ ಶ್ರವಣವು ಮೇಲಿಪ್ಪ ಆಕಾಶವನಡರಲು
ಉಲುಹು ನಿರ್ಭೂತ ಚಿತ್ತ ಸಮಾಧಾನವನೈದಲು
ಕಾಲ ಕರ್ಮ ಭವನಂಗಳ ಗೆಲುವುದಿದೇನು–
ಸೋಜಿಗವು ಹೇಳಾ ರೇವಣ ಪ್ರಭುವೆ."

ಹನ್ನೊಂದನೆಯ ಶತಕದಲ್ಲಿ ರೇವಣಸಿದ್ಧರು ಅಂದಿನ ವಚನಕಾರರಿಗೆಲ್ಲ ಪ್ರಭು ಪದದಲ್ಲಿದ್ದರು. ಅದರಿಂದಾಗಿ ಅವರ ಪುಣ್ಯನಾಮಾಂಕಿತವನ್ನೆ ಮರುಳು ಸಿದ್ಧ ಶಿವಾಚಾರ್ಯರು ಅಂಗೀಕರಿಸಿದಾರೆ. ಈ ಮರುಳ ಸಿದ್ಧ ಶಿವಾಚಾರ್ಯರು ಆರುಸಾವಿರ ಅತೀತ ಜಂಗಮರಿಗೆ ಗುರುವಾಗಿದ್ದರು.

### ದೇವರ ದಾಸಮಯ್ಯ :

ಈತನದು ಮುದನೂರು. ಈತನು ಹನ್ನೊಂದನೆಯ ಶತಮಾನದ ಐತಿಹಾಸಿಕ ವ್ಯಕ್ತಿ. ಶ್ರೀ ಜ. ಚಂದ್ರಗುಂಡ ಶಿವಾಚಾರ್ಯರ ಅಗ್ರಶಿಷ್ಯ. ಶರಣೆ ದುಗ್ಗಳೆಯ ಗಂಡ. ಜಯಸಿಂಹನ ರಾಣಿ ಸುಗ್ಗಳೆಯ ಗುರು. ವಚನಕಾರ.

" ಸಿರಿಯನಿತ್ತಡೆ ಒಲ್ಲೆ; ಕರಿಯನಿತ್ತಡೆ ಒಲ್ಲೆ.
ಹಿರಿದಪ್ಪ ರಾಜ್ಯವ ನಿತ್ತಡೆ ಒಲ್ಲೆ.
ನಿಮ್ಮ ಶರಣರ ಸೂಳ್ನುಡಿಯ ಒಂದರೆಗಳಿಗೆ ಇತ್ತಡೆ
ನಿಮ್ಮನಿತ್ತೆ ಕಾಣಾ ರಾಮನಾಥಾ "

### ರೇವಣಸಿದ್ಧ ಶಿವಾಚಾರ್ಯರು :

ಇವರು ಆದಿರೇಣುಕರ ಅಂತ್ಯಾವತಾರ. ಅತ್ಯಂತ ಸಮರ್ಥರು. ಸಿದ್ಧ ಶೇಖರರು. ಶಿವಾಚಾರ್ಯ ಶಿಖಾಮಣಿಗಳು. ಹನ್ನೊಂದನೆಯ ಶತಮಾನದಲ್ಲಿದ್ದವರು. ಇವರು ಹನ್ನೆರಡು ಸಾವಿರ ಹಂಚುಕಂಥೆ ಜನ ಜಂಗಮರಿಗೆ ಗುರುಗಳು. ಪವಾಡ ಪುರುಷರು. ಪ್ರಭಾವಶಾಲಿಗಳು.

" ಆದವಲ್ಲ ದಶದಿಕ್ಕಿನಲ್ಲಿ ದಶನಾದಂಗಳು.
ಆದುದಲ್ಲ ಪುಷ್ಪವೃಷ್ಟಿ ಕಲ್ಯಾಣಕರವಾಗಿ.
ಆಯಿತಲ್ಲ ಸರ್ವಗಣಂಗಳಿಗತ್ಯಾನಂದ.
ಇನ್ನು ಬಾರನೇ ತ್ರಿಪುರಾಂತಕ ಸೋಮಲಿಂಗ !"

**ರೇಕಮ್ಮ :**—ಇವರು ರೇವಣಸಿದ್ಧರ ಪುಣ್ಯ ಪತ್ನಿ. ಇವರು ವಚಿಸಿದ ವಚನವಿದು :

" ವ್ರತಹೀನನ ಗುರುತಪ್ಪುಕನ ಲಿಂಗಬಾಹ್ಯನ
ಪ್ರಸಾದ ದೂಷಕನ ಆಚಾರದ್ರೋಹಿಯ ಕಂಡಡೆ
ಕಣ್ಣು ಮುಚ್ಚಿ ಶಿವಮಂತ್ರವ ಜಪಿಸುವುದು ;
ಶಕ್ತಿಯುಳ್ಳರೆ ಸಂಹಾರವ ಮಾಡುವುದು.
ಇಷ್ಟು ಆಗದಿದ್ದರೆ ಆ ಸ್ಥಲವ ಬಿಡುವುದು ;
ಬಿಡದಿರ್ದಡೆ ಕುಂಭೀಪಾಕ ನಾಯಕ ನರಕ
ಘೋರ ಪಾಪವಯ್ಯ ಶ್ರೀಗುರು ಸಿದ್ಧೇಶ್ವರಾ,"

**ಆಗಮ ಮೋಹಿನಿದೇವಿ :**—ಇವರೂ ಶ್ರೀ ರೇವಣಸಿದ್ಧರ ಧರ್ಮಪತ್ನಿ ; ವೀರರಾಜೇಂದ್ರನ ಪುತ್ರಿ. ಇವರ ವಚನವಿದು :

" ಬಯಲಲಿಂಗ ಬಯಲಾದರೆ ತಪ್ಪಲ್ಲ.
ಬಯಲ ಲಿಂಗವಾಕಾರವಿಡಿದು ಬಂದರೆ ತಪ್ಪಲ್ಲ.
ಇಂತಪ್ಪ ಲಿಂಗವ ತರಲು ಅಸಮರ್ಥನೇ
ಎನ್ನಾಗಮ ಮೋಹಿನಿಯಣ್ಣ !"

**ವೇದ ಕಂಚುಕಿ ದೇವಿ :**—ಇವರು ವೀರಭದ್ರಚೋಳನ ಮಗಳು. ಶ್ರೀ ರೇವಣಸಿದ್ಧರ ಪುಣ್ಯಸತಿ. ಇವರ ವಚನವಿದು :

" ಎನ್ನಾಚಾರ್ಯರರ್ಚಿಪಲಿಂಗ ಬಯಲಾದುದೆಂಬೆನೆ ?
ಬಯಲಾದುದಿಲ್ಲ. ಆಕಾರವಿಡಿದಿಹರೆಂಬೆನೆ ?
ನುಡಿಗಡಣದ ಬೆಳಗು ತೋರುವುದಿಲ್ಲ.
ಗುರು ಜಂಗಮ ನುಡಿದಂತೆ ಲಿಂಗ ನುಡಿವರೆ
ಬಂದ ವೇದ ಕಂಚುಕಿ ಓಂಕಾರ ಮುಖ ನೋಡಯ್ಯ."

**ಶಾಂಭವೀದೇವಿ :**—ಇವರು ಸಿಂಹವಿಕ್ರಮಚೋಳರಾಜನ ಮಗಳು. ಶ್ರೀ ರೇವಣಸಿದ್ಧ ಶಿವಾಚಾರ್ಯರ ಕೈಪಿಡಿದ ಪುಣ್ಯಾಂಗನೆ. ಇವರ ವಚನಗಳಿವು :

ಗುರು ಮನೆಯ ವಾರ್ತೆಯ ಅರಮನೆಯವರು ಬಲ್ಲರೆ ?
ಅರಮನೆಯ ವಾರ್ತೆಯ ಅರೆಮರುಳರು ಬಲ್ಲರೆ ?
ನಿಮ್ಮ ವಾರ್ತೆ ನೀವೇ ಬಲ್ಲಿರಿ–
ಶಾಂಭವೀ ಲಿಂಗ ಶ್ರೀ ಗುರುವೆ !

ಹೊರಗಣ ನಾದ ಮನೋರಂಜನೆಯಲ್ಲದೆ
ಮಹಾಲಿಂಗವ ಕೂಡುವಲ್ಲಿ ಒಂದು ಕೋಣೆಯಲ್ಲಿ

ದಶನಾದ ಪೂರಯಿಸದದು.
ಒಂದು ಕೋಣೆಯಲ್ಲಿ ಒಂದೇ ನಾದವಿರ್ಪುದು.
ಒಬ್ಬರು ಒಳ್ನಿದ್ದೆ ಮಾಡಿ ಎದ್ದು
ಅರವತ್ತಾರು ಕೋಟಿ ಮಂತ್ರಗಳು ತಂತ್ರೀವಾದ್ಯ
ಮಾಡಿದವು ಕಾಣಾ ಶಾಂಭವೀ ಲಿಂಗವೆ!

**ಸೌಂದರೀದೇವಿ**:—ರಾಜೇಂದ್ರಚೋಳರಾಜನ ಮಗಳು. ರೇವಣಸಿದ್ಧ ಶಿವಾಚಾರ್ಯರ ಮಂಗಳಾಂಗನೆ. ಇವರು ಬರೆದ ವಚನವಿದು:

ಗುರುಲಿಂಗ ಜಂಗಮ ಭೇದದಲ್ಲಿ ಅರಸಿಂಪೆ ಅರಿಗಯ್ಯ?
ಸಾಗರದಲ್ಲಿಪ್ಪ ಲಹರಿಗಳ ತಾಡನೆ ಲಹರಿಗೆನಲುಂಟೆ?
ಗುರುದೂಷಣೆ ಇಲ್ಲ. ತನ್ನ ಮೂಗು ತಾ ಕೊಂಡರೆ ಅರಪಮಾನ,
ಉಸಿರಯ್ಯಾ ಶ್ರೀ ಗುರು ಸೋಮಲಿಂಗ ಶರಣೆ ಸೌಂದರಿಗೆ!

## ರುದ್ರಮುನಿ ಶಿವಾಚಾರ್ಯರು:

ಇವರು ರೇವಣಸಿದ್ಧರ ಪುತ್ರರು. ವೀರಸಿಂಹಾಸನವನ್ನು ಏರಿದವರು. ಮಿಗಿಲಾಗಿ ಚೆನ್ನಬಸವಣ್ಣಾದಿ ಶಿವಶರಣರಿಗೆಲ್ಲ ಬೆಂಗಾವಲಿಗರಾಗಿದ್ದರು. ಇವರು 'ಕಾಲಜ್ಞಾನ'ವನ್ನು ಬರೆದಿದಾರೆ. ಇವರ ಕಾಲ ಹನ್ನೆರಡನೆಯ ಶತಮಾನ. ಈತನು ಒಂದು ಲಕ್ಷ ತೊಂಬತ್ತಾರು ಸಾವಿರ ಗಣಂಗಳಿಗೆ ಗುರು. ಈತನು 'ರುದ್ರ ಭಾರತ' ಎಂಬ ಗ್ರಂಥವನ್ನು ಬರೆದಂತೆ ತಿಳಿಯುತ್ತದೆ. ಹಾವಿನಹಾಳ ಕಲ್ಲಯ್ಯನಿಗೆ ದೀಕ್ಷಾನುಗ್ರಹ ಮಾಡುತ್ತಾನೆ.

## ಚೆನ್ನಬಸವಣ್ಣ:

ಈತನು ಬಸವಣ್ಣನವರ ಸೋದರಳಿಯ. ಗುರುಸ್ಥಲಕ್ಕೆ ಏರಿದವನು. ಈತನು ನಿರ್ಲಜ್ಜ ಶಾಂತಯ್ಯ, ಸಿದ್ಧರಾಮ, ಬಸವಣ್ಣ ಮುಂತಾದವರಿಗೆ ಗುರುಕಾರುಣ್ಯವ (ದೀಕ್ಷೆ) ಮಾಡಿ ಗುರುವರ್ಗಕ್ಕೆ ಸೇರಿದಾನೆ. ಭಕ್ತ ಬಸವಣ್ಣ, ಗುರು ಚೆನ್ನಬಸವಣ್ಣ, ಜಂಗಮಪ್ರಭು ಇದನರಿಯಬೇಕು. ಈತನು ಸಮ್ಯಜ್ಞಾನಿ. ಈತನ ವಚನಗಳು ಪ್ರಸಿದ್ಧವಾಗಿವೆ. ಚೆನ್ನಬಸವಣ್ಣ ಶ್ರೀ ಗುರುಮೂರ್ತಿ ಎಂಬುದಕ್ಕೆ ಶ್ರೀ ಶಿವಾನಂದ ದೇವರ ಈ ವಚನ ಸಾಕ್ಷಿಯಾಗಿದೆ:

ಷೋಡಶೋಪಚಾರದ ಸಾಮಗ್ರಿ ಈಡು ಮಾಡಿರುವೆನು.
ಪಂಚಾಮೃತದ ಗಿಂಡಿಗಳ ವಿಧಿಯಾಗಿ ರಚಿಸಿರುವೆನು.
ಪಂಚಪಲ್ಲವ ಪಂಚಪತ್ರಿಗಳ ಶೋಧಿಸಿರುವೆನು.
ಮತ್ತೆ ಬೇಕೆಂಬ ಆಸೆಯು ಹಂಗಿಲ್ಲ. ಇದು ಕಾರಣ
ಶಿವಾನಂದ ಲಿಂಗನ ಪೂಜೆಗೆ ದಯಮಾಡಿಸಾ
ಶ್ರೀ ಗುರುಮೂರ್ತಿ ಚನ್ನಬಸವಯ್ಯ.

## ಶಿವಲೆಂಕಮಂಚಣ ಶಿವಾಚಾರ್ಯರು :

ಇವರು ಶಂಭುದೇಶಿಕ ಶಿವಾಚಾರ್ಯರ ಪುತ್ರರು. ಇವರ ಪಿತಾಮಹರಾದ ಸೋಮಶಂಭುದೇಶಿಕರು ಕಾಮಿಕಾದಿ ಶಿವಾಗಮಗಳಿಗೆ ವೃತ್ತಿ ದೀಪಿಕೆಗಳನ್ನು ಬರೆದು ಶಿವಸಮಯ ಉದ್ಧಾರಮಾಡಿದ ಹಿರಿಯರು.

ಶಿವಲೆಂಕ ಮಂಚಣ್ಣ ಎಂತಲೂ ಕರೆಯುತ್ತಾರೆ. ಪಂಡಿತತ್ರಯರಲ್ಲಿ ಇವರೊಬ್ಬರು. ವೀರಶೈವ ಸಿದ್ಧಾಂತಪ್ರಾಜ್ಞರು ; ಪ್ರಚಾರಕರು. ಇದರಿಂದಾಗಿ ಇವರು 'ಸಕಲಾಗಮಾಚಾರ್ಯ'ನೆಂದು ಪ್ರಶಸ್ತಿ ಪಡೆದು ಪ್ರಸಿದ್ಧರಾಗಿದ್ದಾರೆ. ಶಿವನೇ ಸರ್ವೋತ್ತಮನೆಂದು ಸಾರುವವರಲ್ಲಿ ಇವರು ಅಗ್ರಗಣ್ಯರು; ಅತಿ ಛಲವುಳ್ಳವರು. 'ಶಿವಲೆಂಕ' ಎಂಬ ಇವರ ಹೆಸರೆ ಇವರ ಶಿವನಿಷ್ಠೆಯ ಸವಿಕುರುಹಾಗಿದೆ. ಇವರು ಕಾಶಿಪಟ್ಟಣದವರಾದುದರಿಂದ ತುಂಬಾ ವಿದ್ಯಾವಂತರು ; ಜೊತೆಗೆ ಶ್ರದ್ಧಾವಂತರು. ವಾದದಲ್ಲಿ ಕಾಶಿಯ ಪಂಡಿತರನ್ನೆಲ್ಲ ಸೋಲಿಸಿದವರು. ಶೈವ ಶ್ರೇಷ್ಠತೆಯನ್ನು ಸಾರಿದವರು.

ಇವರು ವೀರಶೈವಾಭಿಮಾನಿಯಾದುದರಿಂದ ಕಾಶಿಯಿಂದ ದಕ್ಷಿಣ ದೇಶಕ್ಕೆ ಬರುವರು. ಹಾಗೆಯೇ ಕಲ್ಯಾಣಕ್ಕೆ ಹೋಗುವರು. ಇವರ ಖ್ಯಾತಿಯನ್ನು ಕೇಳಿದ್ದ ಬಸವಣ್ಣ ಇವರನ್ನು ಎದುರ್ಗೊಂಡು ಎರಗಿ (ವಂದಿಸಿ) ಸನ್ಮಾನಿಸುವನು. ಆ ಬಳಿಕ ಶಿವಲೆಂಕ ಮಂಚಣ್ಣನು ಕಲ್ಯಾಣದಲ್ಲಿಯೇ ಇದ್ದು ಕಾಲ ಕಳೆದನು. ವಚನ ರಚಿಸಿದನು. ೧೩೧ ವಚನಗಳಿವೆಯೆಂದು ತಿಳಿಯುತ್ತದೆ.

" ಆದಿಶಕ್ತಿ ಅಂಗರೂಪಾಗಿ ಅನಾದಿಶಕ್ತಿ ಪ್ರಾಣವಾಗಿ
ಚಿದಾತ್ಮನ ಬೆಳಗು ಅರಿವಾಗಿ
ಎನ್ನ ಹೃತ್ಕಮಲ ಮಧ್ಯದಲ್ಲಿ ತೊಳಗಿ ಬೆಳಗಿದಿರಯ್ಯ
ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗವೇ ! "

ಇವರು ಬಸವಣ್ಣನವರ ಕಾಲದವರಾದರೂ ಹಿರಿಯರು. ಗಣಸಹಸ್ರದಲ್ಲಿವೆ ಇವರ ಹೆಸರು. ಇವರು ಹೆಚ್ಚಾಗಿ ವಚನಗಳನ್ನು ಬರೆದಿದ್ದರೂ ಅವೆಲ್ಲ ಸಿಕ್ಕಿಲ್ಲ. ನೂರಾರು ವಚನಗಳು ಮಾತ್ರ ಸಿಕ್ಕುತ್ತವೆ.

## ಮಲ್ಲಿಕಾರ್ಜುನ ಪಂಡಿತಾರಾಧ್ಯರು :

ವೀರಶೈವ ಪಂಡಿತತ್ರಯರಲ್ಲಿ ಇವರು ಹಿರಿಯರು. ಗಣಸಹಸ್ರನಾಮಾವಳಿ ರಚಕರು. ಹಾಗೂ ಕಲ್ಯಾಣ ಬಸವಣ್ಣನಿಗಿಂತ ವಯದಲ್ಲಿ ಹಿರಿಯರು. ಹಿರಿಯರಾದರೂ ಬಸವಣ್ಣನ ಬಳಿಕ ಬದುಕಿದ್ದವರು. ಸಂಸ್ಕೃತದಲ್ಲಿ ಆಂಧ್ರದಲ್ಲಿ ಕನ್ನಡದಲ್ಲಿ ನಿಪುಣರಾಗಿದ್ದರು. ಕನ್ನಡವನ್ನೂ ಕಲಿತು ಕುಶಲರೆನಿಸಿದರು. 'ಶಿವಾಧಿಕ್ಯ' ಎಂಬ

ಕೃತಿಯನ್ನು ಕನ್ನಡದಲ್ಲಿ ಬರೆದಿದ್ದಾರೆ. ವಚನ ರಚಿಸಿ ಕನ್ನಡ ನುಡಿ ಸೇವೆ ಸಲ್ಲಿಸಿದರು.

" ಧನ ಜವ್ವನವುಳ್ಳಲ್ಲಿ ಶಿವಶರಣೆನ್ನೊ ಮಾನವಾ !
ನೆನೆನೆನೆಯಾ ನೀ ಕೆಡದ ಮುನ್ನ ?
ಧನ ನಿಲ್ಲದು, ಜವ್ವನ ನಿಲ್ಲದು ; ನಿನ್ನ ಪ್ರಾಣ ನಿಲ್ಲದು.
ಇದನರಿದು ಶ್ರೀ ಮಲ್ಲಿಕಾರ್ಜುನನ
ನೆನೆನೆನೆಯಾ ನೀ ಕೆಡದ ಮುನ್ನ ? "

ಇವರು ಬಸವಣ್ಣನನ್ನು ಕಾಣಬೇಕೆಂದು ಕಲ್ಯಾಣಕ್ಕೆ ಪಯಣಮಾಡುತ್ತಿರುವಾಗ ಕಲ್ಯಾಣ ಕ್ರಾಂತಿಯಾಗಿ ಬಸವಣ್ಣ ಕೂಡಲಸಂಗಮದಲ್ಲಿ ಲಿಂಗೈಕ್ಯವಾದ ಸಂಗತಿ ತಿಳಿದುಬರುತ್ತದೆ. ಇದರಿಂದಾಗಿ ಇವರ ಪಯಣ ಅಲ್ಲಿಗೇ ನಿಲ್ಲುತ್ತದೆ. ಇವರು ಅನೇಕರಿಗೆ ವೀರಶೈವೋಪದೇಶ ಮಾಡಿ ಉದ್ಧರಿಸಿದ ಉನ್ನತರು. ಗುರುವರ್ಯರು. ಮರಿತೋಂಟದಾರ್ಯರು ಇವರನ್ನು ಮೆಚ್ಚಿ ಮನಸಾರೆ ವಂದಿಸಿದಾರೆ. ಚಂದವ್ರೋಲು ಪಾನುಗಲ್ಲು ರಾಜರು ಇವರಲ್ಲಿ ಭಕ್ತಿ ವಿನಯಗಳಿಂದಿದ್ದರು.

" ಈಗ ಜನರು ತಿಳಿದಂತೆ ಮಲ್ಲಿಕಾರ್ಜುನ ಪಂಡಿತಾರಾಧ್ಯನು ಜಗದ್ಗುರುತ್ವದ ಸ್ಥಾನವನ್ನು ಹೊಂದಿ ವೀರಶೈವ ಮತವನ್ನು ಪ್ರಸ್ಥಾಪಿಸಿದನೆಂದು ತಿಳಿಯಲು ಬರಲಾರದು....ಅವನ ಚರಿತ್ರೆಯಿಂದ ಅವನು ಶ್ರೀಶೈಲದಲ್ಲಿ ಹುಟ್ಟಿದ್ದು ಕಂಡುಬರುವುದಿಲ್ಲ. ಶ್ರೀಶೈಲ ಅವನ ಸ್ಥಾಯಿಕ ಪೀಠವಲ್ಲ....ಆದ್ದರಿಂದ ಅವನು ಶ್ರೀಶೈಲ ಸಿಂಹಾಸನವನ್ನು ಸ್ಥಾಪಿಸಿದನೆಂಬ ಸಂಗತಿಯು ದೃಢಪಡುವುದಿಲ್ಲ " ಎಂದು ಫ. ಗು. ಹಳಕಟ್ಟಿಯವರು ಶಿವಶರಣರ ಚರಿತ್ರೆ ಭಾಗ ೩ರಲ್ಲಿ ಸ್ಪಷ್ಟವಾದ ಅಭಿಪ್ರಾಯಪಟ್ಟದಾರೆ.

## ಸಕಲೇಶ ಮಾದರಸರು :

ಕನ್ನಡ ನಾಡಿನಲ್ಲಿ ಕಲ್ಲುಕುರಿಕೆ ಎಂಬುದೊಂದು ಪಟ್ಟಣ. ಅದರ ಅರಸು ಮಲ್ಲಿಕಾರ್ಜುನ ಎಂಬುವರು. ಅವರು ವೀರಶೈವರು. ಅವರಿಗೆ ವಿರತಿಯುಂಟಾಗಿ ತನ್ನ ರಾಜ್ಯವನ್ನು ಮಗನಾದ ಮಾದರಸನಿಗೆ ವಹಿಸಿ ಶ್ರೀಶೈಲಕ್ಕೆ ಹೋಗುವರು. ಮಾದರಸನಿಗೂ ಕೆಲ ಕಾಲಾನಂತರ ವಿರತಿಭಾವವುಂಟಾಗುವುದು. ಶ್ರೀಶೈಲಕ್ಕೆ ತೆರಳುತ್ತಿರುವಾಗ ಮಧ್ಯಮಾರ್ಗದಲ್ಲಿ 'ಅಂಬೆ' ಎಂಬ ಗ್ರಾಮ ಹತ್ತುವುದು. ಅಲ್ಲಿನವರು ಇವರನ್ನು ನಿಲ್ಲಿಸಿಕೊಂಡು ತಮ್ಮ ಗುರುವನ್ನಾಗಿ ಮಾಡಿಕೊಳ್ಳುವರು. ಅಲ್ಲಿಯೆ ಒಂದು ಮಠ ಸ್ಥಾಪಿಸುವನು. ಅಲ್ಲಿನ ಶಿಷ್ಯರಿಗೆಲ್ಲ ಶಿವದೀಕ್ಷೆ ಕೊಟ್ಟನು. ಶಿವಪೂಜೆಯಲ್ಲಿ ನಿರತನಾದನು. ಶಿವಾಚಾರ್ಯ ಎನಿಸಿದನು. 'ಅಭಿನವ ಮಹೇಶ' ಎಂದು ಹೆಸರಾದನು.

ಹೀಗೆ ಕೆಲಕಾಲ ಕಳೆದ ಬಳಿಕ ತನ್ನ ಮಗನಾದ ಮಾಯಿದೇವನಿಗೆ ಶಿವಾಚಾರ್ಯ ಪಟ್ಟವನ್ನು ಕಟ್ಟಿ ತಾನು ಶ್ರೀಶೈಲಕ್ಕೆ ತನ್ನ ತಂದೆಯಂತೆ ಹೊರಟು ಹೋಗುವನು. ಅಲ್ಲಿರುವ ಶಿವಯೋಗಿ ಮಲ್ಲರಸನ ಸದುಪದೇಶದಿಂದ ಕಲ್ಯಾಣಕ್ಕೆ ಹೋಗಿ ಪ್ರಮಥ ರೊಡನಿರುವನು. ವಚನಕಾರನಾಗುವನು. 'ಸಕಳೇಶ್ವರ ದೇವ' ಎಂಬುದು ಇವರ ವಚನಾಂಕಿತ. ಈತನ ೮೮ ವಚನಗಳನ್ನು ಸಂಗ್ರಹಿಸಿ ಶ್ರೀ ಪಿ. ಜಿ. ಹಳಕಟ್ಟಿಯವರು ಪ್ರಕಟಿಸಿದಾರೆ.

"ಚಂದ್ರೋದಯವುಳ್ಳಂಬ ಚಕೋರಕೋಗರವ ಹಾಕಿ
ಬಸಿರ ಬಡಿದುಕೊಂಡು ಉಣ್ಣದೆಂಪಳುವರು ನೋಡಾ!
ಲೋಕದ ಚಿಂತೆಯನನಂತವನಾಡುವರಲ್ಲದೆ
ತಮ್ಮ ಚಿಂತೆಯನಾಡರೊಪ್ಪಚ್ಚಿಯು ನೋಡಾ!
ಮಹಂತ ಸಕಳೇಶ್ವರ ದೇವಾ!"

ಈತನ ಕಾಲ ಹನ್ನೆರಡನೆಯ ಶತಮಾನದ ಆದಿಭಾಗ. ಬಸವಣ್ಣನವರಿಗೆ ಹಿಂದಿನ ವರು; ಹಿರಿಯರು.

### ಉರಿಲಿಂಗದೇವ :

ಇವರು ಕಂದಾರ ಗ್ರಾಮದ ಗುರುಮಠಾಧಿಕಾರಿ. ಈ ಗ್ರಾಮವು ನಾಂದೇಡ ಜಿಲ್ಲೆಯಲ್ಲಿದೆಯಂತೆ! ಉರಿಲಿಂಗದೇವನು ಶಿಷ್ಯರಿಗೆಲ್ಲ ಶಿವದೀಕ್ಷೆಯನ್ನು ಶಿಶುಗಳಿಗೆಲ್ಲ ಲಿಂಗಧಾರಣೆಯನ್ನು ಮಾಡಿ ಮುಕ್ತರನ್ನಾಗಿಸುತ್ತಿದ್ದನು. ಶಿವಾನುಭವವನ್ನು ಬೋಧಿ ಸುತ್ತಿದ್ದನು. ಬರೀ ಬೋಧಿಸುವುದು ಮಾತ್ರವಲ್ಲ ಸಾಧಿಸುತ್ತಿದ್ದನು. ಶಿವಾರ್ಚನೆಯಲ್ಲಿ ನಿಸ್ಸೀಮನು. ನಿತ್ಯ ಶಿವಲಿಂಗದಲ್ಲಿ ತಲ್ಲೀನನಾಗಿ ಬಾಹ್ಯವನ್ನು ಮರೆಯುತ್ತಿದ್ದನು ದಯಾಮಯ ಜೀವಿ. ಅಹಿಂಸಾವಾದಿ. ಹುಲಿ ಹಾವು ಮೊದಲಾದ ಹಿಂಸ ಪ್ರಾಣಿಗಳು ಇವರನ್ನು ಬಾಧಿಸುತ್ತಿರಲಿಲ್ಲ. ಇವರು ತಮ್ಮ ಅಪಾರ ಅನುಭವವನ್ನು ಕುಂದಣಿಸಿ ಸುಂದರ ವಚನಗಳನ್ನು ಬರೆದಿದಾರೆ. ತಮ್ಮ ಕರಸ್ಥಲದ ಲಿಂಗದೊಡನೆ ಸಲಿಗೆಯಲ್ಲಿ ಸಮರಸಭಾವದಿಂದ ಪತಿಭಕ್ತಿಯಿಂದ ಪ್ರಸ್ತಾಪಿಸುವ ವಚನಗಳಿವು :

"ಇನಿಯ ನೀನೆ ಎನಗೆ. ಇನ್ನೇನನೊಂದನಾನರಿಯೆ.
ನೀ ನುಡಿಸಲು ನುಡಿವೆನು. ನೀ ನಡಿಸಲು ನಡೆವೆನು.
ನೀನಲ್ಲದನ್ಯವ ನಾನರಿಯೆನು; ನಲ್ಲ ಕೇಳಾ,
ಎನಗೆ ನೀನೇ ಗತಿ, ನೀನೇ ಮತಿ;
ನಿನ್ನಾಣೆಯಯ್ಯ ಉರಿಲಿಂಗದೇವಾ."

### ಉರಿಲಿಂಗಪೆದ್ದಿ :

ಉರಿಲಿಂಗಪೆದ್ದಿಯು ಉರಿಲಿಂಗದೇವನ ಉತ್ತರಾಧಿಕಾರಿ; ಉತ್ತಮ ಶಿಷ್ಯ. ಕಳ್ಳನಾಗಿ ಬಾಳುತ್ತಿದ್ದ ಇವನು ಉರಿಲಿಂಗದೇವನ ಉಪದೇಶದ ಪ್ರಭಾವಕ್ಕೆ ಒಳಗಾಗಿ

ಆಪ್ತಶಿಷ್ಯನಾಗುತ್ತಾನೆ. ಓದಲು ಬಾರದ ಇವನು ಗುರುವಿನಲ್ಲಿ ಓದಿ ವಿದ್ವಾಂಸನಾಗುತ್ತಾನೆ; ವಚನಕಾರನಾಗುತ್ತಾನೆ.

ಈತನ ಮೊದಲ ಹೆಸರು ಪೆದ್ದಣ್ಣ. ಗುರುಕೃಪೆಗೆ ಪಾತ್ರನಾದ ಮೇಲೆ ಉರಿಲಿಂಗಪೆದ್ದಿ ಎಂದೆನಿಸುತ್ತಾನೆ. ಈತನ ಜೀವನದಲ್ಲಿ ಗಮನಾರ್ಹವಾದ ಮಾರ್ಪಾಟು. ಸದ್ಗುರುವಿನ ಸುಪ್ರಭಾವ ಏನು ಮಾಡಬಲ್ಲುದೆಂಬುದಕ್ಕೆ ಈತನೊಂದು ಪ್ರತ್ಯಕ್ಷ ನಿದರ್ಶನ. ಉರಿಲಿಂಗಪೆದ್ದಿಯದು ಏಕಲವ್ಯನಂತಹ ಸಾಧನ; ಗುರುಭಕ್ತಿ ಭಾವನ. ಇವನ ಈ ದೃಢ ಸಾಧನ ಭಾವನಗಳು ಇವನನ್ನು ಸಿದ್ಧಿಗೇರಿಸಿದವು. ಶ್ರೀಗುರು ಸಮನೆಂದೆನಿಸಿದನು. ಕಲ್ಲು ಕಿತ್ತು ಕೆರೆಗೆ ನೀರು ಬರಿಸಿ ಕಂಧಾರದ ನಂದರಾಜನಿಂದ ಗುರುವಿಗೂ ತನಗೂ ಮನ್ನಣೆಯನ್ನು ಸಂಪಾದಿಸಿದನು. ಅಲ್ಲದೆ ಈತನು ಕಲ್ಯಾಣ, ಕೊರಳ, ಬೇವಿನ ಚಿಂಚೋಳಿ, ಭಾಲ್ಕಿ ಈ ನಾಲ್ಕು ಗ್ರಾಮಗಳಲ್ಲಿ ನಾಲ್ಕು ಮಠಗಳನ್ನು ಸ್ಥಾಪಿಸಿದ್ದಾನೆ. ಈತನ ವಚನ ಗ್ರಂಥವು ಅಚ್ಚಾಗಿ ವಿಜಾಪುರದ 'ಶಿವಾನುಭವ ಗ್ರಂಥಮಾಲೆ'ಯಲ್ಲಿ ಪ್ರಕಟವಾಗಿದೆ.

### ಕಾಳವ್ವೆ :

ಇವರು ಗುರುಪತ್ನಿ. ಉರಿಲಿಂಗಪೆದ್ದಿ ಗುರುವರ್ಯನ ಪುಣ್ಯಾಂಗನೆ. ಕಳ್ಳನಾಗಿ ಕೊಳ್ಳಿ ಹಿಡಿದು ಕಾಡಿನಲ್ಲಿ ಅಲೆಯುತ್ತಿದ್ದ ಇವಳ ಗಂಡ ಪೆದ್ದಿಯು ಗುರುದರ್ಶನದಿಂದ ಮಾರ್ಪಾಟು ಆದಂತೆ ಇವರೂ ಆಗುತ್ತಾರೆ. ಪತಿಯೂ, ಗುರುವೂ ಆದ ಉರಿಲಿಂಗಪೆದ್ದಿಯ ಶಿಕ್ಷಣದಿಂದ ಓದುಬಾರದ ಇವಳು ವಚನಕಾರಳಾಗುತ್ತಾಳೆ.

ವ್ರತವೆಂಬುದು ಜೀವನದ ಕಳೆ.
ವ್ರತವೆಂಬುದು ಸುಯಿಧಾನ.
ವ್ರತ ತಪ್ಪಲು ಉರಿಲಿಂಗ ಪೆದ್ದಿಗಳರಸನೊಲ್ಲನವ್ವ.
    ಅರ್ಥಪ್ರಾಣ ಅಭಿಮಾನವ ಮೇಲೆ ಬಂದರೂ ಬರಲಿ,
ವ್ರತಹೀನನ ನೆರೆಯಲಾಗದು;
ನೋಡಲು ನುಡಿಸಲು ಎಂತೂ ಆಗದು.
ಹರ ಹರಾ, ಮಹಾಪಾಪ ವಶದಿಂದ ನೋಡಿದಡೆ
ರುದ್ರ ಜಪವ ಮಹೇಶ್ವರಾರಾಧನೆಯ ಮಾಳ್ಪುದು;
ಇಂತಲ್ಲದವರ ಉರಿಲಿಂಗಪೆದ್ದಿಗಳರಸ ನಕ್ಕು ಕಳೆವನವ್ವಾ.
    ಕೃತ್ಯಕಾಯಕವಿಲ್ಲದವರು ಭಕ್ತರಲ್ಲ.
ಸತ್ಯಶುದ್ಧವಿಲ್ಲದುದು ಕಾಯಕವಲ್ಲ.
ಆಸೆಯೆಂಬುದು ಭವದ ಬೀಜ.
ನಿರಾಶೆಯೆಂಬುದು ನಿತ್ಯಮುಕ್ತಿ.
ಉರಿಲಿಂಗಪೆದ್ದಿಗಳರಸನೊಲ್ಲನವ್ವಾ ಆಸೆಯ ಪ್ರಾಣಿಗಳ!

## ಕೆಂಭಾವಿ ಭೋಗಣ್ಣ :

ಈತನ ಕಾಲ ಕ್ರಿ. ಶ. ೧೦೭೬. ಈತನೂರು ಕೆಂಭಾವಿ. ಇದು ಕಲಬುರ್ಗ ಜಿಲ್ಲೆಯಲ್ಲಿದೆ.* ಇದು ಅಂದು ಚಂದಿಮರಸನ ರಾಜಧಾನಿಯಾಗಿತ್ತು. ಇದ (ಕೆಂಭಾವಿಯು) ವಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿನ ಗ್ರಾಮವೆಂದು ಹೇಳುತ್ತಾರೆ. ಕೆಂಭಾವಿ ಭೋಗಣ್ಣ ಆಗಮಿಕ; ಆಚಾರನಿರತ. ಈತನು ಅನೇಕರಿಗೆ ಲಿಂಗಧಾರಣ ದೀಕ್ಷೆಗಳನ್ನು ಕೊಟ್ಟು ಅವರನ್ನು ಸಂಸ್ಕರಿಸುತ್ತಿದ್ದನು ಈತನನ್ನು ಬಸವಾದಿ ವಚನಕಾರರು ಬಣ್ಣಿಸಿದ್ದಾರೆ. ಈತನು ವಚನ ಬರೆದಿದಾನೆ:

"....ಕಂಗಳ ಗದ್ದುಗೆಯ ಮೇಲೆ ಮಹಾ
ಗುರುಲಿಂಗವೆಂಬರಸು ಕುಳ್ಳಿರಲು
ಲಿಂಗ ಕಂಗಳ ನುಂಗಿತ್ತೊ ? ಕಂಗಳು ಲಿಂಗವ ನುಂಗಿದ್ದವೊ ?
ಈ ಉಭಯವ ನುಂಗಿದ ಬೆಡಗಿನ ಬಿನ್ನಾಣವ
ನಿಜಗುರು ಭೋಗೇಶ್ವರನೇ ಬಲ್ಲ."

ಎಂಬೀ ವಚನವು ಈತನ ಗುರುತ್ವವನ್ನು ಗುರುತಿಸಲು ಸತ್ಯಸಾಧನವಾಗಿದೆ.

ಈತನ ಗುರು ಭೋಗಿನಾಥನು. ಈ ಭೋಗಿನಾಥನ ಮಠಕ್ಕೆ ಭೋಗಣ್ಣನು ಅಧಿಕಾರಿಯಾಗುತ್ತಾನೆ. ಚಂದಿಮರಸನು ಭೋಗಿನಾಥನು ಇವನ ಶಿಷ್ಯ ಭೋಗಣ್ಣ ಇವರ ಶಿವಾನುಭವ ತತ್ತ್ವಕ್ಕೆ ಒಲಿದು ವೀರಶೈವನಾಗುತ್ತಾನೆ. ವಿಷಯರಹಿತ ನಾಗುತ್ತಾನೆ.

## ಎಡೆಮಠದ ನಾಗಿದೇವ (ಮಸಣಮ್ಮ) :

ಇವನು ಶಿವಕಂಚಿಯವನು. ಆ ಊರು ತಮಿಳುನಾಡಿನ ಚೋಳಮಂಡಲದಲ್ಲಿ ಇದೆ. ಆ ಊರಿನ ಎಡೆಮಠದ ಗುರುದೇವ ನಾಗಿದೇವ. ಆ ಭಾಗದಲ್ಲಿ ಈತನು ಅಂದು ವೀರಶೈವ ಧರ್ಮ ಪ್ರಸಾರ ಕಾರ್ಯವನ್ನು ಕೈಕೊಂಡಿದ್ದನು. ಈತನ ಹೆಸರು ಗಣಸಹಸ್ರದಲ್ಲಿದೆ. ಈತನ ಹೆಂಡತಿ ಮಸಣಮ್ಮ. ಇವಳು ಪರಮಜ್ಞಾನಿಯಾಗಿದ್ದಳು. ಪತಿದೇವನೊಡನೆ ಮತಪ್ರಸಾರ ಕಾರ್ಯದಲ್ಲಿ ಸೇವೆ ಸಲ್ಲಿಸುತ್ತಿದ್ದಳು. ಗುರು ಪತ್ನಿ ತಾನೆಂಬ ಗರ್ವ ಇವಳಿಗಿರಲಿಲ್ಲ. ಮತಪ್ರಸಾರ ಮಾಡುವಾಗ ಇವಳಿಗಾದ ಅನುಭವ ವಿದು : ವ್ರತಹೀನರೆಲ್ಲರಿಗೆ ಹಿತವ ಬೋಧಿಸಿದರೆ ಫಲವಿಲ್ಲ.

ಕಾಗೆಯ ನಾಯ ತಿಂದವರು
ವ್ರತಭ್ರಷ್ಟನ ಕೂಡಿದವರೆಲ್ಲರು.
ನಾಯಿಂಗೆ ನಾರಂಗವೊಗ್ಗುವುದೆ ?

---

* ಹೀಗೆ ಶ್ರೀ ಪಿ. ಜಿ. ಹಳಕಟ್ಟಿಯವರು 'ಶಿವಶರಣರ ಚರಿತ್ರೆ' ಭಾಗ ೧ರಲ್ಲಿ ಹೇಳಿದಾರೆ.

ಲೋಕದ ನರಂಗೆ ವ್ರತವಪ್ಪುದೆ, ಶಿವಬೀಜಕ್ಕಲ್ಲದೆ
ನೀವೇ ಸಾಕ್ಷಿಯಾಗಿ ನಿಜಗುಣೇಶ್ವರ ಲಿಂಗದಲ್ಲಿ?

## ನಿಜಗುಣದೇವ :

ಈತನು ಶಿವಾಚಾರ್ಯನಾಗಿದ್ದನು : ಕೆಂಭಾವಿಯವನು. ಅದೇ ಕೆಂಭಾವಿಯ ರಾಜನಾದ ಚಂದಿಮರಸನ ದೀಕ್ಷಾಗುರುವಾಗಿದ್ದನು. ಈತನನ್ನು 'ನಿಜಗುಣ' ನಿಜಗುಣಯೋಗಿ ಎಂತಲೂ ಕರೆಯುತ್ತಾರೆ. ವಿಖ್ಯಾತ ವಚನಕಾರನಾಗಿದ್ದಾನೆ. ಗಣ ಸಹಸ್ರದಲ್ಲಿ ಗಣ್ಯನಾಗಿದಾನೆ. ಈತನ ವಚನಾಂಕಿತವು 'ನಿಜಗುಣಯೋಗ' ಎಂದಿದೆ ಈತನ ಕಾಲ ಹನ್ನೊಂದನೆಯ ಶತಮಾನ. ಈತನ ಸಮಾಧಿ ಸ್ಥಳ ವಿಜಾಪುರ ಜಿಲ್ಲೆಯ ಚಿಮ್ಮಲಿಗೆಯೆಂಬ ಹಳ್ಳಿಯಲ್ಲಿದೆಯೆಂದು ಹೇಳುತ್ತಾರೆ. ಈತನ ಶಿಷ್ಯನಾದ ಚಂದಿಮರಸನು ವಚನ ರಚಿಸಿದಾನೆ. ನಿಜಗುಣದೇವ ಶ್ರೀಗುರುವಿನ ಪ್ರಭಾವ ಚಂದಿಮರಸನ ಮೇಲೆ ಚೆನ್ನಾಗಿ ಆಗಿದೆ. ಅರಸರನ್ನೂ ಸಹ ಆಕರ್ಷಿಸುವ ಅನುಭಾವಿ ನಿಜಗುಣದೇವಗುರು.

"ವಾರಿಗಿದಿರಾದ ಕಾಷ್ಠ, ಬವರಕ್ಕಿದಿರಾದ ಬಂಟ;
ಅರಿದೊರೆಗಿದಿರಾದ ದೊರೆ ಮರುಳುವುದಕ್ಕೆ ನೆರೆ ಕನಸು.
ಕಾಯಜೀವಕ್ಕೆ ಇದಿರಾದ ಅರಿವು ಭಾವಕ್ಕೆ ಮರಹುಗೊಡಲಿಲ್ಲ.
ಉಭಯವಳಿದಲ್ಲದೆ ನಿಜಗುಣ ಯೋಗಿಯ ಯೋಗಕ್ಕೆ ಹೊರಗಲ್ಲ.

ಇದು ನಿಜಗುಣಯೋಗಿಯ ವಚನ. ಇವನ ಶಿಷ್ಯ ಚಂದಿಮರಸನ ವಚವಿದು :

"ಸಂಸಾರವೆಂಬ ಹೇರಡವಿಯ ಅಂಧಕಾರವೆಂಬ ಜನಪಥದ
ಆದಿವ್ಯಾಧಿಗಳೆಂಬ ಗಿರಿದುರ್ಗ ಜಲದುರ್ಗಂಗಳ
ಧನವನಿತೆ ವಿಷಯಂಗಳೆಂಬ ಮೃಗತೃಷ್ಣೆಯ
ಬಳಿವಿಡಿದು ರಾಗದ್ವೇಷವಕೊಳ್ಳದ........ತಾಪತ್ರಯದ
ಕಾಳ್ಕಿಚ್ಚಿನಲ್ಲಿ ಬೇವ ಸಾವ ಕೆಡುವ ಅಹಂಮಮತೆಯ ಹೊತ್ತು ನಡೆವ
ನರಗುರಿಗಳಾದ ಜೀವರಿಗೆ ಭವಬಂಧನ ಹರಿದು ಗುರುಪಥವಪ್ಪುದು.
ನಿಜಗುಣನ ಶ್ರೀ ಪಾದವ ಶರಣಾಗತಿ ಹೊಕ್ಕಡೆ ನಿತ್ಯಸುಖಪೂರಿತ.
ಸಿಮ್ಮಲಿಗೆಯ ಚೆನ್ನರಾಮ ತಾನಹ ನಿಜಗುಣನ
ಶ್ರೀ ಪಾದವ ನೆರೆ ನಂಬಿದಡೆ!"

ಈ ವಚನದಿಂದಲೂ ನಿಜಗುಣಯೋಗಿ ನಿಜಕ್ಕೂ ಗುರುವಾಗಿದ್ದನೆಂಬುದು ನಿಶ್ಚಿತವಾಗುತ್ತದೆ.

## ಅಮುಗಿದೇವ :

ಈತನು ಸೊನ್ನಲಗೆಯವನು. ಹನ್ನೆರಡನೆಯ ಶತಕದವನು. ಅತ್ಯಂತ ಪ್ರಸಿದ್ಧನು. 'ಲಿಂಗಸೇವಕ' 'ಮಾಹೇಶ್ವರಗಣ ಕುಲಾನ್ವಯ ದಿವಾಕರ' 'ಭಕ್ತಜನ ಚಿಂತಾಮಣಿ' 'ಶ್ರೀ ಸಿದ್ಧ ಸೋಮನಾಥದೇವ ಶ್ರೀ ಪಾದ ಪಂಕಜ ಭ್ರಮರ ಲಿಂಗೈಕ ದೇಹಿ' ಎಂಬ ಪ್ರಶಸ್ತಿಗಳು ಇವನ್ನು ಬಳಸಿಬಂದಿವೆ. ಇವುಗಳಿಂದ ಈತನು ಗುರು ಸ್ಥಲಕ್ಕೇರಿದವನೆಂಬುದು ಸ್ಫುಟವಾಗುತ್ತದೆ. ಈತನು ಸೊನ್ನಲಿಗೆಯ ಸಿದ್ಧರಾಮನು ಲಿಂಗಧಾರಿಯಾಗಲು ಮೂಲಕಾರಣನಾಗಿದಾನೆ. ಚಾಲುಕ್ಯರ ಸಿಂಘನ ರಾಜನು ಈತನ ಪ್ರಭಾವಕ್ಕೆ ಒಳಪಟ್ಟು ಶಿಷ್ಯನಾಗಿದ್ದನು. ಒಂದು ಗ್ರಾಮವನ್ನೇ ಅಮುಗಿ ದೇವನಿಗೆ ಉಂಬಳಿಯಾಗಿ ಕೊಟ್ಟಂತೆ ತಿಳಿಯುತ್ತದೆ. ಅಮುಗಿದೇವನು ಹೂಳಜೆ (ಪುಳುಜ) ಗ್ರಾಮದಲ್ಲಿ ಕೊನೆಯವರೆವಿಗೂ ಇದ್ದನು. ಇವನು ಶ್ರೀ ರೇವಣಸಿದ್ಧರ ಸಂಪ್ರದಾಯದವನೆಂದು ತಿಳಿಯುತ್ತದೆ. ಇವೆಲ್ಲ ಕಾರಣಗಳಿಂದ ಈತನು ಗುರು ಪರಂಪರೆಗೆ ಸೇರಿದವನು. ಈ ವಚನಗಳಿಂದ ಇನ್ನೂ ಸ್ಫುಟವಾಗುತ್ತದೆ:

"ಗುರು ಶಿಷ್ಯ ಸಂಬಂಧದನುಭಾವ ಕೇಳಿರಯ್ಯ !
ಗುರುವೆಂಬ ಪರಾಪರ; ಶಿಷ್ಯನೆಂಬ ಇಹಪರ.
ಗುರುವೆಂಬ ಪರಮಾರ್ಥ; ಶಿಷ್ಯನೆಂಬ ಇಹಪರ.
ಗುರುವೆಂಬ ನಲ್ಲ; ಶಿಷ್ಯನೆಂಬ ನಲ್ಲೆ.
ಏಕೋ ಸಿದ್ಧ ಸೋಮನಾಥನಲ್ಲಿ ಶಬ್ದ ಕಿಂಬಿಲ್ಲ...."

ಈತನು ಅನೇಕರಿಗೆ ದೀಕ್ಷಾ ಸಂಸ್ಕಾರ ಕೊಟ್ಟು ಗುರುವಾಗಿದಾನೆ. ಗುರು ವಾಗಲು ಗೃಹಸ್ಥನಾಗಿರಬಾರದೆಂಬ ನಿಯಮವೇನಿಲ್ಲ. 'ಅಮ್ಮಿದೇವ' ಎಂಬು ದಾಗಿಯೂ ಈತನಿಗೆ ಹೆಸರು.

ಈತನು ಕವಿ ವಾಗ್ಮಿ ಗಮಕಿ ಆಗಿದ್ದನು. ಈತನಿಗೆ ದೂರದರ್ಶನ, ದೂರ ಶ್ರವಣಾದಿಗಳ ಸಿದ್ಧಿಯಿದ್ದವು. ಈತನ ಧರ್ಮಪತ್ನಿ ರಾಯಮ್ಮ (ರುದ್ರಾಣಿ)ಯು ವಚನ ಬರೆದಿದಾಳೆ.

## ಅಮರಗುಂಡದ ಮಲ್ಲಿಕಾರ್ಜುನ ತಂದೆ:

ಈತನೂ ಉತ್ತಮ ವಚನಕಾರ ಎನಿಸಿದಾನೆ:

"ಕಾಯವೆಂಬ ಪಟ್ಟಣಕ್ಕೆ ಸತ್ಯವೆಂಬ ಕೋಟೆಯ ನಿಕ್ಕಿ
ದರ್ಮಾರ್ಥ ಕಾಮ ಮೋಕ್ಷಂಗಳೆಂಬ ಉಕ್ಕಡದವರೆಚ್ಚತ್ತಿರಿ;
ಭಯಘನ, ಭಯಘನ.
ಅಜ್ಞಾನವೆಂಬ ಶೀವ್ರಕತ್ತಲೆ ಕರಘನ, ಕರಘನ.
ಒಂಬತ್ತು ಬಾಗಿಲವ ಜತನವ ಮಾಡಿ, ಜತನವ ಮಾಡಿ;

ಜ್ಞಾನ ಜ್ಯೋತಿಯು ಪ್ರಬಲವ ಮಾಡಿ, ಪ್ರಬಲವ ಮಾಡಿ ;
ಐವರು ಕಳ್ಳರು ಕನ್ನವ ಕೊರೆಯುತ್ತೈದಾರೆ–ಸುಯಿಧಾನವಾಗಿರಿ,
ಸುಯಿಧಾನವಾಗಿರಿ. ಜೀವಧನವ ಜತನವ ಮಾಡಿ,
ಜತನವ ಮಾಡಿ. ಬಳಿಕಿಲ್ಲ, ಬಳಿಕಿಲ್ಲ, ಬಳಿಕಿಲ್ಲ ;
ಆ ಪಟ್ಟಣದ ಮೂಲಸ್ಥಾನದ ಶಿಖರದ ಮೇಲಣ
ಬಾಗಿಲ ತೆರೆದು ನಡೆವುದೇ ಸುಪಥ ಸ್ವಯಂಭುನಾಥನಲ್ಲಿಗೆ !
ಇದನರಿತು ಮಹಾಮಹಿಮ ಅಮರಗುಂಡದ ಮಲ್ಲಿಕಾರ್ಜುನ
ದೇವರಲ್ಲಿ ಎಚ್ಚರಿಕೆ ಗುಂದದಿರಿ, ಎಚ್ಚರಿಕೆ ಗುಂದದಿರಿ.

## ಸಾಮವೇದಿ :

ಈತನು ಉತ್ತರದವನು. ಮಧ್ಯ ಭಾರತದವನು. ಛತ್ತೀಸಪುರದವನು. ಇವನು ಮೂವತ್ತಾರು ಊರುಗಳ ಒಡೆಯ. ಮೂರುಸಾವಿರ ಐದುನೂರು ಜನ ಶಿಷ್ಯರ ಗುರು. ಇಪ್ಪೊಂದು ಜನರಿಗೆ ಲಿಂಗದೀಕ್ಷೆಯನಿತ್ತ ಪುಣ್ಯಪುರುಷ ಸಾಮವೇದಿ. ತನ್ನ ಒಡೆತನಕ್ಕೆ ಸೇರಿದ ಮೂವತ್ತಾರು ಊರುಗಳನ್ನು ರುದ್ರಲೋಕಕ್ಕೆ ಕೊಂಡೊಯ್ದ ಮಹಿಮಾಶಾಲಿ. ಯೋಗಬಲ್ಲಿದ. ಗಗನ ಯಾನವನ್ನು ಸಾಧಿಸಿದ ಸಿದ್ಧ. ವೇದಾಗಮ ಮಾರ್ಗನಿಪುಣ. ಎಲ್ಲಕ್ಕೂ ನಂಬುಗೆಯಲ್ಲಿ ನಿಶ್ಶೀಮ. 'ನೆರೆನಂಬೊ ನೆರೆನಂಬೊ ದರದುರವಿಲ್ಲದೆ ಸಾಮವೇದಿಗಳಂತೆ' ಎಂದು ಬಸವಣ್ಣನ ಬಣ್ಣನೆಗೆ ಪಾತ್ರ!

೧ ೧.

## ಪ್ರಸಾದಿ ಭೋಗಣ್ಣ :

ಇವರು ಗುರುವರ್ಗದವರೆಂದು ಹೇಳುತ್ತಾರೆ. ಇವರ ವಚನವಿದು.

" ಲಿಂಗೋದ್ಭವ ೫೨ ಅಕ್ಷರಂಗಳಲ್ಲಿ ವರ್ತುಳ ಗೋಮುಖ.
ಗೋಳಕಾಕಾರಕ್ಕೆ ಸಂಬಂಧಿಸುವಲ್ಲಿ ಆಕಾರ ವರ್ತುಳಾಕಾರಕ್ಕೆ
ಉಕಾರ ಗೋಮುಖಕ್ಕೆ ಮಕಾರ ಗೋಳಾಕಾರಕ್ಕೆ ಸಂಬಂಧಿಸುವಲ್ಲಿ
ಇಂತೀ ಆದಿಯಾಧಾರ ಆತ್ಮಬೀಜ ಓಂಕಾರದಿಂದುದ್ಭವವಾದ
ಅಕ್ಷರಾತ್ಮಕ ವಸ್ತುವನರಿದು........
ಚೆನ್ನಬಸವಣ್ಣ ಪ್ರಿಯ ಭೋಗ ಮಲ್ಲಿಕಾರ್ಜುನ ಲಿಂಗವಾಗಿಹನೆಂದು."

ಇವರದು ೧೨ನೆಯ ಶತಮಾನ. ೭೦ ವಚನಗಳು ಸಿಕ್ಕಿವೆ. ಸಂಸ್ಕೃತ ಕನ್ನಡ ಭಾಷೆಗಳಲ್ಲಿ ಪಂಡಿತರು. ೧೦೨ ವಚನಗಳ ಹಾಡಿದಾರೆ.

## ನಿರ್ಲಜ್ಜ ಶಾಂತಯ್ಯ :

ಈತನು ಗುರುಸ್ಥಲದವನೆಂದು ವದಂತಿ ! ಈತನು 'ಕೊರದಾರ' ಪುರನಿವಾಸಿ ! ಈತನು ಮಹಾಮಹಿಮನಾಗಿದ್ದನು. ಮಠಾಧಿಕಾರಿಯಾಗಿದ್ದನು. ನಿರಾಶಾಪರನಾಗಿದ್ದನು. ಶಾಂತ

ಸ್ವಭಾವಿ. ಶಿವಾನುಭಾವಿ. ತನ್ನ ಮಠಕ್ಕೆ ಬಂದವರಿಗೆ ಪ್ರಸಾದವನ್ನು ಅನುಗ್ರಹಿಸುತ್ತಿದ್ದನು. ಇವನ ಧರ್ಮಪತ್ನಿಯೂ ಸಹ ಧರ್ಮಪರಾಯಣಳಾಗಿದ್ದಳು. ಸಂಗನ ಬಸವೇಶ್ವರನ ಈ ವಚನದಲ್ಲಿ ಈತನ ಗುರುತ್ವದ ವರ್ಣನೆಯಿದೆ.

"....ನಿರ್ಲಜ್ಜ ಶಾಂತಯ್ಯನೆಂಬ ದೇಶಿಕೇಂದ್ರನು
ಚಂಗಣಗಿಲ ಮಂಟಪದ ರೇಪಣಸಿದ್ಧೇಶ್ವರಂಗೆ
ಬೋಧಿಸಿದರು ನೋಡಾ."

ಚೆನ್ನಬಸವಣ್ಣನಿಂದ ದೀಕ್ಷೆ ಪಡೆದ ಈತನು ಉಳಿದ ಅನೇಕಪ್ರಮಥರಿಗೆ ಗುರುಬೋಧೆ ಕೊಟ್ಟನೆಂದು ತಿಳಿಯುತ್ತದೆ. ಈತನು ವಚನ ರಚಿಸಿರಬಹುದೆಂದು ಶ್ರೀ ಪಿ. ಜಿ. ಹಳಕಟ್ಟಿಯವರು ಹೇಳುತ್ತಾರೆ.

## ರಾಯಮ್ಮ :

ಇವರು * ರಾಯಸದ ಮಂಚಣ್ಣನ ಮಹಾಸತಿ ! ರಾಯಮ್ಮನು ಗುರು ಅಮುಗಿದೇವನ ಕರಕಂಜಾತೆ ! ಪಾವನ ಚರಿತೆ ! ಇವರಿಗೆ ತನ್ನ ದೀಕ್ಷಾಗುರುವಿನಲ್ಲಿ ಅಚಲವಾದ ಶ್ರದ್ಧೆಯಿದೆ; ನಿಷ್ಠೆಯಿದೆ, ಅಂತೆಯೆ ತನ್ನ ಗುರುನಾಮಾಂಕಿತದಲ್ಲಿ ವಚನ ರಚಿಸಿದಾರೆ: ಇವರು ಸ್ವತಂತ್ರ ನಡೆನುಡಿ ಉಳ್ಳವರಾದುದರಿಂದ ತನ್ನ ಪತಿ ಮಾರ್ಗದಲ್ಲಿಯೆ ಮುನ್ನಡೆವ ಸನಾತನ ಪದ್ಧತಿಯನ್ನು ನಿಲ್ಲಿಸಿ ಹೊಸದಾದ ಪ್ರಗತಿ ಮಾರ್ಗದಲ್ಲಿ ಹೆಜ್ಜೆ ಹಾಕಿದಾರೆ, ಪತಿನಾಮವನ್ನಾಗಲಿ ಪತಿಗೆ ಪ್ರಿಯವಾದ 'ಜಾಂಬೇಶ್ವರ' ಎಂಬ ಅಂಕಿತವನ್ನಾಗಲಿ ಸ್ವೀಕರಿಸದೆ ತನ್ನ ಆರಾಧ್ಯ ಮೂರ್ತಿಯಾದ ಗುರು ನಾಮಾಂಕಿತದಲ್ಲಿಯೆ ವಚನ ರಚಿಸಿದ ರಾಯಮ್ಮನು ಗುರು ದೇವಿಯರ ಪಂಕ್ತಿಯಲ್ಲಿ ಪರಿಗಣಿಸಲರ್ಹಳಾಗಿದಾಳೆ.

" ವಿಶ್ವಮಯರೂಪಾಗಿ ಬಂದೆಯಯ್ಯ.
ಭಕ್ತಿಗೆ ಎನ್ನ ಮನಕೆ ಸಲೆಸಂದ ನಿಲವು,
ಅಮುಗೇಶ್ವರ ಲಿಂಗಕ್ಕೆ ಮಾಟವಾಯಿತ್ತು."

ತನ್ನ ದೀಕ್ಷಾಗುರು ಅಮುಗಿದೇವನ ಉದ್ದೇಶಿಸಿಯೇ ರಾಯಮ್ಮನು ನುಡಿದ ವಚನ ವಿದೆಂದು ತೋರುತ್ತದೆ–ಎಂದು ಶ್ರೀ ಪಿ. ಜಿ. ಹಳಕಟ್ಟಿಯವರ ಹಾರ್ದಿಕಾಭಿಪ್ರಾಯ. ಇದನೊಪ್ಪಿ ಈ ವಚನವೋದಿದರೆ ರಾಯಮ್ಮನಿಗೆ ಗುರುಭಕ್ತಿ ಅಪಾರವಾಗಿದ್ದಂತೆ ಅಮುಗಿದೇವನ ಕರುಣೆಯೂ ರಾಯಮ್ಮನಲ್ಲಿ ಅಸದೃಶವಾಗಿತ್ತೆಂದು ಅರ್ಥವಾಗುತ್ತದೆ. ಅಮುಗಿದೇವನದು ರಾಯಮ್ಮನ ಮನಕ್ಕೆ ಸಲೆಸಂದ ನಿಲವು. ಹೀಗೆ ಗುರುಕರುಣಕ್ಕೆ ಸಂದ ರಾಯಮ್ಮ ದಿಟಕ್ಕೂ ಅಮುಗಿದೇವನ ಶಿಷ್ಯರತ್ನ ; ಜ್ಞಾನರಶ್ಮಿ.

---

* ರಾಯಸದ ಮಂಚಣ್ಣನು ಬಸವಣ್ಣನ ಅಪ್ಪಣೆ ಮತ್ತು ಓಲೆಗಳನ್ನು ಹೊತ್ತೊಯ್ವ ನಿಯೋಗಿ !

## ಸುಜ್ಞಾನಿದೇವ :

ಈತನು ಓಡಿಸಾ ಪ್ರಾಂತದವನು. ಕರ್ಣಿಕಾಪುರದವನು. ಮಹಾಗುರು ; ಮಹಾಶಿವಜ್ಞಾನಿ. ದೀಕ್ಷಾಕಾರ್ಯನಿರತ ! ಓಡಿಸಾ ಪ್ರಾಂತದಲ್ಲಿ ಮಠಾಧಿಪತಿಯಾಗಿದ್ದು ವೀರಶೈವ ಪ್ರಸಾರಕಾರ್ಯದಕ್ಷರಾಗಿದ್ದರು. ಇವರೊಮ್ಮೆ ಕಲ್ಯಾಣ ಪ್ರಯಾಣ ಮಾಡುವರು. ಮಧ್ಯದಲ್ಲಿ ಮಾತಂಗ ಪರ್ವತ. ಅದರಲ್ಲಿ ಮಾತಂಗನೆಂಬ ಮಹಾಕ್ರೂರ ಬೇಡನೊಬ್ಬನಿದ್ದನು. ಆತನು ನರಮಾಂಸ ಭಕ್ಷಕನು. ಅಲ್ಲಿಗೆ ಬಂದವರನ್ನೆಲ್ಲ ಕೊಂದು ತಿಂದು ತೇಗುತ್ತಿದ್ದನು. ಹಲವರನ್ನು ಸುಲಿದು ಬಿಗಿದು ಕಳುಹಿಸುತ್ತಿದ್ದನು. ಬೇಡರ ದೊರೆಯಾಗಿದ್ದನು. ಆತನು ಸುಜ್ಞಾನಿದೇವನಿಗೆ ಎದುರಾದನು. ಎಲ್ಲರಂತೆ ಹೆದರದೆ ಆ ಕ್ರೂರನ ಮುಂದೆ ಎದೆಗಾರಿಕೆಯಿಂದ ನಿಲ್ಲುವರು. ಅದನ್ನು ಕಂಡು ಮಾತಂಗನಿಗೆ ವಿಸ್ಮಯವಾಗುವುದು. ವಿನಯ ವಿಧೇಯತೆಗಳುಂಟಾಗುವುವು. ಮಾತಂಗನನ್ನು ಉಪಾಯವಾಗಿ ಏಕಾಂತಕ್ಕೆ ಕರೆದೊಯ್ದು ಬುದ್ಧಿವಾದ ಹೇಳುವರು ; ಸತ್ಯ ಅಹಿಂಸೆ ತ್ಯಾಗ – ವಿರಾಗಭಾವಗಳ ಬೋಧಿಸುವರು. ಮನಮುಟ್ಟುವಂತೆ ದಯಾಧರ್ಮಗಳು ಹುಟ್ಟುವಂತೆ ಬೋಧಿಸುವರು. ಪಾಪ – ಪುಣ್ಯಗಳ ತಾರತಮ್ಯವನ್ನು ತಿಳಿಸಿ ಆತನ ಮನಸ್ಸನ್ನು ಮಾರ್ಪಡಿಸುವರು. ಅಷ್ಟಾವರಣ–ಪಂಚಾಚಾರಗಳ ಹಿರಿಮೆಯ ಹೇಳುವರು. ಲಿಂಗದೊಲುಮೆಯ ದಯಪಾಲಿಸುವರು. ಶಿಷ್ಯನನ್ನಾಗಿಸುವರು. ಶಿವದೀಕ್ಷೆಯ ಕರುಣಿಸುವರು. ಶಿವಲಿಂಗಾರ್ಚನೆಯ ಮಾಡಿ ಸುಖದಿಂದ ಬಾಳು ನನ್ನಯ್ಯ ಎಂದು ಹರಸುವರು. ಅಂದಿನಿಂದ ನನ್ನಯ್ಯ ಎಂಬ ಹೆಸರು ಮಾತಂಗ ಬೇಡನಿಗೆ ಪ್ರಸಿದ್ಧಿಗೆ ಬರುವುದು. ಶ್ರೇಷ್ಠ ಶಿಷ್ಯನೂ, ಶಿವಶರಣನೂ ಆಗುವನು. ಶ್ರೀ ಗುರುಸೇವಾನಿರತನಾಗುವನು. ಇಂತಹ ಕಾಡ ಬೇಡನನ್ನೂ ಬೋಧಿಸಿ ಶಿಷ್ಯನನ್ನಾಗಿ ಮಾಡಿಕೊಳ್ಳುವ ಸಮರ್ಥಶಾಲಿ ಸಕಲಕಲಾಶಾಲಿ. ಸುಜ್ಞಾನಿದೇವ ಶ್ರೀಗುರು. ಈತನು ಬರೆದ ವಚನಗಳು ಸಿಕ್ಕಿಲ್ಲ. ಇವರು ವಚನ ರಚಿಸದಿದ್ದರೂ ಇವರ ವ್ಯಕ್ತಿತ್ವ ಚಿಕ್ಕದಲ್ಲ. ಬೇಡನನ್ನು ಭಕ್ತಶ್ರೇಷ್ಠನನ್ನಾಗಿ ಮಾಡಿದ ಮಹಾಗುರು. ಮಾತಂಗನನ್ನು ಮಮತೆಯ ನನ್ನಯ್ಯನನ್ನಾಗಿಸಿದ ನಿಜಕಳಾಗುರು. ಇಂತಹ ಗುರುಶ್ರೇಷ್ಠನು ದೊರೆವುದು ತೀರ ಅಪರೂಪ. ಸುಜ್ಞಾನಿದೇವ ನಿಜಕ್ಕೂ ಶಿವಜ್ಞಾನಿ ; ಸುಧ್ಯಾನಿ.

## ನೆರೆಮಿಂಡದೇವ :

ಇವನು ತಮಿಳು ನಾಡಿನ ಚೋಳಮಂಡಳದವನು. ಈತನದು ತಿರುವಾರೂರು. ಕನ್ನಡನುಡಿಗಲಿತವನು. ಹೆಸರಿಗೆ ತಕ್ಕಂತೆ ಹೆಮ್ಮೆಯಿಂದ ಹೊಮ್ಮಿ ಮೆರೆವವರಿಗೆ ಮಿಂಡನಾಗಿದ್ದನು. ಈ ದಿಸೆಯಲ್ಲಿ ಸೌಂದರನಂಬಿಗೆ ಬುದ್ಧಿಗಲಿಸಿದವನು ; ಬಿಂಕ ಬಿಡಿಸಿದವನು. ಬಹುಜನ ಶಿಷ್ಯಬಲವುಳ್ಳವನು. ಗುರು ತತ್ವಕ್ಕೆ ತಕ್ಕ ಲಿಂಗ ವಿಜ್ಞಾನವುಳ್ಳವನು. ತಮಿಳುನಾಡಿನ ಪುರಾತನ ವೀರಶೈವ ಗುರುವರ್ಗದಲ್ಲಿ ಅಗ್ರ

ಗಣ್ಯನು; ಏಕೈಕನು. ವೀರಶೈವತತ್ತ್ವ ಬಲ್ಲಿದನು. ಅರವತ್ತುಮೂವರಲ್ಲಿ ಅಂಕಿತ ನಾಗಿದಾನೆ. ಇದು ಗಮನಾರ್ಹ ವಿಷಯ. ಈತನುನೂರೊಂದು ವಚನ ರಚಿಸಿದಾನೆ.

### ತಿಲಕವ್ವೆ :

ಇವಳು ಗುರುದೇವಿ. ತನ್ನ ಗಂಡನಾದ ಜಿನಸೇನಸೆಟ್ಟಿಗೆ ಶಿವದೀಕ್ಷೆಯ ಮಾಡಿದ ಗುರುಧರ್ಮಿ! ಇವಳು ವಿಜಾಪುರ ಜಿಲ್ಲೆಯ ಹೇರೂರು ಹಳ್ಳಿಯವಳು. ಜೈನಮತದಲ್ಲಿ ಜನಿಸಿ ವೀರಶೈವಳಾದಳು. ಇವಳ ಗುರು ಯಾರೆಂಬುದು ತಿಳಿಯದು. ಇವಳು ಮಾತ್ರ ಗಂಡನಿಗೆ ಗುರುವಾಗಿ ಮೆರೆದವಳು. ಗಮನಾರ್ಹಳು. ಉಭಯರು ಶಿವಸಂಸ್ಕಾರಿಗಳಾಗಿ ಶಿವಸುಖಿಗಳಾಗಿ ಬಾಳಿದವರು. ಈ ಬಗೆಯಲ್ಲಿ ತಿಲಕವ್ವೆಯ ಚರಿತ್ರೆ ತಿಲಕಪ್ರಾಯವಾಗಿದೆ. ದೇವಿಯರ ತ್ರಿವಿಧಿಯಲ್ಲಿ ಗುರುದೇವಿ ತಿಲಕವ್ವೆಯ ಉಲ್ಲೇಖವಿದೆ. ಇವಳು ಬಸವಣ್ಣನವರಿಗಿಂತ ಹಿಂದಿದ್ದವಳು.

### ವೈಜವ್ವೆ :

ಇವಳು 'ಪರಳಿ'ಪುರದ ಬಳಿಯಿರುವ ಶಿವಪುರದವಳು. ಶಿವಭಕ್ತಿ ಸಂಪನ್ನಳು. ಶ್ರೀಗುರುಶಕ್ತಿ ಸಂಯುತಳು. ಪರಳಿಯ ವೈಜನಾಥ ಲಿಂಗವು ವೈಜವ್ವೆಯಿಂದಾಗಿದೆ. ಆದ್ದರಿಂದ ವೈಜನಾಥನೆಂದು ಅದಕ್ಕೆ ಹೆಸರು. ಅದು ಜ್ಯೋತಿರ್ಲಿಂಗಗಳಲ್ಲಿ ಒಂದಾಗಿದೆ. ಆದು ಮೊದಲು ಜಿನಮೂರ್ತಿ. ಬಸದಿಯಲ್ಲಿದ್ದ ಆ ಜಿನಮೂರ್ತಿ ವೈಜವ್ವೆಯ ಭಕ್ತಿಗೊಲಿದು ಶಿವಲಿಂಗಮೂರ್ತಿಯಾಗಿ ವೈಜನಾಥ ಲಿಂಗವೆಂಬ ಹೆಸರು ಬರುತ್ತದೆ. ಈ ಪವಾಡವನ್ನು ಕಂಡು ಅಲ್ಲಿ ನೆರೆವ ಜೈನರೆಲ್ಲರೂ ವೈಜವ್ವೆಯಿಂದ ಶಿವದೀಕ್ಷೆಯನ್ನು ಪಡೆದು ವೀರಶೈವರಾಗುವರು. ಇದರಿಂದಾಗಿ ವೈಜವ್ವೆ ಗುರು ಧರ್ಮಿಣಿ! ಇವಳು ೧೨ನೆಯ ಶತಮಾನಕ್ಕೆ ಹಿಂದಿನವಳು. ಗಣಸಹಸ್ರದಲ್ಲಿ ದೇವಿಯರ ತ್ರಿವಿಧಿಯಲ್ಲಿ ಇವಳ ನಾಮೋಲ್ಲೇಖವಿದೆ.

### ಗೊಗ್ಗವ್ವೆ :

ಇವಳು ಕೇರಳದಲ್ಲಿರುವ 'ಅವಲೂರಿ'ನವಳು. ಇವಳು ಬಾಲಬ್ರಹ್ಮಚಾರಿಣಿ. ಗೊಗ್ಗೇಶ್ವರನಿಂದ ಗುರುಕಾರುಣ್ಯವ ಪಡೆದ ವೀರಶೈವಳು. ಧೂಪದ ಹೊಗೆಯ ದೇವನಿಗೀವ ಕಾರ್ಯದಲ್ಲಿದ್ದವಳು. ಇವಳು ಅದೇ ಕೇರಳದ ಅರಸನಾದ ಚಾ (ಚೇ) ರಮರಾಯನಿಗೆ ತ್ರಿವಿಧ ದೀಕ್ಷೆಯ ಮಾಡಿ ಕೈಲಾಸಕ್ಕೆ ಕಳುಹಿಸಿದ ಗುರುದೇವಿ. "ಮೊಲೆ ಮುಡಿ ಬಂದರೆ ಹೆಣ್ಣೆಂಬರು. ಮೀಸೆ ಕಾಸಿ ಬಂದರೆ ಗಂಡೆಂಬರು. ಈ ಉಭಯದ ಜ್ಞಾನ ಹೆಣ್ಣೋ ಗಂಡೋ ನಾಸ್ತಿನಾಥಾ"

### ಅಜಗಣ್ಣ :

ಗದಗಿನ ಬಳಿ 'ಲಕ್ಕುಂಡಿ' ಗ್ರಾಮ ಈತನ ಜನ್ಮಭೂಮಿ. 'ಮಸಳಿಕಲ್ಲು' ವಾಸಸ್ಥಳ. ಇದು ತಂಗಿಯಾದ ಮುಕ್ತಾಯಕ್ಕನ ಪತಿಯೂರು. ಅಜಗಣ್ಣ

ಅನುಲೋಕ್ಯ; ಆರೂಢ; ಆತ್ಮಜ್ಞಾನಿ; ಲಿಂಗಪ್ರಾಣಿ; ಮಂತ್ರಮಯ ಜೀವಿ. ಗುರುವಿಗಿರಬೇಕಾದ ಮಂತ್ರಸಿದ್ಧಿ ಅಂಗಶುದ್ಧಿಗಳು ಅವನಲ್ಲಿದ್ದವು. "ಪಂಚಾಕ್ಷರಿ ಸಾಧ್ಯವಾಯಿತ್ತು ಅಜಗಣ್ಣಂಗೆ" ಎಂದು ಗಣದಾಸಿವೀರಣ್ಣನು ಹೇಳಿದಾನೆ. ಐಕ್ಯಸ್ಥಲ ಅಜಗಣ್ಣಂಗಾಯಿತ್ತು.' ಅಜಗಣ್ಣ ಮುಕ್ತಾಯಕ್ಕನ ಅಣ್ಣ – ಅಲ್ಲದೆ ಆತ್ಮಗುರು. ಇದನ್ನು ಮುಕ್ತಾಯಕ್ಕಗಳೇ ಒಪ್ಪಿಕೊಂಡಿದಾರೆ:

ಗುರುವಾಕ್ಯದಿಂದಲ್ಲದೆ ಗುರುವನರಿಯಬಾರದು.
ಗುರುವಾಕ್ಯದಿಂದಲ್ಲದೆ ಲಿಂಗವನರಿಯಬಾರದು.
ಗುರುವಾಕ್ಯದಿಂದಲ್ಲದೆ ಜಂಗಮುವನರಿಯಬಾರದು.
ಗುರುವಾಕ್ಯದಿಂದಲ್ಲದೆ ಪ್ರಸಾದವನರಿಯಬಾರದು.
ಗುರುವಾಕ್ಯದಿಂದಲ್ಲದೆ ತನ್ನನರಿಯಬಾರದು.
ಹಿಂದಣ ಜನ್ಮದಲ್ಲಿ ಗುರುವಾಕ್ಯವಿಡಿದು ಗುರುವ ಪೂಜಿಸಿ
ಇಂದು ಜ್ಞಾನೋದಯವಾದರೆ ಜ್ಞಾನವಾಯಿತ್ತೆಂದು
ಗುರುವಾಕ್ಯವ ಮೀರಿ ಆಯಿತ್ತೆನಬಹುದೆ ?
ತನ್ನಲ್ಲಿ ತಾನು ಸನ್ನಿಹಿತನಾದೆನೆಂದಡೆ ಗುರುವಿಲ್ಲದೆ ಆಗದು ಕೇಳಾ !
ಎನ್ನ ಅಜಗಣ್ಣನೆಂಬ ಗುರುವಿಂದಲ್ಲದೆ
ಆರೂಢದ ಕೂಟವು ಸ್ವಯವಾಗದು ಕೇಳಾ !

'ಎನ್ನ ಅಜಗಣ್ಣನೆಂಬ ಗುರು' ಎಂದು ಹೇಳಿರುವುದರಿಂದ ಅಜಗಣ್ಣನು ತನ್ನ ತಂಗಿ ಮುಕ್ತಾಯಕ್ಕನಿಗೆ ದೀಕ್ಷಾಗುರುವಾಗಿದ್ದನೆಂಬುದು ಸ್ಪಷ್ಟವಾಗುತ್ತದೆ. ಇದಕ್ಕಿಂತ ಬೇರೆ ಸಾಕ್ಷಿ ಬೇಕಿಲ್ಲ.

**ಮುಸುಡಿಯ ಚೌಡಯ್ಯ :**

ಚೌಡಯ್ಯನು ಗುರು ಮೌಲಿಕನು. ಕವಿಕುಲ ತಿಲಕನು. ಆತನು 'ಮುಸುಡಿ' ಊರಿನವನು. ಬಡಗಲ ಕನ್ನಡಿಗನು. ಆಚಾರಾಗ್ರಣಿ. ಆರಾಧ್ಯ. ಚೌಡಯ್ಯ ನಿಗಿದ್ದವು-ಮಠಾಧಿಪತ್ಯ ಗ್ರಾಮಾಧಿಪತ್ಯಗಳು. ಚೌಡಯ್ಯ ಗುರು, ಕವಿ ಎನ್ನಲು ಗಮನಾರ್ಹವಾದ ಕಾರಣವಿದು : ಆತನ ಕಾವ್ಯ 'ಶಿವ ಶರಣು.' ಇದೇ ಆತನಮಂತ್ರ. ಚೌಡಯ್ಯನು ನೂರು ಶ್ಲೋಕಗಳ ಶತಕವನ್ನಾಗಲಿ ಸಾವಿರಾರು ಪದ್ಯಗಳ ಕಾವ್ಯ ವನ್ನಾಗಲಿ ಬರೆದಿಲ್ಲ, ಬರೆಯಬೇಕಿಲ್ಲ. ಆತನ 'ಶಿವಶರಣು' ಎಂಬ ಎರಡು ನುಡಿಗಳೆ ಒಂದು ಮಹಾಕಾವ್ಯ. ಒಂದು ಮಹಾಮಂತ್ರ. 'ಶಿವಾಯನಮಃ' ಎಂಬ ಪಂಚಾಕ್ಷರ ಮಂತ್ರದ ಕನ್ನಡಾನುವಾದವನು ಮಾಡಿ 'ಶಿವಶರಣು' ಎಂಬ ಅಚ್ಚಕನ್ನಡ ಪಂಚಾ ಕ್ಷರ ಮಂತ್ರಕರ್ತ ಕಾವ್ಯಕರ್ತ ಹಾಗು ಕವಿಗುರು ಚೌಡಯ್ಯ.

'ಶಿವಶರಣು' ಎಂಬ ಮಂತ್ರವ ಸೃಷ್ಟಿಸಿ ಮಂತ್ರಕ್ರಾಂತಿಯನೆಸಗಿದ ಗುರು ಚೌಡಯ್ಯ. ಆ ಮಂತ್ರಸಿದ್ಧಿಯ ಪಡೆದ ಮಹಾಗುರು ಚೌಡಯ್ಯ. 'ಶಿವಶರಣು'

ಪದದಲ್ಲಿ ಮಹಾಕಾವ್ಯಕ್ಕಿಂತ ಮಿಗಿಲಾದ ಅರ್ಥವಿದೆ; ಭಾವವಿದೆ; ಜೀವವಿದೆ. 'ಶಿವ ಶರಣು' ಪದಸಿದ್ಧಿಯಿಂದ ಚೌಡಯ್ಯನು ಸತ್ತವರನ್ನು ಬದುಕಿಸಿದನು. ಶೂದ್ರರಿಗೆ ಶಿವದೀಕ್ಷೆಯ ಕೊಟ್ಟು ಸ್ಪೃಶ್ಯರ ಮಾಡಿದನು.

ಮಂತ್ರಾಧೀನವಾಗಿದೆ ಜಗತ್ತು. ಅಂತಹ ಮಂತ್ರವು ಗುರುವಿನ ಅಧೀನ ವಾಗಿದೆ. ಈ ಮಾತನ್ನು ಸಾರ್ಥಕಪಡಿಸಿದಾನೆ ಚೌಡಯ್ಯ ಶ್ರೀಗುರು. ಅವನ 'ಶಿವಶರಣು' ಎಂಬ ಮಾತು ಮಂತ್ರವಾಗಿದೆ. ಜ್ಯೋತಿರ್ಲಿಂಗವಾಗಿದೆ. ಗುರುಶ್ರೇಣಿ ಯಲ್ಲಿ ಇವನೊಬ್ಬ ಅಗ್ರಗಣಿ!

## ಬಿಬ್ಬಿ ಬಾಚಯ್ಯ :

ಈತನು ಗೊಬ್ಬೂರು ಗ್ರಾಮದವನು. ಬ್ರಾಹ್ಮಣನಾದ ಆದಿತ್ಯದೇವನ ಮಗನು. ಈತನು ಶಿವಾಗಮಾಭ್ಯಾಸದ ಫಲವಾಗಿ ಶಿವಾಚಾರಕ್ಕೆ ಒಲಿವನು; ಒಗ್ಗುವನು. ವೀರಶೈವ ಗುರುವಿನಿಂದ ಶಿವದೀಕ್ಷಾಸಂಪನ್ನನಾಗುವನು. ವೀರಶೈವತತ್ತ್ವಭ್ಯಾಸ ಮಾಡುವನು. ಪ್ರಪಂಚ ಜೀವನಕ್ಕೂ ಪರಮಾರ್ಥ ಜೀವನಕ್ಕೂ ಮೂಲಬೀಜವಾದ ಪ್ರಸಾದ ಮಹಿಮೆಯನ್ನು ಕಂಡು ಅದಕ್ಕೆ ಮನ ಮಾರುಹೋದನು. ಪ್ರಸಾದವಿನಿ ಯೋಗ ಕಾಯಕನಿರತನಾದನು. ಈತನ ಈ ಕಾಯಕಕ್ಕೆ ಅಡ್ಡಬಂದ ಗೊಬ್ಬೂರಿನ ವಿಪ್ರಕುಲವನ್ನೆಲ್ಲ ಜಯಿಸಿ ಅವರಿಗೆಲ್ಲ ಶಿವದೀಕ್ಷೆಯನ್ನು ಅನುಗ್ರಹಿಸಿ ಗುರುವಾದನು. ಮೊದಲು ಬ್ರಾಹ್ಮಣರ ಅಗ್ರಹಾರವಾಗಿದ್ದಂತೆ ಬಿಬ್ಬಿ ಬಾಚಯ್ಯ ಗುರುವಿನಿಂದ ಅವರೆಲ್ಲ ದೀಕ್ಷೆ ಪಡೆದು ವೀರಶೈವರಾದ ಬಳಿಕ ಅದು ವೀರಶೈವರ ಅಗ್ರಹಾರವಾಯಿತು. ಅಲ್ಲಿ ಆ ಬಳಿಕ ಅನುಭವಗೋಷ್ಠಿ ಆರಂಭವಾಯಿತು. ಆ ಅನುಭವಗೋಷ್ಠಿಗೆ ಬರುವ ಭಕ್ತರಿಗೆಲ್ಲ ಬಿಬ್ಬಿಬಾಚಯ್ಯನು ಪಡಿಪದಾರ್ಥಗಳಿಂದಾದ ಪ್ರಸಾದವನ್ನು ಅನುಗ್ರಹಿಸು ವಂತೆ ನುಡಿಪ್ರಸಾದವನ್ನೂ ಅನುಗ್ರಹಿಸುತ್ತಿದ್ದನು. ಇದರ ಫಲವೇ ಈ ವಚನಗಳು :

> "ಹೊಲಬು ಹೊಲಬನೇ ಕಂಡು, ಶಿಲೆ ಕುಲವಳಿದು, ಉದಕಗುಣ
> ಮಜ್ಜನದಲ್ಲಿ ಇಂಗಿ, ಅನ್ನಗುಣ ಅರ್ಪಿತದಲ್ಲಿ ಹೋಯಿತ್ತಯ್ಯ.
> ನಿತ್ಯಪ್ರಸಾದವೆನಗಾಯಿತ್ತು. ಆ ಪ್ರಸಾದದಲ್ಲಿ ಎನಗೆ ಏಕವಾಯಿತ್ತಯ್ಯ,
> ಏಣಾಂಕಧರ ಸೋಮೇಶ್ವರಾ.

"ಪ್ರಸಾದ ಸಾಧ್ಯವಾಯಿತ್ತು ಬಿಬ್ಬಿ ಬಾಚಯ್ಯಗಳಿಗೆ" ಎಂದು ಗಣದಾಸಿ ವೀರಣ್ಣನು ಇವರನ್ನು ಹೊಗಳಿದಾನೆ.

## ಅನಿಮಿಷದೇವ :

ಈತನು ಪಟ್ಟದಕಲ್ಲಿನ ಅರಸು. ಚಾಲುಕ್ಯ ರಾಜಮನೆತನದ ತ್ರೈಲೋಕ್ಯ ಚೂಡಾಮಣಿ ರಾಜನ ಮಗನು. ಇವನ ಮೊದಲ ಹೆಸರು ವಸುಧೀಶ. ಈತನು ನಂದಿಕೇಶ್ವರ ಗುರುವಿನಿಂದ ಲಿಂಗದೀಕ್ಷೆಯ ಪಡೆಯುತ್ತಾನೆ. ಪಡೆದ ಲಿಂಗದಲ್ಲಿ ನಿಷ್ಠೆ

ಬಲಿತು ಆ ಲಿಂಗವನ್ನು ನಿತ್ಯ ಅನುಮಿಷ ದೃಷ್ಟಿಯಿಂದ ನಿರೀಕ್ಷಿಸತೊಡಗುವನು. ಅದರಿಂದ ಇವನಿಗೆ 'ಅನುಮಿಷ,ನೆಂಬ ಹೆಸರು ಬಳಕೆಗೆ ಬಂದಿತು. ಅಂತೆಯೆ ಈತನು ಲಿಂಗದಲ್ಲಿ ನಟ್ಟದಿಟ್ಟಿಯುಳ್ಳವನಾಗಿ ರೆಪ್ಪೆಹಳಚದೆ ಒಂದೆಡೆಯಲ್ಲಿ ಕುಳಿತುಬಿಡುವನು. ಲಿಂಗದಲ್ಲಿಯೆ ತನ್ನ ಪ್ರಾಣವನ್ನಿರಿಸಿಕೊಂಡಿರುವನು. ಸಮಾಧಿಗೇರುವನು. ಈತನ ಆ ಸಮಾಧಿಗೆ ಮೆಚ್ಚಿ ಆತನ ಮಂತ್ರಿಗಳು ಒಂದು ದಿವ್ಯ ದೇವಾಲಯವ ಕಟ್ಟುವರು. ಹೀಗಿರಲು ಒಮ್ಮೆ ಅಲ್ಲಿಗೆ ಅಲ್ಲಮಪ್ರಭುವು ಬರುವನು. ದೇಗುಲ ಬಾಗಿಲ ತೆಗೆದು ಒಳಹೋಗಿ ಅಲ್ಲಿದ್ದ ಅನುಮಿಷನಿಂದ ಲಿಂಗಧಾರಿಯಾಗುವನು. ಅನುಮಿಷನ ಕರ ಕಂಜಾತನಾಗುವನು. ಅಲ್ಲಮಪ್ರಭುವಿನ ಗುರು ಅನಿಮಿಷದೇವ.

## ವಿಮಳಾದೇವಿ :

ಇವಳು ಯಾರ ಮಗಳು, ಎಲ್ಲಿಯವಳು ತಿಳಿಯದು. ಕಲ್ಯಾಣದಲ್ಲಿ ವಾಸವಾಗಿದ್ದವಳು. ಅನುಭವದಲ್ಲಿ ಜಾಣಳು. ಹೆಣ್ಣುಮಕ್ಕಳಿಗೆ ಅನುಭವದ ತಿರುಳನ್ನು ತಿಳಿಸುವುದಲ್ಲದೆ ಜ್ಞಾನದೀಕ್ಷಾ ಸಂಸ್ಕಾರವನ್ನೂ ಕೊಡುತ್ತಿದ್ದಳು. ಗುರು ಧರ್ಮಚಾರಿಣಿಯಾಗಿದ್ದಳು. ಜ್ಞಾನಿಯಾದ ವಿಮಳಾದೇವಿಯಿಂದ ಹಲವಾರು ಜನ ಹೆಣ್ಣುಮಕ್ಕಳು ಲಿಂಗಧಾರಣ ಪಡೆದು ಲಿಂಗಧ್ಯಾನ ಗುರುಭಕ್ತಿಗಳಲ್ಲಿ ನಿರತರಾಗಿ ಪುಣ್ಯಶಾಲಿಗಳಾದರು. ಧನ್ಯರಾದರು.

ಹೀಗೆ ಶಿವಭಕ್ತೆಯರಿಗೆ ಶಿವದೀಕ್ಷೆಯನಿತ್ತು ವಿಮಳಾದೇವಿಯು ಗುರುದೇವಿಯಾಗಿ ಬಾಳಿದಳು. ಇವಳು ವಚನ ರಚಿಸಿದಂತಿಲ್ಲ.

## ಶಿವಯೋಗಿ ಮಲ್ಲರಸ :

ಈತನು ಗಗನೇಶನ ಅಪರಾವತಾರಿ. ಐಹೊಳೆಯು ಇವನ ಜನ್ಮಭೂಮಿ. ವೇದಭಾಸ್ಕರ ಗುಣವತಿಯರ ಗರ್ಭಸಂಜಾತ. ಊರ ಒಡೆಯನಾಗಿದ್ದನು. ಕಾಲ ಕಳೆದಂತೆ ವೀರಶೈವನಾಗಿ ವೈರಾಗ್ಯಶಾಲಿಯಾಗಿ ರಾಜ್ಯವ್ಯಾಮೋಹವನ್ನುಳಿದು ಶ್ರೀಶೈಲಕ್ಕೆ ಬರುತ್ತಾನೆ. ಅಲ್ಲಿದ್ದು ಅಲ್ಲಿಗೆ ಬರುವ ಭಕ್ತರಿಗೆ ಶಿವಸಂಸ್ಕಾರವೀಯುತ್ತ ಉದ್ಧರಿಸುತ್ತ ಗುರುಧರ್ಮದ ದಾರಿಯಲ್ಲಿ ಸಾಗಿದವನು. ಈತನು ಸಕಲೇಶ ಮಾದರಸನಿಗೂ ಉಪದೇಶ ಮಾಡಿದಂತೆ ತಿಳಿಯುತ್ತದೆ. ಈತ ವಚನ ರಚಿಸಿಲ್ಲ.

"ಈತನು ಕಲ್ಲುಕುರಿಕೆಯ ಪಟ್ಟಣದಲ್ಲಿ 'ವಿಶ್ವನಾಥನ ಸರ್ವಸಾಮರ್ಥ್ಯವೇ ಸಾಕಾರವಾದ ಮಲ್ಲಿಕಾರ್ಜುನ' ಎಂಬ ಹೆಸರನ್ನು ತಾಳಿ ಶೈವಸಾಮ್ರಾಜ್ಯವನ್ನೂ ಭೂಸಾಮ್ರಾಜ್ಯವನ್ನೂ ಪಾಲಿಸುತ್ತಿದ್ದನು. ಎಂದರೆ ಧರ್ಮಗುರುವಾಗಿಯೂ ರಾಜನಾಗಿಯೂ ಇದ್ದನು. ಈತನಿಗೆ ಕಲ್ಲುಕುರಿಕೆ ರಾಜಧಾನಿಯಾಗಿದ್ದಿತು. ಶಿವಯೋಗಿ ಮಲ್ಲರಸ ಎಂಬ ಹೆಸರನ್ನು ಹೊಂದಿ ಶ್ರೀಶೈಲದಲ್ಲಿ ಮೆರೆದನು."–ಎಂದು ಸದ್ಧರ್ಮದೀಪಿಕೆಯ ಸಂಚಿಕೆ ೧೫೭ರಲ್ಲಿ ಉಕ್ತವಾಗಿದೆ.

## ರಾಯಮ್ಮ ಅಥವಾ ರುದ್ರಾಣಿ;

ಇವರು ಅಮುಗಿದೇವನ ಪುಣ್ಯಪತ್ನಿ; ಗುರುಪತ್ನಿ. ಆಚಾರ ವಿಚಾರಗಳಲ್ಲಿ ನಿರತಳು. ಇಂತಹ ಸತ್ಯವ್ರತವುಳ್ಳ ಭಕ್ತರಿಗೆ ಮರಳಿ ದೀಕ್ಷೆಯಿಲ್ಲೆಂದು ಇವರ ಅಭಿಪ್ರಾಯ :

"ಅಂಗಕ್ಕಾಚಾರ, ಮನಕ್ಕೆ ಜ್ಞಾನ ಸಮರಸಾದ್ವೈತವಾದ ಬಳಿಕ
ಪುನರಪಿ ದೀಕ್ಷೆಯುಂಟೆ?
ಗರುಡಿಯಲ್ಲಿ ಕೋಲಲ್ಲದೆ ಕಾಳಗದಲ್ಲಿ ಉಂಟೇ ಕೋಲು?
ಭವಿಗೆ ಮೇಲು ವ್ರತ ಪುನರ್ದೀಕ್ಷೆಯಲ್ಲದೆ ಭಕ್ತಂಗುಂಟೆ?
ವ್ರತ ತಪ್ಪಿ ಅನುಗ್ರಹವಿಡಿದ ನರಕಿಗಳಿಗೆ
ಮುಕ್ತಿಯಿಲ್ಲ ಎಂದೆ ಅಮುಗೇಶ್ವರ ಲಿಂಗದಲ್ಲಿ."

## ಸಂಗನೋಶ್ವರಪ್ಪಣ್ಣ :

ಇವರು ಗುರುವರ್ಗಕ್ಕೆ ಸೇರಿದವರೆಂಪೂ ಬಸವೇಶ್ವರನ ಗುರುಗಳೆಂದು ನಂಬಲು ಅವಕಾಶವಿದೆಯೆಂದು ಸದ್ಧರ್ಮದೀಪಿಕೆಯ ಸಂಪಾದಕರಾದ ಶ್ರೀ ಚೆನ್ನಮಲ್ಲಿಕಾರ್ಜುನರು ಪ್ರಕಟಿಸಿದ 'ಸರ್ವಪುರಾತನರ ವಚನ'ದಲ್ಲಿ ಅಭಿಪ್ರಾಯಪಟ್ಟಿದಾರೆ. ಇವರ ಇಪ್ಪತ್ತು ವಚನಗಳನ್ನು ಪ್ರಕಟಿಸಿದಾರೆ. ಇವು ಗಮನಾರ್ಹವಾಗಿವೆ. ಈ ವಚನಗಳಿಂದ ವೀರಶೈವವು ಬಹು ಪುರಾತನವಾದ್ದೆಂದು ವಿಶದವಾಗುತ್ತದೆ. ವೀರಶೈವಕ್ಕೆ ರುದ್ರನು ಆದಿ ಅಧಿದೇವನೆಂದು ಅಭಿಪ್ರಾಯವಾಗುತ್ತದೆ. ಈ ಗುರುದೇವನ ಮೊದಲನೆಯ ವಚನ ಹೀಗಿದೆ :

"ಭುವನಸ್ಯ ಪಿತರಂ ಗರ್ಭೀ ರಾಭೇ ರುದ್ರಂ ದಿವಾರ್ದಯಾ
ರುದ್ರಮುವುಕ ಬೃಹಂತ ವೃಷ್ಟಮುಜರಂ ಸುಷುಮ್ನ ದೃಗ್ ಭವೇ
ಮಕ ಮಕ ವಿನೇಷಿವಾಸ :" ಎಂಬ ಶ್ರುತಿಯ ವಿಚಾರಿಸಲರಿಯದೆ
ಒಲಿದಂತೆ ನುಡಿವುತಿಪ್ಪರು ನೋಡಯ್ಯ
'ಮಾತೃದೇವೋಽಭವಃ, ಪಿತೃದೇವೋಽಭವಃ' ಎಂಬ ಶ್ರುತಿ
ದೇವಿ ದೇವರೇ ತಾಯಿ ತಂದೆ ಎಂದು ಹೇಳಿತ್ತು.
'ಆಚಾರ್ಯದೇವೋಽಭವಃ' ಎಂಬ ಶ್ರುತಿ ತನಗೆ ಶುದ್ಧಶೈವವನುಗ್ರಹವ
ಮಾಡಿದ ಗುರುವೇ ದೈವವೆಂದು ಹೇಳಿತ್ತು.
'ಅತಿಥಿದೇವೋಽಭವಃ' ಎಂಬುದು ತನ್ನ ಮನೆಗೆ ಬಂದ
ಭಕ್ತನೇ ದೈವವೆಂದು ಹೇಳಿತ್ತು.
ಇದಲ್ಲದೆ ಸಾವುತ್ತ ಹುಟ್ಟುತ್ತ ಇಪ್ಪ
ತಂದೆ ತಾಯೇ ದೈವವೆಂದು ಲಜ್ಜೆ ನಾಚಿಕೆ ಬೇಡ.

ಚಂಡೇಶ್ವರಪಿಳ್ಳೆ ಶಿವನೇ ತಂದೆಯೆಂದರಿದು
ವಾಯದ ತಂದೆಯ ಕೊಂದುದನರಿಯಾ !
ಎಂದಿಗೆ ಕೇಡಿಲ್ಲದ ತಾಯಿತಂದೆ "ಬಸವ ಪ್ರಿಯ ಕೂಡಲ-
ಚೆನ್ನಸಂಗಮದೇವ" ಎಂದು ವೇದಂಗಳು ಸಾರುತ್ತಿವೆ."

### ಏಕಾಂತ ರಾಮಯ್ಯ :

ಇವರು ಗುಲಬುರ್ಗ ಜಿಲ್ಲೆಯ 'ಆಲಂದೆ' ಗ್ರಾಮದವರು. ಇವರು ಸೋಮನಾಥ ದೇವರ ವರಪ್ರಸಾದದಿಂದ ಪುರುಷೋತ್ತಮಭಟ್ಟ ಸೀತಾದೇವಿಯರ ಪುಣ್ಯೋದರದಲ್ಲಿ ಜನಿಸುವನು. ರಾಮಯ್ಯ ಎಂಬುದು ಇವರ ಅಂಕಿತನಾಮ. ಇವರು ಏಕಾಂತ ವಾಸಿಯಾಗಿರುವ ಕಾರಣ 'ಏಕಾಂತ ರಾಮಯ್ಯ' ಅಥವಾ 'ಏಕಾಂತ ರಾಮಿತಂದೆ' ಎಂದು ಹೆಸರಾಯಿತು. ಇವರು ಸೋಮನಾಥ ವರಪುತ್ರನಾದ ಕಾರಣ ವೀರಶೈವಕ್ಕೆ ಬೇಗ ಒಗ್ಗುವನಲ್ಲದೆ ಗುರುಧರ್ಮಿಯಾಗಿ ದೇಶದಲ್ಲೆಲ್ಲ ಸಂಚರಿಸಿ ಶಿಷ್ಯರನ್ನು ಸಂಪಾದಿಸಿ ವೀರಶೈವ ತತ್ತ್ವ ಪ್ರಸಾರವನ್ನು ಹೆಚ್ಚಾಗಿ ಮಾಡುವರು. ಇವರ ಅಬ್ಬಲೂರಿನ ಪೊವಾಡವು ಪ್ರಸಿದ್ಧವಾಗಿದೆ. ಇವರ ಕಾಲ ಹನ್ನೆರಡನೆಯ ಶತಮಾನ. ಇವರು ವಚನ ರಚಿಸಿದಾರೆ. ಆರು ವಚನಗಳು ಉಪಲಬ್ಧವಿವೆ.

"ಗುರುಭಕ್ತನಾದಲ್ಲಿ ಘಟಧರ್ಮವಳಿದು
ಲಿಂಗಭಕ್ತನಾದಲ್ಲಿ ಸಂಚಲವಳಿದು
ಜಂಗಮ ಭಕ್ತನಾದಲ್ಲಿ ತ್ರಿವಿಧಾಂಗ ಸಲೆಸಂದು
ಇಂತೀ ತ್ರಿವಿಧ ಭಕ್ತಿಯಲ್ಲಿ ತ್ರಿಕರಣ ಶುದ್ಧನಾದಾತ್ಮಂಗೆ
ಮರ್ತ್ಯ ಕೈಲಾಸವೆಂಬ ಕಾಳು ಮಾತಿಲ್ಲ.
ಆತ ನಿತ್ಯಮುಕ್ತ ಎನ್ನಯ್ಯ ಚೆನ್ನರಾಮನಾಗಿ"

### ಕಲಿಖ್ಯಾತಯ್ಯ :

ಇವರನ್ನು ಕಲಕೇತಯ್ಯ, ಕಳಕಮಲ್ಲಯ್ಯ, ಶೀಲವಂತ ಚೆನ್ನಮಲ್ಲಯ್ಯ ಎಂದು ಬೇರೆ ಬೇರೆ ಹೆಸರುಗಳಿಂದ ಕರೆವುದುಂಟು. ಇವರು ಕಾಶೀಪೀಠದ ಶಾಖಾಮೂರ್ತಿಗಳೆಂದು ತಿಳಿಯುತ್ತದೆ. ಗಜೇಂದ್ರಗಡದ ಬಳಿಯೂ ಇದ್ದರೆಂದು ಹೇಳುತ್ತಾರೆ. ಅಲ್ಲೊಂದು ಇವರ ಹೆಸರಿನ ದೇವಸ್ಥಾನವೂ ಇದೆ. ಕಳಕಮಲ್ಲಯ್ಯನ ಗುಡಿಯೆಂದು ಕರೆಯುತ್ತಾರೆ.

ಕಲಿಖ್ಯಾತಯ್ಯ ಗುರುಗಳು "ಶೀಲವಂತಯ್ಯನ ತ್ರಿವಿಧಿ" ಅಥವಾ "ಆತ್ಮಲಿಂಗ ಪ್ರಣವ ಸಂಯೋಗ" ಎಂಬ ಹೆಸರಿನ ಗ್ರಂಥವನ್ನು ರಚಿಸಿದಾರೆ. ಆ ಗ್ರಂಥದಾದಿಯಲ್ಲಿ ತಮ್ಮ ಗುರು ಮರುಳೇಶ್ವರನೆಂದು ಹೇಳಿದಾರೆ. ಇವರು ವಚನ ರಚಿಸಿದಾರೆ. ೧೦, ೧೧ ವಚನಗಳು ಉಪಲಬ್ಧವಿವೆ.

"ಕ್ರಿಯಾಶಕ್ತಿ ಬ್ರಹ್ಮಂಗೆ ಸರಸ್ವತಿಯಾಗಿ ಬಂದುದನರಿದು
ಇಚ್ಛಾಶಕ್ತಿ ವಿಷ್ಣುವಿಗೆ ಮಹಾಲಕ್ಷ್ಮಿಯಾಗಿ ಬಂದುದನರಿದು
ಜ್ಞಾನಶಕ್ತಿ ರುದ್ರಂಗೆ ಉಮಾದೇವಿಯಾಗಿ ಸಲೆ ಸಂದುದನರಿದು
ಇಂತೀ ತ್ರಿವಿಧಶಕ್ತಿಗಳ ಮನೋಹರದಲ್ಲಿ
ತ್ರಿವಿಧ ಮೂರ್ತಿಗಳು ಆಡುವುದ ಕಂಡು,
ನಾನಾ ಸುಖ ಪರಿಪೂರ್ಣ ಕಳೆಯಿಂದ ಕ್ರಿಯಾಶಕ್ತಿ
ಅದರ ಸುಖೇಚ್ಛೆಯಿಂದ ಇಚ್ಛಾಶಕ್ತಿ
ಈ ಉಭಯಶಕ್ತಿ ಸನ್ನುತವಾಗಿ ನಿಂದುಳುಮೆ ಜ್ಞಾನಶಕ್ತಿ.
ಇಂತೀ ತ್ರಿವಿಧ ಶಕ್ತಿಯ ಒಡಹುಟ್ಟಿ ನಾ ಬಂದೆ.
ಬ್ರಹ್ಮಂಗೆ ಕಿರುತಂಗಿಯ ಕೊಟ್ಟು ಮೈದುನನ ಮಾಡಿಕೊಂಡೆ.
ವಿಷ್ಣುವಿಂಗೆ ನಡುವಳಾಕೆಯ ಕೊಟ್ಟು ಬಿಡುಮುಡಿಯ
ಮೈದುನನ ಮಾಡಿಕೊಂಡೆ.
ರುದ್ರಂಗೆ ಹಿರಿಯಕ್ಕನ ಕೊಟ್ಟು ಎನ್ನೊಡಗೂಡುವ ಭಾವನ
ಮಾಡಿಕೊಂಡೆ.
ಕಿರುತಂಗಿಯ ಗಂಡ ಸತ್ತ. ನಡು ತಂಗಿಯ ಗಂಡಬಿಟ್ಟ.
ಹಿರಿಯಕ್ಕನಕೊಂದ ಭಾವ. ಇಂತೀ ಮೂವರ ಕೊಳುಕೊಡೆ
ಪಿಷ್ಟಸಂಬಂಧ ನಷ್ಟವಾಯಿತ್ತು.
ಕಲ್ಲಹೃದಯದ ಕಲಕವೆಲ್ಲ ಬಂದೀ
ಗೆಲ್ಲ ಸೋಲವೆಂಬ ತಗರ ಕೋಡ ಹಿಡಿದು
ಮೇಕಲೇಶ್ವರಲಿಂಗವಲ್ಲದಿಲ್ಲ, ಎಂದು ನಲಿನಲಿದು ಕುಣಿದಾಡಬಂದೆ."

## ಘನಲಿಂಗದೇವ :

ಇವರು ಮೈಸೂರು ಬಳಿಯಿರುವ ಸುತ್ತೂರಿನವರು. ವೀರಸಿಂಹಾಸನ ಮಠದ ಅಧ್ಯಕ್ಷರು. ಶ್ರೀ ಶಿವರಾತ್ರೀಶ್ವರ ಶಿವಾಚಾರ್ಯರ ಪರಂಪರೆಯವರು. ಇವರು ತುಂಬಾ ಪ್ರಸಿದ್ಧರಾಗಿದ್ದಾರೆ. ಪ್ರಭಾವಶಾಲಿಗಳಾಗಿದಾರೆ ಇವರು ವಚನ ರಚಿಸಿದಾರೆ. ಇವರ ೬೫ ವಚನಗಳು ಪ್ರಕಟವಾಗಿವೆ.

"ಎನ್ನ ಕಾಯ ಪ್ರಸಾದವಾಗಿತ್ತು. ಎನ್ನ ಜೀವ ಪ್ರಸಾದವಾಯಿತ್ತು.
ಎನ್ನ ಪ್ರಾಣ ಪ್ರಸಾದವಾಯಿತ್ತು. ಎನ್ನ ಕರಣೇಂದ್ರಿಯಗಳೆಲ್ಲವು
ಪ್ರಸಾದವಾದವು ; ನೋಡಿ ನೀವೆನ್ನ ಕರಸ್ಥಲದ ಪ್ರಸಾದರೂಪಾದಿರಾಗಿ
ಘನಲಿಂಗಿಯ ಮೋಹದ ಚೆನ್ನಮಲ್ಲಿಕಾರ್ಜುನಾ."

## ಕಾಡಸಿದ್ಧೇಶ್ವರ :

'ಕಾಡಸಿದ್ಧದೇವ' 'ಸಿದ್ಧಕಾಡದೇವ' ಎಂತಲೂ ಹೇಳುತ್ತಾರೆ. ಇವರ ಕಾಲ ೧೭ನೆಯ ಶತಮಾನ. ಇವರದು ಸಿದ್ಧಗಿರಿ ಮಠ. ಇದಕ್ಕೆ ಕಾಡಸಿದ್ಧದೇವರ ಪೀಠವೆಂದೂ ಸಿಂಹಾಸನವೆಂದೂ ಹೆಸರು. ಇದು ಜಗದ್ಗುರು ರಂಭಾಪುರಿ ಸಿಂಹಾಸನಕ್ಕೆ ಸೇರಿದ ದೊಡ್ಡ ಮಠ. ಲಕ್ಷಾಂತರ ಜನ ಶಿಷ್ಯರುಳ್ಳ ಮಠ. ಈ ಮಠಾಧಿಪತಿಯಾಗಿದ್ದ ಸಿದ್ಧಕಾಡದೇವರು ವಚನ ಬರೆದಿದಾರೆ.

"ಗುರುವೆನಲು ಕೊರಗುವುದು ಭವಗಜವು.
ಗುರುವೆನಲು ಹರಿವುದು ಭವಜನ್ಮದ ದೋಷವು.
ಗುರುವೆನಲು ಮುನ್ನೂರರವತ್ತು ರೋಗಾದಿಬಾಧೆಗಳು ಸಂಹಾರವಾಗುವವು.
ಗುರುವೆನಲು ಕಾಲಕಾಮ ಮಾಯಾದಿಗಳ ಭೀತಿಯು–
ಕಂಟಕಗಳು ಸಂಹಾರವಾಗುವವು.
ಗುರುವೆನಲು ಸಕಲೈಶ್ವರ್ಯ ದೊರಕೊಂಬುವುದು.
ಇಂತಪ್ಪ ಶ್ರೀಗುರು ಚರಣಕ್ಕೆರಗಿ ನಮೋ ನಮೋ ಎಂದು ಬದುಕಿದೆನಯ್ಯ
ಕಾಡಿನೊಳಗಾದ ಶಂಕರಪ್ರಿಯ ಚೆನ್ನಕದಂಬ ಲಿಂಗನಿರ್ಮಾಯ ಪ್ರಭುವೆ!"

ಗುರುಸಿದ್ಧಕಾಡದೇವರೆಂಬವರು ಈ ವಚನಕ್ಕೆ ಟೀಕೆ ಬರೆದಿದಾರೆ. ಟೀಕಿನ ವಚನಗಳೂ ಸೇರಿ ೧೭೧೨ ವಚನಗಳಿವೆ.

## ಶ್ರೀ ಸದಾಶಿವ ಶಿವಾಚಾರ್ಯರು :

ಸಖರಾಯಪಟ್ಟಣದವರು ; ಅಲ್ಲಿನ ಶ್ರೀ ಹಾಲುಸ್ವಾಮಿ ಶಿಲಾಮಠಾಧಿಪತಿಗಳು. ಭಾಷ್ಯಾಚಾರ್ಯರು ಕೈವಲ್ಯೋಪನಿಷತ್ತಿಗೆ ಭಾಷ್ಯ ಬರೆದು ಹೆಸರಾಗಿದಾರೆ. 'ಶಿವಾದ್ವೈತ ತತ್ತ್ವಪ್ರಚಾರ ಸಮಿತಿ' ಸಂಸ್ಥಾಪಕರಾಗಿ ತತ್ತ್ವ ಸಾಹಿತ್ಯ ಧರ್ಮ ನೀತಿ ಸಂಸ್ಕೃತಿಗಳ ಪ್ರಚಾರಕಾರ್ಯ ಇವರಿಂದ ಸಾಗಿಬರುತಿದೆ. ಹೆಚ್ಚಾಗಿ ನುಡಿಯಂತೆ ನಡೆಯುಳ್ಳ ಶೀಲಸಂಪನ್ನರು. ಇವರು 'ಕುಮಾರೇಶ್ವರ ವಚನ' 'ಅನುಭವ ವೈಖರಿ' ಎಂಬ ಹೆಸರಿನ ವಚನ ಕೃತಿಗಳನ್ನು ರಚಿಸಿದಾರೆ.

"ಕಾಯ ಜೊಳ್ಳು ; ಮಾಯ ಮುಳ್ಳು.
ಇದು ಸಟೆಯಲ್ಲ ದಿಟ ಕಾಣಿರಣ್ಣ !
ಕಾಯಜವೈರಿ ಎಮ್ಮಾರಾಧ್ಯ ಚಿಲ್ಲಿಂಗಮೂರ್ತಿಯ
ಅಡಿವಿಡಿದು ಮಾಯ ಮೀರಿ ಚಿರಂಜೀವಿಗಳಾಗಿರಣ್ಣ !"

ಸಾಸಸಂತರೈದಿದಡೆ ಹಿತವದು ತಪ್ಪದು ನೋಡಾ !
ದುರುಳ ಧೂರ್ತರ ಸಾರಿದಡೆ ಅಡಿಗಡಿಗೆ ಕಡುಕಷ್ಟವಯ್ಯ !

ಇದನರಿದು ಮರೆಯದೆ .
ಸಾರಸಜ್ಜನರ ಸಾರಿ ಸೇರಿ ಸುಖಿಪುದು
ಸರಿಗಾಣಾ ಎಮ್ಮಾರಾಧ್ಯ ಚಿಲ್ಲಿಂಗ ಮೂರ್ತಿಯೆ !

## ಶ್ರೀ ಚೆನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯರು :

ಇವರು ಶ್ರೀ ನಿಡುಮಾಮಿಡಿ ಶ್ರೀ ಶೈಲ ಸಂಸ್ಥಾನಾಧೀಶರು. ಸೂರ್ಯಸಿಂಹಾಸನ ಜಗದ್ಗುರುಗಳು. ಇವರು ಕನ್ನಡಸಾಹಿತ್ಯ ಪ್ರಪಂಚದಲ್ಲಿ ಪ್ರಸಿದ್ಧರು. ಸಾಹಿತ್ಯದ ನಾನಾಪ್ರಾಕಾರಗಳಲ್ಲಿ ಇವರ ಸೇವೆ ಸಂದಿದೆ. ಅಂತೆಯೇ ವಚನ ಸಾಹಿತ್ಯದಲ್ಲಿಯೂ ಸೇವೆ ಸಂದಿದೆ. 'ವಚನಾಂಜಲಿ', 'ವಚನ ಮಂಜರಿ', 'ವಚ ನವಲ್ಲರಿ' ಎಂಬುದಾಗಿ ಮೂರು ವಚನಗಳು ಅಚ್ಚಾಗಿವೆ. 'ಮಣಿವಚನಗಳು' ಎಂಬುದು ಅಚ್ಚಾಗಬೇಕಾಗಿದೆ. ಎಲ್ಲವೂ ಸೇರಿ ಮೂರುಸಾವಿರ ವಚನಗಳ ಮೇಲೆ ರಚಿಸಿದಾರೆ. ಆಧುನಿಕ ವಚನಕಾರರಲ್ಲಿ ಇವರದು ಹಿರಿಯಸ್ಥಾನ. 'ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯಸಿಂಹಾಸನಾಧೀಶ್ವರ' ಎಂಬುದೇ ಇವರ ಅಂಕಿತ. ಇವರ ವಚನಗಳು ಆಗಲೇ ಅನೇಕ ಬಗೆಯಲ್ಲಿ ಪ್ರಚಾರಗೊಂಡಿವೆ. ಆಧುನಿಕ ಹಲಕೆಲ ಸಮಸ್ಯೆಗಳ ಮೇಲೆಯೂ ರೀತಿ ನೀತಿಗಳ ಮೇಲೆಯೂ ವಿಜ್ಞಾನ, ರಾಜಕಾರಣ, ಆಧುನಿಕ ಕಾಯಕಗಳು ಇತ್ಯಾದಿ ವಿಷಯಗಳ ಮೇಲೆಯೂ ಸಂಸ್ಕೃತಿ ಸಾಹಿತ್ಯಗಳ ಮೇಲೆಯೂ ಉತ್ತಮ ವಚನಗಳನ್ನು ರಚಿಸಿದಾರೆ.

"ಷಡ್ದರ್ಶನಂಗಳೊಳಗೆ ಶ್ರೀಗುರುದರ್ಶನವೇ ದಿವ್ಯ.
ಷಣ್ಮತಂಗಳೊಳಗೆ ಶ್ರೀಗುರುಮತವೇ ದಿವ್ಯ.
ಷಡಂಗಗಳೊಳಗೆ ಶ್ರೀಗುರುವಿನಂಗವೆ ದಿವ್ಯ
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ ನರಿಯೆ
ಶ್ರೀಗುರು ಸೂತ್ರವೇ ದಿವ್ಯ.
"ಇಚ್ಛಾಶಕ್ತಿಯೆ, ಮೆಚ್ಚಿ ಬೇಡುವೆ
ಅಚ್ಚಮನವೆಂಬ ರನ್ನಗನ್ನಡಿಯ
ನುಚ್ಚುನೂರು ಮಾಡಬೇಡ ಕಂಡೆಯಾ !
ಸಚ್ಚಿದಾನಂದ ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶನ
ನಿಚ್ಚಟದ ನಿಲವು ಕಾಣದು ಕಂಡೆಯಾ ?"

## ಶ್ರೀ ರೇವಣಸಿದ್ಧ ಶಿವಾಚಾರ್ಯರು :

ಇವರು ಧಾರವಾಡ ಜಿಲ್ಲೆಯ ರೋಣ ತಾಲೂಕಿನ ಚಿಕ್ಕಮಣ್ಣೂರು ಗ್ರಾಮದವರು. ಅಲ್ಲಿನ ಬೃಹನ್ಮಠಾಧಿಪತಿಗಳು. ಸನಾತನ ಧರ್ಮಬೋಧಕರಾಗಿದಾರೆ.

ಇವರು "ವಚನಾಮೃತ" ಎಂಬ ಒಂದು ಚಿಕ್ಕ ಕೃತಿಕರ್ತರು. ಇದರಲ್ಲಿ ೫೧ ಅವ್ವತ್ತೊಂದು ವಚನಗಳಿವೆ. ಅವು "ಚಿಕ್ಕ ಮಣ್ಣೂರ ಗುರು ರೇಣುಕದೇವ" ಎಂಬ ಅಂಕಿತವಲ್ಲಿ ರಚಿತವಾಗಿವೆ. ಕ್ರಿ.ಶ. ೧೯೪೭ರಲ್ಲಿ ಪ್ರಕಟವಾಗಿದೆ.

"ಕೋಪವೆಂಬುದು ತರವಲ್ಲವಯ್ಯ. ಕೋಪದಿಂದ ಸುಖಶಾಂತಿ ಸಿಗಲಾರದಯ್ಯ.
ಯತಿ ಕುಲತಿಲಕರು ಕೋಪದಿಂದಲೇ ಚಂಡಿಗಳಾದರಯ್ಯ.
ಶಾಂತಿ ಸೈರಣೆಯೆ ಭೂಷಣವೆಂದ ನಮ್ಮ ಚಿಕ್ಕಮಣ್ಣೂರ ಗುರು ರೇಣುಕದೇವ."

———::———

## ಕಾಣಾ

ಸುಖಗಳಲ್ಲುಂಟು ಮೂರು ವಿಧ;
ಭೌತಿಕ, ಮಾನಸಿಕ, ಆಧ್ಯಾತ್ಮಿಕಗಳೆಂದು,
ಭೌತಿಕ ಸುಖ ಕ್ಷಣಿಕ,
ಮಾನಸಿಕ ಸುಖ ವಾರ್ಷಿಕ,
ಆಧ್ಯಾತ್ಮಿಕ ಸುಖ ಅನಂತಕಾಲಿಕ ಕಾಣಾ ಶ್ರೀ. ಸಿದ್ಧರಾಮೇಶ್ವರ.

ಯಂತ್ರಂ ಪರತಂತ್ರಂ
ವಿಜ್ಞಾನಂ ಅಜ್ಞಾನಂ
ಕಲಿಕಾಲಂ ಅಳಿಕಾಲಂ ಕಾಣಾ ಶ್ರೀ. ಸಿದ್ಧರಾಮೇಶ್ವರ.

ಗುರುವೇ ಸತ್,
ಲಿಂಗವೇ ಚಿತ್,
ಜಂಗಮವೇ ಆನಂದ,
ಇವು ಮೂರಿರುವವನೇ ಸಚ್ಚಿದಾನಂದ ಕಾಣಾ । ಶ್ರೀ. ಸಿದ್ಧರಾಮೇಶ್ವರ.*

—ಜಿ. ಮಹಲಿಂಗಪ್ಪ, ಗೊಂಡೇದಹಳ್ಳಿ.

* ಸುಪ್ರಸಿದ್ಧ ಸಾಹಿತಿಗಳೂ ಶಿವಾನುಭಾವಿಗಳೂ ಆದ ಶ್ರೀ ಜ. ಚ. ನಿ. ಅವರು ಗಿರಿಯಾಪುರದಲ್ಲಿ ನಿರೂಪಿಸಿದ ಅನುಭವವನ್ನು ಕೇಳಿ ಬರೆದ ವಚನಗಳಿವು. —ವಚನಕಾರ.

# ಮಹಾ ಸಿದ್ಧ ಶಿವಯೋಗಿ



ಪ್ರೊ॥ ಪಾಂಡುರಂಗರಾವ ದೇಸಾಯಿ, ಎಂ.ಎ.,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಶಿವನಾಮನಿ ಭಾವಿತಾಂತರಂಗೇ ।
ಮಹತಿ ಜ್ಯೋತಿಷಿ ಮಾನಿನೀಮಯಾರ್ಧೇ ॥
ದುರಿತಾನ್ಯಪಯಾನ್ತಿ ದೂರ ದೂರಂ ।
ಮುಹುರಾಯಾನ್ತಿ ಮಹಾನ್ತಿ ಸಂಪದಾನಿ ॥

(ಅತ್ಯಂತ ತೇಜಸ್ವಿಯೂ ಮಹಿಳಾರ್ಧ ಶರೀರಿಯೂ ಆದ ಶಿವನ ಪಾವನ ನಾಮವನ್ನು ಅಂತರಂಗದಲ್ಲಿ ಧ್ಯಾನಿಸಿದರೆ ಪಾಪಗಳು ದೂರ ದೂರ ಸರಿದು ಮಾಯವಾಗುತ್ತವೆ; ವೈಭವಗಳು ಎಡೆಬಿಡದೆ ಬಂದು ಸೇರುತ್ತವೆ.)

ಕರ್ನಾಟಕವು ಪುರಾತನ ಕಾಲದಿಂದಲೂ ಈಶ್ವರೀ ಪ್ರಭಾವದಿಂದ ಪ್ರದೀಪ್ತವಾದ ಪ್ರದೇಶ. ಈ ನಾಡಿನ ಚಾರಿತ್ರಿಕ ಸಾಧನಗಳನ್ನು ಪರಿಶೀಲಿಸುವವರಿಗೆ ಎಲ್ಲೆಲ್ಲಿಯೂ ಶಿವಾಲಯಗಳ ಅವಶೇಷಗಳು, ಶೈವ ವಿಗ್ರಹಗಳು, ಶೈವ ಶಾಸನಗಳು, ಶೈವ ಸಾಹಿತ್ಯಕೃತಿಗಳು ಗೋಚರವಾಗುತ್ತವೆ. ಶತಶತಮಾನಗಳ ಆಚೆಯಿಂದಲೂ ಈಚೆಯಿಂದಲೂ ಶಿವಭಕ್ತರ ಹೃದಯದಿಂದ ಹೊರಹೊಮ್ಮಿ ಅಂತರಾಳದಲ್ಲಿ ವ್ಯಾಪಿಸಿ ಅಜರಾಮರವಾದ "ಓಂ ನಮಃ ಶಿವಾಯ" ಎಂಬ ಸೊಲ್ಲು ಕರ್ಣಪುಟವನ್ನು ಪ್ರವೇಶಿಸಿ ಅಂತಃಕರಣದಲ್ಲಿ ನೆಲೆಯಾಗಿ ನಿಲ್ಲುತ್ತದೆ. ಕರ್ನಾಟಕವ ವಿಸ್ತೀರ್ಣ ಶಾಸನ ಪ್ರಪಂಚದಲ್ಲಿ ಸುಮಾರು ಅರ್ಧದಷ್ಟು ಸಂಖ್ಯೆಯ ಶಾಸನಗಳು ಈ ಮುಂದಿನ ಬಾಣಕವಿ ವಿರಚಿತ ಶಿವಸ್ತುತಿಯಿಂದ ಪ್ರಾರಂಭವಾಗುತ್ತವೆ:

ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ ।
ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ ॥
(ಉತ್ತುಂಗ ಮಸ್ತಕವನ್ನು ಮುದ್ದಿಡುವ ಚಂದ್ರನೆಂಬ ಚಾಮರದಿಂದ ಅಲಂಕೃತನಾದ, ತ್ರೈಲೋಕ್ಯವೆಂಬ ನಗರದ ಆರಂಭಕ್ಕೆ ಆಧಾರ ಸ್ತಂಭನೆನಿಸಿದ ಶಂಭುವಿಗೆ ಪ್ರಣಾಮಗಳು.)

ಈ ಶಂಭುಸ್ತೋತ್ರವೇ ಪ್ರಸ್ತುತ ಲೇಖಕನ ಶಾಸನ ಸಂಶೋಧನ ಮಂದಿರದ ಅಡಿಗಲ್ಲಾಗಿ ಪರಿಣಮಿಸಿದುದು ಒಂದು ಚೋದ್ಯವೇ ಸೈ. ಹಳಗನ್ನಡ ಅಕ್ಷರಗಳಿಂದ ಶಿಲೆಯ ಮೇಲೆ ಕೊರೆದ ಈ ಒಂದು ಶ್ಲೋಕವನ್ನು ಮೊದಲುಬಾರಿ ಓದಲು ಅರಿತು, ಆತನು ‘ಶ್ರೀ ಗಣೇಶಾಯನಮಃ’ ಎಂದು ಶಾಸನಪಾಠಗಳನ್ನು ತಾನಾಗಿ ಕಲಿಯಲು ಪ್ರಾರಂಭಿಸಿದನು.

ಶಿವಮಹಿಮಾಸಂಪೂರಿತವಾದ ಈ ನಾಡಿನಲ್ಲಿ ಕಾಲಕಾಲಕ್ಕೆ ಅನೇಕಾನೇಕ ಶಿವಭಕ್ತರು, ಶೈವತಪಸ್ವಿಗಳು, ಶಿವಯೋಗಿಗಳು, ಶೈವಸಿದ್ಧರು ಬಾಳಿ ಬೆಳಗಿದರು. ಇಂತಹರ ಮಾಲಿಕೆಯಲ್ಲಿ ಮೂರ್ಧನ್ಯನಾದ ಮಹಾನುಭಾವನೊಬ್ಬನ ಕುರಿತು ಕೆಲ ಸಂಗತಿಗಳನ್ನು ಇಲ್ಲಿ ನಿರೂಪಿಸುವೆ.

ಈ ಮಹಾನುಭಾವ ಯಾರೆಂದರೆ ಸಿದ್ಧಾಂತಿ ಕಳೆಶ್ವರ. ಈತ ಪವಾಡಪುರುಷನಾದರೂ ಪೌರಾಣಿಕ ಪಾತ್ರವಲ್ಲ. ಇತಿಹಾಸದ ಸತ್ಯಲೋಕದಲ್ಲಿ ವಿಹರಿಸಿದ ಚಾರಿತ್ರಕ ಸಜೀವವ್ಯಕ್ತಿ.

ಕಳೇಶ್ವರಾಚಾರ್ಯ ಮಹಾಸಿದ್ಧಿಯನ್ನು ಪಡೆದ ಶಿವಯೋಗಿ. ಈತನ ಸಿದ್ಧಿಯ ರಹಸ್ಯವನ್ನು ಮುಂದಿನ ಶಾಸನ ಪದ್ಯವು ಮನೋಜ್ಞವಾಗಿ ಎತ್ತಿಹೇಳುತ್ತದೆ.

ಶಾನ್ತಿಯನಪ್ಪುಕೆಯ್ದು ಶಿವಯೋಗಿ ಜನಸ್ತುತನಾದ ಶೈವಸಿ-।
ದ್ಧಾನ್ತಮನಪ್ಪುಕೆಯ್ದು ಸುಮುನೀಂದ್ರಜನಸ್ತುತನಾದ ಸಾತ್ತ್ವಿಕ-॥
ಸ್ವಾಂತಮನಪ್ಪುಕೆಯ್ದು ಸುಜನಸ್ತುತನಾದ ಕಳೇಶ್ವರಾರ್ಯ ಸೈ-।
ದ್ಧಾಂತಿಕರಾಜ ರಾಜಗುರು ಲೋಕಗುರುತ್ವಮನೆಯ್ದೆ ತಾಳ್ದಿದಂ ॥

ಶೈವಸಿದ್ಧಾಂತದಲ್ಲಿ ಪಾರಂಗತನಾದ ಕಳೇಶ್ವರಾರ್ಯನು ಮುನಿವರರ ಪ್ರಶಂಸೆಗೆ ಪಾತ್ರನಾದನು. ಆ ಸಿದ್ಧಾಂತವನ್ನು ಸಾತ್ವಿಕಭಾವದಿಂದ ಸಾಧನೆಗೆ ತಂದು ಸಜ್ಜನರ ಸ್ತುತಿಯ ವಿಷಯವಾದನು. ಶೈವನಿಷ್ಠೆಯಿಂದ ಶಾನ್ತಿಯನ್ನು ಆಚರಿಸಿ ಶಿವಯೋಗಿಗಳಿಗೆ ಪೂಜಾರ್ಹನಾದನು. ಶೈವಸಿದ್ಧಾಂತಿಗಳಲ್ಲಿ ಶ್ರೇಷ್ಠನಾದ ಈತನು ರಾಜಗುರುವಿನ ಪದವಿಯನ್ನು ಪಡೆದು, ಲೋಕಗುರು ಎಂಬ ಮಾನ್ಯತೆಯನ್ನು ಗಳಿಸಿದನು.

ಕಳೇಶ್ವರನು ಅರಿಯದ ಸಿದ್ಧಾಂತವಾಗಲಿ, ಮಂತ್ರವಾಗಲಿ, ಆಗಮವಾಗಲಿ, ಈ ಭೂತಳದಲ್ಲಿ ಇರಲಿಲ್ಲ. ಆತ ಅರಿವಿನ ಕಣಿ, ಜ್ಞಾನದ ನಿಧಿಯಾಗಿದ್ದನು.

ಅರಿಯದ ಸಿದ್ಧಾಂತಂ ನೆರೆ
ಯರಿಯದ ಮಂತ್ರಂಗಳರಿಯದಾಗಮವೆಳೆಯೊಳು ।
ಪೆರವಿಲ್ಲೆನೆ ನೆರೆದರಿವಿನೊ-
ಳರಿವಿನ ಕಣಿಯೆನಿಸಿದಂ ಕಳೇಶ್ವರದೇವಂ ॥

ಕಳೇಶ್ವರನು ಮಂತ್ರವಿದ್ಯೆಯನ್ನು, ತಂತ್ರವಿದ್ಯೆಯನ್ನು, ಯಂತ್ರವಿದ್ಯೆಯನ್ನು ಅರಿತವನಾಗಿದ್ದನು. ಸಮಸ್ತ ಮಾಂತ್ರಿಕರು, ತಾಂತ್ರಿಕರು, ಯಾಂತ್ರಿಕರು ಕಳೇಶ್ವರನ ಈ ವಿದ್ಯಾವಂತಿಕೆಯನ್ನು ಜ್ಞಾನದ ಪರಿಣತಿಯನ್ನು ಮೆಚ್ಚಿ ಕೊಂಡಾಡುವವರಾಗಿದ್ದರು.

ಸಕಳೋರ್ವರೆ ಮೆಚ್ಚಲು ಮಾಂ-
ತ್ರಿಕ ತಾಂತ್ರಿಕ ಯಾಂತ್ರಿಕರ್ಕಳಂ ಮೆಚ್ಚಿನ ಮಾಂ-।
ತ್ರಿಕನೆನೆ ತಾಂತ್ರಿಕನೆನೆ ಯಾಂ-
ತ್ರಿಕನೆನೆ ಧರೆ ಸೊಗಯಿಪಂ ಕಳೇಶ್ವರದೇವಂ ॥

ಕಳೇಶ್ವರನಿಗೆ ಆಚಾರ್ಯ ಎಂಬ ಪದವಿ ಆತನ ಅಸಾಧಾರಣ ಅರ್ಹತೆಯಿಂದಾಗಿ ಪ್ರಾಪ್ತವಾಗಿತ್ತು. ಆತನು ಸಕಲ ಸನ್ಮತಪ್ರತಿಷ್ಠಾಪಕನೂ ಸಿಂದರಾಜಕುಲದವರಿಗೆ ಶಿಕ್ಷಾದೀಕ್ಷಾಧಿಕಾರಿಯೂ ಶಿವಸಿದ್ಧಾಂತ ಸಂಸ್ಥಾಪಕನೂ ರಾಜಗುರುವೂ ಆಗಿದ್ದನು.

ಆರ್ಯನಖಿಳಪ್ರತಿಷ್ಠಾ-
ಚಾರ್ಯಂ ಸಿಂದಾನ್ವಯಾಯ ಶಿಕ್ಷಾದೀಕ್ಷಾ-।
ಚಾರ್ಯಂ ಶಿವಸಿದ್ಧಾಂತಾ-
ಚಾರ್ಯಂ ಶ್ರೀರಾಜಗುರು ಕಳೇಶ್ವರದೇವಂ ॥

ರಾಜಗುರು ಕಳೇಶ್ವರನಿಗೆ ಲಭಿಸಿದ್ದ ಸರ್ವಜ್ಞನೆಂಬ ಉನ್ನತ ಪ್ರಶಸ್ತಿ ಕೇವಲ ಗೌರವಸೂಚಕವಾಗಲಿ, ಔಪಚಾರಿಕವಾಗಲಿ ಆಗಿರಲಿಲ್ಲ. ಅದು ಅತ್ಯಂತ ಯಥಾರ್ಥವಾದುದು. ಅನೇಕ ಜ್ಞಾನಶಾಖೆಗಳಲ್ಲಿ ತಜ್ಞರೂ ಆ ಆ ಶಾಸ್ತ್ರಗಳಲ್ಲಿ ಪ್ರವೀಣರೂ ಆದ ಪಂಡಿತಮಂಡಲಿ ಹಲವು ವಿಧದಿಂದ ಆತನನ್ನು ಪರೀಕ್ಷಿಸಿ, ಆತನ ಜ್ಞಾನಸಿದ್ಧಿಯನ್ನೂ ಪಾಂಡಿತ್ಯದ ಪ್ರತಿಭೆಯನ್ನೂ ಕಂಡು, ಏಕಮುಖವಾಗಿ ಔಚಿತ್ಯಪೂರ್ವಕ ಸಲ್ಲಿಸಿದ ಕಾಣಿಕೆಯಿದು.

ಆಜ್ಞಾಧರನೆನೆ ಧರೆ ಮಂ-
ತ್ರಜ್ಞಂ ತ್ರೈಕಾಲದರ್ಶಿಯೆನೆ ಧಾರಿಣಿ ವೈ-।
ವಜ್ಞಂ ಶೈವಾಗಮ ಸ-
ರ್ವಜ್ಞಂ ಶ್ರೀರಾಜಗುರು ಕಳೇಶ್ವರದೇವಂ ॥
ತಜ್ಞರ್ ಪರೀಕ್ಷಿಸಲು ಶ-
ಬ್ದಜ್ಞಂ ಶಾಸ್ತ್ರಜ್ಞನಖಿಳತರ್ಕಜ್ಞಂ ಕಾ-।

ವೃಜ್ಞಂ ದೈವಜ್ಞಂ ಸ-
ರ್ಬಜ್ಞಂ ಶ್ರೀರಾಜಗುರು ಕಳೇಶ್ವರದೇವಂ ।

ಇಂತು ತಪಃಸಿದ್ಧನೂ ಜ್ಞಾನಸಿದ್ಧನೂ ಆದವನು ಈ ಶಿವಯೋಗಿ. ಈತನು ನೆನೆದುದೇ ದೈವ, ಉಚ್ಚರಿಸಿದುದೇ ಮಂತ್ರ, ಉದಾಹರಿಸಿದುದೇ ತಂತ್ರ, ಸಮರೇಖೆ ಎಳೆದುದೇ ಯಂತ್ರ, ಅನುಗ್ರಹಿಸಿದುದೇ ಸಿದ್ಧಿ. ಇಂತಹ ಮಹಿಮಾಶಾಲಿ ಈ ಕಳೇಶ್ವರ ಯತಿ. ಯಾವ ಸಿದ್ಧರು, ತಪಸ್ವಿಗಳು ಆತನಿಗೆ ಸರಿಸಮಾನರಾಗಬಲ್ಲರು ?

ನೆನೆದುವೆ ದೆಯ್ವವೆಂದದುವೆ ಮಂತ್ರವುದಾಹರಿಸಿತ್ತೆ ತಂತ್ರವೋ
ಯೆನೆ ಸಮರೇಖೆಗೊಂಡದುವೆ ಯಂತ್ರವನು ಗ್ರಹಿಸಿತ್ತೆ ಸಿದ್ಧಿಯೆಂ-।
ಬನುಪಮಮಾದ ಮೈಮೆಗೆ ತವರ್ಮನೆಯಾದ ಕಳೇಶ್ವರಬ್ರಲೇಂ-
ಪ್ರನ ದೊರೆ ಪಾಟಿ ಪಾಸಟಿ ಸಮಂ ಸರಿಯಾರ್ಗಳ ಸಿದ್ಧತಾಪಸರ್ ॥

ರಾಯಚೂರು ಜಿಲ್ಲೆಯ ಯಲಬರ್ಗಿ ತಾಲೂಕಿನಲ್ಲಿ ಕುಕನೂರೆಂಬ ಗ್ರಾಮವಿದೆ. ಈ ಗ್ರಾಮವೇ ಕಳೇಶ್ವರನ ಕರ್ಮಭೂಮಿ. ಈ ಊರಲ್ಲಿ ಶ್ರೀ ಮಹಾಮಾಯೆಯೆಂಬ ಹೆಸರಾಂತ ದೇವಿಯ ಮಂದಿರವಿದೆ. ಕಳೇಶ್ವರನು ಹನ್ನೆರಡನೆಯ ಶತಮಾನದಲ್ಲಿ ಈ ದೇವಿಯ ಉಪಾಸಕನಾಗಿ ಬಾಳಿದ್ದನು. ಈ ದೇವಿಗೆ ಅಂದು ಜ್ಯೇಷ್ಠಾದೇವಿ ಎಂದು ಕರೆಯುತ್ತಿದ್ದರು.

ಮೇಲೆ ಹೆಸರಿಸಿದ ಯಲಬುರ್ಗಿ ಸಿಂದ ವಂಶದ ಮಹಾಮಂಡಳೇಶ್ವರರ ರಾಜಧಾನಿಯಾಗಿತ್ತು. ಈ ಗ್ರಾಮದ ಅಂದಿನ ಹೆಸರು ಎರಂಬರಗೆ. ಕಳೇಶ್ವರನು ಈ ಸಿಂದವಂಶದ ಅರಸರಿಗೆ ರಾಜಗುರುವಾಗಿದ್ದನು. ಈ ಮನೆತನದ ಪೆರ್ಮಾಡಿ ಮತ್ತು ಚಾವುಂಡ ಎಂಬ ರಾಜರು ಈತನ ವಿಶ್ವಾಸಕ್ಕೆ ಪಾತ್ರರಾಗಿದ್ದರು.

ಕುಕನೂರ ಶ್ರೀ ಮಹಾಮಾಯಾ ದೇವಾಲಯದ ಮುಖಮಂಟಪದಲ್ಲಿ ಅಂದವಾದ ಅಕ್ಷರಗಳಿಂದ ಕೊರೆದ ಒಂದು ಶಿಲಾಶಾಸನವು ನಿಂತಿದೆ. ಈ ಶಾಸನವು ಆ ದೇವಿಯನ್ನೂ ಆ ದೇವೀಭಕ್ತನಾದ ಕಳೇಶ್ವರನನ್ನೂ ಹೃದಯಂಗಮವಾಗಿ ವರ್ಣಿಸುತ್ತದೆ. ಈ ಶಾಸನ ಕಾಲ ಕ್ರಿ.ಶ. ೧೧೭೪. ಈ ಹೊತ್ತಿಗೆ ಕಳೇಶ್ವರ ಮುಪ್ಪಿನ ಮುದುಕನಾಗಿದ್ದನು. ಇಂತಹ ವಯೋವೃದ್ಧ ಪೂಜ್ಯನಿಂದ ಪೂಜಿತಳೆಂದು ಶಾಸನವು ದೇವಿಯನ್ನು ವಿಶೇಷಿಸುತ್ತದೆ. ಇದೊಂದು ಕಳೇಶ್ವರನ ಹಿರಿಮೆ. ಮೇಲೆ ಉದಾಹರಿಸಿದ ಪದ್ಯಗಳು ಈ ಶಾಸನದಲ್ಲಿಯವು.

ತಮ್ಮ ಜೀವನವನ್ನು ಪವಾಡದಂತೆ ರೂಪಿಸಿದ ಈ ಪರಿಯ ಮಹಾವ್ಯಕ್ತಿಗಳು ನಾಡಿಗೊಂದು ಸ್ಫೂರ್ತಿ. ವಿಶೇಷವಾಗಿ, ಅಧ್ಯಾತ್ಮ, ದೇವ, ಧರ್ಮ, ಸದಾಚಾರ, ಸಾಧನೆ, ಇವುಗಳಲ್ಲಿ ನಂಬಿಕೆ ಲೋಪವಾಗುತ್ತಿರುವ ಇಂದಿನ ಸಂಕ್ರಮಣ ಕಾಲದಲ್ಲಿ ಇಂಥ ಸಿದ್ಧಿ ಸಾಧಕರ ಸ್ಮರಣೆ ನಮ್ಮ ಜನಗಳಿಗೆ ತಾರಕವಾಗಲಿ.

———:: ———

# ಅನುಭಾವದ ಮಿಂಚಿನ ಗೊಂಚಲು



ಪ್ರೊ|| ದೇವೇಂದ್ರಕುಮಾರ ಹಕಾರಿ, ಎಂ.ಎ., ಕಲಬುರಗಿ.

ಹನ್ನೆರಡನೆಯ ಶತಮಾನದ ವೀರಶೈವ ವಿಭೂತಿಗಳಲ್ಲಿ ಅಲ್ಲಮಪ್ರಭುದೇವರು ಅಗ್ರಗಣ್ಯರು. ಕಲ್ಯಾಣನಗರದಲ್ಲಿ ನಡೆದ ಅಂದಿನ ಧಾರ್ಮಿಕ ಮತ್ತು ಸಾಹಿತ್ಯಾತ್ಮಕ ಮಹಾಕ್ರಾಂತಿಗೆ ಚೈತನ್ಯಪುರುಷರಾಗಿ ಜ್ಯೋತಿಸ್ವರೂಪರಾಗಿ ಬೆಳಗಿದರು ಅಲ್ಲಮ ಪ್ರಭುಗಳು. ಮಹಾನುಭಾವಿ ಬಸವಣ್ಣನವರು ಹೊಮ್ಮಿದ ಸಕಲ ಜೀವಾತ್ಮರಿಗೆ ಲೇಸಬಯಸುವ ಕಾಯಕ ವಿಶ್ವವಿದ್ಯಾಪೀಠ 'ಅನುಭವಮಂಟಪ'ದ ಉಪಕುಲ ಪತಿಗಳಾಗಿ, ಧರ್ಮ – ಸಾಹಿತ್ಯಗಳ ವಿವೇಚನೆಯ ಪ್ರಕ್ರಿಯೆಗಳಲ್ಲಿ ಸ್ವಾನುಭಾವದ ಬೆಳಕನ್ನು ಚೆಲ್ಲಿ ಎಲ್ಲರ ಸಂದೇಹ ಸಮಸ್ಯೆಗಳಿಗೂ ಪ್ರಾಮಾಣಿಕ ಪರಿಹಾರ ಪ್ರಸಾದವನ್ನು ಕರುಣಿಸಿ, ಮಾನವನಲ್ಲಿ ದೇವಮಾನವತ್ತ್ವದ ನಂಬುಗೆ ಗಟ್ಟಿಗೊಂಡು ನೆಲೆಗೊಳಿಸುವಂತೆ ಪ್ರಯತ್ನಿಸಿ ಅದರಲ್ಲಿ ಸಾರ್ಥಕತೆಹೊಂದಿ, ವಿಶ್ವಧರ್ಮದ ಕೆಲವೇ ಮಹಾವಿಭೂತಿಗಳ ಜೊತೆ ಹೆಸರಿಸಬಹುದಾದ, ಅಂತರಂಗದ ಗುಹೆಯಲ್ಲಿ ಸದಾ ಜ್ಯೋತಿರ್ಲಿಂಗ ಸ್ವರೂಪವಾಗಿರುವ ಈಶ್ವರೀ ಚೈತನ್ಯದ ಕಾರುಣ್ಯ ಪುತ್ರನಾದ, ಈ ಮಹಾನುಭಾವಿಯು ಭಾರತದ ಚಿರಂತನ ಆಸ್ತಿ.

ಸೃಷ್ಟಿಯ ಚರಾಚರವಸ್ತುಗಳಲ್ಲಿ, ಪ್ರಪಂಚದ ಜಡಚೇತನಗಳಲ್ಲಿ ವ್ಯಕ್ತವಾಗುವ ರೂಪರಸ ಗಂಧಾದಿಗಳ ಮಾಧುರ್ಯ ಲಾವಣ್ಯ ಲಾಲಿತ್ಯಗಳಲ್ಲಿ–ಸೌಂದರ್ಯ ಸೊಮ್ಮುಗಳಲ್ಲಿ ಪರಶಿವನ ಚೈತನ್ಯವನ್ನು ಗುರುತಿಸಿದ ಅಲ್ಲಮಪ್ರಭು ಮೊದಲಿಂದ ಕೊನೆಯವರೆಗೂ ಬದುಕಿನಲ್ಲಿ ಅಪಾರವಾದ ಶ್ರದ್ಧೆ ವಿಶ್ವಾಸಗಳನ್ನು ಮೆರೆಯಿಸುತ್ತಾನೆ. ಕನ್ನಡ ನಾಡಿನ ನೆಲದ ಪುಣ್ಯವೆನ್ನಬೇಕು. ಮಹಾತ್ಮರು, ಮಹಾನುಭಾವಿಗಳು ಅವತರಿಸುವುದು ರಾಷ್ಟ್ರದ ಸುಕೃತಿಯಿಂದ, ಸುದೈವದಿಂದಲೇ ಅಲ್ಲವೇ? ಆದುದರಿಂದ ಅಲ್ಲಯ್ಯನ

ಹುಟ್ಟು ಎಂದರೆ ಅದು ಶಿವಯೋಗದ, ಶಿವಾನುಭಾವದ ಪ್ರತಿಸೃಷ್ಟಿ. ನಾಡಿನ ಜನುಮ ಜನುಮಗಳ ಸತ್ಯ ಸಂಕಲ್ಪದ ಕಲ್ಯಾಣಸಾಧನೆಯ ಸಿದ್ಧಿ. ದಿವ್ಯಕಲಾ ಪರಿಣತನಾದ ಪ್ರಭುದೇವನು ನಾದಶಿವನಾಗಿ ಮೃದಂಗ ನುಡಿಸುವುದರಲ್ಲಿ ಸಿದ್ಧಿಯ ಕೈಲಾಸ ಶೃಂಗವನ್ನೆ ತಲುಪುತ್ತಾನೆ. ಪರಮೇಶ್ವರನಲ್ಲಿ ಅನನ್ಯ ಶ್ರದ್ಧೆಯನ್ನು-ಬೆಳೆಸಿಕೊಂಡ ಪ್ರಭು ಬನವಸೆಯ ಮಧುಕೇಶ್ವರನ ದೇವಾಲಯದ ಎದುರು, ಮಧುಕೇಶ್ವರನ ಪವಿತ್ರ ಪಾದಾರವಿಂದಗಳಲ್ಲಿ ತನ್ನ ಮೃದಂಗದ 'ತಾಕಿಟ,' ಆ ತಾಕಿಟದ ಲಲಿತ ಮಧುರ ರಸಾಭಿಷೇಕವು ಅರ್ಪಿತವಾಗಲಿ ಎಂದು ಬಾರಿಸುತ್ತಾನೆ. ಬನವಸೆಯ ದೊರೆಯ ಮಗಳು ಮಾಯೆ, ನಾದ ಮಾಧುರ್ಯಕ್ಕೆ ಮಾರುಹೋಗಿ ಅಲ್ಲಯ್ಯನನ್ನು ಗುರುವೆಂದು ಸ್ವೀಕರಿಸುತ್ತಾಳೆ. ರಾಜೋಪ ಭೋಗಗಳ ಮಧ್ಯದಲ್ಲಿ ತನಗೆ ಅರ್ಪಿತ ವಾಗಬಂದ ಮಾಯಾದೇವಿಯ ಹೊಚ್ಚ ಹೊಸ ಸೌಂದರ್ಯರಾಶಿಯಲ್ಲಿ ಶಿವನ ಕೈಯಲಗಿನ ತೇಜದ ಹೊಳಪನ್ನು ಕಂಡ ಪ್ರಭುದೇವ ಸಂಸಾರದ ಸತ್ಯ ಸ್ವರೂಪವನ್ನು ಮಾಯೆಗೆ ತಿಳಿಸಿ ಅರಮನೆಯಿಂದ ಹೊರಟು (ಗುರುಮನೆಗೆ) ಬರುತ್ತಾನೆ. ಆಸರೆಯಿಲ್ಲದ ಹಸೂಗೂಸಿನಂತಿದ್ದ ಅಲ್ಲಮಪ್ರಭು ಅನಿಮಿಷಯ್ಯಗಳಂತಹ ದಿವ್ಯ ಗುರುಗಳ ಕೃಪಾಪಾತ್ರನಾಗಿ ಜೀವನದ ಸಾಮರ್ಥ್ಯವನ್ನು-ಆಳ ಗಾಂಭೀರ್ಯವನ್ನು ಅದನ್ನಾಳುವ ಚೈತನ್ಯ ಶಕ್ತಿಯನ್ನು ಕುರಿತು ವಿಚಾರವಾದಿಯಾಗಿ ತಾರ್ಕಿಕನಾಗಿ ವಿವೇಚಿಸುತ್ತಾನೆ. ಕಾಲಾನುಕ್ರಮದಲ್ಲಿ ವಿವೇಚನೆ ಚರ್ಚೆ, ತರ್ಕಗಳ ಸೀಮೆ ಮುಗಿದು ಅನುಭಾವದ ಬಯಲಲ್ಲಿ ಅಡಿಯಿರಿಸುತ್ತಾನೆ. ಅನಿಮಿಷಯ್ಯ ಗುರುಗಳಿಂದ ದೀಕ್ಷಾಬದ್ಧರಾದ ಪ್ರಭುದೇವರು ಇಷ್ಟಲಿಂಗದಲ್ಲಿ ಗುಹೇಶ್ವರನ ತೇಜವನ್ನು ದರ್ಶಿಸಿ ಲಿಂಗಾಂಗ ಸಾಮರಸ್ಯ ಪರಿಪೂರ್ಣರಾಗಿ ಶಿವಾನುಭಾವದ – ಶಿವಯೋಗದ ಸಹಜಲೀಲೆಯಲ್ಲಿ ಅನಂತ ದೇಶಕಾಲಗಳಲ್ಲಿ ವಿಹರಿಸುತ್ತಾರೆ. ಮಹಾನುಭಾವಿ ಬಸವಣ್ಣ ಮೊದಲಾದ ಶಿವಶರಣ ಶರಣೆಯರು ನಿರ್ಮಿಸಿದ ಅನುಭವಮಂಟಪದ ಶೂನ್ಯಸಿಂಹಾಸನಾಧೀಶ್ವರರಾದರು. ಅನುಭವ ಮಂಟಪದ ಪೀಠವನ್ನು ಅಲ್ಲಮಪ್ರಭುಗಳು ಅಲಂಕರಿಸಿದುದು ವಿಶ್ವದ ಧಾರ್ಮಿಕ ಚರಿತ್ರೆಗಳಲ್ಲಿಯೇ ಅದ್ವಿತೀಯವಾಗಿದ್ದು, ಸಂಕೇತ ಪೂರ್ಣವಾಗಿದೆ. ಅನುಭವ ಮಂಟಪದ ಶಿವಶರಣರ ಸಮ್ಮುಖದಲ್ಲಿ ಅಲ್ಲಮಪ್ರಭುಗಳು ಬಂದಾಗ ಬಸವಣ್ಣನವರೇ ಆದಿಯಾದ ಮಹಾನುಭಾವಿಗಳಲ್ಲಿ ಮೂಡಿದ ಭಾವನೆಗಳು ಉಲ್ಲೇಖನಾರ್ಹವಾದವುಗಳು. ಪ್ರಭುದೇವರ ವ್ಯಕ್ತಿತ್ತ್ವದ ಹಿರಿಮೆಗೆ ತಲೆಬಾಗಿ ಹರುಷದಿಂದ ಓಲಾಡಿದರು, ಆನಂದ ಪುಲಕಿತರಾಗಿ ಸ್ತುತಿಗೈದಿದ್ದಾರೆ, ಆತನ ತೇಜವನ್ನು ಕಣ್ಣಾರೆ ಕಂಡು, ಮನವಾರೆ ನೆನೆದು ಕೃತಾರ್ಥರಾಗಿದ್ದಾರೆ.

ಭಕ್ತಿಯ ನಿಚ್ಚಿರಗಿನಲ್ಲಿ ನಿಂದ ಬಸವಣ್ಣನವರು ಪ್ರಭುದೇವರನ್ನು ಕಂಡಾಗ ಅವರ ಅನುಭವ ರುದ್ರರಮಣೀಯತೆಯಲ್ಲಿ ಸೆರೆಓತ ಲಲಿತ ಮಾಧುರ್ಯವಾಗಿದೆ : "ಹರಿಗೊಯಿದ ಮಿಂಚಿನ ಗೊಂಚಲ ನೆರೆಓತೂ ಇಂದು ಕೋಟಿ ಪ್ರಳಯ

ಕಾಂತಿಯನೊಳಕೊಂಡತೆ ಕೂಡಲ ಸಂಗಮದೇವರ ನೆರೆಓತೂ ಪ್ರಭುದೇವರ ಶ್ರೀಪಾದ ಪದ್ಮದಲ್ಲಿ ಭೃಂಗವಾಗಿ ಬದುಕಿದೆನು." ತೆರೆತೆರೆಯಾಗಿ ನೆಲ ಮುಗಿಲನಪ್ಪುವ ಅಗಣಿತ ಮಿಂಚಿನ ಗೊಂಚಲಗಳು ಕೋಟಿ ಕೋಟಿ ಪ್ರಳಯಕಾಂತಿಯು ಓಜೋ ನಿಚಯಗಳು ಬಯಲನು ಒಳಕೊಂಡಿದೆ-ಬಗೆಯು ಇಂಬುತುಂಬಿದೆ. ಆ ಮಿಂಚಿನ ತೇಜೋನಿಚಯದ ತೆರೆತೆರೆಗಳಲ್ಲಿ ತೇಲಿಬಂದ ವ್ಯಕ್ತಿ ಪ್ರಭುದೇವ. ಹೆಜ್ಜೆಯೇ? ಕಾಣುವುದಿಲ್ಲ. 'ನಡೆದರೆ ನೆರಳಿಲ್ಲ!' ಅವರ ಅಡಿಯಿಂದ ಮುಡಿವರೆಗೂ ಬೆಳಕಾಗಿ ಬಂದ ಕಾಯದ ಚರಣಗಳು ಶುಭ್ರ ನಿರ್ಮಲಿನ ಜೆಳ್ಜಸದ ತಾವರೆಗಳು-ಅದರಲ್ಲಿ ತಾನೊಂದು ಭೃಂಗವಾಗಿ ಬದುಕಿದರೂ ಸರಿ-ಸಾರ್ಥಕ.

ಕಾವ್ಯಮಯವಾದ ಈ ಭಾವಾಭಿವ್ಯಕ್ತಿ ಭಕ್ತಿಪ್ರಿಯ ಬಸವಣ್ಣನವರ ವಿಕಸಿತ ಸೌಜನ್ಯದ ಸಂಕೇತವಾಗಿದೆ.

ಜ್ಞಾನದ ಪ್ರಭಾವಲಯದಲ್ಲಿ ತನ್ಮಯನಾದ ಚೆನ್ನಬಸವಣ್ಣನ ಅನುಭಾವದ ನೆಲೆ ನೋಡಿ :

"....ಥಳಥಳನೆ ಹೊಳೆವ ಮಾಣಿಕ್ಯದ ಬೆಳಗು...."
"....ಕರವಮೃತ ಕರಕಿರಣ ಸಮ್ಯಗ್ಜ್ಯೋತಿಯು...."

ಬುದ್ಧಿಯ ತೂಕವನ್ನು ಅಳವಡಿಸಿಕೊಂಡ ಸಮರಸ ಸಮ್ಯಜ್ಞಾನಿ ಚೆನ್ನಬಸವಣ್ಣನ ಈ ನಿಲವು ದರ್ಶನದ ಕುರುಹು.

ಕರದಲ್ಲಿ ನೆಲೆಗೊಂಡ ಇಷ್ಟಲಿಂಗದಲ್ಲಿ ಅಡಗಿರುವ ಗುರುವಿನ ಚಿತ್ಕಳೆ ಅಮೃತ ಕಿರಣಗಳಿಂದ ಸಮನಿಸಿದ ಸಮ್ಯಕ್‌ಜ್ಯೋತಿ. ಬ್ರಹ್ಮರಂಧ್ರದಲ್ಲಿ ವಿಕಸಿಸುವ ಸಹಸ್ರಾರು ದಳಕಮಲದ-ಹೊಂಬಣ್ಣದ-ಮಾಣಿಕ್ಯದ ಬೆಳಗು! ಬೆಳಕೇನು? ಅಹುದು ಬೆಳಕು. ಆದರೆ ಬರಿಯ ಬೆಳಕಲ್ಲ. ಬೆಳಕನೊಳಗೊಂಡು ಬರುವ ಬೆಳಗು. ಸಮ್ಯಕ್‌ಜ್ಯೋತಿಯ ಉದಯ. ಅದು ಪ್ರಭುದೇವರು. ಸಾಹಿತ್ಯಶಾಸ್ತ್ರದ ಸಾಮಾನ್ಯವಾದ ರೂಪಕ, ಅನುಭಾವಸಂವೇದನೆಯ ತೀಕ್ಷ್ಣತೆಗೆ ತತ್ತರಿಸಿ ಹೋಗುತ್ತವೆ.

ಪ್ರಸನ್ನಹೃದಯಿಯೂ ಪರಮ ಪ್ರಸಾದಿಯೂ ಆದ ಮರುಳ ಶಂಕರದೇವರ ಭಾವ ಪ್ರಶಾಂತವಾದುದು.

"ನಿತ್ಯ ನಿರಂಜನ ಪರಂಜ್ಯೋತಿ ಪ್ರಕಾಶವಾಯಿತ್ತು.
ಶುದ್ಧ ಸಿದ್ಧ ಪ್ರಸನ್ನ ಪ್ರಭುವೆ ಶಾಂತ ಮಲ್ಲಿಕಾರ್ಜುನ
ದೇವಯ್ಯ ಪ್ರಭುದೇವರ ಕಾರುಣ್ಯದಿಂದ ಬದುಕಿದೆನು."

ನಿತ್ಯ ಪ್ರಸಾದಿಯಾದ ಮರುಳ ಶಂಕರದೇವ ಜ್ಯೋತಿಸ್ವರೂಪನಾದ ಪ್ರಭುದೇವರಲ್ಲಿ ಕರುಣೆಯ ಪ್ರಸಾದಕ್ಕಾಗಿ ತಮ್ಮ ಬಗೆಯ ಬಟ್ಟಲು ಒಡ್ಡಿದ್ದಾರೆ.

ಅಂತಃಕರಣವಲ್ಲಿರುವ ಮಾಯಾಂಬರದ ವೈಲಿಗೆ ತೊಳೆಯುವ ಕಾಯಕ ಕೈಕೊಂಡ ಮಡಿವಳ ಮಾಚಿದೇವ ತಂದೆ ವಿನಯ ಕೈಕಂಕರ್ಯಗಳ ಕೂಸಾಗಿ ಅಂಬೆ ಗಾಲಿಡುತ್ತಾನೆ ಪ್ರಭುದೇವರ ಸಮ್ಮುಖದಲ್ಲಿ :

" ನೀನುಟ್ಟ ಬಿಳಿದುಡಿಗೆಯ ಚೆನ್ನಬಸವಣ್ಣನ ಕೈಯಲ್ಲಿ ನಿರಾಳವ ನೆನೆಗೆ ಕೊಡಿಸಾ ಪ್ರಭುವೆ" ಎನ್ನುತ್ತಾನೆ. ಪ್ರಭುದೇವನಿಂದ ಅರಿವಿನ ಒಳ ಬೆಳಗು ಕಂಡ ಮಹಾತ್ಮ ಮಾಚಿದೇವರು ನೇರವಾಗಿ ಪ್ರಭುದೇವರನ್ನು ಕೇಳುವ ಅಥವಾ ಏನಾದರೂ ಹೇಳುವ ಅನುಭಾವ ಸಂವೇದನೆಯ ತೀಕ್ಷ್ಣತೆಯ ಅವಜ್ಞೆಯನ್ನು ಆತುರತೆಯನ್ನು ತೋರುವುದಿಲ್ಲ. ಅಂತಹ ಸಲುಗೆ ತನಗೇಕೆ ? ತನಗೆ ಸಲುಗೆ ಚೆನ್ನಬಸವಣ್ಣನವರಲ್ಲಿ. ಚೆನ್ನಬಸವಣ್ಣ ತುಂಬ ಆತ್ಮೀಯನಾಗಿದ್ದಾನೆ. ಆತನೊಡನೆ ತಾನು ಎಷ್ಟೋಸಲ ವಿವಿಧ ವಿಷಯಗಳನ್ನು ಚರ್ಚಿಸಿದ್ದುಂಟು, ವಾದಿಸಿದ್ದುಂಟು, ಕೇಳಿ ತಿಳಿದುದುಂಟು. ಅರಿವಿಗೆ ಕೊನೆಯಿದಿಯೆ ? ಆದರೆ ಈಗ ಅಂತಹ ಅರಿವಿನ ಬಿಳಿಯುಡಿಗೆ ಯುಟ್ಟ ಪ್ರಳಯರಹಿತ ದಿವ್ಯವ್ಯೋಮ ಕಾಯವೇ ಎದುರಿಗೆ ಬಂದಿದೆ-ಬೆಳಕೇ ತನ್ನ ಬಗೆಯ ಬಾಗಿಲಿಗೆ ಬಂದಿದೆ. ಆ ಬಿಳಿಯುಡಿಗೆ ತನಗೆಬೇಕು-ತನ್ನ ಅಂತರಂಗದ ಈ ಮಹಾಭಿಲಾಷೆಯನ್ನು ಹೇಗೆ ವ್ಯಕ್ತಗೊಳಿಸುವುದು. ಸರಿ. ಚೆನ್ನಬಸವಣ್ಣನವರ ಮೂಲಕ ತನಗೆ ಬರಲಿ–ಪ್ರಭುದೇವರ ಆ ನಿರಾಳ ಬಿಳಿಯುಡಿಗೆ !

ಸೊನ್ನಲಾಪುರದಲ್ಲಿ ಕರ್ಮಯೋಗದಲ್ಲಿ ನಿರತನಾದ ಸಿದ್ಧರಾಮನ ಅರಿವಿಗೆ ಅಂಜನವನಿತ್ತ ಪ್ರಭುದೇವರನ್ನು ಕುರಿತಾದ ಸಿದ್ಧರಾಮನ ಅನುಭಾವದಲ್ಲಿ ಶಿಶುಸಹಜ ವಾದ ಮುಗ್ಧತೆಯ ಜೊತೆಗೆ ವಜ್ರಕಠಿಣ ಪ್ರಖರತೆಯೂ ಮೂಡಿಬರುತ್ತದೆ.

"ಶತಕೋಟಿ ಸೂರ್ಯರು ನಿಮ್ಮ ಬೆಳಗ ಕಾಣಲರಿಯರು" ಎಂದು ಕೊಂಡಾಡಿ ಧನ್ಯನಾಗುತ್ತಾನೆ. ಶತಕೋಟಿ ಸೂರ್ಯರು ಸಹ ಕಾಣಲು ಅಸಾಧ್ಯವಾದ ಪ್ರಭು ದೇವನ ತೇಜಃಪುಂಜ ಪುಣ್ಯಸ್ವರೂಪವನ್ನು ಕಂಡ ಸಿದ್ಧರಾಮನ ಅನುಭಾವದ ಪರಿ ಯನ್ನು 'ಅಂತಿಂತುಂತೆನಲ್ ಬರ್ಕುಮೇ ?'

ಹೀಗೆ ಕಲ್ಯಾಣವೆಂಬ ಪ್ರಣತಿಗೆ ಜ್ಯೋತಿಯಾದ ಪ್ರಭುದೇವರು ಅಲ್ಲಿಯ ಶರಣರ ಜೊತೆಗೆ ಅನುಭವ ಮಂಟದ ಶೂನ್ಯಸಿಂಹಾಸನದಲ್ಲಿ ಕುಳಿತು, ಕಾಯಕ ನಿಷ್ಠರಾದವರ ಬಳಿ ಹೋಗಿ, ಸಂಶಯಗ್ರಸ್ತರ ಹತ್ತಿರ ವಿವೇಚಿಸಿ ಎಲ್ಲರನ್ನೂ ಸರಿಯಾದ ಹಾದಿಯಲ್ಲಿ ನಡೆಸಿದ್ದಾರೆ.

ಅನುಭವಮಂಟಪದಲ್ಲಿ ದಿನಾಗಲೂ, ಜೀವನದ ಜಟಿಲ ಸಮಸ್ಯೆಗೆ, ವ್ಯಾವ ಹಾರಿಕ ಕಟುವೇದನೆಗಳಿಗೆ, ಮತ ಪ್ರಕ್ರಿಯೆಗಳ ವಾದವಿವಾದಗಳಿಗೆ ಕಾಯಕ ತತ್ವ ಸಮರ್ಥನೆಗೆ ಎಲ್ಲ ಪ್ರಶ್ನೆಗಳಿಗೂ ದೀರ್ಘವಾದ ಅನುಭಾವದ ಚೇತನಾತ್ಮಕ ಪರಿವರ್ತ ನೆಯ ಸಂಕೇತವಾಗಿ ಚರ್ಚೆ ನಡೆದೇ ನಡೆಯಬೇಕು. ಅಂಗ, ಲಿಂಗ, ಪ್ರಾಣ,

ಪ್ರಪಂಚ, ಕಾಮ, ಅರ್ಥ, ಅರಿವು, ಐಕ್ಯ ಎಲ್ಲ ವಿಷಯಗಳನ್ನು ಕುರಿತಾದ ಅನುಭಾವ ನಿರೂಪಣೆಗೆ ಕೊನೆಯ ತೀರ್ಮಾನ ಪ್ರಭುದೇವರಿಂದ. ಕೊನೆಯ ಪರಿಹಾರ ಪ್ರಭುದೇವರಿಂದ. ಈ ಸತ್ಯ ಪ್ರಭುದೇವರ ವಚನಗಳಲ್ಲಿ ಪರಿಸ್ಫುಟವಾಗಿದೆ. ಅವರ ಅನುಭಾವದಲ್ಲಿ ತೀಕ್ಷ್ಣತೆಯ ಜೊತೆ ವೈಚಾರಿಕ ಪ್ರಖರತೆ ಮೂಡಿಬರುತ್ತದೆ. ಜಲಪಾತದ ಅನಿರ್ಬಂಧ ಪ್ರವಾಹದಂತಹ ಆಲೋಚನೆಯ ಜೊತೆಗೆ ದರ್ಶನದ ವಿದ್ಯುತ್ತು ಮಿಂಚಿ ಬರುತ್ತದೆ.

ಅನುಭಾವದ ಪಾರಜವನ್ನು ಎಲ್ಲರಲ್ಲಿ ಹರಿದಾಡಿಸಿ ಅವರ ಕಣ್ಣಿಗೆ ಅರಿವಿನ ಅಂಜನವನ್ನಿತ್ತು ಮಿಂಚಿನ ಗೊಂಚಲಾಗಿ ಬಿತ್ತರಗೊಂಡ ಪ್ರಭುದೇವರು ಸಹಜವಾಗಿ ಕರುಣಾಪರಿಪೂರ್ಣರು. ಯಾರ ಜೊತೆಗೆ ಅವರು ಚರ್ಚಿಸಿದರೂ ತಮ್ಮ ಹಿರಿಮೆಯನ್ನು ಮೆರೆಯಿಸುವುದಕ್ಕಲ್ಲ; ಜೊತೆಗಿದ್ದ ಶರಣನ ಅಥವಾ ಶರಣೆಯ ಅನುಭಾವದ ಆಳವನ್ನು ನಿಲವಿನ ನಿಬ್ಬೆರಗನ್ನು ಕಂಡುಕೊಳ್ಳಲು, ಕಂಡು ಆನಂದಪರವಶರಾಗಲು, ತಿಳಿದು ರೋಮಾಂಚಿತರಾಗಿ ಬಿಚ್ಚುಮನಸ್ಸಿನಿಂದ ಮೆಚ್ಚಿಕೊಳ್ಳಲು.

ಶೂನ್ಯ ಸಂಪಾದನೆಯಲ್ಲಿ ಬರುವ ಮುಕ್ತಾಯಕ್ಕಗಳ ಸಂಪಾದನೆಯನ್ನು ಸೂಕ್ಷ್ಮವಾಗಿ ಇಲ್ಲಿ ಉದಹರಿಸಬಹುದು.

ಅಜಗಣ್ಣ-ಮುಕ್ತಾಯಿ – ಅಣ್ಣ-ತಂಗಿ ! ಒಡನೊಡನೆ ಕೂಡಿ ಬೆಳೆದ ಈ ಅಣ್ಣ ತಂಗಿಯರು ಕನ್ನಡ ಸಾರಸ್ವತ ಪ್ರಪಂಚದಲ್ಲಿ ತಮ್ಮ ಮಧುರ ಮೈತ್ರಿಗಾಗಿ – ಬಂಧುರ ಸ್ನೇಹದಿಂದಾಗಿ–ಗುರು ಶಿಷ್ಯೆಯರ ಮೃದುಲಸಂಬಂಧದಿಂದಾಗಿ ಚಿರಂತನರು. ಅಜಗಣ್ಣನಲ್ಲಿ ಭಕ್ತಿ ಹುಟ್ಟಿನ ಜೊತೆಗೆ ಕೂಡಿಬಂದುದು. ಮನುಷ್ಯನಿಗಿರುವ ಉಸಿರು ಹೇಗೆ ಸಹಜವಾದುದು ಹಾಗೆಯೇ ಭಕ್ತಿ ಅಜಗಣ್ಣನ ಇರುವಿಕೆಯ ಸಹಜ ಕುರುಹಾಗಿತ್ತು. ಆತನ ಬಗ್ಗೆ ವಿಶೇಷ ಉಲ್ಲೇಖಗಳು ದೊರಕದಿದ್ದರೂ ಅಜಗಣ್ಣ ಮೌನಿ. ಮೂಕ ಭಕ್ತ. ತನ್ನ ಭಕ್ತಿ ತನ್ನ ಬದುಕನ್ನು ಕಲ್ಯಾಣಪ್ರದವನ್ನಾಗಿ ಮಾಡಿತು – ಅಷ್ಟೇ ಅದಕ್ಕೆ ಸಾರ್ಥಕ್ಯ. ಹೂ ಅರಳಿದೆ. ಹತ್ತು ಜನರಿಗೆ ಹೂವೇ ಕಾಣಬೇಕಿಲ್ಲ. ಎಲೆ ಮರೆಗಿದೆ. ಪರಿಮಳ ಮುಂದಮುಂದವಾಗಿ ಬಿತ್ತರಿಸಿ ಸುಳಿಯುತ್ತಿದೆ. ಅಂತಹ ಬದುಕು. ಸ್ನೇಹಮಯಿಯಾಗಿ, ತನ್ನ ಪ್ರೀತಿ, ವಿಶ್ವಾಸ, ನಂಬುಗೆ ಸಾಧನೆಗಳಲ್ಲಿ ಪಾಲುಗಾರಳಾದ ತನ್ನ ತಂಗಿ ಮುಕ್ತಾಯಕ್ಕನನ್ನು ಕಂಡ ಅಜಗಣ್ಣ ತಂಗಿಗೆ ಭಕ್ತಿಯನ್ನು–ಅದರ ಗರಗಸಪಥವನ್ನು, ಅರಿವನ್ನು ಅದರ ಆಳನನ್ನು–ಕರುಣೆಯಿಂದ ಕಲಿಸುತ್ತಾನೆ, ಆಕೆಯ ಅನುಭಾವಕ್ಕೆ ಅದು ಸಮನಿಸುವಂತೆ ಮಾಡುತ್ತಾನೆ.

ನಿಷ್ಠೆಯಿಂದ, ಸಾವಧಾನದಿಂದ ಅಣ್ಣನೇ ಗುರುವೆಂದು ಮುಕ್ತಾಯಿ ಅರಿಯುತ್ತಾಳೆ. ಅಣ್ಣನೇ ಗುರುವೆಂದು ಅಂಗೀಕರಿಸುತ್ತಾಳೆ. ಸಮಶೀಲ ಸಮತೋಲ ಸುಪ್ರಸನ್ನಚಿತ್ತಳಾಗಿ ತನ್ನ ಗುರುವನ್ನು ಅನನ್ಯ ನಂಬುಗೆಯಿಂದ ಅನುಸರಿಸುತ್ತಾಳೆ. ಅನುಭಾವದ ತೇಜೋವಲಯದಲ್ಲಿ ದಾಂಗುಡಿಯಿಟ್ಟ, ಒಂದೇ ಮಿಂಚಿನ ಲತೆಯ

ಎರಡು ಕುಡಿಗಳಂತಿದ್ದ, ಅಜಗಣ್ಣ ಮುಕ್ತಾಯಕ್ಕ, ವ್ಯಷ್ಟಿಜೀವನದ ಸೀಮಾರೇಖೆಯನ್ನು ದಾಟ ಸಮಷ್ಟಿಜೀವನದ ವಿಸ್ತಾರದಲ್ಲಿ ಅಡಿಯಿರಿಸಬೇಕಾಗಿತ್ತು. ಆದರೇನು? ಪ್ರಕೃತಿಯ ನಿಯಮವನ್ನು ಮೀರಿದವರು ಯಾರಿದ್ದಾರೆ? ಅಜಗಣ್ಣ ಶಿವನಿಗೆ ಬಹು ಬೇಗ ಪ್ರಿಯನಾದನು. ಲಿಂಗೈಕ್ಯನಾದನು. ಜ್ಞಾನಿಯಾದ ಮುಕ್ತಾಯಕ್ಕನಿಗೂ ಸಹ ಈ ಅಕಾಲಿಕ ವಿಯೋಗ ಸಹಿಸಲಾಗದ ಆಘಾತವಾಗುತ್ತದೆ.

ಅಯ್ಯೋ ಅಜಗಣ್ಣ! ನನ್ನ ಅಣ್ಣ! ನನ್ನ ಗುರುವೇ! ಎಂದು ದುಃಖಾತಿಶಯದಿಂದ ಭಾವತಪ್ತಳಾಗುತ್ತಾಳೆ. ಸಮಾಧಾನದ ಲವಲೇಶವೂ ದೊರಕುವಂತಿಲ್ಲ. ಇನ್ನು ತನಗೆ ಮಾರ್ಗದರ್ಶನ ಮಾಡುವವರು ಯಾರು? ಅನುಭಾವದ ನೆಲೆಯ ತಿಳುಹಿ ಕೊಡುವವರು ಯಾರು? ಈ ಲೋಕವೋ, ತುಂಬ ಕ್ರೂರವಾಗಿದೆ. ಅರಿವನ್ನೇ ಆಗಿಯುತ್ತಿದೆ. ಅಜಗಣ್ಣ ಅಗಲಿದರೆ ಎಂತಹ ವೇದನೆ. ಜಗತ್ತಿನಲ್ಲಿ ಅರಿವು ಇಲ್ಲ. ಲೋಕವೆಲ್ಲ ಅದಿಲ್ಲದೆ ಕೆಡುತ್ತಿದೆ. ಇಂತಹುದರಲ್ಲಿ:

"ನಾನೆಂತು ಬದುಕುವೆನಣ್ಣಾ. ಕತ್ತಲೆ ಬೆಳಗ ಕಾಂಬ ಸಂದೇಹಿ ನಾನು" ನನಗಿನ್ನೂ ಸಂದೇಹ ಸೂತಕವಳಿದಿಲ್ಲ. ಇನ್ನು ಏನು ಮಾಡುವುದು. ನಿನ್ನ ಪರಿ ನಿನ್ನ ಯೋಗದ ಪರಿ ಎಷ್ಟು ವಿಚಿತ್ರ.

"ಎನ್ನ ಕಣ್ಣಕಟ್ಟಿ ಕನ್ನಡಿಯ ತೋರಿತ್ತು ಅಜಗಣ್ಣ ನಿನ್ನ ಯೋಗ."

"ಒಳಬೆಳಗಿನ ಸ್ವೈರೆಗಿನಲ್ಲಿ ನಿಜದ ನಿಲವನರಹುವ – ಅಂತರಂಗದಲ್ಲಿ ಅನಂತ ಶಾಂತಿಯ ಅನಂತ ಆನಂದದ ನಿರವಯವನ್ನು ನೆಲೆಗೊಳಿಸುತ್ತಿದ್ದ ನಿನ್ನ ರೀತಿ ಎಷ್ಟು ವಿನೂತನವಾಗಿತ್ತು! ಅದು ಕುರುಡನ ಕೈಯ ಕುರುಡ ಹಿಡಿದಂತೆ. ಮೂಗನ ಕೈಯಲ್ಲಿ ಕಾವ್ಯವನ್ನು ಕೇಳಿದಂತೆ. ನಿನ್ನ ಕಾಯ ಸ್ಫಟಿಕದಂತೆ; ನಿನ್ನ ಅರಿವು ಜ್ಯೋತಿಯಂತೆ. ಅಯ್ಯೋ, ನಾನೇನು ಮಾಡಲಿ? ಹೇಗೆ ಮಾಡಲಿ" ಎಂದು ಪ್ರಲಾಪಿಸುತ್ತಿರುತ್ತಾಳೆ. ಅಜಗಣ್ಣನು 'ನಿರವಯ ಪದದಲ್ಲಿ ನಿಜವನೈದಿ'ದ ಸಂಗತಿ ತಿಳಿದು ಪ್ರಭುದೇವರು ಅಲ್ಲಿಗೆ ಬರುತ್ತಾರೆ. ವಿಕಳಾವಸ್ಥೆಯ ಪ್ರಲಾಪದಲ್ಲೂ ಪ್ರಜ್ವಲಿಸಿ ಬಂದ ಮುಕ್ತಾಯಕ್ಕಗಳ ಅನುಭಾವತೇಜ ಪ್ರಭುದೇವರನ್ನು ಗಂಭೀರಪ್ರದರನ್ನಾಗಿಸುತ್ತದೆ. ಅವರು ನಂದಪುಲಕಿತರಾಗುತ್ತಾರೆ. ಆದರೂ ಈ ಪ್ರಲಾಪವೇಕೆ? ವ್ಯಾಮೋಹ ಕಳೆದಿಲ್ಲವೇ? ಸಾವು ಹುಟ್ಟಿನ ಸೀಮೆಯ ನೆಲೆಯನರಿತಿಲ್ಲವೇ?

"ಅಂಗೈಯೊಳಗೊಂದು ಅರಳ್ದ ತಲೆಯ ಹಿಡಿದುಕೊಂಡು ಕಂಗಳ ಮುತ್ತು ಪವಣಿಸುವಾಕೆ ನೀನಾರು ಹೇಳಾ; ಸಂಪ ಸಂಪಿಗೆಯುರಳ್ಗೆ ತುಂಬಿ ಬಂದುಂಬ ಭೇದವನರಿಯದೆ ಹಂಬಲಿಸುವ ಪರಿತಾಪವೇನು ಹೇಳಾ? ಒಂದೆಂಬೆನೆ ಎರಡಾಗಿದೆ. ಎರಡೆಂಬೆನೆ ಒಂದಾಗಿದೆ. ಅರಿವಿನೊಳಗಣ ಮರಹಿದೇನು ಹೇಳಾ? ದುಃಖವಿಲ್ಲದು

ದಕ್ಕೆ ಅಕ್ಕೆ ಇಲ್ಲದನುತಾಪ ನಮ್ಮ ಗುಹೇಶ್ವರ ಲಿಂಗದಲ್ಲಿ ತೋರುತ್ತಿದೆ. ನೀನಾರು ಹೇಳಾ ಎಲೆ ಅವ್ವಾ ?"

ಅಜಗಣ್ಣನೆಂದರೆ ಅದೊಂದು ಅರಿವಿನ ಬಿರಿದ ಅರಳು. ಅರಳಿದ ಅರಿವು ಆತನ ವಿಯೋಗ. ಅದಕ್ಕೆ ದುಃಖವೇ ? ಅವೊಂದು ಅರಳಿದ ಸಂಪಗೆ. ಅರಳಿದುದು ಅಷ್ಟೇ ಅಲ್ಲ ಸಂದ ಸಂಪಗೆ. ಪರಮೇಶ್ವರನಿಗೆ ಸಂದಿವೆ. ಪರಮೇಶ್ವರನೆಂಬ ತುಂಬಿಗೆ ಈ ಅರಳ್ದ ಸಂಪಗೆಯ ಮೇಲೆ ಪ್ರೀತಿ. ಅಂತೆಯೇ ಆ ತುಂಬಿಗೆ ಈ ಅರಳು ಸಂದಿದೆ. ಸಂದ ಸಂಪಿಗೆಯಲ್ಲಿ ಮತ್ತು ತುಂಬಿಯಲ್ಲಿ ಏನಾದರೂ ಭೇದವಿದೆಯೇ ? ಸರ್ವಾಂಗ ಲಿಂಗಿ ಅಜಗಣ್ಣನ ಐಕ್ಯ ಮತ್ತು ಈಶ್ವರನಲ್ಲಿ ಭೇದವಿದೆಯೆ ? ಅದೂ ಕೂಡ ಹೇಳಲು ಬಾರದು. ಎರಡು–ಭೇದವಿದೆ–ಎಂದು ಅನುಭವಿಸಿದರೆ–ಒಂದು–ಅಭೇದವಾಗಿ ವೇದ್ಯ ವಾಗುತ್ತಿದೆ. ಒಂದು–ಅಭೇದ ಎಂದು ಅನುಭವಿಸಿದರೆ–ಎರಡಾಗಿ–ಭೇದವಾಗಿ ವೇದ್ಯ ವಾಗುತ್ತಿದೆ. ಆ ಸ್ಥಿತಿ ಹೀಗೇ ಎಂದು ನಿವೇದಿಸುವವರು ಯಾರು ? ಆ ಸಂವೇದನೆ ಗುಹೇಶ್ವರಲಿಂಗಕ್ಕೆ ಮಾತ್ರ ವೇದ್ಯವಾದೀತು ? ಇದು ಮರಣ ಎಂದು ದುಃಖಪಡು ವುದೇ ? ಅದಕ್ಕಾಗಿ ಮೇರೆದಪ್ಪಿದ ಈ ಅನುತಾಪವೇ ? ನೀನು ಅರಿತವಳು. ಅರಿವಿಗೆ ಇಂತಹ ಮರಹು ತರವಲ್ಲ. ಬಿಡು ತಾಯಿ. ನೀನಾರು ಹೇಳು ?

ಅದಕ್ಕೆ ಮುಕ್ತಾಯಕ್ಕ ತಾನಾರು ಎಂದು ಹೇಳುವಲ್ಲಿ ಅವಳ ಅನುಭವ ವೇದ್ಯ ವಾಗುತ್ತದೆ. ಯಾರು ಎಂದು ಕುರುಹು ಕೇಳಿದರೆ ಏನು ಉತ್ತರಿಸುವುದು ? ಅಯ್ಯ ! ಕಾಯವಿದೆ–ಆದರೆ ಮಾಯೆ ಇಲ್ಲ. ಅದು ಶೂನ್ಯವಾಗಿದೆ. ಭಾವವಿದೆ–ಆದರೆ ಅಲ್ಲಿಯ ಭ್ರಮೆ ಸೊನ್ನೆಯಾಗಿದೆ. ಹುಟ್ಟು ಕಳೆದು ಅಜಗಣ್ಣ ಗುರುಕರ ಸಂಜಾತ ಳಾದವಳು. ಅಹಂಕಾರ ನಿರಸನವಾಗಿ–ಅರಿವು ಒಳಕೊಂಡು ಜ್ಯೋತಿಸ್ವರೂಪನಾದ ಅಜಗಣ್ಣ ತಂದೆಯ ಬೆನ್ನ ಬಳಿಯುವಳು. ಲೌಕಿಕವಾಗಿ ತಾನು ಆತನ ತಂಗಿ ಎಂದು ಉತ್ತರಿಸುತ್ತಾಳೆ. 'ಈ ಯೋಗಸ್ಥಿತಿ ತುಂಬ ವಿರಳವಾದುದು. ಕಾಣದುದನ್ನು ಕಂಡ ಹಾಗೆ, ಕೇಳದುದನ್ನು ಕೇಳಿದ ಹಾಗೆ, ಅಹಂಕಾರ ನಿರಸನವಾಗಿ ಅರಿವೇ ತಾನಾದ ಶರಣನಿಗೆ ಶರಣೆಂದು ಬದುಕಿದೆ' ಎನ್ನುತ್ತಾನೆ.

'ಚಿದ್ಘನದೊಳಗೆ ಅವಿರಳೈಕ್ಯವಾದ ಎನ್ನ ಅಜಗಣ್ಣ ತಂದೆಯನರಿದು ಶರಣೆಂಬ ವಾತ ನೀನಾರು ಹೇಳಯ್ಯ' ಎನ್ನುತ್ತಾಳೆ.

'ನಾನು ಅನಂತಕಾಲದಿಂದ ವಿಶ್ವದಲ್ಲಿ ನೆಲೆಗೊಂಡ ಚೈತನ್ಯದ ಸ್ವರೂಪ, ಗುಹೇ ಶ್ವರನ ಬಳಿವಳಿಯುವನಾದ ಅಲ್ಲಯ್ಯ. ನೀನು ನಮ್ಮ ಗುಹೇಶ್ವರನ ಕೈಹಿಡಿದಾಕೆ. ಪರಮ ಸುಖಿ. ಮತ್ತೆ ಈ ಕಳವಳವೇತರದು ನಿನಗೆ ?'

"ದೇವದೇವ ಶರಣಾರ್ಥಿ ಅವಧರಿಸಯ್ಯ. ಕೇಳಿದ ಸುಖ ಕಿವಿಗೆ ಬೇಟವಾ ಯಿತ್ತು. ಕಿವಿಗಳ ಬೇಟ ಕಂಗಳ ಮುಂದೆ ಮೂರ್ತಿಗೊಂಡಿತ್ತು. ಕಂಗಳ ಮುಂದೆ

ಕಂಡ ಸುಖವು ಮನಕೆ ವೇದ್ಯವಾಯಿತ್ತು. ಶಿವಶರಣರ ದರುಶನದ ಸುಖವನೇನೆಂದೆನ್ನ ಬಹುದು? ಮದವಳಿದು ಮಹವನೊಡಗೂಡಿದ ಎನ್ನ ಅಜಗಣ್ಣನಗಲಿದ ದುಃಖ ನಿಮ್ಮ ಸಂಗದಲ್ಲಿ ಸ್ವಯವಾಯಿತ್ತು. ಕಾಣಾ ಪ್ರಭುವೆ?'

ಪ್ರಭುವೇ ನಿಮ್ಮ ದರ್ಶನದಿಂದ ನನ್ನ ದುಃಖ ಸ್ವಯವಾಗಿ ಹರುಷ ನೆಲೆ ಗೊಂಡಿತು. - ಧನ್ಯಳಾದೆ ಎನ್ನುತ್ತಾಳೆ.

"ಅರಿವರತು ಮರಹುಗೆಟ್ಟು ತನ್ನಲ್ಲಿ ತಾನೆ ಸನ್ನಿಹಿತನಾದಂಗೆ ದುಃಖಿಸುವರೆ ಹೇಳಾ"

ಅಜಗಣ್ಣನ ಸ್ಥಿತಿ ನಿನಗೆ ತಿಳಿಯದೇ ತಾಯಿ? ಅರಿವು ಪೂರ್ಣ ವಿಕಾಸಗೊಳ್ಳಲು ಅಹಂಕಾರವೇ ಮರವೆ. ಅಂತಹ ಮರವೆ-ಆ ಅಹಂಕಾರ ನಿರಸನವಾಗಿ ಬಚ್ಚ ಬರಿಯ ಅರಿವು ಅಜಗಣ್ಣನಿಗೆ ಸಮನಿಸಿತು. ತನಗೆ ಪ್ರಾಪ್ತವಾದ ಅರಿವೇ ತಾನು, ತಾನೇ ಅರಿವು. ಅರಿವಿನಲ್ಲಿಯೇ ಸನ್ನಿಹಿತನಾದವನು. ತನ್ನ ಕೈಯನ್ನು ತಾನೇ ನೋಡಿ ಅದರೊಡನೆ ಸಲಿದಾಡುವ ಶಿಶುವಿನ ಅಚ್ಚಸುಖದಂತೆ-ಹೊಚ್ಚಹೊಸ ಆನಂದ ದಂತೆ-ಆತನ ಯೋಗ ಸ್ಥಿತಿ. ಆತನ ವಿಯೋಗಕ್ಕೆ ದುಃಖವೇ? ಆತ ಒಡಲಿಲ್ಲದಾತ. ಒಡಲಿಲ್ಲದ ಎಡೆಯಲ್ಲಿ ಅಳಿವು ಎನ್ನುವುದು ಉಂಟೆ? ಅಳಿವು ಇದೆ ಎಂದು ಶೋಕಿಸಿ ದರೆ ಅದು ಭ್ರಾಂತಿ. ತಾಯೆ ಈ ದುಃಖ ಸಲ್ಲದು ಬಿಡು' ಎನ್ನುತ್ತಾನೆ. ಅದಕ್ಕೆ ಆತನು ಅಂತರಂಗದ ಅವಿರಳಲಿಂಗೈಕ್ಯನು. ನಿತ್ಯ ನಿಜತ್ತ್ವದಲ್ಲಿಯೇ ಹೃದಯದರಿ ವನ್ನು ಸಮರಸಗೊಳಿಸಿದವನು. ಮೌನದಾಚೆಯ ಗಂಭೀರ ಸುಖಿ. ಆತನ ನೆನಹು ನಿಸ್ಸಂಚಲವಾದುದು. ನುಡಿಯಲ್ಲಿ ಅಪಾರ ಲೋಕದ ನಾದ. ಗತಿಯಲ್ಲಿ ಇಹ ಪರವೆರಡೂ ಹೊದ್ದದವನು. ಆತನನ್ನಗಲಿ ನಾನು ಹೇಗೆ ಜೀವಿಸಲಿ ಎನ್ನುತ್ತಾಳೆ.

ಆಗ ಪ್ರಭುದೇವರು :

" ಕಂಡೆನೆಂಬುದು ಕಂಗೆ ಮರವೆ. ಕಾಣೆನೆಂಬುದು ಮನದ
ಮರವೆ, ಕೂಡಿದೆನೆಂಬುದು ಅರಿವಿನ ಮರವೆ,
ಅಗಲಿದೆನೆಂಬುದು ಮರಹಿನ ಮರವೆ, ಇಂತು ಕಂಡೆ
ಕಾಣೆ, ಕೂಡಿದೆನಗಲಿದೆನೆಂಬ ಭ್ರಾಂತಿಸೂತಕವ
ತಿಳಿದು ನೋಡಲು, ಗುಹೇಶ್ವರನೆಂಬ ಲಿಂಗವನಗಲಲೆಡೆ
ಇಲ್ಲ ಕೇಳಾ ಎಲೆ ತಾಯೆ."

ಬಹಿರಂಗವಾಗಿ ಕಣ್ಣಿಗೆ ಕಾಣುವ ವಸ್ತುವೇ ಅದರ ಸಂಪೂರ್ಣ ಸ್ವರೂಪವಲ್ಲ. ಏಕೆಂದರೆ ಈಗ ಕಂಡದ್ದನ್ನು ಕಣ್ಣು ಮರೆತುಬಿಡಬಹುದು – ಮರೆಯುತ್ತದೆ. ಆದು ದರಿಂದ ಇದನ್ನು ಕಂಡೆ ಎಂದರೆ ಅದು ಕಣ್ಣಿನ ಮರವೆ ಮಾತ್ರ. ಇಂತಹುದು ನನಗೆ ಕಾಣುತ್ತಿಲ್ಲ ಎಂದರೆ ಅದು ಮನಸ್ಸಿನ ಮರವೆ. ಬಗೆಗಣ್ಣು ಜಾಗೃತವಾಗಿದ್ದರೆ

ಕಾಣಲಾರದುದು ಯಾವುದೂ ಇಲ್ಲ. ಕೂಡಿದೆ ಎಂದು ಹೇಳುವುದು ಅರಿವಿನ ಮರವೆ. ಕೂಡಿದ ಮೇಲೆ ಸಮರಸ ಸಮನಿಸಿದ ಬಳಿಕ ಸಮರಸಗೊಂಡ ಎಚ್ಚರಿಕೆ ಉಳಿಯುವುದಿಲ್ಲ, ಉಳಿಯಬಾರದು. ಆದರೂ ಒಂದು ವೇಳೆ ಇದು ಸಮರಸಭಾವ, ನಾನು ಸಾಮರಸ್ಯಹೊಂದಿದೆ ಎಂದು ಹೇಳಿದರೆ ಅದು ಅರಿವಿನ ಮರವೆ. ಕಂಡೆ, ಕಾಣುತ್ತಿಲ್ಲ ಕೂಡಿದೆ ಅಗಲಿದೆ ಎನ್ನುವುದು ಇದೆಲ್ಲ ಅಜ್ಞಾನ, ಭ್ರಾಂತಿ, ಅದು ಸೂತಕ. ಅದರ ನೆಲೆ ಅನುಭಾವಕ್ಕೆ ವೇದ್ಯವಾದರೆ ಲಿಂಗವನ್ನು ಎಲ್ಲಿಯಾದರೂ ಎಂದಾದರೂ ಅಗಲಲಾಗುತ್ತದೆಯೆ? ಲಿಂಗವೇ ತಾನಾದ ಅಜಗಣ್ಣನ ವಿಯೋಗ ಎಂದೇನಾದರೂ ಇದೆಯೆ? ಹೀಗೆ ಈ ಸಂಭಾಷಣೆ ಮುಂದುವರೆಯುತ್ತದೆ. ಪ್ರಭುದೇವರ ಈ ಅಗಾಧ ಗಂಭೀರ ನಿಲವು ಮುಕ್ತಾಯಕ್ಕನನ್ನು ಸಂತಯಿಸಿದ ರೀತಿಯನ್ನು ಮೂಲ 'ಶೂನ್ಯ ಸಂಪಾದನೆಯಲ್ಲಿ'ಯೇ ಅನುಭವಿಸಬೇಕು.

ಉತ್ತರಕ್ಕೆ ಉತ್ತರ ಬಂದು ಕೊನೆಗೆ 'ತಾಯೆ ನೀನು ನಮ್ಮ ಗುಹೇಶ್ವರನ ಕಾರುಣ್ಯದ ಶಿಶು ಎಂದು ಮಾತನಾಡಿಸಿದೆ' ಎಂದು ಸೌಜನ್ಯಪೂರ್ಣವಾಗಿ ತನ್ನ ಮೆಚ್ಚುಗೆ ಸೂಚಿಸುತ್ತಾನೆ ಅಲ್ಲಮಪ್ರಭು.

ಇಂತಹ ದಿವ್ಯ ವ್ಯಕ್ತಿತ್ವವನ್ನು ಪಡೆದ ಅಲ್ಲಮಪ್ರಭುದೇವರು ಸರಿದೊರೆಯಿಲ್ಲದ ಸಮಸಿಲ್ಲದ ಅನುಭಾವದ ಮಿಂಚಿನ ಗೊಂಚಲು!!

—— -::——

# ಅನುಭಾವಿ-ಲಿಂಗಮ್ಮ

●

ಶಾಂತಾದೇವಿ ಮಾಳವಾಡ, ಧಾರವಾಡ.

ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣಪಟ್ಟಣವು ಆಧ್ಯಾತ್ಮಜೀವಿಗಳ ಆಗರವಾಗಿತ್ತು. ಆಗ ಕಲ್ಯಾಣಪಟ್ಟಣದಲ್ಲಿ ಅನೇಕ ಜನ ಮಹಿಳೆಯರು ಕಾಯಕ ನಿರತರಾಗಿ, ವಚನಕಾರ್ತಿಯರಾಗಿ, ಅನುಭಾವಿಗಳಾಗಿ ಬಾಳುತ್ತಿದ್ದರು. ಅಂತಹ ಶರಣೆಯರಲ್ಲಿ ಹಡಪದ ಅಪ್ಪಣ್ಣನವರ ಪತ್ನಿ ಅನುಭಾವಿ ಲಿಂಗಮ್ಮ ಅಗ್ರಗಣ್ಯಳಾಗಿದ್ದಳು.

ಹಡಪದ ಅಪ್ಪಣ್ಣ ಮಹಾಶರಣನಾಗಿದ್ದ. ಬಸವಣ್ಣನವರ ಪರಮ ಭಕ್ತನಾಗಿದ್ದ. ಅವನು ಬಸವಣ್ಣನವರ ಆಪ್ತಕಾರ್ಯದರ್ಶಿಯೆಂದರೂ ಸಲ್ಲುತ್ತದೆ. ಅಪ್ಪಣ್ಣ ಹಡಪದ ಕಾಯಕ ಕೈಕೊಂಡಿದ್ದ. ಕಾಯಕವೇ ಕೈಲಾಸವೆಂದು ಬಗೆದು ಬಾಳನ್ನು ಸಾಗಿಸಿದ್ದ. ಕಾಯಕಮಾಡಿದ ನಂತರ ಉಳಿದ ವೇಳೆಯನ್ನೆಲ್ಲ ಬಸವಣ್ಣನವರ ಜೊತೆಯಲ್ಲಿ ಕಳೆಯುತ್ತಿದ್ದ. ಬಸವಣ್ಣನವರಿಗೆ ತನ್ನನ್ನು ಸಂಪೂರ್ಣವಾಗಿ ಅರ್ಪಿಸಿಕೊಂಡಿದ್ದ. ಅವರ ತತ್ತ್ವದಂತೆ ನಡೆಯುವದೇ ಅವನ ಜೀವನದ ಗುರಿಯಾಗಿತ್ತು. ಆ ಗುರಿಯನ್ನು ಮುಟ್ಟುವಲ್ಲಿ ಅವನ ಪತ್ನಿ ಲಿಂಗಮ್ಮನೂ ಪಾಲುಗಾರ್ತಿಯಾಗಿದ್ದಳು. ಅಪ್ಪಣ್ಣ ಬಸವಣ್ಣನವರನ್ನು ನಂಬಿದಂತೆ, ಅಪ್ಪಣ್ಣನ ಪತ್ನಿ ಲಿಂಗಮ್ಮ ಪತಿಯನ್ನು ನಂಬಿದ್ದಳು.

“ ಎನ್ನ ಸತ್ಯಳ ಮಾಡಿ ನಿತ್ಯವ ತೋರಿದಿರಿ. ತತ್ವವೆಂಬುದನರುಹಿದಿರಿ.
ಮತ್ಸರವ ಹಿಂಗಿಸಿದಿರಿ. ಆಸೆರೋಷವನೆ ಹಿಂಗಿಸಿದಿರಿ.
ಮಾತುಃಮಥನವನೆ ಕೆಡಿಸಿದಿರಿ. ವ್ಯಾಕುಳವನೆ ಕೆಡಿಸಿ ಜ್ಯೋತಿಯ
ಬೆಳಗತೋರಿದಿರಯ್ಯಾ.
ಚನ್ನಮಲ್ಲೇಶ್ವರ ಅಪ್ಪಣ್ಣಪ್ರಿಯ ಚೆನ್ನಬಸವಣ್ಣ ”

ಎಂಬ ಆಕೆಯ ನುಡಿಯನ್ನು ನಾವು ಗಮನಿಸಬೇಕು. ತನ್ನನ್ನು ನಂಬಿದ ಪತ್ನಿ ಹೆಣ್ಣೆಂದು ಹೀಯಾಳಿಸದೆ, ಆತ್ಮೋನ್ನತಿಯ ಮಾರ್ಗದಲ್ಲಿ ಲಿಂಗಮ್ಮನನ್ನೂ ಕರೆದೊಯ್ದಿದ್ದಾನೆ ಅಪ್ಪಣ್ಣ. ಲಿಂಗಮ್ಮ ಪತಿಗೆ ತಕ್ಕ ಸತಿ. ಪತಿಸೇವೆ, ಗುರುಸೇವೆ, ಜಂಗಮದಾಸೋಹಗಳನ್ನು ನಡೆಸುತ್ತ, ಪತಿಯ ಮೂಲಕ ಬಸವಣ್ಣನವರ ಅಮೃತ ವಾಣಿಯ ಪ್ರಯೋಜನ ಪಡೆದು, ತನ್ನ ನಡೆ, ನುಡಿಗಳನ್ನು ಮಾರ್ಪಡಿಸಿಕೊಂಡು ಲಿಂಗಮ್ಮ ಅನುಭಾವಿಯಾದಳು.

ಮರ್ತ್ಯದಲ್ಲಿ ಹುಟ್ಟಿದಮೇಲೆ ಎಲ್ಲರಂತೆ ಸಂಸಾರದ ಸುಖದುಃಖಗಳನ್ನು ಅನುಭವಿಸಿದವಳು ಲಿಂಗಮ್ಮ. ಸುಖದುಃಖಗಳೆರಡೂ ಶಾಶ್ವತವಲ್ಲ ಎಂದು ಭಾವಿಸಿ ನಿತ್ಯ ಸುಖದ ಆಗರವಾದ ದೈವೀಸಾಕ್ಷಾತ್ಕಾರಕ್ಕಾಗಿ, ಸಾಧನ ಕೈಕೊಂಡಳು.

"ಅಯ್ಯಾ ನಾಮರ್ತ್ಯದಲ್ಲಿ ಹುಟ್ಟಿ ಕಷ್ಟಸಂಸಾರಿ ಎನಿಸಿಕೊಂಡೆ.
ಕತ್ತಲೆಯಲ್ಲಿ ಮುಳುಗಿದೆ. ಕರ್ಮಕ್ಕೆ ಗುರಿಯಾಗುತ್ತಿದ್ದರೆ
ಹೆತ್ತತಾಯಿ ಎಂಬ ಗುರುಸ್ವಾಮಿ, ಎನ್ನಕೊರಳಿಗೆ ಗಂಡನೆಂಬ
ಲಿಂಗವ ಕಟ್ಟಿದನು.
ತಂದೆ ಎಂಬ ಜಂಗಮಲಿಂಗವು ಎನ್ನ ಪ್ರಾಣಕ್ಕೆ ಪ್ರಸಾದವ ಊಡಿದನು.
ಪ್ರಾಣಕ್ಕೆ ಪ್ರಸಾದವಮಾಡಲಾಗಲೆ ಕತ್ತಲೆ ಹರಿಯಿತ್ತು. ಕರ್ಮಹಿಂಗಿತ್ತು.
ಮನಬತ್ತಲೆಯಾಯಿತ್ತು, ಚಿತ್ತುಸುಯಿಧಾನವಾಯಿತ್ತು."

ಗುರು, ಲಿಂಗ, ಜಂಗಮ ಸಾನ್ನಿಧ್ಯದಿಂದ, ಪತಿಯಮಾರ್ಗದರ್ಶನದಿಂದ ಜೀವನದಲ್ಲಿರುವ ಕತ್ತಲೆ ಎಂಬ ಅಜ್ಞಾನವನ್ನು ಕಳೆದು, ಮಂಗಳದ ಮಹಾ ಬೆಳಗಿನಲ್ಲಿ ಓಲಾಡಿ ಸುಖಿಯಾದ ಲಿಂಗಮ್ಮ ಅನುಭಾವಿಯಾದಳು. ಆಕೆಯ ಪತಿ ಅಪ್ಪಣ್ಣ ಬೆಳಗಿನಲ್ಲೆದ್ದು, ಶಿವಪೂಜೆ ಮುಗಿಸಿಕೊಂಡು, ಹಡಪದ ಕಾಯಕಕ್ಕೆ ಹೋಗುತ್ತಿದ್ದನು. ಆ ಕಾಯಕ ಮುಗಿದೊಡನೆ,

"ಎನ್ನ ಆಚಾರ ವಿಚಾರ ಬಸವಣ್ಣಂಗರ್ಪಿತವಾದವು,
ಎನ್ನ ಅವಧಾನ, ಅನುಭಾವ ಬಸವಣ್ಣಂಗರ್ಪಿತವಾದವು,
ಎನ್ನ ಸರ್ವಾಚಾರ ಸಂಪತ್ತು ಬಸವಣ್ಣನಲ್ಲಿ ವೇದ್ಯವಾಯಿತ್ತು,
ಬಸವಪ್ರಿಯ ಕೂಡಲಚೆನ್ನಸಂಗಮದೇವರಲ್ಲಿ ನಿಜನಿವಾಸಿ
ಯಾಗಿರ್ದೆನು"

ಎಂಬ ಭಾವದಿಂದ ಬಸವಣ್ಣನವರ ಸೇವೆಯಲ್ಲಿ ತಲ್ಲೀನನಾಗುತ್ತಿದ್ದನು. ಸತಿ ಲಿಂಗಮ್ಮ, ಗುರುಸೇವೆ, ಜಂಗಮಾರ್ಚನೆಗಳಲ್ಲಿ ತೊಡಗಿ, ಪತಿಯಲ್ಲಿ ಇಷ್ಟ ಲಿಂಗವನ್ನೂ, ಇಷ್ಟಲಿಂಗದಲ್ಲಿ ಪತಿಯನ್ನೂ ಕಾಣುವ ನಿಷ್ಠೆಯುಳ್ಳವಳಾಗಿದ್ದಳು. ಪ್ರತಿ

ದಿನ ರಾತ್ರಿ ದಂಪತಿಗಳು ಕುಳಿತು ಅನುಭವಮಂಟಪದಲ್ಲಿ ನಡೆದ ಶಿವಾನುಭವ ಗೋಷ್ಠಿಯ ಬಗೆಗೆ ವಿಚಾರವಿನಿಮಯ ಮಾಡುತ್ತಿದ್ದರು. ಚರ್ಚೆ ನಡೆಸುತ್ತಿದ್ದರು.

ಒಂದು ದಿನ ಅನುಭವಮಂಟಪದಿಂದ ಬಂದ ಅಪ್ಪಣ್ಣ ಹೇಳಿದ. ನೋಡು, ಈ ಹೊತ್ತು ಅನುಭವಮಂಟಪದಲ್ಲಿ ಒಂದು ಮಹತ್ವದ ಚರ್ಚೆ ನಡೆಯಿತು. ಕಾಯಕಮಾಡುವ ವೇಳೆಯಲ್ಲಿ ಬೇರೆ ಕೆಲಸ ಬಂದರೆ, ಕಾಯಕಬಿಟ್ಟು ಹೋಗ ಬೇಕೇ? ಬೇಡವೆ? ಎಂಬುದು ಚರ್ಚೆಯ ವಿಷಯವಾಗಿತ್ತು. ಅನೇಕರು ಕಾಯಕವೇ ಶ್ರೇಷ್ಠ. ಬೇರೆ ಕೆಲಸವಿದ್ದರೂ ಕಾಯಕಬಿಟ್ಟು ಹೋಗಬಾರದು. ಎಂದು ಪ್ರತಿಪಾದಿಸಿದರು. ಇನ್ನು ಕೆಲವರು "ಹರಮುನಿದರೂ ಗುರು ಕಾಯು ತ್ತಾನೆ" ಜಂಗಮರು ಮನೆಗೆ ಬಂದರೆ ಕಾಯಕವನ್ನು ತ್ಯಜಿಸಿ ಜಂಗಮಾರ್ಚನೆ ಮಾಡಬೇಕು ಎಂದು ವಾದಿಸಿದರು. ಅದಕ್ಕೆ ಆಯದಕ್ಕಿ ಮಾರಯ್ಯನವರು,

"ಕಾಯಕದಲ್ಲಿ ನಿರತನಾದಡೆ ಗುರುದರುಶನವಾದರೂ ಮರೆಯಬೇಕು.
ಲಿಂಗಪೂಜೆಯಾದಡೂ ಮರೆಯಬೇಕು. ಜಂಗಮಮುಂದಿದ್ದಡೆಯೂ
ಹಂಗುಹರಿಯಬೇಕು.
ಕಾಯಕವೇ ಕೈಲಾಸವಾದ ಕಾರಣ ಅಮರೇಶ್ವರಲಿಂಗವಾಯಿತ್ತಾದರೂ
ಕಾಯಕದೊಳಗು"

"ಕಾಯಕವೇ ಕೈಲಾಸ" ಎಂದು ಪ್ರತಿಪಾದಿಸಿದರು. ಹೀಗೆ ಪ್ರತಿಪಾದಿಸಿದ ನಂತರ ಶಿವಶರಣೆ ಲಕ್ಕಮ್ಮ ಪತಿಯ ಮುಂದೆ ಬಂದು "ಕಾಯಕನಿಂದಿತ್ತು ಹೋಗಯ್ಯ ಎನ್ನಾಳ್ದನೆ," ಎಂದು ಹೇಳಿದಳು. ಆಕೆಯ ಕಾಯಕನಿಷ್ಠೆಯ ಮಾತು ಗಳನ್ನು ಕೇಳಿ ಶರಣರೆಲ್ಲ ಅವಾಕ್ಕಾದರು; ಎಂದು ಅಪ್ಪಣ್ಣ ಅಂದಿನ ವರದಿ ಹೇಳಿದ. ಆಗ ಲಿಂಗಮ್ಮ ವಿಚಾರಮಗ್ನಳಾದಳು. ಸ್ವಾಮಿ, ಲಕ್ಕಮ್ಮ ಮಹಾಶರಣೆ; ಆಕೆಯ ಮಾತು ಸತ್ಯ. ಕಾಯಕವೇ ಕೈಲಾಸ ಎಂಬುದು ಅರ್ಥಪೂರ್ಣವಾದ ಮಾತು. ಈ ಮಾತಿನಲ್ಲಿ ಶರಣರ ಧ್ಯೇಯ ಅಡಕವಾಗಿದೆ. ಅನೇಕ ಜನ ಕೈಲಾಸ ಬೇರೆ, ಮರ್ತ್ಯಲೋಕ ಬೇರೆ ಎನ್ನುತ್ತಾರೆ. ಆದರೆ ಶರಣರು ಈ ಮಾತನ್ನೊಪ್ಪುವದಿಲ್ಲ. ನಾನೂ ನಂಬುವದಿಲ್ಲ. ಎಂದಳು.

"ಕೈಲಾಸ ಮರ್ತ್ಯಲೋಕವೆಂಬರು, ಕೈಲಾಸವೆಂದರೇನೋ?
ಮರ್ತ್ಯಲೋಕವೆಂದರೇನೊ? ಅಲ್ಲಿಯ ನಡೆಯೂ ಒಂದೆ,
ಇಲ್ಲಿಯ ನಡೆಯೂ ಒಂದೇ, ಅಲ್ಲಿಯ ನುಡಿಯೂ ಒಂದೆ,
ಇಲ್ಲಿಯ ನುಡಿಯೂ ಒಂದೇ ಕಾಣಿರಯ್ಯ ಎಂಬರು.
ಕೈಲಾಸದವರೇ ದೇವರ್ಕಳೆಂಬರು. ಮರ್ತ್ಯಲೋಕದವರೇ
ಮಹಾಗಣಂಗಳೆಂಬರು.

ಸುರಲೋಕದೊಳಗೆ ಸಾಸಿರಕಾಲಕ್ಕಲ್ಲದೆ ಅಳಿವಿಲ್ಲವೆಂಬರು.
ನರಲೋಕದೊಳಗೆ ಸತ್ತು ಸತ್ತು ಹುಟ್ಟುತಿಹರೆಂಬರು.
ಇದಕಂಡು ನಮ್ಮ ಶಿವಶರಣರು ಸುರಲೋಕವನು, ನರಲೋಕವನು
ತೃಣವೆಂದುಭಾವಿಸಿ, ಭವವದಾಂಟಿ ತಮ್ಮತಮ್ಮ ಹುಟ್ಟನರಿದು
ಮಹಾಬೆಳಗನೆ ಕೂಡಿ ಬೆಳಗಿನಲ್ಲಿ ಬಯಲಾದರಯ್ಯ
ಅಪ್ಪಣ್ಣಪ್ರಿಯ ಚೆನ್ನಬಸವಣ್ಣ."

ಎಂಬ ಲಿಂಗಮ್ಮನ ವಚನಕೇಳಿ, ಅಪ್ಪಣ್ಣ ತಲೆದೂಗಿ ಶಿವಪೂಜೆಗೆ ಹೋದನು. ಶರಣರ ಅನುಭವದ ನುಡಿಗಳು ಲಿಂಗಮ್ಮನ ಬಾಳಿನಲ್ಲಿ ಹಾಸುಹೊಕ್ಕಾಗಿದ್ದವು. ಆಕೆಯು ಸಮಯ ದೊರೆತಾಗೆಲ್ಲ ಅನುಭವಮಂಟಪಕ್ಕೆ ಹೋಗಿ ಶರಣರ ವಚನಾಮೃತ ವನ್ನು ಸವಿಯುತ್ತಿದ್ದಳು.

"ಬಸವಣ್ಣ, ಚೆನ್ನಬಸವಣ್ಣ, ಮಡಿವಾಳಯ್ಯ, ಅಲ್ಲಮಪ್ರಭು
ಚೆನ್ನಮಲ್ಲೇಶ್ವರ, ಹಡಪದಪ್ಪಣ್ಣ ತಮ್ಮೆಲ್ಲರ ತೊತ್ತಿನ, ತೊತ್ತಿನ
ಪಡಿದೊತ್ತಿನ ಮಗಳೆಂಮ ಹೊತ್ತುಹೊತ್ತಿಗೆ ಎಚ್ಚರವ ಪಾಲಿಸಿ
ರಕ್ಷಣೆಯ ಮಾಡಿದಕಾರಣದಿಂದ ತಮ್ಮೆಲ್ಲರ ಪಾದದಲ್ಲಿಯೆ
ನಿಜಮುಕ್ತಳಾದೆನಯ್ಯ ಅಪ್ಪಣ್ಣಪ್ರಿಯ ಚೆನ್ನಬಸವಣ್ಣ."

ಎಂಬ ವಚನದಲ್ಲಿ ಶರಣರ ಅನುಗ್ರಹವನ್ನು ಸುಂದರವಾಗಿ ಬಣ್ಣಿಸಿದ್ದಾಳೆ ಲಿಂಗಮ್ಮ. ಆಕೆ ಭಕ್ತಿ, ನಿಷ್ಠೆಗಳ ಸಾಕಾರ ಮೂರ್ತಿಯಂತಿದ್ದಳು. ಡಂಭಾಚಾರದ, ಸ್ವಪ್ರತಿಷ್ಠೆಯ ಜನರ ಮಾತನ್ನು ಕೇಳಿ ಲಿಂಗಮ್ಮ ತಳವಳಗೊಳ್ಳುತ್ತಿದ್ದಳು.

"ಮನವ ನಿರ್ಮಳವಮಾಡಿದೆನೆಂದು, ತನುವ ಕರಗಿಸಿ, ಮನವ ಬಳಲಿಸಿ
ಕಳವಳಿಸಿ, ಕಣ್ಣಕಾಣದೆ ಅಂಧಕರಂತೆ ಮುಂದುಗಾಣದೆ, ಸಂದೇಹದಲ್ಲಿ
ಮುಳುಗಿದ ಮನುಜರಿರಾ ನೀವು ಕೇಳಿರೋ, ಹೇಳಿಹೆನು
ಆ ಮನ ನಿರ್ಮಳವಮಾಡಿ, ಆ ಘನವ ಕಾಂಬುದಕ್ಕೆ
ಆ ಮನ ಎಂತಾಗಬೇಕೆಂದಡೆ ಗಾಳಿಬೀಸದ ಜಲದಂತೆ,
ಮೋಡವಿಲ್ಲದ ಸೂರ್ಯನಂತೆ, ಬೆಳಗಿದ ದರ್ಪಣದಂತೆ
ಮನನಿರ್ಮಳವಾದಲ್ಲದೆ, ಆ ಮಹಾಘನವ ಕಾಣಬಾರದೆಂದರು
ನಮ್ಮ ಅಪ್ಪಣ್ಣಪ್ರಿಯ ಚೆನ್ನಬಸವಣ್ಣ."

ಎಂಬ ವಚನದಲ್ಲಿ ಲಿಂಗಮ್ಮ ಮನಸ್ಸಿನ ಪರಿಪಕ್ವತೆಯ ಮಾತುಗಳನ್ನು ಬಿಡಿಬಿಡಿಸಿ ಹೇಳಿದ್ದಾಳೆ. ಅಂತಹ ಮಾತುಗಳನ್ನೂ ಕೇಳದೆ ಕೇವಲ ತಮ್ಮ ಮಾತಿನ ಮಲ್ಲತನ ವನ್ನು ಪ್ರದರ್ಶಿಸುವ ಜನರನ್ನು ಕುರಿತು :—

" ಮನವಗೆದ್ದೆವೆಂದು ತನುವಕರಗಿಸಿ, ಕಾಯವನುರುಗಿಸಿ, ನಿದ್ರೆಯಕೆಡಿಸಿ
ವಿದ್ಯೆಯಕಲಿತೆವೆಂಬ ಬುದ್ಧಿಹೀನರಿರಾ ನೀವು ಕೇಳಿರೋ
ನಮ್ಮ ಶರಣರು ಮನವನೆಂತುಗೆದ್ದರೆಂದರೆ, ಕಾಮ, ಕ್ರೋಧವನೀಗಿ
ಮೋಹ ಮದ ಮತ್ಸರವ ನಿಶ್ಚೈಯಿಸಿ, ಆಶೆರೋಷವಳಿದು
ಜಗದ ಪಾಶವಬಿಟ್ಟು, ಮರುಗಿಸುವ ಕಾಯವನೆ ಪ್ರಸಾದವಮಾಡಿ
ಸಲುಹಿದರು.
ಕೆಡಿಸುವ ನಿದ್ರೆಯನೆ ಯೋಗಸಮಾಧಿಯಮಾಡಿ, ಸುಖವನಡಿಸಿ
ಜಗವ ಗೆದ್ದ ಶರಣರ ಬುದ್ಧಿಹೀನರೆತ್ತಬಲ್ಲರೋ, ಅಪ್ಪಣ್ಣಪ್ರಿಯ
ಚೆನ್ನಬಸವಣ್ಣ "

ಎಂದು ಹೇಳಿ ಜನರ ಬುದ್ಧಿಹೀನತೆಗಾಗಿ ಮರುಕಪಟ್ಟಿದ್ದಾಳೆ. ಸಮುದ್ರದ ತೆರೆಯಂತೆ, ಗಾಳಿಯಂತೆ, ಅಸ್ಥಿರವಾದ ಮನಸ್ಸನ್ನು ನಿರ್ಮಳವನ್ನಾಗಿಸಿ, ಸ್ಥಿರವಾಗಿಸಿ, ದೇವರ ಧ್ಯಾನದಲ್ಲಿ ತೊಡಗಿಸುವ ಹಾದಿಯನ್ನು ಬೋಧಿಸಿದ್ದಾಳೆ. ಶರಣರು ಮನಸ್ಸನ್ನು ಗೆಲ್ಲುವಾಗ ಅಷ್ಟಮದಗಳನ್ನು ಸುಟ್ಟು, ಶಿವಯೋಗ ನಿದ್ರೆಯಲ್ಲಿರುತ್ತಿದ್ದರೆಂಬುದನ್ನು ಹೃದಯಂಗಮವಾಗಿ ವಿವರಿಸಿದ್ದಾಳೆ. ಹುಲಿಯನ್ನು ಕಟ್ಟಬಹುದು. ದುಷ್ಟರನ್ನು ಹಿಡಿಯಬಹುದು. ಆದರೆ ಮನವೆಂಬ ಮರ್ಕಟವನ್ನು ಕಟ್ಟಿಹಾಕುವದು ಕಠಿಣ. ಅಂಥ ಕಠಿಣ ಕಾರ್ಯವನ್ನು ಪತಿಯ ನೆರವಿನಿಂದ, ಶರಣರ ಅನುಗ್ರಹದಿಂದ ಲಿಂಗಮ್ಮ ಸುಲಭ ಸಾಧ್ಯ ಮಾಡಿಕೊಂಡಿದ್ದಳು.

ಮನದ ಕತ್ತಲೆಯನ್ನು ಕಳೆದುಕೊಂಡು, ಬೆಳಕನ್ನು ಕಾಣುವದು ಸುಲಭವೆಂದು ಅನೇಕರು ಬಗೆದಿದ್ದರು. ಆ ಬಗೆಗೆ ಲಿಂಗಮ್ಮ ಹೇಳಿದ್ದಾಳೆ :—

" ಮನಕತ್ತಲೆ, ತನುಹಮ್ಮು ನೆನಹುವೆರವರೆ ಇವರೊಳಗೆ ಇದ್ದು
ಘನವ ಕಂಡಿಹೆನೆಂಬ ಅಣ್ಣಗಳಿರಾ ನೀವು ಕೇಳಿರೋ, ಘನವಕಾಂಬುವದಕ್ಕೆ
ಮನವೆಂತಾಗಬೇಕೆಂದರೆ, ಅಕ್ಕಿಯ ತಳಿಸಿದಂತೆ, ಅಲ್ಲವ ಸುಲಿದಂತೆ,
ಕನ್ನಡಿಯ ನೋಡಿದಂತೆ, ಮನನಿರ್ಮಳವಾದಲ್ಲದೆ, ಘನವಕಾಣಬಾರದು.
ನಮ್ಮ ಅಪ್ಪಣ್ಣಪ್ರಿಯ ಚೆನ್ನಬಸವಣ್ಣ."

ಕೇವಲ ಮನ ನಿರ್ಮಳವಾದರೆ ಮುಕ್ತಿಯಮಾರ್ಗ ಸುಲಭವಾಗಲಾರದು.

" ಮುಕ್ತಿಯ ಪಥವನರಿವುದಕ್ಕೆ ತತ್ತ್ವದ ಭಿತ್ತಿಯ ಕಾಣಬೇಕು,
ಚಿತ್ತಲಿಂಗದಲ್ಲಿ ಅಚ್ಚೊತ್ತಿದಂತಿರಬೇಕು, ಮರ್ತ್ಯದ ಮಾನವರ ಸಂಗ
ಹಿಂಗಬೇಕು.
ತಾನು ತಾನಾದ ಲಿಂಗೈಕ್ಯವನರಿವಡೆ ಅಪ್ಪಣ್ಣಪ್ರಿಯ ಚೆನ್ನಬಸವಣ್ಣ."

ಎಂದು ಹೇಳಿದ್ದಾಳೆ ಲಿಂಗಮ್ಮ. ನಿರ್ಮಲವಾದ ಮನಸ್ಸಿನಿಂದ ಶರಣರ ತತ್ತ್ವವ

ನ್ನರಿಯಬೇಕು. ಆ ತತ್ತ್ವ ಕೇವಲ ಪುಸ್ತಕದ ವಿದ್ಯೆಯಾಗಬಾರದು, ಗಿಳಿಯ ಪಾಠವಾಗಬಾರದು, ಎಲ್ಲ ಸಂಗವ ತೊರೆದು, ಆಶೆಪಾಶೆಗಳ ಬಿಟ್ಟು, ಏಕಾಗ್ರಚಿತ್ತದಿಂದ ಲಿಂಗಧ್ಯಾನದಲ್ಲಿ ನಿರತರಾದರೆ ಶಿವಸಾಕ್ಷಾತ್ಕಾರ ಸುಲಭ, ಮುಕ್ತಿಮಾರ್ಗ ಸಾಧ್ಯ ಎಂಬುದನ್ನು ಲಿಂಗಮ್ಮ ಸ್ಪಷ್ಟಗೊಳಿಸಿದ್ದಾಳೆ.

"ಸಾಸಿರದಳ ಕಮಲವೆಂದರೆ ಸೂಸಿಕೊಂಡಿರುವ ಮನ, ಪವನವೆಂದರೆ
ಎಲ್ಲೆಡೆಯಲ್ಲಿ ಸೂಸಿ ಆಡುವಂಥಾದ್ದು, ಬಿಂದುವೆಂದರೆ ಆಗುಮಾಡುವಂಥಾದ್ದು
ಈಮನ, ಪವನ, ಬಿಂದು, ಮೂರನು ಒಡಗೂಡಿ ನೋಡಲು ಪರಂಜ್ಯೋತಿ
ಪ್ರಕಾಶವಾದಂಥ, ಬೆಳಗೆ ಎನ್ನ ಕಂಗಳ ಮುಂದೆ ನಿಂದಿತ್ತು, ಆ ಮಹಾಬೆಳಗನೆ
ಕಂಗಳಲ್ಲಿ ಹೆರೆಹಿಂಗದೆ ನೋಡಿದರೆ ಎನ್ನಂಗಗ ಹವಣಪರಿಪೂರ್ಣವಾಗಿದ್ದಿತು;
ಕಾಣಾ ಅಪ್ಪಣ್ಣಪ್ರಿಯ ಚೆನ್ನಬಸವಣ್ಣ, ನಿಮ್ಮಪಾದಕರುಣದಿಂದ."

ಎಂದು ನಂಬಿದ ಲಿಂಗಮ್ಮ ತನ್ನ ಸಾಧನೆಯಿಂದ, ಗುರುಹಿರಿಯರ ಅನುಗ್ರಹದಿಂದ, ಮನ, ಪವನ, ಬಿಂದುವನೊಡಗೂಡಿ ಪರಂಜ್ಯೋತಿ ಪ್ರಕಾಶವನ್ನು ಕಂಡುಕೊಂಡಳು.

"ಕಾಯವೆಂಬ ಕದಳಿಯಹೊಕ್ಕು, ಜೀವಪರಮರ ನೆಲೆಯನರಿದು" ಲಿಂಗಮ್ಮ ಆಧ್ಯಾತ್ಮ ಜೀವನದ ತುಟ್ಟತುದಿಯನ್ನು ಮುಟ್ಟಿದಳು.

"ಅಂಗಮರೆದವಂಗೆ ಲಿಂಗದ ಹಂಗೇಕೊ? ಅರಿವಕಂಡವಂಗೆ
ಕುರುಹಿನ ಹಂಗೇಕೊ? ತಾನು ತಾನಾದವಂಗೆ ಧ್ಯಾನದ ಹಂಗೇಕೊ?
ಮನಮುಗ್ಧವಾದವಂಗೆ ಮಾನವರ ಹಂಗೇಕೊ? ಆಸೆಯನಳಿದವಂಗೆ
ರೋಷದ ಹಂಗೇಕೊ? ಕಾಮನಸುಟ್ಟವಂಗೆ ಕಳವಳದ ಹಂಗೇಕೊ?
ನಡೆಗೆಟ್ಟವಂಗೆ ನುಡಿಯ ಹಂಗೇಕೊ? ತನ್ನಮರೆದು ನಿಮ್ಮನರಿದ ಶರಣಂಗೆ
ಅಲ್ಲೆ ಐಕ್ಯಕಂಡೆ ಅಪ್ಪಣ್ಣಪ್ರಿಯ ಚೆನ್ನಬಸವಣ್ಣ"

ಎಂಬುದಾಗಿ ಲಿಂಗಮ್ಮ ಅಂಗ ಲಿಂಗ ಸಾಮರಸ್ಯಪಡೆದು ಐಕ್ಯಸ್ಥಾನ ಸಾಧಿಸಿಕೊಂಡಳು. ನಾನು ನೀನೆಂಬ ಭ್ರಾಂತಿಯನ್ನಳಿದು ಸಮರಸ ಭಕ್ತಿಭರಿತಳಾಗಿದ್ದಳು.

"ವಿಶ್ವಾಸದಿಂದ ಭಕ್ತನಾಗಿ ಆ ವಿಶ್ವಾಸದೊಳಗಣ ನಿಷ್ಠೆಯಿಂ ಮಹೇಶ್ವರನಾಗಿ
ಆ ನಿಷ್ಠೆಯೊಳಗಣ ಸಾವಧಾನದಿಂ ಪ್ರಸಾದಿಯಾಗಿ ಆ ಸಾವಧಾನದೊಳಗಣ
ಸ್ವಾನುಭಾವದಿಂ
ಪ್ರಾಣಲಿಂಗಿಯಾಗಿ ಆ ಸ್ವಾನುಭಾವದೊಳಗಣ ಅರುವಿನಿಂ ಶರಣನಾಗಿ,
ಆ ಅರಿವು ನಿಜದಲ್ಲಿ ಸಮರಸಭಾವವನ್ನೈದಿದೊಡೆ ಅದೇ ಐಕ್ಯಸ್ಥಲ
ಗುಹೇಶ್ವರಾ."

ಎಂಬ ಪ್ರಭುದೇವರ ಐಕ್ಯಸ್ಥಲದ ವಿವರಣೆಯನ್ನು ಲಿಂಗಮ್ಮ ತನ್ನ ಜೀವನದಲ್ಲಿ ಅಳವಡಿಸಿಕೊಂಡಿದ್ದಳು. ಓರ್ವ ಸಾಮಾನ್ಯ ಹೆಣ್ಣುಮಗಳಾದ ಲಿಂಗಮ್ಮ ಕಲ್ಯಾಣದ ಆಧ್ಯಾತ್ಮಮಯ ವಾತಾವರಣದಲ್ಲಿ ಬೆಳೆದು, ಕಾಯಕವೇ ಕೈಲಾಸವೆಂದರಿತ ಪತಿಯ

ಕೈವಿಡಿದು ಚೆನ್ನಮಲ್ಲೇಶ್ವರನೆಂಬ ಗುರುವಿನಿಂದ ದೀಕ್ಷೆಪಡೆದು ಬಸವಣ್ಣ, ಪ್ರಭುದೇವರ ಅಮೃತ ವಾಣಿಯನ್ನು ಕೇಳಿ ತನ್ನ ಜೀವನದಲ್ಲಿ ಅದ್ಭುತಪ್ರಗತಿಯನ್ನು ಸಾಧಿಸಿದಳು. "ನರರ ಬೇಡದೆ, ಸುರರ ಹಾಡದೆ, ಕರಣಂಗಳ ಹರಿಯಬಿಡದೆ, ಪ್ರಣವ ಪಂಚಾಕ್ಷರಿ ಯನ್ನು ಜಪಿಸುತ್ತ" ಲಿಂಗಮ್ಮ ನಿಜಮುಕ್ತಿಯ ಪಡೆದಳು.

"ತನು ಕರಗಿತ್ತು, ಮನ ನಿಂದಿತ್ತು, ಉಲುಹು ಅಡಗಿತ್ತು.
ನೆಲೆಗೆ ನಿಂದಿತ್ತು, ಮನ ಪವನ ಬಿಂದು ಒಡಗೂಡಿತ್ತು.
ಉರಿಎದ್ದಿತ್ತು, ಊರ್ಧ್ವಕ್ಕೇರಿತ್ತು, ಶರಧಿ ಬತ್ತಿತ್ತು, ನೊರೆ ತೆರೆ ಅಡಗಿತ್ತು.
ಅಷ್ಟಮದವೆಲ್ಲ ಹಿಟ್ಟುಗುಟ್ಟಿತ್ತು, ಕರಣಂಗಳೆಲ್ಲ ಉರಿದುಹೋಯಿತ್ತು.
ಸಪ್ತಧಾತು ಕೆಟ್ಟಿತ್ತು, ರಸವರತಿತ್ತು, ಅಪ್ಪುವರತಿತ್ತು, ತೊಟ್ಟುಬಿಟ್ಟು
ಬಟ್ಟಬಯಲೊಳಗೆಬಿದ್ದು, ನಾನೆತ್ತ ಹೋದೆನೆಂದರಿಯೆನಯ್ಯ.
ಅಪ್ಪಣ್ಣಪ್ರಿಯ ಚೆನ್ನಬಸವಣ್ಣ."

ಎಂಬುದಾಗಿ ಲಿಂಗಮ್ಮ ಐಕ್ಯಸ್ಥಲದ ನಿಲುಗಡೆಯನ್ನು ಕಂಡುಕೊಂಡಳು. ನಿಜಮುಕ್ತಳಾದಳು. ಆಧ್ಯಾತ್ಮ ಜೀವನದಲ್ಲಿ ಮುಂದುವರಿಯಬೇಕೆಂಬ ಅಪೇಕ್ಷೆಯುಳ್ಳವರಿಗೆ ಲಿಂಗಮ್ಮನ ಅನುಭಾವದ ವಚನಗಳು ದಾರಿದೀಪವಾಗಿವೆ.

——::——

# ಯುಗಪುರುಷ ಹಾನಗಲ್ಲ ಕುಮಾರೇಶ



**ಪಂಚಾಕ್ಷರಿ ಹಿರೇಮಠ,** ಧಾರವಾಡ.

**ಮಾ**ನವನ ಜೀವನ ಅನೈಸರ್ಗಿಕವಾದಾಗ, ಬದುಕಿನಲ್ಲಿ ವಿಷವೇ ತುಂಬಿ ಬಂದಾಗ, ನೈತಿಕ ಹಾಗೂ ಮಾನಸಿಕ ಅಧೋಗತಿಯಾದಾಗ, ಸತ್ಯವಂತರು, ನೀತಿವಂತರು ಬದುಕುವುದೇ ಸಾಧ್ಯವಿಲ್ಲ; ಈ ಪರಿಸರದಲ್ಲಿ ಎನ್ನುವ ಕಾಲದಲ್ಲಿ ಓರ್ವ ಮಹಿಮಾ ಪುರುಷನ ಉದಯವಾಗುತ್ತದೆ. ಬಹು ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದ ನಂಬಿಕೆ ಇದು. ಗೀತೆಯಲ್ಲಿ ಶ್ರೀಕೃಷ್ಣನ ಮಾತೂ ಈ ನಂಬಿಕೆಗೆ ಪೂರಕವಾಗಿ ಬರುತ್ತದೆ : 'ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ....'

ಧರ್ಮದಲ್ಲಿ ಗ್ಲಾನಿಯುಂಟಾದಾಗ ನಾನು ಮತ್ತೆ ಬಂದು ಎಲ್ಲವನ್ನೂ ಸರಿಪಡಿಸುತ್ತೇನೆ – ಎನ್ನುವ ಆಶ್ವಾಸನ ಈ ಮಾತಿನಲ್ಲಿದೆ.

ಈ ಶತಮಾನದ ಪೂರ್ವಾರ್ಧದಲ್ಲಿ ಇಂಥ ಕಾಲ, ಇಂಥ ಪರಿಸ್ಥಿತಿ ಈ ನಾಡಿನಲ್ಲಿತ್ತು. ಪ್ರತ್ಯೇಕವಾಗಿ ವೀರಶೈವ ಸಮಾಜ ತನ್ನ ಅಪೂರ್ವವಾದ ಸಂಸ್ಕೃತಿ, ಸಂಸ್ಕಾರ, ಆಚಾರ, ವಿಚಾರಗಳನ್ನು ಕಳೆದುಕೊಂಡು ಯಾವ ಯಾವದೋ ದಾರಿಯನ್ನು ಅನುಸರಿಸುವ ಸ್ಥಿತಿಯಲ್ಲಿತ್ತು. ವಿಶ್ವಮಾನ್ಯವಾಗ ಬಲ್ಲಂಥ ಭವ್ಯ ಸಂಸ್ಕೃತಿಯ ಧರ್ಮದ ಹಿರಿಮೆಯನ್ನು ಪಡೆದ ಈ ಜನಾಂಗ ಸಂಕುಚಿತ ಮನೋಭಾವನೆಗೆ ಮಾರುಹೋಗಿ ಭವ್ಯಪರಂಪರೆಯನ್ನು ಮರೆತು ಜೀವಸತ್ವವನ್ನೇ ಕಳೆದುಕೊಂಡಿತ್ತು.

ಭೌತಿಕ, ಆಧ್ಯಾತ್ಮಿಕ, ತಾತ್ವಿಕ, ಸಾಮಾಜಿಕ, ಈ ಎಲ್ಲ ಕ್ಷೇತ್ರದಲ್ಲಿಯೂ ಒಂದು ರೀತಿಯ ಗ್ಲಾನಿಯುಂಟಾದ ಒಂದು ಸಂಧಿಕಾಲ. ಓರ್ವ ಸಾಮಾನ್ಯ ಮನುಷ್ಯನಿಂದ ಈ ಕಾಲದ ಪರಿವರ್ತನೆ ಸಾಧ್ಯವಿರಲಿಲ್ಲ. ಅಲ್ಲಿ ಕೇವಲ ಸುಧಾರಣೆ ಸಾಲದು. ಪೂರ್ಣ ಪರಿವರ್ತನೆಯ ಅವಶ್ಯಕತೆ ಇತ್ತು.

ಹನ್ನೆರಡನೆಯ ಶತಮಾನದಲ್ಲೂ ಹೀಗೇ ಇತ್ತು. ಪರಸ್ಪರ ದ್ವೇಷ, ಜಾತಿಪಂಥ ಗಳಲ್ಲಿ ಜಗಳಗಳು, ನಡೆಯೊಂದು, ನುಡಿಯೊಂದು, ಆಚಾರಕ್ಕೂ ವಿಚಾರಕ್ಕೂ ಸಂಬಂಧವಿಲ್ಲದ ಬದುಕು, ಜೀವನವೇ ಅಪಹಾಸ್ಯಕ್ಕೀಡಾದ ಸ್ಥಿತಿ, ಆಗ ಪರಿಹಾರ ನೀಡಿ, ಜನ ಬದುಕುವಂತೆ, ಉದಾತ್ತದ ದಾರಿಯಲ್ಲಿ, ಶಿವಮೆಚ್ಚುವ ರೀತಿಯಲ್ಲಿ ಜೀವನ ಸಾಗಿಸುವಂತೆ ಮಾಡಿದಾತ ನಮ್ಮ ಕೂಡಲಸಂಗನ ಪರಮಭಕ್ತ ಬಸವಣ್ಣ. ಕೂಡಲಸಂಗನ ಸಾಕ್ಷಿಯಾಗಿ ವಿಶ್ವದಲ್ಲಿಯೇ ನಡೆಯಲಾರದಂತಹ, ಮಹೋನ್ನತ ವಾದಂತಹ, ಮಾನವಜೀವನದ ಹಿತಕ್ಕಾಗಿ ಕ್ರಾಂತಿಯೆನ್ನಸಗಿದನು ಎಮ್ಮ ಭಕ್ತಿ ಪ್ರಿಯ ಬಸವಣ್ಣ.

ಬಸವಣ್ಣನ ಈ ಪವಿತ್ರ ದಾರಿಯನ್ನು, ಬೆಳಕಿನ ದಾರಿಯನ್ನು ಈ ಶತಮಾನದ ಪೂರ್ವಾರ್ಧದಲ್ಲಿ ಜನ ಬದುಕಲೆಂದು, ಹಿತವಾಗಿಪ್ಪ, ಶಿವಂಗೆ ಪ್ರಿಯವಾಗಿಪ್ಪ ಜೀವನ ನಡೆಸಲೆಂದು ತಂದಾತ ನಮ್ಮ ಯುಗಪುರುಷ ಹಾನಗಲ್ಲ ಕುಮಾರೇಶ. ಈ ದಾರಿ ಕಂಡುಹಿಡಿಯಲು ಅವರು ಪಟ್ಟ ಪರಿಶ್ರಮ, ಅವರು ಎಸಗಿದ ತಪಸ್ಸು ಅಷ್ಟಿಷ್ಟಲ್ಲ. ಅದು ಮಾತಿಗೆ ನಿಲುಕದು. ಕಲ್ಪನೆಗೆ ಒಳಪಡದು. ಬದುಕಿನಲ್ಲಿ, ಜನಜೀವನದಲ್ಲಿ ಹೊಸ ಮನ್ವಂತರ, ಹೊಸ ಚೇತನವನ್ನೇ ತಂದರು. ಅದು ಅವರ ತಪಸ್ಸಿನ ಸಿದ್ಧಿ. ಸಮಾಜಕ್ಕೆ ನಾಡಿಗೆ ತಾವು ಜೀವನದುದ್ದಕ್ಕೂ ತಪಸ್ಸುಮಾಡಿ ಪಡೆದ ಸಿದ್ಧಿಯನ್ನು ತಾಯವಾತ್ಸಲ್ಯದಿಂದ ಸಮಾಜಶಿಶುವಿಗೆ ನೀಡಿ – ಅದು ಆರೋಗ್ಯವಾಗಿರುವಂತೆ, ಸುಖವಾಗಿ ಬೆಳೆಯುವಂತೆ ಮಾಡಿದರು. ಯಾರೂ ಮಾಡಲಾರದ, ಇನ್ನುಳಿದವರಿಗೆ ಅಸಾಧ್ಯವಾದ, ಅದ್ಭುತವಾದ ಈ ಕೆಲಸ ಮಾಡಿದರಂತೆಲೇ ಕುಮಾರ ಸ್ವಾಮಿಗಳು, ಹಾನಗಲ್ಲ ಈ ಯೋಗಿ ನಾಡ ಯೋಗಿಯಾದರು, ಯುಗಪುರುಷರಾದರು.

ಈ ಯೋಗಿಪುಂಗವ ಪ್ರಕೃತಿಪ್ರಿಯ, ಸಂಗೀತಪ್ರಿಯ, ಕಾವ್ಯಪ್ರಿಯ ಎಲ್ಲಕ್ಕೂ ಹೆಚ್ಚಾಗಿ ಮಾನವತಾಪ್ರಿಯ. ಈತ ತುಳಿದ ನೆಲ ಪಾವನವಾಯ್ತು, ನಿಂತ ನೆಲ ಪುಣ್ಯ ಕ್ಷೇತ್ರವಾಯಿತು, ಆಡಿದ ಮಾತು ಬೆಳಕಾಯಿತು, ನೋಡಿದ ನೋಟ ಶಿವನ ಕೂಟವಾಯಿತು. ಇವರು ನಡೆದಲ್ಲೆಲ್ಲ ಬೆಳಕಿನ ಹೆಜ್ಜೆ ಮೂಡಿದವು. ಆಡಿದುದು ನಡೆಯಾಯಿತು, ನಡೆದುದು ನುಡಿಯಾಯಿತು. ನಡೆನುಡಿಯೊಂದುಗೊಳಿಸಿದಾತ ನಮ್ಮ ಹಾನಗಲ್ಲ ಕುಮಾರಯೋಗಿ. ಜ್ಞಾನ, ಕ್ರಿಯೆಯಾಯಿತು, ಕ್ರಿಯೆ ಜ್ಞಾನ ವಾಯಿತು. ಇಂಥ ಮಹೋನ್ನತ ಬದುಕನ್ನು ಬಾಳಿದ ಶ್ರೀ ಕುಮಾರಸ್ವಾಮಿಗಳು ಬಡತನದ ಬವಣೆಯಲ್ಲಿ, ಕಷ್ಟಕಾರ್ಪಣ್ಯದಲ್ಲಿ ಸಿಲುಕಿದ ಮನೆತನದಲ್ಲಿ ಜನ್ಮ ತಾಳಿದರು. ಮಹಿಮಾಪುರುಷರ ಜನನವೆ ಹೀಗೇನೋ! ಕ್ರಿಸ್ತನ ಜನನದ ಘಟನೆ, ಪರಿಸ್ಥಿತಿ ನೋಡಿದಾಗಲೂ ನಮಗೆ ಈ ಭಾವನೆಯೇ ತೋರುತ್ತದೆ. ಬೆತ್ಲೆಹೇಮಿನ ದನ ಕಟ್ಟುವ ಕೊಟ್ಟಿಗೆಯಲ್ಲಿ ಜನಿಸಿದ ಆ ಮಗು ವಿಶ್ವವಂದ್ಯ, ಮಹಾಪುರುಷ, ದೇವ ಮಾನವನಾಗುತ್ತಾನೆಂದು ಯಾರು ನಂಬಿದ್ದರು ? ಬಾಗೇವಾಡಿಯಲ್ಲಿ ಜನಿಸಿ, ಕೂಡಲ

ಸಂಗನ ಭಕ್ತಿಯಲ್ಲಿ ನಿರತನಾದ ಬಸವಣ್ಣ ವಿಶ್ವವೇ ಅಚ್ಚರಿಪಡುವಂತಹ ಬದುಕನ್ನು, ತತ್ವವನ್ನು, ಆಚಾರವನ್ನು, ಮಾನವಧರ್ಮವನ್ನು ಈ ಜಗತ್ತಿಗೆ ನೀಡುತ್ತಿದ್ದನೆಂದು ಯಾವಾತ ಭಾವಿಸಿದ್ದ ? ವಿಷವನಿಕ್ಕಿದರೂ 'ನಿಮಗೆ ಕಲ್ಯಾಣವಾಗಲಿ' ಎನ್ನುತ್ತ ವಿಷ ಕುಡಿದ ಸಾಕ್ರಟೀಸನ ಜನನದಲ್ಲಿ ಯಾರಾದರೂ ಭವಿಷ್ಯ ನುಡಿದಿದ್ದರೇ ಆತನ ಭವ್ಯಜೀವನವನ್ನು ಕುರಿತು? ಸಾಮಾನ್ಯರಾದ ನಮ್ಮಂತೆಯೇ ಜನಿಸಿ, ಬೆಳೆದರೂ ಇವರು ಅಸಾಮಾನ್ಯರಾದವರು, ಅಪ್ರಮಾಣರಾದವರು.

ಕನ್ನಡನಾಡಿನ ಸಾಂಸ್ಕೃತಿಕ ಕೇಂದ್ರವಾದ ಧಾರವಾಡ ಜಿಲ್ಲೆಯ ರಾಣೀಬಿದನೂರಿನ ತಾಲೂಕಿನಲ್ಲಿ "ಜೋಯಿಸರ ಹಳ್ಳಿ" ಎಂಬುದೊಂದು ಚಿಕ್ಕ ಗ್ರಾಮ. ಈ ಚಿಕ್ಕ ಗ್ರಾಮದಲ್ಲಿ ಸಾಲೀಮಠದ ಬಸವಯ್ಯ, ನೀಲಮ್ಮ ಎಂಬ ಹೆಸರಿನ ದಂಪತಿಗಳು. ಶಿವಪೂಜಾತತ್ಪರರು, ಆಚಾರನಿಷ್ಠರು. ಬಡತನವನ್ನೇ ಬಳುವಳಿಯಾಗಿ, ಭಾಗ್ಯವಾಗಿ ಪಡೆದರೂ ಅವರ ದಾಂಪತ್ಯಜೀವನ ಉದಾತ್ತವಾದುದಾಗಿತ್ತು, ಅನುಕರಣೀಯವಾಗಿತ್ತು.

ಇಂದಿಗೆ ತೊಂಭತ್ತುಮೂರು ವರುಷಗಳ ಹಿಂದೆ ಕ್ರಿ. ಶ. ಸಾವಿರ ಎಂಟುನೂರ ಅರವತ್ತೇಳರ ಕಾಲ ಆಗ. ಕತ್ತಲೆಯ ಕಳೆಯಲೆಂದು ಬಂದ ಸೂರ್ಯನ ತೆರದಿ ಸಮಾಜ ಜೀವನದ ಸೂರ್ಯನಾಗಿ ಉದಯಿಸಿದನೆಮ್ಮ ಕುಮಾರಯೋಗಿ. ಇಂದು, ಈ ವಿಜ್ಞಾನಯುಗ ನಂಬಲು ಹಿಂಜರಿಯುವಂತಹ, ಪವಾಡವೆನ್ನುವಂತಹ, ಘಟನೆಗಳು ಹಲವಾರು ಇವೆ – ಈ ಯೋಗಿಯ ಜನನಕ್ಕೆ ಹಿನ್ನೆಲೆಯಾಗಿ. ತಾಯಿ ನೀಲಮ್ಮನವರು ಕನಸಿನಲ್ಲಿ ಮಾಹೇಶ್ವರನನ್ನು ಕಂಡರು. ಆತ ತನ್ನ ಕೈಯಲ್ಲಿದ್ದ ಪುಷ್ಪವನ್ನು ಆಶೀರ್ವದಿಸಿ, ಅದಕ್ಕೆ ಬದಲಾಗಿ ಸುಕುಮಾರನನ್ನು ಬೇಡಿದ. ಅದಕ್ಕೆ ತಾಯಿ, ದೇವಮಾನವನನ್ನು ಜಗತ್ತಿಗೆ ನೀಡುವ ತಾಯಿ, ಜಗನ್ಮಾತೆ "ಆಗಲಿ", ಎಂದಳು. ಲೋಕಕಲ್ಯಾಣವೇ ಜಗನ್ಮಾತೆಯ ಕಾರ್ಯ ತಾನೆ!

ಹನ್ನೊಂದನೆಯ ದಿನ ಮುತ್ತೈದೆಯರೆಲ್ಲ ಸೇರಿ ಜೋಗುಳವ ಪಾಡಿದರು, ಲೋಕೋತ್ತರನಾದ ಮಗುವನ್ನು ತೊಟ್ಟಿಲದಲ್ಲಿರಿಸಿ. 'ಸದಾಶಿವ'ನೆಂದು ನಾಮಕರಣವೂ ಆಯಿತು.

ಮಕ್ಕಳೊಂದಿಗೆ ಬೆಳೆದ. ಆತನ ಆಟಪಾಟಗಳಲ್ಲಿ ಆತನದೇ ವೈಶಿಷ್ಟ್ಯ. ಗೋಲಿಯಾಟದಲ್ಲಿಟ್ಟ ಆತನ ದೃಷ್ಟಿ ಮುಂದೆ ದೃಷ್ಟಿಯೋಗವಾಯಿತು. ಮನೆ ಅಂಗಳದಲ್ಲಿ, ತನ್ನ ಸಮವಯಸ್ಸಿನವರೊಂದಿಗೆ ನಿಂತಿರುವಾಗ, ಆಡುವಾಗ ನೋಡಿದ ದೊಂಬರಾಟ ಅವರ ಹಠಯೋಗಕ್ಕೆ ಕಾರಣವಾಯಿತು.

ಆರನೆಯ ವರುಷದಲ್ಲಿ ಒಂದು ಒಳ್ಳೇ ಮುಹೂರ್ತದಲ್ಲಿ ತಂದೆ ತಾಯಿ ಅಕ್ಷರಾ

ಭ್ಯಾಸಕ್ಕೆ ಪ್ರಾರಂಭಿಸಿದರು. ಸದಾಶಿವನ ಅಭ್ಯಾಸ ಅಜ್ಜಂದಿರಾದ ಶ್ರೀ ಕೊಟ್ರಪ್ಪಯ್ಯನವರ ಶಾಲೆಯಲ್ಲಿಯೇ ನಡೆಯಿತು.

ಜನರಿಂದ ಕಿಕ್ಕಿರಿದು ತುಂಬಿದ ಮನೆಗೆ ಬಡತನವೇ ದಾಳಿಯಿಕ್ಕಿರುವಾಗ ಸದಾಶಿವನ ಅಭ್ಯಾಸ ನಿರಾತಂಕವಾಗಿ ಸಾಗಲು ಸಾಧ್ಯವಾಗಲಿಲ್ಲ. ಬಡತನದ ಬೇಗೆ ಅವರ ವಿದ್ಯೆ ಮುಂದುವರೆಯುವಂತೆ ಮಾಡಲಿಲ್ಲ. ಆಗ ನಡೆದ ಒಂದು ಘಟನೆಯಿಂದ, ನೋವು ಅನುಭವಿಸಿದ ಸದಾಶಿವಯ್ಯನವರು ಆ ಊರಿನಿಂದ ಕಜ್ಜರಿಗ್ರಾಮಕ್ಕೆ ಬಂದರು. ಅಲ್ಲಿ ಯಾರು ಯಾರದೋ ಪರಿಚಯ ಹೆಚ್ಚಿಸಿಕೊಂಡು ಅಭ್ಯಾಸ ಮುಂದುವರಿಸಿದರು. ಸಮಗ್ರ ನಾಲ್ಕುವರುಷ ಉತ್ತಮರೀತಿಯಲ್ಲಿ ಪಾಸಾಗುತ್ತ ಅಭ್ಯಾಸ ಮುಂದುವರಿಸಿ ಮುಲ್ಕಿ ಪರೀಕ್ಷೆಗೆ ಕುಳಿತರು. ಪಾಸಾಗಲಿಲ್ಲ. ಆದರಿಂದ ಮನಸ್ಸಿಗೆ ನೋವಾಗಿ ತಾಯಿಯವರ ತವರುಮನೆಯಾದ ಲಿಂಗದಹಳ್ಳಿಗೆ ಬಂದು, ಒಂದು ಖಾಸಗಿ ಶಾಲೆಯನ್ನು ಪ್ರಾರಂಭಿಸಿ ತಾವೇ ಮಾಸ್ತರರಾಗಿ ಶಾಲೆ ನಡೆಸಿದರು.

ಹೀಗಿರುವಾಗಲೇ ಅವರಿಗಿದ್ದ ಜ್ಞಾನದಾಹ ಅಪಾರವಾಯಿತು. ಆಗ ಅದೇ ಊರಿನಲ್ಲಿದ್ದ ಸಮಾಳದ ಬಸವಪ್ಪಯ್ಯನವರಿಂದ ಶ್ರೀ ನಿಜಗುಣರ ಸಾಹಿತ್ಯ, ವೇದಾಂತ ಅಭ್ಯಾಸ ಪ್ರಾರಂಭಿಸಿದರು. ವೇದಾಂತದ ಅರಿವು, ಇಷ್ಟ-ಪ್ರಾಣ-ಭಾವಲಿಂಗಗಳ ಸೂಕ್ಷ್ಮ ಪರಿಚಯ ನೀಡುವ "ಕೈವಲ್ಯ ಪದ್ಧತಿ" ಅವರ ಬಾಳನ್ನು ಇನ್ನೂ ಉದಾತ್ತಗೊಳಿಸಿತು. ಲಿಂಗಪೂಜೆಯಲ್ಲಿ ಅವರು ನಿರತರಾದರೆ ಬಾಹ್ಯಲೋಕದ ಪ್ರಜ್ಞೆ ಇರುತ್ತಿರಲಿಲ್ಲ. ನಿಜಗುಣರ ಗ್ರಂಥಗಳ ಓದಿನಿಂದಾಗಿ ಅವರಲ್ಲಿ ವೈರಾಗ್ಯ ಬೆಳೆಯಿತು. ಈ ಚಿಕ್ಕ ವಯಸ್ಸಿನಲ್ಲಿಯೇ ಅವರು ಕಾಮ, ಕ್ರೋಧ, ಮೋಹ, ಮದ, ಮತ್ಸರಗಳ ಮೀರಿ ನಿಂತ ಮಹಿಮರಾದರು.

ತನ್ನ ತವರುಮನೆಯಲ್ಲಿದ್ದ ಮಗನ ವಿಷಯ ತಿಳಿದು ತಾಯಿ ಬಂದು ಮದುವೆಗೆ ಒತ್ತಾಯಿಸಿದಾಗ, ತಾಯಿಗೆ ನೂರೊಂದು ಹೇಳಿ ಸಂಸಾರ ನನಗೆ ಸಲ್ಲದು, ಸತ್ಯವಾದ, ಚಿರಂತನವಾದ ಲೋಕಹಿತಾರ್ಥವಾದ ಪ್ರಪಂಚಕ್ಕೆ ನಾನು ನನ್ನನ್ನೇ ಅರ್ಪಿಸಿಕೊಳ್ಳಬೇಕೆಂದಿದ್ದೇನೆ. ನೀನು ಆಶೀರ್ವದಿಸು-ಎಂದು ಹೇಳಿ, ತಾಯಿಗೆ ಸಮಾಧಾನಪಡಿಸಿ ಆ ಸ್ಥಳದಿಂದ ತಾನೇ ಹೊರಡುತ್ತಾನೆ.

ತಾಯ ಸಾಮಿಪ್ಯವಿನ್ನೂ ಬೇಕು-ಎನ್ನುವ ವಯಸ್ಸಿನಲ್ಲಿಯೇ ಸದಾಶಿವಯ್ಯನವರು ವೀರವಿರಾಗಿಯಾಗಿ ಒಮ್ಮೆಲೆ ಎಲ್ಲ ಮೋಹವನ್ನೂ ಕಿತ್ತೆಸೆದು ಸಮಾಜ ಪುರುಷನಾಗಲು ಹೊರಡುತ್ತಾನೆ. ಲಿಂಗದಹಳ್ಳಿ ಬಿಟ್ಟು ಹುಬ್ಬಳ್ಳಿಗೆ ಬಂದು ಆರೂಢರಲ್ಲಿ ವೇದಾಂತ ಅಭ್ಯಾಸ ಮುಂದುವರಿಸುತ್ತಾರೆ. ವೇದಾಂತದ ಅಭ್ಯಾಸಿಯಾಗಿಯೂ ವೇದಾಂತಿಯಾಗಲಿಲ್ಲ. ಇಷ್ಟಲಿಂಗದ ಬಗೆಗೆ ಭಕ್ತಿ ತೋರಿಸದ ಆರೂಢರ ಬಗೆಗೆ ನಮ್ಮ ಸ್ವಾಮಿಗಳಲ್ಲಿ ಶ್ರದ್ಧೆ ಸಾಲದು. ಶಿವಯೋಗದ ಬಗೆಗೇನೇ ಹೆಚ್ಚು ಆಸಕ್ತಿ

ಯಿರಿಸಿಕೊಂಡ ಸ್ವಾಮಿಗಳು ಎಮ್ಮಿಗನೂರು ಜಡೆಸಿದ್ಧರ ಬಳಿಗೆ ಹೋದರು. ಅಲ್ಲಿ ಅವರಿಗೆ ಪರಿಹಾರ ದೊರಕಿತು. ಅಲ್ಲಿಯೇ ಸ್ವಾಮಿಗಳ ತೇಜಃಪುಂಜ ವ್ಯಕ್ತಿತ್ವವನ್ನು, ಸಿದ್ಧಿಯನ್ನು ಕಂಡ ಜಡೆಸಿದ್ಧರು "ಶಿವಯೋಗಿ" ಎಂದು ಕರೆದರು. ಈ ಶಿವಯೋಗಿಯ ಶಿವಯೋಗ ಎಳಂದೂರು ಬಸವಲಿಂಗಸ್ವಾಮಿಗಳಲ್ಲಿ ಪೂರ್ಣಗೊಂಡಿತು. ಬಸವಲಿಂಗ ಸ್ವಾಮಿಗಳು ಶಿಷ್ಯನಲ್ಲಿ ಅಗಾಧವಾದ ಶಕ್ತಿಯನ್ನು ಕಂಡು ಮೆಚ್ಚಿದರು. ತಮ್ಮಲ್ಲಿದ್ದು ದನ್ನೆಲ್ಲ ಆತನಿಗೆ ಧಾರೆಯರೆದುರು.

ಗುರುಶಿಷ್ಯರಿಬ್ಬರೂ ಸೇರಿ ನಾಡಸಂಚಾರ ಮಾಡಿ ಭಕ್ತರಿಗೆ ಸದ್ಬೋಧೆಯನ್ನು ಮಾಡಿದರು. ಸಂಚಾರದಲ್ಲಿರುವಾಗಲೇ ಶ್ರೀ ಬಸವಲಿಂಗಸ್ವಾಮಿಗಳವರಿಗೆ ದೇಹಾ ಲಸ್ಯವಾಯಿತು. ಆಗ ಸದಾಶಿವಯ್ಯಸ್ವಾಮಿಗಳು ಚಿಂತಿಸತೊಡಗಿದರು. ಇದನ್ನು ಕಂಡು ಗುರುಗಳು ಶಿಷ್ಯನನ್ನು ಪಕ್ಕಕ್ಕೆ ಕರೆದು ಧೈರ್ಯ ಹೇಳುತ್ತ ನಿನ್ನಲ್ಲಿ ಯೋಗಶಕ್ತಿಯಿದೆ, ವಿರತಿಯಿದೆ, ಕಾರ್ಯದಕ್ಷತೆಯಿದೆ, ಧೈರ್ಯದಿಂದ ಈ ಸಮಾಜ ಶಿಶುವನ್ನು ಜೋಪಾನಮಾಡಲು ಸಿದ್ಧನಾಗು–ಎಂದು ಹೇಳಿ ಆಶೀರ್ವದಿಸಿ, ಅನು ಗ್ರಹಿಸಿ ಲಿಂಗೈಕ್ಯರಾದರು. ಆ ಗುರುವಿನ ಅನುಗ್ರಹವೇ ಪರಮಾರ್ಥ ಸಂಪತ್ತೆಂದು ಸ್ವೀಕರಿಸಿದರು ನಮ್ಮ ಸ್ವಾಮಿಗಳು.

ಅಲ್ಲಿಂದ ಮುಂದೆ ನಿಜಗುಣರ ತಪೋಭೂಮಿಯಾದ ಶಂಭುಲಿಂಗನ ಬೆಟ್ಟದಲ್ಲಿ ಬಂದು ಗವಿಯಲ್ಲಿ ನೆಲಸಿ ಸಮಾಜ, ನಾಡು, ದೇಶದ ಹಿತಕ್ಕಾಗಿ ಬೇಕಾದ ತಪಃಸಿದ್ಧಿ ಯನ್ನು ಪಡೆದರು. ಒಂದು ಮಂಗಲ ಬೆಳಗಿನಲ್ಲಿ ಮಹಾಸ್ವಾಮಿಗಳು ತಮ್ಮ ತಪಸ್ಸಿನ ಸಿದ್ಧಿಯನ್ನು ಸಮಾಜಕ್ಕೆ ನೀಡಲೆಂದು ಬೆಳಗಿನಲ್ಲಿ ಹಕ್ಕಿಯ ಮಂಗಲಗೀತ ದೊಂದಿಗೆ ಗವಿ ಬಿಟ್ಟು ಹೊರ ಹೊರಟರು.

ಅವರು ಹೋದಲ್ಲೆಲ್ಲ ಶಿಷ್ಯಕೋಟಿ ಬೆಳೆಯಿತು. ಅವರ ಮಾತು ಮುತ್ತು, ರತ್ನ. ನಡೆ ನುಡಿ, ಶಿವ ಮೆಚ್ಚುವ ತೆರದಿ. ಸ್ವಾಮಿಗಳು ಜನರ ಮನದಲ್ಲಿ ವಿರಾಜ ಮಾನರಾದರು. ಅವರು ತುಳಿದ ನೆಲ ಪಾವನ ಕ್ಷೇತ್ರವಾಯಿತು. ಹೀಗೆಯೇ ನಾಡೆಲ್ಲ ಸಂಚರಿಸುತ್ತ ಸೊರಬ ಪ್ರಾಂತಕ್ಕೆ ಬಂದರು. ಅಲ್ಲಿಯ ಭಕ್ತರ ಉತ್ಕಟ ಇಚ್ಛೆಯಂತೆ ಸ್ವಾಮಿಗಳು ಕೆಲಕಾಲ ಅಲ್ಲಿಯೇ ನೆಲಸಿದರು.

ಹಾನಗಲ್ಲ ಮಠಾಧಿಪತಿಗಳಾಗಿದ್ದ ಶ್ರೀ ಮ. ನಿ. ಫಕೀರಸ್ವಾಮಿಗಳವರು ತುಂಬ ವಯೋವೃದ್ಧರಾಗಿದ್ದರು. ಆಗ ಅವರು ಸಮರ್ಥ ಉತ್ತರಾಧಿಕಾರಿಯ ದಾರಿ ಕಾಯುತ್ತಿದ್ದರು. ಆ ಕ್ಷಣದಲ್ಲಿಯೇ ಸೊರಬ ಪ್ರಾಂತದಲ್ಲಿದ್ದ ಸದಾಶಿವಯ್ಯನವರನ್ನು ತಮ್ಮಲ್ಲಿಗೆ ಕರೆಯಿಸಿಕೊಂಡು ಅವರು ಮಠಾಧಿಪತ್ಯ ತಮಗೆ ಬೇಡವೆಂದು ಹೇಳಿದರೂ ಸ್ವಾಮಿಗಳು, ಭಕ್ತರು ಕೇಳಲಿಲ್ಲ. ಶ್ರೀ ಮ. ನಿ. ಫಕೀರಸ್ವಾಮಿಗಳ ಹಾಗೂ ಭಕ್ತರ ಒತ್ತಾಯಕ್ಕಾಗಿ ಮಠಾಧಿಪತ್ಯ ಒಪ್ಪಿಕೊಂಡರು. ಆ ಮಠದ ಮಠಾಧಿಪತ್ಯದ ನಂತರ ಸದಾಶಿವಯ್ಯನವರು ಹಾನಗಲ್ಲ ಕುಮಾರಸ್ವಾಮಿಗಳಾದರು. ಇಲ್ಲಿಂದಲೇ

ಅವರ ಭವ್ಯ ಜೀವನದ ನಾಂದಿಯಾಗುತ್ತದೆ. ಹಾನಗಲ್ಲಿನಲ್ಲಿ ಪ್ರಾರಂಭಿಸಿದ ಪಾಠ ಶಾಲೆಯಿಂದ ಅವರಿಗೆ ತೃಪ್ತಿಯಾಗಲಿಲ್ಲ. ಸಮಾಜದ, ನಾಡಿನ ತಮಸ್ಸಿಗೆ ಜ್ಯೋತಿ ಪ್ರಜ್ವಲಿಸಬೇಕೆಂದು ಆಶಿಸಿ ಆ ರೀತಿಯಲ್ಲಿ ಕಾರ್ಯತತ್ಪರರಾಗಿ ವೀರಶೈವ ಮಹಾ ಸಭೆಯೆಂಬ ಸಂಸ್ಥೆಯೊಂದನ್ನು ಸ್ಥಾಪಿಸಿ ಅದರ ಮುಖಾಂತರ ಸಮಾಜ, ಧರ್ಮ, ಜನತೆಯ ಜಾಗೃತಿಯನ್ನು ಪ್ರಾರಂಭಿಸಿದರು.

ನಾಡನ್ನೆಲ್ಲ ಸಂಚರಿಸಿ, ಅಲ್ಲಲ್ಲಿ ಸಭೆ ಸಮ್ಮೇಳನಗಳನ್ನು ಕರೆದು, ಪಾಠಶಾಲೆ ಗಳನ್ನು, ಉಚಿತ ಪ್ರಸಾದನಿಲಯಗಳನ್ನು, ವಾಚನಾಲಯಗಳನ್ನು ತೆರೆಯಿಸಿ, ಸಂಶೋಧನ ಕೇಂದ್ರಗಳನ್ನು ಸ್ಥಾಪಿಸಿ ಸಮಾಜದಲ್ಲಿ ಹೊಸ ಬೆಳಕನ್ನು, ಹೊಸ ದೃಷ್ಟಿಯನ್ನು ತರಲು ಪ್ರಯತ್ನಿಸಿದರು. ಈ ನಾಡಿನ ಸಂಸ್ಕೃತಿ, ಇತಿಹಾಸ, ಸಾಹಿತ್ಯದ ಬಗೆಗೆ ಮಹಾಸ್ವಾಮಿಗಳವರಲ್ಲಿ ಅಪಾರ ಅಭಿಮಾನ.

ನಾಲಂದ ವಿಶ್ವವಿದ್ಯಾನಿಲಯದ ಹಾಗೆ ಒಂದು ಸಂಸ್ಥೆ ಸ್ಥಾಪಿಸಿ ಅದರ ಮುಖಾಂತರ ವೀರಶೈವ ಸಂಸ್ಕೃತಿ, ಇತಿಹಾಸ, ಸಾಹಿತ್ಯ, ಧರ್ಮದ ಏಳ್ಗೆ ಸಂಪಾದಿಸ ಬೇಕೆಂದು ಬಯಸಿ, ಪ್ರಕೃತಿ ಸೌಂದರ್ಯದ ಪರಮಧಾಮವಾದ ಸುತ್ತು ಗಿರಿಗಳ ಕೋಟೆಯಿಂದ ಸುಶೋಭಿತವಾದ, ಮಾಮರ, ನೇರಿಳೆ, ಮುತ್ತುಗದ ಮರಗಳ ನೆರಳ 'ಬಯಲಿ'ನಲ್ಲಿ, ಜುಳು ಜುಳು ಎಂದು ಸದಾ ನಿನದಿಸುವ ಮಲಪ್ರಭಾ ನದಿಯ ಬಳಿ **"ಶಿವಯೋಗ ಮಂದಿರ"** ಸ್ಥಾಪಿಸಿದರು–ಶ್ರೀಗಳವರು ಇಂದಿಗೆ ಐವತ್ತು ವರುಷಗಳ ಹಿಂದೆ. ಅದೊಂದು ಅದ್ಭುತ:ಕಲ್ಪನೆ ಸಿದ್ಧಿ ತಾಳಿದ ಸತ್ಯ. ಅದರ ಹಿನ್ನೆಲೆಯಲ್ಲಿರುವ ಘಟನೆಗಳು ಬಹು ವಿಚಿತ್ರವಾಗಿವೆ, ರೋಮಾಂಚಕವಾಗಿವೆ, ಪವಾಡಮಯವಾಗಿವೆ. **' ಶಿವಯೋಗ ಮಂದಿರ '** ಸ್ವಾಮಿಗಳ ಪೂರ್ಣಯೋಗದ ಫಲ.

'ಶಿವಯೋಗ ಮಂದಿರ' ಸುಂದರ ಕಾವ್ಯ. ತಂಗಾಳಿ ಸೂಸುತಿದೆ ಇಲ್ಲಿ, ತನಿಗಂಪು ತೀಡುತಿದೆ, ಕೂಹೂ ಕೂಹು ಎಂದು ಕೂಗುವ ಕೋಗಿಲೆಗಳ ಮಾಧುರ ಧ್ವನಿ ಇದೆ ಇಲ್ಲಿ – ಸಾವಿರಾರು ವಟುಗಳು ಕಾವಿಲಾಂಛನವ ತೊಟ್ಟು, ತಪದಲ್ಲಿ, ಪೂಜೆಯಲ್ಲಿ, ಕಾಯಕದಲ್ಲಿ ನಿರತರಾಗಿರುವ ದೃಶ್ಯ, ಸಾವಿರಾರು ಹಸುಗಳು, ವಟುಗಳ, ವೀರ ವಿರಾಗಿಗಳ ಸಲುಹುವ ಗೋಮಾತೆಯರು, ಬಿಲ್ವಪತ್ರಿ ಗಿಡಗಳ ಸಾಲು ಸಾಲು, ಒಂದೆಡೆ ಪವಿತ್ರ ಭಸ್ಮ ಸಿದ್ಧಿಗೊಳಿಸುವ ಕಾಯಕ, ಮತ್ತೊಂದೆಡೆ ಪುರಾತನ ಗ್ರಂಥಗಳ ಸಂಶೋಧನ ಕೇಂದ್ರದಲಿ ನಿರತರಾಗಿಹ ಸಂಶೋಧಕರು, ಇವೆಲ್ಲಕ್ಕೂ ಸೂತ್ರಧಾರಿಗಳಾಗಿ, ಶಕ್ತಿಯಾಗಿ, ಚೇತನಸ್ವರೂಪರಾಗಿ ನಿಂತವರು ನಮ್ಮ ಕುಮಾರಯೋಗಿಗಳು.

ನುಡಿದಂತೆ ನಡೆದು, ತಮ್ಮ ಅಪಾರ ಶಕ್ತಿಯಿಂದ ಯೋಗದ ಬಲದಿಂದ ನಾಡಿನ ಜನಮನ ಗೆಲಿದರು. ಅವರು ಸಂಗ್ರಹಿಸಿ ಇಂದು ಶಿವಯೋಗ ಮಂದಿರದ ಸಂಶೋಧನ ಶಾಖೆಯಲ್ಲಿರಿಸಿರುವ ಪುರಾತನ ತಾಡೋಲೆ ಗ್ರಂಥಗಳು, ನಾಡಿನ ಸಂಶೋಧಕರಿಗೆ ಆಹ್ವಾನ ನೀಡುತಲಿವೆ. ಅವರ ಸಂಗ್ರಹದಿಂದಲೇ ವಿಶ್ವಸಾಹಿತ್ಯಕ್ಕೆ ನಮ್ಮ ಕಾಣಿಕೆ ಯಾಗಬಲ್ಲಂಥ ವಚನಸಾಹಿತ್ಯ ಬೆಳಕು ಕಂಡಿತು.

ನಮ್ಮನಾಡಿನಲ್ಲಿ ಸಂಗೀತ ಪ್ರಸಾರವಾಗಿದ್ದರೆ ಅದು ಶ್ರೀಗಳವರ ಪುಣ್ಯಪ್ರಭಾವ. ಆ ಪ್ರಭಾವಳಿಯಲ್ಲಿ ಬೆಳೆದ ಉಭಯ ಗಾಯನ ವಿಶಾರದ ಪಂ. ಪಂಚಾಕ್ಷರಿ ಗವಾಯಿ ಗಳು ಕರ್ನಾಟಕದಲ್ಲಿ ಸಂಗೀತಕ್ಕೆ ಜೀವ ತುಂಬಿದರು. ಸಂಗೀತ, ಸಾಹಿತ್ಯ, ಸಂಸ್ಕೃತಿ, ಧರ್ಮ–ಈ ಎಲ್ಲದರ ಉದ್ಧಾರಕ್ಕೆ, ಬೆಳವಣಿಗೆಗೆ ಕಾರಣಕರ್ತರಾದವರು ನಮ್ಮ ಯುಗಪುರುಷ ಕುಮಾರೇಶ.

ಶ್ರೀಗಳವರು ಚಲಿಸಿದ ನೆಲವೆಲ್ಲ ಪಾವನವಾಯ್ತು; ಅವರು ನುಡಿದುದೆಲ್ಲ ಮಂತ್ರವಾಯ್ತು; ಅವರು ನಡೆದಲ್ಲೆಲ್ಲ ಬೆಳಕಿನ ಹೆಜ್ಜೆ ಮೂಡಿದವು. ಆ ದಿವ್ಯ ಬೆಳಕಿನಲ್ಲಿ ಅಸಂಖ್ಯಾತ ಯತಿವರೇಣ್ಯರು; ಕವಿ ಕಾವ್ಯಕೋವಿದರು, ಸಂಗೀತ ಸುಧಾಕರರು ವೈದಳೆದರು.

ಆ ಪಾವನ ಬೆಳಕು ಇಂದು ಆ ಪರಶಿವನ ಚಿತ್ಕಳೆಯ ಬೆಳಕಿನೊಂದಿಗೆ ಸೇರಿದ್ದರೂ ಆ ಬೆಳಕಿನಲ್ಲಿ ಮೂಡಿಬಂದ ಬೆಳಕಿನ ಅಸಂಖ್ಯಾತ ಶಿಶುಗಳು ಈ ನಾಡಿನ ಜನಮನವನ್ನು ಕಲ್ಯಾಣದತ್ತ ನಡೆಯಿಸಿಕೊಂಡು ಹೋಗುತಿವೆ. ಹಾನಗಲ್ಲ ಶ್ರೀಗಳ ಚಿರಂತನ ಇರುವಿಕೆಗೆ ಇದಕ್ಕಿಂತ ಸಾಕ್ಷಿ ಇನ್ನೇನು ಬೇಕು? ಅವರು ಪರಮ ಪುರುಷರು, ಪಾವನಚರಿತರು; ಸಕಲ ಸಚ್ಚಿದಾನಂದಭರಿತರು. ಶಿವಯೋಗ ಸಾಯುಜ್ಯ ಪಡೆದ ಮಹಾ ಮಹಿಮರು.

ಈ ಮಹಾಮಹಿಮರ ಸನ್ನಿಧಾನದಲ್ಲಿ ಪರಮಭಕ್ತಿಯಿಂದ ನಡೆದು, ಅವರ ಜೀವನದ ಹಿರಿಮೆಯನ್ನು ಕಂಡುಂಡು ಆ ಪಥದಲ್ಲಿ ನಡೆಯುತ್ತ, ಅವರ ಉದ್ದೇಶಗಳ ಸಾಫಲ್ಯತೆಯಲ್ಲಿ ಕಾರ್ಯನಿರತರಾಗಿರುವ ಆಚಾರನಿಷ್ಠರೂ, ತಪಸ್ವಿಗಳೂ, ಪಂಡಿ ತೋತ್ತಮರೂ ಆದ ಷ|| ಬ್ರ|| ಶ್ರೀ ಸದಾಶಿವ ಶಿವಾಚಾರ್ಯ ಮಹಾಸ್ವಾಮಿಗಳು ಈ ನಾಡಿನ ಬಹು ದೊಡ್ಡ ಭಾಗ್ಯ. 'ಕುಮಾರಾಶ್ರಮ'ವೆಂಬ ಹೆಸರಿನಲ್ಲಿ ಗಿರಿಯಾಪುರದ ಹತ್ತಿರ 'ಶಿವಯೋಗ ಮಂದಿರ'ದ ತೆರದಿ ಆಶ್ರಮವ ಕಟ್ಟಿ ಅದಕ್ಕೆ ಶ್ರೀಗುರುವಿನ ನಾಮಕರಣ ಮಾಡಿ, ಅಲ್ಲಿ ಶ್ರೀಗುರುವಿನ ಸ್ಮಾರಕವಾಗಿ, ಸಭೆ, ಸಮ್ಮೇಳನಗಳನ್ನು ನಡೆಯಿಸಿ ಜ್ಞಾನದಾಸೋಹದ ಕಾರ್ಯ ಕೈಕೊಂಡು, ಗುರುವಿನ ಕಾರ್ಯವನ್ನು ಮುಂದುವರಿಸಿಕೊಂಡು ಹೋಗುತ್ತಿರುವ ಶ್ರೀ ಸದಾಶಿವ ಶ್ರೀಗಳು ಹಾನಗಲ್ಲ ಶ್ರೀಗಳವರಿಗೆ ಪರಮಪ್ರಿಯರಾದವರು.

ಅಂದು **'ಶಿವಯೋಗ ಮಂದಿರ'** ಹಾನಗಲ್ಲ ಶ್ರೀಗಳವರಿಂದ ಸ್ಥಾಪಿತವಾಗಿ ನಾಡನ್ನು ಉದ್ಧರಿಸಿದ್ದರೆ ಇಂದು ಅದೇ ಚೇತನಶಕ್ತಿ ಗಿರಿಯಾಪುರದ **'ಕುಮಾರಾಶ್ರಮ'**ವಲ್ಲಿ ನೆಲೆನಿಂತು ಶ್ರೀ ಸದಾಶಿವ ಶ್ರೀಗಳ ಮುಖಾಂತರ ಈ ನಾಡಿನ ಜನ ಮನದ ಉದ್ಧಾರಗೈಯುತಿದೆ.

**"ಶಿವಯೋಗ ಮಂದಿರ"** ಹಾಗೂ **"ಕುಮಾರಾಶ್ರಮ"** ಈ ನಾಡಿನ ಚೇತನ ಶಕ್ತಿಗಳು. ಇವು ಬೆಳೆದು ಬಂದಷ್ಟೂ ಈ ನಾಡಿನ ಕಲ್ಯಾಣವಾಗುತ್ತದೆ; ಉದ್ಧಾರ ವಾಗುತ್ತದೆ.

'ಕುಮಾರಾಶ್ರಮ'ಕಟ್ಟಿ ಜನಮನದ ಉದ್ಧಾರಗೈಯುತಿರುವ ಶ್ರೀ ಶ್ರೀ ಸದಾಶಿವ ಶಿವಾಚಾರ್ಯರ ಅರವತ್ತು ವರುಷದ ಮಹಾಸಮಾರಂಭವನ್ನು ನಾಡು ವೈಭವಯುಕ್ತ ವಾಗಿ 'ಇಂದು ಮಾಡುತಿದೆ. ಈ ಕಾಲದ ಮಹಾ ತಪಸ್ವಿಗಳಾದ ನಮ್ಮ ಶ್ರೀಗಳವರಿಗೆ ಈ ನಾಡಿಗಾಗಿ, ನಾಡಿನ ಜನತೆಯ ಒಳಿತಿಗಾಗಿ ಶ್ರೀ ಕುಮಾರೇಶ ಆಯುರಾರೋಗ್ಯ ನೀಡಿ ಈ ಚೈತನ್ಯಶಕ್ತಿ ನಮ್ಮ ಮಧ್ಯ ಬಹಳ ಕಾಲ ಇರುವಂತಾಗಲಿ.

ಹಾನಗಲ್ಲ ಶ್ರೀಗಳ ಹಾಗೂ ಶ್ರೀ ಸದಾಶಿವ ಶಿವಾಚಾರ್ಯರ ಹೆಸರಿನೊಂದಿಗೆ ಅವಶ್ಯ ಬರಬೇಕಾದ ಇನ್ನೊಂದು ಹೆಸರು ಕನ್ನಡ ಕುಲದ, ಕನ್ನಡ ಸಾಹಿತ್ಯದ ಉದ್ಧಾರಕರೂ, ಗುರುಮನೆಯನ್ನು ಸರಸ್ವತಿಯ ಅರಮನೆಯನ್ನಾಗಿ ಪರಿವರ್ತಿಸಿ ಮಹಾಕಾವ್ಯಗಳನ್ನು ಅಸಂಖ್ಯಾತ ಆಧ್ಯಾತ್ಮಿಕ ಗ್ರಂಥಗಳನ್ನು ರಚಿಸಿದವರೂ ಆದ ಶ್ರೀ ಗಿರಿರಾಜ ಮಣಿ ಖಚಿತ ಕನಕ ಸೂರ್ಯ ಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರು.

ನುಡಿಗಾಗಿ, ನಾಡಿನ ಜನಮನದ ಲೇಸಿಗಾಗಿ ಶ್ರೀಗಳವರು ಸಲ್ಲಿಸುತ್ತಿರುವ ಸೇವೆ ಅಮೋಘವಾದುದು; ಅಪಾರವಾದುದು. ಕನ್ನಡಕುಲದ ಗುರುಗಳಾದ ಇವರು ಹಾನಗಲ್ಲ ಶ್ರೀಗಳವರಲ್ಲಿ ಹಾಗೂ ಸಖರಾಯಪಟ್ಟಣದ ಶ್ರೀ ಸದಾಶಿವ ಶಿವಾಚಾರ್ಯರಲ್ಲಿ ಇಟ್ಟಿರುವ ಶ್ರದ್ಧೆ ಅಷ್ಟಿಷ್ಟಲ್ಲ.

ಇಂದು ಗಿರಿಯಾಪುರದಲ್ಲಿ ನಡೆದುಬರುತ್ತಿರುವ ಎಲ್ಲ ಕಾರ್ಯಗಳಲ್ಲೂ ಜಗದ್ಗುರುಗಳ ಚೇತನ ಶಕ್ತಿಯಿದೆ, ಚಿಂತನೆಯಿದೆ.

ಈ ಕಾಲದ ಬಹು ದೊಡ್ಡ ದಾರ್ಶನಿಕ ಕವಿಗಳೂ, ದೃಷ್ಟಾರರೂ ಆದ ನಮ್ಮ ಶ್ರೀ 'ಜ. ಚ. ನಿ.' ಮಹಾಸನ್ನಿಧಿಯಲ್ಲಿ ಈ ಸೇವೆಯನ್ನು ಅರ್ಪಿಸಿ, ಈ ಸೇವೆ ಅರ್ಪಿತಗೊಂಡ ಭಾಗ್ಯ ನನ್ನದಾಗಲಿ ಎಂದು ಬೇಡಿಕೊಂಡು ಅವರ ಶ್ರೀ ಪಾದಕ್ಕೆ 'ನಮೋ ನಮೋ' ಎಂಬೆ.

———:::———



# ಭಕ್ತಿ



**ಶ್ರೀ ಶಾಂತರಸ,** ರಾಯಚೂರು.

(೧)

**ಭಕ್ತಿ** ಎಂದರೇನು? ಈ ಪ್ರಶ್ನೆಗೆ ಉತ್ತರವಾಗಿ ವಿಶ್ವಾಸ, ನಿಷ್ಠೆ, ಪ್ರೇಮ, ದೇವರನ್ನು ಒಲಿಸುವ ದಾರಿ, ಎಂದು ಮುಂತಾಗಿ ಯಾರಾದರೂ ಹೇಳಬಹುದು. ಆದರೆ ಭಕ್ತಿಯ ವ್ಯಾಖ್ಯೆ ಇಷ್ಟರಿಂದಲೇ ಮುಗಿಯುವದೇ? ಸಾಮಾನ್ಯ ಜನರು ನೇಮ, ನಿಷ್ಠೆ, ಜಪ, ವ್ರತ ಮುಂತಾದುವುಗಳಿಗೆ ಭಕ್ತಿ ಎನ್ನುವರು. ವಿಭೂತಿ ರುದ್ರಾಕ್ಷಿಗಳನ್ನು ಧರಿಸಿ ಒಳ್ಳೆಯ ಮಾತಾಡುವವರೂ ಮಾತುಮಾತಿಗೆ ಸಂಸಾರ ವನ್ನು ಹಳಿಯುವ ದುರುಳ ವೇದಾಂತಿಗಳೂ ಮಲ್ಲಯ್ಯ, ಬೀರಯ್ಯ ಮೊದಲಾದ ದೇವತೆಗಳ ಮುಂದೆ ಕುಣಿಕುಣಿದು ಹೇಳಿಕೆ ಹೇಳುವವರೂ ನಡೆನುಡಿ ಹೇಗೇ ಇರಲಿ ನಿತ್ಯ ಪುರಾಣ ಪ್ರವಚನಗಳಿಗೆ ತಪ್ಪದೇ ಹೋಗುವವರೂ ಅಧರ್ಮದಿಂದ ಗಳಿಸಿ ಧರ್ಮದ ಹೆಸರಿನಲ್ಲಿ ದಾನ ಮಾಡುವವರೂ ಜನರ ದೃಷ್ಟಿಯಲ್ಲಿ ಭಕ್ತರೇ. ಒರೆಗಲ್ಲಿಗೆ ತಿಕ್ಕಿ ನೋಡಿದರೆ ಇವರ ಭಕ್ತಿ ಎಷ್ಟೆಂಬುದು ಗೊತ್ತಾಗುವುದು. ಇವರ ಭಕ್ತಿ ಏತ ತಲೆಬಾಗಿದಂತೆ; ಇಕ್ಕುಳ ಕೈಮುಗಿದಂತೆ; ಇವರ ಧ್ಯಾನ, ನಿಷ್ಠೆ, ಬಕನ ಕುಲಕ್ಕೆ ಸೇರಿದುದು.

ಭಗವದ್ಗೀತೆಯಲ್ಲಿ ಭಕ್ತಿಯ ಬಗೆಗೆ ಉಲ್ಲೇಖವಿದೆ. ನಾರದ ಭಕ್ತಿ ಸೂತ್ರ ವಂತೂ ಎಲ್ಲರಿಗೂ ತಿಳಿದ ವಿಷಯ. ಆದರೆ ಈ ಭಕ್ತಿ ಬಸವಣ್ಣ ಮತ್ತು ಶರಣರು ಆಚರಿಸಿ ತೋರಿಸಿದಂತಹ ಭಕ್ತಿಯಲ್ಲ. ನಿಜವಾದ ಭಕ್ತಿಯಿಂದ ಬಸವಣ್ಣ ಜಗದಣ್ಣನಾದ. ಬಸವಣ್ಣನನ್ನು ಆಶ್ರಯಿಸಿದ ಭಕ್ತಿ ಬಣ್ಣವೇರಿತು; ತನ್ನ ಚರಮ ಸೀಮೆಯನ್ನು ಮುಟ್ಟಿತು.

( ೨ )

ಕೀಡಿ ತುಂಬಿಯಾಗುವಂತೆ ನರನು ಹರನಾಗಬೇಕು. ಹೀಗಾಗಲು ಅವನು ಹುಟ್ಟನ್ನು ಅಳಿಸಬೇಕು; ಸಾವನ್ನು ಗೆದೆಯಬೇಕು. ಹುಟ್ಟು ಸಾವುಗಳ ನಡುವಿನ ಅವನ ಬದುಕು ಮರ್ತ್ಯಕ್ಕೆ ಮಂಗಳವನ್ನೂ ಕಲ್ಯಾಣವನ್ನೂ ಉಂಟುಮಾಡಬೇಕು.

ಹುಟ್ಟಳಿಸಿ ಸಾವನ್ನು ಗೆದೆಯಲು ಮನುಷ್ಯ ಸನ್ಯಾಸಿಯಾಗಿ ಸಂಸಾರವನ್ನು ತೊರೆಯಬೇಕಾಗಿಲ್ಲ; ಗುಡ್ಡಗಾಡು ಸೇರಬೇಕಾಗಿಲ್ಲ. ಸಂಸಾರವು ಮಾಯೆ ಯೆಂದೂ ಅದು ಮೋಕ್ಷಸಾಧನೆಗೆ ಕಂಟಕವೆಂದೂ ಬಗೆದು ಕಾಡು ಸೇರಿ ತಪವನ್ನಾ ಚರಿಸಿ ಮುಕ್ತಿ ಪಡೆದವನು ಸ್ವಾರ್ಥಿಯೇ ಸರಿ. ಭಕ್ತನ ದಾರಿ ಇದಲ್ಲ. ಅವನು ಪ್ರಪಂಚವನ್ನು ತ್ಯಾಗಮಾಡುವದಿಲ್ಲ; ಪ್ರಪಂಚಕ್ಕಾಗಿ ತನ್ನ ಸುಖವನ್ನು ತ್ಯಾಗ ಮಾಡುವನು.

ಭಕ್ತಿ ನೆಲೆಸಿದ ಬಳಿಕ ಸಂಸಾರವೆಂಬುದು ಮಾನವನಿಗೆ ತನ್ನನ್ನು ತಾನು ಬೆಳಗಿಸಿಕೊಳ್ಳುವ ಸೊಡರಾಗುವುದು, ಗುರುಲಿಂಗ ಜಂಗಮರಿಗೆ ಮಾಡಿ ನೀಡುವ ಸಿರಿಯು ಲೋಕದ ಸಂಪತ್ತನ್ನು ಬೆಳೆಸುವದು.

ಕಪ್ಪೆ ಹಸಿದಿದೆ. ಮುಂದಿದ್ದ ನೊಣವನ್ನು ನುಂಗಲು ಬಯಸುತ್ತದೆ. ಆದರೆ ತನ್ನ ಹಿಂದೆ ಹಸಿದು ಬಾಯಿ ತೆರೆದು ನಿಂತ ಹಾವಿನ ಅರಿವು ಅದಕ್ಕಿಲ್ಲ. ನೊಣವನ್ನು ನುಂಗಿ ತನ್ನ ಹಸಿವನ್ನು ಹಿಂಗಿಸಿಕೊಳ್ಳುವ ಕಪ್ಪೆ ಹಸಿದ ಹಾವಿಗೆ ಆಹಾರವಾಗುವುದು. ಇದು ಈ ಸಂಸಾರದ ನಿಜವಾದ ಸ್ವರೂಪ. ಹೀಗೆ ಸಂಸಾರವು ಕಷ್ಟವಾಗಿದೆಯೆಂದು ಮನುಷ್ಯನಾದವನು ಹೆದರಿ ಸನ್ಯಾಸಿಯಾಗಿ ಕಾಡಿಗೆ ಓಡಬೇಕೇ? ಅಥವಾ ಅಜ್ಞಾನಿಯಾಗಿ ಹಾವಿನ ಬಾಯಿಗೆ ತುತ್ತಾಗಬೇಕೆ? ಅಜ್ಞಾನದಿಂದ ಅವನು ಹಸಿದ ಹಾವಿನ ಬಾಯಿಗೆ ತುತ್ತೂ ಆಗಬಾರದು, ಹೆದರಿ ಇದರಿಂದುಳಿಯಲು ಸಂನ್ಯಾಸಿಯೂ ಆಗಬಾರದು. ಸಂಸಾರದಲ್ಲಿಯೇ ಇದ್ದು ಬಾಯಿ ತೆರೆದು ನುಂಗಲು ನಿಂತ ಮಾಯೆ ಎಂಬ ಹಾವಿಗೆ ತುತ್ತಾಗದಂತಿರಬೇಕು; ಅಜ್ಞಾನವೆಂಬ ನೊಣಕ್ಕೆ ಆಶೆ ಮಾಡದೆ ಜ್ಞಾನಸಂಪಾದಿಸಿ ತನ್ನ ತಾನರಿಯ ಬೇಕು. ಇದಕ್ಕೆ ಶರಣರು ಭಕ್ತಿಯೆಂಬ ಹೆದ್ದಾರಿಯನ್ನು ಹಾಕಿಕೊಟ್ಟರು.

( ೩ )

ಮರ್ತ್ಯವೆಂಬುದು ಕರ್ತಾರನ ಕಮ್ಮಟ; ನಾವು ಈ ಕಮ್ಮಟದಲ್ಲಿ ಚೊಕ್ಕ ನಾಣ್ಯ ಗಳಾಗಿ ಹೊರಬರಬೇಕು. ಇಲ್ಲಿ ಸಲ್ಲದ ನಾಣ್ಯ ಯಾವ ಲೋಕದಲ್ಲಿಯಾದರೂ ಸಲ್ಲುವುದು. ಇಂತಹ ಚೊಕ್ಕನಾಣ್ಯನಾಗಲು ನಾವು 'ಚನ್ನಾ'ಗಬೇಕು, ನಮ್ಮ ಜೀವನ 'ಚನ್ನಾ'ಗಬೇಕು, ನಮ್ಮ ಮರ್ತ್ಯ 'ಚನ್ನ' ಆಗಬೇಕು. ಈ ಎಲ್ಲ ಬೇಕುಗಳನ್ನು ಪೂರೈಸಲು ಬೇಕು-ಭಕ್ತಿ.

ನಂಬುಗೆ ಭಕ್ತಿಯ ಜೀವ. ನಂಬುಗೆ ಬೇಕು ದೇವನಲ್ಲಿ, ತನ್ನ ಸಾಧನೆಯಲ್ಲಿ.

ನರ ಕೂರಂಬಿನಲೆಚ್ಚ : ಅವನಿಗೆ ಶಿವನೊಲಿದ
ಕಾಮು ಅರಳಂಬಿನಲೆಚ್ಚ : ಶಿವ ಅವನನ್ನುರುಹಿದ
ಹಗಲಿರುಳೆನ್ನದೆ ಪ್ರಾಣಘಾತವ ಮಾಡಿದ
ಬೇಡನ ಕೈಲಾಸಕ್ಕೊಯ್ದ.

ನಂಬುಗೆಯಲ್ಲಿ ಎಂಥ ಶಕ್ತಿ ಇದೆಯೆಂಬುದು ಇದರಿಂದ ಗೊತ್ತಾಗುವುದು. ನಂಬಿ ಕರೆದರೆ 'ಓ' ಎನ್ನನೇ ಶಿವನು? ನಿಶ್ಚಯವಾಗಿ 'ಓ' ಎನ್ನುವನು. ಆದರೆ ಸೌಂದರ ನಂಬಿಯಂತಹ ನಂಬುಗೆ ನಮ್ಮಲ್ಲಿ ಬೇಕು.

(೪)

ನೀತಿ ಭಕ್ತಿಯ ತಾಯಿಬೇರು. ನೀತಿಯಿಲ್ಲದ ಭಕ್ತಿ ಒಳಲೊಟ್ಟೆ, ಅತ್ತಿಯ ಹಣ್ಣು. ಅಂತರಂಗ ಮತ್ತು ಬಹಿರಂಗದ ಶುದ್ಧಿ ನೀತಿ ಸದಾಚಾರದಿಂದ ಸಾಧ್ಯ. ಮೈತುಂಬ ವಿಭೂತಿ ಬಳಿದುಕೊಂಡು, ರುದ್ರಾಕ್ಷಿ ಲಿಂಗಗಳನ್ನು ಧರಿಸಿ ಅಂತರಂಗ ಶುದ್ಧಿಯಿಲ್ಲದಿದ್ದರೆ ಏನು ಫಲ? ಇಂಥವರ ಸ್ಥಿತಿ ಹೆಂಡದ ಮಡಿಕೆಗಳನ್ನು ಹೊರಗೆ ತೊಳೆದು ಸಿಂಗರಿಸದಂತೆ, ಬಾಳಿಲ್ಲದವಳ ಓಲೆಯಂತೆ. ಲಾಂಛನದಿಂದ ತನುಭಕ್ತನಾಗಬಹುದು. ಆದರೆ ಮನಮಾತ್ರ ಭವಿಯಾಗಿಯೆ ಉಳಿಯುವುದು.

ಆಸೆಯಾಮಿಷ, ತಾಮಸ, ಹುಸಿ, ವಿಷಯ,
ಕುಟಿಲ, ಕುಹಕ, ಕ್ರೋಧ, ಕ್ಷುದ್ರ, ಮಿಥ್ಯೆ-
ಇವನೆನ್ನ ನಾಲಗೆಯ ಮೇಲಿಂದತ್ತ ತೆಗೆದು ಕಳೆಯಯ್ಯಾ,

ಅದೇಕೆಂದೊಡದೆ ನಿಮ್ಮತ್ತಲೆನ್ನ ಬರಲೀಯವು, ಇದು ಕಾರಣ, ಇವೆಲ್ಲವ ಕಳೆದು ಎನ್ನ ಪಂಚಯ್ಯರ ಭಕ್ತರ ಮಾಡು. ಕೂಡಲಸಂಗಮದೇವ.

ನೋಡುವ ಕಣ್ಣು, ಕೇಳುವ ಕಿವಿ, ನುಡಿಯುವ ನಾಲಿಗೆ, ವಾಸಿಸುವ ಮೂಗು, ಮುಟ್ಟಿ ಪೂಜಿಸುವ ಕೈ, ನೆನೆವ ಮನ-ಎಲ್ಲವೂ ಶುದ್ಧವಾಗಬೇಕು. ಆಗ ಭಕ್ತಿ ನೆಲೆಗೊಳ್ಳುವುದು.

ಅಂತರಂಗ ಮತ್ತು ಬಹಿರಂಗ ಶುದ್ಧಿ ಸುಮ್ಮನೆ ಅಳವಡುವುದಿಲ್ಲ. ಅದಕ್ಕೆ ಸದಾಚಾರ ಬೇಕು; ನುಡಿದಂತೆ ನಡೆ ಬೇಕು:

ಭಕ್ತನು ಕೆಡೆನುಡಿಯಬಾರದು, ಕೆಡೆನಡೆಯಬಾರದು, ಅನ್ಯರ ಪ್ರತಿಪಾದಿಸಬಾರದು, ಅವನು ನುಡಿವುದೆಲ್ಲ ಸತ್ಯವಾಗಬೇಕು. ನಡೆವುದೆಲ್ಲ ಸತ್ಯವಾಗಬೇಕು.

ಸ್ವಾಮಿ ಭೃತ್ಯ ಸಂಬಂಧಕ್ಕೆ ಆವುದು ಪದವೆಂದರೆ :
ದಿಟವ ನುಡಿಯುವುದು, ನುಡಿದಂತೆ ನಡೆವುದು.
ನುಡಿದು ಹುಸಿವ, ನಡೆದು ತಪ್ಪುವ ಪ್ರಪಂಚಿ ಎಂದೂ ಭಕ್ತನಾಗಲಾರ.

(೫)

ನಿಷ್ಠೆಯಿಂದ ಸದಾಚಾರದಿಂದ ಸನ್ಮಾರ್ಗದಲ್ಲಿ ಸಾಗಿದವನಿಗೆ ಅಡೆತಡೆಗಳು ಬಹಳ. ಹೆಜ್ಜೆ ಹೆಜ್ಜೆಗೂ ಅವನು ಕಷ್ಟವನ್ನು ಅನುಭವಿಸಬೇಕಾಗುತ್ತದೆ. ಭಕ್ತನಿಗೆ ಹೆದರಿಕೆಯುಂಟಾಗಿ ಉದಾಸೀನಭಾವ ಸುಳಿದರೆ ಸಾಕು ! ಹಿಂದಿನ ಸಾಧನೆಯೆಲ್ಲ ವ್ಯರ್ಥವಾಗುವುದು. ಅವನು ಅಧೋಗತಿಯನ್ನೈದುವನು. ವಾಗಿಯ ಉದಯದ ಬಿಸಿಲು ಅಂಗಕ್ಕೆ ಹಿತವಾಗಿರುವುದು. ಅದೇ ಬಿಸಿಲು ಮಧ್ಯಾಹ್ನದಲ್ಲಿ ಕಠಿನವೆನಿಸುವುದು. ಇದರಂತೆ ಭಕ್ತಿಯು ಮೊದಲು ಹಿತವೆನಿಸಿ ಸಾಧನೆಯಲ್ಲಿ ಮುನ್ನಡೆದಂತೆ ಕಠಿಣವೆನಿಸುತ್ತ ಹೋಗುವುದು. ಈ ಕಠಿಣತೆಯನ್ನು ತಾಳಿಕೊಂಡವನು ಬಾಳುವನು.

ಬರ ಬರ ಭಕ್ತಿಯುರೆಯಾಯಿತ್ತು, ಕಾಣಿರಣ್ಣಾ :
ಮೊದಲದಿನ ಹಣೆಮುಟ್ಟಿ, ಮರುದಿನ ಕೈಯಮುಟ್ಟಿ,
ಮೂರೆಂಬದಿನಕ್ಕೆ ತೂಕಡಿಕೆ ಕಾಣಿರಣ್ಣಾ.

ಹೀಗಾಗಬಾರದು ಭಕ್ತನ ಸ್ಥಿತಿ. ಅವನ ಭಕ್ತಿ ಬೆಳೆಯುತ್ತ ಹೋಗಬೇಕು. ಬರುವ ಅಡೆತಡೆಗಳನ್ನು ಮೆಟ್ಟಿ ಹಿಡಿದುದನ್ನು ಸಾಧಿಸುವ ಛಲ ಅವನಲ್ಲಿರಬೇಕು.

ಹಿಡಿದುದ ಬಿಡದಿದ್ದರೆ ಕಡೆಗೆ ಚಾಚುವ ;
ಅಲ್ಲದಿದ್ದರೆ, ನಡುನೀರಲ್ಲದ್ದುವ ನಮ್ಮ ಕೂಡಲಸಂಗಮದೇವ.

(೬)

ಅರಿವು, ನಿಷ್ಠೆ, ಛಲ, ಇವೆಲ್ಲ ಗುಣಗಳಿಗಿಂತ ಹಿರಿದಾದುದು ಇನ್ನೊಂದಿದೆ. ಅದಿಲ್ಲದಿದ್ದರೆ ಏನಿದ್ದರೂ ವ್ಯರ್ಥ. ಹಣತೆ ಇದೆ, ಬತ್ತಿ ಇದೆ, ಎಣ್ಣೆ ಇದೆ. ಇಷ್ಟೆಲ್ಲ ಇದ್ದು ಜ್ಯೋತಿಯಿಲ್ಲದಿದ್ದರೆ ಬೆಳಗುವದೆಂತು ? ಇದರಂತೆ ಭಕ್ತನಲ್ಲಿ ಅರಿವು, ನಿಷ್ಠೆ, ಛಲ ಮುಂತಾದ ಎಲ್ಲ ಸದ್ಗುಣಗಳಿದ್ದು ಕ್ರಿಯೆ ಇಲ್ಲದಿದ್ದರೆ ಅವನು ಜ್ಯೋತಿ ಇಲ್ಲದ ದೀಪದಂತಾಗುವನು. ಈ ಕ್ರಿಯೆಗೆ ಕಾಯಕವೆಂದು ಹೆಸರು.

ಭಕ್ತನಾದವನು ಯಾವುದಾದರೊಂದು ಕಾಯಕಮಾಡಲೇಬೇಕು. ಕಾಯಕ ವಿಲ್ಲದವನಿಗೆ ಗುರೂಪದೇಶವಿಲ್ಲ. ಕಾಯಕ ಮಾಡದವನಿಗೆ ಅನುಭವ ಮಂಟಪದಲ್ಲಿ ಪ್ರವೇಶವಿರಲಿಲ್ಲ. ಭಕ್ತನು ಸ್ವಾವಲಂಬಿ. ಅವನೆಂದೂ ಇನ್ನೊಬ್ಬರ ಹಂಗಿನಲ್ಲಿರ ಬಾರದು ; ತನ್ನ ಅನ್ನವನ್ನು ತಾನು ದುಡಿದು ಗಳಿಸಬೇಕು. ಬರಿಯ ಮಾತಿನಿಂದ ಭಕ್ತಿ ಸಾಧ್ಯವಾಗದು.

ಮಾತಿನ ಮಾತಿನಲ್ಲಿಪ್ಪುದೇ ಭಕ್ತಿ ?
ಮಾಡಿ ತನು ಸವೆಯದನ್ನಕ್ಕ ; ಮನ ಸವೆಯದನ್ನಕ್ಕ ;
ಧನ ಸವೆಯದನ್ನಕ್ಕ ಅಪ್ಪುದೇ ಭಕ್ತಿ ?

ವೇದಗಳನ್ನೂ ಶಾಸ್ತ್ರಗಳನ್ನೂ ಓದಿ ಮನನ ಮಾಡಿದರೆ ಭಕ್ತಿ ನೆಲೆಗೊಳ್ಳದು. ಭಕ್ತಿ ನೆಲೆಗೊಳ್ಳುವುದು--ದುಡಿಮೆಯಿಂದ. ಜ್ಯೋತಿ ಜ್ಯೋತಿ ಎಂದು ಬಡ ಬಡಿಸಿದರೆ ಕತ್ತಲೆ ಹರಿಯುವುದೆ? ಭಕ್ತಿ ಅಂತಹದು, ಭಕ್ತಿ ಇಂತಹುದು ಎಂದು ಮಾತಾಡಿದರೆ ಅದು ಅಳವಡದು. ತನು ಸವಿಸಿ ಮನ ಸವಿಸಿ ದುಡಿದಾಗ ಮಾತ್ರ ಅದು ಅಳವಡುವುದು.

ದುಡಿತವೆಂದರೆ ಭಕ್ತಿ, ಭಕ್ತಿಯೆಂದರೆ ದುಡಿತ ಎಂಬುದನ್ನು ಎಷ್ಟು ಹೇಳಿದರೂ ತೀರದು ಬಸವಣ್ಣನವರಿಗೆ. ಹೆರವರಿಗೆ ಹಂಗಾಗಿ ಬದುಕುವವನ ಬಾಳು ನಾಯಿ ಬಾಳಿಗಿಂತಲೂ ಕೀಳು. ಏಕೆಂದರೆ ಅದು ತಿಂದ ಅನ್ನಕ್ಕೆ ಪ್ರತಿಯಾಗಿ ಒಡೆಯನಿಗಾಗಿ ಕೆಲಸಮಾಡುವುದು. ದುಡಿತವಿಲ್ಲದೆ ಬದುಕುವವನನ್ನು ಹೋಲಿಸಲು ಲೋಕದಲ್ಲಿ ಅವನಿಗಿಂತ ಕೀಳು ಪ್ರಾಣಿಯಾವುದೂ ಇಲ್ಲ. ಭಕ್ತನೆಂದು ಹೇಳಿಕೊಳ್ಳುವವನಂತೂ ದುಡಿತವಿಲ್ಲದೆ ಇರಲು ಸಾಧ್ಯವೇ ಇಲ್ಲ. ಏಕೆಂದರೆ ದುಡಿತವೇ ಭಕ್ತಿ.

ಭಕ್ತಿ ವಿಶೇಷವ ಮಾಡುವರೆ ಹತ್ತು ಬೆರಳುಗಳುಂಟು:
ಹಾಸಿ ದುಡಿದರೆ ತನಗುಂಟು ತನ್ನ ಪ್ರಮಥರಿಗುಂಟು.
ಮಾರಿ ತಂದೆಗಳಂತೆ-ಎನಗೇಕಹುದಯ್ಯಾ ?
ರತ್ನದ ಸಂಕಲೆಯನ್ನಿಕ್ಕಿ ಕಾಡಿಹೆ,
ಕೂಡಲ ಸಂಗಮದೇವಾ ಶಿವಧೋ ಶಿವಧೋ.

ಕಾಯಕವೆಂದರೆ ಮೈಮುರಿದು ದುಡಿಯುವುದು. ಬುದ್ಧಿಯ ಕೆಲಸವಲ್ಲ. ಬುದ್ಧಿಯ ಕೆಲಸದಿಂದ ಗಳಿಸಿದ ಹಣ ಗುರುಲಿಂಗ ಜಂಗಮಕ್ಕೆ ಸಲ್ಲುವುದಿಲ್ಲ. ತನು ಬಳಲಿಸಿ ಬೆವರು ಸುರಿಸಿ ದುಡಿದು ಗಳಿಸಿದ ಹಣದಿಂದಲೇ ಭಕ್ತನು ಜೀವಿಸಬೇಕು.

( ೭ )

ದುಡಿದು ಗಳಿಸಿದರೆ ಇಷ್ಟಕ್ಕೆ ಮುಗಿಯಲಿಲ್ಲ ಭಕ್ತಿ. ಗಳಿಸಿದುದನ್ನು ಹೇಗೆ ಬಳಸಬೇಕೆಂಬುದರಲ್ಲಿ ಭಕ್ತಿಯ ಮರ್ಮವಿದೆ. ಗಳಿಸಲು ಎಲ್ಲರಿಗೂ ಬರುವುದು. ಆದರೆ ಬಳಸುವುದು ಬರುವುದಿಲ್ಲ.

ಮನುಷ್ಯನು ಸಮಾಜ ಜೀವಿ. ಸಮಾಜ ಬದುಕಿದರೆ ಅವನು ಬದುಕುವನು. ಸಮಾಜದ ಏಳ್ಗೆಯೇ ಅವನ ಏಳ್ಗೆ. ತಾನು ತನಗಾಗಿ ಕಟ್ಟಿದ ಸಮಾಜಕ್ಕೆ ತನ್ನ

ಮಡಿತದಲ್ಲಿಯ ಒಂದು ಭಾಗವನ್ನು ನೀಡಬೇಕು. ಹೀಗೆ ನೀಡುವುದಕ್ಕೆ ಶರಣರು ದಾಸೋಹವೆಂದು ಕರೆದಿದ್ದಾರೆ. ಭಕ್ತನು ದುಡಿದು ತಾನು ಉಣ್ಣಬೇಕು, ಗುರುಲಿಂಗ ಜಂಗಮಕ್ಕೂ ನೀಡಬೇಕು.

ಗುರು–ಲಿಂಗ–ಜಂಗಮವೆಂದರೆ ಸಮಾಜವೆ. ಬೇರೆ ಮತ್ತೇನೂ ಅಲ್ಲ. ಇವರಿಗೂ ಕಾಯಕವುಂಟು. " ಗುರುವಾದರೂ ಕಾಯಕದಿಂದಲೇ ಜೀವನ್ಮುಕ್ತಿ. ಲಿಂಗವಾದರೂ ಕಾಯಕದಿಂದಲೇ ಶಿಲೆಯ ಕುಲ ಹರಿವುದು. ಜಂಗಮವಾದರೂ ಕಾಯಕದಿಂದಲೇ ವೇಶದ ಪಾಶಹರಿವುದು " ಅರಿವನ್ನು ನೀಡುವ ಸಮಾಜದ ಏಳ್ಗೆಗಾಗಿ ಹಗಲಿರುಳು ದುಡಿಯುವ ಗುರುಲಿಂಗ ಜಂಗಮರಿಗೆ ನೀಡುವುದು ಭಿಕ್ಷೆ ಯೆನಿಸುವುದಿಲ್ಲ. ಏಕೆಂದರೆ ಅವರೂ ದುಡಿಯುತ್ತಾರೆ.

" ಅರ್ಥ, ಪ್ರಾಣ, ಅಭಿಮಾನದಲ್ಲಿ ವಂಚನೆಯಿಲ್ಲದಿರುವುದೇ ಭಕ್ತಿ
ಇದ್ದುದ ವಂಚನೆ ಮಾಡದಿಪ್ಪುದೇ ಭಕ್ತಿ "

ಸಂಗ್ರಹ ಒಳ್ಳೆಯದಲ್ಲ. ನಿತ್ಯ ಕಾಯಕ ಮಾಡಿ ಜೀವಿಸುವವನಿಗೆ ಸಂಗ್ರಹದ ಅವಶ್ಯಕತೆಯಾದರೂ ಏನಿದೆ? ಹಣದ ಸಂಗ್ರಹವು ಲೋಭ ಮೋಹ ಸ್ವಾರ್ಥ ಗಳನ್ನು ಬೆಳೆಸುವುದು. ಸಮಾಜದಲ್ಲಿ ಸ್ವಾರ್ಥಿಗಳು ಹೆಚ್ಚಾದರೆ ಅದರ ಸರ್ವಾಂಗೀಣ ಉನ್ನತಿಯಾಗುವುದಿಲ್ಲ. ಆದಕ್ಕಾಗಿ ಭಕ್ತನು ಧನಸಂಗ್ರಹ ಮಾಡಕೂಡದು.

ಹೊನ್ನಿನೊಳಗೊಂದೊರೆಯು, ಸೀರೆಯೊಳಗೊಂದೆಳೆಯು
ಇಂದಿಂಗೆ ನಾಳಿಂಗೆ ಬೇಕೆಂದೆನಾದರೆ ನಿಮ್ಮಾಣೆ! ನಿಮ್ಮ ಪುರಾತರಾಣೆ!
ನಿಮ್ಮ ಶರಣರಿಗಲ್ಲದೆ ಮತ್ತೊಂದನರಿಯೆ ಕೂಡಲ ಸಂಗಮದೇವ

ಧನವನಿರಿಸಬಾರದು. ಇರಿಸಿದರೆ ಭವಬಪ್ಪುದು ತಪ್ಪದು. ಅದನ್ನು ಸಮಾಜಕ್ಕೆ ಸವಿಸಲೇಬೇಕು. ಕೂಡಲ ಸಂಗನ ಶರಣರಿಗೆ ಮಾಡಿ ಮಾಡಿ ಧನಸವೆದು ಬಡವಾದರೆ ಆ ಭಕ್ತನು ಆ ಲಿಂಗಕ್ಕೆ ಪೂಜೆಯಹನು.

( ೮ )

ಭಕ್ತನು ಸಕಲ ಜೀವರ ಲೇಸೇ ತನ್ನ ಲೇಸೆಂದು ತಿಳಿದು ಆಚರಿಸುವನು. "ಶಿವಭಕ್ತರ ನೋವೇ ಅದು ಲಿಂಗದ ನೋವು". ಅದಕ್ಕಾಗಿ ಭಕ್ತನು ಎಲ್ಲ ಜೀವರ ನೋವು ತನ್ನ ನೋವೆಂದೇ ಭಾವಿಸಿ ನಡೆಯುವನು. ಅವನು ಸಕಲ ಪ್ರಾಣಿಗಳಲ್ಲಿ ದಯೆಯುಳ್ಳವನು. ದಯವೇ ಧರ್ಮದ ಮೂಲ ಎಂಬುದು ಅವನ ಉಸಿರು. ಭಕ್ತಿ ಸಂಪೂರ್ಣ ಅಳವಟ್ಟವನ ದೇಹವೇ ದೇವಾಲಯವಾಗುವುದು. ಅವನ ನುಡಿ ಮುತ್ತು, ಮಾಣಿಕ, ಜ್ಯೋತಿರ್ಲಿಂಗ. ಅವನು ಮನಮುಟ್ಟಿ ತನುಮುಟ್ಟಿ ಮಾಡುವ

ಗೆಯ್ಮೆ ಸಮಾಜಕ್ಕೆ ಲೋಕಕ್ಕೆ ಶುಭವನ್ನೂ ಶಿವವನ್ನೂ ತರುವುದು. ಅವನಿದ್ದ ಮನೆ ಕೈಲಾಸವಾಗುವುದು. ಆಗ ಅವನ ಭಕ್ತಿ ಹರಿಯುವ ನದಿಯ ತೆರನಾಗುವುದು. ಅನೇಕರಿಗೆ ಅನೇಕ ಬಗೆಯ ಕೆಲಸಗಳಿಗನುಕೂಲವಾಗಿ ಹಮ್ಮು ಬಿಮ್ಮುಗಳಿಲ್ಲದೆ ತುಂಬಿ ಹರಿಯುತ್ತ ನದಿಯು ಸಮುದ್ರವನ್ನು ಸೇರುವುದು. ಇದರಂತೆ ಭಕ್ತನು ಸಕಲರ ಲೇಸಿಗಾಗಿ ದುಡಿದು ತನ್ನ ಗುರಿಯನ್ನು ಮುಟ್ಟುವನು.

ಭಕ್ತಿಯೆಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ
ಲಿಂಗವೆಂಬ ಎಲೆಯಾಯಿತ್ತು.
ಲಿಂಗವೆಂಬ ಎಲೆಯ ಮೇಲೆ
ವಿಚಾರವೆಂಬ ಹೂವಾಯಿತ್ತು,
ಆಚಾರವೆಂಬ ಕಾಯಾಯಿತ್ತು,
ನಿಷ್ಪತ್ತಿಯೆಂಬ ಹಣ್ಣಾಯಿತ್ತು.
ನಿಷ್ಪತ್ತಿಯೆಂಬ ಹಣ್ಣು ತೊಟ್ಟುಬಿಟ್ಟು ಕಳಚಿ ಬೀಳುವಲ್ಲಿ
ಕೂಡಲ ಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ.

—— :: ——

# ಕೂಡಲೂರು ಬಸವಲಿಂಗ ಶರಣರು.



ಶ್ರೀ ಸಿದ್ಧಯ್ಯ ಪುರಾಣಿಕ, ಬಿ.ಎ., ಎಲ್ಎಲ್.ಬಿ., ಬೆಂಗಳೂರು.

ನನಗೆ ಯಾದಗಿರಿಯಿಂದ ವರ್ಗವಾಗಿದ್ದಿತು. ಶಹಾಪುರದಲ್ಲಿ ಬೀಳ್ಕೊಡುವ ಸಮಾರಂಭ ನಡೆದಿದ್ದಿತು. ಅಲ್ಲಿಯ ಮಾಧ್ಯಮಿಕ ಶಾಲೆಯಲ್ಲಿ ಶಿಕ್ಷಕರಾಗಿದ್ದ ಗೆಳೆಯ ಎಚ್. ಪಿ. ವೆಂಕೋಬರಾಯರು ಪ್ರಾರ್ಥನೆಯೆಂದು ಕೆಳಗಣ ಹಾಡನ್ನು ಹಾಡಿದರು–ಸಭೆಗೆ ಸಭೆಯೇ ಮಂತ್ರಮುಗ್ಧವಾಗುವಂತೆ, ನಿಶ್ಶಬ್ದವಾಗುವಂತೆ ಹಾಡಿದರು :

ಯಾತರಿಂದಲಿ ಮಾಡಲಿ ಆತ್ಮನ ಪೂಜೆ
    ಎತ್ತ ನೋಡಲು ತಾನಿರೆ ।
ನಿತ್ಯ ನಿರಾಳ ನಿರಂಜನ ನಿರ್ಗುಣ
    ಅತ್ಯಧಿಕಾನಂದ ಪರಿಪೂರ್ಣ ಬ್ರಹ್ಮವು ॥ ಯಾತರಿಂದಲಿ ॥

ತನುಕರಣ ಮೊದಲಾಗಿಹ ತತ್ತ್ವಗಳೊಳು
    ಇನಿತು ಪ್ರತಿಫಲಿಸಿಹನು
ಘನಚೈತನ್ಯದ ಮೂರುತಿ ತಾನಾದ
    ಮನಕೆ ನಿಲುಕದ ಮಹಾ ಘನತೇಜ ಬ್ರಹ್ಮವು ॥ ಯಾತರಿಂದಲಿ ॥

ಅಣುರೇಣು ತೃಣಕಾಷ್ಠದಿ ಭರಿತಮಾಗಿ
    ಎಣಿಕೆಗೆ ಮೀರಿಹನು
ಗಣಿತಕ್ಕಪ್ರಮೇಯಾಗಿ ತೋರುತಲಿಹನು
    ಗುಣಕೆ ನಿಲುಕದ ಮಹಾ ನಿರ್ಗುಣ ಬ್ರಹ್ಮವು ॥ ಯಾತರಿಂದಲಿ ॥

ನಾನು ಮಾಡುವೆನೆಂದರೆ ನನ್ನನು ಕೆಡಿಸಿ
ತಾನೇ ತಾನಾಗಿಹನು
ನಾನಾ ಪರಿಪರಿಯಲ್ಲಿ ಸಂದು ಇಲ್ಲದ ಹಾಗೆ
ಜ್ಞಾನ ಮೂರುತಿ ಗುರುವು ಕೂಡಲೂರೀಶನ ||
ಯಾತರಿಂದಲಿ ಮಾಡಲಿ ಆತ್ಮನಪೂಜೆ ಎತ್ತನೋಡಲು ತಾನಿರೆ ||

ಶ್ರೋತೃಗಳ ಮೇಲೆ ವಿಚಿತ್ರ ಪರಿಣಾಮವನ್ನುಂಟು ಮಾಡಿದ್ದಿತು ಈ ಹಾಡು. ಸಭೆಯ ಕಾರ್ಯಕ್ರಮಗಳ ಕಡೆಗೆ ನನ್ನ ಲಕ್ಷ್ಯವೇ ಇರಲಿಲ್ಲ. ಕಿವಿಯಲ್ಲಿ ಇದೇ ಹಾಡು ನಿನದಿಸುತ್ತಲಿದ್ದಿತು. 'ಯಾತರಿಂದಲಿ ಮಾಡಲಿ ಆತ್ಮನ ಪೂಜೆ, ಎತ್ತ ನೋಡಲು ತಾನಿರೆ!' ಅಧ್ಯಕ್ಷತೆ ವಹಿಸಿದ್ದ ಗೆಳೆಯ ಜ. ಶ್ರೀ. ದೇಸಾಯಿಯವರದೂ ಇದೇ ಅವಸ್ಥೆಯಾಗಿದ್ದಿತು.

ಸಭೆಯ ಕಾರ್ಯಕ್ರಮಗಳು ಸಮಾಪ್ತವಾಗುತ್ತಲೇ ವೆಂಕೋಬರಾಯರನ್ನು ಕೇಳಿದೆ-ಇದಾರ ಹಾಡೆಂದು. ಕೂಡಲೂರ ಬಸವಲಿಂಗ ಶರಣರದೆಂದು ಉತ್ತರ ವಿತ್ತರವರು. ನನ್ನ ಉತ್ಸುಕತೆ ಇನ್ನೂ ಹೆಚ್ಚಾಯಿತು. 'ಯಾವ ಕೂಡಲೂರು?' ಎಂದು ಕೇಳಿದೆ. 'ಯಾದಗಿರಿ ತಾಲೂಕಿನಲ್ಲಿರುವ ಕೂಡಲೂರು' ಎಂದರು. ಆಗಿನ ನನ್ನ ಮನಃಸ್ಥಿತಿಯನ್ನು ಏನೆಂದು ಬಣ್ಣಿಸಲಿ? ತಟ್ಟನೆ ಮರುಳಶಂಕರದೇವರ ಸಂಪಾದನೆಯಲ್ಲಿ ಬರುವ ಪ್ರಭುದೇವರ ವಚನ ನೆನಪಾಯಿತು: "ಬೀದಿಯಲ್ಲಿ ಬಿದ್ದ ಮಾಣಿಕ್ಯವ ಹೂಳಿರ್ದ ನಿಧಾನವನಾರಿಗೂ ಕಾಣಬಾರದು ನೋಡಾ! ಮರಣ ವುಳ್ಳವರಿಗೆ ಮರುಜವಣಿ ಸಿಕ್ಕುವುದೆ? ಪಾಪಿಯ ಕಣ್ಣಿಗೆ ಪರುಷ ಕಲ್ಲಾಗಿಪ್ಪಂತೆ ಇಪ್ಪರಯ್ಯಾ ಶಿವಶರಣರು!"

ಹೌದು, ಪಾಪಿಯಕಣ್ಣಿಗೆ ಪರುಷ ಕಾಣುವುದೆ? ಅದೇ ಕೂಡಲೂರಿಗೆ ನಾಲ್ಕಾರು ಸಲ ಹೋಗಿ ಬಂದಿದ್ದೆ. ಆದರೆ ಒಮ್ಮೆಯೂ ಆ ಊರಿನವರಾದ ಬಸವಲಿಂಗಶರಣರ ವಿಷಯವನ್ನೇ ಕೇಳಿರಲಿಲ್ಲ. ಯಾರೂ ಹೇಳಿರಲಿಲ್ಲ, ನಾನೂ ಕೇಳಿರಲಿಲ್ಲ. ಮೂರು ವರುಷಗಳವರೆಗೆ ಯಾದಗಿರಿಯಲ್ಲಿದ್ದು ಅದೇ ತಾಲೂಕಿನ ಒಬ್ಬ ಅನುಭಾವಿಯ ವಿಷಯ ತಿಳಿದುಕೊಳ್ಳದೇ ಬೆಂಗಳೂರಿಗೆ ಹೊರಡಬೇಕಾಯಿತಲ್ಲ ಎಂದು ಮನದಲ್ಲಿಯೇ ತಳಮಳಿಸಿದೆ.

ಬೆಂಗಳೂರಿಗೆ ಬಂದ ಒಂದೆರಡು ತಿಂಗಳುಗಳಲ್ಲಿಯೇ ಹಿರಿಯರಾದ ದಿವಾಕರರಿಗೆ ಅವರ ಅರವತ್ತನೆಯ ಹುಟ್ಟುಹಬ್ಬದ ಸ್ಮಾರಕವಾಗಿ ಅವರಿಗೆ ಅರ್ಪಿಸಿದ ಉದ್ಗ್ರಂಥ 'ಕರ್ನಾಟಕ ದರ್ಶನ'ವನ್ನು ಓದುವ ಯೋಗ ದೊರೆಯಿತು. ಅದರಲ್ಲಿ ಆಚಾರ್ಯ ರಾನಡೆಯವರು ತಮ್ಮ ಲೇಖನದಲ್ಲಿ ಬಸವಲಿಂಗಶರಣರ ಕೆಳಗಣ ಹಾಡನ್ನು ಉದ್ಧರಿಸಿ ತಮ್ಮದೇ ಆದ ಅನನುಕರಣೀಯ ಶೈಲಿಯಲ್ಲಿ ಅದರ ಅರ್ಥ ಸೌಂದರ್ಯವನ್ನು ವಿವರಿಸಿದ್ದಾರೆ:

ಅಳುತಿದ್ಯಾ ಕಂದ ಅಳುತಿದ್ಯಾ ನೀನು
ತಿಳಿಯವೆ ಮರ್ತ್ಯಕ್ಕೆ ಮರೆತು ಬಂದೆನೆಂದು ॥ ಪ ॥

ಮಾಯದ ತೊಟ್ಟಿಲೊಳು ಮಲಗಿ ಮೈ ಒತ್ತುತ
ಮೋಹದ ಸಿಂಬಿಯೊಳು ಹೊರಳಾಡುತ
ಜೀವ ಮನಸು ಎಂಬ ತಗಣಿ ಅಂಗುಷ್ಠಕ್ಕೆ
ಹತ್ತಿ ದೇಹಕ್ಕೆ ಸುಖವಿಲ್ಲವೆಂದು–ಅಳುತಿದ್ಯಾ ಕಂದ....॥

ತಂದೆ ತಾಯಿಯಿಂದ ಬಂಧನದೊಳು ಬಿದ್ದು
ಮುಂದೇನು ಗತಿಯೆಂದು ಕೆಡುತೀನೆಂದು
ಅಂದಚಂದದಿ ಬಂದು ಮೊಲೆಕೊಟ್ಟು ಹಾಲೆರೆದು
ಬಂದಂಥ ವಿಷಯಕ್ಕೆ ಬಲೆಯ ಹಾಕುವರೆಂದು–ಅಳುತಿದ್ಯಾ ಕಂದ....॥

ತಾವು ಬಿದ್ದ ಕುಣಿಯಲ್ಲಿ ಎನ್ನ ನೂಕುವರೆಂದು
ತಾವು ಮಗನಿಗೆ ಮದುವೆ ಮಾಡುವರೆಂದು
ಜಾವಜಾವಕ್ಕೆ ಒಮ್ಮೆ ನೋಡಿ ಹಿಗ್ಗುತಲಿ
ದೇವ ಕೂಡಲೂರೀಶ ಕೂಡಿಕೋ ಎನ್ನುತಲಿ–ಅಳುತಿದ್ಯಾ ಕಂದ....॥

ಯಾವುದೋ ಅಳುವ ಕಂದನನ್ನು ನೋಡಿ ಉಕ್ಕಿಬಂದ ಭಾವಲಹರಿಯಿದು. ಇದರ ಅಕೃತಿಮ ಸಹಜ ಸೌಂದರ್ಯಕ್ಕೆ ಮನವು ಮಾರುಹೋಗಿ ಬಸವಲಿಂಗಶರಣರ ಸಮಗ್ರ ಕೃತಿಗಳನ್ನು ಓದಬೇಕೆಂಬ ಅದಮ್ಯ ಉತ್ಸುಕತೆ ಉದ್ಭವಿಸಿತು. ಸೈದಾಪುರದ ಸ್ನೇಹಿತರಾದ ಸಂಗಣ್ಣ ಆಸ್ಪಲ್ಲಿಯವರಿಗೆ ಸಿಕ್ಕಷ್ಟು ಕೃತಿಗಳನ್ನು ಸಂಗ್ರಹಿಸಿ ಕಳಿಸಲು ಬರೆದೆ. ಅವರು ಆಸಕ್ತಿವಹಿಸಿ ಬಸವಲಿಂಗಶರಣರ ಉಪಲಬ್ಧವಿರುವ ಹಾಡುಗಳನ್ನೂ ಚರಿತ್ರಾಂಶಗಳನ್ನೂ ಶೇಖರಿಸಿ ಕಳಿಸಿದರು. ಇಷ್ಟರಲ್ಲಿ ಕರ್ನಾಟಕ ವಿಶ್ವವಿದ್ಯಾಲಯವು ಭಾರತೀಯ ವಿದ್ಯಾಭವನದ ಸಹಕಾರದೊಡನೆ ಪ್ರಕಟಿಸಿದ 'ಕನ್ನಡ ಸಾಹಿತ್ಯದಲ್ಲಿ ಪರಮಾತ್ಮ ಪಥ'* ವೆಂಬ ಆಚಾರ್ಯ ರಾನಡೆಯವರ ಉದ್ಗ್ರಂಥವೂ ಪ್ರಕಟ ವಾಯಿತು. ಅದರಲ್ಲಿ ಋಷಿ ರಾನಡೆಯವರು ಬಸವಲಿಂಗಶರಣರ 'ಏನ ಹೇಳಲಿ ಎನ್ನ ಅಜ್ಞಾನ ವಶದಿಂದ' 'ಅಳುತಿದ್ಯಾ ಕಂದ ಅಳುತಿದ್ಯಾ' 'ಕುರುಬರೋ ನಾವು ಕುರು ಬರೋ' 'ಗುರುವೆ ನಿಮ್ಮಾಜ್ಞೆಯನು ಮೀರದೆ ನಡೆದವನು ನರನೆನ್ನಲಿ ಬೇಡ ಪರ ಮಾತ್ಮನು' ಎಂಬ ಹಾಡುಗಳನ್ನು ಉದಾಹರಿಸಿ ಅವುಗಳ ನಿಸ್ತೀರವಾದ ನಿತಾಂತ ಮನೋಹರವಾದ ಅರ್ಥವನ್ನು ವಿಶದೀಕರಿಸಿದ್ದಾರೆ.

ಇತ್ತೀಚಿನವರಾದರೂ ಅಧ್ಯಾತ್ಮದಲ್ಲಿ ಇಷ್ಟೊಂದು ಎತ್ತರಕ್ಕೆ ಏರಿದವರಾದ ಇವರ ಬಗ್ಗೆ ಏನಾದರೂ ಬರೆಯಬೇಕೆಂಬ ಬಯಕೆ ಬೇರೂರುವುದಕ್ಕೂ ಇಂದಿನ

* Pathway to God in Kannada Literature.

ಅಧ್ಯಾತ್ಮ ವೀರರಲ್ಲೊಬ್ಬರಾದ ಸಖರಾಯಪಟ್ಟಣದ ಶ್ರೀಶ್ರೀ ಸದಾಶಿವ ಸ್ವಾಮಿಗಳವರಿಗೆ ಅರ್ಪಿತವಾಗಲಿರುವ 'ವಿಭೂತಿ'ಯೆಂಬ ಅಭಿನಂದನ ಗ್ರಂಥಕ್ಕೆ ಏನಾದರೂ ಬರೆಯೆಂದು ಗೂಳೂರಿನ ಗುರುಮನೆಯನ್ನು ಕನ್ನಡ ಸಾಹಿತ್ಯದ ಅರಮನೆಯನ್ನಾಗಿ ಪರಿವರ್ತಿಸಿದ, ಕನ್ನಡ ಸಾಹಿತ್ಯಕ್ಕೆ ಸಾಹಿತಿಗಳಿಗೆ ಪೋಷಕರಾಗಿ, ಗುರುಪೀಠಗಳಿಗೆಲ್ಲ ಅನುಕರಣೀಯರಾಗಿ ರಾರಾಜಿಸುತ್ತಲಿರುವ ಶ್ರೀ ಜ. ಚ. ನಿ. ಅವರ ಆದೇಶ ಬರುವುದಕ್ಕೂ ಸರಿಹೋಯಿತು. 'ಹಸಾದ'ವೆಂದು ಒಪ್ಪಿಕೊಂಡೆ. ಆದರೆ ಅವಿರತವಾದ ಆಡಳಿತದ ಕಾರ್ಯಗಳಲ್ಲಿ ನಾನಿದನ್ನು ಬರೆದು ಮುಗಿಸುತ್ತಿದ್ದೆನೋ ಇಲ್ಲವೊ–ಪ್ರಿಯ ಪಂಚಾಕ್ಷರಿ ಹಿರೇಮಠರ ಸಖಿಯ, ಸಲುಗೆಯ ಒತ್ತಾಯ ಒಲ್ಲೆನೆಂದರೂ ಬಿಡದಂತೆ ಬೆಂಬತ್ತಿ ಬರೆಸಿತು.

ಕೂಡಲೂರು ಬಸವಲಿಂಗಶರಣರಿಗೆ ಜನ್ಮವಿತ್ತ ಭಾಗ್ಯ ಯಾದಗಿರಿ ತಾಲೂಕಿನ ಬಲಿಚಕ್ರ ಗ್ರಾಮಕ್ಕೆ ದೊರೆಯಿತು. ಆ ಗ್ರಾಮದಲ್ಲಿ ಕಾಯಿ ಪಲ್ಯಗಳನ್ನು ಮಾರುವ ಕಾಯಕ ಕೈಕೊಂಡಿದ್ದ ಮಹಾದೇವಪ್ಪ-ಗಂಗಾಂಬೆಯರು ಇವರ ತಂದೆತಾಯಿಗಳು. ಅವರು ತಮ್ಮ ಮಗನು ವಿದ್ಯಾವಂತನಾಗಲೆಂದು ಅವನನ್ನು ಐದನೆಯ ವರ್ಷದಲ್ಲಿ ಶಾಲೆಗೆ ಕಳಿಸಿದರು. ಶಾಲೆಯಲ್ಲಿ ಗುರುಗಳು ಮಗ್ಗಿ, ಲೆಖ್ಖಗಳನ್ನು ಕಲಿಸಹೋದರೆ ಬಸವಲಿಂಗಪ್ಪನವರು ಅವರಿಗೆ ಪರಮಾರ್ಥದ ಪ್ರಶ್ನೆಗಳನ್ನು ಕೇಳುತ್ತಿದ್ದರಂತೆ. ಅವುಗಳಿಗೆ ಉತ್ತರವೀಯಲಾಗದ ಗುರುಗಳು, 'ಇದೆಲ್ಲ ನಿನಗೇಕೆ?' ಎಂದು ಗದ್ದರಿಸಲು ಎಲ್ಲ ಬಿಟ್ಟು ಶಿವಶರಣರ ವಚನಗಳನ್ನು ಓದುತ್ತ ಕುಳಿತು ಬಿಡುತ್ತಿದ್ದರಂತೆ. ಇಂಥ ವಿದ್ಯಾರ್ಥಿಯನ್ನು ಆ ಕಾಲದಲ್ಲಿ ಅದಾವ ಅಧ್ಯಾಪಕ ಮೆಚ್ಚಿಯಾನು? ತಾಯಿತಂದೆಗಳು ಉಪಾಯವಿಲ್ಲದೆ ಬಸವಲಿಂಗಪ್ಪನವರನ್ನು ಅವರ ಹತ್ತನೆಯ ವರ್ಷದಲ್ಲಿ ಶಾಲೆ ಬಿಡಿಸಿ ಆಕಳುಗಳನ್ನು ಕಾಯಲು ನಿಯಮಿಸಿದರಂತೆ.

ಬಲಿಚಕ್ರದ ಬಳಿಯಲ್ಲಿ ಸಿದ್ಧೇಶ್ವರ ಬೆಟ್ಟವೆಂಬ ಬೆಟ್ಟವಿದೆ. ಅದರ ಸುತ್ತಲಿನ ಹುಲ್ಲುಗಾವಲದಲ್ಲಿ ಹಸುಗಳನ್ನು ಮೇಯಿಸಿಕೊಂಡು ಬರುತ್ತಿದ್ದರು ಬಸವಲಿಂಗಪ್ಪನವರು. ಆಗ ಒಂದು ವಿಚಿತ್ರ ನಡೆಯಿತು. ನಿತ್ಯವೂ ಒಂದು ಹಸು ಆ ಬೆಟ್ಟದ ಬಳಿಯಲ್ಲಿ ಬಸವಲಿಂಗಪ್ಪನವರು ಕಾಯುತ್ತಲಿದ್ದ ಹಸುಗಳನ್ನು ಕೂಡಿಕೊಳ್ಳುತ್ತಿದ್ದಿತು; ಹಗಲೆಲ್ಲ ಅವುಗಳೊಡನೆ ಹುಲ್ಲು ಮೆಯ್ದು ಸಂಜೆಯಾಗುತ್ತಲೆ ಆ ಬೆಟ್ಟದಲ್ಲಿ ಮಾಯವಾಗುತ್ತಿತ್ತು. ಇದಾರ ಹಸುವಾಗಿರಬಹುದು?'

ಈ ಪ್ರಶ್ನೆ ಬಸವಲಿಂಗಪ್ಪನವರನ್ನು ಕಾಡದಿರಲಿಲ್ಲ. ಅವರೆ ಏನು ಮಾಡಿದರೂ ಅದು ಯಾರ ಹಸುವೆಂಬುದೇ ಗೊತ್ತಾಗಲಿಲ್ಲ. ಒಂದು ದಿನ ಅದನ್ನು ತಿಳಿದೇ ತೀರಬೇಕೆಂಬ ನಿರ್ಧಾರದಿಂದ ಬಸವಲಿಂಗಪ್ಪನವರು ಅದರ ಬಾಲವನ್ನು ಬಿಗಿಯಾಗಿ ಹಿಡಿದುಕೊಂಡು ಅದರ ಹಿಂದೆ ಹಿಂದೆ ಹೋದರು. ಆ ಹಸು ಒಂದು ಗವಿಯೊಳಗೆ ಹೋಯಿತು. ಅಲ್ಲಿ ಸಾಧುಗಳ ದರ್ಶನವಾಯಿತು. ಅವರ ನಿಲವನ್ನರಿಯದ

ಬಸವಲಿಂಗಪ್ಪನವರು 'ನಿಮ್ಮ ಹಸು ಕಾಯ್ದ ಕೂಲಿ ಕೊಡಿರಿ' ಎಂದು ಅವರನ್ನು ಕೇಳಿದರಂತೆ. ಅವನ್ನು ಕೇಳಿ ಆ ಸಾಧುಗಳಲ್ಲಿ ಹಿರಿಯರಾದವರು ಬಸವಲಿಂಗಪ್ಪ ನವರನ್ನು ಹತ್ತಿರ ಕರೆದು, 'ಇದೋ, ಕೂಲಿ' ಎಂದು ಅವರ ಮಸ್ತಕದ ಮೇಲೆ ಹಸ್ತವನ್ನಿರಿಸಿದರಂತೆ.

ಅಲ್ಲಿಂದ ಹೊರಬಿದ್ದ ಬಸವಲಿಂಗಪ್ಪನವರು ಹೊಸ ಜನ್ಮವನ್ನೇ ತಳೆದು ಹೊರ ಬಿದ್ದರು. ಗೋವಳರಾಗಿ ಹೋಗಿದ್ದ ಅವರು ಶರಣರಾಗಿ ಬಂದಿದ್ದರು. ಅವರ ಚಿತ್ತವೃತ್ತಿಯೇ ಬೇರೆಯಾಯಿತು; ಆತ್ಮಕ್ಕೆ ಅತೀತದ ಕರೆ ಬಲವಾಯಿತು; ವೈರಾಗ್ಯ ದಲ್ಲಿ ಒಲವಾಯಿತು; ಶರಣರ ನಿಲವೇ ಆವರ ನಿಲವಾಯಿ ತು. ಈ ಪರಿವರ್ತನವನ್ನು ಆಧ್ಯಾತ್ಮಿಕ ವಿವಾಹದ ರೂಪಕವನ್ನಾಗಿಸಿ ಹೀಗೆ ಹಾಡಿದ್ದಾರೆ :

ವರನುಳ್ಳ ಒಗೆತನ ಮಾಡಿಕೊಂಡೆ ನಾನು
ಸರಿ ಬಂತು ನಮ್ಮವರಿಗೆ ಹೀಗೆ
ಅರಿಯದ ಅಜ್ಞಾನಿ ಅವರೇನು ಬಲ್ಲರು
ಬರೆದಾನು ಬ್ರಹ್ಮನು ಎನಗೆ ಹೀಗೆ ॥ ಪ ॥

ಹನ್ನೆರಡು ವರುಷದ ಕನ್ಯೆ ನಾನಿರಲಿಕ್ಕೆ
ಎನ್ನನು ಬೇಡಲು ಬಂದರವರು
ಇನ್ನು ಸಾಮುದ್ರಿಕ ಲಕ್ಷಣ ನೋಡಿ ಕೈಹಿಡಿದು
ಬಣ್ಣ ಬಳಿದು ಮದುವೆಮಾಡಿ ನೋಡಿ ॥ ೧ ॥

ಉದಯ ಮಂಗಳವಾರ ಬಿದಿಗಿ ನಿಬ್ಬಣಕಟ್ಟಿ
ಅದರೊಳಗೆ ಬಸಿರು ಬಯಕೆ ಎನಗೆ
ಸದಮಲ ಸುಜ್ಞಾನ ಸೇಸೆ ಹಾಕುದರೊಳಗೆ
ಅದರೊಳಗೆ ಮಗನ ಹಡೆದೆ ಪಡೆದೆ ॥ ೨ ॥

ಹೀಗೆ ಹನ್ನೆರಡನೆಯ ವರುಷದಲ್ಲಿಯೇ ಸಿದ್ಧಾವಸ್ಥೆಯನ್ನೈದಿದರು ಶರಣ ಕುಲದೀ ಪಕ ಬಸವಲಿಂಗಪ್ಪನವರು. ಇಂತಹ ಸತಿಪತಿ ಭಾವದ ಸಿದ್ಧಿಯನ್ನು ಪಡೆದಿದ್ದ, ಗಂಡ ಗಂಡರನೆಲ್ಲ ಹೆಂಡಿರಾಗಿ ಆಳುವ ಗರುವನ ಕೈಹಿಡಿದಿದ್ದ. ಅವರಿಗೆ ತಂದೆ ತಾಯಿಗಳು ಲೌಕಿಕ ರೀತಿಯ ಮದುವೆಯನ್ನು ಮಾಡುವೆನೆಂದರೆ ಒಪ್ಪುವರೆ?

ಉತ್ತರವಿತ್ತರು :

ಇನ್ನೇಕೆ ನನ್ನ ಮದುವೆಯ ಚಿಂತೆ ನಿಮಗೆ
ಎನ್ನ ಗುರು ತಂದೆ ಲಿಂಗವನ್ನು ಕೊಟ್ಟ ಬಳಿಕ

ಮಗನ ವಿಪರೀತ ವರ್ತನೆಯನ್ನು ಕಂಡು ಮೊದಲೇ ತಬ್ಬಿಬ್ಬಾಗಿದ್ದ ತಂದೆ ತಾಯಿಗಳು ಈ ಉತ್ತರವನ್ನು ಕೇಳಿ ಇನ್ನೂ ಹತಾಶರಾದರು. ಮದುವೆಯಾಗ ದಿದ್ದರೆ ಹೋಗಲಿ, ಮನೆಯ ಕಾಯಕವನ್ನಾದರೂ ಮುಂದುವರಿಸಲೆಂದು ಕಾಯಿ ಪಲ್ಲೆ ಮಾರಲು ಕಳಿಸತೊಡಗಿದರು. ಬಸವಲಿಂಗಪ್ಪನವರು ಕಾಯಿ ಪಲ್ಲೆಗಳ ಬುಟ್ಟಿಯನ್ನು ಹೊತ್ತುಕೊಂಡು ಬಲಿಚಕ್ರದಿಂದ ಕೂಡಲೂರಿಗೆ ಬಂದು ಅಲ್ಲಿದ್ದ ಅಕ್ಕಸಾಲಿಗರ ಈಶ್ವರಪ್ಪನೆಂಬ ಶರಣರ ಅಂಗಳದಲ್ಲಿ ಬುಟ್ಟಿಯನ್ನಿಟ್ಟುಬಿಟ್ಟು ಅವರೊಡನೆ ಅಧ್ಯಾತ್ಮ ಚರ್ಚೆಯಲ್ಲಿ ಮಗ್ನರಾಗಿಬಿಡುತ್ತಿದ್ದರಂತೆ. ಕಾಯಿಪಲ್ಲೆ ಕೊಳ್ಳಲು ಬಂದವರಿಗೆ " ಹೊರಗೆ ಬುಟ್ಟಿಯಲ್ಲಿವೆ, ಪಾವುಸೇರು ಜೋಳಹಾಕಿ ಒಂದು ಸೇರು ನೀವೆ ತೂಗಿಕೊಂಡು ಹೋಗಿರಿ. " ಎಂದು ಹೇಳುತ್ತಿದ್ದರಂತೆ. ಯಾರು ಎಷ್ಟು ಜೋಳ ಹಾಕಿ, ಎಷ್ಟು ತೂಗಿಕೊಂಡು ಹೋಗುತ್ತಿದ್ದರೋ! ಶಿವನೆ ಬಲ್ಲ. ಹಗಲು ಹನ್ನೆರಡು ಗಂಟೆಯುವರೆಗೆ ಅಲ್ಲಿದ್ದು ಅದುವರೆಗೆ ಮಾರಾಟವಾದ ಕಾಯಿ ಪಲ್ಲೆಗಳಿಗೆ ಪ್ರತಿಯಾಗಿ ಬಂದ ಜೋಳವನ್ನು ಹೊತ್ತುಕೊಂಡು ಬಲಿಚಕ್ರಕ್ಕೆ ಬರುತ್ತಿದ್ದರಂತೆ.

ಇದು ಅವರು ಮಾಡಿದ ಉದ್ಯೋಗದ ವೈಖರಿ. ಅದನ್ನು ಅವರೇ ಮಾರ್ಮಿಕ ವಾಗಿ ವರ್ಣಿಸಿದ್ದಾರೆ:

ಉದ್ಯೋಗ ಮಾಡಿದ್ದೆನು। ಬಹು ಲಾಭದ
ಉದ್ಯೋಗ ಮಾಡಿದ್ದೆನು ॥ಪ॥
ಉದ್ಯೋಗ ಮಾಡಿದ್ದೆ ಸದ್ಗುರುವನು ಕಂಡು
ಸಿದ್ಧ ಕರುಣಾಮೃತ ಶುದ್ಧ ಪ್ರಸಾದದ
ಉದ್ಯೋಗ ಮಾಡಿದ್ದೆನು ॥ ಅನುಪಲ್ಲ॥
ಒಂದಕ್ಕೆ ಮೂರಾಯಿತು। ಮೂರಕ್ಕೆ।
ಮೂವತ್ತಾರಾಯಿತು ।
ಬೇರೆ ಇನ್ನೂರು ಹದಿನಾರು ಜಮೆ ಮಾಡಿ
ಉದ್ಯೋಗ ಮಾಡಿದ್ದೆನು।
ಒತ್ತಿಯ ಹಿಡಿದಿದ್ದೆನು। ಆಲಿಯ ಕಪ್ಪು
ಮುತ್ತಿನ ಮೂಗುತಿಯ ।
ಮತ್ತೆ ಒಂಬತ್ತು ರೂಪಾಯಿ ಕಿರಿದೊಡವೆ
ಇತ್ತಲೇ ಉಳಿಯಿತು ಬಿಡಿಸಿಕೊಂಬರಿಲ್ಲ.

ಹೀಗೆ ವೃತ್ತಿಯೆಲ್ಲ ಶಿವತತ್ತ್ವವಾಗಿ ಬದುಕಿದರು ಬಸವಲಿಂಗಪ್ಪನವರು. ಹಳ್ಳಿಗರ ಮಧ್ಯದಲ್ಲಿಯೇ ಇದ್ದು ಹಳ್ಳಿಗಳಲ್ಲಿ ನಿತ್ಯ ಕಣ್ಣಿಗೆ ಬೀಳುವ ಹಲವು

ಸಾಮಾನ್ಯ ಘಟನೆಗಳನ್ನೇ ತಮ್ಮ ಅಸಾಮಾನ್ಯ ಆತ್ಮಶ್ರೀಯ ಅಭಿವ್ಯಕ್ತಿಗೆ ಸಾಮಗ್ರಿಯನ್ನಾಗಿ ಮಾಡಿಕೊಂಡು, ಹಳ್ಳಿಗರು ಇಂದಿಗೂ ಹಾಡಿಕೊಂಡು, ಹಿಗ್ಗಿ ನಲಿದಾಡುವಂಥ ಹಾಡುಗಳನ್ನು ರಚಿಸಿ ಹೋಗಿದ್ದಾರೆ. ಕಲುಬುರಗಿ ರಾಯಚೂರು ಮತ್ತು ವಿಜಾಪುರ ಜಿಲ್ಲೆಗಳಲ್ಲಿ ಇಂದಿಗೂ ಇವರ ಹಾಡುಗಳನ್ನು ಹಾಡಿ ಆನಂದಿಸುವ ಜನ ಸಾಕಷ್ಟಿದ್ದಾರೆ. ಆದರೆ ಇದುವರೆಗೆ ಯಾರೂ ಅವುಗಳನ್ನು ಸಂಗ್ರಹಿಸಿ ಶುದ್ಧವಾಗಿ ಮುದ್ರಿಸಿ ಪ್ರಕಟಿಸದಿರುವದು ವಿಷಾದಕರವಾದುದು. ನನ್ನ ಸಂಗ್ರಹ ದಲ್ಲಿರುವ ಹಲವು ಹಾಡುಗಳಿಂದಲೇ ಅವರೊಬ್ಬ ಕನ್ನಡ ನಾಡಿನ ಶ್ರೇಷ್ಠ ಶ್ರೇಣಿಯ ಹಾಡುಗಬ್ಬಿಗರೆಂಬುದು ವಿದಿತವಾಗುತ್ತದೆ. ಸುಮಾರು ಎರಡು ನೂರು ವರುಷಗಳ ಹಿಂದೆ ಇವರು ಆಗಿ ಹೋದರೆಂದು ಸ್ಥೂಲವಾಗಿ ಹೇಳಲಾಗುತ್ತಿದೆ. ಆದರೆ ಸರಿಯಾದ ಕಾಲ ನಿರ್ಣಯ ಆಗಬೇಕು. ಹಾಗಾದರೆ ನಾಗಭೂಷಣ ಘನಮಠದಾರ್ಯರೂ ಇವರೂ ಸಮಕಾಲೀನರಾಗುವರೋ ಹೇಗೋ ಎಂಬುದು, ಖಚಿತವಾದೀತು. ಮುಮ್ಮಡಿ ಕೃಷ್ಣರಾಜಒಡೆಯರ ಕಾಲದಲ್ಲಿ ನಕ್ಷತ್ರ ಪುಂಜದಂತೆ ತಲೆದೋರಿದ ಬಾಲ ಲೀಲಾ ಮಹಾಂತ ಶಿವಯೋಗಿಗಳು, ಸರ್ಪಭೂಷಣ ಶಿವಯೋಗಿಗಳು, ಘನಮಠದಾರ್ಯರು, ಮೈಲಾರ ಬಸವಲಿಂಗ ಶರಣರು ಮತ್ತು ಇನ್ನಿತರರ ಕಾಲದಲ್ಲಿಯೇ ಇವರು ಜೀವಿಸಿ ದ್ದರೆ ಅವರ ಪರಿಣಾಮ ಇವರ ಮೇಲೆ ಆಗಿದೆಯೋ ಎಂಬುದನ್ನು ಊಹಿಸುವದು ಸತ್ಯವಾದೀತು.

ಇದೇನೇಯಿರಲಿ, ಇವರೊಬ್ಬ ಉನ್ನತ ಮಟ್ಟದ ಅನುಭವಿಗಳೆಂಬುದರಲ್ಲಿ ಸಂದೇಹವಿಲ್ಲ. ಇವರ ಕೆಲವು ಹಾಡುಗಳನ್ನು ಉದಹರಿಸಿ ಇದರ ಸತ್ಯತೆಯನ್ನು ಮನಗಾಣಿಸಿ ಕೊಡಬಹುದಾಗಿದ್ದಿತು. ಆದರೆ ವಿಸ್ತಾರ ಭಯದಿಂದ ಒಂದನ್ನು ಮಾತ್ರ ಉದಾಹರಿಸಿ ಋಷಿ ರಾನಡೆಯವರು ಅದಕ್ಕೆ ಕೊಟ್ಟಿರುವ ಮೂದೆರನಾದ ಅರ್ಥವಿವರಣೆಯನ್ನು ಸಂಗ್ರಹಿಸುತ್ತೇನೆ.

ಬಸವಲಿಂಗ ಶರಣರು 'ನಾವು ಬಣಜಿಗರು' 'ನಾವು ಅಗಸರು' 'ನಾವು ಕೊಜ್ಜೆಯರು' ಮುಂತಾಗಿ ಕಂಡವರೆಲ್ಲ ತಾವೇಯೆಂದು ತಾದಾತ್ಮ್ಯದಿಂದ ಅನೇಕ ಹಾಡುಗಳನ್ನು ಬರೆದಿದ್ದಾರೆ. ಆದರೆ ಈ ಮಾದರಿಯ ಹಾಡುಗಳಿಗೆಲ್ಲ ಶಿರೋರತ್ನ ದಂತಿದೆ ಅವರ "ಕುರುಬರು ನಾವು" ಎಂಬ ಹಾಡು.

ಕುರುಬರು ನಾವು ಕುರುಬರು ನಾವು !
ಕುರಿಮರಿಗಳನ್ನು
ಏಸೊಂದು ಕಾಯ್ದುಕೊಂಡಿರುವಂಥ
ಕುರುಬರು ನಾವು
ಮೂರಾರು ಏಳೆಂಟು ಹತ್ತು ಕುರಿಗಳ ಕೊಟ್ಟಿ

ಬೇರಾಗಿ ಹೋದವವು ಮಾಯವಾಗಿ
ಇನ್ನೂರದ ಹದಿನಾರು ಜವು ಮಾಡಿ
ಸೂರೆಗೊಂಡೆವು ಲೆಕ್ಕ ನಮಗಿಲ್ಲ
ಕುರುಬರು ನಾವು ।

ದುರ್ದೈವದಿಂದ ನನ್ನ ಸಂಗ್ರಹದಲ್ಲಿ ಈ ಹಾಡನ್ನು ಅಪೂರ್ಣವಾಗಿ ಬರೆದಿಡಲಾಗಿದೆ. ಆದರೆ ಆಚಾರ್ಯ ರಾನಡೆಯವರ ಅರ್ಥ ವಿವರಣೆಯನ್ನು ಓದಿ ಹಾಡಿನ ಇನ್ನುಳಿದ ಭಾಗವನ್ನು ಊಹಿಸಿಕೊಳ್ಳಬಹುದಾಗಿದೆ. "ಕರ್ನಾಟಕದ ಅನುಭವ ಸಾಹಿತ್ಯದ ಬಗ್ಗೆ ಬರೆಯುವಲ್ಲಿ ಈ ಹಾಡು ಅತ್ಯಂತ ಮಹತ್ವದ್ದೆಂದು" ಅವರು ಅಭಿಪ್ರಾಯಪಟ್ಟಿದ್ದಾರೆ. ಇದಕ್ಕೆ ದೈಹಿಕ ಮಾನಸಿಕ ದೃಷ್ಟಿಕೋನದಿಂದ, ಸಾಮಾಜಿಕ ರಾಜಕೀಯ ದೃಷ್ಟಿಕೋನದಿಂದ ಮತ್ತು ನೈತಿಕ ಆಧ್ಯಾತ್ಮಿಕ ದೃಷ್ಟಿಕೋನದಿಂದ ಅರ್ಥ ವಿವರಿಸಿದ್ದಾರೆ ಆಚಾರ್ಯ ರಾನಡೆಯವರು.

——::——

# ಸಂಸ್ಕೃತ ವಾಙ್ಮಯದಲ್ಲಿ ಶಿವಾಚಾರ್ಯರ ಸಾಹಿತಿಗಳು



**ಸೂರ್ಯಸಿಂಹಾಸನಾಧೀಶ್ವರ, ಶ್ರೀ ಜ. ಚ. ನಿ.**

ಮೊದಲು ಮಾತು :

ಶೈವ ಶಾಖೆಯಾದ ವೀರಶೈವವು ಬಹು ಪುರಾತನವಾದುದು. ಅಂತೆಯೆ ವೀರಶೈವದರ್ಶನವು ಸಹ ಬಹು ಪ್ರಾಚೀನವಾದುದು. ವೇದ ಕಾಲಕ್ಕಿಂತ ಹಿಂದಿನದು. ಹರಪ್ಪಾ ಮೋಹಂಜೋದಾರ ಪುರಾತನ ನಾಗರಿಕತೆಗಿಂತ ಹಳೆಯದು. ಹತ್ತು ಸಾವಿರ ವರುಷಗಳ ಹಿಂದಿದ್ದ ಆ ಭೂಗರ್ಭ ನಗರಗಳ ಸಂಶೋಧನೆಯಲ್ಲಿ ವೀರಶೈವ ಸಂಸ್ಕೃತಿಯ ಚಿನ್ಹೆಗಳು ಲಿಂಗಗಳು ದೊರೆತಿವೆಯೆಂದು ಸರ್ ಜಾನ್ ಮಾರ್ಷಲ್ ಅವರು ಹೇಳುತ್ತಾರೆ. ಶಿಲಾಯುಗದಲ್ಲಿ ಲಿಂಗ-ಲಿಂಗಾರ್ಚನೆಗಳಿದ್ದವೆಂದು ಶೋಧಕರು ಹೇಳಿದ್ದಾರೆ.

ಶೈವ–ವೀರಶೈವ ಶಾಸ್ತ್ರಗಳು ಸಹ ಪೂರ್ಣ ಪುರಾತನದವು. ಮೊತ್ತಮೊದಲು ಶಿವನಿಂದ ಬಂದವು. ಆ ಬಳಿಕ ಶಿವಾಚಾರ್ಯರಿಂದ ಬೆಳೆದವು. ಆದರೇನು ಅವೆಲ್ಲವೂ ಕಣ್ಮರೆಯಾಗಿವೆ. ಕೈಗೆ ಸಿಗದಂತಾಗಿವೆ. ಕಾಲ ಹೆಚ್ಚು ಕಳೆದಂತೆ ಕಾಲಗರ್ಭಕ್ಕೆ ಸಿಕ್ಕುವುದು ಸಹಜವಲ್ಲವೆ?

ಶಿವನ ಸಿದ್ಧಾಂತವನ್ನು ಆಚರಿಸುವವರು ಮತ್ತು ಶಿವನ ಸಾಕ್ಷಾತ್ಕಾರಕ್ಕಾಗಿ ಆಚಾರವನ್ನು ಸ್ವೀಕರಿಸುವವರು ಶಿವಾಚಾರ್ಯರು. ಈ ಶಿವಾಚಾರ್ಯ ಪದ ಈ ಅರ್ಥದಲ್ಲಿ ತುಂಬಾ ಸಮರ್ಪಕವಾದುದು. ಶಿವಸಿದ್ಧಾಂತ ಪ್ರತಿಪಾದಕರಾದ ಶಿವಾಚಾರ್ಯರು ಶೈವ ಶಾಸ್ತ್ರಗಳನ್ನು ವೀರಶೈವಾಗಮಗಳನ್ನು ಶಿವಸೂತ್ರಗಳನ್ನು ಉಪನಿಷತ್ತುಗಳನ್ನು ಭಾಷ್ಯವ್ಯಾಖ್ಯಾನಗಳನ್ನು ರಚಿಸುವುದು ಸಹಜ; ಸಂಪ್ರದಾಯಸಿದ್ಧ. ಈ ನಿಯಮಕ್ಕನುಸರಿಸಿ ಬರೆದ ಪ್ರಾಚೀನ ಶಿವಾಚಾರ್ಯರ ಸಾಹಿತ್ಯ ಸಾಕಷ್ಟಿತ್ತು.

ಅದರಲ್ಲಿ ಬಹುಭಾಗ ನಮ್ಮ ದುರದೃಷ್ಟದಿಂದ ನಷ್ಟವಾಗಿಹೋಗಿದೆ. ಕೆಲವು ಕೃತಿಗಳ ಹೆಸರುಗಳು ಮಾತ್ರ ಉಳಿದಿವೆ; ಕೇಳಿಕೆಯಲ್ಲಿವೆ. ಇನ್ನು ಕೆಲವರ ಅಂದರೆ ನಂದಿಕೇಶ್ವರಶಿವಾಚಾರ್ಯ, ನೀಲಕಂಠಶಿವಾಚಾರ್ಯ, ಉಪಮನ್ಯುಶಿವಾಚಾರ್ಯ ಮೊದಲಾದವರ ದರ್ಶನಸಾಹಿತ್ಯ ಉಳಿದುಬಂದಿದೆ. ಅಲ್ಲದೆ ಇತ್ತೀಚಿನ ಶಿವಾಚಾರ್ಯ ಸಾಹಿತ್ಯ ಸಾಕಷ್ಟು ಬೆಳೆದುಬಂದಿದೆ. ಇವೆಲ್ಲವುಗಳ ದಿಗ್ದರ್ಶನ ದೃಷ್ಟಿಯಿಂದ ಈ ಬರೆಹದ ಸಾಹಸವನ್ನು ಮಾಡಲಾಗಿದೆ. ಇದುವೇ ಪರಿಪೂರ್ಣ ಪ್ರಯತ್ನವೆಂದು ಯಾರೂ ಭಾವಿಸಬಾರದು. ಆದರೆ ಪ್ರಥಮ ಪ್ರಯತ್ನ ವಿದು.

ಶಿವಾಚಾರ್ಯ ಸಾಹಿತ್ಯದಲ್ಲಿ ವೇದಭಾಷ್ಯ, ಶಿವಸೂತ್ರಭಾಷ್ಯ, ಬ್ರಹ್ಮಸೂತ್ರ ಭಾಷ್ಯಗಳು; ಉಪನಿಷದ್ಭಾಷ್ಯಗಳು; ಕಾಮಿಕ-ವಾತುಲ-ಪಾರಮೇಶ್ವರ-ವೀರ-ಸೂಕ್ಷ್ಮ ಮುಂತಾದ ಶಿವಾಗಮಗಳು; ಸಿದ್ಧಾಂತ್ ಶಿಖೋಪನಿಷತ್, ವೀರ ಲೈಂಗೋಪನಿಷತ್, ಲಿಂಗಧಾರಣೋಪನಿಷತ್ ಮುಂತಾದ ಉಪನಿಷತ್ತುಗಳು, ವ್ಯಾಖ್ಯಾನಗಳು, ಸಂಗ್ರಹಗಳು, ಪುರಾಣಗಳು, ಸಿದ್ಧಾಂಗಳು, ತತ್ತ್ವಗಳು, ಗೀತಗಳು ಮುಂತಾಗಿ ಹಲವು ಪ್ರಾಕಾರಗಳುಂಟು. ಹೀಗೆ ಶಿವಾಚಾರ್ಯ ಸಾಹಿತ್ಯ ಸೇವೆ ವಿಪುಲವಾಗಿದೆ, ವಿವಿಧವಾಗಿದೆ.

ಪ್ರಾಂತೀಯ ಭಾಷೆಯ ಪ್ರಾಬಲ್ಯದಲ್ಲಿ ಪ್ರಾಚೀನ ಸಂಸ್ಕೃತಭಾಷಾ ಸಾಹಿತ್ಯವು ಹಿಂದುಳಿದುದಲ್ಲದೆ ಹೇಳಹೆಸರಿಲ್ಲದಂತೆಯೂ ಹಲವಾರು ಕೃತಿಗಳಿಗೆ ಸಂಭವಿಸಿತು. ಕೇಳುವವರಿಲ್ಲದಾಗ ಕಾಪಾಡುವವರುಕೈಬಿಟ್ಟಾಗ ಪುರಾತನ ಸಾಹಿತ್ಯ ಪರರ ಪಾಲಾಗಬೇಕಾಯಿತು. ಇಲ್ಲವೆ ಹುಳಹಿಡಿಯ ಬೇಕಾಯಿತು. ಶ್ರೀ ಆದಿರೇಣುಕ, ಪಂಡಿತಾದಿ ಶಿವಾಚಾರ್ಯರ ಭಾಷ್ಯಗಳ ಹೆಸರುಗಳು ಉಳಿದಿವೆಯಲ್ಲದೆ ನೋಡುವ ಓದುವ ಭಾಗ್ಯವಿಲ್ಲದಾಗಿದೆ. ಅಂತೆಯೆ ಆಗಮ ಗ್ರಂಥಗಳ ಗತಿಯಾಗಿದೆ. ಇವೆಲ್ಲವೂ ಸಿಕ್ಕುವುದಿಲ್ಲ. ಸಿಕ್ಕುವುಗಳು ಸಂಪೂರ್ಣವಿಲ್ಲ. ಇದ್ದರೂ ಬೆಳಕಿಗೆ ಬರುವ ಭಾಗ್ಯವಿಲ್ಲ.

ಸಾಹಿತಿಗಳಾದ ಶಿವಾಚಾರ್ಯರ ವ್ಯಾಪ್ತಿ ಸಣ್ಣದಲ್ಲ. ಅವರೆಲ್ಲ ಆಂಧ್ರ ದ್ರಾವಿಡ ಕೇರಳ ಮಹಾರಾಷ್ಟ್ರ ಉತ್ತರಭಾರತ ಮುಂತಾದ ಪ್ರದೇಶಗಳಲ್ಲೆಲ್ಲ ವ್ಯಾಪಿಸಿದಾರೆ. ಅಲ್ಲಲ್ಲಿ ಅವರವರ ಸಾಹಿತ್ಯಕೃತಿಗಳು ಸಾಕಷ್ಟಿವೆ. ಅವನ್ನೆಲ್ಲ ಸಂಗ್ರಹಿಸಿ ಪ್ರಕಟಿಸುವ ಕಾರ್ಯವಾಗಬೇಕಾಗಿದೆ.

ಶಿವಾಚಾರ್ಯರು ಶಿವದೀಕ್ಷೆಯ ಮೂಲಕ ಶಿವಮತವನ್ನು ಶೈವವಿದ್ಯಾ ಶಿಕ್ಷಣ ಮೂಲಕ ಸಾಹಿತ್ಯವನ್ನು ರಚಿಸದಿದ್ದರೆ ಶಿವಾಚಾರವು ಅಂದರೆ ಶಿವಾದ್ವೈತ ಮತವೂ ಸಿದ್ಧಾಂತವೂ ಶೂನ್ಯಪೀಠವನ್ನೇರಬೇಕಾಗಿತ್ತು. ಮತ ಮತ್ತು ಸಾಹಿತ್ಯಗಳ ಅಭಿವೃದ್ಧಿ ಕಾರ್ಯ ಶಿವಾಚಾರ್ಯರಿಂದ ಸಾಕಷ್ಟು ಸಾಗಿಬಂದಿದೆ. ಮತ ಸಾಹಿತ್ಯಗಳೆರಡರ ಮೂಲಪ್ರಷ್ಟಾರರು ಶಿವಾಚಾರ್ಯರು. ದೇಶಾದ್ಯಂತ ಅವೆರಡನ್ನು ವ್ಯಾಪ್ತಿಗೆ ತಂದವರು ಶಿವಾಚಾರ್ಯರು. ಸಂಸ್ಕೃತದಲ್ಲಿ ಇವರು ಮಾಡಿದ ಸೇವೆ ಅಷ್ಟಿಷ್ಟಲ್ಲ.

ಅಂತೆಯೇ ಕನ್ನಡ ನುಡಿದೇವಿಯ ಕಣಜವನ್ನೂ ತುಂಬಿದ್ದಾರೆ. ಜ್ಞಾನ ದಾಸೋಹಿಗಳಾಗಿ ಆಗಮಕಾಲದಿಂದ ಆಧುನಿಕ ಕಾಲದವರೆಗೆ ಸಾಂಸ್ಕೃತಿಕ ಸೇವೆ ಸಲ್ಲಿಸಿದಾನೆ. ಸಾಮಾಜಿಕ ಸೇವೆ ಮಾಡಿದಾರೆ. ಸಾಹಿತ್ಯಕ ಸೇವೆಮಾಡಿದಾರೆ.

ಸನಾತನ ಕಾಲದಿಂದಲೂ ಶಿವಾಚಾರ್ಯರು ಆಗಿಹೋಗಿದಾರೆ. ಅವರ ಸಂಖ್ಯೆ ಅಸಂಖ್ಯಾತವಾಗಿದೆ.

"ವೀರಾದಿಗೋತ್ರ ಸಂಭೂತಾ ಆರಾಧ್ಯಾ ಹಿ ಸಹಸ್ರಶಃ
ಭೂಮಂಡಲಮಲಂಚಕ್ರುರ್ವೀರಶೈವೋದ್ಧಿಧೀರ್ಷಯಾ"
ದುಂಡಿ ನಂದಿ ಮಹಾಕಾಳಿ ಪ್ರಮುಖಾ ಗಣನಾಯಕಾಃ
ಚತುರ್ದಶಸಹಸ್ರಂ ಹಿ ಕೈಲಾಸಾವರಣಾಧಿಪಾಃ
ಮತಪ್ರವರ್ತಕಾಃ ಸರ್ವೇ ಗುರುಪೀಠಾಧಿರೋಹಿಣಃ"

—ಕ್ರಿಯಾಸಾರ

ಹೀಗೆ ಸಹಸ್ರ ಸಂಖ್ಯೆಗಳಲ್ಲಿ ಆಗಿಹೋದ ಶಿವಾಚಾರ್ಯರ ಹೆಸರುಗಳೆಲ್ಲ ನಮಗಿಂದು ಲಭ್ಯವಾಗುವುದಿಲ್ಲ. ಕೆಲವರ ಹೆಸರುಗಳು ಲಭ್ಯವಾದರೂ ಅವರ ಕೃತಿಗಳು ಲಭ್ಯವಿಲ್ಲ.

"ಆರಾಧ್ಯೋ ಗುರುರಾಚಾರ್ಯೋ ಗಣಾಧೀಶೋ ಶಿವದ್ವಿಜಃ
ಋತ್ವಿಕ್ಚ ದೇಶಿಕಾಧ್ಯಕ್ಷೋ ಗೌರವ ಸ್ಥಿರಜಂಗಮಃ
ಆರ್ಯದೀಕ್ಷಿತ ಬ್ರಹ್ಮಜ್ಞಾ ಆರಾಧ್ಯಾಖ್ಯಾ ಸ್ತ್ರಯೋದಶ"

ಸಾಕಾರ ಶ್ರೀ ಗುರುವಿಗೆ–ಶಿವಾಚಾರ್ಯನಿಗೆ ಈ ಹದಿಮೂರು ಹೆಸರುಗಳಿವೆ. ಇವುಗಳಲ್ಲಿ ಯಾವ ಹೆಸರನ್ನು ಹೇಳಿದರೂ ಅದು ಶಿವಾಚಾರ್ಯ ಸೂಚಕವಾಗಿರುತ್ತದೆ. ಅಂದರೆ ವೀರಶೈವ ಗುರುವನ್ನು ನಿರ್ದೇಶಿಸುತ್ತದೆ. ಸದ್ಯಕ್ಕೆ ಇಷ್ಟು ಹೇಳಿ ಶಿವಾಚಾರ್ಯ ಸಾಹಿತಿಗಳ ನಾಮ ನಿರ್ದೇಶ ಮಾಡಲಾಗಿದೆ.

೧. **ಜ. ರೇಣುಕ ಶಿವಾಚಾರ್ಯರು :** ಇವರು ಆದಿರೇಣುಕರು. ಇವರ ಕಾಲ ವೇದಕಾಲ. ಇವರು ಭಾಷ್ಯ ಬರೆದಂತೆ ತಿಳಿಯುತ್ತದೆ. ಬರ್ಲಿನ್ ನಗರ ಗ್ರಂಥ ಭಂಡಾರದಲ್ಲಿ ಈ ಭಾಷ್ಯವಿದೆಯೆಂದು ಹೇಳುತ್ತಾರೆ. ಅಲ್ಲದೆ ಇವರು ಶಿವಾಗಮ ಗಳನ್ನು ಬರೆದಂತೆ ಸಿದ್ಧಾಂತ ಶಿಖಾಮಣಿಯ ಈ ಶ್ಲೋಕದಿಂದ ಸ್ಪಷ್ಟವಾಗುತ್ತದೆ :

"ಯಂತ್ರ ಮಂತ್ರ ಕಲಾಸಿದ್ಧಾನ್ ವಿಮತಾನ್ ಸಿದ್ಧಮಂಡಲಾನ್
ವಿಜಿತ್ಯ ಸ್ವಪ್ರಭಾವೇನ ಸ್ಥಾಪಯಿತ್ವಾ ಶಿವಾಗಮಾನ್
ಆಜಗಾಮ ನಿಜಾವಾಸಂ ಕುಲ್ಯಪಾಕಾಭಿದಂ ಸ್ಥಲಂ"

ಇದಲ್ಲದೆ 'ರಸಾಮೃತ' 'ರಸರಾಜ ಶಿರೋಮಣಿ' ಎಂಬೆರಡು ವೈದ್ಯಗ್ರಂಥ ಗಳನ್ನು ಬರೆದಂತೆಯೂ ಮೊದಲಿನದು ಅಪೂರ್ಣವಾಗಿಯೂ ಎರಡನೆಯದು ನೇಪಾಳ ನೃಪಗ್ರಹದಲ್ಲಿರುವಂತೆಯೂ ತಿಳಿಯುತ್ತದೆ ಸರ್ಥರ್ಮದೀಪಿಕೆಯ ಸಂ-೧೩೭ ರಿಂದ!

ಆದಿಯಲ್ಲಿ ಶಿವತತ್ವದಲ್ಲಿ ರೇಣುಕನುದಯವಾಗರ್ದಿದರೆ
ಇಲ್ಲಿ ಶಿವಲಿಂಗದಲ್ಲಿ ಉದವಾದ ಪರಿಯೆಂತೋ?...."

—ತೋಟದ ಸಿದ್ಧಲಿಂಗಯತಿ

ಆದಿಶಿವತತ್ವದಲ್ಲಿ ಆದಿರೇಣುಕರ ಉದಯ. ಅವರೇ ಅಂತ್ಯದಲ್ಲಿ ರೇವಣರಾಗಿ ೧೧ನೆಯ ಶತಮಾನದಲ್ಲಿ ಅವತರಿಸುವರೆಂದು ಮೇಲಿನ ವಚನಾಭಿಪ್ರಾಯ. ಈ ಮಾತನ್ನು ಸಮರ್ಥಿಸುತ್ತದೆ ಶ್ರೀ ಫ. ಗು. ಹಳಕಟ್ಟಿಯವರ ಈ ಅಭಿಪ್ರಾಯ:

"ಆ ಆದಿರೇಣುಕರೇ ಮುಂದೆ ಹದಿನಾಲ್ಕು ನೂರು ವರ್ಷಗಳ ನಂತರ ಅಂದರೆ ಹನ್ನೊಂದನೆಯ ಶತಮಾನದಲ್ಲಿ ರೇವಣರಾಗಿ ಅವತರಿಸುವರು."

ಇವರಿಬ್ಬರ ಮಧ್ಯದಲ್ಲಿ ಇನ್ನೊಬ್ಬ ರೇಣುಕರಿದ್ದರೆಂದು ನಮ್ಮ ಅಭಿಪ್ರಾಯ. ಇವರ ಕಾಲ ಎಂಟನೆಯ ಶತಮಾನ. ಆದಿಶಂಕರಾಚಾರ್ಯರ ಸಮಕಾಲೀನರು.

ಆದಿರೇಣುಕರ ಕಾಲ ಅಯ್ದು ಸಾವಿರ ವರ್ಷಗಳೆಂದು ಮೂರುಸಾವಿರ ವರ್ಷ ಗಳೆಂದೂ ಹೇಳುತ್ತಾರೆ. ಇಂದಿಗೆ ೨೮೦೦ ವರ್ಷ ಎಂದು ವ್ಹಿ. ಜಿ. ಪಾಟೀಲರು ಹೇಳುತ್ತಾರೆ. ಶ್ರೀ ಕೆ.ಎಂ. ರುದ್ರಪ್ಪ ಬಿ.ಎ;ಬಿ.ಎಲ್. ಹಾಸನ ಅವರು ೧೯೫೧ ಜುಲೈ 'ಶರಣ ಸಾಹಿತ್ಯ'ದಲ್ಲಿ "ವಿಚಾರ ವಾದಿಗಳ ದೃಷ್ಟಿಯಲ್ಲಿ ರೇಣುಕರು, ದ್ರಾವಿಡ ಸಂಸ್ಕೃತಿಯ ಮೂಲಪುರುಷರಾದ ವೀರ, ನಂದಿ, ಭೃಂಗಿ, ವೃಷಭ, ಸ್ಕಂದ, ಗಣಪ, ದಾರುಕ ಮೊದಲಾದ ಪ್ರಾಚೀನ ಪ್ರಮಥರ ಕಾಲದಲ್ಲಿ ಇದ್ದವರು. ಈ ಕಾಲವು ವೇದ ಪೂರ್ವದಷ್ಟು ಹಳೆಯದೆಂದು ಇತಿಹಾಸ ಸಂಶೋಧಕರ ಅಭಿಪ್ರಾಯವಿದೆ." ಎಂದು ಹೇಳಿದಾರೆ. ಇದು ಗಮನಾರ್ಹವಾದುದು. 'ರೇಣು'ವು ಋಗ್ವೇದದ ಒಂದು ಸೂಕ್ತದ ದ್ರಷ್ಟಾ ಎಂಬುದಾಗಿ ವಿದ್ವಾಂಸರ ಅಭಿಪ್ರಾಯವಿದೆ. ಪದ ವಾಕ್ಯ ಪ್ರಮಾಣಜ್ಞರಾದ ಶ್ರೀ ಮರಿತೋಂಟದಾರ್ಯರು ತಮ್ಮ ವೀರಶೈವಾನಂದ ಚಂದ್ರಿಕೆಯಲ್ಲಿ "ವೀರಶೈವ .ಸಮಯ ಪ್ರವರ್ತಕಾನಾಂ ರೇಣುಕಾದೀನಾಂ...." ಎಂದು ಹೇಳಿ ಶ್ರೀ ರೇಣುಕರನ್ನು ಮತಪ್ರವರ್ತಕರಲ್ಲಿ ಮೊದಲಿನವರೆಂದು ಮನಸಾರೆ ಒಪ್ಪಿದಾರೆ. ಇವೆಲ್ಲವುಗಳಿಂದ ಶ್ರೀ ಜ. ರೇಣುಕ ಶಿವಾಚಾರ್ಯರು ಪ್ರಾಚೀನರು; ಮತಪ್ರವರ್ತಕಾಗ್ರಣಿಗಳು; ಗ್ರಂಥಕರ್ತರು-ಎಂದು ಸ್ಪಷ್ಟವಾಗುತ್ತದೆ.

ಈ ರೇಣುಕ ಶಿವಾಚಾರ್ಯರ ಶಿಷ್ಯರಾದ ಶ್ರೀ ಅಗಸ್ತ್ಯರು ಸೂತ್ರಪ್ರವೃತಿಯನ್ನೂ ಇವರ ಹೆಂಡತಿ ಲೋಪಾಮುದ್ರೆಯು ಕೆಲವು ವೇದ ಮಂತ್ರಗಳನ್ನೂ ಬರೆದಂತೆ ಉಲ್ಲೇಖನಗಳಿವೆ.

" ಅಗಸ್ತ್ಯ ಮುನಿಚಂದ್ರೇಣ ಕೃತಾಂ ವೈಯಾಸಿಕೀಂ ಶುಭಾಂ
ಸೂತ್ರವೃತ್ತಿಂ ಸಮಾಲೋಕ್ಯಕೃತಂ ಭಾಷ್ಯಂ ಶಿವಂಕರಂ"

—ಶ್ರೀಕರಭಾಷ್ಯ

'ಸೂತ್ರ ವೃತ್ತಿಯನ್ನಲ್ಲದೆ 'ಶಿವಸಹಸ್ರ ನಾಮ'ವನ್ನು ಅಗಸ್ತ್ಯನು ರಚಿಸಿ ಶ್ರೀರಾಮನಿಗೆ ಉಪದೇಶಿಸಿದಾನೆಂದು ಪದ್ಮಪುರಾಣ, ಶಿವಗೀತಾದಿಗಳು ಹೇಳುತ್ತವೆ:

ಏಕದೇವ ಪುರಾ ರಾಮೋ ಲಬ್ಧವಾನ್ ಕುಂಭಸಂಭವಾತ್"

—ಪದ್ಮ ಪುರಾಣ

" ಏವಂ ಕುರು ಮಹಾಭಾಗ ಶಿವನಾಮಸಹಸ್ರಕಂ
ಇದಂ ತುಭ್ಯಂ ಪ್ರದಾಸ್ಯಾಮಿ ತೇನ ಸರ್ವಾರ್ಥಮಾಪ್ಸ್ಯಸಿ "

—ಶಿವಗೀತೆ

'ಶಿವಸಹಸ್ರನಾಮ'ಕ್ಕೆ ಅಗಸ್ತ್ಯನು ಪ್ರಥಮಾಚಾರ್ಯನಾಗಿದಾನೆ. ಅಲ್ಲದೆ 'ಅಗಸ್ತೀಯ ಸಕಲಾಧಿಕಾರ' ಎಂಬ ಗ್ರಂಥಕರ್ತನಾಗಿದಾನೆ. ದ್ವೀಪದ್ವೀಪಗಳಿಗೆ ಹೋಗಿ ವೀರಶೈವ ಪ್ರಸಾರ ಮಾಡಿದಾನೆ.

೨. ಜ. ಪಂಡಿತಾರಾಧ್ಯ ಶಿವಾಚಾರ್ಯರು: ಇವರ ಕಾಲ ನಿರ್ದಿಷ್ಟವಾಗಿಲ್ಲ. ಇವರು ಶ್ರೀ ಶೈಲ ಸೂರ್ಯಸಿಂಹಾಸನಾಧೀಶ್ವರು. ಸಾನಂದ ಗುರು. ಸಾನಂದ ಋಷಿಯ ಕಾಲವನ್ನೆ ಇವರಿಗೆ ಹೇಳಬೇಕು; ಇವರು ಭಾಷ್ಯ ಬರೆದಿದಾರೆ.

" ವೇದವ್ಯಾಸಂ ಸೂತ್ರಕಾರಂ ದೂರ್ವಾಸಂ ವೃತ್ತಿಕಾರಕಂ।
ಭಾಷ್ಯಕೃತ್ ಪಂಡಿತಾರಾಧ್ಯಂ ಪ್ರಪದ್ಯೇ ಪಾಶಮುಕ್ತಯೇ॥ "

—ವೃಷಭ ಪಂಡಿತಾರಾಧ್ಯ.

" ರೋಧಿಕಾ ಬಂಧಿಕಾ ಮೋಹಿಕಾ ವಾ ಶಕ್ತಿಸ್ತದ್ವಾನ್
ತಸ್ಯಾ ದ್ರಾವಯಿತಾ ವಾ ಭಕ್ತೇಭ್ಯೋ ರುದ್ರಃ।
ರುದಂ ಸಂಸಾರದುಃಖಂ ದ್ರಾವಯತೀತಿ ವಾ ॥"

ಇದು ಪಂಡಿತಾರಾಧ್ಯರ ಭಾಷ್ಯದ ಒಂದು ಭಾಗ. ಇದಲ್ಲದೆ ಇವರು ಯಜುರ್ವೇದೀಯ ಪುರುಷ ಸೂಕ್ತಕ್ಕೆ ಶಿವಪರತ್ವ ವ್ಯಾಖ್ಯಾನವನ್ನು ರಚಿಸಿದಂತೆ ತಿಳಿಯುತ್ತದೆ.

" ಪಂಡಿತಾರಾಧ್ಯೋದ್ಭಟಾರಾಧ್ಯ ವೇಮನಾರಾಧ್ಯ ಜ್ಯೋತಿರ್ನಾಥ ಘಂಟಾನಾಥ : ನೀಲಕಂಠಾಚಾರ್ಯ ಭಟ್ಟಭಾಸ್ಕರಾಚಾರ್ಯ ಹರದತ್ತಾಚಾರ್ಯಾದಿ ಸರ್ವಜ್ಞೈರೇತದಧ್ಯಾಯಸ್ಯ ಶಿವಪರತ್ವೇನ ತತ್ರತತ್ರವ್ಯಾಖ್ಯಾನತ್ವಾತ್ "

—ವೃಷಭ ಪಂಡಿತಾರಾಧ್ಯ.

೩. ಸಾನಂದ ಶಿವಾಚಾರ್ಯರು : ಇವರ ಗ್ರಂಥ 'ಶಂಭುಸೂತ್ರಭಾಷ್ಯ' ಇವರು ಪೀಠಾಧಿಕಾರಿಗಳಾಗಿದ್ದರು : " ಆಸ್ತೇ ಲಿಂಗಾಂಗಸಂಬಂಧೀ ಸಾನಂದಾಹ್ವಯೋ ಮುನಿಃ " " ಜೀವನ್ಮುಕ್ತೋ ಜಗದ್ಗುರುಃ " ಎಂದು ಶಂಕರ ಸಂಹಿತೆಯಲ್ಲಿ ಉಕ್ತವಾಗಿದೆ. ಇವರಿಂದ ಶ್ವೇತನ ಮಗ ಪಿಂಗಲನು ರೋಗರಹಿತನಾಗಿ ಮುಕ್ತನಾಗುತ್ತಾನೆ.

೪. ಜ. ಏಕೋರಾಮ ಶಿವಾಚಾರ್ಯರು : ಇವರು ಬ್ರಹ್ಮಸೂತ್ರಕ್ಕೆ ಭಾಷ್ಯವನ್ನು ಬರೆದಿರುವಂತೆ ಶ್ರೀಪತಿಪಂಡಿತರ ಈ ವಾಕ್ಯದಿಂದ ವಿದಿತವಾಗುತ್ತದೆ: " ಸಮನ್ವಯಸೂತ್ರೇ ಏಕೋರಾಮಸಿದ್ಧ ಭಗವತ್ಪಾದಾಚಾರ್ಯೈಃ ಶ್ರೋತವ್ಯ ಇತ್ಯತ್ರ ಆತ್ಮಜ್ಞಾನವಿಧಿರ್ನಿರಾಕೃತಃ "

೫. ವಾಮದೇವ : ಈತನದು ವೇದಕಾಲ. ಈತನು ಮಂತ್ರಕರ್ತನು. ವೇದಋಕ್ ನಿರ್ಮಾತೃವೂ ಆಗಿದಾನೆ. ಮಂತ್ರವಾದಿಗಳು ಮಂತ್ರಜಾಪಕರು ಈತನನ್ನು ಸ್ಮರಿಸದಿರರು. ಮಂತ್ರಕ್ಕೆ ವಾಮದೇವನೇ ಋಷಿ. ಸಾಮವೇದೀಯ ದಶಋಷಿಗಳಲ್ಲಿ ಇವನೊಬ್ಬ.

೬. ನಂದಿಕೇಶ್ವರ ಶಿವಾಚಾರ್ಯರು : ಇವರು ಕ್ರಿ. ಶಕಕ್ಕೆ ಪೂರ್ವದವರು. ಪಾಣಿನಿಯ ಕಾಲದವರು. ಇವರು ಸಂಸ್ಕೃತ ವ್ಯಾಕರಣದ ೧೪ ಮೂಲ ಮಾಹೇಶ್ವರಸೂತ್ರಗಳಿಗೆ ಶಿವಾದ್ವೈತ ಸಿದ್ಧಾಂತಪರವಾದ ವೃತ್ತಿಯನ್ನು ರಚಿಸಿದಾರೆ. ಅದರಲ್ಲಿ ಇವರು : " ನೃತ್ತಾವಸಾನೇ ನಟರಾಜರಾಜೋ ನನಾದ ಢಕ್ಕಾಂ ನವ ಪಂಚವಾರಂ। ಉದ್ಧರ್ತುಕಾಮಸ್ಸನಕಾದಿ ಸಿದ್ಧಾನೇತದ್ವಿಮರ್ಶೇ ಶಿವಸೂತ್ರಜಾಲಂ॥ " –ಈ ರೀತಿ ಹೇಳಿದಾರೆ. ಸಂಸ್ಕೃತವ್ಯಾಕರಣಾಭ್ಯಾಸಿಗಳು ಈ ಶ್ಲೋಕವನ್ನು ಸಾಮಾನ್ಯವಾಗಿ ಓದಿ ಅರಿತಿರುತ್ತಾರೆ.

೭. ಉಪಮನ್ಯು ಶಿವಾಚಾರ್ಯರು : ಇವರು ಕ್ರಿ. ಶಕಕ್ಕೆ ಪೂರ್ವದವರು. ನಂದಿಕೇಶ್ವರ ಶಿವಾಚಾರ್ಯರಿಂದೀಚೆಯವರು. ಇವರು ನಂದಿಕೇಶ್ವರ ಕಾರಿಕೆಗೆ 'ಶಿವಸೂತ್ರ ವಿಮರ್ಶಿನಿ' ಎಂಬ ವ್ಯಾಖ್ಯಾನವನ್ನು ಬರೆದಿರುವರು. ಇವರು ಮಗ್ಗೆಯ ಮಾಯಿದೇವವಿಭುವಿನ ವಂಶಕ್ಕೆ ಮೊದಲಿಗರು. ಇವರು ಬರೆದ 'ಶಿವಸೂತ್ರ ವಿಮರ್ಶಿನಿ'ಗೆ 'ನಂದಿಕೇಶ್ವರಕಾರಿಕಾ' ಎಂದು ಹೆಸರು. ಇದು ಕಾಶಿಯಲ್ಲಿ ಅಚ್ಚಾಗಿದೆಯೆಂದು ತಿಳಿಯುತ್ತದೆ.

೮. ದೂರ್ವಾಸ ಮಹರ್ಷಿ : ಈತನ ಕಾಲ ತಿಳಿಯದು. ಈತನು ವೀರಶೈವ ಸಿದ್ಧಾಂತ ಪರವಾಗಿ 'ಸೂತ್ರವೃತ್ತಿ'ಯನ್ನು ಬರೆದಂತೆ. ತಿಳಿಯುತ್ತದೆ. 'ದೂರ್ವಾಸಂ ವೃತ್ತಿಕಾರಕಂ' ಎಂಬುದಾಗಿ ಪ್ರಮಾಣವಿದೆ. ಇದಲ್ಲದೆ ಎಲ್ಲ ಉಪನಿಷತ್ತುಗಳಿಗೆ ವ್ಯಾಖ್ಯಾನಗಳನ್ನು ಲಿಖಿಸಿದಂತೆ ಗೊತ್ತಾಗುತ್ತದೆ :

" ಸದಸದನುಗ್ರಹವಿಗ್ರಹೋ........ಭಗವಾನ್
ಸರ್ವಾಸಾಮುಪನಿಷದಾಂ ದುರ್ವಾಸಾ ಜಯತಿ ದೇಶಿಕಃ ಪ್ರಥಮಃ "

ಎಂಬೀ ಉಕ್ತಿಯಿಂದ ಈತನು ದೇಶಿಕ ಅಂದರೆ ಶಿವಾಚಾರ್ಯನಾಗಿದ್ದನೆಂದು ಸ್ಫುಟವಾಗುತ್ತದೆ. ಇವನು ಕಾಶೀರಾಜನ ಕುವರಿಯಾದ ಕಲಾವತಿಗೆ ದೀಕ್ಷೋಪದೇಶವಿತ್ತ ಸಂಗತಿ ಸುಪ್ರಸಿದ್ಧವಾಗಿದೆ.

೯. ಕಾಳಹಸ್ತಿ ಶಿವಾಚಾರ್ಯರು : ಇವರು ಯಾರು ? ಇವರ ಕಾಲವಾವುದು ತಿಳಿಯದು. ಇವರು ದಶೋಪನಿಷತ್ತುಗಳ ಮೇಲೆ ಲಿಂಗಧಾರಣ ಪರವಾದ ಭಾಷ್ಯವನ್ನು ಬರೆದಂತೆ 'ಲಿಂಗಧಾರಣ ಚಂದ್ರಿಕೆ' ಗ್ರಂಥದಿಂದ ತಿಳಿಯುತ್ತದೆ,

೧೦. ಗೌತಮ : ಈತನು ಸ್ಮೃತಿಕಾರನು. ತನ್ನ ಸ್ಮೃತಿಯಲ್ಲಿ

" ಮುಖೇಮಂತ್ರೋ ಹೃದಿಧ್ಯಾನಂ ಮುಸ್ತಕೇ ಲಿಂಗಧಾರಣಂ
ಶಿಖಾ ರುದ್ರಾಕ್ಷ ಭಸ್ಮಾನಿ ಇತಿ ಬ್ರಾಹ್ಮಣ ಲಕ್ಷಣಂ "

ಎಂದುದಾಗಿ ಹೇಳಿ ವೀರಶೈವ ಲಕ್ಷಣವನ್ನು ವಿವರಿಸಿದಾನೆ. ಇದರಿಂದ ಈತನು ಶಿವಾಚಾರ್ಯನಿರಬೇಕು. ಇದನ್ನು ಸೂಕ್ಷ್ಮಾಗಮವು ಒಪ್ಪಿಕೊಂಡಿದೆ :

ಕೌಶಿಕಃ ಕಶ್ಯಪಶ್ಚೈವ ಭರದ್ವಜಾತ್ರಿಗೌತಮಾಃ
ಆದಾವೇತೇ ಮಹಾದೇವಿ ಪಂಚವಕ್ತ್ರೇಷು ದೀಕ್ಷಿತಾಃ "

—ಸೂಕ್ಷ್ಮಾಗಮ, ಪಟಲ ೭.

೧೧. ಶ್ರೀ ನೀಲಕಂಠಶಿವಾಚಾರ್ಯರು :

ಇವರು ಪ್ರಸಿದ್ಧ ಭಾಷ್ಯಕಾರರು. ಶಿವಾದ್ವೈತ ಸಿದ್ಧಾಂತ ಪರವಾಗಿ ಬ್ರಹ್ಮಸೂತ್ರಕ್ಕೆ ಭಾಷ್ಯ ಬರೆದಿದಾರೆ. ಇವರಿಗೆ ಶ್ರೀಕಂಠ ಶಿವಾಚಾರ್ಯ ಎಂತಲೂ ಇನ್ನೊಂದು ಹೆಸರಿದೆ. ಇವರ ಕಾಲ ಶ್ರೀ ಶಂಕರಾಚಾರ್ಯರಿಗಿಂತ ಪೂರ್ವ. ಸುಮಾರು ಏಳನೆಯ ಶತಮಾನ. ಇವರ ವಿಷಯದಲ್ಲಿ ಶ್ರೀ ವೆಂಕಟಲಕ್ಷ್ಮಣರಾವ್, ಎಂ. ಎ. ಅವರು ರಚಿಸಿದ 'ಹಿಂದೂ ದೇಶ ಕಥಾಸಂಗ್ರಹ ಹಿಂದೂ ಮಹಾಯುಗವೆಂಬ ಗ್ರಂಥದ ಪುಟ ೪ರಲ್ಲಿ ಮತ್ತು ೮೦ರಲ್ಲಿ ಶಂಕರ, ರಾಮಾನುಜ, ಮಧ್ವ ಭಾಷ್ಯಗಳಿಗೆ ಮುನ್ನವೇ ನೀಲಕಂಠ ಶಿವಾಚಾರ್ಯರು ನೀಲಕಂಠ ಭಾಷ್ಯವನ್ನು ರಚಿಸಿದ್ದರು—ಎಂದು ಹೇಳಿದಾರೆ.

" ತದುಜ್ಜಿಹೀರ್ಷಯಾ ಸಾಕ್ಷಾನ್ನೀಲಕಂಠ ಶಿವಾತ್ಮನಾ।
ವೀರಶೈವಾಗ್ರೇಸರೇಣ ತತ್ತ್ವಸಾರಾರ್ಥರೂಪತಃ॥
ಅಚೀಕರತ್ಸೂತ್ರ ಭಾಷ್ಯಂ ವೀರಶೈವ ಪ್ರಕಾಶಕಮ್ "

—ನೀಲಕಂಠಭಾಷ್ಯ.

ಶ್ರೀ ಜೆ. ಎಂ. ನಲ್ಲಸ್ವಾಮಿಪಿಳ್ಳೆ ಬಿ. ಎ., ಬಿ. ಎಲ್. ಇವರೂ ಸಹ ಶ್ರೀ ಶಂಕರಾಚಾರ್ಯರಿಗೆ ಸ್ವಲ್ಪ ಹಿಂದೆ ನೀಲಕಂಠ ಶಿವಾಚಾರ್ಯರಿದ್ದರೆಂದು ಹೇಳಿದಾರೆ.

ನೀಲಕಂಠ ಶಿವಾಚಾರ್ಯರು ವೀರಶೈವರು ಮಾತ್ರವಲ್ಲ, ವೀರಶೈವಾಗ್ರೇಸರರು. ನಿಗಮಾಗಮ ವೇದ್ಯರು.

> " ನಿಖಿಲ ನಿಗಮಾಗಮ ಸಾರಸರ್ವಸ್ವ ಪರಿಜ್ಞಾನ ಪಾಂಡಿತ್ಯ ಶೌಂಡೈಃ
> ಪ್ರತ್ಯಕ್ಷೈಕಪ್ರಮಾಣಶರಣಾದ್ಯಖಿಲದುರ್ವಾದಿದುರ್ಯುಕ್ತಿನಿಕರ
> ಕರಿಕಲಭಕಂಠವಿಪಾಟನಪಾಟವ ಕಂಠೀರವೈ : ಶ್ರೀಮನ್ನೀಲಕಂಠ
> ಶಿವಾಚಾರ್ಯವರ್ಯೈ : ತಾಪತ್ರಯ ಪ್ರಮುಖಾನೇಕಾನರ್ಥವ್ರಾತ ವಿಜೃಂಭಿತ
> ಜನನ ಮರಣ ಪರಂಪರಾ ಪಯೋಧಿನಿಮಗ್ನ ಜನಿಮಜ್ಜಾತಮವ್ಯಾಜ
> ಕರುಣೋದ್ಬಿಧೀರ್ಷಯಾವಿರಚಿತಮಿದಂ ಶ್ರೀಮನ್ನೀಲಕಂಠೀಯ
> ಭಾಷ್ಯರತ್ನಂ "

ಎಂಬುದಾಗಿ ನೀಲಕಂಠಭಾಷ್ಯ ಉಪೋದ್ಘಾತ ಪ್ರಕರಣದಲ್ಲಿ ಉಕ್ತವಾಗಿದೆ. ಉಪೋದ್ಘಾತವನ್ನು ಮರಿಗೇಂದ್ರ ಮನೀಷಿಗಳು ಬರೆದಿದಾರೆ. ಇವರ ಈ ಉಪೋದ್ಘಾತವುಳ್ಳ ಈ ಗ್ರಂಥ ಅಚ್ಚಾಗಿ ಎಪ್ಪತ್ತು ವರುಷಗಳಾಗಿವೆ.

ನೀಲಕಂಠಭಾಷ್ಯ ಪ್ರಾರಂಭದಲ್ಲಿ ಪರಮಾತ್ಮ ಪ್ರಾರ್ಥನೆಯಾದ ಬಳಿಕ

> " ದ್ವಾಪರಾನ್ತೇತು ಸರ್ವತ್ರ ಜ್ಞಾನೇತ್ವಜ್ಞಾನತಾಙ್ಗತೇ। ಬ್ರಹ್ಮಾದಿಭಿಃ
> ಪ್ರಾರ್ಥ್ಯಮಾನೋ ಮಹಾದೇವಃ ಪರಶಿವಃ............... "

ಇತ್ಯಾದಿ ಶ್ಲೋಕಗಳಿಂದ ನೀಲಕಂಠ ಶಿವಾಚಾರ್ಯರ ಕಾಲ ೭ನೇ ಶತಮಾನವೆಂದೇ ಹೇಳಬೇಕು.

೧೨. ಶಿವಯೋಗಿ ಶಿವಾಚಾರ್ಯರು : ಇವರ ಕಾಲ ಎಂಟನೆಯ ಶತಮಾನ. ಇವರ ಕೃತಿ ಸಿದ್ಧಾಂತ ಶಿಖಾಮಣಿ. ಇದರಲ್ಲಿ ಕವಿವಂಶ ಪರಂಪರೆ ಹೀಗಿದೆ: ಮೂಲ ಪುರುಷ ಶಿವಯೋಗಿ ಶಿವಾಚಾರ್ಯ; ಇವನ ಮಗ ಮುದ್ದದೇವ; ಇವನ ಮಗ ಸಿದ್ಧನಾಥ ಶಿವಾಚಾರ್ಯ ; ಈತನ ಮಗನೇ ಕೃತಿಕರ್ತನಾದ ಶಿವಯೋಗಿ ಶಿವಾಚಾರ್ಯ. ಈತನು ಶಿವಾಗಮಜ್ಞ; ಶಿವಾನುಭಾವಿ.

೧೩. ಈಶಾನ್ಯ ಶಿವಗುರುಗಳು : 'ಸಿದ್ಧೇಶ್ವರ ಚಾರಿತ್ರ' ಇದು ಇವರ ಕೃತಿ. ಇದು ಸಂಸ್ಕೃತದಲ್ಲಿದೆ. ಇವರ ಕಾಲ ಕ್ರಿ. ಶ. ೯೫೦. ಕಾಶೀ ಪೀಠಕ್ಕೆ ಸೇರಿದವರು. ಇವರು ರಾಜಮಹೇಂದ್ರ ಪ್ರಾಂತದವರು.

ಕನ್ನಡ ಬೊಮ್ಮರಸ ಕವಿ ಈತನನ್ನು ನೆನೆದಿದಾನೆ :

> " ಈಶಾನ್ಯಶಿವಗುರುಗಳಾದಿಯೊಳು ಗೀರ್ವಾಣ
> ಭಾಷೆಯಿಂ ಕೃತಿವೇಳ್ದ ರೇವಣಾ ಸಿದ್ಧೇಂದ್ರ

ದೇಶಿಕನ ಪರಮಲೀಲಾಕಥನಮಂ ಸೂಕ್ಷ್ಮಮಾಗಿ ರಘಟಾಕಾರದಿಂ
ದೇಶಾಳವಳವಡಲೊಡರ್ಚಿದಂ ಹಂಪೆಯ ಹ
ರೀಶ ನಿಂತುಭಯ ಮತವನರಿದೊರೆವೆಂ ವಿ
ಲಾಸವಿಗಲೀ ಕಾವ್ಯವ ರಸಜ್ಞಸಂಸೇವ್ಯವ ಕವಿಶ್ರಾವ್ಯವ "

ಇದರಿಂದ ಈಶಾನಶಿವಗುರುಗಳ ಕಾಲ ಹರಿಹರ ಕವಿಗೆ ಹಿಂದಿನದೆಂದು ಸಿದ್ಧವಾಗುತ್ತದೆ. ಅಲ್ಲದೆ 'ಸಿದ್ಧೇಶ್ವರ ಚಾರಿತ್ರ'ವೆಂಬ ಸಂಸ್ಕೃತ ಗ್ರಂಥವನ್ನು ಬರೆದುದು ಸ್ಪಷ್ಟವಾಗುತ್ತದೆ. 'ರೇಣುಕ ಚಂಪು' ಎಂಬ ಕೃತಿಯನ್ನು ರಚಿಸಿದಂತೆಯೂ ತಿಳಿಯುತ್ತದೆ.

೧೪. ಸಿದ್ಧನಾಥ ಶಿವಾಚಾರ್ಯರು: ಹತ್ತನೆಯ ಶತಮಾನ. ಇವರು 'ಶ್ರೀ ರೇಣುಕವಿಜಯ'ಕಾವ್ಯವನ್ನು ಬರೆದಿದಾರೆ. ಇದರಲ್ಲಿ ಪಂಚಾಚಾರ್ಯರ ಚರಿತ್ರೆಗಳಿವೆ. ಐದು ಪ್ರಕರಣಗಳಲ್ಲಿ ಮುನ್ನೂರು ಪದ್ಯಗಳಿವೆ. ಮನೋಹರವಾದ ಶೈಲಿ; ಪ್ರೌಢ ಪ್ರಬಂಧ. ಅದರಲ್ಲಿ "ಋತುಬ್ರಹ್ಮ ವಿಯದ್ಬ್ರಹ್ಮ ಮಿತೇ ವಿಕ್ರಮವತ್ಸರೇ ಮಾರ್ಗಶೀರ್ಷೆ ಪೌರ್ಣಮ್ಯಾಂ ಪ್ರಬಂಧಃ ಪ್ರಾಪ ಪೂರ್ಣತಾಂ" ಎಂದು ಹೇಳಿದೆ. ಇದರಿಂದ ಕ್ರಿ. ಶ. ೯೬೦ರಲ್ಲಿ ಗ್ರಂಥರಚನೆಯಾದಂತೆ ತಿಳಿಯುತ್ತದೆ.

೧೫. ಹಲಾಯುಧಃ: ಇವರದು ೧೧ನೇಯ ಶತಮಾನ. ಇವರು ದಕ್ಷಿಣ ಭಾರತದವರು. ಇವರು ಯಾವ ಮಠಾಧೀಶರೆಂಬುದು ತಿಳಿಯದು. ಆದರೆ ಇವರು ಭಾರತದ ಬಹುಭಾಗವನ್ನು ಸುತ್ತಿ ಶಿವಧರ್ಮ ಪ್ರಸಾರ ಮಾಡಿ ಗುರುಧರ್ಮಚಾರಿಗಳಾಗಿದ್ದರು. ಇವರು 'ಹಲಾಯುಧ ಸ್ತೋತ್ರ' ಗ್ರಂಥ ರಚಿಸಿದ್ದಾರೆ. ಇದಕ್ಕೆ ಕೆರೆಯ ಪದ್ಮರಸರ ಮೊಮ್ಮಗನಾದ ವಿಶ್ವಾರಾಧ್ಯರೆಂಬ ಪಂಡಿತರು ಸಂಸ್ಕೃತದಲ್ಲಿಯೂ ಗುರುದೇವ ಪಂಡಿತರೆಂಬವರು ಕನ್ನಡದಲ್ಲಿಯೂ ವ್ಯಾಖ್ಯಾನಗಳನ್ನು ಬರೆದಿದಾರೆ.

೧೬. ಉದ್ಭಟಾರಾಧ್ಯ: ಇವರು ಗುಜರಾಥ ಪ್ರಾಂತದವರು, ಭಲ್ಲಕಿ ನಗರದವರು. ಇವರ ಕಾಲ ಹತ್ತನೆಯ ಶತಮಾನ. ಇವರು ಭೋಜರಾಜನ ದೀಕ್ಷಾ ಗುರುಗಳು.

" ಭಲ್ಲಕೀನಾಮನಗರೇ ಶಿವಭಕ್ತಿ ನಿಷೇವಿತೇ।
ತತ್ರಾಸೀದುದ್ಭಟಃ ಕಶ್ಚಿದಾರಾಧ್ಯಃ ಶಿವತತ್ತ್ವವಿತ್ ॥
ವರಭೋಜಮಹೀಪಾಲಂ ದೀಕ್ಷಯಾಮಾಸ ಶಾಸ್ತ್ರತಃ। "

ಎಂದುದಾಗಿ ಉಕ್ತವಾಗಿದೆ.

ಇವರು " ಹರಲೀಲೆ " ಎಂಬ ಕೃತಿಕರ್ತರು. ಇವರು ವೀರಶೈವಗುರು ಸಂಪ್ರದಾಯಕ್ಕೆ ಸೇರಿದವರು.

೧೭. ಸ್ವಪ್ರಭಾನಂದ ಶಿವಾಚಾರ್ಯರು : ಇವರು 'ಶಿವಾದ್ವೈತ ಮಂಜರಿ' ಎಂಬ ಒಂದು ಗ್ರಂಥವನ್ನು ಬರೆದಿದ್ದಾರೆ. ಇದು ವೀರಶೈವ ಗ್ರಂಥರತ್ನವಾಗಿ ರಂಜಿಸುತ್ತಿದೆ.

೧೮. ಅಘೋರ ಶಿವಾಚಾರ್ಯರು : ಇವರು "ಕ್ರಿಯಾಕರ್ಮ ದ್ಯೋತಕ" ಎಂಬ ಕೃತಿಕರ್ತರು. ಇವರು ವೀರಶೈವ ಪರಂಪರೆಗೆ ಸೇರಿದ ದೂರ್ವಾಸ ಋಷಿಯ ವಂಶದರು. ಸದ್ಯೋಜಾತ ಶಿವಾಚಾರ್ಯರ ಗ್ರಂಥ 'ತತ್ವ ಪ್ರಕಾಶಿಕಾ' ಎಂಬುದಕ್ಕೆ ವ್ಯಾಖ್ಯಾನ ಬರೆದಂತೆ ಡಾ|| ಎಸ್. ಸಿ. ನಂದಿಮಠಅವರಿಂದ ತಿಳಿಯುತ್ತದೆ.

೧೯. ಲಘುಪ್ರಭು ಶಿವಾಚಾರ್ಯರು : ಇವರು ಅಘೋರ ಶಿವಾಚಾರ್ಯರ ಕ್ರಿಯಾಕರ್ಮ ದ್ಯೋತಕ' ಕೃತಿಗೆ ವ್ಯಾಖ್ಯಾನ ಮಾಡಿದ್ದಾರೆ. ಇವರು ಗುರುಪರಂಪರೆಗೆ ಸೇರಿದವರು.

೨೦. ಶಿವಪೂಜಾ ಶಿವಯೋಗಿಂದ್ರ : ಇವರ ಕೃತಿ'ಶೃತಿಸಾರಭಾಷ್ಯಂ' ಇವರು ಚತುರ್ವೇದ ಚತುರರು. ಪ್ರಾಚೀನರು. ಇವರು ವೇದದ ಮುಖ್ಯ ಮಂತ್ರಗಳಿಗೆ ವೀರಶೈವ ಸಿದ್ಧಾಂತ ಪರವಾಗಿ ಅರ್ಥವನ್ನು ಬರೆದಿದ್ದಾರೆ.

೨೧. ಈಶಾನ ಶಿವಾಚಾರ್ಯರು : ಇವರು ಆಗಮ ತತ್ವವಿಶಾರದರು. ಇವರು ಈಶಾನ ಶಿವಗುರುದೇವ 'ಪದ್ಧತಿ' ಎಂಬ ಗ್ರಂಥವನ್ನು ರಚಿಸಿದಾರೆ. ಈತನು ಶಿವಾಗಮಗಳು ವೇದಗಳು ನಿತ್ಯಪ್ರಮಾಣಗಳೆಂದು ಹೇಳಿದಾನೆ. ಇವರದು ಹನ್ನೊಂದನೆಯ ಶತಮಾನವೆಂದು ತಿಳಿಯುತ್ತದೆ.

೨೨. ತ್ರಿಲೋಚನ ಶಿವಾಚಾರ್ಯರು :

ಇವರು ಭಾಷ್ಯಕಾರರು :

> "ರುತ್ಯಾ ಪ್ರಣವರೂಪಯಾ ಸ್ವಾತ್ಮಾನಂ ಪ್ರಾಪಯತೀತಿ ವಾ।
> ರುದ್ರೋ ರೌರೀತಿ ಸತ್ಯೇರೋರೂಯಮಾಣೋ ದ್ರವತಿ.
> ಪ್ರವಿಶತಿ ಮರ್ತ್ಯಾನಿತಿ ರುದ್ರ :"

ಇದು ಇವರ ಭಾಷ್ಯದ ಒಂದು ಭಾಗ. ಇದಲ್ಲದೆ "ಸಿದ್ಧಾಂತ ಸಾರಾವಳಿ" ಎಂಬ ಗ್ರಂಥವನ್ನು ಬರೆದಿದಾರೆ. ಇವರು ಶಿವನ ಸಾಕ್ಷಾತ್ಕಾರವನ್ನು ಪಡೆದುಕೊಂಡ ಶಿವಜ್ಞಾನಿ. ಇವರ ಕಾಲ ತಿಳಿಯದು.

೨೩. ಶ್ರೀಪತಿ ಪಂಡಿತಾರಾಧ್ಯರು : ಇವರು ಬೆಜವಾಡದವರು. ಶಿವಾಚಾರ್ಯ ಶ್ರೇಣಿಗೆ ಸೇರಿದವರು. ಅಗ್ನಿಸ್ತಂಭನ ಮಹಿಮೆಯು ಇವರನ್ನು ಬಳಸಿ ಬಂದಿದೆ; ಬೆಳಗಿಸಿದೆ. ಇವರು ಅನಂತಪಾಲಭೂಪಾಲನ ಕಾಲದಲ್ಲಿದ್ದರು. ಈ ರಾಜನು ಚಾಳುಕ್ಯ ತ್ರಿಭುವನ ಮಲ್ಲದೇವನ ಸಾಮಂತರಾಜನಾಗಿದ್ದನು. ಗೋದಾವರಿ ಗುಂಟೂರು ಬಿಜವಾಡ ಕಡಪಾ ಕರ್ನೂಲು ಪ್ರಾಂತಗಳನ್ನು ಆಳುತ್ತಿದ್ದನು. ಇವನು

ಹನ್ನೊಂದನೆಯ ಶತಮಾನದವನು. ಆದ್ದರಿಂದ ಶ್ರೀಪತಿ ಪಂಡಿತಾರಾಧ್ಯರ ಕಾಲ ಕ್ರಿ. ಶ. ೧೦೭೨ ಎಂದು ನಿಶ್ಚಿತವಾಗಿದೆ. ಇವರಿಗೆ ಪೂಜ್ಯಸ್ಥಾನವಾದ ಬೆಜವಾಡ ಮಲ್ಲೇಶ್ವರ ದೇವಾಲಯವು ೯ನೆ ಶತಮಾನದಲ್ಲಿ ಸ್ಥಾಪಿತವಾದದಂದು ಶಾಸನವಿದೆ.

ಇವರನ್ನು ಕಲ್ಯಾಣದ ಬಸವಣ್ಣ ಪಾಲ್ಕುರಿಕೆ ಸೋಮನಾಥ ಮಲ್ಲಿಕಾರ್ಜುನ ಪಂಡಿತಾರಾಧ್ಯ ಮುಂತಾದವರು ಮನಸಾರೆ ಸ್ಮರಿಸಿದಾರೆ. ಮದ್ರಾಸಿನವರೂ ಇತಿಹಾಸಜ್ಞರೂ ಆದ ಶ್ರೀ ಟಿ. ಎಸ್. ನಾರಾಯಣಶಾಸ್ತ್ರಿಗಳು, ಬಿ. ಎ; ಬಿ.ಎಲ್. ಎಂಬುವರು ಶ್ರೀ ಪಂಡಿತಾರಾಧ್ಯರ ಕಾಲವನ್ನು ಕ್ರಿ. ಶ. ೧೦೭೨ ಎಂದು ಸ್ಪಷ್ಟಗೊಳಿಸಿದಾರೆ.

ಶ್ರೀಪತಿ ಪಂಡಿತಾರಾಧ್ಯರು ಶ್ರೀಕರ ಭಾಷ್ಯವನ್ನು ಬರೆದಿದ್ದಾರೆ. ಈ ಮಹಾ ಕೃತಿಯು ೧೯೩೬ ರಲ್ಲಿ ಶ್ರೀ ಸಿ. ಹಯವದನರಾವ್ ಅವರ ಸಂಪಾದಕತ್ವದಲ್ಲಿ ಸಮಗ್ರವಾಗಿ ಅಚ್ಚಾಗಿದೆ. ಸರ್ ಕೆ. ವಿ. ಪುಟ್ಟಣ್ಣಶೆಟ್ಟರು ಈ ಕಾರ್ಯವನುಮಾಡಿಸಿ ಕೀರ್ತಿಕಾಯರಾಗಿದಾರೆ. ಅಲ್ಲದೆ 'ಆರಾಧ್ಯ ಸಂಹಿತೆ' ಎಂಬ ಕೃತಿಯನ್ನು ಬರೆದಿದಾರೆ.

ಶಿಲಾ ಶಾಸನಗಳಲ್ಲಿ ಶ್ರೀಕರ ಭಾಷ್ಯದ ಮಾತಿಲ್ಲವೆಂಬ ಒಂದೇ ಒಂದುನೆಪದಿಂದ ಈಕೃತಿ ಶ್ರೀಪತಿಕೃತವಲ್ಲೆಂದು ಹೇಳಲು ಸಾಧ್ಯವಿಲ್ಲೆಂದು ಹೇಳಿದರೆ ತೆಗೆದುಹಾಕುವಂತಹದಲ್ಲ. ಮಧ್ವಪದವಿದೆಯೆಂಬುದಕ್ಕೆ ಸಮಾಧಾನವನ್ನು ಶ್ರೀ ಕಾಶೀನಾಥಶಾಸ್ತ್ರಿಗಳು 'ಶ್ರೀಪತಿ ಕಾಲ ನಿರ್ಣಯ'ದಲ್ಲಿ ಹೇಳಿದಾರೆ. ಚಿದರೆ ಮಠದ ವೀರಭದ್ರಶಾಸ್ತ್ರಿಗಳು ಸಿಕಂದ್ರಾಬಾದಿನ ಮತ್ತು ದೇವಿಡೀ ಜಮೀದಾರ್‌ರ ಪ್ರತಿಗಳೆರಡರಲ್ಲಿ ಮಧ್ವಪದ ವಿಲ್ಲೆಂದು ಹೇಳಿದಾರೆ.

೨೪. ಮಲ್ಲಿಕಾರ್ಜುನ ಪಂಡಿತಾರಾಧ್ಯರು : ಇವರ ಕಾಲ ೧೨ನೆಯ ಶತಮಾನ. ಸಂಸ್ಕೃತ ಕನ್ನಡ ತೆಲುಗುಗಳಲ್ಲಿ ಪಂಡಿತರು ಇವರು. 'ಶಿವತತ್ತ್ವಸಾರ' ಮತ್ತು 'ವೀರಶೈವ ಧರ್ಮಸಿಂಧು' ಗ್ರಂಥಗಳನ್ನು ಬರೆದಿದಾರೆ. ಇವರನ್ನು ಪಾಲ್ಕುರಿಕ ಸೋಮನಾಥ ಮತ್ತು ಶ್ರೀನಾಥ ಕವಿಗಳು ಸ್ತುತಿಸಿದಾರೆ. ಪಂಡಿತತ್ರಯರಲ್ಲಿ ಇವರೊಬ್ಬರು. ಮೊದಲಿಗರು. ಇವರ ಶಿವತತ್ತ್ವಸಾರ ಗ್ರಂಥ ಮಹತ್ವಪೂರ್ಣ ಗ್ರಂಥ. ಇವರ ಪಾಂಡಿತ್ಯ ಪೂರ್ಣ ಪ್ರಭಾವ ಅಗಾಧವಾದುದು. ವೆಲುನಾಡ ಚೋಳಭೂಪನ ಆಸ್ಥಾನದಲ್ಲಿ ಪರವಾದಿಗಳನ್ನು ಸೋಲಿಸುತ್ತಾರೆ. ಇವರ ಜನ್ಮಭೂಮಿ ದ್ರಾಕ್ಷಾರಾಮ. ವರಾಳಪುರವೆಂದು ಕೆಲವರ ಅಭಿಮತ. ಶ್ರೀ ಮುಖದರ್ಶನ ಗದ್ಯ, ಸ್ತುತಿ ಶ್ಲೋಕ ಪಂಚಕ, ಅಮರೇಶ್ವರಾಷ್ಟಕ, ಪರ್ವತ ವರ್ಣನೆ, ಸಂಸಾರ ಮಾಯಾಸ್ತವ, ಶಂಕರಗೀತ, ಆನಂದಗೀತ ಮುಂತಾದ ಕೃತಿಕರ್ತರು.

'ಶಿವತತ್ತ್ವಸಾರ' ತೆಲುಗಿನಲ್ಲಿದೆ. 'ವೀರಶೈವ ಧರ್ಮಸಿಂಧು!' ಸಂಸ್ಕೃತದಲ್ಲಿದೆ. ಇವಲ್ಲದೆ 'ಇಷ್ಟಲಿಂಗ ಸ್ತೋತ್ರ, ಶಿವಸ್ತೋತ್ರ, ಶಿವಾಧಿಕ್ಯ, 'ಗಣಸಹಸ್ರ

ನಾಮು' ಗ್ರಂಥಗಳನ್ನು ಬರೆದಂತೆ ತಿಳಿಯುತ್ತದೆ. ಅಲ್ಲದೆ 'ಭೀಮೇಶ್ವರಗದ್ಯ' 'ರುದ್ರಮಹಿಮ' 'ಲಿಂಗೋದ್ಭವದೇವಗದ್ಯ' ಗ್ರಂಥಗಳನ್ನು ಬರೆದಿದಾರೆಂದು ತಿಳಿಯುತ್ತದೆ. ಈತನ ಕುಮಾರ, ಕೇದಾರಗುರು. ಈತನಿಗೆ ಚೆನ್ನವಿಭು, ಮಹಾದೇವ, ಮನುಪಂಡಿತ, ಭೀಮನಪಂಡಿತ ಎಂಬುದಾಗಿ ನಾಲ್ವರು ಮಕ್ಕಳು. ಯವ್ವಟೂರು ಸೋಮಾರಾಧ್ಯರು ಇವರ ಮಕ್ಕಳು. ಸೂರೇಶ್ವರ ; ಸಿಂಗಣ್ಣ ಮತ್ತು ಮಾಚಣ್ಣ ಈ ಮೂವರು. ಇವರೆಲ್ಲರೂ ಶಿವಾಚಾರ್ಯರಾಗಿ ಸಂಸ್ಕೃತ ವಾಙ್ಮಯ ಸೇವೆಯ ಸಲ್ಲಿಸಿದಾರೆ. ಆದರೆ ಗ್ರಂಥಗಳಾವವೆಂಬುದು ತಿಳಿಯುವುದಿಲ್ಲ.

೨೫ ರೇವಣಸಿದ್ಧ ಶಿವಾಚಾರ್ಯ : ಈತನು ಹನ್ನೊಂದನೆಯ ಶತಮಾನದ ಪ್ರಸಿದ್ಧ ಸಿದ್ಧ ಪುರುಷ. ವೀರಸಿಂಹಾಸನಾಧೀಶ. ರೇಣುಕಾವತಾರದ ಕೊನೆಯ ಪುಣ್ಯ ಪುರುಷ. ಈತನ ಖ್ಯಾತಿಗಿಲ್ಲ ಮಿತಿ. ಈತನೂ ಗ್ರಂಥಕಾರನಾಗಿದಾನೆ. 'ಶಿವ ಜ್ಞಾನದೀಪ' ಎಂಬುದು ಈತನ ಕೃತಿ. 'ರೇವಣಸಿದ್ಧನ ಪ್ರಕ್ರಿಯ' ಎಂಬ ವೈದ್ಯಗ್ರಂಥವೊಂದಿದೆಯೆಂದು ವದಂತಿ ! ಈತನು ತನ್ನ ಜೀವನಾಂತ್ಯದಲ್ಲಿ ಸೊನ್ನಲಿಗೆಯ ಶ್ರೀ ಸಿದ್ಧರಾಮದೇವನೆಂಬ ವಚನಕಾರನ ಜನ್ಮವಾಗುವಂತೆ ಅನುಗ್ರಹಿಸಿದ ಮಹಿಮ. ಈತನ ಮಗ ರುದ್ರಮುನಿ. ರೇವಣಸಿದ್ಧ ಶಿವಾಚಾರ್ಯರು ಬಸವಣ್ಣನಿಗಿಂತ ಹಿಂದಿನವರು. ಶ್ರೀ ಸಿದ್ಧರಾಮ ದೇವನ ಜನ್ಮಕ್ಕೆ ಮುನ್ನವೇ ಲಿಂಗೈಕ್ಯರಾದವರು. ಇವರ ಮಗ ರುದ್ರಮುನಿ ೧೨ನೆ ಶತಮಾನದ ಜ್ಞಾನಿ. ಸಿದ್ಧರಾಮ ಬಸವಣ್ಣ ಚನ್ನಬಸವಣ್ಣ ಇವರ ಸಮಕಾಲೀನ. ಈತನ ಗುರುತಂದೆ ರೇವಣಸಿದ್ಧರ ಕಾಲ ವಿಷಯವಾಗಿ "ಸದ್ಯಕ್ಕೆ ರೇವಣಸಿದ್ಧನು ಈಗ ತಿಳಿದುಕೊಂಡಿರುವ ಬಸವೇಶ್ವರನ ಕಾಲಕ್ಕಿಂತ ಕನಿಷ್ಠ ಪಕ್ಷ ನೂರು ವರ್ಷ ಹಿಂದಿನವನೆಂದು ಹೇಳಿದರೆ ಸಾಕು" ಎಂದು ಶ್ರೀ ಕಪಟ್ರಾಳ್ ಕೃಷ್ಣರಾಯರು ಕಲ್‌ಬುರ್ಗಿ ಇವರು ಶರಣ ಸಾಹಿತ್ಯ ಸ. ೯. ಸಂ. ೪. ರಲ್ಲಿ ನಿರ್ಧರಿಸಿದ್ದಾರೆ.

೨೬. ಪಾಲ್ಕುರಿಕೆ ಸೋಮನಾಥ: ಇವರ ಕಾಲ ಹನ್ನೆರಡನೆಯ ಶತಮಾನ. ಈತನಿಗೆ ಪಾಲ್ಕುರಿಕೆ ಸೋಮನಾರಾಧ್ಯ ಮತ್ತು ಸೋಮೇಶ್ವರ ಎಂತಲೂ ಹೆಸರು. ಈತನು ಪ್ರಸಿದ್ಧ ಕವೀಶ್ವರ. ಅಷ್ಟಭಾಷಾ ವಿಶಾರದ. ವರಂಗಲ್ಲ ಜಿಲ್ಲೆಯ ಪಾಲ್ಕುರಿಕೆ ಗ್ರಾಮದವನು. 'ತುಮಕೂರು ಜಿಲ್ಲೆಯ ಹಾಲ್ಕುರಿಕೆ' ಎಂದೂ ಹೇಳುತ್ತಾರೆ. ಆಂಧ್ರ ಭಾಷೆಯಲ್ಲಿ ಈತನಿಗಿರುವ ಸ್ಥಾನಮಾನಗಳು ಅಸದೃಶವಾದವು. ಕನ್ನಡ, ತಮಿಳು, ಮರಾಠಿ, ತೆಲುಗು, ಸಂಸ್ಕೃತ ಭಾಷಾ ಕೋವಿದನು. ವೃಷಾಧಿಪಶತಕದಲ್ಲಿ ತನ್ನ ಎಂಟು ಭಾಷಾ ಪ್ರಭುತ್ವವನ್ನು ಕವಿತ್ವ ಶಕ್ತಿಯನ್ನು ಪ್ರದರ್ಶಿಸಿದಾನೆ. ಜಾಣುದೆಲುಗನು ಬಳಸಿದ ಬ್ರಹ್ಮ. 'ಶೀಲಸಂಪಾದನೆ' ಈತನ 'ಇನ್ನೊಂದು ಗಮನಾರ್ಹ ಕೃತಿ. ಈತನು ಸಂಸ್ಕೃತ ಭಾಷಾಕೋವಿದನೂ ಆಗಿದ್ದನು. (ಶ್ರೀ ಪಂಡಿತಾರಾಧ್ಯ ಚರಿತ್ರ ಬಸವ ಪೌರಾಣಗಳನ್ನು ತೆಲುಗಿನಲ್ಲಿ ಬರೆದಿದಾನೆ.)

'ಬಸವರಾಜೀಯ' 'ವೀರಶೈವ ಪ್ರಕಾಶಿಕೆ' ಎಂಬ ಸಂಸ್ಕೃತ ಕೃತಿಗಳನ್ನು ಬರೆದಂತೆ ತಿಳಿಯುತ್ತದೆ. 'ಚತುರ್ವೇದ ಸಾರ' ಅನುಭವಸಾರ, ರುದ್ರಭಾಷ್ಯ, ಸೋಮನಾಥ ಭಾಷ್ಯ, ಅಕ್ಷರಾಂಕಗದ್ಯ, ಲಿಂಗೋದ್ಭವಗದ್ಯ, ಎಂಬಿವು ಈತನ ಸಂಸ್ಕೃತ ಗ್ರಂಥಗಳು. 'ತತ್ವವಿದ್ಯಾಕಲಾಪ' 'ಕವಿತಾಸಾರ' 'ಅನ್ಯದೇವಕೋಳಾಹಳ' 'ಪ್ರತ್ಯಕ್ಷ ಭೃಂಗೀಶನವತಾರ' 'ವೇದವೇದಾಂತಾಗಮ ಪುರಾಣನಿಪುಣ' ಎಂಬೀ ಬಿರುದುಗಳು ಇವನಿಗಿವೆ. ವೈಷ್ಣವಾಚಾರ್ಯನಾಗಿದ್ದ ಚಕ್ರಪಾಣಿ ರಂಗನಾಥನನ್ನು ವಿದ್ವದ್ವಾದದಲ್ಲಿ ಸೋಲಿಸಿ, ಶ್ರೀಶೈಲ ಶಿಖರವನ್ನು ನೋಡದೆ ಕಳಕೊಂಡ ಕಣ್ಣನಿತ್ತು ಕರಕಂಜಾತನನ್ನಾಗಿಸಿದಾತನು. ಶ್ರೀ ಗುರು ಸೋಮನಾಥನು.

ರಂಗನಾಥನು ವೀರಶೈವನಾದ ಬಳಿಕ 'ವೀರಭದ್ರ ವಿಜಯ' 'ಶರಭಚಾರಿತ್ರ' 'ಪಂಚಾಕ್ಷರೀ ರಗಳೆ' ಎಂಬ ಗ್ರಂಥಗಳನ್ನು ಬರೆದು ತನ್ನ ಗುರು ಸೋಮನಾಥನಿಗೆ ಸಮರ್ಪಿಸುವನು.

ಸೋಮಾರಾಧ್ಯರ ತರುವಾಯ ಇವರ ಮಗನಾದ ಚತುರ್ಮುಖ ಬಸವಾರಾಧ್ಯರು ಗುರುಪಟ್ಟಾಧಿಕಾರಿಯಾಗುವರು.

೨೭. ವಿಶ್ವೇಶ್ವರ ಶಿವದೇವನು : ಇವರದು ಹದಿಮೂರನೆಯ ಶತಮಾನ ಇವರು ಕಾಕತೀಯ ಗಣಪತಿ ಸಾರ್ವಭೌಮನ ಶಿವದೀಕ್ಷಾಗುರುವು. ಇವರನ್ನು ಶಿವದೇವ ಎಂದು ಸಂಕ್ಷಿಪ್ತನಾಮದಿಂದ ಕರೆವುದುಂಟು. ಇವರು ಸಂಸ್ಕೃತ ಮತ್ತು ಆಂಧ್ರ ಭಾಷೆಗಳೆರಡರಲ್ಲಿ ಪ್ರಕಾಂಡ ಪಂಡಿತರು. ಅಷ್ಟಾಂಗ ಯೋಗ ನಿಪುಣರು. ಇವರೊಡನೆ ನೂರಾರು ಜನ ವೀರಶೈವಾಚಾರ್ಯರಿದ್ದರೆಂದು ರಾಜಗುರುವಾಗಿದ್ದನೆಂದು ಶಾಸನ ಸಾಟುತ್ತಿದೆ :

" ವಿಶ್ವೇಶ್ವರ ಶಿವಾಚಾರ್ಯೋ ಧೀಮಾನ್ ರಾಜಗುರು ಸ್ವಯಂ|
ಏವಮಾಜ್ಞಾಪಯದ್ವೀರಶೈವಾಚಾರ್ಯಶತೈರ್ವೃತಃ|| "

ಎಂಬುದಾಗಿ ಮಲ್ಕಾಪುರ ಶಾಸನವಿದೆ. ಇವರು ಸಂಸ್ಕೃತದಲ್ಲಿ 'ಪುರುಷಾರ್ಥಸಾರ' 'ಪರತತ್ವಸಾರ' ಮುಂತಾದ ಕೃತಿಗಳನ್ನು ರಚಿಸಿದಾರೆ. ಇವರು ಓರಂಗಲ್ಲಿನಲ್ಲಿದ್ದ 'ವಿದ್ಯಾಮಂಟಪ'ವೆಂಬ ಸಂಸ್ಥೆಯ ಅಧ್ಯಕ್ಷರಾಗಿದ್ದರು. ಪ್ರತಾಪರುದ್ರದೇವ ಎಂದು ಹೆಸರಾದ ರುದ್ರಮ್ಮ ದೇವಿಯು ಇವರ ಶಿಷ್ಯಳು.

೨೮. ವೃಷಭೇಂದ್ರ ಪಂಡಿತ ಶಿವಾಚಾರ್ಯ : ಇವರು ಶ್ರೀಪತಿ ಪಂಡಿತ ವಂಶದವರು. ಶ್ರೀ ರಾಜಲಿಂಗಾರಾಧ್ಯರ ಪುತ್ರರು. ಇವರು ವೇದಾಗಮ ಉಭಯ ವೇದಾಂತ ಸಿದ್ಧಾಂತ ವೀರಶೈವ ಪ್ರಕಾಶಕರು; ಪ್ರವೀಣರು. ಇವರು ನಾರಾಯಣೋಪನಿಷತ್ ಶೈವಭಾಷ್ಯವನ್ನು ಪ್ರಾರಂಭಿಸುತ್ತ ಶಿವನನ್ನು ವಿಶ್ವೇಶ್ವರನನ್ನು ವೀರಭದ್ರ, ಗುಹ, ಭೃಂಗಿ, ಚಂಡಾದಿಗಳನ್ನು ನೆನೆಯುತ್ತಾರೆ. ಬಳಿಕ "ಸರ್ವ ವೇದಾಂತ

ಸಿಂದ್ಧಾಂತದ್ವೈತಾದ್ವೈತ ಮತಾಧಿಪಂ। ಭವಭಕ್ತನಿಧಿಂ ಭವ್ಯಂ ಭಜೇ ಶ್ರೀಪತಿ ಪಂಡಿತಂ" ಎಂದು ತಮ್ಮ ಮೂಲಪುರುಷನನ್ನು ಸಂಬೋಧಿಸಿ ಸ್ತುತಿಸಿದಾರೆ.

ತೈತ್ತರೀಯ ಭಾಷ್ಯ, ಮಹಾನಾರಾಯಣೋಪನಿತ್ ಶೈವ ಭಾಷ್ಯ, ಪುರುಷ ಸೂಕ್ತಶೈವಭಾಷ್ಯ, ಬ್ರಹ್ಮವಲ್ಲಿಶೈವಭಾಷ್ಯ, ಭೃಗುವಲ್ಲಿಶೈವಭಾಷ್ಯ, ಶಿಕ್ಷಾವಲ್ಲೀ ಶೈವ ಭಾಷ್ಯ ಈ ಆರು ಗ್ರಂಥಗಳನ್ನು ಬರೆದಿದಾರೆ.

ಇವರು ಚಂಡೇಶನನ್ನು ಕೊನೆಯದಾಗಿ ನೆನೆದ ಕಾರಣ ಶ್ರೀಪತಿ ಪಂಡಿತರ ಒಂದೆರಡು ತಲೆಮಾರಿನವರಿರಬೇಕು. ಹನ್ನೆರಡನೆಯ ಶತಮಾನದ ಆದಿಕಾಲವೆಂದು ಹೇಳಬಹುದಾಗಿದೆ.

೨೯. ಹರದತ್ತಾಚಾರ್ಯರು: ಇವರು "ಚತುರ್ವೇದ ಸಾರಸಂಗ್ರಹ"ವೆಂಬ ಗ್ರಂಥ ವನ್ನು ರಚಿಸಿದಾರೆ. ಇವರು ಶಿವಾಚಾರ್ಯ ಶ್ರೇಣಿಗೆ ಸೇರಿದವರು. ಅಪಾರ ಪಂಡಿತರು. ಅಸದೃಶ ಮಹಾಮಹಿಮರು. ಶಿವೈಕದೇವತೋಪಾಸಕರು. ೧೩ ನೆಯ ಶತಮಾನ ದವರು. 'ಪಂಚಶ್ಲೋಕೀ' ಎಂಬ ಸ್ತೋತ್ರಕರ್ತರು. ಕಾಯ್ದ ಕಬ್ಬಿಣದ ಏಣಿ ಯನ್ನು ಏರಿ ಮೆರೆದ ಮಹಿಮರು. ಇವರ ಈ 'ಪಂಚಶ್ಲೋಕಿ'ಗೆ ಕೆಳದಿ ಬಸವರಸನು 'ಶೈವಸಂಜೀವಿನಿ' ಎಂಬ ವ್ಯಾಖ್ಯಾನವನ್ನು ಬರೆದಿದ್ದಾನೆ. ಶಿವಸಿದ್ಧಾಂತ ಪ್ರತಿ ಪಾದಕ ಕೃತಿಯಿದು.

"ಹರದತ್ತ ಮುಖೋದ್ಭೂತ ಪಂಚಶ್ಲೋಕೀ ಸುಸಂಗತಾ
ಟೀಕಾ ಜಯತು ಕಲ್ಯಾಣೀ ಶೈವಸಂಜೀವಿನೀ ಭುವಿ"

೩೦. ಚೆನ್ನಸದಾಶಿವಯೋಗೀಂದ್ರ: ಇವರು ದೇಶಿಕೋತ್ತಮರು; ಶಿವಾಚಾರ್ಯರು. ಇವರು 'ಶಿವಯೋಗ ಪ್ರದೀಪಿಕೆ' ಎಂಬ ಸಂಸ್ಕೃತ ಗ್ರಂಥವನ್ನು ಬರೆದಿದಾರೆ. ಇದನ್ನು ನಿಜಗುಣ ಶಿವಯೋಗಿಯು ಕನ್ನಡಿಸಿ 'ಪಾರಮಾರ್ಥ ಪ್ರಕಾಶಿಕೆ' ಎಂದು ಹೆಸರಿಸಿದ್ದಾನೆ; ಹೆಸರಾಗಿದೆ. ಶಿವಯೋಗ ಪ್ರದೀಪಿಕೆಗೆ ಬಸವಾರಾಧ್ಯರೆಂಬುವರು ಕನ್ನಡ ಟೀಕೆಯ ಬರೆದಿದಾರೆ. ಇವರ ಕಾಲ ತಿಳಿದಿಲ್ಲ. ನಿಜಗುಣ ಶಿವಯೋಗಿ ಗಿಂತ ಹಿಂದಿನವರು. ಇವರನ್ನು ನಿಜಗುಣರು ಹೀಗೆ ಪೊಗಳದಾರೆ: "ತಾರಕ ಬ್ರಹ್ಮೋಪದೇಶಾದ್ಯಖಿಳ ರಹಸ್ಯೋಪದೇಶಿಕನಾದ ಚೆನ್ನಸದಾಶಿವಯೋಗೀಶ್ವರನೆನಿ ಸುವ ಆಚಾರ್ಯನ ಶಿವಯೋಗ ಪ್ರದೀಪಿಕೆಯನು"

೩೧. ಶಿವರೇಣುಕ ಶಿವಾಚಾರ್ಯರು: ಇವರು ರೇವಣಾರಾಧ್ಯರ ಮಗ ಕೋಟಿ ಪಲ್ಲಾರಾಧ್ಯರ ಮಗ. ಇವನ ತಾಯಿ ರುದ್ರಾಣಿ. ಈತನ ಕಾಲ ಹನ್ನೆರಡನೆಯ ಶತಮಾನ ಕೊನೆ. ಇವನು ಬೀಬಾಗವುಕ್ಕೆ ಅರ್ಥರೂಪ ವ್ಯಾಖ್ಯಾನವನ್ನೂ ಯಜುರ್ವೇದಕ್ಕೆ ವಿಗ್ರಹ ಭಾಷ್ಯವನ್ನು ಬರೆದಿದಾನೆ. ಇವು ಲಭ್ಯವಿಲ್ಲ.

"ಸೋಮಲಾಗರ್ಭ ಕಂಜೇತು ಕೋಟಿಪಲ್ಲಾರ್ಯ ಉದ್ಭವ :
ತಸ್ಯ ಜಾಯಾಖ್ಯ ರುದ್ರಾಣೀ ಗರ್ಭಜಃ 'ಶಿವರೇಣುಕಃ'
ಬಿಂಬಾಗಮಾರ್ಥ ವ್ಯಾಖ್ಯಾನೀ ಯಜುರ್ವಿಗ್ರಹ ಭಾಷ್ಯಕಃ"

—ಪಂಚಬ್ರಹ್ಮೋದಯ ಭಾಷ್ಯ

೩೦. ವಿಶ್ವನಾಥಾರ್ಯರು : ಇವರು ಶಿವರೇಣಕ ಸುಪುತ್ರರು. ಇವರ ಕೃತಿ ವಿಶ್ವಗೀತ' ಇದು ಸಿಕ್ಕಿಲ್ಲ.

"ತಸ್ಯಾತ್ಮಜೋ ವಿಶ್ವನಾಥಾರ್ಯ ವಿಶ್ವಗೀತಪ್ರಕಲ್ಪಿತಃ"

—ಪಂಚಬ್ರಹ್ಮೋದಯ ಭಾಷ್ಯ

೩೧. ವೀರಭದ್ರಾರ್ಯರು : ಇವರು ವಿಶ್ವನಾಥಾರ್ಯರ ಮಕ್ಕಳು. ಇವರು ಬರೆದ ಗ್ರಂಥ 'ವೀರಭದ್ರಪುರಾಣ' ಎಂದು ಅದೇ ಪಂಚಬ್ರಹ್ಮೋದಯ ಭಾಷ್ಯದಿಂದ ತಿಳಿಯುತ್ತದೆ.

೩೨. ವೀರಣಾರಾಧ್ಯರು : ಇವರು ವೀರಭದ್ರಾರ್ಯರ ಕುಮಾರರು. ಇವರು ಯೋಗವಿದ್ಯಾವಿಶಾರದರಾಗಿದ್ದರು. ಇವರು ಶಾಕ್ತೇಯ ಮತವನ್ನು ಖಂಡಿಸುವ 'ಲೋಕಾಕ್ಷಿ' ಎಂಬ ಗ್ರಂಥಕ್ಕೆ ವ್ಯಾಖ್ಯಾನಕರ್ತರು.

೩೩. ಚಿಕ್ಕವೀರಾರ್ಯರು : ಇವರು ವೀರಣಾರ್ಯರ ಕುವರರು. ಇವರು 'ವೇದ ದೀಕ್ಷಾ ವಿಧಿ'ಯನ್ನು ಬರೆದಿದಾರೆ.

೩೪. ರುದ್ರಮೌನಾರ್ಯರು : ಚಿಕ್ಕವೀರಾರ್ಯರ ಮಕ್ಕಳಿವರು. ರುದ್ರಭಾಷ್ಯಕ್ಕೆ ಅರ್ಥವನ್ನು ಬರೆದವರು.

೩೫. ವಾರಣಾಸೀಶರು : ರುದ್ರಮೌನಾರ್ಯರ ಶಿಶುವಾದ ಇವರು ಜಾಬಾಲಿ ಶೃತಿಗೆ ವೃತ್ತಿಯನ್ನು ಕಾಮಿಕೋತ್ತರಕ್ಕೆ ವ್ಯಾಖ್ಯಾನವನ್ನೂ ಭೀಮಕಲ್ಪಕ್ಕೆ ವಾಚಕ ವನ್ನೂ ರಚಿಸಿದ್ದಾರೆ.

೩೬. ಸರ್ವೇಶ್ವರಾರ್ಯರು : ವಾರಣಾಸೀಶರ ಪುತ್ರರಾದ ಇವರು 'ಸಾಮ ಗಾನಾರ್ಥ ಖಂಡನ' ಎಂಬ ಪುಸ್ತಕವನ್ನು ರಚಿಸಿದಾರೆ.

"ಸರ್ವೇಶ್ವರಾರ್ಯಸ್ತ ಜ್ಞಾತಸಾಮಗಾನಾರ್ಥಖಂಡನಃ"

೩೭. ರೇವಣಸಿದ್ಧ ಶಿವಾಚಾರ್ಯರು : ಇವರು ಸರ್ವೇಶ್ವರಾರ್ಯರ ಸತ್ಪುತ್ರರು. ಅತ್ಯಂತ ವಿದ್ವಾಂಸರು. ಈತನಿಗೆ ವೀರಮಾಹೇಶ್ವರನೆಂದು ಇನ್ನೊಂದು ಹೆಸರಿತ್ತು. ಈತನು 'ಏಕೋತ್ತರಶತಸ್ಥಲ' ಗ್ರಂಥಕರ್ತನು. ಮತ್ತು ಪಂಚ ವಿಂಶತಿ ಲೀಲಾ ವಿಗ್ರಹಸ್ತೋತ್ರಕ್ಕೆ ಭಾಷ್ಯವನ್ನು ಬರೆದವನು.

೩೮. ಸೋಮನಾಥಾರ್ಯರು : ಈತನು ರೇವಣಾಸಿದ್ಧರ ಮಗನು. ಮಹಾ ಮಹಿಮನು. ಮೀರಿದ ಚರಿತ್ರನು. ಅನೇಕ ಆಗಮ ಬಲ್ಲಿದನು. ಜಾತಿವಾದ ನಿರಾಸಕನು. ೬೪ ವಿದ್ಯೆಗಳಲ್ಲಿ ಸಂಪೂರ್ಣ ಸಿದ್ಧಿಯುಳ್ಳವನು ಶಿಷ್ಯಾನುಗ್ರಹ ಸಮರ್ಥನು. ದೀಕ್ಷಾಮೋಕ್ಷ ಪ್ರದಾಯಕನು. ಲೋಕಾನುರಾಗಿ. ಕೋವಿದಾ ಗ್ರಣಿ. ವೀರಶೈವ ಪ್ರಸಾರಕ್ಕಾಗಿ ಲೋಕದಲ್ಲಿ ಸಂಚರಿಸಿ ಮೆರೆದಾತನು. ಇವನು ಮಂತ್ರ, ಶಾಸ್ತ್ರ, ಪುರಾಣ ಇತಿಹಾಸ, ಭಾಷ್ಯಗಳನ್ನು ಬರೆದಿದಾನೆ.

"ಸೋಮನಾಥಾರ್ಯ ಲೋಕಾಭಿರಾಮಃ ಶ್ರಿಕೋವಿದೋನ್ನತಃ
ವೀರಶೈವ ಪ್ರಕಾಶಾರ್ಥ ಲೋಕಮಧ್ಯೇಷು ರಾಜಿತಃ
ಚೌಷಷ್ಠಿ ಸಿದ್ಧಿ ವಿದ್ಯಾದಿ ಪರಾಗಜ್ಞಾನಲಂಪಟಃ
ಶಿಷ್ಯಾನುಗ್ರಹ ಸಮರ್ಥೋ ದೀಕ್ಷಾಮೋಕ್ಷ ಪ್ರದಾಯಕಃ
ಮಂತ್ರಶಾಸ್ತ್ರಪುರಾಣೇತಿಹಾಸಭಾಷ್ಯನಿರ್ಮಾಪಕಃ"

—ಪಂಚಬ್ರಹ್ಮೋದಯಭಾಷ್ಯ.

೩೯. ಲಿಂಗಣಾರಾಧ್ಯರು : ಇವರು ಪ್ರಸಿದ್ಧರಾದ ಸೋಮನಾಥಾರ್ಯರ ಗರ್ಭಸಂಜಾತರು. ಲಿಂಗಪುರಾಣಕ್ಕೆ ವೃತ್ತಿಯನ್ನು ಬರೆದ ವೃತ್ತಿಕಾರರು.

೪೦. ವೀರಣಾರ್ಯರು : ಲಿಂಗಣಾರಾಧ್ಯರ ತನುಜರು. ಇವರು 'ತ್ರಿಮೂರ್ತಿ ವಾದ ಖಂಡನ' ಗ್ರಂಥಕರ್ತರು.

೪೧. ವೀರಾರ್ಯರು : ವೀರಣಾರ್ಯರ ಪುತ್ರರು 'ಮಹಾಭಾಷ್ಯಾರ್ಥ' ರಚಕರು.

೪೨. ಚಿಕ್ಕ ವೀರಾರ್ಯರು : ವೀರಾರ್ಯರ ಮಕ್ಕಳು. ಯೋಗಜೋತ್ತರಕ್ಕೆ ಭಾಷ್ಯವನ್ನು ಬರೆದಿದಾರೆ.

೪೩. ರೇವಣಾಸಿದ್ಧ ದೇಶಿಕರು : ಇವರು ಚಿಕ್ಕವೀರಾಧ್ಯರ ಮಕ್ಕಳು. ಮಹಾವಿದ್ವಾಂಸರು. ಇವರು 'ಭಟ್ಟ ಭಾಸ್ಕರ ಸಂವಾದ' 'ಉಮಾ ಕಲ್ಯಾಣ' 'ಐತ್ರೇಯ' ವೀರಭದ್ರ ಸಹಸ್ರ' ಎಂಬೀ ನಾಲ್ಕು ಗ್ರಂಥಗಳನ್ನು ರಚಿಸಿದಾರೆ.

ಈ ಹದಿನಯ್ದು ಜನ ಕವಿಗಳ ಪರಂಪರೆಯನ್ನು ಜಗದ್ಗುರು ಪಂಡಿತಾರಾಧ್ಯ ಪರಂಪರೆಯವರಾದ ಶ್ರೀ ಸಾಸಲು ಚಿಕ್ಕಣಾರಾಧ್ಯರು ತಮ್ಮ 'ಪಂಚಬ್ರಹ್ಮೋದಯ ಭಾಷ್ಯ'ದಲ್ಲಿ ಉಲ್ಲೇಖಿಸಿದಾರೆ.

"ಇವರೆಲ್ಲರ ಕಾಲ ಕ್ರಿ. ಶ. ೧೧೫೦ ರ ಸುಮಾರಿನಿಂದ ಕ್ರಿ. ಶ. ೧೪೫೦ ಸುಮಾರು ವರೆವಿಗೆ ಮುನ್ನೂರು ವರ್ಷಗಳ ಕಾಲದಲ್ಲಿ ಈ ಪರಂಪರೆಯ ಸಂಖ್ಯೆಯು ಸರಿಕಂಡುಬರುತ್ತದೆ. ಮತ್ತು ಮೇಲೆ ಕಂಡ ಪರಂಪರೆಯವರು ರಚಿಸಿದ ಗ್ರಂಥಗಳಲ್ಲಿ ಕೆಲವು ದೊರಕುತ್ತವೆ. ಆದರಿಂದ ಈ ಪರಂಪರೆಯು ನಿಜವೆಂದು ನಂಬಲಿಕ್ಕೆ ಬರುವಂತಿದೆ." ಎಂದು ಸದ್ಧರ್ಮದೀಪಿಕೆಯ ಸಂಪಾದಕ ಶ್ರೀ ಚೆನ್ನಮಲ್ಲಿಕಾರ್ಜುನರು ಹೇಳುತ್ತಾರೆ.

೪೪. ಚಿಕ್ಕ ವೀರಣ್ಣೊಡೆಯರು : ಇವರು ಸೋಮನವಳ್ಳಿಯವರು. ಇವರ 'ಪರಮಮೂಲಜ್ಞಾನ ಪ್ರಶಸ್ತಿ' ಎಂಬ ಸಂಸ್ಕೃತ ಗ್ರಂಥವ ಬರೆದಿದಾರೆ. ಇವರು ಜ.ಪಂಡಿತಾರಾಧ್ಯ ಮತ್ತು ಜ. ವಿಶ್ವಾರಾಧ್ಯರುಗಳ ಕಟ್ಟಾಭಿಮಾನಿ; ಶಿವಾಚಾರ್ಯ. ಇವರು ಹನ್ನೆರಡನೆಯ ಶತಮಾನದವರು.

೪೫. ಅನ್ನದಾನಿ ಮಲ್ಲಿಕಾರ್ಜುನ ಶಿವಾಚಾರ್ಯರು : ಇವರ ಕಾಲ ಸುಮಾರು ಹದಿಮೂರನೆಯ ಶತಮಾನ. ಗುರುಮಠಾಧೀಶರು. ಶ್ರೀಶೈಲ ಪರಂಪರೆಗೆ ಸೇರಿದವರು. ಇವರು ಬರೆದ ಗ್ರಂಥ 'ಗಂಗೋದಯ' ಎಂಬುದು.

೪೬. ಕೆರೆಯ ಪದ್ಮರಸ : ಈತನು ಸಂಸ್ಕೃತ 'ಸಾನಂದ ಚರಿತೆ'ಯ ಬರೆದಿದಾನೆ. ಈತನು ಸಕಲೇಶ ಮಾದರಸ ವಂಶಜನು. ಹರಿದೇವನ ಸಮಕಾಲೀನನು.

೪೭. ವೀರಭದ್ರದೇವ ಶಿವಾಚಾರ್ಯರು : ಇವರು 'ವೀರಶೈವ ಸಿದ್ಧಾಂತ ದೀಪಿಕೆ'ಯ ಗ್ರಂಥಕರ್ತರು. ವೀರಣಾರ್ಯ ಎಂಬುವರ ಪುತ್ರರು. ಶ್ರೀ ಜ. ಪಂಡಿತಾರಾಧ್ಯ ಪರಂಪರೆಯವರು. ಶ್ರೀ ನೀಲಕಂಠ ದೇವರ ಕರುಣೆಯಿಂದ ಇವರು 'ವೀರಶೈವಸಿದ್ಧಾಂತ ದೀಪಿಕೆ'ಯನ್ನು ಬರೆದಿರುವುದಾಗಿ ತಿಳಿಯುತ್ತದೆ.

೪೮. ಸಾಸಲ ಚಿಕ್ಕವೀರಣಾರಾಧ್ಯರು : 'ಪಂಚಬ್ರಹ್ಮೋದಯ ಭಾಷ್ಯ' ಇವರ ಕೃತಿ ! ಕ್ರಿ. ಶ. ೧೪೫೦ ಇವರ ಕಾಲ. ಶ್ರೀ ಗುರು ಶಾಂತಲಿಂಗದೇಶಿಕನು ಇವರ ತಂದೆ. ಶ್ರೀ ರೇವಣಸಿದ್ಧರ ವಂಶದವರಿವರು.

೪೯. ಸೋಸಲೆ ರೇವಣಾರಾಧ್ಯರು : 'ಶಿವಾಧಿಕ್ಯ ಶಿಖಾಮಣಿ' ಎಂಬುದನ್ನು ಸಂಸ್ಕೃತ ಭಾಷೆಯಲ್ಲಿ ಬರೆದಿದಾರೆ. ಇವರು ಶಿವಾಚಾರ್ಯ ಪರಂಪರೆಗೆ ಸೇರಿದಾರೆ.

೫೦. ಗುರುರಾಜ : 'ಪಂಡಿತಾರಾಧ್ಯ ಚರಿತ್ರೆ'ಯನ್ನು ಇವರು ಸಂಸ್ಕೃತದಲ್ಲಿ ಬರೆದಿದಾರೆ. ಈತನ ಕಾಲ ಕ್ರಿ. ಶ. ೧೫೫೦,

೫೧. ಷಡಕ್ಷರ ಮಂತ್ರಿ : ಇವರು 'ಧರ್ಮಶಿರೋಮಣಿ'ಯ ಕೃತಿಕರ್ತರು.

೫೨. ನೀಲಕಂಠಾಚಾರ್ಯರು : ಮಲ್ಲಯ ದೇವ ಚೆನ್ನಮಾಂಬಾ ದಂಪತಿಗಳ ಉದರದಲ್ಲಿ ಉದಯನಾದವನು, ಈತನ ಕಾಲ ಸು. ೧೪ನೆಯ ಶತಮಾನ. ಈತನು 'ಕ್ರಿಯಾಸಾರ' ಎಂಬ ಬೃಹತ್ಕೃತಿಯನ್ನು ಬರೆದು ಪ್ರಸಿದ್ಧನಾಗಿದಾನೆ; ಪಂಡಿತಾಗ್ರಣಿಯೆನಿಸಿದಾನೆ.

೫೩. ಮಗ್ಗೆಯ ಮಾಯಿದೇವ ವಿಭು : ಈತನು ಐಹೊಳೆಯ ಗ್ರಾಮದವನು. ಉಪಮನ್ಯು ಶಿವಾಚಾರ್ಯ ಸಂತತಿಯವನು. ಈ ಉಪಮನ್ಯು ಶಿವಾಚಾರ್ಯರಿಂದ ಭೀಮನಾಥ, ಇವರಿಂದ ಕಾಳೇಶ್ವರ, ಇವರಿಂದ ಬೊಪ್ಪನಾಥ. ಇವರಿಂದ ನಾಕರಾಜ ಇವರಿಂದ ಸಂಗಮೇಶ್ವರ ದೇವ, ಇವರಿಂದ ಮಗ್ಗೆಯಮಾಯಿದೇವ ವಿಭು ಜನಿಸುತ್ತಾರೆ. ಇವರ ಕಾಲ ೧೫ನೆಯ ಶತಮಾನದ ಪೂರ್ವಾರ್ಧ. ಇವರು ಶತಕತ್ರಯ

ಎಂಬ ಕನ್ನಡ ಗ್ರಂಥ ರಚಿಸಿದ್ದಲ್ಲದೆ ಸಂಸ್ಕೃತದಲ್ಲಿ 'ಅನುಭವ ಸೂತ್ರ' ಸತ್ಕೃತಿಯನ್ನು ರಚಿಸಿ ಹೆಸರುಗಳಿಸಿದಾರೆ. 'ವಿಶೇಷಾರ್ಥ ಪ್ರಕಾಶಿಕಾ' ಎಂಬ ಗ್ರಂಥವು ಈತನದೆ.

೫೩. ವರುಳಸಿದ್ಧ ಶಿವಾಚಾರ್ಯರು: ಇವರು ಉಜ್ಜಯನಿ ಸದ್ಧರ್ಮ ಪೀಠಾಧೀಶರಲ್ಲಿ ೧೦೬ ನೆಯವರು. ಇವರ ಕಾಲ ಕ್ರಿ. ಶ, ೧೯೦೩ ಇವರು 'ಶಿಷ್ಯಸಂತಾಪ ಹರಣ' 'ಶಿವಾನುಭವ' 'ಪಾತಂಜಲ ಯೋಗಶಾಸ್ತ್ರ' ಮುಂತಾದ ಗ್ರಂಥಗಳನ್ನು ಬರೆದಿದಾರೆ.

೫೪. ಷಡಕ್ಷರ ಮಹಾಕವಿ: ಈತನ ಜನ್ಮಭೂಮಿ ಧನಗೂರು. ಇದು ಮಳವಳ್ಳಿ ತಾಲೂಕಿಗೆ ಸೇರಿದೆ. ಆ ಧನಗೂರಿನ ಗುರುಮಠಾಧಿಕಾರಿ. ಎಳಂದೂರಿನಲ್ಲಿಯೂ ಇರುತ್ತಿದ್ದನು. ಈತನ ಸಮಾಧಿ ಈ ಊರಿನಬಳಿಯಿದೆ. ಷಡಕ್ಷರನು ಸುಪ್ರಸಿದ್ಧ ಕವಿ. ಅತ್ತ ರಾಜರಿಂದಲೂ ಇತ್ತ ಪ್ರಜರಿಂದಲೂ ಪೂಜಿತ ಸನ್ಮಾನಿತ ಕವಿ. ಈತನನ್ನು ಅರಿಯದ ಕನ್ನಡಿಗರಿಲ್ಲ. ಈತನ ಕಾವ್ಯಗಳನ್ನು ಓದದ ಕೇಳದ ಕನ್ನಡಿಗರು ಶಿರಿವಿರಳ. ಈತನು ಕನ್ನಡದಲ್ಲಿ ರಾಜಶೇಖರ ವಿಳಾಸ, ವೃಷಭೇಂದ್ರವಿಜಯ ಕಾವ್ಯಗಳನ್ನು ಬರೆದಂತೆ ಸಂಸ್ಕೃತದಲ್ಲಿ 'ಕವಿಕರ್ಣ ರಸಾಯನ' ಎಂಬ ಮಹಾಕಾವ್ಯವನ್ನು ರಚಿಸಿದಾನೆ. ಅಲ್ಲದೆ ಭಕ್ತಾಧಿಕ್ಯರತ್ನಾವಳಿ, ಶಿವಾಧಿಕ್ಯ ರತ್ನಾವಳಿ, ಶಿವಸ್ತವ ಮಂಜರಿ, ವೀರಭದ್ರಗದ್ಯ, ವೀರಭದ್ರದಂಡಕ ಮುಂತಾದ ಕಾವ್ಯಕವನಗಳನ್ನು ಉಲ್ಲೇಖಿಸಿದ್ದಾನೆ. ಇದರಿಂದಾಗಿ ಈತನಿಗೆ "ಉಭಯ ಕವಿತಾ ವಿಶಾರದ" ಎಂಬ ಪ್ರಶಸ್ತಿ ಪ್ರಾಪ್ತವಾಗಿದೆ. ಹನ್ನೊಂದು ವರುಷದ ಹರೆಯದ ಹುಡುಗನಾಗಿರುವಾಗಲೆ ಕಾವ್ಯಕಲೆಯು ಇಹನ ಕೈವಶವಾಗಿದೆ. ಈ ಕವಿಶಿವಾಚಾರ್ಯನ ಗುರು ಶ್ರೀ ಚಿಕ್ಕವೀರದೇಶಿಕರು.

"ಸದುರ್ಲಭಂ ಪ್ರಾಪ್ಯ ಕವಿತ್ವರತ್ನಂ
ತದಪ್ಯುಮೇಶಾಯ ಸಮರ್ಪಣೀಯಂ ।
ಅನ್ಯಾರ್ಪಿತಂ ತದ್ಧಿ ಭವತ್ಯವಶ್ಯಂ
ನಿರರ್ಥಕಂ ಸ್ಯಾದಿತಿಮೇ ಮನೀಷಾ ॥"

ಇದು ಈತನ ಸಂಸ್ಕೃತ ಕವಿಕರ್ಣ ರಸಾಯನ ಕಾವ್ಯವಾಣಿ. ಈತನ ಕಾಲ ಹದಿನೇಳನೆಯ ಶತಮಾನ. ಈ ಶತಮಾನದಲ್ಲಿ ಈತನಿಗಿಲ್ಲ ಇನ್ನಾರು ಸಮಾನ.

೫೫. ನಂಜಣಾಚಾರ್ಯರು: ಇವರು ತುಮಕೂರು ಜಿಲ್ಲೆಯ ನಿಟ್ಟೂರಿನವರು. "ವೇದಾಂತ ಸಾರ ವೀರಶೈವ ಚಿಂತಾಮಣಿ" ಎಂಬ ಗ್ರಂಥವನ್ನು ಸಂಸ್ಕೃತದಲ್ಲಿ ರಚಿಸಿದಾರೆ. ಇವನ ಕಾಲ ಕ್ರಿ. ಶ. ೧೭೨೫.

೫೬. ಪೂವಲ್ಲಿ ಮಠದ ಸಿದ್ಧನಂಜೇಶರು : ಇವರ ಕೃತಿ "ವೇದಾಂತಸಾರ ವೀರಶೈವ ಚಿಂತಾಮಣಿ."

೫೭. ವೀರಣಾಚಾರ್ಯರು: ಇವರು "ದಶಗ್ರಂಥಿ ಶಿವಜ್ಞಾನ ಪ್ರದೀಪಿಕೆ" ಎಂಬಗ್ರಂಥವನ್ನು ಬರೆದಿದಾರೆ.

೫೮. ಸದಾಶಿವ ಶಿವಾಚಾರ್ಯರು : ಇವರು ಚಿಕ್ಕಮಗಳೂರು ಜಿಲ್ಲೆಯ ಸಖರಾಯ ಪಟ್ಟಣದ ಶ್ರೀ ಹಾಲುಸ್ವಾಮಿ ಮಠದವರು. ಉಜ್ಜಯನಿ ಪೀಠದ ಪರಂಪರೆಯವರು. ಶೀಲಸಂಪನ್ನರು. ಇವರು ಕೈವಲ್ಯೋಪನಿಷತ್ತಿಗೆ ಸಂಸ್ಕೃತದಲ್ಲಿ ಭಾಷ್ಯ ಬರೆದಿದಾರೆ. ಆಧುನಿಕ ಅಂದರೆ ೨೦ ನೆಯ ಶತಮಾನದ ಭಾಷ್ಯಾಚಾರ್ಯರೆನಿಸಿದಾರೆ.

"ಶ್ರೀ ಸದಾಶಿವ ಶಿವಾಚಾರ್ಯ ಸ್ವಾಮಿಗಳು ತಮ್ಮ ವೈದುಷ್ಯ ಮತ್ತು ಅನುಭವಗಳ ಫಲವಾಗಿ ಭಾಷ್ಯ ಬರೆದು ಆಚಾರ್ಯ ಪಂಕ್ತಿಯಲ್ಲಿ ಪರಿಗಣಿತರಾಗಿದಾರೆ. ವೀರಶೈವ ಸಿದ್ಧಾಂತಾಭ್ಯಾಸಿಗಳಿಗೂ ಧರ್ಮದ ಅಭಿಮಾನಿಗಳಿಗೂ ಈ ಪುಸ್ತಕವು (ಕೈವಲ್ಯೋಪನಿಷತ್ ಸಾದಾಶಿವ ಭಾಷ್ಯಮ್) ಶಿರೋಧಾರ್ಯವಾದುದು.

—ಬಿ. ಶಿವಮೂರ್ತಿಶಾಸ್ತ್ರಿಗಳು

ಶರಣ ಸಾಹಿತ್ಯ ೧೯೫೧ ಮಾರ್ಚ್

೫೯. ಶ್ರೀ ನೀಲಕಂಠ ಶಿವಾಚಾರ್ಯರು : ಇವರು ಪೂವಲ್ಲಿ ಬೃಹನ್ಮಠ ಚರಪಟ್ಟಾಧ್ಯಕ್ಷರು. ಇವರು ಸಂಸ್ಕೃತ ವಿದ್ಯಾವಂತರು. ತರ್ಕತೀರ್ಥ, ವೇದಾಂತವಿಶಾರದ, ಸಾಂಖ್ಯಾಲಂಕಾರ, ನ್ಯಾಯವಾಚಸ್ಪತಿ-ಇತ್ಯಾದಿ ಬಿರುದಾಂಕಿತರು. ಇವರು "ಶಿವಾದ್ವೈತ ಪರಿಭಾಷಾ" ಎಂಬ ಗ್ರಂಥವನ್ನು ಸಂಸ್ಕೃತದಲ್ಲಿ ಬರೆದಿದಾರೆ. ಇದು ಪ್ರಮಾಣ ಸಿದ್ಧಾಂತ ಗ್ರಂಥ. ಇದು ೧೯೪೯ ರಲ್ಲಿ ಕಾಶೀನಾಥ ಗ್ರಂಥಮಾಲೆಯ ೪೯ನೆಯ ಹೂವಾಗಿ ಅರಳಿದೆ.

——:o:——

# ಅಕ್ಕ ನಾಗಮ್ಮ



**ಶ್ರೀಮತಿ ಸರಸ್ವತಿ ಗೌಡರ,** ಧಾರವಾಡ.

ಶಿವಶರಣೆ ಅಕ್ಕನಾಗಮ್ಮ ಬಸವಣ್ಣನವರ ಅಕ್ಕ. ಒಡಹುಟ್ಟಿದ ಅಕ್ಕನಲ್ಲ. ಆದರೆ ಒಡಹುಟ್ಟಿದ ಅಕ್ಕನಿಗಿಂತಲೂ ಹೆಚ್ಚಿನ ಪ್ರೀತಿಯಿಂದ ಅವರೊಡನೆ ಜೀವ ದುದ್ದಕ್ಕೂ ಸುಖದುಃಖಗಳಲ್ಲಿ ಪಾಲುಗಾರಳಾಗಿ ಬೆನ್ನಾಸರೆಯಾಗಿ ನಿಂತವಳು. ಬಾಗೇವಾಡಿಯ ಮಾದರಸ ಮಾದಲಾಂಬಿಕೆಯರು ಈಕೆಯ ತಂದೆ ತಾಯಿಯರು. ಬಾಲ್ಯದಲ್ಲಿಯೇ ತಾಯಿ ತಂದೆಯರನ್ನು ಕಳೆದುಕೊಂಡು ಅನಾಥನಾದ ಬಸವಣ್ಣ ಈ ಮಾದರಸನ ಆಶ್ರಯದಲ್ಲಿ ಬೆಳೆದು ದೊಡ್ಡವನಾದ. ಆಗ ಅಕ್ಕನಾಗಮ್ಮ ಅವನ ಒಡನಾಡಿ. ಮುಂದೆ ಲೋಕೋದ್ಧಾರ ಕಾರ್ಯಕ್ಕಾಗಿಯೇ ಜನ್ಮವೆತ್ತಿ ಬಂದಿದ್ದ ಬಸವಣ್ಣ ಆ ಕರ್ಮಕಾಂಡದಲಿಯೇ ಸಿಕ್ಕುಬೀಳುವಂತಿರಲಿಲ್ಲ. *ಉಪನಯನದ ಸಂಸ್ಕಾರ ಹೊಂದಲು ಅವನು ಒಪ್ಪಲಿಲ್ಲ. ಸಾಕು ತಂದೆಯ ಮನೆಬಿಟ್ಟು ಅವನು ಹೊರಹೊರಟ. ಮನೆ ದೂರವಾದರೂ ಮಮತೆಯ ಮೂರ್ತಿಯಾದ ಅಕ್ಕ ಅವನಿಂದ ದೂರವಾಗಲಿಲ್ಲ. ತಬ್ಬಲಿಯಾದ ತಮ್ಮನಿಗೆ ತಾಯಿಯ ವಾತ್ಸಲ್ಯದ ಅಮೃತ ಧಾರೆಯೆರೆಯುತ್ತ ಅಕ್ಕನಾಗಮ್ಮ ಅವನ ಒಡನೊಡನೆಯೇ ಕೂಡಲ ಸಂಗಮಕ್ಕೆ ನಡೆದುಬಂದಳು. ಜಾತವೇದ ಮುನಿಗಳ ಆಶ್ರಮದಲ್ಲಿ ಅಕ್ಕ ತಮ್ಮ ಇಬ್ಬರಿಗೂ ಆಶ್ರಯ ದೊರೆಯಿತು. ಹುಟ್ಟು ರತ್ನಗಳೆರಡಕ್ಕೂ ಸಾಣೆ ಹಿಡಿಯ ಬಲ್ಲ ಕುಶಲಶಿಲ್ಪಿ ಅಲ್ಲಿದ್ದ. ಅವನ ಕೈವಾಡ ಹುಸಿಯಾಗಲಿಲ್ಲ. ಜ್ಞಾನದಾಹ ಶಾಂತ ವಾಯಿತು. ಧರ್ಮ ಜಿಜ್ಞಾಸೆ ತಣಿಯಿತು. ಹುಡುಕಲು ಹೊರಟಿದ್ದ ಸತ್ಯದ ದಾರಿ ಕಣ್ಣೆದುರು ನಿಚ್ಚಳವಾಯಿತು. ಕಲ್ಯಾಣದ ಕ್ರಾಂತಿಗೆ ಹಿನ್ನೆಲೆಯಾಗಬಲ್ಲ

---

* ಇದು ವಿವಾದ ವಿಷಯ—ಸಂ. ಮಂ. ಅಧ್ಯಕ್ಷರು .

ಅದ್ವಿತೀಯ ಶಕ್ತಿಯನ್ನು ಸಂಪಾದಿಸಿಕೊಂಡೇ ಅಕ್ಕ ತಮ್ಮ ಇಬ್ಬರೂ ತಮ್ಮ ಗುರುವನ್ನು ಬೀಳ್ಕೊಂಡರು.

ಅಕ್ಕನಾಗಮ್ಮನ ಬಾಲ್ಯದ ಬಗ್ಗೆ ಅವಳು ತನ್ನ ಜೀವನದ ಗೊತ್ತು ಗುರಿಗಳನ್ನು ನಿರೂಪಿಸಿಕೊಂಡ ಬಗ್ಗೆ ಈ ರೀತಿಯಾಗಿ ಸಹಜವಾಗಿ ಊಹಿಸಬಹುದಾಗಿದೆ. ಆ ಊಹೆಯನ್ನು ಸತ್ಯವೆಂದು ನಂಬಲು ಹೆಚ್ಚಿನ ಆಕ್ಷೇಪಗಳಿರುವಂತಿಲ್ಲ. ಆದರೆ ಅವಳ ದಾಂಪತ್ಯ ಜೀವನದ ರೂಪುರೇಶೆಯೇನು ? ಅಕ್ಕನಾಗಮ್ಮ ಅವಿವಾಹಿತಳೆಂದೂ ಕಲ್ಯಾಣದಲ್ಲಿ ಇರುವಾಗ ಒಂದು ದಿನ ಬಸವಣ್ಣನವರು ತಂದುಕೊಟ್ಟ ಶಿವಶರಣ ಕಕ್ಕಯ್ಯನ ಮನೆಯ ಮಿಕ್ಕ ಪ್ರಸಾದ ಸೇವನೆಯಿಂದ ಚನ್ನಬಸವಣ್ಣನವರ ಜನನವಾಯಿತೆಂದು ಒಂದು ಕಥೆ ರೂಢಿಯಲ್ಲಿ ಹೇಳಲ್ಪಡುತ್ತಾ ಬಂದಿದೆ. ಚನ್ನಬಸವಣ್ಣನವರ ಜನ್ಮಕ್ಕೆ ಅತಿಮಾನವ ಸ್ವರೂಪವನ್ನು ಕೊಡುವ ಭಕ್ತಿಯ ಭರದಲ್ಲಿ ಆಡುವ ಮಾತಿದು. ಬಸವಣ್ಣನವರಿಗೆ ಬಲಗೈಯಾಗಿ, ಅನುಭವ ಮಂಟಪದ ಅಧ್ವರ್ಯುವಾಗಿ ಷಟಸ್ಥಲ ಸಿದ್ಧಾಂತವನ್ನು ರೂಪಿಸಿದ ಜ್ಞಾನಮೂರುತಿ ಚನ್ನಬಸವಣ್ಣ ಆಗ ಕೇವಲ ಹಾಲ ಹಸುಳೆಯೇ ? ಯಾಕಂದರೆ * ಬಸವಣ್ಣನವರ ಖ್ಯಾತಿಕೇಳಿ ಮಾಳವಾದೇಶದಿಂದ ಕಲ್ಯಾಣಕ್ಕೆ ಬಂದವನು ಶಿವಶರಣ ಕಕ್ಕಯ್ಯ. ಅವನ ಮನೆಯ ಪ್ರಸಾದವನ್ನು ಬಸವಣ್ಣನವರು ತಂದು ಕೊಟ್ಟದ್ದು ಯಾವಾಗ ? ಅಕ್ಕನಾಗಮ್ಮ ಗರ್ಭಧರಿಸಿ ಚನ್ನಬಸವಣ್ಣನಿಗೆ ಜನ್ಮವಿತ್ತುದು ಯಾವಾಗ ? ಬಸವಣ್ಣನವರು ಕಲ್ಯಾಣದಲ್ಲಿ ಇದ್ದದ್ದು ಕೇವಲ ಹನ್ನೆರಡು ವರ್ಷ. ಅವರು ಕೈಕೊಂಡ ಧರ್ಮ ಪ್ರಸಾರ ಕಾರ್ಯದಲ್ಲಿ ಚನ್ನಬಸವಣ್ಣನಿಂದಾದ ಸಹಾಯ ಮಹತ್ವಪೂರ್ಣವಾದದ್ದು. ಬಸವಣ್ಣ ಭಕ್ತಿಭಂಡಾರಿ ; ಎನಗಿಂತ ಕಿರಿಯರಿಲ್ಲ. ಶಿವಭಕ್ತರಿಗಿಂತ ಹಿರಿಯರಿಲ್ಲ ಎಂದು ಕೈಂಕರ್ಯಭಾವದಿಂದ ಪೊಡಮಟ್ಟು ನಿಂತ ವಿನಯಮೂರ್ತಿ. ಆದರೆ ಚನ್ನಬಸವಣ್ಣ ಹಾಗಲ್ಲ. ದೃಢವಾದ ನಿಲುಮೆ ಅವನದು. ಮಹಾಜ್ಞಾನಿಯಾದ ಆತ ಪ್ರತಿಯೊಂದನ್ನೂ ಅರೆದು ಒರೆದು ನೋಡಿ ಪರೀಕ್ಷಿಸಿ ಅದಕ್ಕೆ ಅಧಿಕೃತ ಮುದ್ರೆಯೊತ್ತುತ್ತಿದ್ದ. ೧೨ ವರ್ಷದ ಒಳಹೊರಗಿನ ಹಸುಮಗುವಿನಿಂದ ಇದು ಆಗುವ ಕೆಲಸವೆ ? ಬಸವಣ್ಣನವರಿಗೂ ಚನ್ನಬಸವಣ್ಣನವರಿಗೂ ೧೨ ವರ್ಷದ ಅಂತರ. ಕಕ್ಕಯ್ಯನ ಮನೆ ಪ್ರಸಾದದ ಕಥೆ ಭಾವುಕರು ಆ ಮೂವರ ಜೀವನಕ್ಕೂ ಅತಿಮಾನವತೆಯ ಬಣ್ಣಬಳಿಯಲೆಳಸಿ ಹುಟ್ಟಿಸಿದ ಹುರುಳಿಲ್ಲದ ಒಂದು ಹುಸಿಕಥೆ ಅನ್ನಬಹುದು.

ಅದು ಹುಸಿಕಥೆಯಾದರೆ ಸತ್ಯ ಸಂಗತಿ ಯಾವುದು ?

---

* ಕಕ್ಕಯ್ಯನು ಕಲ್ಯಾಣಕ್ಕೆ ಬಂದ ಕಾಲದ ಬಗ್ಗೆ ಯಾವ ಆಧಾರವನ್ನು ಕೊಟ್ಟಿಲ್ಲ.

—ಸಂ. ಮಂ. ಅಧ್ಯಕ್ಷರು

ಅಕ್ಕ ನಾಗಮ್ಮನಿಗೆ ಪತಿ ಇದ್ದ. ಆತನ ಹೆಸರು ಶಿವಸ್ವಾಮಿ ಎಂದು ಒಂದು ಹೇಳಿಕೆ ರೂಢಿಯಲ್ಲಿದೆ. ಸಿಂಗಿರಾಜ ಪುರಾಣದಲ್ಲಿ ಬಲದೇವ ಮಂತ್ರಿಯು ತನ್ನ ಮಗಳನ್ನು ಕೊಟ್ಟು ಬಸವಣ್ಣನವರ ವಿವಾಹ ಮಹೋತ್ಸವವನ್ನು ಏರ್ಪಡಿಸಿದಾಗ ಅಕ್ಕನಾಗಮ್ಮನೊಡನೆ ಅವಳ ಪತಿಯೂ ಬಂದಿದ್ದನೆಂದು ಸಿಂಗಿರಾಜ ಪುರಾಣದಲ್ಲಿ ಹೇಳಿರುವದು, ಅಂದಮೇಲೆ ಬಸವಣ್ಣನವರೊಡನೆ ಅಕ್ಕನಾಗಮ್ಮ ಮನೆ ಬಿಟ್ಟು ಕೊಡಲಿಕ್ಕೆ ಬಂದಾಗ ಅವಳೊಡನೆ ಪತಿಯಾದ ಶಿವಸ್ವಾಮಿಯು ಬಂದಿದ್ದನೇ? ಅಥವಾ ಪತಿಗೃಹದಲ್ಲಿದ್ದ ಅಕ್ಕನಾಗಮ್ಮ ಬಸವಣ್ಣನವರು ಕೂಡಲಕ್ಕೆ ಹೊರಟು ಹೋದ ಮೇಲೆ ಮುಂದೆ ಮಗು ಚನ್ನಬಸವನೊಡನೆ ಹೋಗಿ ಅವರನ್ನು ಕೂಡಿ ಕೊಂಡಳೇ ? ಇದೇ ನಿಮಿತ್ತವಾಗಿ ಸತಿ-ಪತಿಯರಲ್ಲಿ ವಿರಸ ತಲೆದೋರಿತೇ? ಮತ-ಮತಗಳಲ್ಲಿ ಘರ್ಷಣೆ ನಡೆಯುತ್ತಿದ್ದ ಸಂಧಿಕಾಲವದು. *ಶಿವಸ್ವಾಮಿ ಶೈವ ಪಕ್ಷಪಾತಿಯಾಗಿದ್ದರೆ ಈ ರೀತಿಯ ವಿರಸ ತಲೆದೋರುವದು ಅಸಂಭವ ವಲ್ಲ. ಅಕ್ಕನಾಗಮ್ಮನ ದಾಂಪತ್ಯ ಜೀವನ ಸಹಜವಾಗಿದ್ದರೆ, ಶಿವಸ್ವಾಮಿ ಯೊಡನೆ ಅವಳ ಬಾಳುವೆ ಸುಖವಾಗಿ ಸಾಗಿದ್ದರೆ, ಅವರು ಒಟ್ಟಿಗೆ ಇದ್ದು ಕಾಲ ಕಳೆದುದಾಗಿದ್ದರೆ ಇಲ್ಲದ ಊಹಾಪೋಹಕ್ಕೆ ಅವಕಾಶವೇ ಉಳಿಯುತ್ತಿರಲಿಲ್ಲ. ಆದರೆ ಅವರ ದಾಂಪತ್ಯಜೀವನ ಸಹಜವಾಗಿಲ್ಲ. ಶೈವ ಮತವನ್ನು ಖಂಡಿಸಿ ಮನೆ ಬಿಟ್ಟುಹೊರಟ ಬಸವಣ್ಣನವರನ್ನು ಅವಳು ಮೊದಲಾಗಲೀ ಹಿಂದುಗಡೆಯಾಗಲೀ ಹೋಗಿಕೂಡಿಕೊಳ್ಳಬೇಕಾದರೆ ಏನೋ ಒಂದು ಅಸಹಜ ಘಟನೆ ಹಿನ್ನೆಲೆಯಲ್ಲಿ ನಡೆದಿರಬೇಕು. ಅಥವಾ ಶಿವಸ್ವಾಮಿ ಅಕಾಲ ಮೃತ್ಯುವಿಗೆ ತುತ್ತಾಗಿ ವೈಧವ್ಯ ಅವಳ ಪಾಲಿಗೆ ಬಂದಿರಬೇಕು. ಸಿಂಗಿರಾಜ ಪುರಾಣದಲ್ಲಿ ಬಸವಣ್ಣನವರ ವಿವಾಹ ಮಹೋತ್ಸವಕ್ಕೆ ಶಿವಸ್ವಾಮಿ ಆಗಮಿಸಿದ್ದನೆಂದು ಹೇಳಿರುವನಾದರೂ ಮುಂದೆ ಅಕ್ಕನಾಗಮ್ಮ ಬಸವಣ್ಣನವರೊಡನೆ ಅಲ್ಲಿಯೇ ಇರಹತ್ತಿದಾಗ ಶಿವಸ್ವಾಮಿ ಅವರ ಜೊತೆಗೇ ಇದ್ದ ಬಗ್ಗೆ ಉಲ್ಲೇಖವಿಲ್ಲ. ಆದ್ದರಿಂದ ಮೇಲಿನ ಅನುಮಾನಗಳಲ್ಲಿ ಯಾವುದಾದರೂ ಒಂದನ್ನು ಪ್ರಮಾಣವೆಂದು ನಂಬಬೇಕಾಗುವದು.

ಬಸವಣ್ಣನವರು ಕಲ್ಯಾಣಕ್ಕೆ ಬಂದ ಅತ್ಯಲ್ಪಕಾಲದಲ್ಲಿ ಮುಖ್ಯಮಂತ್ರಿ ಪದವಿಗೇರಿದರು. ವೀರಶೈವ ಧರ್ಮವನ್ನು ಉಚ್ಛ್ರಾಯ ಸ್ಥಿತಿಗೆ ತಂದರು. ಅವರ ಮಹಾಮನೆ ನಾಡಿನ ನಾಲ್ದೆಸೆಗಳಿಂದ ಬಂದ ಜಂಗಮರು, ಭಕ್ತರು, ಧರ್ಮ ಜಿಜ್ಞಾಸುಗಳು ಎಲ್ಲರಿಗೂ ಆಶ್ರಯ ನೀಡಿತು. ಆ ಮಹಾಮನೆಯ ಅನ್ನಪೂರ್ಣೆ ಯಾಗಿ ನೀಲಾಂಬಿಕೆ ಮಹಾಶಕ್ತಿಯಾಗಿ ಗಂಗಾಂಬಿಕೆಯರು ಬೆಳಗಿದರು. ಆದರೆ ಕಾಣದ ಕೈಯೊಂದು ತೆರೆಯ ಮರೆಯಲ್ಲಿ ಅದಕ್ಕೆಲ್ಲ ಮುಖ್ಯ ಸೂತ್ರಧಾರಿಯಾಗಿ

---

* ಶಿವಸ್ವಾಮಿಯ ಬಗೆಗೆ ತಾಳಿರುವ ಊಹೆಗಳು ಇವರ ವೈಯಕ್ತಿಕ ಊಹೆಗಳು. ಇವಕ್ಕೆ ಆಧಾರವಿಲ್ಲ. —ಸಂ.ಮಂ. ಅಧ್ಯಕ್ಷರು.

ನಿಂತಿತ್ತು. ಆಕೆಯೇ ಅಕ್ಕನಾಗಮ್ಮ. ಮಹಾಮನೆಯ ಸೂತ್ರಸಂಚಾಲನೆಯೊಂದೇ ಅವಳ ಜೀವನದ ಗುರಿಯಾಗಿರಲಿಲ್ಲ. ಅವಳ ನಿರ್ದೇಶನದಲ್ಲಿ ರೂಪುಗೊಂಡ ಎರಡು ಮಹಾನ್‌ಶಕ್ತಿಗಳು ಬಸವಣ್ಣ ಹಾಗೂ ಚನ್ನಬಸವಣ್ಣ ಅವಳಿಗೆ ಪರಮಪ್ರಿಯವಾದ ವೀರಶೈವ ಧರ್ಮದ ಅಭ್ಯುದಯಕ್ಕಾಗಿ ಶ್ರಮಿಸುತ್ತಿದ್ದವು. ಆಗ ತನಗೆ ಪ್ರಿಯವಾದ ಯೋಗಸಾಧನೆಯಲ್ಲಿ ಹೆಚ್ಚು ಕಾಲಕಳೆಯುವದು ಅವಳಿಗೆ ಸಾಧ್ಯವಾಯಿತು. ತ್ರಿಪುರಾಂತಕೇಶ್ವರನ ಕೆರೆಯ ಬಳಿಯಲ್ಲಿ ಇಂದಿಗೂ ಕಾಣಸಿಗುವ ಅಕ್ಕನಾಗಮ್ಮನ ಗವಿ ಈ ಮಾತಿಗೆ ಸಾಕ್ಷಿಯಾಗಿದೆ. ಆದರೆ ಮಹಾಮನೆಯ ವೈಭವ ಬೇಗನೇ ಮಸುಕಾಗುವ ಕಾಲ ಬಂದಿತು. ಬಸವಣ್ಣನವರು ಕಲ್ಯಾಣವನ್ನು ಬಿಟ್ಟು ಕೂಡಲ ಸಂಗಮಕ್ಕೆ ನಡೆದರು. ಆಗ ಉಳಿದ ಶಿವಶರಣರ ಯೋಗಕ್ಷೇಮವನ್ನು ನೋಡಿ ಕೊಂಡು ವೀರಶೈವ ಧರ್ಮವನ್ನು ರಕ್ಷಿಸಲು ಬೇಕಾದಂಥ ಅವಶ್ಯಕ ಸಂಘಟನೆ ಯನ್ನು ಮಾಡುವ ಭಾರ ಚನ್ನಬಸವಣ್ಣನವರ ಮೇಲೆ ಬಿತ್ತು. ಆಗ ಅಕ್ಕನಾಗಮ್ಮ ಅವರಿಗೆ ಮುಖ್ಯ ಆಸರೆಯಾಗಿ ನಿಲ್ಲಬೇಕಾಯಿತು. ಗಣಾಚಾರಿಗಳಾದ ಶಿವಶರಣರ ಸಲುವಾಗಿ ಆಹಾರ ಸಾಮಗ್ರಿಗಳನ್ನು ಸಂಗ್ರಹಿಸಿ ಅವರ ಪೂಜಾಪ್ರಸಾದದ ಹೊಣೆ ಹೊರುವದರೊಂದಿಗೆ ಬೇಕಾದ ಇನ್ನಿತರ ನೆರವು ನೀಡುವ ಗುರುತರ ಭಾರ ಅವಳ ಮೇಲೆ ಬಿತ್ತು. ಈ ಮಹತ್ಕಾರ್ಯದಲ್ಲಿ ಗಂಗಾಂಬಿಕೆಯೊಬ್ಬಳು ಅವಳಿಗೆ ಮುಖ್ಯ ಸಹಾಯಕಳಾಗಿದ್ದಳು. ಕಾತರವಳ್ಳಿಯ ಕಾಳಗದಲ್ಲಿ ಅವಳು ಲಿಂಗೈ ಕ್ಯಳಾದ ಬಳಿಕ ಅಕ್ಕನಾಗಮ್ಮನೊಬ್ಬಳೇ ಈ ಗುರುತರವಾದ ಹೊಣೆ ಹೊತ್ತು ನಿರ್ವ ಹಿಸಬೇಕಾಯಿತು. ಉಳುವಿಯ ಮಹಾಮನೆಯವರೆಗೂ ಅವಳು ಶಿವಶರಣರ ಜೊತೆಗೆ ಅವರಿಗೆ ಸಹಾಯ ಮಾಡುತ್ತ ಹೋದಳು. ದುರ್ದೈವದಿಂದ ಆ ಮಹಾ ಮನೆಯ ಕಾಳಗದಲ್ಲಿ ಚನ್ನಬಸವಣ್ಣ ಹಾಗೂ ಅಳಿದುಳಿದ ಶಿವಶರಣರೆಲ್ಲರೂ ಬಯ ಲಾದರು. ಒಲವಿನ ಸೋದರ, ಅಕ್ಕರೆಯ ಮಗ ಹಾಗೂ ಮೆಚ್ಚಿನ ಪರಿವಾರ ಎಲ್ಲ ವನ್ನು ಕಳೆದುಕೊಂಡರೂ ಸ್ಥಿತ ಪ್ರಜ್ಞಳಾದ ಅಕ್ಕನಾಗಮ್ಮ ಕರ್ತವ್ಯಚ್ಯುತಳಾಗಿಲ್ಲ. ಆಗಿ ಹೋದುದಕ್ಕಾಗಿ ಮರಗುತ್ತ ನಿಷ್ಕ್ರಿಯ ಜೀವನ ಕಳೆದಿಲ್ಲ. ಅವಳಿಗೆ ಯಾವಗಲೂ ಇದ್ದ ಚಿಂತೆ ಒಂದೇ ಒಂದು. ಎಂಥ ಸ್ಥಿತಿಯಲ್ಲಿಯೂ ವೀರಶೈವ ಧರ್ಮ ಅಳಿಯಬಾರದು, ಉಳಿಯಬೇಕು.

ಅಕ್ಕನಾಗಮ್ಮ ವೀರಶೈವ ಧರ್ಮಾಭಿಮಾನಿ, ಸಾಹಸಿ ಧೈರ್ಯಶಾಲಿ. ಬಸ ವಣ್ಣ ಹಾಗೂ ಚನ್ನಬಸವಣ್ಣ ಇಬ್ಬರ ಜೀವನದ ಹೊಳಹು ಹಾಕಿ ಅವರು ಕೈಕೊಳ್ಳಬೇಕಾಗಿದ್ದ ಮಹತ್ಸಾಧನೆಗೆ ಹಿನ್ನೆಲೆಯ ಶಕ್ತಿಯಾಗಿ ನಿಂತ ಮಹಾ ತಾಯಿ. ಮಹಾಮನೆಯ ಕಾರ್ಯಕಲಾಪಗಳು ಸುವ್ಯವಸ್ಥಿತವಾಗಿ ನಡೆಯತೊಡಗಿ ದಾಗ ಸದ್ದಿಲ್ಲದೆ ಯೋಗ ಸಾಧನೆಯಲ್ಲಿ ನಿರತಳಾದ ಮಹಾಯೋಗಿಣಿ.

ಇಂಗಳೇಶ್ವರದಲ್ಲಿ ಅಕ್ಕನಾಗಮ್ಮನ ಗುಹೆ ಇದ್ದು ಅದರಲ್ಲಿ ಅವಳ ಹೆಸರಿನ ಒಂದು ಶಿಲಾವಿಗ್ರಹ ಇರುವದು. ಇದು ಅವಳ ಮೊದಲ ವಾಸಸ್ಥಾನವೆಂದು ತಿಳಿಯ

ಬಹುದು. ಕಲ್ಯಾಣದಲ್ಲಿ ಹಾಗೂ ಉಳುವೆಯಲ್ಲಿ ಅವಳ ಹೆಸರಿನ ಗುಹೆಗಳಿವೆ. ಉಳುವೆಗೆ ಹೋಗುವ ಮಾರ್ಗದಲ್ಲಿ ಕಾತರವಳ್ಳಿಯ ಕಾಳಗವಾದ ಮೇಲೆ ಅವಳು ಕೆಲವು ದಿನ ಸಂಪಗಾಂವಿಯ ಹತ್ತರ ನಾಗಲಾಪುರ ಎಂಬಲ್ಲಿ ವಾಸವಾಗಿದ್ದು ಅಲ್ಲಿ ಸೈನಿಕ ರಕ್ಷಣಾ ಕೇಂದ್ರವನ್ನು ಏರ್ಪಡಿಸಿರಬೇಕೆಂದು ತಿಳಿಯುತ್ತದೆ. ಅದರ ಮೇಲಿಂದಲೂ ಆ ಊರಿಗೆ ನಾಗಲಾಪುರ ಎಂಬ ಹೆಸರು ಬಂದರೂ ಬಂದಿರಬಹುದು. ಅಲ್ಲಿ ಅವಳ ಹೆಸರಿನ ದೇವಾಲಯವಿದ್ದು ಕೈಯಲ್ಲಿ ಜಪಮಾಲೆ ಕೊರಳಲ್ಲಿ ರುದ್ರಾಕ್ಷಿ ಇರುವ ಒಂದು ಶಿಲಾವಿಗ್ರಹ ಅದರಲ್ಲಿ ಪ್ರತಿಷ್ಠಾಪಿಸಲ್ಪಟ್ಟಿರುವದು. ಎಣ್ಣೆ ಹೊಳೆ ತೀರದಲ್ಲಿ ಈಗಲೂ ಅವಳ ಸಮಾಧಿ ಇರುವದು. ಈ ರೀತಿಯಾಗಿ ೮೦೦ ವರ್ಷಗಳ ತರುವಾಯವೂ ಅಕ್ಕನಾಗಮ್ಮನ ಜೀವನದ ಬಗ್ಗೆ ಸ್ಥೂಲ ಕುರುಹುಗಳು ನಮಗೆ ದೊರೆಯುತ್ತವೆ. ಸಂಶೋಧಕರು ಇನ್ನಷ್ಟು ಈ ವಿಷಯದಲ್ಲಿ ಆಸ್ಥೆವಹಿಸಿ ಪರಿಶ್ರಮಪಟ್ಟರೆ ಚನ್ನಬಸವಣ್ಣನ ಜನ್ಮ ಹಾಗೂ ಬಾಲ್ಯದ ಬಗ್ಗೆ ಅಧಿಕೃತ ವಿವರಗಳು ಬೆಳಕಿಗೆ ಬರಬಹುದು. ಹಾಗಾದರೆ ಅಕಾರಣವಾಗಿ ಅಕ್ಕನಾಗಮ್ಮನ ಚಾರಿತ್ರ್ಯದ ಮೇಲೆ ಮುಸುಕಿರುವ ಈ ಮುಸಕು ತೆರೆ ಸರಿದು ಅದು ಇನ್ನಷ್ಟು ಪರಿಶುಭ್ರವಾಗಿ ಶೋಭಿಸುವದೆಂದು ಹೇಳಬಹುದು.

——::——

# ಕಾಯಕದ ಶಿವಶರಣೆಯರು



**ಶ್ರೀಮತಿ ಗುರುದೇವಿ ಹಿರೇಮಠ,** ಬೆಂಗಳೂರು.

ಹನ್ನೆರಡನೆಯ ಶತಮಾನದ ಶಿವಾನುಭವ ಪ್ರಕಾರ ಸ್ತ್ರೀಯರಿಗೆ ಸ್ವತಂತ್ರಾಧಿಕಾರ ಇರವುದರಿಂದ ಯಾವುದಾದರೂ ಕಾಯಕ ಕೈಕೊಂಡು ಅದರಿಂದ ಉಪಜೀವಿಸಬಹುದು. ಹೇಗೆ ಪುರುಷರಿಗೆ ಕಾಯಕತ್ವವು ಅನ್ವಯಿಸುತ್ತದೆಯೋ ಹಾಗೆಯೇ ಸ್ತ್ರೀಯರಿಗೂ ಅನ್ವಯಿಸುತ್ತದೆ. ಆದ್ದರಿಂದ ಅಂದು ಅಣ್ಣ ಬಸವಣ್ಣನವರು ಸಾರಿದ ಕಾಯಕದ ಮಹತ್ವವನ್ನು ಅರಿತು ಶಿವಶರಣೆಯರು ಅನೇಕ ಕಾರ್ಯಗಳನ್ನು ಕೈಕೊಂಡು ಉಪಜೀವನ ಹೊಂದುತ್ತ ದಾಸೋಹಿಗಳಾಗಿ ವರ್ತಿಸಿದರು.

ಕಾಯಕನಿಷ್ಠರಾಗಿ ದೇವ ಸಾಕ್ಷಾತ್ಕಾರವನ್ನು ಪಡೆದ ಅನೇಕ ಶರಣೆಯರ ಚರಿತ್ರೆಗಳನ್ನು ನಾವು ಕಾಣಬಹುದಾಗಿದೆ. ಅಮ್ಮವ್ವೆ ಬ್ರಾಹ್ಮಣಿಯು ಅವಳ ಚಿಕ್ಕ ವಯಸ್ಸಿನಲ್ಲಿಯೇ ಪತಿ ತಂದೆ ತಾಯಿಗಳೆಲ್ಲರೂ ಶಿವಾಧೀನರಾದಾಗ ಅವಳು ಅನಾಥಳಾದಳು ; ಆದರೆ ಭಿಕ್ಷೆ ಬೇಡಲಿಲ್ಲ ; ರಾಟಿಯ ಕಾಯಕವನ್ನು ಕೈಕೊಂಡಳು. ಪಿಟ್ಟವ್ವೆಯು ದೋಸೆ ಮಾಡುಯ ಕಾಯಕ ಕೈಕೊಂಡಳು. ಕದಿರೆಯ ರೆಮ್ಮವ್ವೆಯು ನೂಲುವ ಕಾಯಕ ಕೈಗೊಂಡಳು. ಅಣ್ಣಲದೇವಿ ಕುಳ್ಳು, ಬೆರಣಿಗಳನ್ನು ಮಾರುವ ಕಾಯಕವನ್ನು ಕೈಕೊಂಡಳು. ಎಲೇರಿಯ ಎಮ್ಮವ್ವೆಯು ಬೇಸಾಯ ಮಾಡುತ್ತಲಿದ್ದಳು. ಒಂದು ವೇಳೆ ಇಂಥಾ ಕಾಯಕವು ಕಷ್ಟವಾದರೆ ಬೇರೊಂದು ಜನೋಪಯೋಗಿ ಕಾಯಕವನ್ನು ಮಾಡಬೇಕು ಎಂದು ಅಂದಿನ ಶಿವಶರಣೆಯಾದ ಸತ್ಯಕ್ಕನು ಶಿವಭಕ್ತರ ಮನೆಗಳಿಗೆ ಹೋಗಿ ಅವರಿಗೆ ಸನ್ಮಾರ್ಗಕ್ಕೆ ಹಚ್ಚಲು ಭೋದನೆ ಮಾಡುತ್ತಲಿದ್ದಳು. ಸೇವಿಕೆ ಗೌರವ್ವೆಯು ಶಿವಭಕ್ತರ ಕೂಟಲ್ಲಿಳಗ ಮತ್ತು ಸಭೆಗಳಲ್ಲಿ ಹೋಗಿ ಅವರ ಅತಿಥಿಗಳಿಗೆ ದಾರಿ ತೋರಿಸಿ ಅವರವರ

ಸ್ಥಾನಗಳಲ್ಲಿ ಕೂಡಿಸುತ್ತಿದ್ದಳು. ತೊಂಗಿನ ಮಹಾದೇವಿಯು ಬೆಳಗಿನಲ್ಲಿ ಎದ್ದು ಭಕ್ತರ ಮನೆಗಳಿಗೆ ಹೋಗಿ ಅವರಿಗೆ ಎಚ್ಚರಿಸಿ ಅವರವರ ನಿತ್ಯದ ಕಾಯಕಕ್ಕೆ ತೊಡಗಿಸುವಳು. ಹೀಗೆ ಬಸವಣ್ಣನವರ ಕಾಲದಲ್ಲಿ ಅನೇಕ ಶಿವಶರಣೆಯರು ಕಾಯಕನಿಷ್ಠರಾಗಿ, ತಾತ್ವಿಕ ಬದುಕನ್ನು ಬದುಕಿದರು. ವೀರದೇವಮ್ಮನು ಶಿವಾನುಭವಶಾಸ್ತ್ರದಲ್ಲಿ ಪಾರಂಗತಳಾಗಿ ಶಿವಶರಣರ ವಚನಗಳನ್ನು ದಿನವೂ ಓದಿ ಹೇಳುವ ಕಾಯಕವನ್ನು ಮಾಡುತ್ತಲಿದ್ದಳು. ಇದರಿಂದ ಅವಳಿಗೆ "ಉಗ್ಗಡಿಸುವ ಕನ್ಯಾವೀರಾದೇವಿ" ಎಂಬ ಹೆಸರು ಉಂಟಾಗಿತ್ತು. ಶಿವಮಹಾದೇವಿಯು ಸ್ತ್ರೀಯರಿದ್ದಲ್ಲಿಗೆ ಹೋಗಿ ಶಿವಶರಣರ ಚರಿತ್ರೆಗಳನ್ನು ಮತ್ತು ಪುರಾಣಗಳನ್ನು ಓದಿ ಹೇಳುತ್ತಲಿದ್ದಳು. ವಿಮಳಾದೇವಿಯು ಶಿವಾನುಭವವನ್ನು ಭೋಧಿಸುತ್ತಲಿದ್ದಳು. ಹೀಗೆ ಬಸವಣ್ಣನವರ ಕಾಲದಲ್ಲಿ ಸ್ತ್ರೀಯರು ಅನೇಕ ತರಹದ ಕಾಯಕವನ್ನು ಕೈಕೊಂಡು ಸಮಾಜ ಹಾಗೂ ದೇಶದ ಉದ್ಧಾರಗೈದರು.

ಕಾಯಕವನು ಮಾಡುವುದರಲ್ಲಿ ಅಂದಿನ ಶಿವಶರಣೆಯರು ಉಚ್ಚತತ್ವವನ್ನು ಅವಲಂಬಿಸಿದ್ದರು. ದಿನವೂ ತಮ್ಮ ಪ್ರಪಂಚಕ್ಕೆ ಬೇಕಾಗುವಷ್ಟು ಮಾತ್ರ ಗಳಿಸಬೇಕು, ಮಿಕ್ಕಿದ್ದನ್ನು ಸಮಾಜಕ್ಕೆ ಅರ್ಪಿಸತಕ್ಕದೆಂದು ಕಟ್ಟಳೆ ಕೈಕೊಂಡಿದ್ದರು. ಅದರಲ್ಲಿ ಆಯದಕ್ಕಿ ಮಾರಯ್ಯನ ಹೆಂಡತಿ ಲಕ್ಕಮ್ಮನು ಆದರ್ಶಳಾಗಿದ್ದಾಳೆ. ಲಕ್ಕಮ್ಮನ ಪತಿ ಮಾರಯ್ಯ ತನಗೆ ಅಗತ್ಯವಿದ್ದುದಕ್ಕಿಂತ ಹೆಚ್ಚು ಸಂಪಾದನೆ ತಂದಾಗ

"ಆಶೆ ಎಂಬುದು ಅರಸರಿಗೆ ಅಲ್ಲದೆ
ಶಿವಭಕ್ತರಿಗುಂಟೆ ? ರೋಷ ಎಂಬುದು ಯಮ
ದೂತರಿಗಲ್ಲದೆ ಅಜಾತರಿಗುಂಟೆ ? ಎಲೆ ಅಯ್ಯಾ
ಈ ಸಕ್ಕಿಯ ಆಸೆ ನಿಮಗೇಕೆ ? ಈಶ್ವರನೊಪ್ಪ !

ಎಂದು ಲಕ್ಕಮ್ಮನು ತನ್ನ ಪತಿಯಾದ ಮಾರಯ್ಯನಿಗೆ ಎಂದಿಗಿಂತಲೂ ಇಮ್ಮಡಿಯಾಗಿ ತಂದ ಅಕ್ಕಿಯ ಗಂಟನ್ನು ನೋಡಿ ಮನದಲ್ಲಿ ಮರ ಮರನೆ ಮರುಗಿ ಮಿಕ್ಕಿದ ಅಕ್ಕಿಯ ಗಂಟನ್ನು ತನ್ನ ಪತಿಯ ಕೈಯಲ್ಲಿ ಕೊಟ್ಟು ಬಸವಣ್ಣನವರ ಅರಮನೆಗೆ ಕಳಿಸಿಕೊಟ್ಟಳು. ಇದು ಲಕ್ಕಮ್ಮ ಹಾಕಿಕೊಟ್ಟ ಕಾಯಕದ ಕಟ್ಟಳೆ.

ಕದರಿಯ ರೆಮ್ಮವ್ವೆಯು ನೂಲುವ ಕಾಯಕವನ್ನು ಕೈಗೊಂಡಿದ್ದಳು. ಅವಳು ಕಾಯಕದೊಡನೆ ಪಾರಮಾರ್ಥವನ್ನು ಅನುಗೊಳಿಸಿದ್ದಳು. ಆದರ ಬಗ್ಗೆ ಆವಳ ವಚನದಲ್ಲಿಯೇ ಹೇಳುವುದಾದರೆ,

ನಾ ತಿರುಗುವ ರಾಟೆಯು ಕುಲಜಾತಿ ಕೇಳಿರಣ್ಣಾ! ಅಡಿಹಣ, ಹಲಗೆ ಕೊವು ಬ್ರಹ್ಮ, ಕೋರಣ ವಿಷ್ಣುವಿನಿಂದ ಬೊಂಬೆ, ಮಹಾರುದ್ರನ ಬೆಂಬಳಿದ ಎರಡು ಸೂತ್ರದ ಕರಣ. ಅರಿವೆಂಬ ಕದಿರು, ಭಕ್ತಿಯೆಂಬ ಕೈಯಲ್ಲಿ ತಿರುಹಲಾಗಿ ನೂಲು ಸುತ್ತಿತ್ತು ಕದಿರು ತುಂಬಿತ್ತು. ರಾಟೆಯು ತಿರುಹಲಾರೆ"

ಎಂದು ರೆಮ್ಮವ್ವೆಯು ಕಾಯಕ ನಿರತಳಾಗಿ ಕಾಯಕದಲ್ಲಿಯೆ ಸರ್ವಸ್ವವನ್ನು ಕಂಡಳು. ಕಾಯಕವು ಕೇವಲ ಐಹಿಕಕ್ಕೆ ಮಾತ್ರ ಬೇಕೆಂದು ಹೇಳದೆ ಕಾಯಕ ದಿಂದಲೇ ಮೋಕ್ಷ ಸಾಧನವೆಂದೂ ಪ್ರತಿಪಾದಸಿದಳು. ಕಾಯಕದಲ್ಲಿ ಶಿವದರ್ಶನ ವಾದರೂ ಮರೆಯಬೇಕು. ಕಾಯಕದಲ್ಲಿ ನಿರತರಾದೊಡೆ ಗುರುದರ್ಶನವಾದರೂ ಮರೆಯಬೇಕು ಎಂದು ದೇವ ದೇವಾದಿಗಳನ್ನು ತನ್ನ ರಾಟೆಯಲ್ಲಿಯೇ ಕಂಡಳು ಕದಿರೆ ರೆಮ್ಮವ್ವೆಯು.

ವೀರರೇವಮ್ಮ:–ಇವಳು ಶಿವಾನುಭವಶಾಸ್ತ್ರದಲ್ಲಿ ಪಾರಂಗತಳಾಗಿದ್ದಳು. ಅವಳು ವಚನಗಳನ್ನು ಓದಿ ಹೇಳುವ ಪರಿಪಾಠ ಇಟ್ಟುಕೊಂಡು ಇತರ ಸ್ತ್ರೀಯರಿಗೂ ಅವು ಗಳನ್ನು ತಿಳಿಸಿ ಹೇಳುತ್ತಿದ್ದಳು.

ಶಿವಮಾಯಿದೇವಿ:–ಇವಳು ಪುರಾಣಗಳನ್ನು ಹೇಳುವ ಕಾಯಕವನ್ನು ಮಾಡುತ್ತಲಿದ್ದಳು. ಕಲ್ಯಾಣದಲ್ಲಿ ಪುರಾಣಗಳನ್ನು ಮತ್ತು ಶಿವಶರಣರ ಚರಿತ್ರೆ ಗಳನ್ನು ಓದುತ್ತಲಿದ್ದಳು.

ಸತ್ಯಕ್ಕ:–ಶಿವಮೊಗ್ಗೆ ಜಿಲ್ಲೆಯಲ್ಲಿ ಶಿರಾಳಕೊಪ್ಪ ಎಂಬ ಗ್ರಾಮವಿದ್ದು ಅಲ್ಲಿಂದ ನಾಲ್ಕು ಮೈಲಿದೂರದಲ್ಲಿ ಹಿರೇಮಂಜೂರಿ ಎಂಬ ಗ್ರಾಮದಲ್ಲಿ ವಾಸಿಸು ತ್ತಿದ್ದಳು. ಇವಳು ಭಕ್ತರ ಮನೆಯ ಅಂಗಳವನ್ನು ಗುಡಿಸಿ ಮನೆಯನ್ನು ಸಾರಿಸಿ ಅವರಿಗೆ ಮನೆಯನ್ನು ಓರಣವಾಗಿ ಇಡಲು ಬೋಧಿಸುವ ಕಾಯಕ ಕೈಕೊಂಡಿ ದ್ದಳು.

ಕೊಟ್ಟಣದ ಸೋಮವ್ವೆ:—ಇವಳು ಕಲ್ಯಾಣಪಟ್ಟಣದಲ್ಲಿ ಕೊಟ್ಟಣದ ಕಾಯಕವನ್ನು ಮಾಡುತ್ತಿದ್ದಳು. ಇವಳು ಭತ್ತವನ್ನು ಕುಟ್ಟಿ ಅಕ್ಕಿಯನ್ನು ಮಾಡಿ ಕೂಲಿಯನ್ನು ಸಂಪಾದಿಸಿ ಅವರಿಂದ ಉಪಜೀವನವನ್ನು ನಡಿಸಿ ದಾಸೋಹಕಾರ್ಯ ದಲ್ಲಿ ನಿರತಳಾಗಿದ್ದಳು. ಮನಮೆಚ್ಚಿ ಕಾರ್ಯ ಮಾಡುವುದರಲ್ಲಿಯೇ ನಿಜಸುಖವಿದೆ ಎಂದು ಅವಳ ವಚನದಿಂದ ಕಂಡುಬರುತ್ತದೆ:—

"ಹದತಪ್ಪಿ ಕುಟ್ಟಲು ನುಚ್ಚಲ್ಲದೆ, ಅಕ್ಕಿ ಎಲ್ಲಿ? ಮತ್ತೆ
ಜೀವನ ನೆರೆಯ ನರಕವಲ್ಲದೆ ಮುಕ್ತಿ ಇಲ್ಲ! ಅರಿಯದಾದರೂ
ಹೋಗಲಿ ಅರಿದು ಜರೆದನಾದರೆ ತನ್ನ ಗಳ್ಳಿಯಲ್ಲಿ ಕಿವಿಯ
ಕೊಯ್ಯರಯ್ಯ, ಬಲ್ಲೆನಾಗಿ ಒಲ್ಲೆ ನಿಮ್ಮಾಣೆ ನಿರ್ಲಜ್ಜೇಶ್ವರಾ!

ಈ ಪ್ರಕಾರ ಸೋಮವ್ವೆಯು ಮೋಸ ವಂಚನೆ ಇಲ್ಲದೆ ಕೊಟ್ಟಣದ ಕಾರ್ಯ ವನ್ನು ಮಾಡಿ ಮೋಕ್ಷ ಹೊಂದಿದಳು. ಬಸವಣ್ಣನವರ ಕಾಲದಲ್ಲಿ ಅನೇಕ ಶಿವಶರಣೆಯರು ಸಮಾಜಕ್ಕೆ ಕಲ್ಯಾಣ ಮಾಡುವುದರ ಸಲುವಾಗಿ ಉಪಯುಕ್ತ ಕಾರ್ಯ ಮಾಡಲು ಮುಂದೆ ಬಂದಂತೆ ಕಂಡುಬರುತ್ತದೆ.

ಅಂದಿನ ಕಾಯಕದ ಕಟ್ಟಳೆಯನ್ನು ಅರಿತು ಮತ್ತೆ ಇಂದು ಇಪ್ಪತ್ತನೇ ಶತಮಾನದಲ್ಲಿ ಸೊನ್ನಲಾಪುರದ ಶಿವಶರಣ ದಂಪತಿಗಳಾದ ವೀರೇಶ್ವರರ ಧರ್ಮಪತ್ನಿ ಗುರುದೇವಮ್ಮನವರು ತಮ್ಮ ಪತಿ ಕೈಕೊಂಡ ಕಾಯಕದಲ್ಲಿ ನಿರತಳಾಗಿದ್ದಳು. ಒಂದು ದಿವಸ ತನ್ನ ಪತಿಯು ಭಿಕ್ಷೆಯಲ್ಲಿ ರೂಪಾಯಿ ತಂದಿದ್ದನ್ನು ನೋಡಿ ಶಿವಶರಣೆಯಾದ ಗುರುದೇವಮ್ಮನವರು ಅತ್ಯಂತ ಕೋಪಗೊಂಡು ಹೀಗೆ ನುಡಿದರು :—

ಮನದಲ್ಲಿ ಆಸೆ ಬೆಳೆದರೆ ದಾಸನಾಗುವನು ! ಆದರೆ ಆಸೆ ಅಳಿದರೆ ಈಶನಾಗುವನೆಂದು ತನ್ನ ಪತಿಗೆ ಹೇಳಿ ಆ ರೂಪಾಯಿಯನ್ನು ತನ್ನ ಪತಿಯ ಕೈಯಲ್ಲಿ ಇಟ್ಟು ಕಳುಹಿಸಿದಳು. ಇದೇಅವಳ ನಿಜವಾದ ಕಾಯಕದ ವೈಶಿಷ್ಟ್ಯವಾಗಿತ್ತು. ಈ ಕಾಯಕ ದಂಪತಿಗಳ ಮಗಳಾದ ರುದ್ರಮ್ಮತಾಯಿಯವರು ಈಗಲೂ ತಂದೆ ತಾಯಿಗಳಂತೆ ಕಾಯಕ ನಿರತರಾಗಿದ್ದಾರೆ.

ಶಿವಶರಣೆಯರು ಸಾರಿದ ಸಂದೇಶ ನೀಡಿದ ಸ್ಫೂರ್ತಿಯ ಫಲವಾಗಿ ಅನೇಕ ಮಹಿಳೆಯರು ವಚನಕಾರ್ತಿಯರಾಗಿ ಕನ್ನಡ ಸಾಹಿತ್ಯ ಸರಸ್ವತಿಯ ಸೇವೆಗೆ ಮಾಡಿದ ಪುಣ್ಯ ಅವರದಾಯ್ತು. ಕೇವಲ ಸಾಹಿತ್ಯಸೇವೆಯೇ ಅಲ್ಲದೇ ಬಸವಣ್ಣನವರು ಸಾರಿದ "ಕಾಯಕವೇ ಕೈಲಾಸ" ಎಂಬುದರ ಮಹತ್ವವನ್ನು ಅರಿತು ಆಚರಿಸಿದರು. ಅಂತೂ ಅಂದಿನ ಶಿವಶರಣೆಯರು ಕಾಯಕದಲ್ಲಿಯೇ ತೊಡಗಿ ಸಾಮಾಜಿಕ ಕ್ರಾಂತಿಯಲ್ಲಿ ಭಾಗವಹಿಸಿ ಮೋಕ್ಷವನ್ನು ಪಡೆದರು ಮತ್ತು ಇಂದಿನ ಮಹಿಳೆಯರಿಗೆ ಆದರ್ಶರಾಗಿ ಕಂಗೊಳಿಸಿದರು.

——:o:——

# ಪಂಚಕಲೆ ಪ್ರಪಂಚತ್ವದ ನೆಲೆ!

ಬಾ ಎನ್ನ ಕ್ರೀ ಶಕ್ತಿ
ಬಂದೆನ್ನ ಕಾಯದೊಳು
ನಿಂದಾಗು ನಿವೃತ್ತಿ !
ಕಲೆಗಳಲಿ ನೀ ಮೊದಲು
ನಿನ್ನಿಂದ ಸಿರಿ ಹೊನಲು
ನಿನ್ನಿಂದ ಸೊಗ ಮಿಗಿಲು !

ಆಗಮಿಸಾದಿ ಶಕ್ತಿ,
ಆಗುವುದು ಮನಶಾಂತಿ !
ಶಾಂತಿ ಕಲೆಯಾಗಿರಲು,
ಆಗದುದು ಮನಭ್ರಾಂತಿ !
ಶಾಂತರಸ ತಾನಾಗೆ
ನೀಗುವುದು ಮತಿಕ್ರಾಂತಿ !

ಧರಿಸೆನ್ನ ಧೀ ಶಕ್ತಿ
ಪ್ರತಿಷ್ಠಾ ಕಲೆಯಾಗಿ ;
ನಿನ್ನಿಂದ ಪ್ರತಿಷ್ಠೆಯು,
ನಿಲ್ಲುವುದು ನೆಲೆಯಾಗಿ !
ನಿನ್ನಿಂದ ಮಾನವತೆ
ಮಿನುಗುವುದು ಮಿಗಿಲಾಗಿ !

ಪರಿಕಿಸು ಪರಾಶಕ್ತಿ
ಪರಾವಾಕ್ ನೀನಾಗಿ
ಶಾಂತ್ಯತೀತ ಕಲೆಯಾಗಿ
ನಿಂತಿರಲು ನನ್ನೊಳಗೆ
ವೈಖರಿಯು ಹೊಮ್ಮುವುದು
ವಾಗ್ಲಹರಿ ರೂಪಾಗಿ !

ಸಾರೆನ್ನೊಳ್ ಸದಿಚ್ಛೆ
ಸದಿಚ್ಛೆಯೆ ಸದ್ವಿದ್ಯೆ;
ಸದ್ವಿದ್ಯೆಯೆ ಸತ್ಕಲೆ
ವಿದ್ಯೆಯಿಂದಿಹದಿ ನೆಲೆ
ವಿದ್ಯೆಯಿಂದಿಹದೆ ಬೆಲೆ
ವಿದ್ಯೆಯೇ ವಿಶ್ವಕಲೆ !

ತಾನೆ ದಿಟವಾದ ಕಲೆ
ಬೇರಿಲ್ಲ ಜೀವಕಲೆ
ತನ್ನಾತ್ಮ ಚಲುವೆ ಕಲೆ
ತಿರೆಯ ಚಲುವೆಲ್ಲ ಬಲೆ
ತನ್ನಾತ್ಮ ಸುಖದ ಕೊಲೆ
ತಾನೆ ನಿಜಸುಖದ ನೆಲೆ !

ಪಂಚಕಲೆ ತನ್ನೊಳಿರೆ
ಪಂಚಮುಖ ಸುಖದ ಸೆಲೆ !
ಪ್ರಪಂಚತ್ವದ ನೆಲೆ
ಪ್ರಪಂಚದೊಳಿಹುದು ಬೆಲೆ !

— ಶ್ರೀ. ಜ. ಚ. ನಿ.

# ಚಿತ್ರೈಸು ಚಿಚ್ಛಕ್ತಿ !

ಚಿತ್ರೈಸು ಚಿಚ್ಛಕ್ತಿ ಚಿತ್ಕಳೆಯೆ
ಚಿತ್ತದಲಿ ನಲಿನಲಿದು ನಿರ್ಮಳೆಯೆ
ನಿತ್ಯತೆಗೆ ನಿಲುಕಿಸೌ ನಿಶ್ಚಲೆಯೆ
ಸತ್ಯತೆಗೆ ಸಾಗಿಸೌ ಸತ್ಕಳೆಯೆ !

ಶಾಂತ್ಯ ತೀತೋತ್ತರದ ಕಲೆ ನೀನು
ಸಂತೋಷ ಸಾಗರದ ನೆಲೆ ನೀನು
ಚಿಂತಾಗ್ನಿಯ ನಳಿಸುವ ಸೆಲೆ ನೀನು
ಸಂತಸದಿ ನೆಲೆಸೆನ್ನೊಳಗೆ ನೀನು.

ಚಿಚ್ಛಕ್ತಿ ಸಂಯುತವು ಶಿವ ತತ್ತ್ವ,
ಚಿಚ್ಛಕ್ತಿ ಸಂಭೃತವು ಶಿವಸತ್ವ;
ಚಿಚ್ಛಕ್ತಿಯಿಲ್ಲದಾ ಶಿವನೆಲ್ಲಿ ?
ಚಿಚ್ಛಕ್ತಿಯಿಲ್ಲದೀ ಭವವೆಲ್ಲಿ ?

ಷಡ್ವಿಧದ ಕಳೆಯ ತಳೆದವಳು ನೀ
ಷಡ್ವಿಧದ ಶಕ್ತಿಯಾದವಳು ನೀ
ಷಡ್ವಿಧದ ಭಕ್ತಿ ಭಾವಿತಳು ನೀ
ಷಡ್ವಿಧದ ಲಿಂಗಾಂಗ ಕರ್ತೆ ನೀ !

ಧವಳತೆಯ ಜನುಮಕ್ಕೆ ನೀ ತುಂಬಿ
ನವಚೇತನದೆನ್ನನು ನೆರೆನಂಬಿ
ಎಣಿಸದಿಹ ಕಣ್ಣಾಂತ ನವಿಲಂತೆ
ಎಣಿಸದಿಹ ಕೈಯಾಂತ ಹೊನಲಂತೆ;

ಚಿಚ್ಛಕ್ತಿ ನೀನಾದೆ ಚಿಜ್ಜ್ಯೋತಿ
ಚಿಚ್ಛಕ್ತಿ ನೀನಾದೆ ಚಿನ್ಮೂರ್ತಿ
ಚಿಚ್ಛಕ್ತಿ ನೀನೆನ್ನ ಚಿದ್ವೃತ್ತಿ
ಚಿಚ್ಛಕ್ತಿ ನೀನೆನ್ನ ಚಿತ್ಕೃತಿ !

ಪರಶಿವನ ಸುಖಸಾರೆ ನೀ ಬಾರೆ
ಪರಾತ್ಪರ ಸುಖಮುಖವ ನೀ ತೋರೆ
ಪರಾಜಯ ಪರಿಭವವ ನೀ ತೂರೆ
ಪರಾಂಬರಿಕೆಯ ಪರಿಯ ನೀ ಬೀರೆ !

—ಶ್ರೀ. ಜ. ಚ. ನಿ.

# ಶಿವಾಚಾರ್ಯ ಸಾಹಿತಿಗಳು



ಆಸ್ಥಾನ ವಿದ್ವಾನ್
**ಶ್ರೀ ಎಂ. ಜಿ. ನಂಜುಂಡಾರಾಧ್ಯರು,**
ಸಂಸ್ಕೃತ, ಕನ್ನಡ ಸಾಹಿತ್ಯ ಮತ್ತು ವೇದಾಂತ ವಿದ್ವಾನ್,
ಮಹಾರಾಜ ಸಂಸ್ಕೃತ ಕಾಲೇಜ್, ಮೈಸೂರು.

ವೀರಶೈವ ಸಮಾಜದ ಆಚಾರ್ಯ ಪದವಿಯಲ್ಲಿರುವ ಜ್ಞಾನನಿಷ್ಠನಿಗೆ "ಶಿವಾ**ಚಾರ್ಯ**" ಎಂಬ ಅಭಿಧಾನವು ಸಲ್ಲುತ್ತದೆ. ಪ್ರಾಯಶಃ ಈ ಹೆಸರು ಮಠಾಧಿಪತಿಗಳಿಗೆ ಅನ್ವಯಿಸುವುದೇ ಹೆಚ್ಚು. ಆದರೆ ಮಠಾಧಿಪತಿಗಳಲ್ಲಿ ಪತ್ನೀಪುತ್ರ ವಿರಹಿತರಾದ 'ವಿರಕ್ತ'ರಿಗೆ ಈ ಪದವು ಅನ್ವಯಿಸುವುದಿಲ್ಲ. ಅವರಿಗೆ '**ಶಿವಯೋಗಿ**' ಎಂಬ ಪದವು ಮೀಸಲಾಗಿದೆ. ಜ. ರೇಣುಕಾಚಾರ್ಯರು 'ಆಚಾರ್ಯ' ಪದ ಲಕ್ಷಣವನ್ನು ಹೀಗೆ ಹೇಳಿದ್ದಾರೆ.

ಆಚಿನೋತಿ ಹಿ ಶಾಸ್ತ್ರಾರ್ಥಾ ಆಚಾರೇ ಸ್ಥಾಪಯತ್ಯಪಿ ।
ಸ್ವಯಮಾಚರತೇ ಯಸ್ತು ಸ **ಆಚಾರ್ಯ** ಇತಿ ಸ್ಮೃತಃ ॥

(ಸಿ. ಶಿ. ೧೫-೯)

ಶಾಸ್ತ್ರಾಧ್ಯಯನ ಮಾಡಿ ಅನುಷ್ಠಾನ ಪರನಾಗಿ ಜನತೆಯನ್ನು ಸದಾಚಾರನಿಷ್ಠರಾಗುವಂತೆ ನಿಯಮಿಸುವವನೇ 'ಆಚಾರ್ಯ.' ಶಿವಾಗಮಗಳಲ್ಲಿ ಆಚಾರ್ಯನಿಗೆ '**ಆರಾಧ್ಯ**' ಎಂಬ ಪರ್ಯಾಯನಾಮವಿದೆ.

ಆಗಮಾರ್ಥಾನು ಸಂಧಾನಾತ್ ರಾಗದ್ವೇಷ ವಿಭಂಜನಾತ್ ।
ಜ್ಞಾನಧ್ಯಾನ ದ್ವಯಾನ್ವಿತಂ ಆರಾಧ್ಯ ಇತಿಕಥ್ಯತೇ ॥

(ತಂತ್ರಸಂಗ್ರಹೆ ಪೀ. ೩)

ಆಗಮ (ಶಾಸ್ತ್ರ)ಗಳನ್ನು ಅಭ್ಯಸಿಸಿ ಅವುಗಳ ಅರ್ಥಾನುಸಂಧಾನ ಮಾಡುತ್ತಾ ರಾಗದ್ವೇಷಾದಿಗಳನ್ನು ತೊರೆದು ಜ್ಞಾನ-ಧ್ಯಾನ ತತ್ಪರನಾದವನೇ ಆರಾಧ್ಯನು.

ಸಮಾಜದ ದೀಕ್ಷಾ-ಶಿಕ್ಷಾದಿಗಳ ಪರಮಾಧಿಕಾರ ಪಂಚಪೀಠಗಳಿಗೆ ಸೇರಿದ್ದು. ಈ ಪೀಠಗಳು ಆ ಸೇತು ಶೀತಾಚಲದವರೆಗೂ ವ್ಯಾಪಿಸಿವೆ. ಶ್ರೀಶೈಲ, ರಂಭಾಪುರೀ, ಉಜ್ಜಯಿನೀ, ಕಾಶೀ, ಕೇದಾರಗಳಲ್ಲಿ ಇಂದಿಗೂ ಈ ಪೀಠಗಳು ವಿರಾಜಿಸುತ್ತಿವೆ. ಇಲ್ಲಿರುವ ಪಂಚಸಿಂಹಾಸನಾಧಿಪತಿಗಳು 'ಜಗದ್ಗುರು'ಗಳೆಂದೂ 'ಮಹಾಚಾರ್ಯ'ರೆಂದೂ ಹೇಳಲ್ಪಡುವರು. ರೇಣುಕಾಚಾರ್ಯ, ಮರುಳಾಚಾರ್ಯ, ಏಕೋರಾಮಾಚಾರ್ಯ, ಪಂಡಿತಾರಾಧ್ಯ, ಮತ್ತು ವಿಶ್ವಾರಾಧ್ಯ ಎಂಬ ಆಚಾರ್ಯರು ಕ್ರಮವಾಗಿ ವೀರ, ನಂದಿ, ಭೃಂಗಿ, ವೃಷಭ, ಸ್ಕಂದ ಎಂಬ ಪಂಚಗೋತ್ರೋದ್ಭವರಾಗಿ ಯುಗಯುಗಗಳಲ್ಲಿಯೂ ಬೇರೆಬೇರೆ ಹೆಸರುಗಳಿಂದ ಮತ ಸ್ಥಾಪನೆ ಮಾಡಿದರೆಂದು ಆಗಮ ಪರಿಭಾಷೆಯಿದೆ. ಇವರು ವೇದಾಗಮೋಪನಿಷತ್ತುಗಳಿಗೆ ಭಾಷ್ಯಾದಿಗಳನ್ನು ಬರೆದಿರುವರೆಂದು ಪ್ರತೀತಿ. ಆದರೆ ಅವು ನಮಗೆ ಉಪಲಬ್ಧವಾಗಿಲ್ಲ.

ಮೇಲೆ ಹೇಳಿದ ಪೀಠಾಚಾರ್ಯರ ಸಂಪ್ರದಾಯಗಳಿಗೆ ಸೇರಿದ ಶಾಖಾ ಮಠಗಳು ನಾಡಿನಲ್ಲೆಲ್ಲ ಹಬ್ಬಿವೆ. ಅಲ್ಲೆಲ್ಲ ಉಪಾಚಾರ್ಯರು, ಪಟ್ಟಾಧಿಕಾರಿಗಳು, ಮಠಸ್ಥರು ಆಯಾ ಭಾಗದ ವೀರಶೈವ ಜನಾಂಗದ ದೀಕ್ಷಾದಿಕ್ರಿಯೆಗಳನ್ನು ನೆರವೇರಿಸಿ ಮಹಾಚಾರ್ಯರ ಅನುಮತಿಯಂತೆ ಧರ್ಮಾಧಿಕಾರಿಗಳೆನಿಸಿರುತ್ತಾರೆ. ಇವರಲ್ಲಿ ಹಲವರು ಬ್ರಹ್ಮಚಾರಿಗಳು. ಮತ್ತೆ ಕೆಲವರು ಗೃಹಸ್ಥರು. ಆದರ ಫಲವಾಗಿಯೇ ವೀರಶೈವ ಪೀಠಗಳಿಗೆ ಸಂಬಂಧಿಸಿದ ಶಾಖಾಮಠಗಳಲ್ಲಿ 'ಶಿಷ್ಯವರ್ಗ' ಮತ್ತು 'ಪುತ್ರವರ್ಗ' ಎಂಬ ಎರಡು ಪ್ರಭೇದಗಳಿವೆ. ಯೋಗ್ಯ ಶಿಷ್ಯನಿಗೆ ಉತ್ತರಾಧಿಕಾರ ವಹಿಸುವುದು 'ಶಿಷ್ಯವರ್ಗ'. ಮಗನಿಗೆ ಮಠಾಧಿಕಾರ ವಹಿಸುವುದು 'ಪುತ್ರವರ್ಗ'. ಪ್ರಾಯಃ ಪಂಚಪೀಠಗಳ ಸಂಪ್ರದಾಯವು ಶಿಷ್ಯವರ್ಗವಾಗಿಯೇ ಇಂದಿಗೂ ರೂಢಿಯಲ್ಲಿದೆ. ಶಾಖಾಮಠಗಳಲ್ಲಿ 'ಪುತ್ರವರ್ಗ' ಸಂಪ್ರದಾಯವಿರುತ್ತದೆ. ಈ ಮಠಸ್ಥರು ಗೃಹಸ್ಥರಾಗಿದ್ದುಕೊಂಡೇ ಶಿಷ್ಯಸಮುದಾಯದಿಂದ ಪೂಜಿತರಾಗುತ್ತಿದ್ದಾರೆ. ಈ ಎರಡೂ ವಿಧವಾದ ಆಚಾರ್ಯರು ಪ್ರಾಚೀನಕಾಲದಿಂದಲೂ ಸಹ ಸಂಸ್ಕೃತ, ಕನ್ನಡ, ತೆಲುಗು, ತಮಿಳು ಮುಂತಾದ ಭಾಷೆಗಳಲ್ಲಿ ಪಾರಂಗತರಾಗಿ ವೇದವೇದಾಂತಾಗಮಾದಿಗಳ ಮೇಲೆ ಉದ್ಗ್ರಂಥಗಳನ್ನು ರಚಿಸಿ ಅಮರರಾಗಿದ್ದಾರೆ. ಅವರ ಮತ್ತು ಅವರ ಕೃತಿಗಳ ಪರಿಚಯವನ್ನು ಸಂಕ್ಷೇಪವಾಗಿ ಮಾಡಿಕೊಡುವುದೇ ಈ ಲೇಖನನ ಗುರಿ.

## ಶಿವಾಚಾರ್ಯ ಸಾಹಿತಿಗಳು (ಸಂಸ್ಕೃತ)

ಇಲ್ಲಿ ನಾವು ಪ್ರಯೋಗಿಸುವ 'ಸಾಹಿತಿ' ಎಂಬ ಪದವು ಕೇವಲ ಕಾವ್ಯನಾಟಕ ಕರ್ತೃಗಳಿಗೆ ಮಾತ್ರ ಅನ್ವಯಿಸುವುದಿಲ್ಲ. ಅದು 'ಸಹಿತಾನಾಂ ಭಾವಃ ಸಾಹಿತ್ಯಂ'

ಎಂಬ ನಿರ್ವಚನವನ್ನು ಅನುಸರಿಸಿ ಕೃತಿಸಾಮಾನ್ಯವನ್ನೂ ನಿರ್ದೇಶಿಸುತ್ತದೆ. ಶಿವಾಚಾರ್ಯ ಸಾಹಿತಿಗಳು ಬಹುತೇಕವಾಗಿ ವೇದವೇದಾಂತಾದಿಗಳ ಮೇಲೆ ಗ್ರಂಥರಚನೆ ಮಾಡಿರುವುದೇ ಹೆಚ್ಚು. ಆದುದರಿಂದ ಅಂಥವರ ಸಂಕ್ಷಿಪ್ತ ಪರಿಚಯವನ್ನು ಮುಂದೆ ಕೊಡಲಾಗಿದೆ.

## ವೀರಶೈವ ಆಚಾರ್ಯ ಪಂಚಕ :

ವೀರಶೈವ ಸಂಪ್ರದಾಯಕ್ಕೆ ರೇಣುಕಾದ್ಯಾಚಾರ್ಯರೇ ಮೂಲ ಎಂಬುದು ಶಿವಾಗಮಗಳ ಅಭಿಮತ. ಚಾರಿತ್ರಕ ದೃಷ್ಟಿಯಿಂದ ಅವರ ದೇಶಕಾಲಾದಿಗಳನ್ನು ನಿರ್ದೇಶಿಸುವುದು ದುಸ್ಸಾಧ್ಯ. ರೇಣುಕಾದ್ಯಾಚಾರ್ಯರ ಪ್ರಾಚೀನತ್ವವನ್ನು ಶಿಲಾಲೇಖನಾದಿ ಪ್ರತ್ಯಕ್ಷ ಪ್ರಮಾಣಗಳಿಂದ ನಿರ್ಧರಿಸುವುದು ಕಷ್ಟವಾದರೂ, ಶಿಲಾಲೇಖನಗಳಲ್ಲಿ ಉಲ್ಲಿಖಿತರಾಗಿರುವ ಲಿಂಗಧಾರಿ ರಾಜಾಧಿರಾಜರುಗಳ ಪ್ರಸ್ತಾಪದಿಂದ ಅವರ ದೀಕ್ಷಾಗುರು ಸಂಪ್ರದಾಯವನ್ನು ಊಹಿಸಲು ಅವಕಾಶವಿದೆ. ಉದಾಹರಣೆಗಾಗಿ ಕ್ರಿ.ಶ. ಐದನೆಯ ಶತಮಾನದಲ್ಲಿ ಕಂಚಿಯ ಗುಣಭರ, ಅತ್ಯಂತ ಕಾಮ ಮುಂತಾದ ಪಲ್ಲವರಾಜರು ಲಿಂಗಧಾರಿಗಳಿದ್ದರೆಂದು ಶಿಲಾಶಾಸನಗಳಿಂದ ತಿಳಿದುಬರುತ್ತದೆ. ಅವರಿಗೆ ಶಿವದೀಕ್ಷೆಯಿತ್ತ ರಾಜಪೂಜಿತರಾದ ಆಚಾರ್ಯರ ಅಸ್ತಿತ್ವಕ್ಕೆ ಬೇರೆ ಪ್ರಮಾಣ ಅನಾವಶ್ಯಕ. ಕ್ರಿ.ಶ. ೨ನೆಯ ಶತಮಾನದ್ದೆಂದು ಹೇಳಲಾಗಿರುವ ನಾಟ್ಯಶಾಸ್ತ್ರಕರ್ತೃ ಭರತನಿಗೆ ಸಮಕಾಲೀನನೆನಿಸಿರುವ ನಂದಿಯ 'ಅಭಿನಯದರ್ಪಣ'ದಲ್ಲಿ ಲಿಂಗವಂತ ಸಂಸ್ಕೃತಿಯ ಉಲ್ಲೇಖವಿದೆ. ಅಭಿನಯದರ್ಪಣದಲ್ಲಿ ಉಕ್ತವಾಗಿರುವ ಅನೇಕ ಹಸ್ತಾಭಿನಯಗಳಲ್ಲಿ **'ಶಿವಲಿಂಗ ಹಸ್ತ'** ಎಂಬುದೂ ಒಂದು. ಎಡಗೈಯನ್ನು ಹರಡಿರುವುದಕ್ಕೆ **'ಅರ್ಧ ಚಂದ್ರ ಹಸ್ತ'**ವೆಂದು ಹೆಸರು. ಬಲಗೈ ಮುಷ್ಟಿ ಮಾಡಿರುವುದಕ್ಕೆ **'ಶಿಖರ ಹಸ್ತ'**ವೆಂದು ಹೆಸರು. **'ವಾಮೇಽರ್ಧಹಸ್ತೇ ವಿನ್ಯಸ್ತಶಿಖರಶ್ಶಿವಲಿಂಗಕಃ'** ಅರ್ಧಚಂದ್ರಾಕೃತಿಯುಳ್ಳ ಎಡಗೈಯಲ್ಲಿ 'ಶಿಖರಾ'ಕಾರವಾದ ಬಲಮುಷ್ಟಿಯನ್ನು ಇಡುವುದು **'ಶಿವಲಿಂಗ ಹಸ್ತ'**ವೆನಿಸುವುದು. ಇದು ಇಷ್ಟಲಿಂಗವನ್ನು ಎಡಗೈಯಲ್ಲಿಟ್ಟು ಪೂಜಿಸುವ ವೀರಶೈವ ಸಂಸ್ಕೃತಿಯ ದ್ಯೋತಕ. ಅಂದಮೇಲೆ ಇಂಥ ಲಿಂಗಧಾರಣ ಸಿದ್ಧಾಂತ ಹಾಗೂ ಅದನ್ನು ಬೋಧಿಸುವ ಆಚಾರ್ಯರು ಅದಕ್ಕಿಂತ ಹಿಂದೆ ಇದ್ದರೆಂದು ಬೇರೆ ಹೇಳಬೇಕಾಗಿಲ್ಲ. ಹೀಗೆ ಮಹಾಭಾರತ, ಸ್ಕಾಂದಪುರಾಣ ಮುಂತಾದ ವೇದಾಗಮ ಶಾಸ್ತ್ರಾದಿಗಳಲ್ಲಿ ಕಾಣುವ ವೀರಶೈವ ಸಂಸ್ಕೃತಿ, ಸದುಪದೇಶಕರಾದ ಆಚಾರ್ಯರು ಅತ್ಯಂತ ಪ್ರಾಚೀನರೆಂದು ಅನುಮಾನಿಸಲು ಅವಕಾಶವಿದೆ. ಆದರೆ ಅವರು ರಚಿಸಿರುವ ಗ್ರಂಥಗಳಾವುವೂ ಉಪಲಬ್ಧವಾಗಿಲ್ಲ. ವೇದವ್ಯಾಸ, ಶ್ರೀಕೃಷ್ಣ ಮತ್ತು ಶಂಕರಾಚಾರ್ಯ ಮುಂತಾದವರ ಉಲ್ಲೇಖಗಳನ್ನು ಚಾರಿತ್ರಿಕವಾಗಿ ಉಲ್ಲೇಖಿಸಲು ಸಾಧ್ಯವೇ ? ಆದರೆ ಅವರ ಬಗ್ಗೆ ರಚಿತವಾಗಿರುವ ಸಾಹಿತ್ಯದ ಮೇಲೆ ಅವರ ಅಸ್ತಿತ್ವ

ವನ್ನು ಗುರ್ತಿಸುವಂತೆ ರೇಣುಕಾದ್ಯಾಚಾರ್ಯರ ಗ್ರಂಥಕರ್ತೃತ್ವವನ್ನು ಅವರ ಬಗ್ಗೆ ರಚಿತವಾಗಿರುವ ಇತರ ಗ್ರಂಥಕಾರರ ಉಕ್ತಿಗಳಿಂದ ಊಹಿಸುವುದು ಸೂಕ್ತ.

ಜಗದ್ಗುರು ರೇಣುಕರು ಅಗಸ್ತ್ಯ ಮಹರ್ಷಿಗಳಿಗೆ ಬೋಧಿಸಿದ ಏಕೋತ್ತರ ಶತಸ್ಥಲ ಸಿದ್ಧಾಂತವನ್ನು ಶಿವಯೋಗಿ ಶಿವಾಚಾರ್ಯರು "ಸಿದ್ಧಾಂತ ಶಿಖಾಮಣಿ" ಎಂಬ ಗ್ರಂಥದಲ್ಲಿ ಸಂಗ್ರಹಿಸಿದ್ದಾರೆ, ಮಹಾಭಾರತದ ಕೃಷ್ಣಗೀತೆಯನ್ನು ವ್ಯಾಸರು ಸಂಗ್ರಹಿಸಿದಂತೆ. ಆಚಾರ್ಯ ರೇಣುಕರಿಂದ ಶಿವದೀಕ್ಷೆಯನ್ನು ಪಡೆದ ಅಗಸ್ತ್ಯ ಮಹರ್ಷಿಯು ವೇದವ್ಯಾಸ ಕೃತವಾದ 'ಬ್ರಹ್ಮಸೂತ್ರ'ಕ್ಕೆ 'ವೈಯಾಸಿಕೀ ಸೂತ್ರವೃತ್ತಿ'ಯನ್ನು ಬರೆದರು. ಅದನ್ನೇ ಆಧಾರವಾಗಿಟ್ಟುಕೊಂಡು ಶ್ರೀಪತಿ ಪಂಡಿತಾರಾಧ್ಯರು "ಶ್ರೀಕರ ಭಾಷ್ಯ" ಬರೆದಿರುವದಾಗಿ ಹೇಳಿಕೊಂಡಿದ್ದಾರೆ. *

ತೈತ್ತಿರೀಯೋಪನಿಷತ್ತಿಗೆ ಶಿವಾದ್ವೈತ ಪರವಾಗಿ ಭಾಷ್ಯವನ್ನು ಬರೆದಿರುವ ವೃಷಭ ಪಂಡಿತಾರಾಧ್ಯರು ತಮ್ಮ ಭಾಷ್ಯದಲ್ಲಿ ಅಲ್ಲಲ್ಲಿ ರೇಣುಕಾದ್ಯಾಚಾರ್ಯರು ಉಪನಿಷನ್ಮಂತ್ರಗಳಿಗೆ ವೀರಶೈವ ಮತ ಪರವಾಗಿ ವ್ಯಾಖ್ಯಾನಗಳನ್ನು ಬರೆದಿರುವ ಅಂಶವನ್ನು ಉಲ್ಲೇಖಿಸಿರುತ್ತಾರೆ ತೈತ್ತಿರೀಯಾಂತರ್ಗತ ನಾರಾಯಣಾನುವಾಕದ 'ಸಹಸ್ರ ಶೀರ್ಷಂ ದೇವಂ' ಎಂಬ ಮಂತ್ರಭಾಷ್ಯದಲ್ಲಿರುವ

**'ರೇವಣಸಿದ್ಧ ಮರುಲಸಿದ್ಧೈಕೋರಾಮಸಿದ್ಧ ಪಂಡಿತಾರಾಧ್ಯಾದಯಃ** ಸಹಸ್ರ ಶೀರ್ಷಂ ದೇವಮಿತ್ಯಾದಿ ಪರಶಿವಧರ್ಮ ಪ್ರತಿಪಾದಕವಾಕ್ಯಾನಾಂ ನಾರಾಯಣಾತ್ಮಕ ವಿಷ್ಣು ಪ್ರತಿಪಾದಕತ್ವೇಪಿ ಏತದನುವಾಕಸ್ಯ ಶಿವಪರತ್ವೇನ ನ ಕಶ್ಚಿದ್ದೋಷಃ....ಇತಿವದಂತಿ' ಎಂಬ ಉಲ್ಲೇಖದಿಂದ ರೇವಣಸಿದ್ಧ, ಮರುಲಸಿದ್ಧ, ಏಕೋರಾಮಸಿದ್ಧ ಮತ್ತು ಪಂಡಿತಾರಾಧ್ಯಾದಿ ಆಚಾರ್ಯರು ಮೇಲೆ ಕಂಡ ಮಂತ್ರಕ್ಕೆ ಶಿವಪರವಾಗಿ ವ್ಯಾಖ್ಯಾನಮಾಡಿರುವರೆಂದು ವ್ಯಕ್ತವಾಗುತ್ತದೆ. ಮುಂದುವರಿದು ಇದೇ ಗ್ರಂಥಕಾರರು—

**'ಉದ್ಭಟಾರಾಧ್ಯ ವೇಮನಾರಾಧ್ಯ ವಿಶ್ವರಾಧ್ಯಾದಯಸ್ತು** ಅಸ್ಯಾಮುಪನಿಷದಿ ಹರೋಪಾಸನಾವಿಷಯೇ ನಾರಾಯಣೋಪಾಸಕತ್ವ ಶಿವೋಪಾಸ್ಯತ್ವ ನಿರ್ಣಯೇ ಸಹಸ್ರಶೀರ್ಷಾನುವಾಕಗತಾನಿ 'ನಾರಾಯಣ ಪರಂಬ್ರಹ್ಮ' ಇತ್ಯಾದಿ ವಚನಾನಿ ವಿರುಧ್ಯೇರನ್ನಿತಿ' ಎಂದಾಶಂಕಿಸಿ ಸಮಾಧಾನಮಾಡಿರುವರೆಂದು ಹೇಳಿರುವುದನ್ನು ನೋಡಿದರೆ ಉದ್ಭಟಾರಾಧ್ಯ, ವೇಮನಾರಾಧ್ಯ ಮತ್ತು ವಿಶ್ವಾರಾಧ್ಯರು ಸಹ ಉಪನಿಷತ್ತುಗಳಿಗೆ ಭಾಷ್ಯಾದಿಗಳನ್ನು ಬರೆದಿರುವಂತೆ ಭಾಸವಾಗುತ್ತದೆ.

---

* ಅಗಸ್ತ್ಯ ಮುನಿಚಂದ್ರೇಣ ಕೃತಾಂ ವೈಯಾಸಿಕೀಂ ಶುಭಾಂ।
ಸೂತ್ರವೃತ್ತಿಂ ಸಮಾಲೋಕ್ಯಕೃತಂ ಭಾಷ್ಯಂ ಶಿವಂ ಕರಮ್ ॥

—ಶ್ರೀಕರ ಭಾಷ್ಯ ಪೀಠಿಕೆ.

ತೈತ್ತಿರೀಯೋಪನಿಷತ್ತಿನ ಪ್ರಾರಂಭದಲ್ಲಿ

ವೇದವ್ಯಾಸಂ ಸೂತ್ರಕಾರಂ ದೂರ್ವಾಸಂ ವೃತ್ತಿಕಾರಕಂ ।

ಭಾಷ್ಯಕೃತ್ಪಂಡಿತಾರಾಧ್ಯಂ ಪ್ರಪದ್ಯೇ ಪಾಶಮುಕ್ತಯೇ "

ಎಂಬ ಬಸವ ಪಂಡಿತಾರಾಧ್ಯರ ಉಕ್ತಿಯಿಂದ ಸೂತ್ರಕಾರನಾದ **ವೇದವ್ಯಾಸ,** ವೃತ್ತಿಕಾರನಾದ **ದೂರ್ವಾಸ** ಹಾಗೂ ಭಾಷ್ಯಕರ್ತನಾದ **ಶ್ರೀಪತಿ ಪಂಡಿತಾರಾಧ್ಯರು** ಶಿವಾದ್ವೈತ ಅಥವಾ ವಿಶೇಷಾದ್ವೈತ ಪರವಾಗಿಯೇ ತಮ್ಮ ಕೃತಿಗಳನ್ನು ರಚಿಸಿರುವಂತೆ ಸ್ಪಷ್ಟವಾಗುತ್ತದೆ.

ಶ್ರೀಪತಿ ಪಂಡಿತಾರಾಧ್ಯರು ತಮ್ಮ ಭಾಷ್ಯದ ಆರಂಭದಲ್ಲಿ **ರೇವಣಸಿದ್ಧ ಮರುಳಸಿದ್ಧ** ಮತ್ತು **ಏಕೋರಾಮ** ಸಿದ್ಧರನ್ನು ಸ್ತುತಿಸಿರುತ್ತಾರೆ. ಮುಂದೆ ಭಾಷ್ಯದಲ್ಲಿ "**ಪವಿತ್ರಂ ತೇ-ಇತಿ ಋಗ್ವೇದಮಂತ್ರಸ್ಯ ಸಿದ್ಧಾಂತ ಶಿಖಾಮಣೌ ಶ್ರೀರೇಣುಕ ಭಗವತ್ಪಾದಾಚಾರ್ಯೇಣಾಪಿ ಲಿಂಗಧಾರಣ ಪರತ್ವೇನ ವ್ಯಾಖ್ಯಾನಾತ್** "

ಎಂದು ಹೇಳಿರುವುದಲ್ಲದೆ ಅಲ್ಲಲ್ಲಿ ಇತರ ಆಚಾರ್ಯರ ಉಕ್ತಿಗಳನ್ನು ಉಲ್ಲೇಖಿಸಿರುವುದನ್ನು ನೋಡಿದರೆ ವೀರಶೈವ ಆಚಾರ್ಯರು ವೇದಾಗಮೋಪನಿಷತ್ತುಗಳ ಮೇಲೆ ಭಾಷ್ಯಾದಿಗಳನ್ನು ರಚಿಸಿದ ಅಂಶವು ವೇದ್ಯವಾಗುತ್ತದೆ.

ಈ ಆಚಾರ್ಯರ ಬಳಿವಿಡಿದು **ಅಗಸ್ತ್ಯ, ದೂರ್ವಾಸ** ಮುಂತಾದ ಮಹರ್ಷಿಗಳು ಶ್ರೀವೀರಶೈವ ಸಿದ್ಧಾಂತ ಪರ ವಾದಸೂತ್ರ ವೃತ್ತಿಗಳನ್ನು ರಚಿಸಿದ್ದರೆಂದು ತಿಳಿದು ಬರುತ್ತದೆ.

## (೧) ನಂದಿಕೇಶ್ವರ ಶಿವಾಚಾರ್ಯ ತ್ರಯ

ಅಭಿನಯ ದರ್ಪಣ ಕರ್ತೃ 'ನಂದಿಕೇಶ್ವರ ಶಿವಾಚಾರ್ಯ'ರಿಗಿಂತಲೂ ಹಿಂದೆ ಮತ್ತೊಬ್ಬ ನಂದಿಕೇಶ್ವರ ಶಿವಾಚಾರ್ಯರು ಇದ್ದಂತೆ ತಿಳಿದು ಬರುತ್ತದೆ. ಇವರು ವ್ಯಾಕರಣ ಶಾಸ್ತ್ರಕ್ಕೆ ಪ್ರವರ್ತಕರು. ಇವರು ರಚಿಸಿರುವ 'ನಂದಿಕೇಶ್ವರ ಕಾರಿಕಾ' ಎಂಬ ಗ್ರಂಥವು ವ್ಯಾಕರಣ ಶಸ್ತ್ರಾಭ್ಯಾಸಿಗಳಿಗೆ ಸುಪರಿಚಿತ. ನಂದಿಕೇಶ್ವರ ಶಿವಾಚಾರ್ಯರು ಪರಮೇಶ್ವರನ ಡಮರುಗದಿಂದ ಉತ್ಪನ್ನವಾದ ಅ-ಇ-ಉಣ್ ಎಂಬ ಹದಿನಾಲ್ಕು ಮಾಹೇಶ್ವರ ಸೂತ್ರಗಳಿಗೆ ಕಾರಿಕೆಗಳನ್ನು ಬರೆದು ಆ ಹದಿನಾಲ್ಕು ಸೂತ್ರಗಳಿಂದ ಸೂಚಿತವಾಗುವ ರಹಸ್ಯಗಳನ್ನೆಲ್ಲ ಸ್ಪಷ್ಟಪಡಿಸಿ ಲೋಕೋಪಕಾರ ಮಾಡಿರುತ್ತಾರೆ. ಗ್ರಂಥದ ಪ್ರಾರಂಭದಲ್ಲಿ :

ನೃತ್ತಾವ..............................।

.......................................ಜಾಲವ್ ॥

ಎಂದು ವೇದೋಪನಿಷತ್ತುಗಳ ಯಥಾರ್ಥಸ್ವರೂಪವನ್ನರಿಯಲು ಅಸಮರ್ಥರಾದ ಸನಕಾದಿ ಮಹರ್ಷಿಗಳನ್ನು ಉದ್ಧರಿಸುವುದಕ್ಕಾಗಿ ಪರಮೇಶ್ವರನು ಎಂದಿನಂತೆ

ಏರ್ಪಟ್ಟಿದ್ದ ಪ್ರದೋಷ ನೃತ್ಯದ ತರುವಾಯ ಹದಿನಾಲ್ಕು ಸಲ ತನ್ನ ಡಮರುಗವನ್ನು ಬಾರಿಸಿದನು. ಆಗ ಮೇಲೆ ಕಂಡ ಸೂತ್ರಗಳು ಉತ್ಪನ್ನವಾದವೆಂದೂ ಅಂಥ ಶಿವಸೂತ್ರಗಳ ವಿಮರ್ಶೆಯನ್ನು ತಮ್ಮ ಕಾರಿಕೆಯಲ್ಲಿ ವಿಸ್ತರಿಸಿರುವುದಾಗಿಯೂ ನಂದಿಕೇಶ್ವರ ಶಿವಾಚಾರ್ಯರು ಹೇಳಿಕೊಂಡಿದ್ದಾರೆ. ಆ ತರುವಾಯ ಅಣ್. ಅಕ್. ಮುಂತಾದ ಪ್ರತ್ಯಾಹಾರ ಸಂಜ್ಞೆಗಳು ಏರ್ಪಟ್ಟು ವ್ಯಾಕರಣ ಶಾಸ್ತ್ರರಚನೆಯಾಗಿ ವೇದಾಂಗವೆನಿಸಿತು. ಅದರ ಸಹಾಯದಿಂದ ವೇದಾದಿ ಶ್ರುತಿಗಳ ಅರ್ಥ ವಿಚಾರವು ಆರಂಭವಾಯಿತು. ಎಂದು ಹೇಳುತ್ತಿರುವ ಸನಾತನ ಪ್ರತೀತಿಯ ಪ್ರಕಾರ ನಂದಿಕೇಶ್ವರ ಶಿವಾಚಾರ್ಯರ ಪುರಾತನತ್ವವು ವ್ಯಕ್ತವಾಗುತ್ತದೆ. ನಂದಿಕೇಶ್ವರ ಶಿವಾಚಾರ್ಯರು ರಚಿಸಿರುವ ಶಿವಾದ್ವೈತ ವೃತ್ತಿಗೆ 'ಉಪಮನ್ಯು ಶಿವಾಚಾರ್ಯರು' ಮಹತ್ವಪೂರ್ಣವಾದ ಟೀಕೆಯನ್ನು ಬರೆದಿರುವುದಾಗಿಯೂ ತಿಳಿದುಬರುತ್ತದೆ. ಅಭಿನಯ ದರ್ಪಣಕಾರರಾದ ಎರಡನೆಯ ನಂದಿಕೇಶ್ವರ ಶಿವಾಚಾರ್ಯರು ಸುಮಾರು ಕ್ರಿ. ಶ. ಎರಡನೆಯ ಶತಮಾನದಲ್ಲಿದ್ದ ಭರತನ ಸಮಕಾಲೀನರಾಗಿದ್ದರೂ ಇವರು ನಾಟ್ಯಶಾಸ್ತ್ರದ ಅಂಗವಾಗಿರುವ ಅಭಿನಯ ವಿಚಾರದಲ್ಲಿ ಗ್ರಂಥರಚನೆ ಮಾಡಿರುತ್ತಾರೆ. ಇವರ ವಿಚಾರವಾಗಿ ಇನ್ನು ಸಂಶೋಧನೆಗಳು ನಡೆಯುವುದು ಅವಶ್ಯಕ.

(೩) ಸುಮಾರು ೧೫ನೆಯ ಶತಮಾನಕ್ಕೆ ಸೇರಿದ ಲಿಂಗಧಾರಣ ಚಂದ್ರಿಕಾ ಕರ್ತೃಗಳಾದ ಮೂರನೆಯ ನಂದಿಕೇಶ್ವರ ಶಿವಾಚಾರ್ಯರ ವಿಚಾರವನ್ನು ಮುಂದೆ ನಿರೂಪಿಸಲಾಗುತ್ತದೆ.

## (೧) ನೀಲಕಂಠ ಶಿವಾಚಾರ್ಯರದ್ವಯ

ವೀರಶೈವ ಶಿವಾಚಾರ್ಯರ ಇತಿಹಾಸದಲ್ಲಿ ಈರ್ವರು ನೀಲಕಂಠ ಶಿವಾಚಾರ್ಯರ ಹೆಸರುಗಳು ದೊರೆಯುತ್ತವೆ. ಇವರಲ್ಲಿ ಮೊದಲನೆಯವರು ಶಂಕರಾಚಾರ್ಯರಿಗಿಂತಲೂ ಪ್ರಾಚೀನರೆಂದು ಹೇಳಲು ಅವಕಾಶವಿದೆ. ಏಕೆಂದರೆ ಸುಮಾರು ಕ್ರಿ. ಶ. ಎಂಟನೆಯ ಶತಮಾನದಲ್ಲಿದ್ದರೆಂದು ಹೇಳಲಾಗುತ್ತಿರುವ ಶಂಕರಾಚಾರ್ಯರ ಚರಿತ್ರೆಯನ್ನು ಬರೆದಿರುವ ಆನಂದ ಗಿರಿಯು ಅವರ ದಿಗ್ವಿಜಯಗಳನ್ನು ವರ್ಣಿಸುತ್ತ ಆಚಾರ್ಯರು ಕಾಶಿ ಕ್ಷೇತ್ರಕ್ಕೆ ಆಗಮಿಸಿದಾಗ ಅಲ್ಲಿ "ಶಿರಸಿ ಪಾಷಾಣಲಿಂಗಂ ಚ ಧಾರಿಣೋಜಂಗಮಾಸ್ತದಾ" ಎಂದು ಆರಂಭಿಸಿ ಪರಮತ ಕಾಲಾನಲ ಶಿವಾಚಾರ್ಯ ಮತ್ತು ಪರವಾದಿ ಭಯಂಕರ ಶಿವಾಚಾರ್ಯರೆಂಬ ಜಂಗಮ ಆಚಾರ್ಯರು ಪ್ರಸ್ಥಾನ ತ್ರಯದ ಮೇಲೆ ಶಂಕರರೊಂದಿಗೆ ವಾದಿಸಿ ಪರಾಜಿತರಾದರೆಂದು ಹೇಳುತ್ತಾನೆ.

ಶಂಕರ ದಿಗ್ವಿಜಯದಲ್ಲಿ ಪರವಾದಿಗಳ ಪರಾಜಯ ಸೂಕ್ತವೆನಿಸಿದರೂ ಆಗ್ಗೆ ಅಂಥ ಆಚಾರ್ಯರೊಂದಿಗೆ ಪ್ರಸ್ಥಾನತ್ರಯದ ಮೇಲೆ ವಾದಿಸಬಲ್ಲ ಲಿಂಗಧಾರಿಗಳಾದ ಈರ್ವರು ಜಂಗಮ ಆಚಾರ್ಯರು ಕಾಶಿಕ್ಷೇತ್ರದಲ್ಲಿ ಪ್ರಸಿದ್ಧರಾಗಿದ್ದರೆಂದೂ, ಅವರು ವಾದಿ

ಸಿವ ಶಿವಾದ್ವೈತ ಪರವಾದ ಬ್ರಹ್ಮಸೂತ್ರ ಭಾಷ್ಯವು ಅದಕ್ಕಿಂತಲೂ ಹಿಂದೆಯೇ ಪ್ರಸಿದ್ಧವಾಗಿರಬೇಕೆಂದೂ ಹೇಳಲು ಅವಕಾಶವಿದೆ. ಕ್ರಿ.ಶ. ೧೪ನೆಯ ಶತಮಾನ ದಲ್ಲಿದ್ದ (೨) ಎರಡನೆಯ ನೀಲಕಂಠ ಶಿವಾಚಾರ್ಯರು ತಾವು ಬರೆದಿರುವ 'ಕ್ರಿಯಾಸಾರ'ವು ಪ್ರಾಚೀನ ನೀಲಕಂಠ ಶಿವಾಚಾರ್ಯರ ಬ್ರಹ್ಮಸೂತ್ರ ಭಾಷ್ಯದ ಕಾರಿಕೆಯೆಂದು ಹೇಳಿಕೊಂಡಿರುತ್ತಾರೆ. ಇವರು ತಮ್ಮ ಕಾರಿಕೆಯ ಮೊದಲು ಉಪದೇಶದಲ್ಲಿ—

ನೀಲಕಂಠ ಶಿವಾಚಾರ್ಯನಾಮ್ನಾ ಭಾಷ್ಯರುಚೀಕರಃ ।
ವಿಶಿಷ್ಟಾದ್ವೈತ ಸಿದ್ಧಾಂತ ಪ್ರತಿಪಾದನ ಮುತ್ತಮಮ್ ॥೩೨॥
ತಲ್ಲಿಂಗಮೇವ ಸೂತ್ರೇಷು ವ್ಯಾಸೇನಾಪಿ ವಿಚಾರಿತಮ್ ।
ನೀಲಕಂಠ ಶಿವಾಚಾರ್ಯೈ ಸ್ತತ್ತಾತ್ಪರ್ಯಂ ಪ್ರಕಾಶಿತಮ್ ॥೫೩॥
ತಸ್ಮಾಚ್ಛಕ್ತಿ ವಿಶಿಷ್ಟಸ್ಯ ಜಿಜ್ಞಾಸಾ ಬ್ರಹ್ಮಣಿಃ ಸ್ಫುಟಮ್ ॥೯೬॥
ನೀಲಕಂಠ ಶಿವಾಚಾರ್ಯ ಭಾಷ್ಯಾರ್ಥಮನು ಸಂಪಥನ್ ।
ವೀರಶೈವೈರಭಿಮತ ಮಭಿಧಾಸ್ಯೇ ಶ್ರುತೇರ್ಮತಮ್ ॥ ೧೦೦ ॥

ಮುಂತಾದ ಕಾರಿಕೆಗಳಲ್ಲಿ ವೇದವ್ಯಾಸ ಮಹರ್ಷಿಯು ಶಕ್ತಿವಿಶಿಷ್ಟಾದ್ವೈತ ಪರವಾಗಿ ರಚಿಸಿದ ಬ್ರಹ್ಮಸೂತ್ರಗಳಿಗೆ ಇತರರು ಅಪಾರ್ಥಮಾಡಿದ್ದರೆಂದೂ, ಅದನ್ನು ಕಂಡು ಪರಶಿವನು ಸಾಕ್ಷಾತ್ ನೀಲಕಂಠ ಶಿವಾಚಾರ್ಯರ ರೂಪದಿಂದ ಅವತರಿಸಿ ಶಕ್ತಿ ವಿಶಿಷ್ಟಾದ್ವೈತ ಪರವಾಗಿ ಭಾಷ್ಯ ರಚಿಸಿದನೆಂದೂ ಅಂಥ ಭಾಷ್ಯಾರ್ಥವನ್ನು ತಾವು ಕಾರಿಕಾಗಳ ಪರವಾಗಿ ರಚಿಸಿರುವುದಾಗಿಯೂ ಹೇಳಿದ್ದಾರೆ.

## ಶಿವಯೋಗಿ ಶಿವಾಚಾರ್ಯರು

ಜ॥ ರೇಣುಕಾಚಾರ್ಯರು ಅಗಸ್ತ್ಯ ಮಹರ್ಷಿಗೆ ಉಪದೇಶಿಸಿದ ಏಕೋತ್ತರ ಶತಸ್ಥಲ ಸಿದ್ಧಾಂತವನ್ನು ಆಮೂಲಾಗ್ರವಾಗಿ ಬೋಧಿಸುವ ಸಿದ್ಧಾಂತ ಶಿಖಾಮಣಿಯ ಕರ್ತೃ ಶಿವಯೋಗಿ ಶಿವಾಚಾರ್ಯರು. ಸಿದ್ಧಾಂತ ಶಿಖಾಮಣಿಯ ಉಲ್ಲೇಖಗಳು ಕ್ರಿ. ಶ. ೧೧೯೦ರಲ್ಲಿದ್ದ ಶ್ರೀಪತಿ ಪಂಡಿತರ ಶ್ರೀಕರಭಾಷ್ಯದಲ್ಲಿಯೂ ಭಟ್ಟೋಜೀದೀಕ್ಷಿತರ 'ತಂತ್ರಾಧಿಕಾರ ನಿರ್ಣಯ'ದಲ್ಲಿಯೂ ಕಮಲಾಕರ ಭಟ್ಟನ 'ನಿರ್ಣಯಸಿಂಧು'ವಿನಲ್ಲಿಯೂ, 'ಶಾರದಾತಿಲಕ' ಮತ್ತು 'ನಿರ್ಮಾಲ್ಯರತ್ನಾಕರ' ಮುಂತಾದ ಗ್ರಂಥಗಳಲ್ಲಿಯೂ ಕಾಣುತ್ತಿರುವುದರಿಂದ ಇವರ ಕರ್ತೃ ಶಿವಯೋಗಿ ಶಿವಾಚಾರ್ಯರು ಕ್ರಿ.ಶ. ೧೦ನೇಯ ಶತಮಾನಕ್ಕೆ ಪೂರ್ವಜರೆಂದು ಹೇಳಬೇಕಾಗುತ್ತದೆ. ಮೇಲಾಗಿ ಈ ಗ್ರಂಥದಲ್ಲಿ ಪ್ರಾಯಃ ವೀರಶೈವ ಗ್ರಂಥಕಾರರೆಲ್ಲರೂ ತಪ್ಪದೆ ಸ್ತುತಿಸಿರುವ ಬಸವಾದಿ ಪ್ರಮಥರ ಉಲ್ಲೇಖಗಳಾಗಲಿ, ಜ॥ ರೇಣುಕಾಚಾರ್ಯರ ಬಗ್ಗೆ ಅಲ್ಲಿಂದೀಚೆಗೆ ಎಂದರೆ ಕ್ರಿ. ಶ. ೧೧ನೆಯ ಶತಮಾನದ 'ಈಶಾನಶಿವಗುರು' ರಚಿತ ಸಂಸ್ಕೃತ 'ರೇಣುಕ ಪರಮ ಲೀಲಾವಿಲಾಸ'ದಲ್ಲಿನ ರೇಣುಕರ ಕಥೆಗಳ ಉಪಯುಕ್ಕೆ

ಪೂರ್ವದಲ್ಲಿದ್ದ ಆದಿ ರೇಣುಕಾಚಾರ್ಯರಿಗೆ ಮಾತ್ರ ಸಂಬಂಧಿಸಿದ ಕುಲ್ಯಪಾಕ ಸೋಮನಾಥ ಲಿಂಗೋದ್ಭವ, ಅಗಸ್ತ್ಯೋಪದೇಶ ಮತ್ತು ವಿಭೀಷಣ ವರಪ್ರದಾನ ಎಂಬ ಮೂರು ಅಂಶಗಳನ್ನು ಮಾತ್ರ ಇದು ಒಳಗೊಂಡಿರುವುದರಿಂದ ಈ ಗ್ರಂಥ ಕರ್ತೃ ಶಿವಯೋಗಿ ಶಿವಾಚಾರ್ಯರು ಕ್ರಿ. ಶ. ೧೦ನೆಯ ಶತಮಾನ ಪೂರ್ವಜರೆಂದು ಹೇಳಬಹುದು.

ಸಿದ್ಧಾಂತ ಶಿಖಾಮಣಿಯ ಸಂಸ್ಕೃತ ವ್ಯಾಖ್ಯಾನಕಾರರಾದ ಶ್ರೀ ಮರಿತೋಂಟದಾರ್ಯರು ತಮ್ಮ ವ್ಯಾಖ್ಯಾನದಲ್ಲಿ ಶಿವಯೋಗಿ ಶಿವಾಚಾರ್ಯರು ಸೊನ್ನಲಾಪುರದ ಸಿದ್ಧರಾಮೇಶ್ವರನ ವಂಶೀಯರೆಂದು ಸೂಚಿಸಿರುವ ಅಂಶವು ಚಾರಿತ್ರಕ ದೃಷ್ಟಿಯಿಂದ ಉಚಿತವೆನಿಸದು. ಸಿದ್ಧನಾಥ, ಸಿದ್ಧರಾಮ ಪದಗಳ ಸಾದೃಶ್ಯ ಈ ಕಲ್ಪನೆಯಾಗಿರುವುದು ಸ್ವಾಭಾವಿಕವಾದ್ದರಿಂದ ಆ ವಾದವು ಉಪಾದೇಯವಲ್ಲ. *(ಪುಟ ೩೬೨)

## ವಿರೂಪಾಕ್ಷ ದೇಶಿಕೇಂದ್ರ – ಚಂದ್ರಗುಂಡ ದೇಶಿಕೇಂದ್ರ ಶಿವಾಚಾರ್ಯರು ಮತ್ತು ದೇವರದಾಸಿಮಾರ್ಯರು

ಸು. ಕ್ರಿ. ಶ. ೧೦, ೧೧ನೆಯ ಶತಮಾನದವರೆಂದು ಹೇಳಲಾಗುತ್ತಿರುವ ಮೇಲೆ ಕಂಡ ಶಿವಾಚಾರ್ಯರು ಶ್ರೀಶೈಲ ಸೂರ್ಯಸಿಂಹಾಸನದ ಅಧಿಪತಿಗಳಾಗಿದ್ದಾರೆ. ಬೆಂಗಳೂರಿನ ತಿಪ್ಪಶೆಟ್ಟಿ ಮಠಾಧ್ಯಕ್ಷರಾಗಿದ್ದ ಮಹಾಂತದೇಶಿಕರು 'ಶಿವಶರಣವಿಲಾಸ'ದಲ್ಲಿ ಜ|| ಸಂ ತಾರಾಧ್ಯ – ವಿರೂಪಾಕ್ಷದೇಶಿಕೇಂದ್ರ – ಚಂದ್ರಗುಂಡದೇಶಿಕೇಂದ್ರ ಮತ್ತು ಅವರ ಶಿಷ್ಯ 'ದೇವರ ದಾಸಿಮಾರ್ಯ'ರ ವಿಚಾರವು ವೇದ್ಯವಾಗುತ್ತದೆ. ದೇವರ ದಾಸಿಮಾರ್ಯರು ವಚನಕಾರರ ಮೂಲಪುರುಷರಾಗಿದ್ದುದಲ್ಲದೆ ಪೊಟ್ಟಲಕೆರೆ ಚಾಲುಕ್ಯ ಚಕ್ರವರ್ತಿ ಜಗದೇಕಮಲ್ಲ ೧ನೆಯ ಜಯಸಿಂಹನ (೧೦೦೮–೧೦೪೦) ರಾಣಿ ಸುಗ್ಗಲಾ ದೇವಿಗೆ ಲಿಂಗದೀಕ್ಷೆಯೆಸಗಿದನೆಂದೂ, ಆತನ ಆಸ್ಥಾನದಲ್ಲಿದ್ದ ಜೈನವೇದಾಂತಿಗಳನ್ನು ವಾದದಲ್ಲಿ ಸೋಲಿಸಿ ರಾಜನಿಗೂ ಲಿಂಗದೀಕ್ಷೆ ನೀಡಿದ ಅಂಶವು ಚಾರಿತ್ರಕವಾಗಿದೆ. ದೇವರದಾಸಿಮಾರ್ಯರ ವಚನಗಳು 'ರಾಮನಾಥಾ' ಎಂಬ ಅಂಕಿತದಿಂದ ಪ್ರಸಿದ್ಧವಾಗಿವೆ. ಆದರೆ ಅವರ ಗುರುಗಳಾದ ಶಶಿಗುಂಡದೇಶಿಕ ಮತ್ತು ವಿರೂಪಾಕ್ಷದೇಶಿಕರ ಕೃತಿಗಳು ಎಲ್ಲಿಯೂ ಉಕ್ತವಾಗಿಲ್ಲ.

ಶಶಿಚಂದ್ರಗುಂಡದೇಶಿಕರಿಗೆ ಶ್ರೀಪತಿ ಪಂಡಿತಾರಾಧ್ಯರು ಸಮಕಾಲೀನರು. ಶ್ರೀಪತಿ ಪಂಡಿತರು ಮೊದಲಿಗೆ ಕಾಶೀ ನಿವಾಸಿಗಳಾಗಿದ್ದರೆಂದೂ ಶ್ರೀಶೈಲ ಪೀಠಾಧಿಪತಿಗಳಾಗಿದ್ದ ವಿರೂಪಾಕ್ಷ ದೇಶಿಕೇಂದ್ರರು ಸಂಚಾರಾರ್ಥವಾಗಿ ಕಾಶಿಗೆ ದಯಮಾಡಿ

---

* ಈ ಗುರ್ತಿರುವ ಶಿವಾಚಾರ್ಯರ ವಿಷಯಗಳು ಸೂಚಕ ಪುಟಗಳಲ್ಲಿ ಉಕ್ತವಾಗಿರುವವುಗಳನ್ನು ಬಿಟ್ಟು ವಿಶಿಷ್ಟ ಅಂಶಗಳನ್ನು ಮಾತ್ರ ಇಲ್ಲಿ ಗ್ರಹಿಸಲಾಗಿದೆ. (ಲೇ.)

ಸಿದ್ದಾಗ ಶ್ರೀ ವಿಶ್ವನಾಥಾಲಯದಲ್ಲಿ ತಂಗಿದ ಆಚಾರ್ಯರಿಗೂ ಶ್ರೀಪತಿ ಪಂಡಿತರಿಗೂ ನಡೆದ ಶೈವ-ವೀರಶೈವ ವಾಕ್ಯಾರ್ಥದ ಸಂದರ್ಭವನ್ನು ಪುಲ್ಲಕವಿ ಹೀಗೆ ವರ್ಣಿಸಿದ್ದಾನೆ.

ಕ್ಷಿತಿಸುರುಲಿವ್ವಿಧಂಬುನ ವಚಿಂಚುಚುನುಂಡಗ ವಾರಿಲೋನ ಶ್ರೀ
ಪತಿಯನು ಪಂಡಿತೋತ್ತಮುಡಭಂಗುರ ವೇದಪುರಾಣಶಾಸ್ತ್ರ ಸಂ
ಗತುಲ ಪ್ರವೀಣಡಬ್ಜಭವ ಕಲ್ಪುಡನಲ್ಪಕಳಾವಿಚಕ್ಷಣುಂ
ಡತುಲಿತ ವಿಶ್ವನಾಥ ಚರಣಾಂಬುಜ ಭಕ್ತಿದನರ್ಚಯುಂಡರ್ಗ ||೨೧೧||

(ಪು. ಪಂ. ಚ. ಆ. ೧.)

ಶ್ರೀಪತಿ ಪಂಡಿತರು ವಾದದಲ್ಲಿಸೋತು ಕಡೆಗೆ ವಿರೂಪಾಕ್ಷ ದೇಶಿಕಕೇಂದ್ರರಿಂದ ಲಿಂಗದೀಕ್ಷೆ ವಹಿಸಿದರೆಂದೂ ಅಂದಿನಿಂದ ಶ್ರೀಪತಿ ಪಂಡಿತರ ವಂಶೀಯರೆಲ್ಲರೂ ಲಿಂಗ ದೀಕ್ಷೆ ಹೊಂದಿ 'ಪಂಡಿತಾರಾಧ್ಯ'ರೆಂದು ಕರೆಯಿಸಲ್ಪಟ್ಟು ಶ್ರೀಯವರೊಂದಿಗೆ ದಕ್ಷಿಣಾ ಪಥಕ್ಕೆಆಗಮಿಸಿ ಕರ್ಣಾಟಕಾಂಧ್ರಪ್ರಾಂತಗಳಲ್ಲಿ ನೆಲೆಸಿದರೆಂದೂ, ಶ್ರೀಪತಿ ಪಂಡಿತರು ಬೆಜವಾಡದ ಮಲ್ಲಿಕಾರ್ಜುನಾಲಯದಲ್ಲಿ ಯತೀಂದ್ರರಾಗಿ ಅನೇಕ ಪವಾಡಗಳನ್ನು ಮೆರೆಯಿಸಿದರೆಂದೂ ಶಿಲಾಲೇಖಗಳಿಂದಲೂ ಪುಲ್ಲಕವಿ ವಿರಚಿತ 'ಶ್ರೀಶೈಲ ಪಂಡಿತಾ ರಾಧ್ಯ ಚರಿತ್ರ'ದಿಂದಲೂ ತಿಳಿದುಬರುತ್ತದೆ.* ಶ್ರೀಪತಿ ಪಂಡಿತರ ವಂಶೀಯರ ಲ್ಲೊಬ್ಬರಾದ ಶಶಿಗುಂಡ ದೇಶಿಕರು ಶ್ರೀಶೈಲ ಪೀಠಾಧಿಕಾರ ವಹಿಸಿ ದೇವರದಾಸಿಮಾರ್ಯ ರಿಗೆ ಶಿವದೀಕ್ಷೆಯಿತ್ತು ಮುಂದೆ ರಾಜೇಂದ್ರಚೋಳನ ಪ್ರಾರ್ಥನೆಯಂತೆ ಗುಯಲೂರಿ (ಗೂಳೂರು, ನಿಡುಮಾಮಿಡಿ ಮೂಲಪೀಠ)ಗೆ ಆಗಮಿಸಿ ನೆಲಸಿದಂತೆ ಸದರಿ ಪಂಡಿತಾ ರಾಧ್ಯ ಚರಿತ್ರೆಯಿಂದ ವ್ಯಕ್ತವಾಗುತ್ತದೆ. ಆದುದರಿಂದ ಮೇಲೆ ಕಂಡ ಮೂವರು ಆಚಾರ್ಯರ ಪರಸ್ಪರ ಸಂಬಂಧಾದಿಗಳು ತಿಳಿದುಬರುವುದಲ್ಲದೆ ಇವರ ಪ್ರಭಾವವು ಶ್ರೀಪತಿ ಪಂಡಿತ ಮತ್ತುದೇವರದಾಸಿಮಾರ್ಯರ ಮೇಲೆ ಆಗಿರುವುದೂ ವ್ಯಕ್ತವಾಗುತ್ತದೆ.

## ಪಂಡಿತತ್ರಯ

ವೀರಶೈವ ಕವಿಗಳು ಪ್ರಾಯಕವಾಗಿ ತಮ್ಮ ಗ್ರಂಥಗಳ ಆದಿಯಲ್ಲಿ ಶಿವಲೆಂಕ ಮಂಚಣ್ಣ ಪಂಡಿತ, ಶ್ರೀಪತಿಪಂಡಿತ ಮತ್ತು ಮಲ್ಲಿಕಾರ್ಜುನ ಪಂಡಿತಾರಾಧ್ಯ ಎಂಬ ಮೂವರು ಪಂಡಿತರನ್ನು ಸ್ತುತಿಸುತ್ತಾರೆ. ಇವರಲ್ಲಿ ಮೊದಲನೆಯವರಾದ ಶಿವಲೆಂಕ ಮಂಚಣ್ಣ ಪಂಡಿತ ಮತ್ತು ಶ್ರೀಪತಿ ಪಂಡಿತರು ೧೧ನೆಯ ಶತಮಾನದವರೆಂದೂ, ಮಲ್ಲಿ ಕಾರ್ಜುನ ಪಂಡಿತರು ೧೨ನೆಯ ಶತಮಾನದವರೆಂದೂ ಹೇಳಬಹುದು.

---

* ವಿವರಗಳನ್ನು ತಿಳಿಯ ಬಯಸುವವರು ಸದರಿ ಪಂಡಿತಾರಾಧ್ಯ ಚರಿತ್ರೆಗೆ ನಾನು ಬರೆದಿರುವ ಉಪೋದ್ಘಾತ (ಪು. ೪೮-೬೦)ವನ್ನು ಅವಲೋಕಿಸಬಹುದು.

## (೧) ಶಿವಲೆಂಕ ಮಂಚಣ್ಣ ಪಂಡಿತ (ಸು. ೧೧೬೦) ಶಿವಾಚಾರ್ಯರು

ಇವರ ಊರು ಕಾಶೀ ಕ್ಷೇತ್ರ. ತಾತ ಸೋಮಶಂಭುದೇಶಿಕ, ತಂದೆ ಕಾವಿ ಕಾದ್ಯಖಿಳ ಶಿವಕಥನ ತಂತ್ರಾವಳಿಗೆ ಪ್ರೇಮದಿಂ ವೃತ್ತಿದೀಪಿಕೆಗಳಂ ಬಿತ್ತರಿಸಿ, ಸೋಮಧರ ಸಮಯಮಂ ಧರಣಿಯೊಳ್ ನಿಲಿಸಿದ 'ಸಕಲಾಗಮಾಚಾರ್ಯ-ಶಂಭು ಭಟ್ಟ' ಈತನು ವಚನಗಳನ್ನು ರಚಿಸಿದ್ದಾನೆ. ವಚನ ಮುದ್ರಿಕೆ 'ಕ ಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗ' ಈತನ ಹೆಸರು ಗಣಸಹಸ್ರದಲ್ಲಿ ಬಂದಿದೆ.

ಶಿವಲೆಂಕ ಮಂಚಣ್ಣ ಪಂಡಿತರು ಉಪನಿಷತ್ತುಗಳಿಗೆ ವ್ಯಾಖ್ಯಾನವನ್ನು ಬರೆದಿದ್ದ ರೆಂದು ತಿಳಿದುಬರುತ್ತದೆ. ಲಿಂಗಧಾರಣ ಚಂದ್ರಿಕಾ ಕರ್ತೃ (೩) ನಂದಿಕೇಶ್ವರ ಶಿವಾ ಚಾರ್ಯ (ಸು. ೧೬೦೦) ತಮ್ಮ ಗ್ರಂಥದಲ್ಲಿ ಇವರನ್ನು 'ಪೂರ್ವಾಚಾರ್ಯ'ರೆಂದು ಹೇಳಿ ರುವುದಲ್ಲದೆ 'ಸರ್ವಲಿಂಗಂ ಸ್ಥಾಪಯತಿ' ಎಂಬ ಮಂತ್ರಕ್ಕೆ ಲಿಂಗಧಾರಣ ಪರವಾಗಿ ವಿದ್ಯಾರಣ್ಯಾದಿಗಳು ವ್ಯಾಖ್ಯಾನಮಾಡಿಲ್ಲವೆಂಬ ಆಶಂಕೆಗೆ ಉತ್ತರಿಸುತ್ತಾ 'ತೈರ ವ್ಯಾಖ್ಯಾತತ್ವೇಽಪಿ ಕಾಲಹಸ್ತಿ ದೀಕ್ಷಿತ, ಮಂಚಣ್ಣ ಪಂಡಿತಾರಾಧ್ಯಾದಿಭಿ: ತತ್ಪರತ್ವೇನ ವ್ಯಾಖ್ಯಾತತ್ವಾತ್' ಎಂದು ಕಾಲಹಸ್ತಿ ದೀಕ್ಷಿತ ಮತ್ತು ಮಂಚಣ ಪಂಡಿತಾರಾಧ್ಯರು ವೇದಮಂತ್ರಗಳಿಗೆ ಲಿಂಗಧಾರಣ ಪರವಾಗಿ ಭಾಷ್ಯಾದಿಗಳನ್ನು ಬರೆದಿದ್ದರೆಂದು ಸೂಚಿಸಿ ರುವುದರಿಂದ ಇವರು ಪ್ರತ್ಯೇಕವಾದ ಮಂತ್ರಭಾಷ್ಯ ರಚಿಸಿದ್ದರೆಂದು ಸ್ಪಷ್ಟವಾಗುತ್ತದೆ. ಅಲ್ಲದೆ ಶ್ರೀಕರ ಭಾಷ್ಯದಲ್ಲಿಯೂ ಸಹ "ಅತಏವ ಗುಹಾಧಿವರಣೇ ಮಂಚಣ ಪಂಡಿತೀಯೇ" (ಬ್ರ. ಬಾ. ೧. ೧. ೧.) ಎಂದು ಉಲ್ಲೇಖಿಸಿರುವುದನ್ನು ನೋಡಿದರೆ ಮಂಚಣ ಪಂಡಿತರು ಕೇವಲ ವೇದಭಾಷ್ಯಕಾರರು ಮಾತ್ರವಲ್ಲದೆ ಬ್ರಹ್ಮಸೂತ್ರ ಭಾಷ್ಯ ಕಾರರೂ ಆಗಿದ್ದರೆಂದು ತಿಳಿದುಬರುತ್ತದೆ.

## ಶ್ರೀಪತಿ ಪಂಡಿತಾರಾಧ್ಯರು (ಸು. ೧೧೬೦)

ಇವರು ಮೇಲೆ ಕಂಡ ಪಂಡಿತತ್ರಯದಲ್ಲಿ ಒಬ್ಬರು. ಇವರು ಮೊದಲು ಕಾಶೀ ಕ್ಷೇತ್ರ ವಾಸಿಗಳಾಗಿದ್ದು ಶ್ರೀಶೈಲ ಪೀಠಾಚಾರ್ಯರ ಕೃಪಾಪಾತ್ರರಾಗಿ ಬೆಜವಾಡದಲ್ಲಿ ನೆಲೆಸಿದ ಅಂಶ ವೇದ್ಯವೇ ಇದೆ. ಈತನು ಬೆಜವಾಡದಲ್ಲಿ ಶ್ರೀಶೈಲಪೀಠದ ಮುಖ್ಯ ಶಿಷ್ಯರಾದ ತೇಲಿಕ (ಗಾಣಿಗ) ವಂಶೀಯರ ಗುರುವಾಗಿದ್ದು, ಶಿವಾಚಾರ್ಯನಾಗಿದ್ದು ದಲ್ಲದೆ ಈತನ ಮಗ ಗೋಕರ್ಣ ಶಿವಾಚಾರ್ಯನು ಒಬ್ಬ ನಿಮ್ನವರ್ಗಜನನ್ನು ಶಿವ ಭಕ್ತನನ್ನಾಗಿ ಮಾಡಿದನೆಂದು ಪ್ರತೀತಿಯಿದೆ. * (ನಾಗಲಿಂಗ ಕವಿಯ ಗುಪ್ತಾಭ್ಯು ದಯ.) ಶ್ರೀಪತಿಪಂಡಿತನ ಹೆಸರು ಗಣಸಹಸ್ರನಾಮದಲ್ಲಿ ಬಂದಿದೆ. ಇವರು ಜಾಬಾಲ, ಶತರುದ್ರೀಯ ಮೊದಲಾದ ಶ್ರುತಿಗಳಿಗೆ ಶಿವಾದ್ವೈತ ಪರವಾದ ಭಾಷ್ಯರಚಿಸಿದ್ದಾರೆಂದು ತಿಳಿದುಬರುತ್ತದೆ (ಶಿವಶರಣರ ಚರಿತ್ರೆ ಭಾ. ೨.) ಶ್ರೀಪತಿ ಪಂಡಿತರು ಶಿವಪ್ರಸಾದ ಮಹಿಮೆಯನ್ನು ಪ್ರಶಂಸಿಸಿ, ಅದರ ಮಹತ್ವವನ್ನು ತೋರಿಸಲು ಅಗ್ನಿಯನ್ನು ರೇಶ್ಮೆ

ವಸ್ತ್ರದಲ್ಲಿ ಕಟ್ಟಿ ಬನ್ನಿಮರಕ್ಕೆ ಏಳು ದಿನಗಳವರೆಗೆ ಬಿಗಿದಿದ್ದರೆಂಬ ಪವಾಡವು ಶಿಲಾ ಲೇಖದಲ್ಲಿಯೂ ಉಲ್ಲಖಿತವಾಗಿದೆ.

ಇದರಿಂದ ಶ್ರೀಪತಿ ಪಂಡಿತಾರಾಧ್ಯರು ವೇದಾಂತಸೂತ್ರಾದಿಗಳ ಮೇಲೆ ಭಾಷ್ಯಾದಿಗಳನ್ನು ಬರೆದು ಪರಮತವಾದದಲ್ಲಿ ನಿಪುಣರಾಗಿದ್ದರೆಂದು ನಿಸ್ಸಂದೇಹ ವಾಗಿ ತಿಳಿದುಬರುತ್ತದೆ. ಪ್ರಕೃತ ಶ್ರೀಪತಿ ಪಂಡಿತರ ಹೆಸರಿನಲ್ಲಿ ಪ್ರಕಟವಾಗಿರುವ ಶ್ರೀಕರಭಾಷ್ಯವು ಇದೇ ಶ್ರೀಪತಿಗಳು ರಚಿಸಿರುವರೆಂಬ ಬಗ್ಗೆ ಅನೇಕ ಭಿನ್ನಾಭಿಪ್ರಾಯ ಗಳಿವೆ. ಶ್ರೀಕರಭಾಷ್ಯದ ಭಾಷಾಶೈಲಿ, ಪ್ರತಿಪಾದಿತ ವಿಷಯಗಳು, ಉಲ್ಲಿಖಿತವಾದ ಅನೇಕ ಗ್ರಂಥಗಳು ಮತ್ತು ಗ್ರಂಥಕಾರರ ನಾಮ ನಿರ್ದೇಶದಿಂದ ಈ ಭಾಷ್ಯವು ಬಸವ ಪೂರ್ವಯುಗದ್ದೆಂಬ ವಿಷಯದಲ್ಲಿ ಸಂಶಯವಿಲ್ಲವೆಂದು ಪ್ರಸಿದ್ಧ ಇತಿಹಾಸ ಸಂಶೋಧಕ ರಾದ ಡಾ॥ ಎಸ್. ಶ್ರೀಕಂಠಶಾಸ್ತ್ರಿಗಳು ವಿಸ್ತಾರವಾದ ಶ್ರೀಕರಭಾಷ್ಯ ವಿಮರ್ಶೆ ಬರೆದಿದ್ದಾರೆ. ❖

## ಅಗ್ನಿಸ್ತಂಭನ ವಿದ್ಯೆ–ಶ್ರೀಪತಿ ಪಂಡಿತಾರಾಧ್ಯ

ಶ್ರೀಪತಿ ಪಂಡಿತಾರಾಧ್ಯರ ಪವಾಡಗಳಲ್ಲಿ ಮುಖ್ಯವಾದ ಅಗ್ನಿಸ್ತಂಭನದ ಬಗ್ಗೆ ಪ್ರಕೃತ ಶ್ರೀಕರಭಾಷ್ಯವಲ್ಲಿ ಅನೇಕ ಸಲ ಉಲ್ಲೇಖಿಸಲಾಗಿದೆ. 'ಸಂಭೋಗಪ್ರಾಪ್ತಿರಿತಿ ಚೆನ್ನವೈಶೇಷ್ಯಾತ್' (ಬ್ರ.ಸು. ೧. ೨. ೧. ೮) ಎಂಬ ಸೂತ್ರಭಾಷ್ಯದಲ್ಲಿ 'ಅಗ್ನಿಸ್ತಂಭನ ವಿದ್ಯಾಽಶ್ರಯಸ್ಯ ದಾಹಭಯಾಭಾವಾತ್ ' ಅಗ್ನಿಸ್ತಂಭನ ವಿದ್ಯೆಯನ್ನು ವಶಪಡಿಸಿ ಕೊಂಡವನಿಗೆ ಬೆಂಕಿಯ ಭಯವಿಲ್ಲ ಎಂದು ಹೇಳಿದೆ.

ಅಂತರಧಿಕರಣದಲ್ಲಿ 'ಅಂತಸ್ತದ್ಧರ್ಮೋಪದೇಶಾತ್' (ಬ್ರ. ಸು. ೧. ೧. ೭. ೨೧) ಪರಮೇಶ್ವರನು ಸರ್ವಶಕ್ತನೆಂದು ಹೇಳುವ ಸಂದರ್ಭದಲ್ಲಿ 'ತ್ರಿಗುಣಾತೀತ ಶುದ್ಧಸತ್ತ್ವ ಪ್ರಧಾನ ಚಿಚ್ಛಕ್ತ್ಯಾತ್ಮಕತ್ವಾತ್ ' ಜಲಾಗ್ನಿಸ್ತಂಭನಶಕ್ತಿಮತಾಂ ತತ್ಪ್ರತಿಬಂಧಕ ತ್ವಾದರ್ಶನಾತ್ ಸರ್ವಶಕ್ತಿ ವಿಶಿಷ್ಟಸ್ಯ ವಶೀಕೃತಮಾಯಾಶಕ್ತೇಃ ಕಿಮುವಕ್ತವ್ಯಂ' ಜಲಸ್ತಂಭನ, ಅಗ್ನಿಸ್ತಂಭನ ಶಕ್ತಿ ಪಡೆದವರ ಮಹಿಮೆಯೇ ಅಸಾಧ್ಯವಿರುವಾಗ ಸರ್ವ ಶಕ್ತನಾದ ಪರಮೇಶ್ವರ ವಿಷಯದಲ್ಲಿ ಹೇಳುವದೇನು?' ಎಂದಿದ್ದಾರೆ. ಮೇಲಾಗಿ ಶ್ರೀಪತಿ ಪಂಡಿತರು ಬನ್ನಿಯ ಮರಕ್ಕೆ ಅಗ್ನಿಯನ್ನು ಚೀನಾಂಬರದಲ್ಲಿ ಕಟ್ಟುವುದಕ್ಕೆ ಕಾರಣವಾದ ಪ್ರಸಾದ ಮಹತ್ವದ ಪ್ರತಿಜ್ಞೆಯ ವಿಷಯದಲ್ಲಿ ಪ್ರಕೃತ ಶ್ರೀಕರಭಾಷ್ಯದಲ್ಲಿ

* (ಶ್ರೀಕರಭಾಷ್ಯ ವಿಮರ್ಶೆ ಮತ್ತು "ಭಾರತೀಯ ಸಂಸ್ಕೃತಿ" ಪು. ೧೯೬. ಮೈಸೂರು ವಿಶ್ವವಿದ್ಯಾಲಯ ಪ್ರಕಟನೆ)

❖ The Date of Srikara Bhashya: by Dr. S. Srikantha Sastry M. A., D. L. T., Annuals of the Bhandarkar Oriental Research vol. XIX, Part II Page 158 (1958)

"ಸರ್ವತ್ರ ಪ್ರಸಿಧ್ಯಧಿಕರಣ"ದಲ್ಲಿ ಪು. ೧೧೯-೧೧೧ಳ ವರೆಗೆ ವಿಸ್ತಾರವಾದ ಸಮರ್ಥನೆಯು ವೇದಾಗಮೋಪನಿಷತ್ತುಗಳ ಆಧಾರದ ಮೇಲೆ ಸ್ಥಾಪಿಸಿ ಮುಂದಿನ ಸೂತ್ರದಲ್ಲಿಯೇ ಅಗ್ನಿಸ್ತಂಭನವನ್ನು ಪ್ರಸ್ತಾಪಿಸಲಾಗಿದೆ. ಇದೆಲ್ಲವನ್ನೂ ಸಾವಧಾನವಾಗಿ ವಿಮರ್ಶಿಸಿದಲ್ಲಿ ಪಂಡಿತತ್ರಯೋಕ್ತರಾದ ಶ್ರೀಪತಿ ಪಂಡಿತರು ಮತ್ತು ಶ್ರೀಕರಭಾಷ್ಯ ಕರ್ತೃತ್ವಾದಿಗಳಿಗೆ ಪ್ರರಸ್ಪರ ಸಂಬಂಧವು ವ್ಯಕ್ತವಾಗುತ್ತದೆ.

ಶ್ರೀಕರಭಾಷ್ಯದ ವಿಷಯದಲ್ಲಿ ಹೊರಬರುವ ಶಿವಸುತರು ಮತ್ತು ಶ್ರೀ ಪಾವಟೆಯವರ ವಾದವು ಗುರುವಿರಕ್ತ ಸ್ಪರ್ಧೆಯ ಪರ್ವಕಾಲದಲ್ಲಿ ಉದಿಸಿದ ಉದ್ರಿಕ್ತಾವಸ್ಥೆಗೆ ಸಂಬಂಧಿಸಿರುವುದರಿಂದಲೂ, ಭಾಷ್ಯದಲ್ಲಿ ಬರುವ ಕೆಲವು ವಿಷಯಗಳು ಬಸವಯುಗದ ತರುವಾಯದ ಭಾವನೆಗಳಿಗೆ ವಿಭಿನ್ನವೆಂಬುದೂ ವಿಚಾರಣೀಯವಾದವುಗಳು, ಸಮಾಧಾನಸಾಧ್ಯಗಳು. ಇನ್ನು ೫೫-೬೦ ವರ್ಷಗಳ ಹಿಂದೆ ಸಿಕಂದರಾಬಾದಿನಲ್ಲಿದ್ದ ಪಂಡಿತ ಸ್ವಾಮಿ ಎಂಬುವರಿಂದ ಭಾಷ್ಯ ರಚಿತವಾಗಿತ್ತೆಂಬ ವಾದವೂ ಸಹ ವಿಮರ್ಶಾನರ್ಹವೆಂದೇ ಹೇಳಬೇಕಾಗುತ್ತದೆ. ಈ ವಾದ ಸಮರ್ಥನೆಗೆ ಸಾಕಷ್ಟು ಪರಿಪುಷ್ಟಿ ಸಾಲದು. ಆದುದರಿಂದ ವೀರಶೈವ ಸಿದ್ಧಾಂತ ಸಮರ್ಪಕವಾದ ಸಹಸ್ರಾರು ವಿಷಯಗಳಿಂದ ಕೂಡಿ ಈ ಭಾಷ್ಯವನ್ನು ಒಂದೆರಡು ಭಿನ್ನಾಭಿಪ್ರಾಯಗಳಿಗಾಗಿ ಕಡೆಗಣಿಸುವುದು ವಿವೇಕವೆನಿಸದು.

## ೩. ಮಲ್ಲಿಕಾರ್ಜುನ ಪಂಡಿತಾರಾಧ್ಯ (ಸು. ೧೧೬೦)

ವೀರಶೈವ ಪಂಡಿತತ್ರಯದಲ್ಲಿ ಉಕ್ತರಾಗಿರುವ ಮಲ್ಲಿಕಾರ್ಜುನ ಪಂಡಿತಾರಾಧ್ಯರು ಶ್ರೀಶೈಲ ಪೀಠಾಧೀಶ್ವರರಾಗಿದ್ದರೆಂಬ ಮಾತು ಸಹ ಭ್ರಾಂತಿಜನ್ಯವೆಂದೇ ಹೇಳಬೇಕಾಗುತ್ತದೆ. ಗುರುರಾಜ (ಸು. ೧೪೩೦)ನ ಸಂಸ್ಕೃತ ಪಂಡಿತ ಚಾರಿತ್ರ, ನೀಲಕಂಠಾಚಾರ್ಯನ (ಸು. ೧೪೮೫) ಆರಾಧ್ಯಚಾರಿತ್ರ, ಸಿದ್ಧನಂಜೇಶನ (ಸು. ೧೬೫೦) ಗುರುರಾಜ ಚಾರಿತ್ರಗಳಲ್ಲಿ ಉಕ್ತರಾಗಿರುವ ಮಲ್ಲಿಕಾರ್ಜುನ ಪಂಡಿತಾರಾಧ್ಯರು ಶ್ರೀಶೈಲ ಮಲ್ಲಿಕಾರ್ಜುನನ ವರಪ್ರಸಾದದಿಂದ ಭೀಮನ ಪಂಡಿತ ಮತ್ತು ಗೌರಾಂಬೆಯರಿಗೆ ಜನಿಸಿದವರು. ಗುರುಕೋಟಿ ಪಲ್ಲಾರಾಧ್ಯ, ಶಿಷ್ಯ ದೋನಮಾರ್ಯ.

ಮಲ್ಲಿಕಾರ್ಜನ ಪಂಡಿತಾರಾಧ್ಯನು ವೆಲನಾಡು ಚೋಳನ ಆಸ್ಥಾನದ ಪರವಾದಿಗಳನ್ನು ಜೈಸಿ ವೀರಶೈವ ಮತ ಸ್ಥಾಪಿಸಿದನು. ಚೋಳನು ಇವನ ಕಣ್ಣು ಕೀಳಿಸಲು ಅಮರಾರಾಮಕ್ಕೆ ಬಂದು ಗಣಸಹಸ್ರ ಪಠಿಸಿ ಊರ್ಧ್ವನೇತ್ರ ಪಡೆದನು. ಈತನು ಶ್ರೀಶೈಲವನ್ನು ಜೀವನದಲ್ಲಿಯೇ ಕಂಡರಿಯನು. ತನ್ನ ಅವಸಾನ ಕಾಲದಲ್ಲಿ ಶ್ರೀಶೈಲಕ್ಕೆ ಹೊರಟು, ಅಶಕ್ತನಾಗಿ ಶಿಷ್ಯ ದೋನಮಾರ್ಯನನ್ನು ಶ್ರೀಶೈಲಕ್ಕೆ ಕಳುಹಿಸಿದನು. ಆತನು ಹಿಂದಿರುಗಿ ಬಂದು ಶ್ರೀಶೈಲದ ವರ್ಣನೆ ಮಾಡುತ್ತಿರುವಾಗ ವೆಲ್ಲಟೂರು ಎಂಬಲ್ಲಿ ಶಿವೈಕ್ಯನಾದನು. ಮಲ್ಲಿಕಾರ್ಜುನ ಪಂಡಿತಾರಾಧ್ಯರ ವಿಷಯದಲ್ಲಿ ಪಾಲ್ಕು

ರಿಕೆ ಸೋಮನಾಥನು ಆಂಧ್ರದಲ್ಲಿ ಮಹತ್ವ ಗ್ರಂಥವನ್ನೇ ಬರೆದಿದ್ದಾನೆ. ಆದರೆ ಅವರಲ್ಲೆಲ್ಲಿಯೂ ಈ ಪಂಡಿತಾರಾಧ್ಯರು ಶ್ರೀಶೈಲ ಪೀಠಾರೋಹಣ ಮಾಡಿದಂತೆ ಉಲ್ಲೇಖವಿಲ್ಲ. ಕೇವಲ ನಾಮಸಾದೃಶ್ಯದಿಂದ ಕೆಲವರು ಕವಿಗಳು ಕೆಲವು ಕಾಲದಿಂದ ಈ ಪಂಡಿತಾರಾಧ್ಯರೇ ಶ್ರೀಶೈಲ ಪಂಡಿತಾರಾಧ್ಯರೆಂದು ಹೇಳುತ್ತಾ ಬಂದಿದ್ದಾರೆ ಈ ವಿಷಯದಲ್ಲಿ ನಾವು ಪ್ರಕಟಿಸಿರುವ ಪುಲ್ಲಕವಿಯ ಶ್ರೀಶೈಲ ಪಂಡಿತಾರಾಧ್ಯ ಚರಿತ್ರೆ ಮತ್ತು ಅದರ ಉಪೋದ್ಘಾತ -(ಪು. ೮೩-೯೩)ದಲ್ಲಿ ಈ ವಿಚಾರವು ವಿಸ್ತಾರವಾಗಿ ವಿಮರ್ಶಿಸಲಾಗಿದೆ. ಜಿಜ್ಞಾಸುಗಳು ಅವುಗಳನ್ನು ಅವಲೋಕಿಸಬೇಕಾಗಿ ವಿನಂತಿ.

## ಸ್ವಪ್ರಭಾನಂದ ಶಿವಾಚಾರ್ಯರು (ಸು. ೧೧೯೦)

ಇವರು ಕಾಶ್ಮೀರ ನಿವಾಸಿಗಳೆಂದು ತೋರುತ್ತದೆ. ಇವರ ಗುರು 'ನಾಥಾ ನಂದ' ಯತೀಂದ್ರರು. (ಕಾಶ್ಮೀರ ಶೈವಸಿದ್ಧಾಂತದ 'ಶಿವದೃಷ್ಟಿ' ಗ್ರಂಥಕರ್ತೃ 'ಸೋಮಾನಂದ' ಮುಂತಾದವರ ಹೆಸರುಗಳನ್ನು ಇಲ್ಲಿ ಸ್ಮರಿಸಬಹುದು. ಹೆಸರು ಗಳ ಕಡೆಗೆ 'ಆನಂದ' ಎಂಬ ಉಪನಾಮವನ್ನು ಸೇರಿಸುವ ಪದ್ಧತಿ ಕಾಶ್ಮೀರದಲ್ಲಿದ್ದಂತೆ ತಿಳಿದುಬರುತ್ತದೆ.

ಕಾಶ್ಮೀರದಲ್ಲಿ ಹಿಂದಿನಿಂದಲೂ ಶೈವವೀರಶೈವ ಸಂಸ್ಕೃತಿಗಳು ನೆಲಸಿದ್ದುದಕ್ಕೆ ಆಧಾರಗಳಿವೆ. ಕ್ರಿ. ಶ. ಎಂಟನೆಯ ಶತಮಾನದಿಂದ ೧೨ರ ವರಗೆ ಅಲ್ಲಿ ವೀರಶೈವ ಸಂಸ್ಕೃತಿ ನೆಲಸಿತ್ತು ಹನ್ನೆರಡನೆಯ ಶತಮಾನದಲ್ಲಿ ಕಾಶ್ಮೀರದ ಮಾಂಡವ್ಯಪುರದ ಲಿಂಗವಂತ ಮಹದೇವರಾಜ ಹೆಂಡತಿ ಗಂಗಾಂಬಿಕೆ ತಂಗಿ ನಿಜದೇವಿಯರೊಂದಿಗೆ ಕಲ್ಯಾಣಕ್ಕೆ ಆಗಮಿಸಿದರೆಂತಲೂ, ಮಾಂಡವ್ಯಪುರ ರಾಜಪಟ್ಟಣವನ್ನು ಮಗ 'ಲಿಂಗಾರತಿ'ಗೆ ಕೊಟ್ಟರೆಂದೂ ಹೇಳಲಾಗಿದೆ. ಇವರು ಬಸವಣ್ಣನವರ ಅನುಭವ ಮಂಟಪದಲ್ಲಿ ಮೋಳಿಗೆ ಮಾರಯ್ಯ ಮಹದೇವಿ ಮತ್ತು ಬೊಂತಾದೇವಿ ಎಂಬ ಹೆಸರು ಗಳಿಂದ ಇದ್ದ ಅಂಶ ಪ್ರಸಿದ್ಧವೇ ಇದೆ. ಅಂದಮೇಲೆ ಕಾಶ್ಮೀರದಲ್ಲಿ ಶಿವಾಚಾರ್ಯ ಪದವಿಯಲ್ಲಿದ್ದವರಲ್ಲಿ ಸ್ವಪ್ರಭಾನಂದರೂ ಒಬ್ಬರೆಂದು ತೋರುತ್ತದೆ. ಇವರು ರಚಿ ಸಿರುವ 'ಶಿವಾದ್ವೈತ ಮಂಜರಿ'ಯು ಪ್ರೌಢವಾದ ಸಿದ್ಧಾಂತ ಗ್ರಂಥ.

ಶಿವಾದ್ವೈತ ಮಂಜರಿಯು ಮೂರು ಭಾಗವಾಗಿ ವಿಂಗಡಿಸಲ್ಪಟ್ಟಿದೆ. ಮೊದಲ ನೆಯ ಮಂಜರಿಯಲ್ಲಿ ಅದ್ವೈತ ಸಿದ್ಧಾಂತವೂ, ಎರಡನೆಯ ಮಂಜರಿಯಲ್ಲಿ ಅದ್ವೈತ ವಾದ ಖಂಡನವೂ, ಮೂರರಲ್ಲಿ ವೀರಶೈವ ಸಿದ್ಧಾಂತ ಪ್ರತಿಪಾದನೆಯೂ ಹೃದ ಯಂಗಮವಾದ ಶಾಸ್ತ್ರ ಶೈಲಿಯಲ್ಲಿ ವಿಸ್ತೃತವಾಗಿದೆ. ಈ ಮಹಾ ಗ್ರಂಥಕ್ಕೆ ಮೈಸೂರಿನ ದೇವಶಿಖಾಮಣಿ ರಾಮಾನುಜಾಚಾರ್ಯರು ೧೩೩ ಪುಟಗಳಷ್ಟು ವಿಸ್ತೃತ ಕನ್ನಡ ಟೀಕೆಯನ್ನು ಬರೆದಿದ್ದಾರೆ.

## ಕೆರೆಯ ಪದ್ಮರಸ ಶಿವಾಚಾರ್ಯ (ಸು. ೧೧೮೦)

ಈತನು ಸಕಲೇಶ ಮಾದರಸನ ಮಗ ಮಾಯಿದೇವನ ಪುತ್ರ. ಬೇಲೂರಿನ ನರಸಿಂಹ ಬಲ್ಲಾಳನ ರಾಜ್ಯದಲ್ಲಿ ಮಂತ್ರಿಯಾಗಿಯೂ ದಂಡನಾಯಕನಾಗಿಯೂ ಇದ್ದನು. ಈತನು ಶಿವಾಚಾರ್ಯನೆಂಬುದು ವಿರೂಪಾಕ್ಷ ಪಂಡಿತಾರಾಧ್ಯನ ಚೆನ್ನ ಬಸವಪುರಾಣದ "ಮತ್ತೆಕೇಳಲ್ಲಿ ಪದ್ಮರಸನೆನಿಸುವ....ಪೀಠ ಶೈವಾಚಾರ್ಯನಿರಲಲ್ಲಿ" (೫೭) ಎಂಬ ಉಕ್ತಿಯಿಂದ ತಿಳಿದು ಬರುತ್ತದೆ. ಚತುಶ್ಶಾಸ್ತ್ರ ಪಂಡಿತನು ಈತನು ಕನ್ನಡದಲ್ಲಿ ದೀಕ್ಷಾ ಬೋಧೆಯನ್ನು ಸಂಸ್ಕೃತದಲ್ಲಿ "ಶಿವಾದ್ವೈತ ಸಾಕಾರಸಿದ್ಧಾಂತ, ಸಾನಂದಚಾರಿತ್ರ" ಎಂಬ ಗ್ರಂಥಗಳನ್ನು ಬರೆದಿದ್ದಾನೆ.

ಗುರುದೇವ (ಸು. ೧೩೫೦) ಈತನು ಮಲ್ಲಿಕಾರ್ಜುನ ಪಂಡಿತಾರಾಧ್ಯನ ವಂಶ ದವನು.

ಈತನು ಸಂಸ್ಕೃತದಲ್ಲಿ 'ವೀರಶೈವಾಚಾರ ಪ್ರದೀಪಿಕೆ' ಬರೆದಿದ್ದಾನೆ. ಮಹಿಮ್ನ ಸ್ತೋತ್ರ, ಮಲ್ಹಣಸ್ತೋತ್ರ, ಮಲಯರಾಜಸ್ತೋತ್ರ, ಅನಾಮಯಸ್ತೋತ್ರ, ಭೃಂಗಿಸ್ತೋತ್ರ, ಹಲಾಯುಧ ಸ್ತೋತ್ರ ಇವುಗಳಿಗೆ ಕನ್ನಡವ್ಯಾಖ್ಯಾನ ಬರೆದಿದ್ದಾನೆ.

ಕ್ರಿಯಾಸಾರ ಕರ್ತೃ ನೀಲಕಂಠ ಶಿವಾಚಾರ್ಯ (ಸು. ೧೪೦೦) ಆರಾಧ್ಯ ಚಾರಿತ್ರಕರ್ತೃ ನೀಲಕಂಠಾಚಾರ್ಯ (ಸು. ೧೪೮೫) ಇವರ ಬಗ್ಗೆ ಹಿಂದೆಯೇ ಉಲ್ಲೇಖಿಸಲಾಗಿದೆ.

ಉಮ್ಮತ್ತೂರು ರಾಜಗುರು ನೀಲಕಂಠಾರ್ಯನು ಕರ್ನಾಟ ಸಂಸ್ಕೃತ ಭಾಷೆಗಳಲ್ಲಿ ಪ್ರವೀಣನಾಗಿದ್ದನು. ಪರವಾದಿಗಳಂ ಜೈಸಿ ಅನೇಕ ಬ್ರಾಹ್ಮಣ ಜೈನಾದಿಗಳಿಗೆ ಶಿವದೀಕ್ಷೆಯಿತ್ತನು.

## ಮೊಗ್ಗೆಯ ಮಾಯಿದೇವ ಶಿವಾಚಾರ್ಯ (ಸು. ೧೪೩೦) (ಪು. ೩೭೧)

**೩ನೆಯ ನಂದಿಕೇಶ್ವರ ಶಿವಾಚಾರ್ಯನು** ಕ್ರಿ. ಶ. ಸು. ೧೯೦೦ರ ಸುಮಾರಿನಲ್ಲಿದ್ದನೆಂದು ಊಹಿಸಬಹುದು. ಏಕೆಂದರೆ ಈತನ ಲಿಂಗಧಾರಣ ಚಂದ್ರಿಕೆಯಲ್ಲಿ ಮೊಗ್ಗೆ ಮಾಯಿದೇವನ (೧೪೩೦) ಅನುಭವ ಸೂತ್ರದ ಹೆಸರು ಬರುತ್ತದೆ. ಲಿಂಗಧಾರಣ ಚಂದ್ರಿಕೆಯು ಸಂಸ್ಕೃತದ ಗ್ರಂಥಗಳಲ್ಲಿ ಶ್ರೇಷ್ಠಸ್ಥಾನವನ್ನು ಪಡೆದಿದೆ. ಇದರಲ್ಲಿ

ವೇದಾಗಮ ಪುರಾಣೇಷು ಕಾಮಿಕಾದ್ಯಾಗಮೇಷು ಚ ।
ಲಿಂಗಧಾರಣಮಾಖ್ಯಾತಂ ವೀರಶೈವಸ್ಯ ಸಿಷ್ಟಯಾತ್ ॥

ಎಂಬ ಕಾರಿಕೆಯನ್ನು ಅನುಸರಿಸಿ ವೇದ, ಆಗಮ, ಶಾಸ್ತ್ರ ಪುರಾಣಾದಿಗಳಲ್ಲಿ ಲಿಂಗಧಾರಣ ಸಿದ್ಧಾಂತವನ್ನು ಪ್ರಸ್ತಸಿರುವ ವಿಧಾನವನ್ನು ಮೀಮಾಂಸಾದಿ ಶಾಸ್ತ್ರ ಸರಣಿಯಲ್ಲಿ ಪ್ರತಿಪಾದಿಸಲಾಗಿದೆ.

## ನೀಲಕಂಠಾರಾಧ್ಯ (ಸು. ೧೫೦೦)

ಪರಗುರು ಚರ ಚರಣಸೇವಾಧುರಂಧರನಪ್ಪ, ಪರಮತವೇಶ್ಯಾ ಭುಜಂಗ, ಸತ್ಕವಿ ನೀಲಕಂಠಾರಾಧ್ಯನು 'ಪರವಾದಿ ಗಜಾಂಕುಶ ತಾರಾವಳಿ' ಎಂಬ ಗ್ರಂಥ ಬರೆದಿದ್ದಾನೆ. ಸುಮಾರು ೨೭ ನಕ್ಷತ್ರ ಸಂಖ್ಯೆಯಲ್ಲಿ ಶಿವಾಧಿಕ್ಯ, ವೀರಶೈವ ವೈಶಿಷ್ಟ್ಯ ಮುಂತಾದ ವಾದಗಳನ್ನು ವೇದಾಗಮ ಪುರಾಣ ವಾಕ್ಯಗಳಿಂದ ಸಮರ್ಥಿಸಿದ್ದಾನೆ.

## ನಿಟ್ಟೂರು ನಂಜಣಾಚಾರ್ಯ (ಸು. ೧೫೦೦) (ಪು ೩೨೭)

## ಉಜ್ಜನೇಶ (ಸು. ೧೫೫೦)

ಈತನು ಗೋರಕೊಂಡ ಮಲ್ಲಿಕಾರ್ಜುನಾಚಾರ್ಯನ ಶಿಷ್ಯ. ಈತನು ಸಿದ್ಧಾಂತ ಶಿಖಾಮಣಿ ಮತ್ತು ವಿಶೇಷಾರ್ಥ ಪ್ರಕಾಶಿಕೆಗಳಿಗೆ ಕನ್ನಡದಲ್ಲಿ ಟೀಕೆ ಬರೆದಿದ್ದಾನೆ. ಈತನಿಗೆ ಷಟಸ್ಥಲ ಬ್ರಹ್ಮಜ್ಞಾನ ಶಿವಸಿದ್ಧಾಂತ ಶಿಕ್ಷಾಚಾರ್ಯ ಎಂಬ ಬಿರುದಿದೆ.

## ಗೂಳೂರು ಸಂಪಾದನೆಯ ಸಿದ್ಧವೀರಣಾಚಾರ್ಯ (ಸು. ೧೬೦೦)

ಈತನಿಗೆ 'ವೀರಶೈವ ಷಟ್‌ಸ್ಥಲ ಮಾರ್ಗಸ್ಥಾಪನಾಗ್ರಗಣ್ಯ' ಎಂಬ ಬಿರುದಿದೆ. ಗುರುವಿಳಮಲೆಯ ಗುರುಶಾಂತದೇವ (ಸು. ೧೫೭೫) ಈತನು ಕನ್ನಡದಲ್ಲಿ ಆಚರಣೆಯ ಸಂಬಂಧವಚನ, ಲಿಂಗಸ್ತೋತ್ರದ ವಚನ, ಮಿಶ್ರಸ್ತೋತ್ರ, ಸರ್ವಜ್ಞಮೂರ್ತಿಯ ತ್ರಿಪದಿ ಶೂನ್ಯಸಂಪಾದನೆ ಎಂಬ ಗ್ರಂಥಗಳನ್ನು ಸಂಸ್ಕೃತದಲ್ಲಿ 'ಅನಾದಿ ವೀರಶೈವಾಚಾರ ಸಂಗ್ರಹ' ಎಂಬ ಗ್ರಂಥವನ್ನು ಬರೆದಿದ್ದಾನೆ. ಇದು ಸೊಲ್ಲಾಪುರದ ವಾರದ ಗ್ರಂಥಮಾಲೆಯಲ್ಲಿ ಪ್ರಕಟವಾಗಿದೆ.

## ಸೋಸಲೆ ರೇವಣಾರಾಧ್ಯ (ಸು. ೧೬೨೪)

ಈತನಿಗೆ 'ಶಿವಯೋಗ ಶಿವಾದ್ವೈತ ಸತ್ವದ ಪ್ರತಿಷ್ಠಾಪನಾಚಾರ್ಯವರ್ಯ' ಎಂಬ ಬಿರುದಿದೆ ರೇಣುಕಾಚಾರ್ಯ ವಂಶೋದ್ಭವ ವಿಶ್ವನಾಥ, ನಾರಾಯಣಶೇಶ, ಸರ್ವೇಶ್ವರ ವೀರಣ, ರೇವಣಾರ್ಯ, ಅವರ ಮಗ ರೇವಣಾರಾಧ್ಯ.

ಈತನು ಮಹಿಮ್ನಸ್ತವ (ಟೀಕೆ) (೧) ಸಂಸ್ಕೃತದಲ್ಲಿ 'ವೀರಶೈವ ಸಿದ್ಧಾಂತ ಶಿಖಾಮಣಿ' (೨) 'ಶಿವಾಧಿಕ್ಯ ಶಿಖಾಮಣಿ'ಗಳನ್ನು (ಚೋಳ ರೇಣುಕ ಸಂವಾದ) (೩) ಸದ್ಗುರುರಗಳೆ (೪) ಕನ್ನಡ ವ್ಯಾಖ್ಯಾನವನ್ನು ಶಾರೀರಕ ಪ್ರಕಾಶಿಕೆ (೫) ಅಂತಃಕರಣ ಪ್ರಕಾಶಿಕೆ (೬) ಸ್ವಸ್ವರೂಪ ಪ್ರಕಾಶಿಕೆ (೭) ಪರಮಾತ್ಮ ಪ್ರಕಾಶಿಕೆ (೮) ನಿಜ ದೀಪ್ತಿ ಪ್ರಕಾಶಿಕೆ (೯) ರುದ್ರಭಾರತ ಟೀಕೆ (೧೦)ಗಳನ್ನು ಬರೆದಂತೆ ತೋರುತ್ತದೆ.

ಮಹಿಮ್ನಸ್ತವ ಟೀಕೆಯು ಚಿಕ್ಕನಾಯಕಪುರದರಸ ಮುದಿನಾಯಕನ ಪ್ರಾರ್ಥನೆಯಂತೆಯೂ, ಸಿದ್ಧಾಂತ ಶಿಖಾಮಣಿಯು ಸಿದ್ಧವೃಷಭೇಶ್ವರನ ಆಜ್ಞಾನುಸಾರ

ವಾಗಿಯೂ, ಶಿವಾಧಿಕ್ಯ ಶಿಖಾಮಣಿಯನ್ನು ಸುತ್ತೂರು ಸಿದ್ಧನಂಜಾರ್ಯನ ಶಿಷ್ಯ ಚೆನ್ನ ಬಸವ ಮತ್ತು ಮುದಿಗೆರೆ ರಾಘವಪ್ಪನಾಯಕರ ಸೂಚನೆಯಂತೆಯೂ ಬರೆದಂತೆ ಕಾಣುತ್ತದೆ.

### ಸಿದ್ಧನಂಜ ಯತಿ (ಸು. ೧೬೨೩)

ಈತನು ಸುತ್ತೂರು (ನಮಸ್ಕಾರಪುರಿ)ಸಿಂಹಾಸನದ ಶಿವಶಂಕಾರ ದೇವರ ಶಿಷ್ಯ. ಸೋಸಲೆ ರೇವಣಾರಾಧ್ಯನ ಶಿವಾಧಿಕ್ಯ ಶಿಖಾಮಣಿಯ ಕನ್ನಡ ಟೀಕೆ. ಇದನ್ನು ಕಳಲೆ ಕೆಂಪ ನಂಜಾರ್ಯನ ಪ್ರಾರ್ಥನೆ ಮೇರೆಗೆ ಬರೆದನು. 'ಪರಮ ಶಿವಾಧಿಕ್ಯ ಚೂಡಾಮಣಿ' (ಸಂಸ್ಕೃತ).

### ವೀರಣಾರಾಧ್ಯ (೧೬೫೦)

ತಂದೆ ವಿಶ್ವನಾಥಾಚಾರ್ಯ ರಚಿಸಿರುವ ದಶಗ್ರಂಥಿಗ್ರಂಥಕ್ಕೆ ಕನ್ನಡ ವ್ಯಾಖ್ಯಾನ ಬರೆದಿದ್ದಾನೆ. ಗ್ರಂಥದ ಹೆಸರು 'ಶಿವಜ್ಞಾನ ಪ್ರದೀಪಿಕೆ. ಶೈವಾಗಮ ಶಾಖೆಗಳ ಮೇಲೆ ಪರಿಣಾಮಕಾರಕವಾದ ಪ್ರಭಾವವನ್ನು ಬೀರಿರುವ ಗ್ರಂಥ.

### ಷಡಕ್ಷರದೇವ (೧೬೫೫) (ಪು. ೩೭೨)

### ಆಧುನಿಕ ಶಿವಾಚಾರ್ಯರು

ನೀಲಕಂಠ ಶಿವಾಚಾರ್ಯರು (ಹೂಲಿ) (ಪು. ೩೭೩)

ಶಂಭುಲಿಂಗ ಶಿವಾಚಾರ್ಯರು. ಇವರು (ವಿಜಾಪುರದ) ಹಿರಿಯ ಮಠಾಧ್ಯಕ್ಷರು. 'ವಿದ್ಯಾವಾಚಸ್ಪತಿ' ಎಂಬ ಬಿರುದಿದೆ. ಅಷ್ಟಾವರಣ ವಿವೇಕ, ಆಗಮ ಪರಿಜ್ಞಾನ, ವೈದಿಕ ವಾಙ್ಮಯ ರಹಸ್ಯ ಮುಂತಾದ ಗ್ರಂಥಗಳನ್ನು ಬರೆದಿದ್ದಾರೆ.

ವೀರಭದ್ರ ಶಿವಾಚಾರ್ಯರು (ಕಾಶಿ ಸಿಂಹಾಸನಾಧ್ಯಕ್ಷರು) ಗ್ರಂಥಗಳು, ಶಿವ ಪಂಚಸ್ತವಿ, ಚತುಸ್ಸೂತ್ರೀ ಮುಂತಾದ ಸಂಪಾದಿತ ಗ್ರಂಥಗಳು.

ಸ್ವಾಮಿ ವಿರೂಪಾಕ್ಷ ಒಡೆಯರು, ಚೌಡದಾನಪುರ ಪೀಠಾಧ್ಯಕ್ಷರು. ಗ್ರಂಥ ಗಳು, ತತ್ತ್ವಬೋಧ, ಭಗವದ್ಗೀತೆಗಳಿಗೆ ಶಿವಾದ್ವೈತ ಪರ ಟೀಕೆ ಬರೆದಿದ್ದಾರೆ.

ಸದಾಶಿವ ಶಿವಾಚಾರ್ಯರು-ಸಖರಾಯಪಟ್ಟಣ. ಗ್ರಂಥಗಳು :- ಕೈವಲ್ಯೋಪನಿಷತ್, ಸಾದಾಶಿವ ಭಾಷ್ಯ ಮುಂತಾದುವು.

### ಶಿವಾಚಾರ್ಯ ಸಾಹಿತಿಗಳು (ಕನ್ನಡ)

ಕನ್ನಡದಲ್ಲಿ ಶಿವಾಚಾರ್ಯ ಸಾಹಿತಿಗಳನ್ನು ಸಂಗ್ರಹಿಸುವಾಗ ಶ್ರೀಶೈಲ ಪೀಠದ ಚಂದ್ರಗುಂಡ ದೇಶಿಕೇಂದ್ರ ಶಿವಾಚಾರ್ಯರ ಶಿಷ್ಯ ದೇವರದಾಸಿಮಾರ್ಯರ ಆಚಾರ್ಯತ್ವದ ವಿಚಾರವಾಗಿ ಹಿಂದೆಯೇ ಸೂಚಿಸಲಾಗಿದೆ. ಅವರ ಕನ್ನಡ ವಚನಗಳು 'ರಾಮ

ನಾಥಾ' ಎಂಬ ಅಂಕಿತದಿಂದ ಕೂಡಿವೆ. ಈ ವಿಷಯದಲ್ಲಿ ನಾವು ಈ ಹಿಂದೆಯೇ ಪ್ರಕಟಿಸಿರುವ 'ದೇವರದಾಸಿಮಾರ್ಯ ಪ್ರಶಸ್ತಿ'ಯು ಅವಲೋಕನೀಯ.

## ಹರಿಹರದೇವ (ಸು. ೧೧೮೦-೧೨೨೦)

ಸರಸಕವಿ ಸಾರ್ವಭೌಮ, ಕರ್ಣಾಟಕಕಾವ್ಯ ಲಕ್ಷಣ ದೀಕ್ಷಾಚಾರ್ಯ ಮುಂತಾದ ಬಿರುದು ಗಳಿಸಿರುವ ಹರಿಹರದೇವನು ಕನ್ನಡ ಕವಿ ಶೇಖರನಾಗಿದ್ದಾನೆ. ತಂದೆ ಪಂಪಾಕ್ಷೇತ್ರದ ಶಂಕರಾಚಾರ್ಯ, ಮಗ ಮಾದರಸ, ತಾಯಿ-ಶರ್ವಾಣಿ. ಗುರು ಹಂಪೆಯ ವಾಯುದೇವಾಚಾರ್ಯರು. ೨ ನೆಯ ವೀರಬಲ್ಲಾಳ (೧೧೭೩-೧೨೨೦)ನು ಆಳ್ವಿಕೆಯಲ್ಲಿ ಹಳೆಯಬೀಡಿನಲ್ಲಿ ಕೆರೆಯ ಪದ್ಮರಸನ ಮಂತ್ರಿತ್ವವಿದ್ದಾಗ ಈತನು 'ಕರಣಿಕರ ಕುಲ ತಿಲಕ'ನಾಗಿದ್ದನು. ಈತನ ಗ್ರಂಥಗಳು-ಗಿರಿಜಾ ಕಲ್ಯಾಣ (ಚಂಪೂ) ಶಿವಗಣದ ರಗಳೆಗಳು, ಬಸವರಾಜ ದೇವರ ರಗಳೆ, ಪಂಪಾಶತಕ, ರಕ್ಷಾಶತಕ, ಶಿವಾ ಕ್ಷರ ಮಾಲೆ, ಮುಡಿಗೆಯ ಅಷ್ಟಕ.

## ರಾಘವಾಂಕ ಸು. ೧೧೮೦

ಉಭಯ ಕವಿ ಕಮಲ ರವಿ, ಉಭಯ ಕವಿ ಶರಭ ಭೇರುಂಡ ಮುಂತಾದ ಬಿರುದಾಂಕಿತ ರಾಘವಾಂಕನು ಕುಂತಳದೇಶದ ಹಂಪೆಯಲ್ಲಿ ಜನ್ಮಾಧಾರಣ ಮಾಡಿ ದನು. ತಂದೆ-ಮಹಾದೇವ ಭಟ್ಟ, ತಾಯಿ-ರುದ್ರಾಣಿ, ಗುರು-ಈತನ ಸೋದರ ಮಾವ ಹಂಪೆಯ ಹರೀಶ್ವರ. ಷಟ್ಪದಿಕಾವ್ಯಗಳ ಜನಕನೆಂದು ಹೆಸರಾಂತ-ಈತನ ಗ್ರಂಥಗಳು-ಹರಿಶ್ಚಂದ್ರ ಕಾವ್ಯ, ಸೋಮನಾಥ ಚರಿತ್ರೆ, ಸಿದ್ಧರಾಮೇಶ್ವರ ಪುರಾಣ, ವೀರೇಶ ಚರಿತ್ರೆ, ಶರಭಚಾರಿತ್ರ, ಹರಿಹರ ಮಹತ್ವ ಇವುಗಳು. ಹಳೆಯಬೀಡಿನ ೨ ನೆಯ ವೀರಬಲ್ಲಾಳನ ಮಂತ್ರಿ ಕೆರೆಯ ಪದ್ಮರಸನನ್ನು ನೋಡುವುದಕ್ಕೆ ಹೋಗಿ ಬೇಲೂರಿನಲ್ಲಿ ಲಿಂಗೈಕ್ಯನಾದನು. ಇಂದಿಗೂ ಬೇಲೂರಿನಲ್ಲಿ ರಾಘವಾಂಕ ಸಮಾಧಿ ಯನ್ನು ನಾವು ನೋಡಬಹುದು.

ಗುರು ಪರಂಪರೆಗೆ ಸೇರಿದ ಪದ್ಮರಸ (ಸು. ೧೧೮೦)ನ ಬಗ್ಗೆ ಹಿಂದೆಯೇ ಉಲ್ಲೇಖಿಸಲಾಗಿದೆ.

ಕುಮಾರ ಪದ್ಮರಸನು, (ಸು. ೧೧೯೦) ಕೆರೆಯ ಪದ್ಮರಸರ ಪುತ್ರ. ತಾಯಿ- ಮಾದೇವಿ. ಗ್ರಂಥ ಸಾನಂದ ಚರಿತ್ರೆ.

## ಪದ್ಮಣಾಂಕ (ಸು. ೧೩೮೫)

ವೀರಶೈವಾಚಾರ್ಯ ಕವಿಗಳಲ್ಲಿ ಸೇರಿದವನು. ಉಭಯ ಕವಿ ಎಂಬ ಬಿರುದಿದೆ. ಈತನ ವಂಶ ಹೀಗಿದೆ-ಶಿವಯೋಗಿ ಮಲ್ಲರಸ, ಮಗ ಸಕಳೇಶ ಮಾದರಸ, ಮಗ ಮಾಯಿದೇವ, ಕೆರೆಯ ಪದ್ಮರಸ, ಕುಮಾರ ಪದ್ಮರಸ, ವಿಶ್ವಾರಾಧ್ಯ, ದೇವಾರಾಧ್ಯ,

ದೇವಾರ್ಯ, ವೀರಣಾಚಾರ್ಯ, ಮಗ ಪದ್ಮಣಾರ್ಯ, ಕವಿ ಪದ್ಮಣಾಂಕ. ತನ್ನ ಪೂರ್ವಜನಾದ ಕೆರೆ ಪದ್ಮರಸನ ಚರಿತ್ರೆಯನ್ನು 'ಪದ್ಮರಾಜ ಪುರಾಣ'ವೆಂದು ಬರೆದಿದ್ದಾನೆ

## ಮಹಾಲಿಂಗದೇವ (ಸು. ೧೪೨೫)

ತ್ರಿಕಾಂಡನಿಷ್ಠ, ಪರಮವೀರಶೈವಾಗಮಾಚಾರ್ಯನೆಂದು ಪ್ರಸಿದ್ಧನಾದ ಮಹಾಲಿಂಗದೇವನ ವಂಶಕ್ರಮ ಹೀಗಿದೆ. (೧) ಸೋಮ ಶುಭಪೇಶಿಕ, ಶಿವಲೆಂಕ ಮಂಚಣ್ಣ, ಉರಿಲಿಂಗದೇವ, ಉರಿಲಿಂಗ ಪೆದ್ದಣ್ಣ. ಹೀಗೆ ಈ ವಂಶದ ೨೦ನೆಯ ಪಟ್ಟ ಭದ್ರನೇ ಮಹಲಿಂಗದೇವ, ಇವನ ಶಿಷ್ಯ [೨೧] ಕುಮಾರ ಬಂಕನಾಥ, ಅವನ ಕರಕಂಜಾತ ಜಕ್ಕಣಾರ್ಯ.

ಈ ಜಕ್ಕಣಾರ್ಯನು ಪ್ರೌಢದೇವರಾಯ [೧೪೧೯-೧೪೪೬]ನಲ್ಲಿ ದಂಡಾಧೀಶ್ವರನಾಗಿದ್ದನು. ಜಕ್ಕಣಾರ್ಯನು ರಾಯನಿಗಾಗಿ [೧] ಏಕೋತ್ತರ ಶತಸ್ಥಲ, [೨] ಪ್ರಭುದೇವರ ಷಟ್‌ಸ್ಥಲ ಜ್ಞಾನ ಚಾರಿತ್ರ ವಚನದ ಟೀಕೆ, ಎಂಬ ಗ್ರಂಥಗಳನ್ನು ಬರೆದನು.

## ಕುಮಾರ ಬಂಕನಾಥ [ಸು. ೧೪೩೦]

ಮಹಲಿಂಗದೇವನ ಶಿಷ್ಯ. ದಂಡನಾಯಕ ಜಕ್ಕಣಾರ್ಯನ ದೀಕ್ಷಾಗುರು ಈತ ಬಾಳೆಹಳ್ಳಿಯ ವೀರಸಿಂಹಾಸನಕ್ಕೆ ಸೇರಿದವನೆಂದು ತಿಳಿದು ಬಂದಿದೆ.

## ಗುರುಬಸವ [ಸು. ೧೪೩೦]

ಶಿವಾಚಾರ್ಯ ಶ್ರೇಣಿಗೆ ಸೇರಿದವರಲ್ಲಿ ಗುರುಬಸವೇಶ್ವರನು ಪ್ರಸಿದ್ಧನು. ಈತನ ಕಾವ್ಯಗಳು ಸಪ್ತಕಾವ್ಯಗಳೆಂದು ಪ್ರಸಿದ್ಧವಾಗಿವೆ. ೧ ಸದ್ಗುರು ರಹಸ್ಯ, ೨ ಮನೋವಿಜಯ, [೩] ಶಿವಯೋಗಾಂಗ ಭೂಷಣ, [೪] ಅವಧೂತಗೀತೆ, [೫] ವೃಷಭಗೀತೆ, [೬] ಸ್ವರೂಪಾಮೃತ [೭] ಕಲ್ಯಾಣೇಶ್ವರ ಕನ್ನಡ ಷಟ್ಪದಿಗಳಲ್ಲಿ ಕುಸುಮ ಭೋಗ, ಭಾಮಿನಿ, ಪರಿವರ್ಧಿನಿಗಳಲ್ಲಿ ತನ್ನ ಕಾವ್ಯಗಳನ್ನು ಬರೆದಿರುವುದು ಈತನ ವೈಶಿಷ್ಟ್ಯ. ಗೀತೆಗಳನ್ನು ಹಾಡುಗಳ ಧಾಟಿಯಲ್ಲಿ ರಚಿಸಿದ್ದಾನೆ. ಈತನ ಪ್ರಭಾವದ ಬಗ್ಗೆ ಬಸವ ಪುರಾಣದಲ್ಲಿ,

ಪರಮಗುರು ಬಸವೇಶನಧಿಕತರವಾದದಿಂ
ದಿರದೆ ಶಾರದೆಯ ಪೀಠವನ್ನೇರಿ ಗೆಲವಿನಿಂ
ಮರಳಿ ಬಂದಾ ಪ್ರೌಢನರಮನೆಯೊಳಿರಲೊರ್ವಯೋಗಿ ಖೇಚರಗಮನದಿಂ
ಇರಲರಸನುರೆ ಚೋದ್ಯದಿಂ ನೋಡುತಿರಲಂದು
ಗುರುಬಸವವನಿಗಿಂ ಮೇಲಕ್ಕೆ ಪೋಗಿ ಖೇ
ಚರದಲ್ಲಿ ಸಕಲರಾಗಗಳಂ ಪಾಡಿ ಬಳಿಕಿರದೆ ನಿರವಯವಪ್ಪನು

ಎಂಬ ಈ ಪದ್ಯದಿಂದ ಗುರುಬಸವೇಶ್ವರನ ಯೋಗಶಕ್ತಿ, ಶಿವಯೋಗಗಳ ವೈಶಿಷ್ಟ್ಯವು ವ್ಯಕ್ತವಾಗುತ್ತದೆ. ಈತನ 'ಮನೋವಿಜಯ'ಕ್ಕೆ ವಿರಕ್ತ ತೋಂಟದಾರ್ಯರು 'ತಾತ್ಪರ್ಯ ಚಂದ್ರಿಕೆ' ಬರೆದಿದ್ದಾರೆ. ಶಾಸ್ತ್ರೀಯ ವಿಚಾರಗಳನ್ನು ಕಾವ್ಯರೂಪವಾಗಿ ಬರೆದಿರುವುದು ಈತನ ಅಸಾಧಾರಣ ಕವಿತಾ ಪ್ರೌಢಿಮೆಯನ್ನು ಸೂಚಿಸುತ್ತದೆ.

### ಬೊಮ್ಮರಸ (ಸು. ೧೪೫೦)

ದಿವ್ಯ ಕವೀಂದ್ರರ ಭೃತ್ಯ ಕರ್ಣಾಟಕವಿ ಬೊಮ್ಮರಸನು ಶಿವಲೆಂಕ ಮಂಚಣ್ಣನಿಂದ ೧೨ನೆಯ ತಲೆಯವನು ಗುರು ವಿಶ್ವನಾಥಾಚಾರ್ಯ. ಸೌಂದರ ಪುರಾಣವನ್ನು ಡೆಂಕಣಿಪುರದ ದೊರೆ ತಿಪ್ಪರಸನ ಬೇಡಿಕೆಯಂತೆ ಗುಮ್ಮಳಾಪುರದ ಚಿಕ್ಕವೀರಣಾಚಾರ್ಯನ ಆಜ್ಞಾನುಸಾರ ರಚಿಸಿದನಂತೆ.

### ಘನಲಿಂಗದೇವ (ಸು. ೧೪೮೦)

ಈತನು ಸುತ್ತೂರು ಪೀಠದ ಅಧಿಪತಿ. ತೋಂಟದ ಸಿದ್ಧಲಿಂಗೇಶ್ವರನ ಶಿಷ್ಯ. ವಚನಗಳನ್ನು ಬರೆದಿದ್ದಾನೆ.

### ಗಂಗಾಧರಾಚಾರ್ಯ (ಸು. ೧೪೯೦)

ಈತನು ಆರಾಧ್ಯಚಾರಿತ್ರ್ಯವನ್ನು ಬರೆದ ನೀಲಕಂಠಾಚಾರ್ಯನ ಗುರು. ನೀಲಕಂಠಾಚಾರ್ಯನು ಈತನನ್ನು ಕರ್ಣಾಟ ಸಂಸ್ಕೃತ ಭಾಷಾ ಪ್ರವೀಣನೆಂದೂ ಶಿವಾಗಮ ಬೋಧಕನೆಂದೂ ಸ್ತುತಿಸಿದ್ದಾನೆ.

### ಚತುರ್ಮುಖ ಬೊಮ್ಮರಸ (ಸು. ೧೫೦೦)

ವರ್ಣನ ಕವೀಂದ್ರ ಚತುರಾಸ್ಯ, ಕವಿಸಭಾಮಾಣಿಕ್ಯದೀಪ ಎಂಬ ಬಿರುದುಗಳನ್ನು ಧರಿಸಿದ ಬೊಮ್ಮರಸ ಕವಿ. ಕಾಶ್ಯಪ ಗೋತ್ರಜ ಮಾಯಣನ ಮಗ, ಬೋಧಾಯನ ಸೂತ್ರದವನು. ಗುರು ರೇವಣಸಿದ್ಧೇಶ್ವರ ವಂಶಜನಾದ ಬಾಲಸಿದ್ಧೇಶ್ವರ. ಈತನು ಈಶಾನ್ಯ ಶಿವಗುರು ಸಂಸ್ಕೃತದಲ್ಲಿಯೂ ಹರೀಶ್ವರನು ರಗಳೆಯಲ್ಲಿಯೂ ರಚಿಸಿದ್ದ ರೇಣುಕಚಾರಿತ್ರ್ಯವನ್ನು 'ರೇವಣಸಿದ್ಧೇಶ್ವರ ಪುರಾಣ' ಎಂದು ಷಟ್ಪದಿಯಲ್ಲಿ ಬರೆದಿದ್ದಾನೆ.

### ಗುಬ್ಬಿಯ ಮಲ್ಲಣಾರ್ಯ (ಸು. ೧೫೧೩)

ಶಿವಗಂಗೆಯ ಮೇಲಣ ಗವಿಯ ಸಿಂಹಾಸನಾಧೀಶ್ವರ ಶಾಂತ ನಂಜೇಶ್ವರನ ಶಿಷ್ಯಮಲ್ಲಣಾರ್ಯನು ಗುಬ್ಬಿಪುರನಿವಾಸಿ. ತಂದೆ ಗುರುಭಕ್ತ, ತಾಯಿ–ಸಪ್ಪೆಯಮ್ಮ ವಿದ್ಯಾಗುರು–ಸಪ್ಪೆಯಲಿಂಗಣಾಚಾರ್ಯ. ಗ್ರಂಥಗಳು: (೧) ಭಾವಚಿಂತಾರತ್ನ, (೨) ವೀರಶೈವಾಮೃತ ಮಹಾಪುರಾಣ, (೩) ಪುರಾತನ ರಗಳೆಗಳನ್ನು ಬರೆದಿದ್ದಾನೆ.

## ಕುಮಾರ ಚನ್ನಬಸವ (ಸು. ೧೫೫೦)

ಶಿವಭಕ್ತ ಕಲ್ಪದ್ರುಮ ಎಂಬ ಬಿರುದು ಪಡೆದ ಈತನು ಬಾಳೆಹಳ್ಳಿ ವೀರಸಿಂಹಾಸನಾಧಿಪನಾಗಿದ್ದನು. ರುದ್ರಮುನಿ, ಮಗ ಸಿರಿಗಿರಿಯ ಸಿಂಹಾಸನಾಧಿಪತಿ ಮುಕ್ತಿಮುನಿ, ಶಿಷ್ಯ ದಿಗಂಬರ ಮುಕ್ತಿಮುನಿ. ಈತನು ಮಲೆಯ ರಾಜ್ಯದಲ್ಲಿ ಜೈನರು ಕಿತ್ತು ಬೀಸಾಡಿದ ವೀರೇಶನನ್ನು ಪುನಃ ಪ್ರತಿಷ್ಠೆಮಾಡಿ, ಪರವಾದಿಗಳನ್ನು ಸೋಲಿಸಿ ಬಾಳೆಹಳ್ಳಿ ವೀರಸಿಂಹಾಸನಾಧಿಪತಿಯಾದನು. ಆತನ ತರುವಾಯ ಕುಮಾರ ಚನ್ನಬಸವನು ಪಟ್ಟಕ್ಕೆ ಬಂದನು. ಈತನ ಗ್ರಂಥಗಳು: ಬಸವಪುರಾಣದ ಪುರಾತನರ ಚರಿತ್ರೆ, (೨) ಸಾಸಲ ಭೈರವೇಂದ್ರ ಚರಿತೆ, ಶಂಭು ಪೂಜಾವಿಧಿ, ವಿಭೂತಿ ಮಹಿಮೆ.

## ವಿರೂಪಾಕ್ಷ ಪಂಡಿತ (ಸು. ೧೫೮೪)

ವರಕವಿ ಪ್ರವರ ಮಾನಸ ರಾಜಹಂಸ, ಸಕಲಾಗಮ ಪುರಾಣಕೋವಿದ, ಸರಸಕರ್ಣಾಟಾದಿ ಭಾಷಾವಿಶಾರದ ಎಂಬ ಬಿರುದಾಂಕಿತ ವಿರೂಪಾಕ್ಷ ಪಂಡಿತಾರಾಧ್ಯರು ೬೦೦ ಖಲಿಂದರಿಗೆ ಗುರುವಾಗಿ ಮಕ್ಕಾಕ್ಕೆ ಹೋಗಿ ಮಹಿಮೆ ತೋರಿ ಬಂದ ಮಳೆಯ ಮಲ್ಲೇಶನ ಸಂಪ್ರದಾಯಕ್ಕೆ ಸೇರಿದ ವಿದ್ಯಾನಗರಿಯ ಹಿರಿಯ ಮಠದ ಸಿದ್ಧವೀರೇಶನ ಶಿಷ್ಯರು. ಈತನ ಚೆನ್ನಬಸವ ಪುರಾಣವು ಲಲಿತ ಬಂಧುರ ಗಂಭೀರ ಶೈಲಿಯ ಮಹಾಕಾವ್ಯ. ಕನ್ನಡಕವಿ ಲಕ್ಷ್ಮೀಶ ಜೈಮಿನಿ ಭಾರತದ ಮೇಲೆ ಈ ಕಾವ್ಯದ ಪ್ರಭಾವ ಅಪಾರವಾಗಿ ಬಿದ್ದಿದೆ ಎಂದು ಪಂಡಿತರ ಅಭಿಪ್ರಾಯವಾಗಿದೆ.

## ಕಂಬಾಳ ಮಲ್ಲೇಶ (ಸು. ೧೬೦೦)

ಷಟಸ್ಥಲಾಚಾರ್ಯವರ್ಯ ಕಂಬಾಳ ಮಲ್ಲೇಶನ ಗಣವಚನ ರತ್ನಾವಳಿಯು ಪುರಾತನರ ವಚನಗಳ ಸಂಗ್ರಹ ಕೃತಿ.

## ಶಾಂತವೀರದೇಶಿಕ (ಸು. ೧೬೫೦)

ವರಕವಿ ಗಜೇಂದ್ರ ಕಂಠೀರವ, ಶಿವಕವಿ ಭೃತ್ಯ ಬಿರುದಾಂಕಿತರಾದ ಶಾಂತವೀರದೇಶಿಕೇಂದ್ರರು ಶ್ರೀ ಶೈಲಪಂಡಿತಾರಾಧ್ಯ ವಂಶೀಯರಾದ ಶಿವಲಿಂಗಾರ್ಯರ ಪುತ್ರ ವೀರೇಶಾಚಾರ್ಯ, ಮಗ ಸರಸಕವಿ ಕರ್ಣಾಟ ಚಕ್ರೇಶ್ವರ ಚನ್ನವೀರೇಶ್ವರ, ಮಗ ಕವಿ ಶಾಂತವೀರದೇಶಿಕ.

ತಂದೆ ಚನ್ನವೀರೇಶ್ವರನು ಮೈಸೂರು ಚಾಮರಾಜೇಂದ್ರ ಸಭೆಯಲ್ಲಿ ರಾಮದೀಕ್ಷಿತರನ್ನು ವಾದದಲ್ಲಿ ಸೋಲಿಸಿದನು. ಈತನ ಶಿವಲಿಂಗ ಚಾರಿತ್ರವು ತಾತ ಶಿವಲಿಂಗಾರ್ಯನ ಚರಿತ್ರೆ. ಈತನ ಗ್ರಂಥಗಳು : (೧) ಶಿವಲಿಂಗಚಾರಿತ್ರ (ಚಂಪೂ) (೨) ಶಿವಗಣಚಾರಿತ್ರ, (೩) ಇಪ್ಪತ್ತೊಂದು ನಾಂಪ್ಯ, (೪) ಸೌಂದರೇಶ್ವರ ಯಕ್ಷಗಾನ, (೫) ಶಿವಸಹಸ್ರಸಾರ ಶಿಖಾಮಣಿ ಸಂಗ್ರಹಶತಕ, (೬) ಗಿರಿಜಾದೇವಿಯ ಸಂಕೀರ್ತನ.

ಈತನು ಪೆನುಗೊಂಡೆ ರಾಜ್ಯದಲ್ಲಿಯ ಪಂಡಿತಾರಾಧ್ಯ ವಂಶೀಯನು. ಕಡೆಯಲ್ಲಿ ಶ್ರೀ ಶೈಲಪೀಠದ (ನಿಡುಮಾಮಿಡಿ) ಅಧಿಪತಿಯಾಗಿದ್ದಂತೆ ತಿಳಿದು ಬರುತ್ತದೆ.

## ಸಿದ್ಧನಂಜೇಶ (ಸು. ೧೬೫೦)

ನೀಲಗುಂದದ ಸಿಂಹಾಸನಾಧೀಶ ಪಂಚವಣ್ಣಿಗೆಯ ಅನ್ನದಾನೇಶ್ವರ ಶಿಷ್ಯ ಕುರುವತ್ತಿಪುರದ ಸಿಂಹಾಸನಾಧೀಶ ನಂಜೇಶ, ಶಿಷ್ಯ ಪೂವಲ್ಲಿ ಸಿಂಹಾಸನಾಧೀಶ ಸಿದ್ಧನಂಜೇಶ್ವರ, ಶಿಷ್ಯ ಸಂಪ್ಯಲಪುರದ ಸಿಂಹಾಸನಾಧೀಶ ಸಿದ್ಧನಂಜೇಶ.

ಈತನ ಗ್ರಂಥಗಳು : [೧] ರಾಘವಾಂಕ ಚಾರಿತ್ರ, [೨] ಗುರುರಾಜ ಚಾರಿತ್ರ, [೩] ತೋಂಟದ ಸಿದ್ಧದೇಶಿಕನ ಭಾವರತ್ನಾಭರಣ, [೪] ಬಸವ ಶತಕಗಳು.

## ರಾಚವಟ್ಟಿಯಾರಾಧ್ಯ [ಸು. ೧೬೫೦]

ಕರ್ಣಾಟಕವಿತ್ವ ಕೋವಿದನಾದ ಈತನ ಕೃಪೆಯಿಂದ ತನ್ನ ರಾಘವಾಂಕ ಚಾರಿತ್ರವು ಪೂರ್ತಿಯಾಯಿತೆಂದು ಸಿದ್ಧನಂಜೇಶನು ಹೇಳಿದ್ದಾನೆ. ಗುರು ಪಂಚವಣ್ಣಿಗೆಯ ಸಿದ್ಧನಂಜೇಶ.

## ವೀರಣಾರ್ಯ [ಸು. ೧೬೫೦]

ರೇವಣಸಿದ್ಧೇಶ್ವರ ವಂಶದ ವೀರಣಾರಾಧ್ಯ, ಮಗ ರೇಣುಕ, ಮಗ ದೇವಣಾರಾಧ್ಯ, ತಮ್ಮ ಶಾಂತೇಶ್ವರ, ಮಗ ಕವಿ ವೀರಣಾರ್ಯ. ಗ್ರಂಥಗಳ ಪ್ರಸಾದ ಚಾರಿತ್ರ, ನಂಜುಂಡೇಶ್ವರ ಪುರಾಣ.

## ಸಿದ್ಧಮಲ್ಲೇಶ ಸು. [೧೬೫೦[

ಗುರು ವೀರಭದ್ರನ ಕರಜಾತ, ಗ್ರಂಥ : ವೀರ ಸಂಗಯ್ಯನ ಚರಿತ್ರೆ.

## ಹರದನಹಳ್ಳಿಯ ನಂಜಣಾಚಾರ್ಯ [ಸು. ೧೬೫೧]

ಈತನು ತನ್ನ ಏಕೋರಾಮೇಶ್ವರ ಪುರಾಣದಲ್ಲಿ ತನ್ನ ವಂಶವನ್ನು ಸೂಚಿಸಿದ್ದಾನೆ. ಪರಮಗುರು ಸಿದ್ಧಶಾಂತೇಶ್ವರನ ಆಜ್ಞೆಯ ಪ್ರಕಾರ ನೀತಿರತ್ನಾಭರಣ ರಚಿಸಿದನಂತೆ.

## ಸಜ್ಜೆಯ ಸಿದ್ಧಲಿಂಗಾರ್ಯ [ಸು. ೧೬೬೫]

ರೇವಣಸಿದ್ಧೇಶ್ವರ ವಂಶೀಯ ಮಳೆಯ ಮಲ್ಲೇಶನ ಶಿಷ್ಯ ವಿದ್ಯಾನಗರಿಯ ಹಿರಿಮಠದ ಸಿದ್ಧವೀರನ ಶಿಷ್ಯ. ಸಿದ್ಧನಂಜೇಶನ ಕರಜಾತ ವಿದ್ಯಾಗುರು ಸಿದ್ಧರಾಮಾರಾಧ್ಯ, ಗ್ರಂಥ : ಮಳೆಯರಾಜನ ಚರಿತ್ರೆ.

## ಸಂಪಾದನೆಯ ಪರ್ವತೇಶ್ವರ (ಸು. ೧೬೯೮)

ಈತನು ಚತುರಾಚಾರ್ಯ ಪುರಾಣ ಬರೆದಿದ್ದಾನೆ. ಸಂಪಾದನೆಯ ಸಿದ್ಧವೀರೇಶ ಶಿಷ್ಯ ಚೆನ್ನಮಲ್ಲಿಕಾರ್ಜುನ. ಶಿಷ್ಯ ಪರ್ವತೇಶ್ವರ. ಈತನ ಗ್ರಂಥ : ಚತುರಾಚಾರ್ಯ ಪುರಾಣ.

## ಶಿವಸಂಗಪ್ಪ ಶಿವಾಚಾರ್ಯರು

ಇವರು ಕಪ್ಪಡಿ ಸಂಗಮದಲ್ಲಿರುವ ಸಾರಂಗಮಠಾಧೀಶರು. ಚರಚಕ್ರವರ್ತಿ, ಘನಲಿಂಗಚರಮೂರ್ತಿ, ಕಾಶೀಸಾರಂಗ ಸಿಂಹಾಸನಾಧಿಪತಿ. ಧರ್ಮಕಪ್ಪಡಿ ಕಾರಣ ಕರ್ತೃ ಗುರುಸಾರಂಗದೇವ ಶಿವಸಂಗಪ್ಪ ಎಂದು ತಾನು ಬರೆದ ಸಾರಂಗದೇವ ಚರಿತ್ರೆಯ ಕಡೆಯಲ್ಲಿ ಹೇಳಿಕೊಂಡಿದ್ದಾನೆ. ಬರಗಾಲದಲ್ಲಿ ಈತನು ಮಳೆ ಬರೆಸಿದ್ದರಿಂದ ಈತನನ್ನು ಮಳೆಯ ಮಲ್ಲೇಶ, ಮಳೆಯ ಮರುಳು ಸಿದ್ಧೇಶ್ವರನೆಂದು ಕರೆದಂತೆ ತೋರುತ್ತದೆ. ಸಾರಂಗದೇವನ ಮೂಲನಾಮ 'ಕಪಿಲಸಿದ್ಧೇಶ್ವರ' ಸಾರಂಗರಾಜನ ಭಕ್ತಿ ಬೇಡಿಕೆಯಿಂದ ಸಾರಂಗದೇವ, ಎಂಬ ಹೆಸರಾಯಿತಂತೆ. ಪುದುಚರೆಯ ಅರಸನ ಅರಿಕೆಯಂತೆ ಸಾರಂಗದೇವನು ಕುಂಭಕೋಣಕ್ಕೆ ಹೋಗಿ ಅಲ್ಲಿ ಒಂದು ಮಠ ಸ್ಥಾಪಿಸಿದನು. ಅಲ್ಲಿ ಪುದುಚರೆಯ ಅರಸನಿಗೂ ಆತನ ಮೂರು ಸಾವಿರ ಪ್ರಜೆಗಳಿಗೂ ಲಿಂಗ ದೀಕ್ಷೆ ಕರುಣಿಸಿದನು. ವಿಜಾಪುರದ ಬಾದಶಹನು ಈತನ ಶಿಷ್ಯನಾಗಿದ್ದನು ಎಂದು ಕವಿ ಹೇಳಿಕೊಂಡಿದ್ದಾನೆ.

## ಇಮ್ಮಡಿ ಶಿವರಾತ್ರೀಶ್ವರ

ಇವರು ಸುತ್ತೂರಿನ ಶಿವಾಚಾರ್ಯರು. ಇವರ ಗ್ರಂಥ 'ವೃಷಭೇಂದ್ರ ವಿಜಯ ಪುರಾಣ.'

## ಆಧುನಿಕ ಶಿವಾಚಾರ್ಯರು

ಜ|| ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯರು. ಇವರು ನಿಡುಮಾಮಿಡಿ ಶ್ರೀಶೈಲ ಸೂರ್ಯಸಿಂಹಾಸನದ ಅಧ್ಯಕ್ಷರು. ಕನ್ನಡದಲ್ಲಿ ಅನೇಕ ಕೃತಿಗಳನ್ನು ಬರೆದು ಹೆಸರುಗಳಿಸಿದ್ದಾರೆ. ಮುಖ್ಯವಾಗಿ 'ಮಣಿಕಾಂತಿ' (ಗದ್ಯ) 'ಮಣಿಮುಕುರಂ' (ಮಹಾಕಾವ್ಯ) ಎಂಬ ಗ್ರಂಥಗಳು ಶಿವಯೋಗಿ ಶಿವಾಚಾರ್ಯರ 'ಸಿದ್ಧಾಂತ ಶಿಖಾಮಣಿ'ಯ ಮೇಲೆ ಹೊರಟಿರುವ ಉದ್ಗ್ರಂಥಗಳು ಸಿದ್ಧಾಂತ ಶಿಖಾಮಣಿಯ ಮೂಲ ಕೃತಿಯನ್ನು ವಿಸ್ತಾರ ಉಪೋದ್ಘಾತಗಳೊಂದಿಗೆ ಚಿತ್ರರಿಸಿದ್ದಾರೆ. 'ಚಂದ್ರಾವತಿ' ಲಘುಕಾವ್ಯ. ಶ್ರೀಶೈಲದ ಚಂದ್ರಗುಪ್ತ ರಾಜಕುವರಿ 'ಚಂದ್ರಾವತಿ'ಯ ಭಕ್ತಿಚರಿತೆ. ಹೊನ್ನಹಕ್ಕಿ, ರನ್ನಚುಕ್ಕಿ, ಹೂಗೊನೆಗಳು ಇವರ ಕವನ ಕಲೆಗೂ, ವಚನ ಮಂಜರಿ, ವಚನಾಂಜಲಿ ವಚನ ವಲ್ಲರಿಗಳು ಇವರ ವಚನ ಶೈಲಿಗೂ ಮೇರೆಗಳು.

ಅಲ್ಲದೆ ನಾಟಕ, ಪ್ರಬಂಧ, ಚರಿತೆ ಮುಂತಾದ ಕನ್ನಡ ಸಾಹಿತ್ಯದ ನಾನಾ ಪ್ರಕಾರಗಳಲ್ಲಿ ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ಗ್ರಂಥ ರಚನೆ ಮಾಡಿದ್ದಾರೆ. ಒಟ್ಟಿನಲ್ಲಿ ವೀರಶೈವ ಆಧುನಿಕ ಸಿಂಹಾಸನಾಧಿಪತಿಗಳಲ್ಲಿ ಇಷ್ಟು ಸಾಹಿತ್ಯ ವಿಸ್ತಾರದಲ್ಲಿ ಸಂಚರಿಸಿರುವವರಲ್ಲಿ ಇವರೆ ಮೊದಲಿಗರೆಂದು ಹೇಳಬಹುದು.

## ಸದಾಶಿವ ಶಿವಾಚಾರ್ಯರು

ಇವರು ಸಖರಾಯ ಪಟ್ಟಣದ ಶ್ರೀ ಹಾಲುಸ್ವಾಮಿ ಪೀಠಾಧ್ಯಕ್ಷರು ಶ್ರೀ ಗುರು ಕುಮಾರಾಶ್ರಮವೆಂಬ ತಮ್ಮ ಗಿರಿಯಾಪುರದ ಆಶ್ರಮದಲ್ಲಿ 'ಶಿವಾದ್ವೈತ ತತ್ತ್ವ ಪ್ರಚಾರಕ ಸಮಿತಿಯನ್ನು ಸ್ಥಾಪಿಸಿ ೧೨ ವರ್ಷಗಳಿಂದ ಅಪಾರ ಸಂಸ್ಕೃತಿ ಸೇವೆಯಲ್ಲಿ ಮಗ್ನರಾಗಿದ್ದಾರೆ. ಹಾನಗಲ್ಲು ಲಿಂ. ಶ್ರೀ ಕುಮಾರಸ್ವಾಮಿಗಳವರ ತತ್ತ್ವವಿಚಾರವನ್ನು ಚಾಚೂ ತಪ್ಪದೆ ನಡೆನುಡಿಗಳಲ್ಲಿ ಆಚರಿಸುತ್ತಿರುವರಲ್ಲಿ ಇವರೇ ಮೊದಲಿಗರು. 'ಅವಸ್ಥಾತ್ರಯಂಗಳಂ ಗೆದ್ದವನೇ ನಿಜಕ್ಕೂ ಜಗದ್ಗುರುವಕ್ಕುಂ' ಎಂಬ ನಿಜಗುಣ ಶಿವಯೋಗಿಗಳ ಉಕ್ತಿಯನ್ನು ನಿಜಕ್ಕೂ ಸಾರ್ಥಕಪಡಿಸಿಕೊಂಡಿದ್ದಾರೆ.

ಇವರು ಕನ್ನಡದಲ್ಲಿ ಕುಮಾರೇಶ್ವರ ವಚನ, ಅನುಭವ ವೈಖರಿ, ಕುಮಾರೇಶ್ವರ ರಗಳೆ, ವೀರಶೈವ ಸಂಸ್ಕೃತಿ ಮುಂತಾದ ಗ್ರಂಥಗಳನ್ನು ಸಂಸ್ಕೃತದಲ್ಲಿ ಕೈವಲ್ಯೋಪನಿಷತ್ ಸಾದಾಶಿವಭಾಷ್ಯ, ವೀರಶೈವ ಶಿವಪೂಜಾವಿಧಿ, ದೀಕ್ಷಾವಿಧಿ ಮತ್ತು ಅನುಗ್ರಹ ವಿಧಿಗಳನ್ನು ಬರೆದಿದ್ದಾರೆ.

## ಶಿವರಾತ್ರೀಶ್ವರ ಶಿವಾಚಾರ್ಯರು

ಇವರು ಮೈಸೂರು ಜಿಲ್ಲೆಯ ಸುತ್ತೂರು ವೀರಸಿಂಹಾಸನಾಧಿಪತಿಗಳು. ಶಿಕ್ಷಣ ಪ್ರಪಂಚದಲ್ಲಿ ಇವರ ಸೇವೆ ಅಪಾರ. ಇವರ ಶಿವಪಂಚಾಕ್ಷರೀ ಮಂತ್ರ ಮಹಿಮೆ. ಇವರ ಅನುಷ್ಠಾನಕ್ಕೆ ಹೆಗ್ಗುರುತು.

## ಪಟ್ಟಾಧ್ಯಕ್ಷ ಶಿವಕುಮಾರ ಶಿವಾಚಾರ್ಯರು

ಇವರು ಬೆಂಗಳೂರಿನ ಕೊಟ್ಟಿಗೆ ಗಲ್ಲಿಯಲ್ಲಿ ಮಠಾಧೀಶರು. ಆರೋಗ್ಯ ದರ್ಪಣ ಎಂಬ ಅಮೋಘ ಗ್ರಂಥ ರಚನೆ ಮಾಡಿದ್ದಾರೆ. ಇವರು ಮೈಸೂರು ಅರಮನೆಯ ಆಸ್ಥಾನ ವಿದ್ವಾಂಸರು.

## ಗುರುಪಾದ ಶಿವಾಚಾರ್ಯರು

ಇವರು ವಿಜಾಪುರ ಜಿಲ್ಲೆಯವರು. ಬಾಗಲುಕೋಟೆ ತಾ|| ಬೀಳಗಿ ಗ್ರಾಮದವರು. ಹಲಗರಿ ಹಿರಿಯ ಮಠಾಧ್ಯಕ್ಷರಾದ ಇವರು 'ಮಂತ್ರಯೋಗ ದರ್ಪಣ' ಎಂಬ ಗ್ರಂಥವನ್ನು ಬರೆದಿದ್ದಾರೆ. ೧೯೫೦ರಲ್ಲಿ ಪ್ರಕಟವಾಗಿದೆ.

## ಮೈಲಾರಲಿಂಗ ಶಿವಾಚಾರ್ಯರು

ಇವರು ಹಿಮವತ್ಕೇದಾರ ಸಿಂಹಾಸನದ ಉಷಾ ಮಠದವರು. ಇವರು ಉಜ್ಜಯನೀ ಸದ್ಧರ್ಮ ಸಿಂಹಾಸನಾಧೀಶ್ವರ 'ಜ|| ಸಿದ್ಧಲಿಂಗ ಶಿವಯೋಗಿ ಚರಿತ' ಎಂಬ ಗ್ರಂಥ ಬರೆದಿದ್ದಾರೆ. ಏಕೋರಾಮ ಪೀಠಾಧೀಶ್ವರ ಶ್ರೀ ಜ|| ನೀಲಕಂಠಲಿಂಗ ಶಿವಾಚಾರ್ಯ ಪಾದಪದ್ಮ ಪ್ರಾದುರ್ಭೂತರೆಂದು ಹೇಳಿಕೊಂಡಿದ್ದಾರೆ. ಕಾಶ್ಮೀರದ ಶೈವಧರ್ಮದ ಶಿವಸೂತ್ರ, ಶಕ್ತಿಸೂತ್ರಗಳನ್ನು ಪ್ರಕಟಿಸಿದ್ದಾರೆ.

### ಚಿದ್ಘಾನ ಶಿವಾಚಾರ್ಯರು

ಇವರು ಪುರಗಿರಿ ಗ್ರಾಮದ ಬೃಹನ್ಮಠಾಧೀಶರು. 'ವೀರಶೈವ ಮತ ಮೀಮಾಂಸಾ' ಎಂಬ ಕನ್ನಡ ಗ್ರಂಥ ರಚಿಸಿದ್ದಾರೆ. ೧೯೩೮ ರಲ್ಲಿ ಇದು ಪ್ರಕಟವಾಗಿದೆ.

ಇದುವರೆಗೆ ನಾವು ಸಂಸ್ಕೃತ ಮತ್ತು ಕನ್ನಡ ಸಾಹಿತ್ಯಗಳಲ್ಲಿ ಸೇವೆ ಸಲ್ಲಿಸಿರುವ ಅನೇಕ ಶಿವಾಚಾರ್ಯ ಸಾಹಿತಿಗಳ ಮತ್ತು ಅವರ ಕೃತಿಗಳ ಪರಿಚಯವನ್ನು ಯಥಾಶಕ್ತಿ ಮಾಡಿಕೊಟ್ಟಿದ್ದೇವೆ. ಈ ವಿಷಯ ಸಂಗ್ರಹಕ್ಕೆ ಕಾರಣವಾದ ಎಲ್ಲ ಗ್ರಂಥಕರ್ತರಿಗೂ ಈ ಮೂಲಕ ಕೃತಜ್ಞತೆಗಳನ್ನು ಸಲ್ಲಿಸಲಾಗಿದೆ. ಕೃತಿ ಮತ್ತು ಕರ್ತೃ ವಿಚಾರದಲ್ಲಿ ಯಥಾಶಕ್ತಿ ದೊರೆತ ಅಂಶಗಳನ್ನು ಸಂಗ್ರಹಿಸಿ ನಿವೇದಿಸಲಾಗಿದೆ. ಪ್ರಾಜ್ಞರು ಇನ್ನೂ ಹೆಚ್ಚಿನ ಸಂಗತಿಗಳನ್ನು ಸೂಚಿಸಿದಲ್ಲಿ ಪರಿಶೀಲಿಸಿ ಮುಂದಿನ ಬರೆಹಗಳಲ್ಲಿ ಸೇರ್ಪಡೆ ಮಾಡಿಕೊಳ್ಳಲಾಗುವುದು.

———::———



# ಭಗವಾನ್ ತೋಂಟದಾರ್ಯರು ಬೋಳ ಬಸವೇಶ್ವರನಿಗೆ ಉಪದೇಶಿಸಿದ ವೀರಶೈವ ಧರ್ಮ



ಆಸ್ಥಾನ ವಿದ್ವಾನ್,
ಪಂಡಿತರತ್ನಂ, ಕೀರ್ತನಾಚಾರ್ಯ, ಕರ್ನಾಟಕ ವಿಭೂಷಣ
**ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು,** ಬೆಂಗಳೂರು.

**ಕರ್ನಾಟಕದಲ್ಲಿ** ಆಗಿ ಹೋದ ವಿಭೂತಿ ಪುರುಷರಲ್ಲಿ **ಭಗವಾನ್ ತೋಂಟದ ಸಿದ್ಧಲಿಂಗೇಶ್ವರನು** ಅಗ್ರಗಣ್ಯನು. ಈತನು ಹರದನ ಹಳ್ಳಿಯ ಗೋಸಲಸಿದ್ಧೇಶ್ವರನ ಪ್ರಶಿಷ್ಯನೂ ಗುಬ್ಬಿ ಚೆನ್ನಬಸವೇಶ್ವರನ ಶಿಷ್ಯನೂ ಎನಿಸಿದ್ದಾನೆ. ಈತನು ವೀರಶೈವ ಧರ್ಮ ಪ್ರಸಾರಕ್ಕಾಗಿ ಸಮಗ್ರಭಾರತವನ್ನು ಸಂಚರಿಸಿದಂತೆ ಐತಿಹ್ಯವಿದೆ. ನ ತಪೋಭೂಮಿ **ಕಗ್ಗೆರೆ.** ಇದು **ನಾಗಿಣೀ ನದೀ** ತೀರದಲ್ಲಿ ತುಮಕೂರು ಜಿಲ್ಲೆಯಲ್ಲಿದೆ. ಇಲ್ಲಿಗೆ ಅನತಿದೂರದಲ್ಲಿ ಈತನ ಶಿವಯೋಗ ಸಮಾಧಿಯ ಸ್ಥಳ **ಎಡೆಯೂರು** ಇದೆ. ಇಲ್ಲಿ ಈತನ ದಿವ್ಯಭವ್ಯ ದೇವಾಲಯವಿದ್ದು ಅದು ಒಂದು ಹಿರಿಯ ಯಾತ್ರಾಸ್ಥಳವೆನಿಸಿದೆ. **ಎಡೆಯೂರು-ಕಗ್ಗೆರೆಗಳ** ಮಧ್ಯೆ ತೋಂಟದಾರ್ಯನು ಕಲ್ಲು ಬಸವನಿಗೆ ಹುಲ್ಲುಮೇಯಿಸಿ ಪವಾಡವನ್ನು ಮೆರೆದ **ಮಂಗಲಕ್ಷೇತ್ರ** ವಿದೆ. ವಿಜಯನಗರದ ಅರಸರಲ್ಲಿ ವಿಖ್ಯಾತನಾದ ವಿರೂಪಾಕ್ಷನ ಕಾಲದಲ್ಲಿ (ಕ್ರಿ. ಶ. ೧೪೬೭ ರಿಂದ ೧೪೭೮) ಈ **ತೋಂಟದಾರ್ಯನು** ಇದ್ದಂತೆ ಚೆನ್ನಬಸವ **ಪುರಾಣದಲ್ಲಿ** (ಸಂಧಿ ೬೩ ಪದ್ಯಗಳು ೩೯, ೪೦) ಹೇಳಿದೆ. ಈತನು ನಿರಂಜನ ಗಣೇಶ್ವರನ ಅವತಾರವೆಂದು ಪುರಾಣಗಳಲ್ಲಿ ಹೇಳಿದೆ. ಈತನು ನೂರೊಂದು ಮಂದಿ ವಿರಕ್ತರನ್ನು ಕೂಡಿಕೊಂಡು ಭರತಖಂಡವನ್ನು ಸಂಚರಿಸಿದಂತೆ ವಿರಕ್ತ ತೋಂಟದಾರ್ಯನ (೧೫೬೦) ಸಿದ್ಧೇಶ್ವರ ಪುರಾಣವಲ್ಲಿಯೂ, ಕವಿಶಾಂತೇಶನ (೧೫೬೧) ತೋಂಟದ ಸಿದ್ಧೇಶ್ವರ

ಪುರಾಣವಲ್ಲಿಯೂ ಹೇಳಿದೆ. ಎಡೆಯೂರು ಶ್ರೀ ಸಿದ್ಧಲಿಂಗೇಶ್ವರ ದೇವಾಲಯದಲ್ಲಿರುವ (೧೫೦೦) ಶಿಲಾಶಾಸನದಲ್ಲಿ ಈ ಮಹಾತ್ಮನ ವಿಚಾರವಾಗಿಯೂ ಈತನ ಶಿಷ್ಯರುಗಳ ವಿಷಯವಾಗಿಯೂ ಗೌರವಾರ್ಹವಾದ ಉಲ್ಲೇಖವಿದೆ.

ಈತನು ಮಹಾ ಮಹಿಮನೂ ವಿದ್ವಾಂಸನೂ ಆಗಿದ್ದನು. 'ಷಟಸ್ಥಲ ಜ್ಞಾನ ಸಾರಾಮೃತ' ಎಂಬ ವಚನಗ್ರಂಥವನ್ನು ಬರೆದಿದ್ದಾನೆ. ಅದರಲ್ಲಿ ೭೦೧ ವಚನಗಳೂ ೭ ವೃತ್ತಗಳೂ ಇವೆ. ವೀರಶೈವ ಧರ್ಮಕ್ಕೆ ಕೈದೀವಿಗೆಯಂತಿದೆ ಈ ಗ್ರಂಥರತ್ನ. ಈ ಮಹಾತ್ಮನನ್ನು ಕುರಿತು ಈತನ ಶಿಷ್ಯಕೋಟಿಗೆ ಸೇರಿದ ವಿರಕ್ತತೋಂಟದಾರ್ಯನು ಬರೆವ ಸಿದ್ಧೇಶ್ವರ ಪುರಾಣವು ಅತ್ಯಂತ ಮಹತ್ವ ಪೂರ್ಣವಾದುದು. ಇದು ೧೮೭೫ರಲ್ಲಿ ಮೊದಲು ಮೈಸೂರಿನಲ್ಲಿಯೂ ೧೯೫೧ರಲ್ಲಿ ಈಚೆಗೆ ಗದುಗಿನಲ್ಲಿಯೂ ಅಚ್ಚಾಗಿದೆ ಈ ಪುರಾಣದಲ್ಲಿ ಭಗವಾನ್ ತೋಂಟದಾರ್ಯನು ತನ್ನ ಸನ್ನಿಧಿಯ ಶಿಷ್ಯನಾದ ನಿರಕ್ಷರ ಚೋಳ ಬಸವೇಶ್ವರನಿಗೆ ಉಪದೇಶಿಸಿದ ವೀರಶೈವ ಧರ್ಮತತ್ವಗಳು ಎಲ್ಲ ಜಿಜ್ಞಾಸುಗಳಿಂದಲೂ ಪರಿಗ್ರಹಿಸಲು ಅರ್ಹವಾಗಿವೆ. ಭಗವಾನ್ ತೋಂಟದಾರ್ಯನ ಕರುಣೆಯ ಶಿಶುವೆನಿಸಿದ ಚೋಳ ಬಸವೇಶ್ವರನು ತಪೋಭೂಮಿಯೆನಿಸಿದ ನಾಗಿಣೀನದೀ ತೀರದ ಕಗ್ಗೆರೆಯ ಹೂದೋಟದಲ್ಲಿ ಷಟಸ್ಥಲೋಪದೇಶವನ್ನು ಮಾಡಿ ತನ್ನನ್ನು ಅನುಗ್ರಹಿಸಬೇಕೆಂದು ಭಕ್ತಿಯಿಂದ ಪ್ರಾರ್ಥಿಸುತ್ತಾನೆ. ಆಗ ಪರಮಗುರುವಾದ ತೋಂಟದ ಸಿದ್ಧಲಿಂಗೇಶ್ವರನು ನಸುನಗುತ ಎಲೈ ಚೋಳ ಬಸವೇಶ್ವರನೇ, ಈ ವೀರಶೈವಂ ವೇದಭಾಷ್ಯಮತದಿಂ ನ್ಯಾಯ, ಮೀಮಾಂಸೆ, ಭಾಷ್ಯ, ವೈಷ್ಣವ, ಪಾಶುಪತ, ಪಾಂಚರಾತ್ರ, ವೈಶೇಷಿಕ, ಕಾಪಾಲಿಕ, ಪ್ರಭಾಕರ, ಕೌಳ, ಸಾಂಖ್ಯ, ಗಾಣಾಪತಂಗಳಿಂದ ಅಧಿಕಮಪ್ಪುದು, ಶೈವಕ್ಕೆ ಸಲೆ ಮೂರು ಜನ್ಮಕಂ ಮುಕ್ತಿ ಭಾವಿಸಿನೋಡೆ ವೀರಶೈವಕ್ಕೆ ಜನ್ಮ ಒಂದರೊಳೆ ಮೋಕ್ಷಂ ಅಪ್ಪುದು, ಕುಲಜಾತಿ, ಆಶ್ರಮ, ಶಕುನ, ಮಂತ್ರ, ತಂತ್ರ, ಸೂತಕ, ಜಾಡ್ಯ ಇವಂ ಕಳೆದು ವೀರಶೈವ ಮಾರ್ಗಂ ಪರಿಶೋಭಿಪುದು. ಆ ವೀರಶೈವ ಮಾರ್ಗದೊಳ್ ಮಹಾ ಶಿವಾಚಾರ ಮಾರ್ಗವನು ಅರಿದು ಸಾವಧಾನದೊಳ್ ಇರ್ಪನೆ ಭಕ್ತನು. ಆ ಭಕ್ತನೇ ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎನಿಸಿಕೊಳ್ಳುವನು ಸಾಧನಕ್ರಮದಿಂದ.

ವೀರಶೈವಧರ್ಮದಲ್ಲಿ ಪರಶಿವನೇ ಲಿಂಗವೆಂದೂ ಜೀವನೇ ಅಂಗವೆಂದೂ, ಪರಿಗಣಿಸಲ್ಪಟ್ಟಿರುವನು. ಲಿಂಗವು ಇಷ್ಟ, ಪ್ರಾಣ, ಭಾವ ಎಂದು ಮೂರು ವಿಧವಾಗಿರುವುದು. ಹಾಗೆಯೇ ಅಂಗವು ಕೂಡ ತ್ಯಾಗಾಂಗ, ಭೋಗಾಂಗ, ಯೋಗಾಂಗ ಎಂದು ಮೂರು ಬಗೆಯಾಗಿರುವುದು. ವೀರಶೈವವು ಚರಮ ಜೀವನವೆನಿಸಿರುವುದು.

ರೋಗದಿಂದ ಕೋಟಲೆಗೊಂಡವನು ವೈದ್ಯನಡೆಗೆ ಹೋಗುವ ಹಾಗೆ ಜನನ ಮರಣಾತ್ಮಕವಾದ ಸಂಸಾರದಿಂದ ಬಿಡುಗಡೆಯನ್ನು ಹೊಂದಬೇಕೆಂದು ಬಯಸಿ

ಗುರುವರನ ಎಡೆಗೆ ಐದುವವನೇ ಮಹಾಜ್ಞಾನಿಯೆನಿಸಿಕೊಳ್ಳುವನು. ಹಾಗೂ ಮುಮುಕ್ಷುವು ಎನಿಸಿಕೊಳ್ಳುವನು. ಪರಮಗುರುವು ಕರುಣದಿಂದ ಶಿವಲಿಂಗವನು ಕರತಳಕ್ಕೆ ಕುಡೆ ಅವನು ಸರ್ವಾಂಗದಲಿ ತಾಳ್ದು ಆವಗಂ ಹೆರೆ ಹಿಂಗದೆ ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಅವಸ್ಥಾತ್ರಮುಂಗಳಲಿ ಎಚ್ಚರದಿಂದೆ ಇರುತೆ ಬಾಹ್ಯ, ಅಂತರ ಉಭಯಂಗಳಲಿ ಲಿಂಗಕಳೆ ಬೆರೆದು ಒಪ್ಪುತಿರ್ಪಾತನೇ ಲಿಂಗಾಂಗ ಸಂಬಂಧಿ ಎನಿಸುವನು. ಬ್ರಹ್ಮರಾಕ್ಷಸ, ಪಿಶಾಚಾದಿಗಳ, ಅಪಮೃತ್ಯುಗಳ ಬಡಿದು ಓಡಿಸುವ ಸಕಲ ವಶ್ಯಕ್ಕೆ ತಿಲಕವು ಎನಿಸುವ ಭಸಿತವನು ವೀರಶೈವನಾದವನು ಅತಿಭಕ್ತಿಯಿಂದ ಧರಿಸುವುದು. ಶಿವನ ನೇತ್ರಗಳಿಂದ ಹುಟ್ಟಿದ, ತನ್ನನ್ನು ಮುಟ್ಟಿದವರನು ಧರಿಸಿದವರನು ಭವಜಲಧಿಯನು ದಾಂಟಿಸುವ ರುದ್ರಾಕ್ಷಿಯನು ಲಿಂಗವಂತನು ಒಲವಿನಿಂದ ಧರಿಸುವುದು. ಏಳುಕೋಟಿ, ಮಂತ್ರಕ್ಕೆ ಜನನಿ ಎನಿಸಿ ಕೊಂಡಿರುವ, ತನ್ನನು ಜಪಿಸಿದವರ ಕಾಲನ ಭಯವಕಳೆವ, ಸಕಲ ಮೋಕ್ಷ ಭೋಗಂ ಗಳಿಗೆ ನೆಲೆಮನೆ ಎನಿಸಿರುವ ಪಂಚಾಕ್ಷರಿಯನು ಪರಮ ಶಿವಭಕ್ತನು ಆವಾಗಲೂ ಅನುವರಿದು ಜಪಿಸಬೇಕು. ಸೂರ್ಯದರ್ಶನದಿಂದ ಕತ್ತಲೆ ಓಡುವಂತೆ ಪಂಚಾಕ್ಷರಿಯ ಸ್ಮರಣ ಮಾತ್ರದಿಂದ ಸಕಲ ಪಾಪಗಳೂ ಓಡುವುವು. ಈ ರೀತಿ ಲಿಂಗ, ವಿಭೂತಿ, ರುದ್ರಾಕ್ಷಿ, ಶಿವಮಂತ್ರಗಳಿಂದ ಕೂಡಿ, ಭವಿಗಳ ಅಂದರೆ ಪಾಪಿಗಳ ಸಂಗವನ್ನು ಮಾಡದೆ, ಅನ್ಯದೈವಗಳ ಭಜಿಸದೆ ಪತಿವ್ರತೆಯಂತೆ–ಶರಣಸತಿ ಲಂಗಪತಿ ನ್ಯಾಯದಲ್ಲಿ ನಿರತನಾಗಿ ಅಖಿಳವಸ್ತುಗಳ ಸುಪ್ರೀತಿಯಿಂ ಲಿಂಗ ಜಂಗಮಕ್ಕೆ ನಿರ್ವಂಚನೆಯೊಳ್ ಇತ್ತು ಸುಖಿಪನು ಭಕ್ತನು ಎನಿಸುವನು.

ನಿಜವಾದ ವೀರಶೈವ ಭಕ್ತನು ಭವಿಗಳೊಡನೆ ಆಡನು. ಅವರೊಡನೆ ಭೋಜನಂಗೆಯ್ಯನು. ತನ್ನ ಕನ್ನಿಕೆಯನು ಮಹಾಭಕ್ತರ್ಗೆ ಕೊಡುವುದು ಉತ್ತಮ ಮಾರ್ಗವು. ಹರನ ಭಕ್ತರ್ಗೆ ಕಡಬಡ್ಡಿಗಳ ಕೊಡುವುದು ಅದು ಪರಮ ಪರಿಣಾಮ. ಬಂದೊಡೆ ಲೇಸು ಬಾರದಿದ್ದಡೆ ಪಿರಿದು ಎಂದು ತಿಳಿವುದು.

ಲಿಂಗಾಧಾರಿಯಾದವನು ತನ್ನ ಲಿಂಗವನ್ನು ಅಡಿಮಾಡಿ ಸ್ಥಾವರಲಿಂಗಗಳಿಗೆ ಪೊಡಮಟ್ಟು ವರಗಳನ್ನು ಬೇಡುವುದು ತಪ್ಪು; ಇದು ಶರಣನ ಧರ್ಮಕ್ಕೆ ಸಲ್ಲದು, ಸದ್ಗುರುವು ಶಿವದೀಕ್ಷಾ ಮೂಲಕವಾಗಿ ತನ್ನ ಕೊರಳಿನಲ್ಲಿ ಧರಿಸಿದ ಇಷ್ಟಲಿಂಗವನ್ನು ತನ್ನ ಸರ್ವಸ್ವವೆಂದು ಭಾವಿಸಿ, ಅರ್ಚಿಸಿ ಲಿಂಗವಂತರು ಕೃತಾರ್ಥರಾಗುವದು ಎಂದು ಶಿವಾಗಮಗಳು ಹೇಳಿವೆ. ತನು, ಮನ, ಧನಗಳನ್ನು ಗುರು, ಲಿಂಗ, ಜಂಗಮಕ್ಕೆ ಸಮರ್ಪಿಸುವುದು ವೀರಶೈವ ಲಕ್ಷಣವು. ಹುಸಿ, ಕಳವು, ಠಕ್ಕು ಮೊದಲಾದ ದುರ್ಗುಣ ಗಳಿಂದ ಕೂಡಿ, ವಿಭೂತಿ, ರುದ್ರಾಕ್ಷಿ ಲಿಂಗಗಳನ್ನು ಧರಿಸುವುದರಿಂದ ಯಾವ ಪ್ರಯೋಜನವೂ ಇಲ್ಲ. ಗಂಗೆಯ ನೀರನ್ನು ಹೆಂಡದ ಗಡಿಗೆಯಲ್ಲಿ ತುಂಬಿದರೆ ಅದು ಹೇಗೆ ತಾನೇ ತೀರ್ಥವೆನಿಸೀತು? ಬಾಳೆಗೆ ಫಲಂ ಪುಟ್ಟಲು ಅವೇ ಕಡೆ; ಚೇಳಿಗೆ ಗರ್ಭ

ವಾದುದೇ ಕಡೆ; ಅಂತೆಯೇ ಈಶನ ಭಕ್ತನಿಗೆ ತನ್ನ ಭಾಷೆಯೇ ಕಡೆ. ಭಾಷೆ ಕೆಟ್ಟಾಗ ಅಂತಹ ಭಕ್ತನನ್ನು ಭಾಳನೇತ್ರನು ಮೆಚ್ಚನು. ಹುಸಿವವನು ಹೊಲೆಯನು ಎಂಬ ನಾಡನುಡಿಯನ್ನು ಶಶಿಧರನ ಶರಣರು ಅನುಸರಿಸುವದು. ನಡೆ ನುಡಿಗಳೊಂದಾಗುವುದು ಭಕ್ತನ ಲಕ್ಷಣ. ಮನದೊಳಗೆ ಒಂದು ಮಾತಿನೊಳಗೆ ಒಂದು ಇರುವವನು ವೀರಶೈವ ಧರ್ಮಕ್ಕೆ ಸಲ್ಲನು. ನಡೆದಂತೆ ನುಡಿ, ನುಡಿದಂತೆ ನಡೆ, ಇವೆರಡೂ ಶ್ರೀ ಗುರುವಿನ ಅಡಿ ಎಂಬುದು ಅನುಭವ ಸಂದೇಶ. ತನ್ನ ಸತೀಸುತರೇ ಸರ್ವಸ್ವವೆಂದು ತಿಳಿಯುವವನು ಲಿಂಗ ಜಂಗಮದ ಭಕ್ತಿಯನೆಂತು ಬಲ್ಲನು ? ಕಡವರವನು ಒರೆದು ಪುಟವಿಡಲು, ಇಕ್ಷುದಂಡವಂ ದಂಡಿಸಿ ಗಾಣದೊಳಗೆ ಅರೆಯಲು, ಚಂದನವ ಇಕ್ಕಿ ಬಿಡದೆ ಕಲ್ಲೊಳಗೆ ತೇಯುಲು ಅವು ನೋವಿಲ್ಲದೆ ಅತಿ ಸುಗುಣವೀವ ಅಂದದಿಂದ ಗುರು ಜಂಗಮರು ತನ್ನನು ಭಂಗಿಸಿ ನುಡಿದರೂ ಅವರಿಗೆ ಮಾರುತ್ತರವ ಕೊಡದಿರುವವನು ಸದ್ಭಕ್ತನು. ಮಾಡುವವನು ನಾನು ಎಂಬ ಅಹಂಕಾರವನ್ನು ತೊರೆದು ಮಾಡಿಸಿಕೊಳ್ಳುವವನು ಶಿವನೆಂದು ಅರಿದು ತನಗೆ ದೊರೆತಿರುವ ಸಮಸ್ತ ಐಶ್ವರ್ಯವೂ ಶಿವಾನುಗ್ರಹದಿಂದ ಬಂದುದೆಂದು ಭಾವಿಸಿ ಸಮರಸ ಭಕ್ತಿಯಿಂದ ಸೇವೆಯನ್ನು ಮಾಡುವುದೇ ಭಕ್ತನ ಲಕ್ಷಣವು.

ಇನ್ನು ವೀರಮಾಹೇಶ್ವರನ ಲಕ್ಷಣವನ್ನು ಕೇಳು. ಲೌಕಿಕ ಮಾರ್ಗದೊಳು ನಡೆಯದೆ ಅತಿನಿಷ್ಠೆಯಿಂದ ತನ್ನಯ ಸದ್ವ್ರತಾಚಾರವಂ ಪದ-ಳದಿಂ ದೇಹಾವಸಾನ ಪರ್ಯಂತವುಂ ಚದುರತನದಿಂದೆ ನಡೆಸುತ್ತ ಲಿಂಗದ ಮನವ ಹುದುಗಿ ಬಾಹ್ಯ ಪ್ರಪಂಚವನು ಅರಿಯದಿರ್ಪೊಡೆ ಆತನೇ ವೀರಮಾಹೇಶ್ವರನು. ಸಮುದ್ರಗಳ ಮೇರೆ ದಪ್ಪಿದರೂ, ಕುಲಗಿರಿಗಳು ಓಡಾಡಿದರೂ ಭೂಮಿ ರಸಾತಲಕೆ ಇಳಿದರೂ ಸೂರ್ಯ ಚಂದ್ರರು ಮುರಿದು ಇಳೆಗೆ ಬಿದ್ದರೂ ವೀರಮಾಹೇಶ್ವರನು ತಾನು ಹಿಡಿದ ಶಿವವ್ರತವನ್ನು ಎಂದಿಗೂ ಬಿಡನು. ಪರಮ ಮಾಹೇಶ್ವರನು ತೀರ್ಥಕ್ಷೇತ್ರಗಳ ಪ್ರವಾಸವನ್ನೂ ವ್ರತನಿಯಮಗಳ ಉಪವಾಸವನ್ನೂ ಎಂದೂ ಬಯಸನು. ತಿಥಿ, ಸಂಕ್ರಾಂತಿ, ಶಿವರಾತ್ರಿ, ಮೊದಲಾದವನ್ನು ಆಚರಿಸುವುದು ಶೈವಲಕ್ಷಣವೇ ಹೊರತು ವೀರಶೈವ ಲಕ್ಷಣವಲ್ಲ. ಮಾಯೆಯನ್ನು ಜರಿದು ಲಿಂಗದಲ್ಲಿ ನೆಟ್ಟದೃಷ್ಟಿಯುಳ್ಳವನಾಗಿ ಅನ್ಯಸತಿ, ಅನ್ಯಧನ, ಅನ್ಯಮತ, ಅನ್ಯದೈವಗಳನ್ನು ಭಜಿಸದೆ ಇರುವವನೇ ನಿಜವಾದ ಮಾಹೇಶ್ವರನು. ಏಕಪತ್ನೀ ವ್ರತಸ್ಥನಲ್ಲದವನಿಗೆ ಮಾಹೇಶ್ವರವ್ರತವು ಖಂಡಿತವಾಗಿ ಅಳವಡದು. ವೀರಶೈವ ಧರ್ಮವು ಅಂಗವಾಗದು.

ಬಾಹ್ಯ ಪ್ರಪಂಚದ ಆಸೆಯನ್ನು ತೊರೆದು ಸನ್ಮಾರ್ಗದಿಂದ ಆಚರಿಸಿ ಗುರುಲಿಂಗ ಜಂಗಮದ ಪ್ರಸಾದವನ್ನು ಭುಂಜಿಸುವವನೇ ನಿಜವಾದ ಪ್ರಸಾದಿಯು. ಇವನು ಗುರುಲಿಂಗ ಜಂಗಮಗಳನ್ನು ಸಮಾನವಾಗಿ ತಿಳಿಯುವನು, ಗುರುವಿನ ಶುದ್ಧ ಪ್ರಸಾದ, ಲಿಂಗದ ಸಿದ್ಧ ಪ್ರಸಾದ, ಜಂಗಮದ ಪ್ರಸಿದ್ಧ ಪ್ರಸಾದಗಳನ್ನು ಶ್ರದ್ಧೆಯಿಂದ ಭುಂಜಿಸು

ವಾತನೇ ನಿಜವಾದ ಪ್ರಸಾದಿಯು. ಲಿಂಗಾರ್ಚನೆಯನ್ನು ಮಾಡದೇ ಉಂಬುವುದು ಸಲ್ಲದು ಎಂದು ಪ್ರಸಾದಿಯು ತಿಳಿದಿರುವನು. ಗುರುವಿನ ಅಂಗುಷ್ಟದಲ್ಲಿ ಅಷ್ಟಾಷಷ್ಟಿ ತೀರ್ಥಗಳಿರುವುವು. ಜಂಗಮದ ಪಾದದಲ್ಲಿ ಏಳು ಶರಧಿಗಳು ಇರುವುವು. ಲಿಂಗದ ಸುಪ್ರಕಾಶದಲ್ಲಿ ಸಮಸ್ತ ಕುಲಗಿರಿಗಳೂ ಇವೆಯೆಂದು ತಿಳಿದವನು ಸುಪ್ರಸಾದಿಯು. ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಲಿಂಗವು ಮೂಲಕಾರಣವೆಂದು ತಿಳಿಯುವವನು ಘನಪ್ರಸಾದಿಯು.

ಪ್ರಸಾದ ಸೇವನೆಯಿಂದ ಸಕಲ ಪಾಪಗಳೂ, ಪರಿಹಾರವಾಗುವವು. ಅಗಸ್ತ್ಯ ದೂರ್ವಾಸ, ನಂದಿಕೇಶ್ವರ, ಕಣಾದ, ಮಹಾಕಾಳ, ಸ್ಕಂದ, ವೀರಭದ್ರ, ಬಾಣ, ರಾವಣ, ವಾಲ್ಮೀಕಿ, ಕಣ್ವ, ಭೃಗು, ಭರದ್ವಾಜ, ಅತ್ರಿ, ಗೌತಮ ಮೊದಲಾದ ಪ್ರಾಚೀನ ಪ್ರಮುಖರು ಹಾಗೂ ಶಿವಭಕ್ತರು ಪ್ರಸಾದ ಸೇವನೆಯಿಂದಲೇ ಕೃತಾರ್ಥರೆನಿಸಿದರು.

ಲಿಂಗ ಮತ್ತು ಪ್ರಾಣಗಳಲ್ಲಿ ಸಮರಸವನ್ನು ಹೊಂದಿ ಬಾಹ್ಯವಿಷಯಂಗಳಡಗಿ ನಿರ್ಮಾಯತ್ವವಳವಟ್ಟು, ಸಂಕಲ್ಪರಹಿತನಾದರೆ ಅವನೇ ಪ್ರಾಣಲಿಂಗಿಯು. ದೇಹ ಗುಣಗಳನ್ನು ಕೆಡಿಸಿ ಕರಣಗಳ ಹಾವಳಿಯನ್ನು ಅಡಗಿಸಿ ದಶವಾಯು ಗುಣಗಳಂ ತಡೆದು ದೃಢಚಿತ್ತನಾಗಿರುವವನೇ ಪ್ರಾಣಲಿಂಗಿಯೆನಿಸುವನು. ಇಷ್ಟಲಿಂಗ, ಪ್ರಾಣ ಲಿಂಗಗಳ ಸಮನ್ವಯ ಯೋಗವು ಇವನ ಮುಖ್ಯ ಗುರಿ. ಸಂಕಲ್ಪ ವಿಕಲ್ಪಗಳು ಈತನಿಗೆ ದೂರವು. ಜನನಮರಣಗಳು ಹಸಿವು ತೃಷೆಗಳು ಈತನನ್ನು ಬಾಧಿಸಲಾರವು. ತನುಗುಣಗಳನ್ನು ಕಳೆದು ಪ್ರಾಣ ಗುಣಂಗಳಂ ಕೆಡಿಸಿ ಷಟ್ಚಕ್ರಗಳ ನೆಲೆಯನ್ನು ಮೆಟ್ಟಿ ಉನ್ಮನಿಯ ಸದ್‌ಬ್ರಹ್ಮರಂಧ್ರದ ಸಾಸಿರದಳದ ಮಧ್ಯದಲ್ಲಿ ಗುರಿ ಇಟ್ಟವನು ಪ್ರಾಣಲಿಂಗಿಯು. ಪ್ರಾಣಲಿಂಗಿಯ ಪಂಚೇಂದ್ರಿಯಗಳು ಒಳಮುಖವಾಗಿ—ಅವುಗಳ ಯಜಮಾನನಾದ ಮನವು ಹೃದಯಸರಸಿಜದೊಳಿರ್ಪ ಚಿದ್ಘನ ಲಿಂಗದಲ್ಲಿ ಸಲೆವೆರೆದು ವಾಯುಗಳ ಗುಣಗೆಳನ್ನು–ಅಳಿದಿರಲು ಅಂತಹ ಪ್ರಾಣಲಿಂಗಿಯು ಬಾಹ್ಯದ ಸಂಗವನ್ನು ಬಯಸದೆ ಇರುವನು. ಹಲವು ಜಲದ ಕುಂಭಗಳಲ್ಲಿ ಸೂರ್ಯನೊಬ್ಬನೇ ಪ್ರತಿಬಿಂಬಿಸುವಂತೆ ಪ್ರಾಣಲಿಂಗಿಯು ಸಕಲ ಇಂದ್ರಿಯಗಳಲ್ಲಿಯೂ, ಆಚಾರ, ಗುರು, ಚರ, ಪ್ರಸಾದ, ಘನ, ಮಹಾ ಎಂಬ ಆರು ಲಿಂಗಗಳು ಬೇರೆ ಬೇರೆ ರೂಪಿಂದ ಕಂಗೊಳಿಸುವವು. ಕೈಯಲ್ಲಿ ಇಷ್ಟಲಿಂಗವು ಇರದಿದ್ದರೆ ಆ ಪ್ರಾಣಲಿಂಗವು ಕಾಣಿಸುವುದಿಲ್ಲ ; ಭಾವಲಿಂಗವು ಗೋಚರಿಸುವುದಿಲ್ಲ. ಏಕೆಂದರೆ ತನ್ನ ಕೈಯಲ್ಲಿ ಕನ್ನಡಿಯನ್ನು ಹಿಡಿಯದವನಿಗೆ ಅವನ ರೂಪು ಕಾಣಿಸಲಾರದು. ಅಂತೆಯೇ ಇಷ್ಟಲಿಂಗ ನಿಷ್ಠೆಯಿಲ್ಲದವನಿಗೆ ಪ್ರಾಣಲಿಂಗವು ಅಳವಡದು. ಭಾಂಡದಲ್ಲಿ ಇರುವ ನೀರು ಬೆಂಕಿಯ ಸಂಸರ್ಗದಿಂದ ಬಿಸಿಯಾಗುವ ಹಾಗೆ ಬಾಹ್ಯಲಿಂಗದ ಕಳೆಯು ಅಂತರಂಗಕ್ಕೆ ವೇದಿಸಿ ಪ್ರಾಣಲಿಂಗವೆನಿಸಿ ಪ್ರಕಾಶಿಸುವದು. ಅರಮನೆಯನ್ನು

ಕಂಡವನಿಗೆ ಅಂತಃಪುರದ ಸುಖದ ಇರವು ತಿಳಿಯದಿರುವಂತೆ ಕೇವಲ ಇಷ್ಟಲಿಂಗ ಪೂಜೆಯಲ್ಲಿ ನಿರತನಾದವನಿಗೆ ಪ್ರಾಣಲಿಂಗದ ಅರಿವು ಅನುಸಂಧಾನ ಹೇಗೆ ತಾನೇ ಸಾಧ್ಯವಾದೀತು. ಗುರುಮುಖದಿಂದ ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗಗಳ ಪೂಜಾವಿಧಾನವನ್ನು ತಿಳಿಯುವವನೇ ಧನ್ಯನು, ದೇಹವೆಂಬ ದೇವಾಲಯದೊಳಗೆ ಉನ್ಮನಿಯ ತಾಣದಲ್ಲಿ ಇರುವ ಸುಪ್ರಕಾಶದಿಂದ ಶೋಭಿಸುವ ಆನಂದರೂಪವೆನಿಸುವ ನಿರ್ಮಲ ಲಿಂಗವೇ ಪ್ರಾಣಲಿಂಗವು. ಯೋಗ ಮಾರ್ಗದಿಂದ ಇದನು ಅರಿದು ಅರ್ಚಿಸುವದು ಪ್ರಾಣಲಿಂಗವು. ಈ ಪ್ರಾಣಲಿಂಗವು ಬ್ರಹ್ಮರಂಧ್ರ, ಭ್ರೂಮಧ್ಯ, ಹೃತ್ಕಮಲ ಎಂಬ ಮೂರು ಸ್ಥಳಗಳಲ್ಲಿ ಮೂರು ತೆರವಾಗಿ ಪ್ರಕಾಶಿಸುವದು. ಇದನು ಬಲ್ಲಾತನೇ ಪ್ರಾಣಲಿಂಗಿಯು. ಈ ಪ್ರಾಣಲಿಂಗವು ಶಿರದಲ್ಲಿ ನಿಷ್ಕಲ ಗುರುಸ್ವರೂಪ ದೊಳ್ ಇಹುದು. ಭ್ರೂಮಧ್ಯದೊಳು ಲಿಂಗರೂಪಿನೊಳಿಹುದು, ಹೃತ್ಕಮಲ ಕರ್ಣಿಕಾ ಕುಹರದೊಳ್ ಚರಲಿಂಗರೂಪಿನೊಳ್ (ಜಂಗಮ) ಒಪ್ಪಿಹುದು. ಭಾವ ದೊಳ್ ಪರಮಸಂತೋಷದಿಂ ಭಾವಿಸಿ ಪೂಜಿಸಲ್ ಅವಂ ಪ್ರಾಣಲಿಂಗಿಯೆನಿಸುವನು. ಈ ಪ್ರಾಣಲಿಂಗದ ಪೂಜೆಗೆ ಶಾಂತಿಯೇ ಮಜ್ಜನದ ಜಲ ದಯೆ ಗಂಧವು, ಶಾಂತಿಯೇ ಅಕ್ಷತೆ, ವಾಸನಾಕ್ಷಯವೇ ಧೂಪ. ಸುಜ್ಞಾನವೇ ದೀಪ, ಹೃದಯ ಕಮಲವೇ ಪುಷ್ಪ, ತ್ರಿಪುಟ ರಹಿತತ್ವವೇ ತಾಂಬೂಲ. ವೈರಾಗ್ಯವೇ ದರ್ಪಣ, ಪ್ರಣವವೇ ಘಂಟಾಧ್ವನಿ, ಹೀಗಾಗುವುದೇ ಪ್ರಾಣಲಿಂಗ ಪೂಜಾಕ್ರಮವು. ಅಲ್ಲದೆ ನಡೆಯೆ ಪ್ರದಕ್ಷಿಣ, ಶಯನವೇ ನಮಸ್ಕೃತಿ, ನುಡಿಯೆಂಬುದೇ ನುತಿಯು, ವಿಷಯಭೋಗವೇ ಮೃಡಪೂಜೆ. ಸಕಲ ಕರಣಂಗಳು ಎಲ್ಲಂ ವಿನಿಯೋಗದ ಅನುಚರರ್ ಎನಿಸಿ ಲಿಂಗದೊಡನೆ ಸಮರಸ ಸುಖವ ಪಡೆದು ನಿಜಸುಖಿಯಾಗಿ ಒಡಲಗುಣರಹಿತನು ಎಂದೆನಿಸಿ ಚರಿಸುತ್ತಿರ್ಪನೇ ಪ್ರಾಣಲಿಂಗಿಯೆನಿಸಿಕೊಳ್ಳುವನು. ಹಲವು ಜನ ಯೋಗಭ್ಯಾಸಿಗಳು ಉಸಿರನ್ನು ಮೇಲಕ್ಕೆಳೆದು ಪ್ರಾಣಲಿಂಗದ ನಿಜವ ನರಿಯದೆ ಭವಪಾಶದೊಳು ಬಿಗಿದು ಸಾಯುತಿಹರು. ಪ್ರಾಣಲಿಂಗಿಯು ಶಿವಯೋಗ ಮಾರ್ಗದಿಂದ ಅನುಸಂಧಾನಮಾಡಿ ಪರಿಪೂರ್ಣನಾಗಿ ಶಬ್ದಬ್ರಹ್ಮನೆನಿಸುವನು. (ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧ, ಆಜ್ಞಾ ಚಕ್ರ) ಷಟ್ಚಕ್ರಗಳಿಗೂ, ಷಟ್‌ಲಿಂಗಗಳಿಗೂ ವೀರಶೈವದಲ್ಲಿ ಬಾಂಧವ್ಯವಿದೆ. ಆರು ನೆಲೆಗಳನ್ನು ತಿಳಿದು, ಮಿಗೆ ಬೆಳಗಿನಿಂ ತೋರುತಿರ್ಪ ಉನುಮನಿಯ ಮಂಟಪದೊಳು ರಂಜಿಸುವ ಸಾಸಿರದಳದ ಕಮಲದೊಳಗಿರ್ಪ ಅಮೃತ ಬಿಂದುವಿನೊಳು ಆರೂಢವಾಗಿರ್ಪ, ಚಿತ್ಪ್ರಾಣವ ಲಿಂಗದೊಳು ಬೇರಿಡದೆ ಕೂಡಿ ಎರವಿಲ್ಲದೆ ಇರಬಲ್ಲವಂ ಧೀರಂ, ಅವನೇ ಪ್ರಾಣಲಿಂಗ ಸಂಬಂಧಿ ಎಂದು ತತ್ವವಿದರು ಹೇಳುತ್ತಾರೆ. ಲಿಂಗವು ಪರಶಕ್ತಿಯುತ ವಾದ ಶಿವನ ಮೂರ್ತಿಯು. ಲಿಂಗವು ಆ ಪರಶಿವನ ತೇಜವು, ಆ ಲಿಂಗವು ಶಿವನನ್ನು

ಲಿಂಗವ ನಿರತಿಶಯಮಾದ ಆನಂದಸಮೂಹ. ಅಲ್ಲವೇ ಆ ಲಿಂಗವೇ ಪರಶಿವನ ಜ್ಞಾನ ಸ್ವರೂಪವು ಎಂದು ತಿಳಿದವನು ಪ್ರಾಣಲಿಂಗಿಯು.

ಶರಣಸತಿ ಲಿಂಗಪತಿ ನ್ಯಾಯದಿಂದ ಅನುಭವ ಭಕ್ತಿಯೇ ಆನಂದಭಕ್ತಿಯೆನಿಸಿ ದವನು ಶರಣನೆನಿಸುವನು. ಅಣಿಮಾದಿ ಸಿದ್ಧಿಗಳನ್ನೂ, ಇಂದ್ರಾದಿ ಪದವಿಗಳನ್ನೂ, ಮೂರು ಲೋಕಗಳ ಸುಖವನ್ನೂ ತೃಣೀಕರಿಸಿ ಘನಲಿಂಗದಲ್ಲಿ ತಾನೇತಾನಾಗಿ ಜೀವಿತವನೇ ಶರಣನೆನಿಸುವನು. ಸಂಸಾರವೆಂಬ ವೃಕ್ಷಕ್ಕೆ ಪಂಚಕ್ಲೇಶಗಳೇ ಶಾಖೆ. ಕರ್ಮವೇ ಅದರ ಬೇರು. ವಿಷಯರಾಜಿಗಳೇ ಅದರ ಫಲಗಳು. ಈ ಸಂಸಾರವೃಕ್ಷ ವನ್ನು ಶಿವಜ್ಞಾನವೆಂಬ ಕೊಡಲಿಯಿಂದ ಕಡಿಯುವವನೇ ಶರಣನು. ಸಂಸಾರಕ್ಕೆ ಸಮನಾದ ಶತ್ರುವಿಲ್ಲ. ಶಿವಜ್ಞಾನಕ್ಕೆ ಸಮನಾದ ಮಿತ್ರನಿಲ್ಲ. ಮೂಢನಂಬಿಕೆಗಳು ದುಃಖದ ಮೂಲ. ವೈರಾಗ್ಯವೇ ಪರಮಸುಖ ಎಂದು ಶರಣನು ತಿಳಿದಿರುವನು. ನೀರಿನಲ್ಲಿ ಇರುವ ತಾವರೆಯೆಲೆಯು ನೀರಿಗೆ ಅಂಟದಿರುವಂತೆ ಲೋಕದಲ್ಲಿ ಸಂಚರಿಸುವ ಗಾಳಿಯು ಧೂಳಿಯಿಂದ ಕೆಡದಿರುವಂತೆ, ನೇತ್ರಕ್ಕೆ ಹಚ್ಚಿದ ಅಂಜನವು ಕಣ್ಣಿಗೆ ಸಂಬಂಧಪಡದಂತೆ ಸತ್ ಚಿತ್ ಆನಂದಸ್ವರೂಪನಾದ ಆತ್ಮನು ಸಂಸಾರದಲ್ಲಿದ್ದರೂ ಅದರ ಸುಖದುಃಖಗಳಿಗೆ ಅಂಟದಂತಿರುವನು. ಸ್ತುತಿ ನಿಂದೆಗಳನ್ನು ಸಮಾನವಾಗಿ ಭಾವಿಸಿ ಇಂದ್ರಿಯ ಸುಖಗಳನ್ನು ತ್ಯಜಿಸಿ ಸದಾ ಮುಕ್ತಿಯ ಚಿಂತೆಯಿಂದ ಕೂಡಿ ಪರಮ ವಿರತಿಯಿಂದ ಕಂಗೊಳಿಸುವಾತನೇ ಶರಣನೆನಿಸುವನು. ತುಂಬಿಯು ಹೂವು ಗಳನ್ನು ಹಿಂಸಿಸದೆ ಅದರ ರಸಪಾನಮಾಡುವಂತೆ ಭಕ್ತರನ್ನು ನೋಯಿಸದೆ ಅವರಿತ್ತ ಭಿಕ್ಷೆಯಲ್ಲಿಯೇ ತೃಪ್ತನಾಗಿ ಸದಾ ಲಿಂಗಪೂಜೆಯಲ್ಲಿ ನಿರತನಾಗಿರುವವನೇ ಶರಣನು. ಶಾಂತಿಯ ವೇಷವನ್ನು ಧರಿಸುವುದು ಸುಲಭ. ಆದರೆ ಅಂತರಂಗದಲ್ಲಿ ಶಾಂತಿಯನ್ನು ನೆಲೆಗೊಳಿಸುವುದು ಕಷ್ಟ. ಮಹಾಶಾಂತಿಯಿಂದ ಕೂಡಿರುವವನೇ ನಿಜವಾದ ಶರಣನು, ಶಿವಭಕ್ತನು. ಯಾರನ್ನೂ ಬೇಡದೆ ತಾನಾಗಿ ಬಂದುದನ್ನು ಲಿಂಗಾರ್ಪಿತ ಮಾಡಿ ಮೌನದಿಂದ ಲಿಂಗಾವಧಾನಿ ಎನಿಸಿ ಸುಜ್ಞಾನಿಗಳ ಸಂಗದಲ್ಲಿ ಸುಖದಿಂದಿರು ವವನೇ ಶರಣನು. ಕೊಕ್ಕರೆಗಳ ಮಧ್ಯದಲ್ಲಿ ಹಂಸಪಕ್ಷಿ ಇರುವಂತೆ ಕಾಗೆಗಳ ಗುಂಪಿ ನಲ್ಲಿ ಕೋಗಿಲೆ ಇರುವಂತೆ, ಕ್ರೂರಮೃಗಗಳ ಮಧ್ಯೆ ಕಾಮಧೇನು ಇರುವಂತೆ, ಶರಣನು ಸಂಸಾರದಲ್ಲಿ ಇರುವನು. ಮರವೆ, ಮೌಢ್ಯ, ಆಸೆ, ಮುಳಿಸು ಇವೆಲ್ಲವೂ ಭವದ ಮಾರ್ಗವೆಂದು ತಿಳಿದು ಇವಕ್ಕೆ ಶರಣನು ದೂರವಾಗಿರುವನು. ನಿರ್ಜನ ಪ್ರದೇಶದಲ್ಲಿ ಪರಾಂಗನೆ ಮುಂದೆ ಬಂದು ನಿಂತರೆ, ಹೋಗುವ ದಾರಿಯಲ್ಲಿ ಕನಕವೃಷ್ಟಿ ಕರೆದರೆ, ಶತ್ರುಗಳು ಬಂದು ತನ್ನ ದೇಹವನ್ನು ಇರಿದರೆ ಧೃತಿಗೆಡದಿರುವವನೇ ನಿಜವಾದ ಶರಣನು. ಶಿವೋಹಂಭಾವದಿಂದ ಕೂಡಿ ಸರ್ವವನ್ನೂ ಶಿವಾರ್ಪಣಮಾಡಿ ಅಹಂಕಾರ ಮಮಕಾರ ರಹಿತನಾಗಿರುವವನೇ ಶರಣನೆನಿಸುವನು. ಶರಣಸತಿ ಲಿಂಗಪತಿ ನ್ಯಾಯ

ದಿಂದ ಉಭಯಭಾವವೂ ಅಡಗಿ ಸಮರಸತೆಯಿಂದ ಒಂದಾದ ಸಹಜಾನಂದ ಸ್ವರೂಪನೇ ನಿಜವಾದ ಶರಣನೆನಿಸುವನು.

ಆನಂದಭಕ್ತಿಯಿಂದ ಶರಣನು ನಡೆದರೆ ಸಮರಸಭಕ್ತಿಯಿಂದ ಲಿಂಗೈಕ್ಯನು ವಿರಾಜಿಸುವನು. ಐಕ್ಯದ ಜೀವನವು ಶಿಖಿಕರ್ಪೂರ ನ್ಯಾಯದಂತೆ ಲಿಂಗಾಂಗಗಳ ಸಂಗಡ ಏಕರೂಪದಿಂದ ವಿರಾಜಿಸುವುದು. ನೀರು ನೀರಿನಲ್ಲಿ, ಹಾಲು ಹಾಲಿನಲ್ಲಿ, ತುಪ್ಪವು ತುಪ್ಪದಲ್ಲಿ ಸಮರಸವಾದಂತೆ ಲಿಂಗದಲ್ಲಿ ಅಂಗದ ಸಮರಸಹೊಂದಿ ದ್ವೈತ ಭಾವವನ್ನು ಕಳೆದು ಶಿವಾದ್ವೈತದಲ್ಲಿ ಸಮರಸವಾದವನೇ ಲಿಂಗೈಕ್ಯನು. ತನ್ನನ್ನು ತಾನು ಅರಿತು ಅನುಭವದ ಹಾದಿಯಲ್ಲಿ ಅಘೋರಶಿವನಲ್ಲಿ ಐಕ್ಯವಾದವನೇ ನಿಜವಾದ ಲಿಂಗೈಕ್ಯನು. ಬೆಂಕಿ ಮತ್ತು ಕರ್ಪೂರಗಳು ಮೊದಲು ಎರಡಾಗಿ ಆಮೇಲೆ ಒಂದಾಗಿ ಆಮೇಲೆ ನಿರಾಕಾರವಾಗಿ ಇಲ್ಲವಾಗುವಂತೆ ಲಿಂಗಾಂಗ ಸಾಮರಸ್ಯದ ಸಂಬಂಧವು ಎಂದು ತಿಳಿಯತಕ್ಕದ್ದು. ಲಿಂಗೈಕ್ಯನಾದ ಮಹಿಮನು ಗೃಹಾಕಾಶವು ಮಹಾಕಾಶ ದಲ್ಲಿ ಅಡಗಿದಂತೆ ತನ್ನ ಜೀವಿತವನ್ನು ಕಳೆದುಕೊಂಡು ಅನುಪಮ ಷಟ್ಸ್ಥಲಮಾರ್ಗ ದಿಂದ ಪರಬ್ರಹ್ಮ ಸ್ವರೂಪನಾಗಿರುವನು. ಹೀಗೆ ತನ್ನ ನಿಜವ ತಾನರಿದು ಪ್ರೌಢತೆ ಯನ್ನೈದಿ ಪರತತ್ವರೂಪಾಗಿ ನಿಂದಾತನೇ ಲಿಂಗೈಕ್ಯನು. ಈ ಲಿಂಗೈಕ್ಯನ ಇರುವು ತತ್ವಮಸಿ ವಾಕ್ಯಗಳಿಗೂ ಅತೀತವಾದುದು. ನದಿಗಳು ಸಮುದ್ರದಲ್ಲಿ ಕೂಡಿ ತಮ್ಮ ಮೊದಲಿನ ನಾಮರೂಪಗಳನ್ನು ಕಳೆದುಕೊಳ್ಳುವ ಹಾಗೆ ಆಣವಾದಿ ಮಲಬದ್ಧರೂಪ ರಾದ ಅಂಗಗಳು (ಜೀವಿಗಳು) ಶಿವಾನುಭವ ಮಾರ್ಗದಿಂದ ಲಿಂಗೈಕ್ಯರೆನಿಸಿ ಪರಿಪೂರ್ಣ ರೆನಿಸುವರು. ಲಿಂಗೈಕ್ಯನು "ಏಕಮೇವಾ ದ್ವಿತೀಯಂ", "ಲಿಂಗೇನ ಸಹವರ್ತತೇ" ಎಂಬ ಶ್ರುತಿವಾಕ್ಯಗಳನ್ನು ತನ್ನ ನಿಜಕೃತಿಯಿಂದ ತನ್ನಲ್ಲಿ ಅಳವಡಿಸಿಕೊಳ್ಳುವನು ಎಂದು ಭಗವಾನ್ ಸಿದ್ಧಲಿಂಗೇಶ್ವರನು ಬೋಳಬಸವೇಶ್ವರನಿಗೆ ನಿರೂಪಿಸುವನು.

ಮಹಾಕವಿ ವಿರಕ್ತ ತೋಂಟದಾರ್ಯರಿಂದ ವಿರಚಿತವಾದ ಸಿದ್ಧೇಶ್ವರ ಪುರಾಣದ ೨೨ನೆ ಸಂಧಿಯಲ್ಲಿ ಪರಮಗುರು ಸಿದ್ಧಲಿಂಗೇಶ್ವರನು ನಿರಕ್ಷರ ಬೋಳ ಬಸವೇಶ್ವರನಿಗೆ ಬೋಧಿಸಿದ ಷಟ್ಸ್ಥಲ ತತ್ವ ಅಥವಾ ವೀರಶೈವ ಧರ್ಮವನ್ನು ಈ ಲೇಖನದಲ್ಲಿ ಸಂಗ್ರ ಹಿಸಿ ಕೊಡಲಾಗಿದೆ. ಅದೇ ಪುರಾಣದ ೨೩, ೨೪ನೆ ಸಂಧಿಗಳಲ್ಲಿ ಲಿಂಗಸ್ಥಲ ಮತ್ತು ಏಕೋತ್ತರ ಶತಸ್ಥಲಗಳನ್ನು ಶ್ರೀಗುರು ತೋಂಟದಾರ್ಯನು ಉಪದೇಶಿಸಿರುವನು. ವಿರಕ್ತ ತೋಂಟದಾರ್ಯನು ಕ್ರಿ. ಶ. ೧೫೬೦ ರಲ್ಲಿದ್ದಂತೆ ಕವಿಚರಿತ್ರೆಯಲ್ಲಿ ಹೇಳಿದೆ. ಈತನು ಸಿದ್ಧೇಶ್ವರ ಪುರಾಣ, ಪಾಲ್ಕುರಿಕೆ ಸೋಮೇಶ್ವರ ಪುರಾಣ, ಕರ್ಣಾಟಕ ಶಬ್ದ ಮಂಜರಿ, ಚಿದಾನಂದ ಸಿಂಧು, ನಿರಂಜನ ಶತಕ ಮೊದಲಾದ ಗ್ರಂಥಗಳನ್ನು ಬರೆದಿ ದ್ದಾನೆ. ಅಲ್ಲದೆ ಗುರುಬಸವ ಮನೋವಿಜಯ, ಮಾಯಿದೇವನ ಶತಕತ್ರಯಗಳಿಗೆ ವ್ಯಾಖ್ಯಾನ ಬರೆದಿದ್ದಾನೆ. ಇಷ್ಟೇ ಅಲ್ಲದೆ ಸಿದ್ಧಲಿಂಗೇಶ್ವರ ಶತಕ, ಪಾಲ್ಕುರಿಕೆ ಸೋಮ ನಾಥನ ಪಂಚಗದ್ಯಗಳ ಟೀಕೆ, ಬಸವೋದಾಹರಣ ಇತ್ಯಾದಿ ಇವುಗಳನ್ನು ಬರೆ

ದಂತೆ ಐತಿಹ್ಯವಿದೆ. ಈತನು ತುಮಕೂರು ಪಕ್ಕದಲ್ಲಿರುವ ಗೂಳೂರು (ನಂದಿಪುರ) ಚೆನ್ನಸಂಜೀಶನ ಶಿಷ್ಯ ಪರ್ವತೇಂದ್ರನ ಕರಜಾತನು. ಗೂಳೂರು ಸಿದ್ಧವೀರಣ್ಣೊಡೆಯರ ಕೃಪಾಪಾತ್ರನು. ತುಮಕೂರು ಜಿಲ್ಲಾ ಬಿಜ್ಜಾವರದಲ್ಲಿ ಆಳುತ್ತಿದ್ದ ತೋಂಟದ ಸಿದ್ಧಲಿಂಗ ಭೂಪಾಲಕನಿಗೆ ಇವನು ಗುರುವಾಗಿದ್ದನು. ಎಂದು ತೋಂಟವ ರಾಯನ ಸಾಂಗತ್ಯದಲ್ಲಿ ಹೇಳಿದೆ. ಈತನು ಗೂಳೂರು ಸಿದ್ಧವೀರಣ್ಣನ ಅಪ್ಪಣೆಯಂತೆ ಪಾಲ್ಕುರಿಕೆ ಸೋಮೇಶ್ವರ ಪುರಾಣವನ್ನು ಬರೆದಂತೆ ತಿಳಿದುಬರುತ್ತದೆ. ವೀರಶೈವ ಧರ್ಮವನ್ನು ನಿರೂಪಿಸಲು ಸಿದ್ಧಾಂತ ಶಿಖಾಮಣಿ, ಶಿವಯೋಗ ಪ್ರದೀಪಿಕೆ, ಶ್ರೀಕರಭಾಷ್ಯ, ಕ್ರಿಯಾಸಾರ, ಶಿವಾದ್ವೈತ ಮಂಜರಿ, ಧರ್ಮಶಿರೋಮಣಿ, ಅನುಭವ ಸೂತ್ರ, ಲಿಂಗಧಾರಣ ಚಂದ್ರಿಕೆ, ವೀರಶೈವ ಆನಂದ ಚಂದ್ರಿಕೆ ಮೊದಲಾದ ಗ್ರಂಥಗಳು ಸಂಸ್ಕೃತದಲ್ಲಿಯೂ ಗಣಭಾಷ್ಯ ರತ್ನಮಾಲೆ, ಶೂನ್ಯಸಂಪಾದನೆ, ಲಿಂಗಲೀಲಾ ವಿಲಾಸ ಚಾರಿತ್ರ, ದೀಕ್ಷಾಬೋಧೆ, ಬಸವಪುರಾಣ, ಚೆನ್ನಬಸವಪುರಾಣ, ಪ್ರಭುಲಿಂಗಲೀಲೆ, ಶಿವತತ್ವಚಿಂತಾಮಣಿ, ವೀರಶೈವ ಮಹಾಪುರಾಣ, ಪದ್ಮರಾಜಪುರಾಣ, ಶತಕತ್ರಯ, ವೃಷಭೇಂದ್ರ ವಿಜಯ, ಗುರುರಾಜಚಾರಿತ್ರ, ಹಾಗೆಯೇ ಪಂಡಿತಾರಾಧ್ಯ ಮತ್ತು ಪಾಲ್ಕುರಿಕೆ ಸೋಮನಾಥರಿಂದ ತೆಲುಗು ಭಾಷೆಯಲ್ಲಿಯೂ ಶಿವಪ್ರಕಾಶ, ಕರುಣ್ಯ ಪ್ರಕಾಶ ಮೊದಲಾದ ಕವಿಗಳಿಂದ ತಮಿಳು ಭಾಷೆಯಲ್ಲಿಯೂ ಹಲವಾರು ವೀರಶೈವ ಧರ್ಮಗ್ರಂಥಗಳು ವಿರಚಿತವಾಗಿವೆ. ವೀರಶೈವ ಧರ್ಮ ಮತ್ತು ಸಾಹಿತ್ಯವನು. ಅರಿಯಬೇಕೆಂಬ ಜಿಜ್ಞಾಸುಗಳು ಈ ಗ್ರಂಥಗಳನ್ನೆಲ್ಲಾ ಓದುವುದು ಅಗತ್ಯ ಇಂತಹ ಗ್ರಂಥಗಳಲ್ಲಿ ವಿರಕ್ತ ತೋಂಟದಾರ್ಯನ ಸಿದ್ಧೇಶ್ವರ ಪುರಾಣವು ರತ್ನಪ್ರಾಯವಾಗಿದೆ. ಶಿವಶರಣರ ಧರ್ಮವನ್ನೂ ವೀರಶೈವ ಸಿದ್ಧಾಂತವನ್ನೂ ತಿಳಿಯಲು ಈ ಗ್ರಂಥವು ಕೈಗನ್ನಡಿಯಂತಿದೆ.



# ವ್ಯಕ್ತಿತ್ವದ ವಿಕಾಸ

●

ಲೇಖಕರು :
**ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು,**
ಮೂರು ಸಾವಿರ ಮಠ, ಹುಬ್ಬಳ್ಳಿ.

**ಮ**ಹಾನ್ ವ್ಯಕ್ತಿತ್ವವು ಮನುಷ್ಯಜೀವನದಲ್ಲಿ ಎಲ್ಲಕ್ಕಿಂತ ಹೆಚ್ಚಿನ ಆಕರ್ಷಣೆಯಾಗಿರುತ್ತದೆ. ಸೂರ್ಯನಲ್ಲಿ ಕಿರಣ, ಹೂವಿನಲ್ಲಿ ಸೌಂದರ್ಯ, ವನದಲ್ಲಿ ಹಸಿರು, ಪಕ್ಷಿಗಳಲ್ಲಿ ಬಣ್ಣದಾಕರ್ಷಕವಿರುವಂತೆ ಮನುಷ್ಯನಲ್ಲಿಯೂ ವ್ಯಕ್ತಿತ್ವದ ಆಕರ್ಷಣವಿರುವದು ಸಹಜ. ವ್ಯಕ್ತಿತ್ವವುಳ್ಳ ಮನುಷ್ಯನ ಆಕರ್ಷಣದ ತೇಜವು ಇನ್ನುಳಿದವರಿಗೆ ಪ್ರಿಯಕರ ಮತ್ತು ಲಾಭಕರ.

ಶಕ್ತಿಶಾಲೀ ವ್ಯಕ್ತಿತ್ವವನ್ನಿಟ್ಟುಕೊಂಡವರು ಕೇವಲ ಸೃಷ್ಟಾರರಾಗದೆ ದೃಷ್ಟಾರರಾಗುತ್ತಾರೆ. ಅವರು ನೋಡುತ್ತಾರೆ, ಕೇಳುತ್ತಾರೆ; ಸೃಷ್ಟಿಯನ್ನು ಮಾಡುತ್ತಾರೆ. ಇಂಥವರೆದುರಿನಲ್ಲಿ ಸಾಧಾರಣ ಮನುಷ್ಯರನ್ನು ತುಲನೆಮಾಡಿದರೆ ಭೂಮ್ಯಾಕಾಶದಷ್ಟು ಅಂತರವಾಗುತ್ತದೆ. ಸಾಧಾರಣ ಜನರ ದೃಷ್ಟಿಯಲ್ಲಿ ಇಲ್ಲದಿರುವ ಶಕ್ತಿಯು ಇವರಲ್ಲಿ ಅಡಗಿಕೊಂಡಿರುತ್ತದೆ.

ಮಹಾನ್‌ವ್ಯಕ್ತಿತ್ವವು ಮನುಷ್ಯನಿಗೆ ಅಮರನಾಗಲು ಅಮೃತವನ್ನು ಕುಡಿಸುತ್ತದೆ. ಮಹಾನ್‌ವ್ಯಕ್ತಿತ್ವವುಳ್ಳವರು ಮುರುಕು ಗುಡಿಸಲಿನಲ್ಲಿದ್ದರೂ ಅವರ ಆತ್ಮಿಕ ಪ್ರಕಾಶದಿಂದ ಆ ಮುರುಕು ಗುಡಿಸಲು ಸುವರ್ಣ ಮಂದಿರಕ್ಕಿಂತಲೂ ಹೆಚ್ಚಾಗಿ ಸುಂದರವಾಗಿ ಕಾಣಿಸುತ್ತದೆ. ವ್ಯಕ್ತಿತ್ವಶಾಲೀ ಮನುಷ್ಯರು ನಿರಂತರ ನಿರ್ಭೀತರಿರುತ್ತಾರೆ. ಅವರನ್ನು ದ್ವೇಷಿಸುವವರಿದ್ದರೂ ಅವರಿಗೆ ತುಂಬಾ ಆದರವಿತ್ತು ಗೌರವಿಸುತ್ತಾರೆ.

ಜಗತ್ತಿನಲ್ಲಿ ಪ್ರಕಾಶ ತೆಗೆದುಕೊಂಡು ಬಂದು ಮತ್ತೆ ಅಂಧಕಾರದಲ್ಲಿ ತಿರುಗುವವರಿಗೆ ತುಂಬಾ ದರಿದ್ರರೆನ್ನಬಹುದು. ಜೀವನದಲ್ಲಿ ಸುಖಶಾಂತಿಗಳನ್ನು ಪಡೆಯದೆ ಕೇವಲ ಬಾಹ್ಯಾಡಂಬರದಲ್ಲಿಯೇ ಕಾಲ ಕಳೆಯುವವರಿಗೆ ವ್ಯಕ್ತಿತ್ವವೆಲ್ಲಿಯದು ?

ಅರಣ್ಯದಲ್ಲಿ ಸಿಂಹವು ತನ್ನ ವ್ಯಕ್ತಿತ್ವದ ಆಕರ್ಷಣದಿಂದ ರಾಜ್ಯವನ್ನಾಳುತ್ತದೆ. ಅಧೈರ್ಯ ಬರುವದೂ ಮತ್ತೊಬ್ಬರನ್ನು ಬಾರಿಬಾರಿಗೆ ಅವಲಂಬಿಸುವುದಾದರೂ ನಮ್ಮಲ್ಲಿ ವ್ಯಕ್ತಿತ್ವವಿಲ್ಲದಿರುವದೇ ಮೂಲಕಾರಣ. ಇದಕ್ಕಾಗಿಯೇ ನಮ್ಮಲ್ಲಿಯ ಶಕ್ತಿಯನ್ನು ದಿನದಿನಕ್ಕೆ ಕಳೆದುಕೊಂಡು ಶಕ್ತಿಹೀನರಾಗುತ್ತಿದ್ದೇವೆ. ದುಃಖಸಾಗರದಲ್ಲಿ ಮುಳುಗುತ್ತಿದ್ದೇವೆ. ನಾವಿಲ್ಲಿ ಸ್ವಾಮಿ ವಿವೇಕಾನಂದರ ವಾಣಿಯನ್ನು ಲಕ್ಷಿಸಬೇಕು.

"Weakness is the one cause of suffering, we become miserable, because we are weak. We lie, steal, kill and commit other crimes, because we are weak. We die because we are weak. Where there is no thing to weaken us. there is no death nor sorrow.

Stand up, be bold, be strong. Take the whole responsibility on your own shoulders and know that you are the creator of your own destiny. All the strength and succour you want is within your senses. Therefore make your own future."

(ನಮ್ಮ ನರಳುವಿಕೆಗೆ ಕಾರಣ ದುರ್ಬಲತೆಯೂ ಒಂದು. ನಾವು ದುರ್ಬಲರಿರುವದರಿಂದಲೇ ದುಃಖಾರ್ತರಾಗುವೆವು. ನಾವು ಹುಸಿ ನುಡಿಯುವದು, ಕಳವು ಮಾಡುವುದು ಮತ್ತು ಇತರ ಅಪರಾಧಗಳನ್ನೆಸಗುವದು ನಮ್ಮಲ್ಲಿಯ ದುರ್ಬಲತೆಯಿಂದಾಗಿಯೇ. ಸಾವು ಕೂಡ ನಮ್ಮ ದುರ್ಬಲತೆಯಿಂದಾಗಿಯೇ ಬರುವದು. ನಮ್ಮಲ್ಲಿ ದುರ್ಬಲಗೊಳಿಸುವಂತಹದೇನೂ ಇಲ್ಲದಿದ್ದಲ್ಲಿ ಸಾವೂ ಇರುತ್ತಿರಲಿಲ್ಲ; ದುಃಖವೂ ಇರುತ್ತಿರಲಿಲ್ಲ.

ಎದ್ದೇಳಿರಿ ! ದಿಟ್ಟರಾಗಿರಿ, ಸಂಪೂರ್ಣ ಹೊಣೆಯನ್ನು ನೀವೇ ಕೈಕೊಳ್ಳುವ ಬಲ ಪಡೆಯಿರಿ. ನಿಮ್ಮ ಭವಿತವ್ಯದ ನಿರ್ಮಾತೃ ನೀವೇ ಎಂಬುದನ್ನು ಅರಿಯಿರಿ. ನಿಮಗೆ ಬೇಕಾದ ಬಲ, ಯಶಸ್ಸು ನಿಮ್ಮಲ್ಲಿಯೇ ಹುದುಗಿದೆ. ಅದಕ್ಕಾಗಿ ನಿಮ್ಮ ಭವಿತವ್ಯವನ್ನು ನೀವೇ ರೂಪಿಸಿಕೊಳ್ಳಿರಿ.)

ಈ ಸಿಂಹವಾಣಿಯನ್ನಾಲಿಸಿದಾಗ ಅವರ ಆತ್ಮಶಕ್ತಿಯ ಪ್ರತಿಭೆಯೊಂದೊಡಗೂಡಿದ ಮಹೋಪದೇಶ ಕಣ್ಣೆದುರಿನಲ್ಲಿ ನಿಲ್ಲುತ್ತದೆ. ರೋಮಾಂಚಗಳು ಏಳುತ್ತವೆ.

ದಿಕ್ಕುಗಾಣದೆ ತಿರುಗುವವನಿಗೆ ಹುರುಪು ಹುಮ್ಮಸ್ಸುಗಳು ತುಂಬುತ್ತವೆ. ಮಲಗಿದವನನ್ನು ಎಚ್ಚರಿಸುತ್ತವೆ. ಅವರ ಅಂತಃಸ್ಫೂರ್ತಿಯ ಶಕ್ತಿಯೇ ಅಂತಹದು.

## ಚಾರಿತ್ರ್ಯಬಲ

ಮನುಷ್ಯನಿಗೆ ವ್ಯಕ್ತಿತ್ವವೆಲ್ಲಿಂದ ದೊರೆಯುತ್ತದೆಂಬುದನ್ನು ಕೇಳುವರೆ ಚಾರಿತ್ರ್ಯ ಬಲದಿಂದ ಎಂದು ಹೇಳಬಹುದು. ಮನುಷ್ಯನು ಚಾರಿತ್ರ್ಯ ಬಲದಿಂದ ತನ್ನಲ್ಲಿ ತಾನು ಮನೋಹರ ಪ್ರಕಾಶವನ್ನು ಕಾಣುತ್ತಾನೆ. ಆಗ ಆತನಿಗೆ ಜಗತ್ತಿನ ಸಮಸ್ತ ವಸ್ತುಗಳು ತುಚ್ಛವಾಗುತ್ತವೆ. ರತ್ನವನ್ನು ಹುಡುಕುವವನು ಕಲ್ಲುಚೂರುಗಳನ್ನೆಂದಿಗೂ ಅಪೇಕ್ಷಿಸನು. ಸಚ್ಚರಿತ್ರ ಮನುಷ್ಯನು ರಾಷ್ಟ್ರದ ರಚನೆ ಮಾಡಲು ಸಮರ್ಥನಿರುತ್ತಾನೆ. ಹೆಣದಲ್ಲಿ ಜೀವವನ್ನೂ, ಅಶಕ್ತರಲ್ಲಿ ಶಕ್ತಿಯನ್ನೂ ತಂದುಕೊಡುತ್ತಾನೆ. ಆತನಿಗೆ ಅಗ್ನಿಯು ಶೀತಲ ಜಲವಾಗಬಹುದು. ಸರ್ಪವು ಪುಷ್ಪಮಾಲೆಯಾಗಬಹುದು. ಇಂಥ ಮನುಷ್ಯರ ಚರಣಗಳಲ್ಲಿ ಸಂಸಾರವು ಬಾಗುತ್ತದೆ. ಸಚ್ಚರಿತ್ರ ಮನುಷ್ಯನು ಈ ಶಕ್ತಿಕಣಗಳನ್ನು ಜಗತ್ತನ್ನೇ ಚುಂಬಕದಂತೆ ತನ್ನತ್ತ ಎಳೆದುಕೊಳ್ಳುತ್ತಾನೆ.

ಮನುಷ್ಯನ ಬೆಲೆ ಅವನ ಚರಿತ್ರದಲ್ಲಿದೆ. ಚರಿತ್ರದಲ್ಲಿಯೇ ಅವನಿಗೆ ಆತ್ಮಬಲದ ಪ್ರಕಾಶ ದೊರಕುತ್ತದೆ. ಧನ, ಮಿತ್ರ, ಮಾನ ಮತ್ತು ಆನಂದ ಚರಿತ್ರವುಳ್ಳ ವ್ಯಕ್ತಿಗೆ ತನ್ನಿಂದ ತಾನೇ ಹೊಂದುತ್ತವೆ. ಮೃತ್ಯುವಾದ ಮೇಲೆಯೂ ಆತನ ಕೀರ್ತಿಲತೆ ಬೆಳೆಯುತ್ತದೆ. ಸಚ್ಚರಿತ್ರ ವ್ಯಕ್ತಿಯು ಎರಡನೆಯವರ ಆಶಯವನ್ನೆಂದಿಗೂ ಆಶಿಸಲಾರ. ಆತನ ಚರಿತ್ರೆಯ ಪ್ರಭಾವದಿಂದ ಅನ್ಯರು ಆತನನ್ನು ಆಶ್ರಯಿಸಿ ಉದ್ಧಾರರಾಗುತ್ತಾರೆ. ಚರಿತ್ರ ಬಲವುಳ್ಳ ಮನುಷ್ಯನ ಶರೀರದಲ್ಲಿ ಒಂದು ಪ್ರಕಾರದ ಜೀವಿತ ಜ್ಯೋತಿಯಿದ್ದುದಕ್ಕೇನೆ ನಾವು "ಮಾನವ ಜ್ಯೋತಿ" ಎಂದು ಹೇಳುತ್ತೇವೆ. ಇದೇ ಜ್ಯೋತಿಗೆ ಬೇರೆಬೇರೆ ಜಾತಿಯ ಜನರು ಬೇರೆಬೇರೆ ರೂಪದಲ್ಲಿ ಬಿತ್ತರಿಸುತ್ತಾರೆ. ಸಂಸ್ಕೃತದಲ್ಲಿ ಇದಕ್ಕೆ "ಓಜಸ್" ಎಂದು ಹೇಳುತ್ತಾರೆ. ಮುಸಲ್ಮಾನರು "ನೂರ್" ಎಂದು ಪಾಶ್ಚಾತ್ಯ ವಿದ್ವಾಂಸರು Magnetism ಮತ್ತು Human Electricity ಇತ್ಯಾದಿಯಾಗಿ ಕರೆಯುತ್ತಾರೆ.

ವಿಚಾರದ ತೆರೆಗಳು ವಿದ್ಯುತ್ತಿನ ತೆರೆಗಳಿಗಿಂತ ಅತ್ಯಂತ ಶಕ್ತಿಶಾಲಿಗಳಾಗಿವೆ. ಇದಕ್ಕಾಗಿ ಯಾವ ಮನುಷ್ಯನು ಉನ್ನತಿ, ಶಕ್ತಿ, ಉತ್ಸಾಹ ಮುಂತಾದವುಗಳನ್ನು ಮನಸ್ಸಿನಲ್ಲಿ ತುಂಬಿರುತ್ತಾನೆಯೋ ಅವನ ಜೀವನ ಹೆಚ್ಚು ಸುಖಶಾಂತಿಯಿಂದ ತುಂಬಿಕೊಂಡಿರುತ್ತದೆ ಮತ್ತು ಅವನ ಜೀವನಜ್ಯೋತಿ ಅತ್ಯಂತ ಬಲವುಳ್ಳದ್ದಾಗುವದಲ್ಲದೆ ಎರಡನೆಯವರ ಕೆಟ್ಟ ವಿಚಾರಗಳು ಅವನ ಮೇಲೆ ಬೀಳಲಾರವು. ಇನ್ನಿತರರು ಅವನಿಗೆ ಕೇಡು ಬಯಸಿದರೂ ಕೇಡು ಬಯಸುವವರೇ ಬಾಧೆಗೊಳಗಾಗುತ್ತಾರೆ.

ಈಶ್ವರ ಮತ್ತು ಜಗತ್ತಿನ ಆಕರ್ಷಣವು ಜ್ಞಾನೇಂದ್ರಿಯಗಳ ಜಾಗರಣೆಯಿಂದ ಪ್ರಾಪ್ತವಾಗುತ್ತದೆ. ಈ ಆಕರ್ಷಣವು ಪ್ರತಿಭಾಶಾಲಿ ವ್ಯಕ್ತಿಗಳಲ್ಲಿ ಕವಿಯ ಕಲ್ಪನೆಯಂತೆ ವಿಲಕ್ಷಣ ಆವಿಷ್ಕಾರವುಳ್ಳದ್ದಾಗಿರುತ್ತದೆ. ಇಂದ್ರಿಯಗಳ ಜಾಗರಣವು ಮನುಷ್ಯ ಜೀವನವನ್ನೂ ಒಳ್ಳೇ ದಾರಿಗೆ ಒಯ್ಯುತ್ತದೆ. ಅದರ ಕಾರ್ಯಗಳು ಗುಪ್ತವಿರಲಿ ಅಥವಾ ಪ್ರಕಟವಿರಲಿ ಅದರ ಪ್ರತ್ಯೇಕ ಕಾರ್ಯಗಳು ಮನುಷ್ಯನಲ್ಲಿ ಜಾಗೃತ ಸ್ವಭಾವಗಳನ್ನು ಉತ್ಪನ್ನ ಮಾಡುತ್ತವೆ.

## ಸ್ವಭಾವದ ಶಕ್ತಿಗಳು

ಸ್ವಭಾವದ ಶಕ್ತಿಗಳು ವಿಚಿತ್ರವಿರುತ್ತವೆ. ಸ್ವಭಾವವನ್ನನುಸರಿಸಿಯೇ ವಿಚಾರಗಳು ಕೂಡಿಕೊಂಡಿರುತ್ತವೆ. ಇಂದ್ರಿಯಗಳನ್ನೂ ಎಚ್ಚರಿಸುವದರಲ್ಲಿ ಸ್ವಭಾವಗಳೇ ಪ್ರಧಾನ ಕಾರಣ. ನೋಡುವದು, ಕೇಳುವದು, ಓದುವದು ಇವೆಲ್ಲ ಸ್ವಭಾವಗಳಾಗಿ ಇದ್ದರೂ ಇವುಗಳೇ ಸತ್ಕಾರ್ಯದಲ್ಲಿ ಪರಿಣತಗೊಂಡರೆ ಇವುಗಳ ಲಾಭ ಆಗ ಗೊತ್ತಾಗುವದು. ಇವುಗಳಿಂದಲೇ ಸುಪ್ತಶಕ್ತಿಗಳು ಜಾಗೃತವಾಗುತ್ತವೆ. ಒಳ್ಳೇ ಸ್ವಭಾವವನ್ನು ಅಂಟಿಸಿಕೊಳ್ಳುವವರಿಂದ ಹಾನಿಯಾಗದೆ ಅದರಿಂದ ಸಾಕಷ್ಟು ಲಾಭವಾಗಲು ಸಂದೇಹವಿಲ್ಲ.

ಮನುಷ್ಯನಿಗೆ ಬುದ್ಧಿ, ಕಣ್ಣು, ಕಿವಿ, ಮೂಗು, ಕೈ ಮತ್ತು ನಾಲಿಗೆ ಈ ಆರು ಎಲ್ಲಕ್ಕಿಂತ ಹೆಚ್ಚಿನ ಶಕ್ತಿಯುಳ್ಳವುಗಳು. ಇವುಗಳಲ್ಲಿ ಜಾಗರಣ ಉಂಟಾಗುತ್ತಲೇ ಈ ಸಂಸಾರದ ರಹಸ್ಯಭೇದಗಳಿಂದ ಉನ್ನತಿಯನ್ನು ಪಡೆಯಬಹುದು. ನಮಗೆ ಭಾಗ್ಯವಿಲ್ಲವೆಂದು ಕೆಲವರು ಹೇಳುತ್ತಾರೆ. ಈ ಸಿದ್ಧಾಂತ ಪ್ರಮಾದವುಳ್ಳದ್ದು. ಮನುಷ್ಯನೇ ಕುರುಡು ದಾರಿಯಲ್ಲಿ ನಡೆಯುತ್ತಿರುವಾಗ ಭಾಗ್ಯವೇನು ಮಾಡೀತು? ಭಾಗ್ಯದ ಉದ್ಧಾರ ಆತ್ಮದ ಆನಂದದಲ್ಲಿರುತ್ತದೆ.

ಹಚ್ಚಿದ ಒಂದು ದೀಪದಿಂದ ಸಾವಿರಾರು ದೀಪಗಳನ್ನು ಹಚ್ಚಬಹುದು. ಒಳ್ಳೆಯ ಕರ್ಮಗಳನ್ನು ಆರಿಸಿಕೊಂಡವರಿಗೆ ಭಾಗ್ಯದ ಬಾಗಿಲು ತೆರೆಯುವದು. ಕೆಟ್ಟ ಕರ್ಮಗಳನ್ನನುಸರಿಸುವವರು ನಿರಂತರ ಕಷ್ಟಜೀವನದಲ್ಲಿರುವ ಪ್ರಸಂಗ ಬರಬಹುದು. ಮನುಷ್ಯಜೀವನದ ದೈನಿಕ ಘಟನೆಗಳನ್ನು ನಿತ್ಯ ನೋಡುತ್ತೇವೆ, ಕೇಳುತ್ತೇವೆ. ಇವುಗಳಿಂದಲೇ ಮನುಷ್ಯನಿಗೆ ಮೂಲಜ್ಞಾನ ಉತ್ಪನ್ನವಾಗುತ್ತದೆ. ಮತ್ತು ಜೀವನದಲ್ಲಿ ಅನೇಕ ಮಹತ್ವಪೂರ್ಣ ಕಾರ್ಯಗಳನ್ನು ಮಾಡಲು ಸಮರ್ಥರಿರುತ್ತೇವೆ. ನಾವು ನಿತ್ಯ ದಾರಿಯಲ್ಲಿ ಹೆಣಗಳನ್ನು ನೋಡುತ್ತೇವೆ. ಆದರೆ ಮಹಾತ್ಮ ಬುದ್ಧನ ದೃಷ್ಟಿಯಲ್ಲಿ ಶುದ್ಧಿಯಿದ್ದುದಕ್ಕಾಗಿಯೇ ಆಕರ್ಷಣ ಶಕ್ತಿಯು ತೇಜ ಆತನಲ್ಲಿ ಮೂರ್ತಿಗೊಂಡಿತು. ಆತನ ದೃಷ್ಟಿ ಸೃಷ್ಟಿಯನ್ನು ಬದಲಿಸಿತು; ಜನರನ್ನು ಎಚ್ಚರಗೊಳಿಸಿತು. ದೃಷ್ಟಿಶುದ್ಧಿಯು ಬಲದಿಂದಲೇ ಅಂದಿನ

ಶಿವಶರಣರು ಇಂದಿಗೂ ನಮ್ಮ ಚಿತ್ತಪಟಲದಲ್ಲಿ ಚಿತ್ರಿತರಾಗಿದ್ದಾರೆ. ಅವರು ಕಣ್ದೆರೆದು ಕೆಲಸ ಮಾಡಿದ್ದಕ್ಕಾಗಿಯೇ ಅವರ ವ್ಯಕ್ತಿತ್ವ ಆಕರ್ಷಕವಾಗಿದೆ; ಸ್ತೋತ್ಕರ್ಷವಾಗಿದೆ.

ರಷ್ಯಾದ ಪ್ರವರ್ತಕನಾದ ಮ್ಯಾಕ್ಸಿಮ್ ಗೋರ್ಕಿಯು "ಅಪರಿವರ್ತಿತ ಅವಸ್ಥೆಯಲ್ಲಿರುವದು ತುಂಬಾ ದುಃಖಮಯವಾದದ್ದು. ಈ ಅವಸ್ಥೆ ಇದ್ದು ಒಂದು ಪಕ್ಷ ನಮ್ಮ ಹೃದಯ ಸಾಯದಿದ್ದರೆ ಆ ಪರಿಸ್ಥಿತಿಯು ಮತ್ತಿಷ್ಟು ದುಃಖದಾಯಕ" ಎಂದು ಹೇಳಿದ್ದಾನೆ. ಇದು ತುಂಬಾ ಸತ್ಯ. ಮನುಷ್ಯನು ತನ್ನ ಅನಂತ ಶಕ್ತಿಯ ಮೇಲೆ ಅಧಿಕಾರ ಮಾಡುತ್ತಾನೆ.

## ಆಕರ್ಷಣ ಶಕ್ತಿ

ಜಗತ್ತಿನ ನಾಲ್ಕೂ ನಿಟ್ಟಿನಲ್ಲಿ ಆಕರ್ಷಣ ಶಕ್ತಿಯ ಪ್ರಕಾಶವಿರುತ್ತದೆ. ಎಲ್ಲಿಯವರೆಗೆ ಗುರುತಿಸುವದಿಲ್ಲವೋ ಅಲ್ಲಿಯವರೆಗೆ ನಮ್ಮ ಶಕ್ತಿಗಳು ಬಿದ್ದ ಹೆಣದಂತೆಯೇ. ಹೂವನ್ನು ನಮ್ಮ ಜೇಬಿನಲ್ಲಿ ಇಟ್ಟುಕೊಂಡು ಅದರ ಸುಗಂಧ ಸೇವಿಸದಿದ್ದರೆ ನಾವು ದುರ್ಭಾಗ್ಯರು. ನಮ್ಮ ಎಡೆಬಟ್ಟಲದಲ್ಲಿ ಸ್ವಾದಿಷ್ಟ ಭೋಜನವಿದ್ದು ಅದನ್ನು ಸೇವಿಸಿ ಸುಖ ಪಡೆಯದಿದ್ದರೆ ನಮ್ಮ ದೋಷವಲ್ಲದೆ ಮತ್ತಾರದು?

ನ್ಯೂಟನ್ನನು "ನಾನು ನನ್ನ ವಿಷಯವನ್ನು ನಿರಂತರ ನನ್ನೆದುರು ಇಟ್ಟುಕೊಳ್ಳುತ್ತೇನೆ. ಸಾವಧಾನದಿಂದ ಅದರ ಅಂಧಕಾರವನ್ನು ನಾಶಮಾಡಿ ನನ್ನ ಮಾರ್ಗದಲ್ಲಿ ಬೆಳಕನ್ನು ತಂದುಕೊಳ್ಳುತ್ತಿದ್ದೇನೆ" ಎಂದು ಹೇಳುತ್ತಿದ್ದನಂತೆ. ಯಾವದೇ ಕೆಲಸವನ್ನು ಶಕ್ತಿಯೊಡಗೂಡಿ ಮಾಡುವದರಲ್ಲಿಯೇ ಸಫಲತೆಯೇ ಹೊರತು ಕೇವಲ ಹಾಹಾಕಾರ ಎಬ್ಬಿಸುವದರಲ್ಲಿ ಅಲ್ಲ.

ಮನುಷ್ಯನ ಚಿತ್ತದಲ್ಲಿ ಒಂದು ವಿಲಕ್ಷಣ ಮತ್ತು ವಿಚಿತ್ರ ಜಗತ್ತು ಸ್ಥಾಪಿತವಾಗುತ್ತದೆ. ಅದರಲ್ಲಿ ಮೃದುವಾದ ಗುಲಾಬಿ ಹೂಗಳಿಂದ ಹರಡಿರುವ ಆಕರ್ಷಕ ಉದ್ಯಾನವನಗಳಿದ್ದಾವೆ. ಆ ಉದ್ಯಾನವನದಲ್ಲಿ ಮೃತ್ಯುವಿನಂತೆ ಅಂಧಕಾರವುಳ್ಳ ಭಯಾನಕ ನಿರಾಶೆಯ ಭಾವಿಗಳಿದ್ದಾವೆ. ಅದರ ಆಳವನ್ನು ನೋಡುತ್ತಲೇ ಹೃದಯ ಕಂಪಿಸುತ್ತದೆ, ಮತ್ತು ಆ ಉದ್ಯಾನವನದಲ್ಲಿ ತ್ಯಾಗ ಮತ್ತು ಸಹಾನುಭೂತಿ ಮುಂತಾದವುಗಳಿಂದ ತುಂಬಿ ಹರಿಯುತ್ತಿರುವ ಪ್ರೇಮದ ಹಳ್ಳಗಳಿದ್ದಾವೆ. ಅದರಲ್ಲಿ ದ್ವೇಷ, ಅಸತ್ಯ, ಅಭಿಮಾನ, ಇಂದ್ರಿಯಲೋಲುಪತೆ ಇತ್ಯಾದಿಗಳಿಂದ ತುಂಬಿರುವ ನರಕವೂ ಅದೆ. ಅದರಲ್ಲಿ ಸತ್ಯ, ಸಂತೋಷ, ಭಕ್ತಿ ಮತ್ತು ನಮ್ರತೆಯ ಸ್ವರ್ಗವು ಕೂಡ ಪ್ರಕಾಶಿಸುತ್ತಿರುತ್ತದೆ.

ಈ ಮನುಷ್ಯನ ಚಿತ್ತದಲ್ಲಿ ಎಲ್ಲವೂ ಇದ್ದು ಕೆಟ್ಟದ್ದನ್ನು ಬಿಟ್ಟು ಒಳ್ಳೆಯದನ್ನು ಹಿಡಿಯುವದರಲ್ಲಿ ಜಾಣ್ಮೆಯಿದೆ, ತಾಳ್ಮೆಯದೆ, ಶಕ್ತಿಯಿದೆ. ಅಂತೆಯೇ ಹಿರಿಯರು

"ಒಂದು ಬಿಟ್ಟು ಒಂದು ಹಿಡಿ" ಎಂದು ಅನುಭವ ವಾಣಿಯಿಂದುಸುರಿದ್ದಾರೆ. ನಮ್ಮ ಜೀವನದಲ್ಲಿ ಜ್ಯೋತಿ ತುಂಬಬೇಕಾಗಿದೆ, ಶಕ್ತಿ ಗಳಿಸಬೇಕಾಗಿದೆ. ವ್ಯಕ್ತಿತ್ವವನ್ನು ವ್ಯಕ್ತಮಾಡಬೇಕಾಗಿದೆ. ಅದಕ್ಕಾಗಿ ಕಲುಷಿತ ಭಾವನೆಗಳನ್ನೂ ಹೊರದೊಗೆದರೆ ತನ್ನಿಂದ ತಾನೇ ಆಕರ್ಷಕವಾಗುತ್ತದೆ. ಸ್ಫೂರ್ತಿ ಬರುತ್ತದೆ. ಈ ಶಕ್ತಿಗಾಗಿ ನಿರಂತರ ಪರಿಶ್ರಮಪಟ್ಟಲ್ಲಿ ಅದರ ಸಫಲತೆ. ಶಕ್ತಿಸಿದ್ಧಿಗಾಗಿ ಈ ತಿಳಿನುಡಿಗಳು ನಮಗೆ ಆಕರ್ಷಕವಾಗಲಿ! ದಾರಿ ದೀಪಗಳಾಗಲಿ!

ಉತ್ತಿಷ್ಠತ, ಜಾಗ್ರತ ಪ್ರಾಪ್ಯವರಾನ್ನಿಬೋಧತ!

"Arise! Awake! and stop not
till the goal is reached!"

ಸತ್ಯಂ ಶಿವಂ ಸುಂದರಂ.



# ಸಖರಾಯಪಟ್ಟಣದ ಪರಿಚಯ

ಶ್ರೀ ಎ. ಡಿ. ಸೂರ್ಯನಾರಾಯಣರಾವ್, ಸಕ್ರೆಪಟ್ಟಣ.

ಸಖರಾಯ ಪಟ್ಟಣವು ಪುರಾಣ ಪ್ರಸಿದ್ಧವಾಗಿ ಶಂಬರಿಪುರವೆಂಬ ನಾಮಾಂಕಿತದಿಂದ ಶಂಬರಾಸುರನೆಂಬುವನಾಳ್ವಿಕೆಯಿಂದ ಪ್ರಾರಂಭವಾಗಿತ್ತೆಂತಲೂ ಅನಂತರ ರುಕ್ಮಾಂಗದನೆಂಬುವನು ಆಳಿದನೆಂತಲೂ ಆ ಕಾಲದ ಶಿಲಾಶಾಸನಗಳಿಂದ ರುಕ್ಮಾಂಗದನ ರಾಜಧಾನಿಯಾಗಿತ್ತೆಂತಲೂ ಆ ಕಾಲದಲ್ಲಿ ಊರಿನ ವಿಸ್ತೀರ್ಣವು ಪೂರ್ವಕ್ಕೆ ನಾಲ್ಕು ಮೈಲಿ ದೂರದ ಬಾಣೂರು ಗ್ರಾಮದ ಹತ್ತಿರ ಇರುವ ಶ್ರೀ ಆಂಜನೇಯಸ್ವಾಮಿಯ ದೇವಾಲಯವೂ ಈ ಊರಿನ ಹೆಬ್ಬಾಗಿಲು ಮುಂದಿನ ದೇವಾಲಯವಾಗಿತ್ತೆಂತಲೂ ಮತ್ತು ಈಶಾನ್ಯ ದಿಕ್ಕಿಗೆ ಮೂರು ಮೈಲಿಯಲ್ಲಿರುವ ಬ್ರಹ್ಮಸಮುದ್ರವು ಪಶ್ಚಿಮಕ್ಕೆ ೩ ಮೈಲಿ ದೂರದಲ್ಲಿ ಅಯ್ಯನಕೆರೆಯು, ಕೆರೆಯ ಉತ್ತರದಿಕ್ಕಿಗೆ ರಾಜಮನೆತನದವರ ಕಟ್ಟಡದ ಅವಶೇಷಗಳು ಮತ್ತು ರಾಜರ ಕುಲದೈವವಾದ ಶ್ರೀ ಕೇಶವ ದೇವಾಲಯವು ಹಾಳು ಬಿದ್ದಿರುವುದು ಕಾಣುತ್ತಿವೆ. ವಾಯುವ್ಯ ಮೂಲೆಯಲ್ಲಿ ಚಿಕ್ಕ ಅಕ್ಕಸಾಲಿಗರ ಬೀದಿ ಇತ್ತೆಂತಲು, ಆ ಸ್ಥಳವನ್ನು ಅಕ್ಕಸಾಲೆ ಬಾವಿಸರವೆಂತಲು ಕರೆಯುತ್ತಾರೆ. ಉತ್ತರಕ್ಕೆ ಆರು ಮೈಲಿ ದೂರದಲ್ಲಿರುವ ಪಟ್ಟಣಗೆರೆಯು ಈ ಊರಿನ ಕೊಟ್ಟಣದವರ ಬೀದಿಯಾಗಿತ್ತೆಂತಲು, ಬರುತ್ತ ಬರುತ್ತ ಕೊಟ್ಟಣ ಹೋಗಿ ಪಟ್ಟಣಗೆರೆ ಎಂದು ಕರೆಯುತ್ತಿದ್ದಾರೆ.

ಆಗ್ನೇಯ ದಿಕ್ಕಿಗೆ ಮೂರು ಮೈಲಿ ದೂರದ ಕಂಚುಕಾರನ ಹಳ್ಳಿಯು ಕಂಚುಕಾರರ ಬೀದಿಯಾಗಿತ್ತೆಂದು ಆ ಕಾಲದ ಶಿಲಾಶಾಸನಗಳಿಂದ ತಿಳಿಯಬರುತ್ತೆ. ಈ ಮೇಲ್ಕಂಡ ಆಧಾರಗಳಿಂದ ಈ ಊರಿನ ವಿಸ್ತೀರ್ಣವು ಆ ಕಾಲದಲ್ಲಿ ಹತ್ತು ಚದುರ ಮೈಲಿಗಳು ಇತ್ತೆಂದು ತಿಳಿಯುತ್ತದೆ. ಆ ಕಾಲದ ಪಟ್ಟಣದ ಜನಸಂಖ್ಯೆ 1 ಲಕ್ಷ

೨೦ ಸಾವಿರ ಇತ್ತೆಂದು ತಿಳಿಯುವುದು. ಈ ಪಟ್ಟಣವನ್ನು ರುಕ್ಮಾಂಗದನು ಮುನ್ನೂರು ವರ್ಷಗಳ ಹಿಂದೆ ಆಳುತ್ತಿದ್ದನು. ಅವನು ಶ್ರೀ ಕಲ್ಮರಡಿ ಅಜ್ಜಯ್ಯನವರ ಬೃಹನ್ಮಠವಾಗಿರುವ ಹುಲಿಕೆರೆ ಬೃಹನ್ಮಠದ ಮಹಾಸ್ವಾಮಿಗಳಿಗೆ ಕೊಟ್ಟಿರುವ ಸನ್ನದುಗಳು ಮತ್ತು ತಾಮ್ರದ ಶಾಸನವು ಸಹ ಈಗಲು ಅಲ್ಲಿ ಇರುತ್ತವೆ. ಅನಂತರ ಆಳಿದ ಬಲ್ಲಾಳರಾಯನ ಕಾಲದಲ್ಲಿ ಹತ್ತಿರದಲ್ಲೇ ಹರಿಯುವ ವೇದಾವತಿ ನದಿಗೆ ಆಣೆಕಟ್ಟು ಕಟ್ಟಲು ಪ್ರಾರಂಭಿಸಿ ಅದು ನಿಲ್ಲದೆ ಒಡೆದು ಹೋಗುತ್ತಿತ್ತು. ಆಗ ಇಲ್ಲಿಗೆ ೧೧ ಮೈಲಿ ದೂರದ ಕಡೂರಿನ ಹತ್ತಿರವಿರುವ ನಿರ್ವಾಣಸ್ವಾಮಿ ಮಠದ ಶ್ರೀ ಸ್ವಾಮಿಗಳಿಗೆ ಅಲ್ಲಿಯ ಮಹಮದೀಯರು ಬಹಳ ಕಿರುಕುಳಕೊಟ್ಟು ಅವರ ಮಹತ್ವದ ಪರೀಕ್ಷೆಗೋಸ್ಕರ ಒಂದು ಗಬ್ಬದ ಕುದುರೆಯನ್ನು ತಂದು ಶ್ರೀಗಳವರ ಎದುರಿನಲ್ಲಿ ನಿಲ್ಲಿಸಿ ಇದರ ಗರ್ಭದಲ್ಲಿರುವ ಮರಿ ಎಂತಹುದು ಎಂದು ಕೇಳಿದರೆಂತಲು, ಅದು ಹಣೆಯಲ್ಲಿ **ಚಿಕ್ಕ ಊಟಲ ಕಣಕಲು** ಗಂಡುಮರಿ ಎಂದು ಶ್ರೀಗಳು ಹೇಳಿದರೆಂತಲು, ಮಹಮದೀಯರು ಕುದುರೆ ಹೊಟ್ಟೆಯನ್ನು ಬಗೆದು ನೋಡಲು ಅವರು ಹೇಳಿದ ಹಾಗೆ ಇದ್ದುದ್ದರಿಂದ ಶ್ರೀಗಳನ್ನು ಕಲ್ಲು ಗಾಣಕ್ಕೆ ಹಾಕಿ ಅರದರೆಂತಲೂ ಆ ಗಾಣವು ಕಡೂರಿನ ಸಮೀಪದಲ್ಲಿ ಈಗಲೂ ಇದೆ. ಶ್ರೀಗಳು ಅವರ ಮಹತ್ತಿನಿಂದ ಹೊರಗೆ ಬಂದು ಆ ಕಿರುಕುಳವನ್ನು ತಡೆಯದೆ ಹೊರಡುವ ಕಾಲದಲ್ಲಿ ಹಾಲುಮತದವರು ನೀವಿಲ್ಲಿಂದ ಹೋಗಬಾರದು. ನಾವು ಬೇಕಾದ ಸಹಾಯಗಳನ್ನು ಮಾಡುತ್ತೇವೆಂದು ಪ್ರಾರ್ಥಿಸಿದರು. ನಿಲ್ಲದೆ ಕೊಂಕನ ಕಲ್ಲಿನಿಂದ ಕುಂಕ ನಡುವರಿಗೆ ಮೂರು ವರ್ಷಕೊಂದು ಪೈರು, ಮಹಮದೀಯರು ಹಾಳಾಗಲಿ ಹಾಲುಮತದವರು ಹೆಚ್ಚಲಿ ಎಂದು ಶಾಪವನ್ನು ಕೊಟ್ಟು ಅಲ್ಲಿಂದ ಹೊರಟು ಬರುತ್ತಾ ಈ ಕೆರೆ ಮಾರ್ಗವಾಗಿ ಹೋಗುತ್ತಿರಲು, ಕೆರೆ ಕಟ್ಟಿಸುತ್ತಿದ್ದ ಬಲ್ಲಾಳರಾಯನು ತೇಜೋಪುಂಜರಾದ ಗುರುಗಳನ್ನು ಕಂಡು ಅವರಿಗೆ ವಂದಿಸಿ ಈ ಕೆರೆಯನ್ನು ಎಷ್ಟುಸಾರಿ ಕಟ್ಟಿಸಿದರೂ ನಿಲ್ಲದೆ ಒಡೆದುಹೋಗುತ್ತಿದೆ ಎಂದು ಬಿನ್ನವಿಸಲು, ಶ್ರೀ ಗುರುಗಳು ಮಹಾರಾಜನಿಗೆ ಆಶೀರ್ವದಿಸಿ ನಾನು ಈ ಜಾಗದಲ್ಲಿ ಕುಳಿತುಕೊಳ್ಳುತ್ತೇನೆ ನನ್ನ ಮೇಲೆ ಏರಿಯನ್ನು ಕಟ್ಟು, ಆಮೇಲೆ ಅದು ಒಡೆಯುವುದಿಲ್ಲ ಎಂದು ಹೇಳಿ ಈ ಕೆರೇ ಏರಿ ಕೆಳಗಡೆ ಕುಳಿತುಕೊಳ್ಳಲು ಅವರ ಮೇಲೆ ಏರಿಯನ್ನು ಕಟ್ಟಲು ಪ್ರಾರಂಭಿಸಿದರಂತೆ. ಕೆಲಸ ನಡೆಯುತ್ತಿರುವಾಗ ಗುರುಗಳು ಮುಂದೆ ಹೋಗುತ್ತಿರುವುದನ್ನು ದೊರೆಯು ಕಂಡು ಓಡಿ ಹೋಗಿ ಗುರುಗಳನ್ನು ಕಂಡು ತಾವು ಹೋಗುತ್ತಿದ್ದೀರಿ ಮುಂದೆ ನನ್ನ ಮತ್ತು ಕೆರೆಯ ಗತಿ ಏನೆಂದು ಬಿನ್ನವಿಸಿಕೊಳ್ಳಲು, ಈ ಕೆರೆಗೆ ಅಯ್ಯನ ಕೆರೆ ಎಂದು ಕರೆದು ನಿನ್ನ ಜ್ಞಾಪಕಾರ್ಥವಾಗಿ ಬಲ್ಲಾಳೇಶ್ವರನೆಂಬ ನಾಮಾಂಕಿತದಿಂದ ಈಶ್ವರ ಪ್ರತಿಷ್ಠೆಯನ್ನೂ ಅಷ್ಟದಿಗ್ ದೇವತೆಗಳನ್ನು ಪ್ರತಿಷ್ಠಿಸು. ನಾನು ಹೋಗುವ ಮಾರ್ಗವಾಗಿ ನಾನು ನಿಂತಕಡೆ ಇಂದ ಇಲ್ಲಿಗೆ ನೀರು ಬರುವುದಾಗಿ ತಿಳಿಸಿ ನೀರು

ಇಲ್ಲದೆ ಇದ್ದ ಕಾಲದಲ್ಲಿ ಈಶ್ವರನಿಗೆ ಅನಾವೃಷ್ಟಿ ಅಭಿಷೇಕ, ಪರ್ಜನ್ಯ ಜಪ ಇವುಗಳನ್ನು ನಡಸಿದರೆ ಕೆರೆಯು ತುಂಬುತ್ತದೆ ಎಂದು ಅಪ್ಪಣೆ ಮಾಡಿಹೋಗಿ ಚಿಕ್ಕಮಗಳೂರಿನಿಂದ ಆಚೆ ಆರು ಮೈಲಿ ದೂರದ ನಿರ್ವಾಣ ಸ್ವಾಮಿ ಮಠದ ಸ್ಥಳಕ್ಕೆ ಹೋಗಿ ನೆಲಸಿದರೆಂದು ಪ್ರತೀತಿ. ಮಾರನೇವರ್ಷ ಗುರುಗಳು ಕೆರೆ ತುಂಬಿ ಪ್ರವಾಹ ಜಾಸ್ತಿಯಾಗಿ ಕೆರೆ ಒಡೆಯುತ್ತಾ ಪಟ್ಟಣ ನಾಶವಾಗುತ್ತೆ ಎಂಬ ಧ್ವನಿ ಆಕಾಶವಾಣಿಯಿಂದ ಕೇಳಿಸಿತು. ಕೆರೆಯ ರಕ್ಷಣೆಗಾಗಿ ಮುಂದೆ ಗಂಗೆಯು ಊರಿಗೆ ಹೋಗಿ ಊರಿನವರಿಗೆ ಗಂಗೆಯು ತುಂಬಿ ನಿಲ್ಲಲಾರದೆ ನಮ್ಮನ್ನು ಕಳಿಸಿದಳು. ಊರಿನವರು ಬರಬೇಕೆಂದು ಹೇಳಿ ಕರೆದು ಕೊಂಡು ಬರುವಂತೆ ಕಳುಹಿಸಿದಳು. ಊರಿನವರು ಆ ಹುಡುಗನನ್ನು ಕತ್ತರಿಸಿ ಹಾಕಿದ್ದರಿಂದ ಮುಂಡವು ಇಲ್ಲಿಯೇ ಬಿದ್ದು ಬುರುಡೆಯು ಹಾರಿ ಕೆರೆ ಹತ್ತಿರಕ್ಕೆ ಹೋಗಿ ಬಿದ್ದಿತೆಂದು ಪ್ರತೀತಿ ಇದೆ. ಗಂಗೆಯು ಈಶ್ವರನ ಹಿಂಬಾಗದಲ್ಲಿ ಧುಮುಕಿದಳೆಂದು ಆ ಜಾಗವು ನೋಡಲು ಈಗಲು ಇದೆ ಮತ್ತು ಕೆರೆಯ ಏರಿಯ ಮೇಲೆ ಆ ಹುಡುಗನ ಬುರುಡೆ 'ಹೂನ ಬಿಲ್ಲಪ್ಪೇವರ ಬುರುಡೆ' ಎಂದು ಪೂಜಿಸುತ್ತಿದ್ದಾರೆ. ಪಂಚಾಯತಿಯವರು ಆ ದೇವಸ್ಥಾನಕ್ಕೆ ಖಾನೆಶುಮಾರಿ ಒಂದನೆ ನಂಬರನ್ನು ಕೊಟ್ಟು ಅಲ್ಲಿಂದ ಮನೆಗಳ ಲೆಕ್ಕವನ್ನು ಹಾಕಿರುತ್ತಾರೆ.

ಈ ಅರಸನ ಕಾಲದಲ್ಲಿ ಊರು ಮಧ್ಯ ೫೦-೬೦ ಅಡಿಗಳ ಎತ್ತರದ ಬತೇರಿಯನ್ನು ಕಟ್ಟಿಸಿ ಅದರ ಮೇಲೆ ಸುಮಾರು ೨೦ ಅಡಿಗಳ ಉದ್ದವು, ಸುಮಾರು ೪-೫ ಅಡಿಗಳ ದಪ್ಪವು ಇರುವ ಫಿರಂಗಿಯು ಇರುತ್ತೆ. ಈ ಬತೇರಿ ಮೇಲೆ ನಿಂತು ನೋಡಿದರೆ ಸುತ್ತಲು ಹತ್ತು ಮೈಲಿಗಳ ದೂರದವರಿಗೆ ಚೆನ್ನಾಗಿ ಕಾಣುತ್ತದೆ. ಆ ಕಾಲದಲ್ಲಿ ಶತೃ ರಾಜರುಗಳು ಬಂದರೆ ದೂರದಲ್ಲಿಯೇ ನೋಡಲು ಇಷ್ಟು ಎತ್ತರವಾದ ಬತೇರಿಯನ್ನು ಕಟ್ಟಿರುತ್ತಾರೆಂದು ಊಹಿಸಬಹುದಾಗಿರುತ್ತೆ.

ಅನಂತರ ಸಖರಾಯನೆಂಬ ಪಾಳೆಗಾರನ ಆಳ್ವಿಕೆಗೆ ಬಂದು ಶಿಥಿಲವಾಗಿ ಕಳೆದು ಳಿದ ಭಾಗಕ್ಕೆ ಸಖರಾಯ ಪಟ್ಟಣವೆಂದು ಪ್ರತೀತಿ ಇದೆ. ಮತ್ತು ರಾಕ್ಷಸರ ಅವಶೇಷವು ರಾತ್ರಿ ಕಾಲವಾದ್ದರಿಂದ ರಾಕ್ಷಸರ ಆರಾಧ್ಯ ದೇವರಾದ ಶಕನಿ ರಂಗನಾಥ ಸ್ವಾಮಿಗೆ ನಮ್ಮ ಊರಿನಲ್ಲಿ ಮಧ್ಯ ರಾತ್ರಿಹೊತ್ತಿನಲ್ಲಿ ರಥೋತ್ಸವವು ನಡೆಯುವುದೆ ಮುಖ್ಯ ಕಾರಣವಾಗಿರುತ್ತೆ.

ಈ ಊರಿನಲ್ಲಿ ಪುರಾತನ ಕಾಲದ ಜೈನರ ದೇವಾಲಯವು ಶಿಥಿಲವಾಗಿರುವ ಸ್ಥಳದಲ್ಲಿ ಭಿನ್ನವಾದ ದೇವರುಗಳು ಇರುತ್ತವೆ.

ಈ ಊರಿನ ಗ್ರಾಮದೇವತೆಯಾದ ಅಂತರಗಟ್ಟೆ ಅಮ್ಮನವರ ದೇವಾಲಯವು ಇದೆ. ಅದರ ರಥೋತ್ಸವವು ಪ್ರತಿವರ್ಷ ವೈಭವದಿಂದ ನಡೆಯುತ್ತದೆ.

ಈ ಊರಿನ ಪವಿತ್ರ ಯಾತ್ರಾಸ್ಥಳವಾದ ಶ್ರೀ ಕಲ್ಮರಡಿ ಅಜ್ಜಯ್ಯನವರ ದೇವಾಲಯವು ಬಿಲ್ವವೃಕ್ಷದ ತೋಪಿನ ಮಧ್ಯದಲ್ಲಿ ವೇದವತಿ ನದಿ ದಡದಲ್ಲಿ ಕಂಗೊಳಿ

ಸುತ್ತಿದೆ. ಈ ಸ್ಥಳದಲ್ಲಿ ಶ್ರೀಗಳು ಜೀವನ್ಮುಕ್ತಿಮಾರ್ಗರಾದರೆಂದು ಪ್ರತೀತಿ ಇದೆ. ಈ ದೇವಾಲಯುವನ್ನು ಧರ್ಮಪ್ರಕಾಶ ಅರಳಿಗುಪ್ಪೆ ಶ್ರೀಮಾನ್ ಚಂದ್ರೇಗೌಡರು ಹಿಂದೆ ಬಹಳ ಹಣ ಖರ್ಚುಮಾಡಿ ಕಲ್ಲಿನ ದೇವಸ್ಥಾನವನ್ನು ಕಟ್ಟಿಸಿದ್ದು, ಅವರ ಮೊಮ್ಮಕ್ಕಳಾದ ಶ್ರೀಮಾನ್ ಎ. ಬಿ. ಬಸವೇಗೌಡರು ಸುಮಾರು ೩೦ ಸಾವಿರವನ್ನು ಖರ್ಚುಮಾಡಿ ಅವರ ಭಕ್ತಿಯನ್ನು ಬಿಚ್ಚಿ ತೋರಿಸಿದ್ದಾರೆ. ಶ್ರೀಮಠವನ್ನು ಅಭಿವೃದ್ಧಿಗೆ ತಂದಿದ್ದಾರೆ.

ಇಂಥ ದೊಡ್ಡ ಪಟ್ಟಣವಾಗಿ ಬಾಳಿದ ಶಿಲಾಶಾಸನ ಪುರಾಣ ಪ್ರಸಿದ್ಧವಾದ ಗ್ರಾಮವು ಕಾರಣಾಂತರದಿಂದ ಶಿಥಿಲಾವಸ್ಥೆಗೆ ಇಳಿದುದನ್ನು ನೋಡಿ ವಿಷಾದಿಸಬೇಕಾಗಿರುತ್ತೆ.

ಇಂತಹ ಐತಿಹಾಸಿಕ ಪ್ರಸಿದ್ಧವಾದ, ಕೌತುಕಪೂರ್ಣ ಚರಿತ್ರೆಯುಳ್ಳ ಸಖರಾಯ ಪಟ್ಟಣವು ಧರ್ಮಕ್ಷೇತ್ರವಾಗಿದೆಯೆಂದೇ ಹೇಳಬೇಕು. ಇದು ಧರ್ಮಮೂರ್ತಿಬಂದು ನೆಲಸಲು ಸೂಕ್ತಸ್ಥಳವಾಗಿತ್ತೆಂದು ಕಾಣುತ್ತದೆ. ಅಂತೇ ಅನೇಕ ಜನ ಗುರುಗಳು, ಸತ್ಪುರುಷರು ಇಲ್ಲಿ ಸಂಚರಿಸಿದ್ದಾರೆ. ಅಷ್ಟೇ ಅಲ್ಲದೆ ಮಠಗಳನ್ನು ಸ್ಥಾಪಿಸಿ ಆಧ್ಯಾತ್ಮಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಕೇಂದ್ರಗಳನ್ನಾಗಿ ಮಾಡಿ, ಗ್ರಾಮದ ಕೀರ್ತಿಗೆ ಕಾರಣರಾಗಿದ್ದಾರೆ. ಅವರಲ್ಲಿ ಶ್ರೀ ಗುರು ಹಾಲುಸ್ವಾಮಿಗಳು ಒಬ್ಬರು. ಮಹಾಸ್ವಾಮಿಗಳವರು ಮೆಟ್ಟಿದ ನೆಲವೆಲ್ಲ ಪಾವನವಾಗಿದೆ. ಇಲ್ಲಿರುವ ಶ್ರೀ ಗುರು ಹಾಲುಸ್ವಾಮಿ ಮಠ ಇದಕ್ಕೆ ಸಾಕ್ಷಿಯಾಗಿದೆ. ಈ ಮಠದ ಶಿಷ್ಯರು ಈ ಭಾಗದ ಸುತ್ತಮುತ್ತಣ ಭಾಗದಲ್ಲಿ ಅನೇಕ ಜನರಿದ್ದಾರೆ. ಮಠದ ಅಧಿಪತಿಗಳಾಗಿರುವ ಶ್ರೀ ಸದಾಶಿವ ಶಿವಾಚಾರ್ಯರು ಗಿರಿಯಾಪುರದ ಶ್ರೀ ಗುರು ಕುಮಾರಾಶ್ರಮದಲ್ಲಿದ್ದರೂ ಇಲ್ಲಿನ ಜನಮನದಲ್ಲಿ ತುಂಬಿಕೊಂಡಿದ್ದಾರೆ. ಅವರಿಗೆ ಸಲ್ಲುತ್ತಿರುವ ಸಖರಾಯ ಪಟ್ಟಣವು ಒಂದು ಹೆಮ್ಮೆ, ಪುಣ್ಯ.

——::——

# ಗಿರಿಯಾಪುರ



ಭಾಷ್ಯಾಚಾರ್ಯ ಷ॥ ಬ್ರ॥ ಶ್ರೀ ಸದಾಶಿವ ಶಿವಾಚಾರ್ಯ ಮಹಾಸ್ವಾಮಿಗಳ ಹೆಸರಿನೊಂದಿಗೆ ಹೊಂದಿಕೊಂಡು ಬಂದಿರುವ ಗಿರಿಯಾಪುರ, ಶ್ರೀಗಳವರ ಕರುಣೆಗೆ ಪಾತ್ರವಾಗಿ ಸಂಸ್ಕೃತಿಮಯವಾಗಿ ಬೆಳೆಯುತ್ತಿದೆ. ಇಲ್ಲಿ ನೆಲೆಸಿರುವ ಶ್ರೀ ಹೇಮರಡ್ಡಿ ಮಲ್ಲಮ್ಮನವರು ಬಡಗನಾಡು ಹೇಮರೆಡ್ಡಿ ಜನಾಂಗದವರ ಮನೆದೇವತೆ. ಈ ಜನಾಂಗದ ಭಕ್ತರು ಕಡೂರು ತಾಲ್ಲೂಕು ಹಿರೇನಲ್ಲೂರು, ಆಡಿಗೆರೆ, ಬಾಸೂರು ಮತ್ತು ತರೀಕೆರೆ ತಾಲ್ಲೂಕು ಬಗ್ಗವಳ್ಳಿ, ಗೊಂಡೇದಹಳ್ಳಿ, ಜೆನ್ನಾಪುರ, ಗೌರಾಪುರ, ನಾರಣಾಪುರ, ಹೆಬ್ಬೂರು–ಗ್ರಾಮಗಳಲ್ಲಿ ಇದ್ದು ಗಿರಿಯಾಪುರವು ಅವರ ಎಲ್ಲ ಕಾರ್ಯ ಚಟುವಟಿಕೆಗಳ ಕೇಂದ್ರವೆನಿಸಿದೆ.

ಗುರುವಿಡಿದು ಬಾಳಿದ ಹೇಮರೆಡ್ಡಿ ಮಲ್ಲಮ್ಮನ ಮಕ್ಕಳಾದ ಇವರು ತಾಯಿಯ ಎಲ್ಲ ಗುಣಗಳನ್ನು ಪಡೆದಿದ್ದಾರೆ. ಗುರುಸೇವೆ, ದೇವರ ಕಾರ್ಯಗಳೆಂದರೆ ಮನಸಾರೆ ಮಾಡುತ್ತಾರೆ. ಧಾರ್ಮಿಕವಾದ ಯಾವ ಕೆಲಸಗಳಿಗೂ ಇಲ್ಲವೆನ್ನುವುದಿಲ್ಲ. ಆ ಹತ್ತು ಹಳ್ಳಿಯ ಭಕ್ತರೆಲ್ಲ ಒಟ್ಟಿಗೆ ಸೇರಿ ಅನೇಕ ಧಾರ್ಮಿಕ ಹಾಗೂ ಸಾಮಾಜಿಕ ಕಾರ್ಯಗಳನ್ನು ಮಾಡುತ್ತಿದ್ದಾರೆ.

ತಮ್ಮ ಮೇಲ್ಮೆಗಾಗಿ ಒಂದು ಸುಸಂಘಟಿತ ಸಂಘವಿರಬೇಕೆಂದು ತಿಳಿದ ಈ ಜನ "ಬಡಗನಾಡು ಹೇಮರಡ್ಡಿ ಸಂಘ" ಎಂಬ ಸಂಸ್ಥೆಯೊಂದನ್ನು ಕಟ್ಟಿಕೊಂಡಿದ್ದಾರೆ. ಈ ಸಂಸ್ಥೆಯನ್ನು ಕಟ್ಟಿದ ಕೀರ್ತಿ ಯಜಮಾನ ದೇವರಮನೆ ಕೆ. ನಂಜಪ್ಪನವರದು. ಅತ್ಯಂತ ಹೀನಾವಸ್ಥೆಯಲ್ಲಿದ್ದ ಜನಾಂಗ ಈ ಸಂಘ ಸ್ಥಾಪನೆಯಾದ ಮೇಲೆ ಎಚ್ಚೆತ್ತು ವ್ಯವಸಾಯ ಮತ್ತು ವಿದ್ಯಾಭ್ಯಾಸಗಳೆರಡರಲ್ಲೂ ಮುಂದುವರಿಯುತ್ತ ಬಂದಿದೆ. ಜನಾಂಗದಲ್ಲಿ ಧರ್ಮ ಜಾಗೃತಿಯನ್ನುಂಟುಮಾಡಿದ ಶ್ರೀ ಸದಾಶಿವ ಶಿವಾಚಾರ್ಯ ಮಹಾಸ್ವಾಮಿಗಳನ್ನು ವಿದ್ಯಾಭ್ಯಾಸಕ್ಕೆಂದು ಬಾಲ್ಯದಲ್ಲಿ ಗಿರಿಯಾಪುರಕ್ಕೆ ಕರೆತಂದು ನಂಜಪ್ಪನವರು ಸಮಾಜಕ್ಕೆ ದೊಡ್ಡ ಉಪಕಾರ ಮಾಡಿದ್ದಾರೆ.

ಯಾವೊಂದು ಸ್ಥಳವಾಗಲೀ, ಪ್ರದೇಶವಾಗಲೀ ಪವಿತ್ರವಾಗಬೇಕಾದರೆ, ತೇಜಸ್ಸಿನಿಂದ ಬೆಳಗಬೇಕಾದರೆ ಅಲ್ಲಿ ಯಾವುದಾದರೂ ಒಂದು ಹಿರಿಯ ಶಕ್ತಿಯಿರಬೇಕು. ಅಂತೇ ಗಿರಿಯಾಪುರದ–ಹೆಸರು ಇಂದು ನಾಡವರ ನಾಲಗೆಯ ಮೇಲೆ ನಲಿದಾಡುತ್ತಿದ್ದರೆ ಅದು ಶ್ರೀ ಗುರುಕುಮಾರಾಶ್ರಮದಿಂದ; ಅಲ್ಲಿರುವ ಸನ್ನಿಧಿಯಿಂದ. ಶ್ರೀಗಳವರ ಭಕ್ತೋದ್ಧಾರ ಕಾರ್ಯದಲ್ಲಿ ಅನೇಕ ಜನ ಸಹಕಾರ ನೀಡಿ ಸೇವೆ ಸಲ್ಲಿಸಿದ್ದಾರೆ.

ಸನ್ನಿಧಿಯವರಂಥ ಮಹಾ ವಿಭೂತಿಪುರುಷರು ಸಖರಾಯಪಟ್ಟಣದ ಶ್ರೀ ಹಾಲುಸ್ವಾಮಿ ಮಠಕ್ಕೆ ಅಧಿಕಾರಿಗಳಾಗಲು, ಗಿರಿಯಾಪುರದಲ್ಲಿ ಶ್ರೀ ಗುರುಕುಮಾರಾಶ್ರಮ ಸ್ಥಾಪಿಸಲು ನೆರವಾದ ಮುಖ್ಯರಲ್ಲಿ ಶಿವಾನಂದ ಎಸ್ಟೇಟಿನ ಷ||ಬ್ರ||ಶ್ರೀ ಚನ್ನಬಸವ ಶಿವಾಚಾರ್ಯ ಸ್ವಾಮಿಗಳವರು, ಶಿವೈಕ್ಯ ಮರವಂಜ ಶಿದ್ಧಲಿಂಗೇಗೌಡರು, ಗಿರಿಯಾಪುರದ ಶ್ರೀ ಕೆ. ನಂಜಪ್ಪನವರು, ಶ್ರೀ ಜಿ. ಸಿ. ಶಿವರುದ್ರಪ್ಪನವರು, ಶಿವೈಕ್ಯ ಅಣ್ಣೇನಹಳ್ಳಿ ಚಿಕ್ಕಣ್ಣಶೆಟ್ಟರು, ಅಜ್ಜಂಪುರದ ಶ್ರೀ ಶಿದ್ದಪ್ಪ ಶಿವನಾಗಪ್ಪಶೆಟ್ಟರು, ಗೊಂಡೇದಹಳ್ಳಿಯ ಶ್ರೀ ತಿಮ್ಮೇಗೌಡರ ಗಿರಿಯಪ್ಪನವರು–ಮುಂತಾದವರೇ ಅಲ್ಲದೆ ಇನ್ನೂ ಅನೇಕ ಜನರಿದ್ದಾರೆ. ಅವರೆಲ್ಲರೂ ಗಿರಿಯಾಪುರಕ್ಕೆ ದೊಡ್ಡ ಉಪಕಾರ ಮಾಡಿದರೆಂದೇ ಹೇಳಬೇಕು.

ಎಂತಿರಲಿ, ಗಿರಿಯಾಪುರ ಗ್ರಾಮ ಶ್ರೀಸನ್ನಿಧಿಯವರ ಕೃಪೆಯಿಂದ ಹೊಸ ಬೆಳಕನ್ನು ಕಂಡಿತು. ಗುರುಕೃಪೆಯ ಹಿನ್ನೆಲೆಯಲ್ಲಿ ಮಾತೃಕೃಪೆಯನ್ನೂ ಪಡೆದ ಭಾಗ್ಯ ಗಿರಿಯಾಪುರದ ಭಕ್ತರದು. ಮಹಾದೇವಿ ಮಲ್ಲಮ್ಮ ತಮ್ಮ ಮಕ್ಕಳನ್ನು ಕರುಣೆಯಿಂದ ಕಾಯುತ್ತಿದ್ದಾಳೆ. ಅವಳ ಕರುಣೆಯಿಂದಾಗಿ ಗಿರಿಯಾಪುರ ಶ್ರೀಗಿರಿ ಕ್ಷೇತ್ರವೆನಿಸಿದೆ. ಅಲ್ಲಿಗೆ ಬಂದು ಹೋಗುವವರ ಮನದಲ್ಲಿ ನಿತ್ಯ ನೆನಪಾಗಿ ಉಳಿದಿದೆ.

ಬಡಗನಾಡು ಹೇಮರೆಡ್ಡಿ ಸಂಘದ ಕಾರ್ಯಾಲಯವಾದ ಗಿರಿಯಾಪುರದಲ್ಲಿ ಮೊದಲಿಗೆ ಶ್ರೀ ಮಲ್ಲಮ್ಮನವರ ದೇವಾಲಯವಿರಲಿಲ್ಲ. ಕ್ರಿ. ಶ. ೧೯೭೧ ರಲ್ಲಿ ಪ್ರಾರಂಭವಾದ ಸಂಘದ ಮೊದಲ ಕಾರ್ಯವೆಂದರೆ ಕ್ರಿ. ಶ. ೧೯೭೦ ರಲ್ಲಿ ಶ್ರೀ ದೇವಿಯರ ವಿಗ್ರಹ ಪ್ರತಿಷ್ಠಾಪನೆ. ಅಂದಿನಿಂದ ದೇವಿಯವರಿಗೆ ನಿತ್ಯಪೂಜೆ ನಡೆಯುತ್ತಿದೆ. ಪೂಜಾದಿಗಳು ಸಾಂಗವಾಗಿ ನಡೆಯಲು ಹತ್ತಾರು ಎಕರೆಯಷ್ಟು ಭೂಮಿಯನ್ನು ಸಂಘವು ಪಡೆದಿದೆ. ಈಗ ದೇವಿಗೆ ಭವ್ಯವಾದ ಮಂದಿರವೊಂದನ್ನು ಕಟ್ಟಲಾಗಿದೆ.

ಮಹಾದೇವಿ ಮಲ್ಲಮ್ಮ ಮಹಾಶರಣೆ. ಅವಳ ಜೀವನ ಕನ್ನಡ ಮತ್ತು ಆಂಧ್ರ ನಾಡಿನ ದಿವ್ಯಜ್ಯೋತಿ. ಆ ಮಹಾ ತಾಯಿಯ ಮಕ್ಕಳಾದರೂ ಶುದ್ಧ ಆಸ್ತಿಕರಾಗಿ ದೇವರು, ಧರ್ಮ, ಗುರು–ಮುಂತಾದುವುಗಳಲ್ಲಿ ಭಕ್ತಿ ವಿಶ್ವಾಸಗಳಿಂದ ಬಾಳು ಸಾಗಿಸುತ್ತಿದ್ದಾರೆ. ತಾಯಿಯ ಉಜ್ವಲ ಜೀವನ ಮನೆಮನೆಯಲ್ಲೂ ನಿತ್ಯಪಠನವಾಗಲೆಂಬ ಸದಾಶಯದಿಂದ ಗಿರಿಯಾಪುರದ ವರಕವಿ ವೇ|| ಚೆನ್ನಯ್ಯನವರಿಂದ ಶ್ರೀ ಮಲ್ಲಮ್ಮನ

ವರ ಪುರಾಣವನ್ನು ಬರೆಯಿಸಿ ಸಂಘದ ವತಿಯಿಂದ ಪ್ರಕಟಿಸಿ ತನ್ಮೂಲಕ ಸಾಹಿತ್ಯ ಸೇವೆಯ ಪುಣ್ಯವನ್ನು ಗಳಿಸಿದ್ದಾರೆ.

ಶ್ರೀ ಹೇಮರಡ್ಡಿ ಮಲ್ಲಮ್ಮನವರ ಜಾತ್ರೆಯು ಪ್ರತಿ ಹನ್ನೆರಡು ವರ್ಷಕ್ಕೊಮ್ಮೆ ಇಲ್ಲಿ ಅತ್ಯಂತ ವೈಭವವಾಗಿ ನಡೆಯುತ್ತದೆ. ಒಂದು ವಿಶೇಷವೆಂದರೆ, ಕರ್ನಾಟಕ ಮತ್ತು ಆಂಧ್ರದ ಅನೇಕ ಭಾಗಗಳಲ್ಲಿ ಈ ಜನಾಂಗದವರು ಇದ್ದರೂ ದೇವಿಯ ವಿಗ್ರಹವನ್ನು ಪ್ರತಿಷ್ಠಾಪಿಸಿ ಕ್ರಮವಾದ ಆರಾಧನೆ, ಪೂಜಾದಿಗಳನ್ನು ನಡೆಸುತ್ತಿರುವ ಮೊದಲ ಕೀರ್ತಿ ಗಿರಿಯಾಪುರದ್ದು.

ದೇವಿಯುವರು ತಮ್ಮ ಇಹ ಜೀವನದಲ್ಲಿ ಗುರು, ಲಿಂಗ, ಜಂಗಮದ ಬಗ್ಗೆ ಅಸೀಮಭಕ್ತಿಯಿಂದ ಸಾಂಸಾರಿಕ ತಾಪತ್ರಯಗಳನ್ನೆಲ್ಲ ಸಹನೆಯಿಂದ ಸಹಿಸಿ, ಶಿವ ಸಾಕ್ಷಾತ್ಕಾರ ಮಾಡಿಕೊಂಡು ಶಾಶ್ವತ ಶಾಂತಿ ಪಡೆದರು. ಅವಳ ಜಂಗಮಭಕ್ತಿಗೆ ಸಾಕ್ಷಿಯೆಂಬಂತೆ ದೇವಿಯುವರ ಗುಡಿಯ ಪಕ್ಕದಲ್ಲಿ ಬಿದರೆಯ ಲಿಂ|| ಪ್ರಭುಕುಮಾರ ಪಟ್ಟಾಧ್ಯಕ್ಷರ ಗದ್ದುಗೆಯು ನಮಗೆ ಗೋಚರಿಸುತ್ತದೆ. 'ಗುರುವಿಡಿದು ಬಾಳಿ' ಎಂದು ಭಕ್ತಜನಕ್ಕೆ ಸಂದೇಶವೀಯುತ್ತವೆ ಆ ಎರಡು ಮಂದಿರಗಳು.

ತಾಯಿಯಿಂದ ಬಂದ ಸಂಸ್ಕಾರದಿಂದ ಗಿರಿಯಾಪುರದ ಜನವಾದರೂ ಗುರು ಕಾರ್ಯನಿರತರಾಗಿ ದಂದುಗಮಯವಾದ ಈ ಜಗತ್ತಿನಲ್ಲಿ ಸ್ವಲ್ಪವಾದರೂ ಶಾಂತಿ ಪಡೆದಿದ್ದಾರೆ.

ಶ್ರೀ ಸದಾಶಿವ ಶಿವಾಚಾರ್ಯ ಮಹಾಸ್ವಾಮಿಗಳವರು "ಶಿವಾದ್ವೈತ ತತ್ತ್ವ ಪ್ರಚಾರಕ ಸಮಿತಿ"ಯನ್ನು ಸಂಸ್ಥಾಪಿಸಿದ ಮೇಲಂತೂ ಗಿರಿಯಾಪುರದ ಕೀರ್ತಿ ನಾಡನ್ನೇ ತುಂಬಿಕೊಂಡಿತೆಂದು ಹೇಳಬೇಕು. ಕಳೆದ ಹನ್ನೊಂದು ವರ್ಷದಿಂದ ನಡೆಸಿಕೊಂಡು ಬರುತ್ತಿರುವ ಜ್ಞಾನದಾಸೋಹ ಕಾರ್ಯದಲ್ಲಿ ಲಕ್ಷಾಂತರ ಜನ ಭಾಗ ವಹಿಸಿದ್ದಾರೆ. ಸಹಸ್ರಾರು ಜನ ಪುಣ್ಯಪುರುಷರು ಇಲ್ಲಿಯ ನೆಲವನ್ನು ತುಳಿದು ಪವಿತ್ರ ಮಾಡಿದ್ದಾರೆ. ಆ ಪುಣ್ಯವೇ ಗ್ರಾಮಕ್ಕೆ ರಕ್ಷೆಯಾಗಿದೆ.

ಗ್ರಾಮದಲ್ಲಿ ಸಾಂಸ್ಕೃತಿಕ ಚಟುವಟಿಕೆಗಳಿಗೇನೂ ಕೊರತೆಯಿಲ್ಲ. ಅದು ಗ್ರಾಮ ಕಲೆಗಳ ಕೇಂದ್ರ. 'ಗೆಳೆಯರ ಬಳಗ' ಮತ್ತು 'ಮಲ್ಲಿಕಾಂಬಾ ಮಂಡಳಿ'–ಎಂಬ ಸಂಸ್ಥೆಗಳು ಗ್ರಾಮಾಭಿವೃದ್ಧಿಗಾಗಿ ಗಣನೀಯ ಸೇವೆ ಸಲ್ಲಿಸುತ್ತಿವೆ. ಸಾಮಾಜಿಕ ಸುಧಾರಣಾ ಕಾರ್ಯಗಳಲ್ಲೂ ಗಿರಿಯಾಪುರ ಹಿಂದುಳಿದಿಲ್ಲ. ಕಳೆದ ವರ್ಷ ರಚಿತವಾದ 'ನವಜೀವನ ದರ್ಶನ ಮಂಟಪ' (ಸಾಮೂಹಿಕ ವಿವಾಹ ಮಹೋತ್ಸವ ನಡೆಸಿದ) ನಾಡಿನ ಎಲ್ಲರ ಮೆಚ್ಚುಗೆಗೆ ಪಾತ್ರವಾಗಿದೆ.

ಇವೆಲ್ಲ ಸಂಘಟನೆ, ಸೇವಾಶಕ್ತಿ, ದಾಸೋಹಭಾವನೆಗಳು ಬೆಳೆಯಲು ಶ್ರೀ ಸನ್ನಿಧಿಯವರು ಇಲ್ಲಿ ನೆಲೆಸಿದುದೇ ಕಾರಣವೆಂದು ಬೇರೆ ಹೇಳಬೇಕಾಗಿಲ್ಲ. ಮಹಾ ಸನ್ನಿಧಿಯವರ ತಪೋಬಲದಿಂದ ಗ್ರಾಮ ಮತ್ತಷ್ಟು ಕೀರ್ತಿಯಿಂದ ಸಂವರ್ಧಿಸುವು ದರಲ್ಲಿ ಸಂದೇಹವಿಲ್ಲ.

—ಗೊ. ರು. ಚ.

# ಸೃಷ್ಟಿ ಗುಡಿಯಲ್ಲಿ



ಇಳೆ ಕರುಣೆ ಕಂದಗಳು ಬೆಳೆಯುತಿವೆ ಸಾಲಾಗಿ
ಗಿಡಮರದ ಗುಡಿಯಲ್ಲಿ ಭಜಿಸುತಿವೆ ಒಂದಾಗಿ
ಸೃಷ್ಟಿ, ಸ್ಥಿತಿ, ಲಯ, ಘಳಿಗೆಗಳ ಮರೆದ ಮನವಾಗಿ

ಅಹ! ವನದೇವಿ, ಘನವರದ ಹಸ್ತ–ಪ್ರಶಸ್ತ
ಬೇಹುಗಳ ಕಾಟ ನೂರು ಮೈಲಾಚೆ ಅಸ್ತ
ಸ್ಥಾವರಕೂ ಚೈತನ್ಯ ಕಲಿಸಿಹುದಾವುದೀ ನೋಡಿ ?
ಜಂಗಮಕೂ ನವನವೀನತೆಯ ಹರಿಸದಿಹುದೇನು ಹಾಡಿ ?

ಹಿಂಸೆಯೋ ಇಲ್ಲಿ ? ಇಲ್ಲ, ಕೇಳಿ ನಗುವರಿಲ್ಲಿ
ದ್ವೇಷವೇ ? ಹೆಸರೆತ್ತೆ, ನೋರೆಯನೆ ಕಳೆವರಿಲ್ಲಿ
ಕೋಪವೇ ? ದುಂಬಿಯದು ದೂರ ಓಡಿಸಿ ಓಡಿಸುವುದಿಲ್ಲಿ

ಸುತ್ತ ಅರಸೊತ್ತಿಗೆಯೋ ? ಸ್ಥಾವರದ ರಾಜ್ಯವಿಲ್ಲಿ
ಚಿಲಿಪಿಲಿಯ ನೂರು ನರ್ತನದ ನಿಡಿದಾಣವಿಲ್ಲಿ
ಹಸುರ ಮೋಹನ, ಸಾಂತ್ವನದ ವಿಭಕ್ತ ಕುಟುಂಬವಿಲ್ಲಿ

ಗಿಡಮರದ ಗುಡಿಯಿಂದ ಬಾಜಿಸಿದ ನೂರುಗಂಟೆ
ಭಕ್ತಿ ಏಳಲು, ಇನ್ನೂ ಹೆಚ್ಚು ಇದಕೆ ಉಂಟೆ ?
ಕವಿಭಾವ ಸವಿ ಉದಿಸುವುದಿಲ್ಲಿ ಹೇಳಲುಂಟೆ ?

ಭಾನುವಿನ ಸಹಸ್ರ ಹರುಷಗಳ ತಾ ಸೂಸುತ್ತ
ಬಾಸಿಳಿದು ಬಂದ ಹೊಂಗಿರಣಕಷ್ಟು ಚೆಲುವು ಸುತ್ತ ?
ಎಣಿಸಲುಂಟೆ ? ಏಸು ಜನಗಳು ಧಾವಿಸುವರಿತ್ತ ?

ಮನುಜರಿರ, ಮನುಮಕ್ಕಳಿರ, ಚೇತನವನರಿಯರಿರ ?
ಸ್ಥಾವರದ ಗುಡಿಯಲ್ಲಿ ಕಲೆಯ ಕೆತ್ತಿಹುದನರಿಯರಿರ ?
ನಿಶ್ಶಾಂತಿ ನಿಷ್ಕ್ರಾಂತಿಯಲಿ ಕಾಲಕಳೆವುದಾವ ತೆರ ?

ಅನುದಿನವು ನೂರು ಕಲೆಗಳ ಬಿಡಿಸುವಾ ಶಿಲ್ಪಿಗಳ ನೋಡಬನ್ನಿ
ಅನುದಿನವು ಹೃದಯ ಮನಗಳ ವಿಡಿತವನೆ ಬೂಡಬನ್ನಿ ಸೊಂಪೆನ್ನಿ
ಅನುದಿನವು ಬಾರಿಸುವ ಗಂಟೆಗಳ ಓಂಕಾರವನೆ ಕೇಳಬನ್ನಿ

ಅದೆ, ಓಂಕಾರದೊಳು ಕೇಳುವಿರಿ
ಅಲ್ಲಿ ನಡೆಯುತಿಹ 'ವಿಭೂತಿ' ಪೂಜೆ
ಅದೆ ಓಂಕಾರದೊಳು ಪಡೆಯುವಿರಿ
ಬಾಳನರಳಿಸುವ ಸದ್ಭಾವದೋಜೆ

ಅಲ್ಲಿ ನಡೆದಿಹ ಪೂಜೆ ಇಹುದಿಂತು
ಎದೆಯ ಭಕ್ತಿಲತೆಯಿಂದ
ಸೃಷ್ಟಿಗುಡಿಯನು ಸುತ್ತಿ
ಹಸಿರು ಬೀಸಣಿಕೆ ಗಾಳಿ
ಸೃಷ್ಟಿಮೂರ್ತಿಗೆ ಸಲಿಸಿ
ಪುಷ್ಪಗಂಧವನೆ ಬಳಿದು
ಮೇಘವಸ್ತ್ರವನುಡಿಸಿ
ದುಂಬಿಗಂಟೆಯನೆ ಹೊಡೆದು
ಕಲಮಂತ್ರವನೆ ನುಡಿದು
ಕೋಕಿಲೆಯು ಕೊರಳ ನುಡಿಸಿ
ಮಾರುತನ ಸೇವೆ ಇಡಿಸಿ
ಕಮಲ ಮೋಹನ ಕರದಿ
ಜಾಜಿ ಮಲ್ಲಿಗೆ ಸರ್ವ
ನರ್ತನವ ಸೊಂಪನರ್ಚಿಸಿ
ಹೊಂಗಿರಣವಾರತಿಯು
ನೆತ್ತಿಹರು ಗುಡಿಯೊಳಗೆ

ಈ ಪೂಜೆ ನಮ್ಮ ಬಾಳೊಳಗೆ ಇರುತಿರಲು
ಓಜೆ, ತಾ ಅರಳರಳಿ ಇಡದೇನು ಕೊರಲು ?

—'ಅಚಲ ಶರಣ್'.

---

ಓಂ

ಸಾಹಿತ್ಯ, ಮಾನವ-ವಾಚನವಲ್ಲಿ ಪಲ್ಲವ ;
ಸುಜ್ಞಾನ ಸುಮ ಪರಿಮಳ ;
ಸ್ವಾನುಭವ ಸುಮಧುರ ಫಲ.
ಸಾಹಿತ್ಯ,
ಮಾನವ ಜೀವನ ಪ್ರತಿಬಿಂಬ !
ಚಿರಜೀವನಾಧಾರಸ್ತಂಭ ! !



ಸರ್ವ ಕಲೆ-ಕೃತಿಗಳ
ಸಾರ ಸರ್ವಸ್ವ !!!

# ಭೂತಿ - ವಿಭೂತಿ.



ಸೂರ್ಯ ಸಿಂಹಾಸನಾಧೀಶ್ವರ ಶ್ರೀ ಜ. ಚ. ನಿ.

**ಭೂ**ತಿಯೆಂದರೆ ಸಾಮಾನ್ಯವಾಗಿ ಇರುವಿಕೆ. ವಿಭೂತಿಯೆಂದರೆ ವಿಶೇಷ ರೂಪದಲ್ಲಿ ಇರುವಿಕೆ. ಭೂತಿ ಪ್ರವೃತ್ತಿ; ವಿಭೂತಿ ನಿವೃತ್ತಿ; ಭೂತಿ ಮಾನುಷ ಶಕ್ತಿ; ವಿಭೂತಿ ಅಮಾನುಷ ಶಕ್ತಿ. ಭೂತಿ ಪಾರ್ಥಿವ ಸಂಪತ್ತು; ವಿಭೂತಿ ಪಾರಮಾರ್ಥಿಕ ಸಂಪತ್ತು. ಭೂತಿ ಲೌಕಿಕ ಮಹಿಮೆ; ವಿಭೂತಿ ಅಲೌಕಿಕ ಮಹಿಮೆ. ಭೂತಿ ದೈಹಿಕ ಪ್ರಕಾಶ. ವಿಭೂತಿ ದೈವಿಕ ಪ್ರಕಾಶ. ಭೂತಿ ಪಾರ್ಥಿವಾಂಶ ಭಸಿತ. ವಿಭೂತಿ ಪಾದೋದಕ ಪೂತ ಭಸಿತ.

ಮುಗಿಲುನೀರು ನೆಲಕ್ಕೆ ಬರುವುದು ನೆಲದಲ್ಲಿರುವುದು – ಗಿಡಮರಗಳ ಸೇರಿ ಹೂವು ಹಣ್ಣಾಗುವುದು, ರಸವಾಗುವುದು ಭೂತಿ. ನೆಲ ಕಡಲಗಳ ನೀರು ಮುಗಿಲ ಸೇರುವುದು, ಮೋಡಾಗುವುದು, ಮಿಂಚಾಗುವುದು ವಿಭೂತಿ. ಪಡಿ ಪದಾರ್ಥವಾಗುವುದು ಭೂತಿ; ಪರಮ ಪ್ರಸಾದವಾಗುವುದು ವಿಭೂತಿ. ಚಿನ್ನವಾಗುವುದು ಭೂತಿ; ಚಿನ್ನವೊಡವೆಯಾಗುವುದು ವಿಭೂತಿ.

ಭೂತಿಯಾಗುವುದು ಪ್ರಕೃತಿ ನಿಯಮದಿಂದ! ವಿಭೂತಿಯಾಗುವುದು ಪ್ರಕೃತಿ ಸಂಯಮದಿಂದ! ಪ್ರಕೃತಿ ಸಂಯಮ ಸರ್ವ ಜೀವರ ಸ್ವತ್ತಲ್ಲ. ಸರ್ವೋತ್ಕೃಷ್ಟ ಸುಸಂಸ್ಕಾರವುಳ್ಳ ಮಹಾ ವ್ಯಕ್ತಿಗೆ ಮಾತ್ರ ಸಾಧ್ಯ. ಉನ್ನತದ ಉತ್ತಮ ಚರಿತನಿಗೆ ಮಾತ್ರ ಸಾಧ್ಯ. ಪ್ರಕೃತಿ ನಿಯತಿಗೆ ಪಾಲುಮಾರುವವರೆ ನೂರಕ್ಕೆ ನೂರು; ಸಾವಿರಕ್ಕೆ ಸಾವಿರ. ಪ್ರಕೃತಿ ಸಂಯಮಿಯಾಗುವವನು ಲಕ್ಷಕ್ಕೊಬ್ಬನೋ ಕೋಟಿಗೊಬ್ಬನೋ? ಸಾಗರಕ್ಕೆ ನದಿಯ ರೂಪದಲ್ಲಿ ಹರಿದು ಹೋಗುವ ನೀರನ್ನು ಆಣೆಕಟ್ಟು

ಕಟ್ಟಿ ನಿಲ್ಲಿಸಿ ಬೆಳೆಗೂ ಬೆಳಕಿಗೂ (ವಿದ್ಯುತ್ತಿಗೂ) ಉಪಯೋಗಿಸಿಕೊಂಡರೆ ಆಗ ಆ ನದಿ ಜಲ ಭೂತಿಯಿಂದ ವಿಭೂತಿಗೇರುತ್ತದೆ. ಅದರ ಸಾರ್ಥಕತೆಯೇನು? ಅದರ ಆದರ್ಶತೆಯೇನು? ಅದರ ಉಪಯುಕ್ತತೆಯೇನು? ಜಡ ಜಲದ (ಭೂತಿಯ) ಸಂಯಮ (ಬಂಧನ) ದಿಂದ ಜನಜೀವನಕ್ಕೊಂದು ಜಾಗತಿಕ ಪ್ರಯೋಜನ ಒದಗುವಾಗ ಚೇತನಾತ್ಮಕ ಭೂತಿ (ವ್ಯಕ್ತಿ) ಯೊಂದು ಪ್ರಪಂಚದತ್ತ ಹರಿವ ತನ್ನ ಪ್ರಕೃತಿ ಸಂಯಮದಿಂದ 'ವಿಭೂತಿ' ಪದಕ್ಕೇರಿದರೆ ಆ ದಿವ್ಯ ಚೇತನಾತ್ಮಕ ಪರಮಾಮೃತದ ಬೆಳೆಯನ್ನು ಚಿಜ್ಜ್ಯೋತಿಯ ಆ ಹಿರಿ ಬೆಳಗನ್ನು ವರ್ಣಿಸಲಳವೆ? ಇವು ಇಹ ಪರ ಸತ್ಯ ಸೌಖ್ಯ ಸಾಧನಗಳಾಗಿ ನಿಲ್ಲುತ್ತವೆ. ಅಂತಹ ಆ ಆಧ್ಯಾತ್ಮ ಶ್ರೀಯನ್ನು ಪಡೆದ ಮಹಾನುಭಾವನು 'ವಿಭೂತಿ' ಯಾಗಿ ಬೆಳಗುತ್ತಾನೆ. ಊರ್ಜಿತ ಸತ್ವಶಾಲಿಯಾಗಿ ಶೋಭಿಸುತ್ತಾನೆ, ಮಹಾಮಹಿಮನಾಗಿ ಮೆರೆಯುತ್ತಾನೆ.

ವಿಭೂತಿ ಪದವು ವಸ್ತುನಿಷ್ಠವೂ ವ್ಯಕ್ತಿನಿಷ್ಠವೂ ಆಗಿದೆ. ಸರ್ವಜನಕ್ಕೆ ಉಪಯುಕ್ತವಾದ ಒಂದು ವಸ್ತುವೂ ವಿಭೂತಿ ಯೆನಿಸಿಸುತ್ತದೆ. ಅಂತೆಯೆ ಸರ್ವಜನಮಾನ್ಯನಾದ ಒಬ್ಬ ವ್ಯಕ್ತಿಯೂ ವಿಭೂತಿ ಪುರುಷನೆನಿಸಿಸುತ್ತಾನೆ. ಇವೆರಡೂ ಪರಸ್ಪರ ಪೂರಕವಾಗಿವೆ. ಆದರೂ ಆ ವಸ್ತು ನಿಷ್ಠ ವಿಭೂತಿತ್ವಕ್ಕಿಂತ ವ್ಯಕ್ತಿನಿಷ್ಠ ವಿಭೂತಿತ್ವವು ವಿಶಿಷ್ಟವಾದುದು, ವಿಭಾಸಕವಾದುದು.

ಒಬ್ಬ ವಿಭೂತಿ ಪುರುಷನ ಪ್ರಕೃತಿಯಲ್ಲಿಯೆ ಜಡಾಜಡ ವಸ್ತುಗಳೆರಡೂ ಇರುತ್ತವೆ. ಆತನ ಜಡವಸ್ತುವಾದ ಅಂಗವು ಆತನ ಆ ದಿವ್ಯಾತ್ಮನ ವಿಭೂತಿತ್ವ ವಿಭಾಸಕ್ಕೆ ಸಾಧನವಾಗಿಯೇ ಇರುತ್ತದೆ. ಆತನಿಗೆ ಅದು ಅಪ್ರಧಾನವಾಗಿದ್ದರೂ ಉಳಿದ ಜನತೆಗೆ ಆತನ ಆ ಅಂಗವೂ ಸಹ ಅತಿಪ್ರಾಕೃತಿಕ ಮಹಾಸಂಪತ್ತಾಗಿರುತ್ತದೆ. ಆತ್ಮಪುಷ್ಟಿಯನ್ನು ಸಂತುಷ್ಟಿಯನ್ನು ತರುವ ಮಹಾ 'ವಿಭೂತಿ' ಯಾಗಿಯೇ ಇರುತ್ತದೆ. ಅವೆರಡಕ್ಕೂ ಆಗ ಭೇದವೇ ತೋರುವದಿಲ್ಲ. ಸಾಲದ್ದಕ್ಕೆ ಇದರ ಮುಖಾಂತರವೇ ಆ ಚೇತನವೂ ಸಹ ಪೂಜಿತವಾಗುತ್ತದೆ; ಪ್ರಕಾಶಿತವಾಗುತ್ತದೆ.

ವಿಭೂತಿಯ ವಿಶಿಷ್ಟ ಶಕ್ತಿಯೆಂದರೆ ತನ್ನಾರಾಧಿಸುವವರನ್ನು ತನ್ನಂತೆ ಮಾಡಿಕೊಳ್ಳುವುದು ತನ್ನಾಶ್ರಯಿಸಿದುದಕ್ಕೆ ತನ್ನ ವಿಶಿಷ್ಟ ಶಕ್ತಿಯನ್ನು ಸಂಗ್ರಹಿಸಿ ಕೊಡುವುದು. ಜಲದ ಸಂಗದಿಂದ ಬಾಡಿದ ಗಿಡವೆಲೆ ಹೂವುಗಳು ವಿಕಾಸಗೊಳ್ಳುವಂತೆ; ಹಣ್ಣುಗಳು ರಸಪುಷ್ಟಿಗೊಳ್ಳುವಂತೆ; ಹಸಿದವನು ಅನ್ನವನ್ನುಂಡಂತೆ; ಜಡವಸ್ತುಗಳಿಂದ ಜಡಾಂಗವು ಮಾತ್ರ ಅರಳುತ್ತದೆ. ಚೇತನ ವಿಭೂತಿ ಪುರುಷನ ಸಂಗದಿಂದ ಚೇತನಾಚೇತನ ವಸ್ತುಗಳೆರಡೂ ವಿಕಾಸಗೊಳ್ಳುತ್ತವೆ; ಪ್ರಕಾಶಗೊಳ್ಳುತ್ತವೆ.

ಅನ್ನದಿಂದ ಅನ್ನಮಯಕೋಶ ಮಾತ್ರ ಪುಷ್ಟಿಗೊಳ್ಳುತ್ತದೆ. ವಾಯುವಿನಿಂದ ಪ್ರಾಣಮಯಕೋಶ ಮಾತ್ರ ಪರಿಪುಷ್ಟವಾಗುತ್ತದೆ. ಜ್ಞಾನ ಸಂಗ್ರಹದಿಂದ ವಿಜ್ಞಾನಮಯ ಕೋಶ ಮಾತ್ರ ವಿಕಾಸವಾಗುತ್ತದೆ. ಅದೇ ವಿಭೂತಿ ಪುರುಷನ ಕಾರುಣ್ಯ

ದಿಂದ ಎಲ್ಲ ಕೋಶಗಳೂ ಪಂಚಕೋಶಾಧಿಪತಿಯೂ ಒಂದೊಂದು ಬಗೆಯಲ್ಲಿ ವಿಕಾಸಗೊಳ್ಳುತ್ತವೆ; ವಿಶುದ್ಧಿಗೊಳ್ಳುತ್ತವೆ.

ವಿಭೂತಿ ಪುರುಷ ಅವನೊಬ್ಬ ವಿಶ್ವಜ್ಯೋತಿ, ಚಿಜ್ಜ್ಯೋತಿ. ಅವನುದಯ ದಿವಾಕರನುದಯವಂತೆ! ಆತನಿರವು ಆತನ ದರುಶನವು ಅನೇಕರ ಅಂತಃಕರಣವನ್ನು ಆಕರ್ಷಿಸುತ್ತದೆ. ಅನೇಕರ ಅಂತಶ್ಚೇತನಕ್ಕೆ ಸ್ಫೂರ್ತಿಯನ್ನು ಕೊಡುತ್ತದೆ. ಅನೇಕರ ಪಾಪ ಪಂಕವನ್ನು ಶೋಷಿಸುತ್ತದೆ. ತಾರೆಗಳು ಅದೆಷ್ಟುಕೋಟಿ ಮೂಡಿದರೂ ಬೆಳಕು ಬಾರದು. ಚಂದ್ರರು ಅದೆಷ್ಟು ಮೂಡಿದರೂ ಹಗಲು ಬಾರದು. ಏಕೈಕ ಜಗಚ್ಚಕ್ಷುವಾದ ರವಿಯು ಉದಯಿಸಿದಾಗಲೆ ಹಗಲಾಗಬಲ್ಲುದು. ಜೀವಕೋಟಿ ಜಾಗ್ರತಗೊಳ್ಳಬಲ್ಲುದು; ಚೇತನಗೊಳ್ಳಬಲ್ಲುದು; ಕೆಸರು ಕೊಳೆ ಒಣಗಬಲ್ಲುದು; ಮೇಘಾದಿಗಳು ದ್ರವಿಸಬಲ್ಲವು. ಅಂತೆಯೆ ವಿಭೂತಿ ಪುರುಷನೊಬ್ಬ ವಿಶ್ವಚಕ್ಷು; ವಿಶ್ವಚೇತನ.

ವಿಭೂತಿ ಜ್ಯೋತಿಗೆ ಏಕಮುಖವಲ್ಲ, ಅನೇಕ ಮುಖ. ಅದು ಚರಾಚರ ಪ್ರಪಂಚವನ್ನು ವ್ಯಾಪಿಸಿದೆಯಾದರೂ ಅಲ್ಲೆಲ್ಲ ವೆಗ್ಗಳವಾಗಿರುವುದಿಲ್ಲ. ಹಾಲೊಳಗಿನ ತುಪ್ಪದಂತೆ ಅದು ಹುದುಗಿಕೊಂಡಿರುತ್ತದೆ. ಸರ್ವದರಲ್ಲಿಯೂ ಸಾಮಾನ್ಯ ಸ್ವರೂಪದಲ್ಲಿರುವ ಅದು ಆಗಾಗ ಅಲ್ಲಲ್ಲಿ ಒಂದೊಂದು ರೂಪದಲ್ಲಿ ಮಾತ್ರ ವಿಶೇಷವಾಗಿ ವ್ಯಗ್ಗಳಿಸುತ್ತದೆ. ಅವನ್ನು 'ವಿಭೂತಿಯ ಉನ್ನತಿಗೆ ಒಯ್ಯುತ್ತದೆ.

'ವಿಭೂತಿ'ಯ ಉತ್ಪತ್ತಿಯು ಅಗಾಧವಾದುದು; ಅಗೋಚರವಾದುದು. ಅದು ಉತ್ಪತ್ತಿಯಾಗಿ ಉನ್ನತಿಗೊಂಡಾಗ ಮಾತ್ರ ಅದಕಾಶ್ರಯವಾದ ವಸ್ತುವಾಗಲಿ ವ್ಯಕ್ತಿಯಾಗಲಿ ಅನನ್ಯಸಾಧಾರಣವಾಗಿ ಅಖಿಳಾಂಡ ಪ್ರಕಾಶನವಾಗಿ ಗೋಚರಿಸುತ್ತದೆ. ಅಂತಹ ವಿಭೂತಿತ್ವದ ಯೋಗವೊದಗುವುದೊಂದು ಭಾಗ್ಯ. ಅಂಥವನೆ ಸರ್ವಯೋಗ್ಯ.

"ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ವತಃ ।
ಸೋऽವಿಕಂಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ ॥"

—ಭಗವದ್ಗೀತೆ

ಆ ವಿಭೂತಿತ್ವದ ವಿಶೇಷ ಸತ್ವವು ವಿಶ್ವಮಾತ್ರದ್ದಲ್ಲ. ವಿಶ್ವನಾಥನಾದ ಆ ಪರಮಾತ್ಮನದು. ಆ ಸತ್ಯ ಸತ್ವನ್ನು ತತ್ತ್ವಾತ್ಮಕವಾಗಿ ತಿಳಿದು ತನ್ನೊಳಗಳವಡಿಸಿಕೊಳ್ಳಬೇಕು. ಅಳವಡಿಸಿಕೊಂಡವನೆ ಅವಿಚಲಯೋಗಿ, ಅಮಲಯೋಗಿ. ಅವನೇ ಅಖಿಲ ಲೋಕದ ವಿಭೂತಿ! ಅಖಂಡ ದೀಪ್ತಿ!

ಗಿರಿ ಗಿರಿಗಳೆಲ್ಲ ವಿಭೂತಿಗಳಲ್ಲ; ಇವೆಲ್ಲ ಭೂತಿಗಳು; ಕೈಲಾಸ ಗಿರಿಯೇ ವಿಭೂತಿ! ಕೆರೆ ಭಾವಿಗಳೆಲ್ಲ ವಿಭೂತಿಗಳಲ್ಲ; ಕಡಲವೇ ವಿಭೂತಿ! ಸೊಡರು ಸೊಡರುಗಳೆಲ್ಲ ವಿಭೂತಿಗಳಲ್ಲ; ಸೂರ್ಯನೇ ವಿಭೂತಿ! ಅಲ್ಪಪ್ರಾಣಿಗಳೆಲ್ಲ ವಿಭೂತಿಗಳಲ್ಲ; ಮಹಾಪ್ರಾಣವೇ ವಿಭೂತಿ! ಘಟ ಮಠಾಕಾಶಗಳೆಲ್ಲ ವಿಭೂತಿಯಲ್ಲ ಮಹಾಕಾಶವೆ

ವಿಭೂತಿ! ಅಂತೆಯೆ ಮರ್ತ್ಯದ ಮಾನವರೆಲ್ಲ ವಿಭೂತಿಗಳಲ್ಲ ಮಹಾನುಭಾವನೇ ವಿಭೂತಿ! ಈ ವಿವರಣೆಯಿಂದ ಭೂತಿ-ವಿಭೂತಿಗಳ ತರತಮಭಾವದ ಅನುಭೂತಿ ಅವಗತವಾಗಬಲ್ಲುದು. ಈ ವಿಭೂತಿತ್ವವುಳ್ಳವೆಲ್ಲ ಆ ಪರಮಾತ್ಮನ ತೇಜೋಂಶಗಳು.

“ ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀ ಮದೂರ್ಜಿತ ಮೇವ ವಾ ।
ತತ್ತದೇವಾವಗಚ್ಛತ್ವಂ ಮಮ ತೇಜೋಂಶಸಂಭವಂ ॥ ”

ಈ ಭಗವದ್ವಾಣಿಯು ಇದೇ ಅಭಿಪ್ರಾಯವನ್ನು ಬಿಚ್ಚಿ ಬಣ್ಣಿಸಿದೆ.

ಮಾನವನ ವಿಭೂತಿತ್ವಕ್ಕೆ ಮೂಲಕಾರಣ ಮನ. ಮನವಿಷಯೇಂದ್ರಿಗಳ ವಿಕಾರಕ್ಕೊಳಪಡದೆ ವಿಶ್ವನಾಥನ ಧ್ಯಾನ ಧಾರಣ ಸಮಾಧಿಗಳಲ್ಲಿ ತಲ್ಲೀನನಾಗುವುದನ್ನು ತ್ಯಜಿಸದೆ ಇದ್ದರೆ ಆ ಮನಸ್ಸೆಯೇ ಮಹಾ ವಿಭೂತಿ! ವಿಕಾರಿಮನ ಅಶಾಂತಿಗೆ ಕಾರಣ; ಅಜ್ಞಜೀವನ ಕಾರಣ. ನಿರೋಧದ ಮನಶಾಂತಿ ಸಮ್ಯಕ್ಕ್ರಾಂತಿಜೀವನ ಕಾರಣ! ಅಂತೆಯೆ ‘ಇಂದ್ರಿಯಾಣಾಂ ಮನಶ್ಚಾಸ್ಮಿ’ ಎಂದಿದೆ ಗೀತೆ!

ಭೂತಿತ್ವದಿಂದ ವಿಭೂತಿತ್ವಕ್ಕೆ ಮನವೇರಿದಾಗ ಆ ಮನಸ್ಸಿನ ಚೇತನವೂ ಸಹಜವಾಗಿ ವಿಭೂತಿ ಪಡೆಕೊಳ್ಳುತ್ತದೆ. ಹಣ್ಣು ಸಿಪ್ಪೆಗೆ ಬಣ್ಣವೇರಿದಾಗ ಆ ಹಣ್ಣೊಳಗಿನ ರಸಕ್ಕೆ ಮಾಧುರ್ಯವುಂಟಾಗದೆ?

ಸತ್ ಚಿತ್ ಆನಂದರೂಪಗಳನ್ನು ತನ್ನಲ್ಲಿ ಇತರರಿಗಿಂತ ವಿಶೇಷವಾಗಿ ಅಳವಡಿಸಿಕೊಂಡಾತನೇ ವಿಭೂತಿ ಪುರುಷ! ಆತನು ನಿರಾಯಾಸವಾಗಿ ನಿತ್ಯನೆನಿಸುತ್ತಾನೆ; ಪ್ರತಿರೋಧವಿಲ್ಲದೆ ಪರಿಪೂರ್ಣನಾಗುತ್ತಾನೆ; ಆತನಿಗೆ ಕಾಲ ದೇಶಗಳ ಅಡೆತಡೆಗಳಿರುವುದಿಲ್ಲ. ಜಾತಿ ಸಂಘಗಳ ವಿಧಿ ನಿಷೇಧಗಳ ಹಂಗಿರುವುದಿಲ್ಲ. ಸದ್ಘನವಾದಲ್ಲಿ ಚಿದ್ಘನವಾದಲ್ಲಿ ಆನಂದ ಘನವಾದಲ್ಲಿ ವಿಭೂತಿತ್ವವು ತಾನೇ ತಾನಾಗಿರುತ್ತದೆ. ಆತನು ವಿಶಾಲ ಜಗದ ಉದ್ಧಾರಕನಾಗುತ್ತಾನೆ.

ಸದ್ಘನವೆಂದರೆ ಸದಾಚಾರಗಳಿಂದ ವರ್ತಿಸುವಿಕೆ. ತ್ರಿಕರಣಗಳಲ್ಲಿಯೂ ಸದಾಚಾರಗಳು ನೆಲಸಿರುವಿಕೆ. ತ್ರಿಕಾಲದಲ್ಲಿಯೂ ಸದಾಚಾರಗಳಿಂದ ಹೊರತಾಗಿ ಇರದಿರುವಿಕೆ.

ಚಿದ್ಘನವೆಂದರೆ ಸುವಿಜ್ಞಾನ ಸಾಗರ; ಸುಜ್ಞಾನ ಭಂಡಾರ; ಸ್ವಾನುಭವ ಮಂದಾರನಾಗಿ ಪ್ರತಿಭಾಶಾಲಿಯಾಗಿ ಪರಮಕವಿಯಾಗಿ ಬಾಳಿ ಬೆಳಗುವಿಕೆ. ರಸಮಯನಾದ ಆ ಪರಮಾತ್ಮನ ತತ್ತ್ವಗಳನ್ನು ತನ್ನ ರಸಸತ್ತ್ವದ ಸಾಹಿತ್ಯಕ್ಷೇತ್ರದಲ್ಲಿ ಹುಲುಸಾಗಿ ಬೆಳೆಯುವಿಕೆ. ಅಧ್ಯಾತ್ಮ ವಿದ್ಯಾನಿಧಿಯಾಗಿರುವಿಕೆ.

ಆನಂದಘನವೆಂದರೆ ಅರೆಕ್ಷಣದಲ್ಲಿ ಅಳಿವ ಸುಖಕ್ಕೆ ಬಾಯ್ಬಿಡದೆ ಅಚ್ಚಳಿಯದ ಆನಂದತುಂದಿಲನಾಗಿರುವಿಕೆ. ಔಪಾಧಿಕ ಆನಂದಗಳನ್ನು ಲಕ್ಷಿಸದೆ ನಿರುಪಾಧಿಕ ನಿರಾಮಯ ನಿತ್ಯಾತ್ಮಾನಂದದಲ್ಲಿ ತಾನೆ ತಾನಾಗಿರುವಿಕೆ.

ವಿಭೂತಿ ಪದಕ್ಕೆ ವೀರಶೈವರಲ್ಲಿ ವಿಶಿಷ್ಟ ಸ್ಥಾನವಿದೆ ; ಮಾನವಿದೆ. ವಸ್ತುವಾಚಿಯಾಗಿ ಗುಣವಾಚಿಯಾಗಿ ವ್ಯಕ್ತಿವಾಚಿಯಾಗಿ ವೀರಶೈವರು ವಿಭೂತಿ ಪದವನ್ನು ಬಳಸುತ್ತಾರೆ. ವಿಶೇಷವಾಗಿ ವಿಭೂತಿಯೆಂದರೆ ಭಸಿತವೆಂದು ವೀರಶೈವರಲ್ಲಿ ಪ್ರಚಲಿತವಾಗಿದೆ. ವೀರಶೈವರಲ್ಲಿ ವಿಭೂತಿ ನಿರುಪಾಧಿಕವೆಂದು ಸೋಪಾಧಿಕವೆಂದು ಎರಡು ಬಗೆಯಾಗಿವೆ. ನಿರುಪಾಧಿಕ ವಿಭೂತಿಗೆ ಗೋಮಯಾದಿ ಜಡವಸ್ತುಗಳ ಉಪಾಧಿಯಿಲ್ಲ. ಅದು ಗುಣಪ್ರಧಾನವಾದುದು. ಕಾಮಕ್ರೋಧಾದಿಗಳೆ ಗೋಮಯ. ಜ್ಞಾನವೇ ಅಗ್ನಿ. ಜ್ಞಾನಾಗ್ನಿಯಲ್ಲಿ ಕಾಮಾದಿಗಳನ್ನು ಸುಟ್ಟು ನಿರ್ಮಲಭಾವಿಯಾಗಿ ಸದ್ಗುಣಜೀವಿಯಾಗಿ ಬೆಳಗುವದೇ ನಿರುಪಾಧಿಕ ವಿಭೂತಿತ್ವ. ಅದು ಸಾಕ್ಷಾತ್ ಶಿವನ ಮೈಬೆಳಗು. ಅದಕಿಲ್ಲ ಮಿಗಿಲು. ಅದು ಬೆಳಗಿನ ಬೆಳಗು. ಅದು ಮಹಾ ವಿಭೂತಿ. ಅದನ್ನು ಧರಿಸಿದಾತನು ಮಹಾ ವಿಭೂತಿ. ಆತನು ಗರಮಪಾವನ ; ಮಹಾ ಮಹಿಮ.

ಸೋಪಾಧಿಕ ವಿಭೂತಿ ಗೋಮಯದಿಂದಾಗುತ್ತದೆ. ಅಗ್ನಿಮಂತ್ರ ನ್ಯಾಸಗಳಿಂದ ಆಗುತ್ತದೆ. ಪಾದೋದಕ ಪಂಚಾಕ್ಷರಗಳಿಂದಾಗುತ್ತದೆ. ಈ ವಿಭೂತಿ ವೀರಶೈವರ ಐಶ್ವರ್ಯ. ವಿಭೂತಿ ಧಾರಣವಿಲ್ಲದೆ ವೀರಶೈವರ ಜೀವನವಿಲ್ಲ ; ಧಾರ್ಮಿಕಾಚಾರವಿಲ್ಲ ; ಅಂಗಸಿಂಗಾರವಿಲ್ಲ. ವಿಭೂತಿ ಪುರುಷನಾಗಲು ವಿಭೂತಿ ಧಾರಣ ಅತಿ ಮುಖ್ಯವೆಂದು ಭಾವಿಸುತ್ತಾರೆ.

ಇಂತಹ ಸೋಪಾಧಿಕ ವಿಭೂತಿಯು–ವಿಭೂತಿ, ಭಸಿತ, ಭಸ್ಮ, ಕ್ಷಾರ, ರಕ್ಷೆ ಎಂದು ಐದೆರನಾಗಿದೆ. ನಂದೆ, ಭದ್ರೆ, ಸುರಭಿ, ಸುಶೀಲೆ, ಸುಮನೆ ಎಂಬೀ ಐದು ಹಸುಗಳಿಂದ ಈ ಐದು ವಿಭೂತಿಗಳು ಹುಟ್ಟುವವು. ಈ ಗೋವುಗಳು ಶಿವನ ಸದ್ಯೋಜಾತಾದಿ ಪಂಚಮುಖಗಳಿಂದ ಜನಿಸುವವು. ಅಲ್ಲದೆ ಆ ಐದು ವಿಭೂತಿಗಳು ನಿವೃತ್ತಿ, ಪ್ರತಿಷ್ಠಾ, ವಿದ್ಯಾ, ಶಾಂತಿ, ಶಾಂತ್ಯತೀತ ಎಂಬ ಐದು ಕಲೆಗಳಿಂದ ಕ್ರಮವಾಗಿ ಶೋಭಿಸುವವು. ಇವುಗಳ ಧಾರಣದಿಂದ ಧನ–ಜ್ಞಾನ–ಪುಣ್ಯ–ಸೌಖ್ಯ–ಅಭಯ ಇವು ಕ್ರಮವಾಗಿ ಮೈಗೂಡುವವು. ಇವುಂಟಾಗುವದೇ ವಿಭೂತಿತ್ವಕ್ಕೆ ಏರುವ ಮಾರ್ಗ ! ವಿಶ್ವಖ್ಯಾತಿಗೇರುವ ಮಾರ್ಗ ! ಇಂತಹ ಈ ವಿಭೂತಿಯನ್ನು ಕುರಿತು ಮಹಾದೇವಿಯಕ್ಕನು ಹೀಗೆ ಹಾಡಿದಾಳೆ :

" ಹಿತವಿದೆ. ಸಕಲಲೋಕದ ಜನಕ್ಕೆ ಮತವಿದೆ. ಶೃತಿ ಪುರಾಣದ
ಗತಿಯಿದೆ. ಭಕುತಿಯ ಬೆಳಗಿನುನ್ನತಿಯಿದೆ. ಶ್ರೀ ವಿಭೂತಿಯನೊಲಿದು ಧರಿಸಿರೆ!
ಭವವನು ಪರಿವುದು. ದುರಿತಸಂಕುಳವನೊರಿಸುವುದು.
ಹರನ ಸಾಲೋಕ್ಯ ಸಾಮಿಪ್ಯದಲ್ಲಿರಿಸುವುದು ನಿರುತವಿದನೇ ನಂಬು ಮನುಜಾ !
ಜವನ ಭೀತಿ ಮರಣ ಭಯದಿಂದ ಈ ವಿಭೂತಿಯ ಅಗಸ್ತ್ಯ ಕಶ್ಯಪ
ಜಮದಗ್ನಿಗಳು ಧರಿಸುವರು ನೋಡಾ ! ಶ್ರೀಶೈಲ ಮಲ್ಲಿಕಾರ್ಜುನನೊಲಿಸುವ
ಶ್ರೀ ವಿಭೂತಿ !"

ಈ ವಿಭೂತಿಯನ್ನು ಕುರಿತು ಹರಿಹರದೇವ ಕವಿಯು ಹಾಡನ್ನು ಕೇಳಿ:"

"ಘನ ಪದವೀವುದಾವುದು ವಿಭೂತಿ ಜಗತ್ಪ್ರಭುವಾಗಿ ಬಾಳ್ವ ಪೆಂ
ಪಿನ ಪದವೀವುದಾವುದು ವಿಭೂತಿ ಕರಂ ದುರಿತೌಘದಿಂದ ನೊಂ
ದಸನುರೆ ಕಾವುದಾವುದು ವಿಭೂತಿ ಸಮಸ್ತ ಜನಾನನಕ್ಕೆ ಮಂ
ಡನತೆಯನೀವುದಾವುದು ವಿಭೂತಿಯೆ ಹಂಪೆಯ ದೇವನುನ್ನತಂ"

ಈ ವಿಭೂತಿ ಧಾರಣದಿಂದ ಆ ವಿಭೂತಿತ್ವ ಸಂಗ್ರಹಣ; ಸಂಪೂರಣ!



# ಜೀವನ ಮತ್ತು ಸಾಹಿತ್ಯ

★

**ಶ್ರೀ ಟಿ. ಆರ್. ರಾಜಶೇಖರಯ್ಯ, ಎಂ.ಎ.**

**ಚಿ**ಕ್ಕಂದಿನಲ್ಲಿ ಹಬ್ಬ ಹರದಿನಗಳ ವಿಶಿಷ್ಟ, ಅಸಾಧಾರಣ ವ್ಯವಹಾರಗಳ ನಡುವೆ ನಿತ್ಯ ಸಹಜವಾದ ಹುಡುಗಾಟದಲ್ಲಿ ಹಸಿವು ಎನ್ನುತ್ತ ನಾವು ಒಳಗೆ ನುಗ್ಗಿದಾಗ, "ಇವೊತ್ತು ಹೀಗೆ ಮಾಡಬಾರದು ; ಸ್ನಾನ, ಪೂಜೆ, ಇಲ್ಲದೆ ಏನನ್ನಾದರೂ ಮುಟ್ಟಿದರೆ ದೇವರು ಕಣ್ಣು ಕಳೆದುಬಿಡುತ್ತಾನೆ" ಎಂದು ನಮ್ಮ ಅಜ್ಜಿ ಹೇಳುತ್ತಿದ್ದರು. ಸ್ವಚ್ಛತೆಯ ಪ್ರೀತಿ ಇಲ್ಲದಿದ್ದರೂ, ದೇವರನ್ನು ಮೆಚ್ಚಿಸಬೇಕೆಂಬ ಉದಾತ್ತಭಾವನೆ ಇಲ್ಲದಿದ್ದರೂ, ಸಿಟ್ಟಿನಿಂದ ಕಣ್ಣನ್ನು ಕಳೆಯಬಲ್ಲ ಆ ಹಿರಿಯ ಶಕ್ತಿಯ ಭಯದಿಂದ, ಬಲು ಬೇಸರ ಉಂಟು ಮಾಡುವ ಸ್ನಾನ, ಪೂಜೆ ನಮಗೆ ಪ್ರಿಯವಾಗುತ್ತಿತ್ತು.

ಮನುಷ್ಯ ಜೀವನಕ್ಕೆ, ಮನುಷ್ಯನ ಚೈತನ್ಯ ಮತ್ತು ಉದ್ಯಮಗಳಿಗೆ ಯಾವುದಾದರೂ ಒಂದು ನಿಯಮಬಂಧನ, ಅಚ್ಚುಕಟ್ಟು ಸದಾ ಅಗತ್ಯ ಎನ್ನುವ ಮಹಾ ಸತ್ಯವನ್ನು ಈ ಚಿತ್ರ ನಿದರ್ಶನಗೊಳಿಸುತ್ತದೆ. ಪ್ರಕೃತಿಗೆ ಅತಿ ಸಮೀಪವಾಗಿ ರಚಿತವಾಗಿರುವ ಉಳಿದ ಎಲ್ಲ ಸೃಷ್ಟಿಯಲ್ಲಿ, ವಸ್ತುಗಳಲ್ಲಿ, ಜೀವಪ್ರಾಕಾರಗಳಲ್ಲಿ ನಿಸರ್ಗದತ್ತವಾಗಿ ಬಂದಿರುವ ಶಕ್ತಿಯಲ್ಲಿಯೇ ಸಹಜಸ್ಯವಾಗಿ ನಿಯಮವೂ, ನಿಯಮಾನುಸಾರಶೀಲತೆಯೂ ನಿರ್ಮಿತವಾಗಿವೆ. ಗಾಳಿ ಬೀಸುವುದರಲ್ಲಿ, ನೀರು ಹರಿಯುವುದರಲ್ಲಿ, ಹೂವು ಅರಳುವುದರಲ್ಲಿ. ಭೀಮಾಕಾರವಾಗಿ ಮುತ್ತಿ ಬಂದ ಮೋಡಗಳ ಮುಂದೆ ಒಮ್ಮೆನೆ ಕರಗಿ ತನ್ನ ಒಡಲಿನ ಅಮೃತವನ್ನೆಲ್ಲ ಭೂಮಿಗೆ ಸುರಿಸಿ ಹೋಳಿ, ಹಸ್ಸವಾಗಿ ನೆಲ ಹಸಿರಾಗುವುದರಲ್ಲಿ, ಮರಗಿಡದ ನಡುವೆ ಮಧುಮಾಸದ ಹಸಿರು ಚಿನ್ನಗಳ ಬಣ್ಣವನ್ನು ಕಂಡ, ಮೂಕ ಮತ್ತೇರಿ ಹಕ್ಕಿ ಉಲಿಯುವುದರಲ್ಲಿ, ಹಾವಿನ ವಿಷದಲ್ಲಿ, ಹುಲಿಯ ಉಗ್ರತೆಯಲ್ಲಿ, ಹಸುವಿನ ಸಾಧುತನದಲ್ಲಿ, ಉಳಿದೆಲ್ಲ ಪ್ರಾಣಿಗಳ ಸಕಲ

ಚಟುವಟಿಕೆಗಳಲ್ಲಿ, ಪ್ರಚೋದನೆ ಕೊಡುವ ಪ್ರವೃತ್ತಿಗೆ ನಿವೃತ್ತಿ ಮಾಡುವ ಸಂಯಮವೂ ಇವೆ, ತಾನೆ ಹಾರುತ್ತಿರುವಂತೆ ತೋರುವ ಗಾಳಿಪಟದ ಹಿಂದೆ ಅವ್ಯಕ್ತವಾಗಿ ಚಾಚಿಕೊಂಡಿರುವ ದಾರದ ಹಾಗೆ. ಈ ಮಟ್ಟದಲ್ಲಿ ಇಲ್ಲದ ಸ್ವಾತಂತ್ರ್ಯ, ಸ್ವೇಚ್ಛಾಶೀಲತೆ, ಸೃಷ್ಟಿಯ ಕಿರಿಯ ಮುದ್ದಿನ ಮಗು, ಮಾನವನಿಗೆ ಲಭ್ಯವಾಗಿದೆ. ಪ್ರಕೃತಿಯ ದಾನದ ತುತ್ತತುದಿ ಮನುಷ್ಯ; ಸಕಲ ಐಶ್ವರ್ಯಗಳನ್ನೂ ಒಂದೊಂದಾಗಿ ನಿಧಾನವಾಗಿ ದಾನಮಾಡಿ, ಕಡೆಗೆ ತನ್ನನ್ನೆ ತಾನೆ ಕೊಟ್ಟುಕೊಳ್ಳುವಂತೆ, ಸೃಷ್ಟಿಯ ಸರ್ವಚೇತನವೆಲ್ಲ ಕೇಂದ್ರೀಕೃತವಾಗಿ ಮನುಷ್ಯನಿಗೆ ಬಂದುಬಿಟ್ಟಿದೆ.

ಸ್ವಾಮ್ಯದ ಹೆಮ್ಮೆಯೊಂದಿಗೆ ಉಪಯೋಗದ ಚಿಂತೆಯೂ, ಸಂರಕ್ಷಣೆಯ ಹೊರೆಯೂ ಅಡಕವಾಗಿ ಇರುತ್ತವೆ. ಅಂತೆಯೆ ಉಳಿದ ಸ್ಥಿತಿಗಳಿಗೆ ಇಲ್ಲದ ಒಂದು ವಿಶಿಷ್ಟ ಹೊಣೆ ಮನುಷ್ಯಜೀವಕ್ಕೆ ಸ್ವಾಭಾವಿಕವಾಗಿ ಉಂಟಾಗಿದೆ.

ಅಪರಿಮಿತವೂ, ಅನೇಕರೂಪಿಯೂ, ಅಸಂಖ್ಯಾತವೂ ಆದ ಮನುಷ್ಯ ಚೈತನ್ಯಗಳ ಕಾರ್ಯಕ್ಷೇತ್ರ ಇಡಿಯ ಸೃಷ್ಟಿಯಷ್ಟೇ ವಿಶಾಲವಾದುದು, ಅಗಾಧವಾದುದು, ನಿಸ್ಸೀಮವಾದುದು. ಈ ವಿರಾಟ ಸಾಧನೆಗೆ ಸಮಂಜಸವೂ, ಯೋಗ್ಯವೂ ಆದ ಲಕ್ಷ್ಯವೊಂದನ್ನು ಗುರುತಿಸಿ, ಈ ಬೃಹಚ್ಛಕ್ತಿಯ ನಿರಂತರ ಯತ್ನಕ್ಕೆ ಸಮನ್ವಿತವೂ, ಸುದೃಢವೂ ಆದ ಒಂದು ಅಚ್ಚುಕಟ್ಟನ್ನು ನಿರ್ಮಿಸಿ, ಆ ಗುರಿಗೆ, ಆ ಅಚ್ಚುಕಟ್ಟಿನಲ್ಲಿ ನಡೆದು ಸಾರ್ಥಕ್ಯ ಪಡೆಯುವಂತೆ ಸಹಾಯಮಾಡುವುದೆ ಎಲ್ಲ ಧರ್ಮದ, ಎಲ್ಲ ತತ್ವದ ಎಲ್ಲ ಜ್ಞಾನದ ಕರ್ತವ್ಯ.

ಅಂಥದೊಂದು ವಿಶಿಷ್ಟ ಭವ್ಯ ಗುರಿಯ ಜ್ಞಾನವಿಲ್ಲದ ಚಟುವಟಿಕೆ, ಮಗು ಆಟದಲ್ಲಿ ಕಟ್ಟಿದ ಮರಳಿನ ಮನೆಯಂತೆ, ಈಜಿಪ್ಟು, ಬೇಬಿಲೋನುಗಳ ನಾಗರಿಕತೆಯಂತೆ, ಅರೆಕ್ಷಣದ ಮಾನಕ್ಕೆ ಮಾತ್ರ ಯೋಗ್ಯವಾಗಿ, ನಶಿಸಿಹೋಗುತ್ತದೆ; ಹಾಗೆಯೆ ಅಂಥ ಒಂದು ದಿವ್ಯ ಅಚ್ಚುಕಟ್ಟಿನ ಎಚ್ಚರಿಕೆಯಿಲ್ಲದ ಚಟುವಟಿಕೆ, ದುಂದುಗಾರನ ಹಣದಂತೆ, ರೋಮನ್ ಸಾಮ್ರಾಜ್ಯದ ವೈಭವದಂತೆ, ಎಲ್ಲೆ ಮೀರಿ ದಾಟಿ ಆಯ ತಪ್ಪಿ ಉರುಳಿ ಕ್ಷಣಮಾತ್ರ ಉರಿದು ಸುಟ್ಟುಹೋಗುವ ಪಥಭ್ರಷ್ಟ ತಾರಗೆಯಂತೆ, ವ್ಯಯವಾಗಿ ಹೋಗುತ್ತದೆ.

ಮನುಷ್ಯ ಜೀವನದ ಶತಮಾನಗಳ ದೀರ್ಘ ಚರಿತ್ರೆಯನ್ನು ಅವಲೋಕಿಸಿದರೆ, ಇತಿಹಾಸದ ಮೊದಲ ಯುಗಗಳಲ್ಲಿ, ಮಾನವನ ಬಾಲ್ಯದಲ್ಲಿ, ಈ ಅಚ್ಚುಕಟ್ಟನ್ನು ಕೊಟ್ಟು, ಜೀವನವನ್ನು ರೂಪಿಸುವ ಕೆಲಸ ಮಾಡಿದ ಶಕ್ತಿ, ದೈವಭಯ. ಎಷ್ಟು ವಕ್ರವೆ, ಕುರೂಪಿಯೆ, ಅನಾಗರಿಕವೆ ಆಗಿರಲಿ, ಎತ್ತರದ ಆಕಾಶದಲ್ಲಿ ಭಯಂಕರ ಗುಡುಗು ಸಿಡಿಲು ಮಿಂಚುಗಳಲ್ಲಿ, ಅರೆಕ್ಷಣದ ಕನಲಿನಲ್ಲಿ ಸರ್ವಸ್ವವನ್ನೆಲ್ಲ ದರೋಡೆಗಾರನಂತೆ ದೋಚಿಕೊಂಡು ಹೋಗುವ ಕ್ರೂರ ಪ್ರವಾಹದಲ್ಲಿ ನಿಸ್ತಬ್ಧವಾಗಿ ಕಳ್ಳನಂತೆ

ಸರಿದಾಡಿ ಮೋಸದ ಒಂದು ಸ್ಪರ್ಶದಲ್ಲಿ ಸಾವನ್ನು ತರುವ ಸರ್ಪದಲ್ಲಿ, ವಿಸ್ತಾರದಲ್ಲಿ, ಉತ್ತುಂಗತೆಯಲ್ಲಿ, ರಹಸ್ಯದಲ್ಲಿ, ವೈಪರೀತ್ಯದಲ್ಲಿ, ರೌದ್ರತೆಯಲ್ಲಿ, ಸೌಂದರ್ಯದಲ್ಲಿ, ವೈಚಿತ್ರ್ಯದಲ್ಲಿ ಏನೊ ಒಂದು ಪ್ರಬಲ ಅಮಾನುಷ ಚೈತನ್ಯವನ್ನು ಕಂಡು, ಅದರ ಹೆದರಿಕೆಯಿಂದಲೆ ಒಂದು ನೀತಿ, ಧರ್ಮ, ಆಶ್ರಯವನ್ನು ನಿರ್ಮಿಸಿಕೊಂಡು ಅದನ್ನು ಅನುಸರಿಸಿ, ಬದುಕನ್ನು ಅದಕ್ಕೆ ಬಗ್ಗಿಸಿ ಒಗ್ಗಿಸಿ, ಮನುಷ್ಯ ಬಾಳುವೆ ಮಾಡಿದ. ಅನುಭವ ಬೆಳೆದ ಮೇಲೆ, ಜ್ಞಾನ ಹೆಚ್ಚಿದಂತೆ, ಈ ನೀತಿಯ ಆಂತರಿಕ ಸತ್ವವೂ ಮಾರ್ಪಾಡಾಗಿ, ಭಯದ ಅಡಿಪಾಯ ಕಿತ್ತುಹೋಗಿ ಅದರ ಸ್ಥಳದಲ್ಲಿ ಹೆಚ್ಚು ಅರ್ಥಪೂರ್ಣವೂ, ಸಮಂಜಸವೂ, ಯೋಗ್ಯವೂ ಆದ ಪ್ರೇಮದ ಅಸ್ತಿಭಾರ ಬಂದಿತು. ಮೊದಲು ಭೀತಿಯಿಂದ ಮುಗಿದ ಕೈ ಈಗ ಒಲುಮೆಯಿಂದ ಜೋಡಿಸಿಕೊಳ್ಳತೊಡಗಿತು. ವಿಧವಿಧದ ಆಕಾರಗಳಲ್ಲಿ ವಿಧವಿಧದ ಶಕ್ತಿಗಳನ್ನು ಕಂಡುಕೊಂಡ ಬುದ್ಧಿ ನಿಧಾನವಾಗಿ ಆ ಎಲ್ಲ ವಿಭಿನ್ನ ಶಕ್ತಿಗಳನ್ನೂ ಒಂದುಗೂಡಿಸಿಕೊಂಡು, ಆ ಪ್ರಕಟ ಶಕ್ತಿಗಳು ಕುರುಹಾದ ಒಂದೆ ಒಂದು ಮೂಲಶಕ್ತಿಯನ್ನು ಗುರುತುಹಿಡಿಯಿತು.

ಈ ಪರಿಚಯದ ಆಸರೆಯಲ್ಲಿ, ಈ ಬಾಂಧವ್ಯದ ಉತ್ಸಾಹದಲ್ಲಿ, ಈ ಭಾವನೆಯ ಬಿರಿಯ ಕೈದೀವಿಗೆಗಳನ್ನು ಹಿಡಿದು ಕತ್ತಲು, ಎಡರುತೊಡರು, ಭಯ, ಬಳಲಿಕೆ, ಕಲ್ಲುಮುಳ್ಳುಗಳು ತುಂಬಿದ ಹಾದಿಯಲ್ಲಿ ಮನುಷ್ಯಜೀವನ ಹಲವಾರು ಶತಮಾನಗಳ ತನಕ ನಡೆದುಬಂದಿತು. ಈ ದೈವಭಯ ಅಥವಾ ದೈವಪ್ರೇಮದ ಆಶ್ರಯದಲ್ಲಿಯೆ ವಿಶಿಷ್ಟವಾದ ಸಂಸ್ಕೃತಿಯೂ, ನಾಗರಿಕತೆಯೂ ಜನಿಸಿದುವು.

ಹಾಗೆ ಹುಟ್ಟಿದ ಸಂಸ್ಕೃತಿಯನ್ನಾಗಲಿ, ನಾಗರಿಕತೆಯನ್ನಾಗಲಿ ಸೂಕ್ಷ್ಮವಾಗಿ ಪರೀಕ್ಷಿಸಿ ಅದರ ಕತೆಯನ್ನು ವಿಸ್ತಾರವಾಗಿ ಹೇಳುವುದು ಇಲ್ಲಿ ಅಪ್ರಕೃತ. ಸದ್ಯಕ್ಕೆ ಉಚಿತವಾದುದು ಒಂದು ಮಾತು: ಅಗತ್ಯವಾದ ಒಂದು ನಿಯಮವನ್ನು, ಅಧೀನತೆಯನ್ನು, ಅಚ್ಚುಕಟ್ಟನ್ನು (ಅದನ್ನು ಯಾವ ಹೆಸರಿನಿಂದಲಾದರೂ ಕರೆಯಬಹುದು.) ಮೊತ್ತಮೊದಲು ಮನುಷ್ಯನ ಬದುಕಿಗೆ ಈ ದೈವಪ್ರಜ್ಞೆ ಒದಗಿಸಿಕೊಟ್ಟಿತ್ತು ಎಂಬುದು. ಈ ದೈವಪ್ರಜ್ಞೆ ಸರ್ವಮುಖಿಯಾಗಿ ಮನುಷ್ಯ ಜೀವನದಲ್ಲಿ ಹೊಕ್ಕು, ಪ್ರೋತ್ಸಾಹವಾಗಿ, ಲಕ್ಷ್ಯವಾಗಿ ಪ್ರಲೋಭನೆಯಾಗಿ ಆಶ್ರಯವಾಗಿ ನಿತ್ಯಸಂಗಿಯಾಗಿ ಸಂತಯ್ಕೆಯಾಗಿ ಒಳ್ಳೆಯದರ ರುಚಿಯಾಗಿ ಕೆಟ್ಟದರ ಕಹಿಯಾಗಿ ಒಟ್ಟು ಸರ್ವಾಂತರ್ಯಾಮಿಯಾದ ಧರ್ಮವಾಗಿ ಮನುಷ್ಯ ಜೀವನದ ಪ್ರಥಮ ಯುಗಗಳ ಸಂಸ್ಕೃತಿಯನ್ನು ನಿರ್ಮಿಸಿತ್ತು. ಮಾನವನ ದೈಹಿಕ ಮಾನಸಿಕ ಬೌದ್ಧಿಕ ಜೀವನಗಳೂ, ವೈಯಕ್ತಿಕ ಸಾಮಾಜಿಕ ಜೀವನಗಳೂ. ಕೆಲವು ಸಲ ರಾಜಕೀಯ ಜೀವನಗಳೂ, ಅದರ ಆಶ್ರಯದಲ್ಲಿಯೆ ಸಾಗಿದುವು. ಅವನು ಉಂಡುದು ಉಟ್ಟುದು ನಡೆದುದು ನಿದ್ರಿಸಿದುದು ಅದರ ನಿರ್ದೇಶನದಿಂದ; ಅದರ ಆಣೆಯಲ್ಲಿಯೆ ಗುಡಿ ಕಟ್ಟಿದುದು ಮನೆ ಕಟ್ಟಿದುದು ಓದಿದುದು ದುಡಿದುದು ಒಳಲಿದುದು ವಿರಮಿಸಿದುದು, ಚಿತ್ರಕಲೆ ಹುಟ್ಟಿದುದು ಅದರ

ಗೋಡೆಗಳ ಮೇಲೆ; ಶಿಲ್ಪಸೃಷ್ಟಿಯಾದುದು ಅದರ ಕಲ್ಲುಗಳಿಂದ; ಸಂಗೀತ, ದೇವಭಜನೆ ನೃತ್ಯನಡೆದುದು ಅದರ ಗರ್ಭಗುಡಿಯ ಮುಂದಿನ ಅಂಗಳದಲ್ಲಿ; ಕಾವ್ಯ ಅದರ ಆರಾಧನೆ; ಕಡೆಗೆ ಬದುಕಿನ ಆಟವೆಲ್ಲ ಮುಗಿದ ಮೇಲೆ ಬಂದ ಮೃತ್ಯು ಸಹಿತ ಅದರ ಮಡಿಲ ವಿಶ್ರಾಂತಿ.

ಮನುಷ್ಯ ಮನಸ್ಸಿನ ಹಲವಾರು ಆಶ್ಚರ್ಯಗಳಲ್ಲಿ ಒಂದು ವಸ್ತುವಿನ ಜ್ಞಾನ ವೃದ್ಧಿಯಾದಷ್ಟು ಅದರ ಪ್ರಜ್ಞೆ ಕ್ಷೀಣವಾಗುವುದು; ಅನುಭವ ಹೆಚ್ಚಿದಷ್ಟೂ ನಂಟು ಸಡಿಲವಾಗುವುದು. ಇದು ಸಹಜವೆ; ಯಾವುದನ್ನಾದರೂ ಪಡೆಯುವ ಹೋರಾಟದಲ್ಲಿ ಅದಕ್ಕೆ ನಾವು ಕೊಟ್ಟ ಬೆಲೆ ಮರ್ಯಾದೆಗಳು ಪಡೆದ ಸಂಬಂಧದಲ್ಲಿ ಉಳಿಯುವುದಿಲ್ಲ. ಹೀಗಾಗಿ ಮಾನವನ ದೈವಜ್ಞಾನ ವಿಸ್ತಾರವಾದಂತೆಲ್ಲ ಅವನ ದೈವಪ್ರಜ್ಞೆ ಶಿಥಿಲವಾಗಿ ಹೋಯಿತು. ಗುಡಿಗಳ ಅಂಕೆ ಹೆಚ್ಚಿದ ಹಾಗೆ ಭಕ್ತಿಯ ಸತ್ವ ದುರ್ಬಲವಾಯಿತು. ಗಾಢವಾದ ಸತ್ಯವಾದ ಆತ್ಮವಿಶ್ವಾಸವುಳ್ಳ ಒಲುಮೆ ಯಾವ ಅಲಂಕಾರ ವೈಯ್ಯಾರಗಳನ್ನು ಬಳಸದೆ ನಿರಾಭರಣವಾಗಿ, ನಿರ್ಮಲವಾಗಿ ನಿಚ್ಚಳವಾಗಿ ಇರುತ್ತದೆ. ಮುದಿತನದ ಊರೆಗೋಲಿನಂತಹ ಪರಿಕರಣ ಸಲಕರಣೆಗಳ ಬಳಕೆಯ ಮೊತ್ತಕ್ಕೆ ಸರಿಯಾಗಿ ಒಲುಮೆಯ ಪತನವನ್ನು ಕಾಣಬಹುದು.

ಯಾವುದೊ ಘಟ್ಟದಲ್ಲಿ ಏರುತ್ತ ಏರುತ್ತ ಹೋದ ಆಳಿ ತಟ್ಟನೆ ಇಳಿಮುಖವಾಗಿ ಕೆಳಗೆ ಜಾರುವಂತೆ, ದೈವಪ್ರಜ್ಞೆಯ ಆಸರೆಯಲ್ಲಿ ಹಬ್ಬಿ ಬೆಳೆದು ಹೂಬಿಟ್ಟ ಸಂಸ್ಕೃತಿ ಇತಿಹಾಸದ ಒಂದು ಪರ್ವದಲ್ಲಿ, ಪ್ರವರ್ಧಮಾನಕ್ಕೆ ಒಂದು ದೇಹದಾರ್ಢ್ಯ, ನೆತ್ತರಿನ ಬಿಸಿಯ ಅಮಲಿನಲ್ಲಿ, ತಂದೆಯ ಮನೆಯನ್ನು ತೊರೆದು ಹೊರಡುವ ಹರಯದ ಹುಡುಗನಂತೆ, ತನ್ನ ಆಶ್ರಯದಿಂದ ಹೊರಗಾಯಿತು.

ಅಜ್ಞಾನದ ಭಯಗಳನ್ನು ಜ್ಞಾನದಿಂದಲೂ, ಅಮಾನುಷತೆಯ ಹಿರಿಮೆಯನ್ನು ಮಾನುಷಪರಾಕ್ರಮದ ತಿಳಿವಳಿಕೆಯಿಂದಲೂ, ದೈವತ್ವದ ದಿವ್ಯತೆಯನ್ನು ಮಾನವತ್ವದ ಪ್ರತಿಭೆಯಿಂದಲೂ ಕಳೆದುಕೊಂಡು, ಮನುಷ್ಯ ಒಂದು ಕಾಲದಲ್ಲಿ, ಪ್ರಬಲನಾದ ಸೇನಾಪತಿ ರಾಜ್ಯದ ದೊರೆಯನ್ನು ಸಿಂಹಾಸನಚ್ಯುತನನ್ನಾಗಿ ಮಾಡಿ ನಿಮಿತ್ತಮಾತ್ರ ಅರಮನೆಯಲ್ಲಿ ಪ್ರತಿಷ್ಠಾಪಿಸಿ ತಾನೆ ಪ್ರಭುವಾಗುವಂತೆ, ತನ್ನ ಮಾನದಂಡವನ್ನೆ ಉಪಯೋಗಿಸಿ ತನ್ನ ಸಾಮ್ರಾಜ್ಯವನ್ನೆ ಸ್ಥಾಪಿಸಿಕೊಂಡ.

ಇಂಥದೆ ಒಂದು ಗಳಿಗೆಯಲ್ಲಿ ಸದಾ ಸ್ನೇಹಬಾಂಧವ್ಯದಲ್ಲಿ ಬೆಳೆದು ಬಂದ ಸಂಸ್ಕೃತಿ ನಾಗರಿಕತೆಗಳು, ಜಗಳವಾಡಿದ ನೆರೆಹೊರೆಯ ಬಾಲಕರಂತೆ, ತಮ್ಮ ನಂಟನ್ನು ಹರಿದುಕೊಂಡು ಬೇರೆಯಾಗಿಬಿಟ್ಟವು. ನಾಗರಿಕತೆ ನಿರಂಕುಶ ನಿಶ್ಶೃಂಖಲತೆಯ ಹೊಸಸನ್ನಿವೇಶದಲ್ಲಿ ಸ್ವಚ್ಛಂದವಾಗಿ ಬೆಳೆದುಹೋಯಿತು. ಅದು ಒಂಟಿಯಾಗಿ ಬೆಳೆಯಬಲ್ಲುದು; ಅದರ ಹಾಗೆ ಬೆಳೆಯಬಾರದು. ಸಂಸ್ಕೃತಿ

ತಾನಾಗಿ ಏಕಾಂಗಿಯಾಗಿ ಬೆಳೆಯಲಾರದು; ಅದು ಹೂಬಳ್ಳಿಯಂತೆ; ಯಾವುದಾದರೂ ಆಶ್ರಯವನ್ನು ಪಡೆಯಲೇಬೇಕು.

ಹೀಗೆ ಮನುಷ್ಯಜೀವನಕ್ಕೆ ಗುರಿಯ ಜ್ಞಾನವನ್ನೂ ರೀತಿಯ ಎಚ್ಚರವನ್ನೂ ಕೊಟ್ಟು ಬಹುಕಾಲದವರೆಗೆ ಸಂಸ್ಕೃತಿಯನ್ನು ರೂಪಿಸಿದ್ದ ಒಂದು ಶಕ್ತಿ, ದಿವ್ಯಶಕ್ತಿ, ಮನುಷ್ಯನ ಮೇಲಿನ ತನ್ನ ಅಧಿಕಾರವನ್ನು ಕಳೆದುಕೊಂಡಿತು. ಯುದ್ಧಭಯ, ನಿವಾರಿಸಲಾಗದ ನೂರು ದುಃಖಗಳಿಂದಾದ ಸೋಲು, ವಿಜ್ಞಾನದಿಂದ ಮರಳಿ ಪಡೆದ ಮನುಷ್ಯತನದ ಭೌತಿಕ ಕೀರ್ತಿಯ ಅರಿವು ಹೆಚ್ಚಾದ ಈಗಿನ ಶತಮಾನಗಳಲ್ಲಿ ಪುನರುಜ್ಜೀವನಗೊಂಡ ದೈವಾಶ್ರಯಪ್ರಿಯತೆಯ ಈದಿನಗಳಲ್ಲಿ ಕೂಡ, ಆ ಶಕ್ತಿ ತನ್ನ ಹಳೆಯ ಬಲವನ್ನು ಕಳೆದುಕೊಂಡಿದೆ ಎಂದರೆ ಅಸತ್ಯವಾಗಲಾರದು.

ವಂಶಪರಂಪರೆಯಿಂದ ಗದ್ದುಗೆ ಏರಿದ್ದ ರಾಜನನ್ನು ಮೂಲೆಗೇರಿಸಿ ತಾನೆ ಅಧಿಕಾರಿಯಾದ ಸೇನಾಪತಿಯ ಮಾತು ರೂಪಕ; ಅದುವರೆಗೆ ನಿಯಮವನ್ನೂ ಅಚ್ಚುಕಟ್ಟನ್ನೂ ಕೊಟ್ಟು ಮಾನವಜೀವನದ ಉದ್ಯಮಕ್ಕೆ ಸಮಂಜಸ, ಸಮನ್ವಿತ ಸುಪೃಥ ಆಕಾರವನ್ನು ಉಂಟುಮಾಡಿದ್ದ ಅಮಾನುಷ ಶಕ್ತಿಯೊಂದು ಸ್ಥಾನಚ್ಯುತವಾಗಿ, ಅದರ ಎಡೆಯಲ್ಲಿ ಮನುಷ್ಯನಿರ್ಮಿತವಾದ ಇನ್ನೊಂದು ಅಭಿಷಿಕ್ತವಾಯಿತು ಎನ್ನುವ ಚಾರಿತ್ರಿಕ ಸತ್ಯವನ್ನು ತೋರಿಸುತ್ತದೆ. ಮನುಷ್ಯ ನಿರ್ಮಿತವಾದ ಈ ಪ್ರತಿಶಕ್ತಿ ಮನುಷ್ಯನ ಜ್ಞಾನ, ಅನುಭವ, ತರ್ಕಗಳಿಂದ ಹುಟ್ಟಿ ಬಂದ ನ್ಯಾಯಪ್ರಜ್ಞೆ; ಯಾವುದನ್ನು ವೈಯುಕ್ತಿಕ ಸಾಮಾಜಿಕ ರಾಷ್ಟ್ರೀಯ ಅಂತರರಾಷ್ಟ್ರೀಯ ಸಂಬಂಧಗಳಲ್ಲಿ ಕಾಯಿದೆ ಅಥವಾ ಕಾನೂನು ಎಂದು ಕರೆಯುತ್ತೇವೆಯೊ ಆ ಶಾಸ್ತ್ರ; ಮನುಷ್ಯಜೀವನದ ಹಲವಾರು ಕ್ಷೇತ್ರಗಳಲ್ಲಿ, ಪ್ರದೇಶ, ಕಾಲ, ಕಾರ್ಯಗಳ ಲಕ್ಷಣಗಳಿಗೆ ಅನುಸಾರವಾಗಿ ಬಗೆಬಗೆಯ ರೂಪು, ನಾಮಧೇಯಗಳನ್ನು ಧರಿಸಿದ ಒಂದು ಮೂಲ ಒಪ್ಪಂದ.

ದೈವಪ್ರಜ್ಞೆಯಂತೆಯೆ ಈ ನ್ಯಾಯ ಪ್ರಜ್ಞೆಯೂ ಮನುಷ್ಯನ ಬದುಕಿನ ಯೋಗಕ್ಷೇಮಕ್ಕೆ ನಿರ್ದೇಶಿತವಾಗಿ ಕೆಲವು ಕಾಲ, ಕೆಲವು ಎಡೆಯಲ್ಲಿ ಕರ್ತವ್ಯವಿಜಯಿಯಾದರೂ, ಶಾಶ್ವತವಾಗಿ ಎಲ್ಲ ಕಡೆಯಲ್ಲಿ, ಎಲ್ಲ ಬಗೆಯಲ್ಲಿ, ಎಲ್ಲ ಹೊತ್ತಿನಲ್ಲಿ ನೆಚ್ಚಬಹುದಾದ ಉತ್ತರವಾಗಿಲ್ಲ ಎನ್ನುವುದು ಲಕ್ಷಾಂತರ ರೂಪಗಳಲ್ಲಿ ಅನಂತವಾಗಿ ಕಾಣಬರುತ್ತಿರುವ ಜೀವನದ ದುರಂತಗಳಲ್ಲಿ, ಸೋಲುಗಳಲ್ಲಿ ಖಚಿತವಾಗಿವೆ. ಕೌಟುಂಬಿಕ ವೈಮನಸ್ಯ, ಸಾಮಾಜಿಕ ದೌಷ್ಟ್ರ್ಯ, ದ್ವೇಷ, ಅಸೂಯೆ, ದಾರಿದ್ರ್ಯ, ದುಃಖ, ಅಂತರರಾಷ್ಟ್ರೀಯ ಅವಿಶ್ವಾಸ, ಜಗಳ, ಹೊಡೆದಾಟ, ಯುದ್ಧ, ಸಾರ್ವಜನಿಕವಾಗಿ ಹರಡಿಕೊಂಡ ದಾನವೀಯವಾತಾವರಣ ಇವೆಲ್ಲ ಈ ಎರಡನೆಯ ಶಕ್ತಿಯೂ ದುರ್ಬಲವಾಯಿತು, ಈ ನೀತಿಯಿಂದ ಕಟ್ಟಿದ ಸಂಸ್ಕೃತಿಯೂ ವಿಫಲವಾಯಿತು ಎನ್ನುವ ದಾರುಣ ಸತ್ಯದ ಸಾಕ್ಷ್ಯ.

ಯಾರೊ ಕಟ್ಟಿದ ಪಟ್ಟಕ್ಕೆ ಬಾಗುವುದು ಹೇಗೆ ಅಸಹ್ಯವಾಯಿತೊ ಹಾಗೆಯೆ ತಾನೆ ಪಟ್ಟ ಕಟ್ಟಿದ ಅಧಿಕಾರಕ್ಕೆ ಬಾಗುವುದೂ ಮಾನವನಿಗೆ ಅಸಹ್ಯವಾಯಿತು. ದೈವಪ್ರಜ್ಞೆಯ ಅಸ್ತಿಭಾರವಾದ ಭಯ, ಬಲುಮೆ, ವಿಶ್ವಾಸಗಳು ಮಾನವತೆಯ ಪ್ರತಿಭೆಯ ಅಹಂಕಾರಕ್ಕೆ ಹೇಗೆ ಈಡಾಗಿ ನಶಿಸಿದುವೊ ಹಾಗೆಯೆ ನ್ಯಾಯಪ್ರಜ್ಞೆಯ ತಳಪಾಯವಾದ ಭಯ, ಒಲುಮೆ, ವಿಶ್ವಾಸಗಳೂ ಮನುಷ್ಯತ್ವದ ಸ್ವಾರ್ಥದ ಚಂಡಿತನಕ್ಕೆ ಗುರಿಯಾಗಿ ನಾಶವಾದುವು. ದೇವಸ್ಥಾನಗಳನ್ನು ತಿರಸ್ಕರಿಸಿ ನಕ್ಕ ಅಪಹಾಸ್ಯ ಹಾದಿಯ ಕೆಲಸ ಪೋಲೀಸಿನವನನ್ನು ಕಂಡು ನಕ್ಕಿತು. ಧರ್ಮ ದ್ರೋಹಿಯಾದ ಧೂರ್ತತನ ಅದಕ್ಕಿಂತ ಸುಲಭವಾಗಿ ನ್ಯಾಯಾಲಯಗಳನ್ನು ವಂಚಿಸಿತು. ಸ್ವರ್ಗನರಕಗಳ ಕಾಲ್ಪನಿಕತೆಯನ್ನು ತಿಳಿದುಕೊಂಡ ಬುದ್ಧಿ ಸಂಯುಕ್ತ ರಾಷ್ಟ್ರ ಸಂಸ್ಥೆಗಳ ಅಂಗಳದಲ್ಲಿ ನಾಟಕವಾಡಿ ಹಾಸ್ಯದ ಪಟಾಕಿ ಹಚ್ಚಿತು. ತಂದೆಯ ನುಡಿಗೆ ವಿಧೇಯವಾಗದ ಮನಸ್ಸು ನೆರೆಯವನ ಆಜ್ಞೆಗೆ ಮಣಿಯಲಾರದು.

ಹೀಗೆ ಯಾವ ಆದರ್ಶವೂ, ಮಾರ್ಗದರ್ಶಿತ್ವವೂ, ನೇತೃತ್ವವೂ ಉಳಿಯದ ಮನುಷ್ಯಜೀವನದಲ್ಲಿ ಮಾನಸಿಕ ನೈತಿಕ ಅರಾಜಕತೆ ನೆಲಸಿಬಿಟ್ಟಿದೆ. ಮನುಷ್ಯನ ಜ್ಞಾನ ಸೃಷ್ಟಿಸಿದ ಆಧುನಿಕ ವೈಜ್ಞಾನಿಕ ಸಂಸ್ಕೃತಿಯೂ ಕೂಡ ವಿಶ್ವಾಮಿತ್ರ ಸೃಷ್ಟಿಯಂತೆ ಅಲ್ಲಿಗೂ ಸಲ್ಲದ ಇಲ್ಲಿಗೂ ಸಲ್ಲದ ತ್ರಿಶಂಕುವಾಗಿದೆ. ಅಮಿತ ಪ್ರಬಲತೆಯ ವರಸಾಕ್ಷಾತ್ಕಾರ ಮಾಡಿಕೊಂಡ ಸುರಶಕ್ತಿ ಭಸ್ಮಾಸುರಶಕ್ತಿಯಾಗುತ್ತಿದೆ. ಫ್ರ್ಯಾಂಕೆಸ್ಟೈನನಂತೆ ಜನ್ಮವಿತ್ತ ಜೀವಕ್ಕೆ ಶತ್ರುವಾಗಿ ಎದ್ದು ನಿಂತಿದೆ.

ಇಂಥ ಅರಾಜಕತೆಗೆ ವ್ಯವಸ್ಥೆಯನ್ನಿತ್ತು, ಈ ದಾನವತೆಯನ್ನು ಪರಿಹರಿಸಿ, ಅಂತಸ್ಥವಾದ ಮಾನವೀಯತೆಯೊಳಗಣ ದಿವ್ಯತ್ವವನ್ನು ಎಚ್ಚರಿಸಿ, ಹೊಲಬುಗೆಟ್ಟು ಹೋದ ಹೆಜ್ಜೆಗಳನ್ನು ಮರಳಿ ದೇವತೆಯ ಮನೆಯನ್ನು ಅರಸಿ ಬರುವಂತೆ ಮಾಡಿ, ಮಾನವಕಲ್ಯಾಣಕ್ಕೆ ನೆರವಾಗಬಲ್ಲ ಇನ್ನಾವುದಾದರೂ ಉಪಾಯ, ಸಾಧನ, ಶಕ್ತಿ ಉಳಿದಿದ್ದರೆ ಅದು ಕಾವ್ಯ, ಸಾಹಿತ್ಯ. (ಕಲೆ, ಶಿಲ್ಪ ಅಥವಾ ಚಿತ್ರಕಲೆ, ನುಡಿವಿಹೀನವಾದುದರಿಂದಲೂ, ಸಂಗೀತ ಕಲೆ ಹೆಚ್ಚಾಗಿ ಬರಿಯ ನಾದಪ್ರಧಾನವಾದುದರಿಂದಲೂ, ಸಾಹಿತ್ಯದಲ್ಲಿ, ಅತ್ಯುತ್ಕೃಷ್ಟ ಪ್ರಾಕಾರವಾದ ಕಾವ್ಯದಲ್ಲಿ, ಈ ಎಲ್ಲ ವಿವಿಧ ಕಲೆಗಳ ಲಕ್ಷಣಗಳೆಲ್ಲ ಸಂಗಮವಾಗಿರುವುದರಿಂದಲೂ, ಸಾಹಿತ್ಯವನ್ನೆ ಈ ದೃಷ್ಟಿಯ, ಈ ಧರ್ಮದ, ಈ ನೀತಿಯ ಜೀವನದ, ಸಂಸ್ಕೃತಿಯ ಪ್ರತೀಕ ಎಂದು ಇಟ್ಟುಕೊಳ್ಳೋಣ).

ಈ ಮಾತು ಬರಿಯ ಪಕ್ಷಪಾತದ ಉತ್ಸಾಹ ಎಂದು ಭಾವಿಸಲಾಗದು. ಇದೆ ಕಾರ್ಯದಲ್ಲಿ ವಿಫಲವಾದ ಉಳಿದ ಶಕ್ತಿಗಳಲ್ಲಿ ಇಲ್ಲದ ಕೆಲವು ವಿಶಿಷ್ಟ ಗುಣಗಳು ಕಾವ್ಯದಲ್ಲಿ, ಸಾಹಿತ್ಯದಲ್ಲಿ ಇರುವುದರಿಂದಲೂ, ಅವುಗಳಲ್ಲಿ ಇಷ್ಟ ಸಲ್ಲದ ಕೆಲವು

ದೋಷಗಳಿಂದ ಇದು ಮುಕ್ತವಾಗಿರುವುದರಿಂದಲೂ, ಅವು ಸಾಧಿಸದ ವಿಜಯವನ್ನು ಸಾಹಿತ್ಯ ಸಂಪಾದಿಸಬಹುದು.

ಭೂಮಿಯ ಚರಿತ್ರೆಯಲ್ಲಿ ಧಾರ್ಮಿಕ ಸಂಸ್ಕೃತಿ, ಸೈನಿಕ ಸಂಸ್ಕೃತಿ, ಔದ್ಯೋಗಿಕ ಆರ್ಥಿಕ ಸಂಸ್ಕೃತಿ, ವೈಜ್ಞಾನಿಕ ಸಂಸ್ಕೃತಿ ಮುಂತಾದ ಎಲ್ಲ ಬಗೆಯ ಸಂಸ್ಕೃತಿಗಳ ಜೀವನ ರೀತಿ, ಮನೋಧರ್ಮಗಳ ಕಾಲವನ್ನೂ ನೋಡಿದೇವೆ. ಈ ಎಲ್ಲವೂ ಒಂದಲ್ಲ ಒಂದು ಕಾರಣದಿಂದ, ಉಳಿದ ಸಾವಿರಾರು ಸಣ್ಣ ದೊಡ್ಡ ಗುರಿಗಳ ಸಾಧನೆಯಲ್ಲಿ ಜಯಶಾಲಿಗಳಾದರೂ, ಬಲುಮುಖ್ಯವೂ ಪ್ರಧಾನವೂ ಆದ ಸಂಪೂರ್ಣ ಮಾನವಜೀವನ ವಿಕಾಸನ, ಸಂಪೂರ್ಣಮಾನವ ಜೀವನ ಸಂರಕ್ಷಣೆಗಳಲ್ಲಿ ಸಫಲವಾಗಲಿಲ್ಲ. ಈ ಪ್ರಶ್ನೆಗೆ ಸಾಹಿತ್ಯಿಕ ಸಂಸ್ಕೃತಿ ಸಮಂಜಸವಾದ ಉತ್ತರ.

ದೈವಸಾಕ್ಷಾತ್ಕಾರವೆ ಅಥವಾ ಜೀವನ ಸಾಕ್ಷಾತ್ಕಾರವೆ ಎಲ್ಲ ಬದುಕಿನ ಗಂತವ್ಯ ಲಕ್ಷ್ಯವೂ ಅಂತಿಮ ಅರ್ಥವೂ ಆದಲ್ಲಿ ಈ ಪರಮಾತ್ಮದರ್ಶನ ಎರಡು ರೂಪುಗಳಲ್ಲಿ ಲಭ್ಯವಾಗುತ್ತದೆ; ಒಂದು ಸತ್ಯಾನುಭೂತಿ, ಇನ್ನೊಂದು ಸೌಂದರ್ಯಾನುಭೂತಿ. ಎಲ್ಲ ಪ್ರಾಣಿಯ, ಎಲ್ಲ ಜೀವಿಯ ಬದುಕಿನ ಪ್ರೇರಣೆಯೂ, ಎಲ್ಲ ಕರ್ಮದ ಕಾರಣವೂ ಫಲವೂ ಇದೆ ಪರಮಾತ್ಮ ಸಾಕ್ಷಾತ್ಕಾರ; ಆತ್ಮ ಪರಮಾತ್ಮ ಸಮ್ಮಿಲನ. ಜೀವನವೆಲ್ಲ ಒಂದು ಪರಮಾತ್ಮಕಾಮೇಷ್ಟಿಯಜ್ಞ. ಎಲ್ಲ ನೀರು ಸಾಗರವನ್ನು ಸೇರುತ್ತದೆ; ತುದಿಯ ಈ ಮಿಲನವೆ ನದಿಯ ಪ್ರವಾಹದ ಅರ್ಥ, ಕಾರಣ, ಸಾಫಲ್ಯ.

ಸತ್ಯಶೋಧನೆಯ ಹಾದಿ ಅಸಂಖ್ಯಾತ ನಕ್ಷತ್ರ ಗ್ರಹ ನೀಹಾರಿಕಾ ಸಮೂಹದಂತೆ ಮೆಟ್ಟಲು ಮೆಟ್ಟಲುಗಳಾಗಿ, ಹೆಜ್ಜೆ ಹೆಜ್ಜೆಯಾಗಿ, ತೆರೆತೆರೆಯಾಗಿ, ಅಣು ಅಣುವಿನ ಜೋಡಣೆಯಿಂದ ವಿಭುವಾದ ಒಂದು ಅನಂತ ಮೊತ್ತದ ಅಂಕೆ ಅಂಕೆಯ ಎಣಿಕೆ. ಸೌಂದರ್ಯಾನುಭೂತಿ ವಿಸ್ತಾರವಾದರೂ ಸರ್ವಾಂತರ್ಯಾಮಿಯಾಗಿ ವ್ಯಾಪಕವಾಗಿ ಹರಡಿಕೊಂಡ ಬೆಳಕಿನ ಕೇವಲ ಪ್ರಜ್ಞೆ. ಮನುಷ್ಯನ ತರ್ಕ, ಜ್ಞಾನ, ವಿಜ್ಞಾನಗಳ ಉದ್ಯಮ ಷಣ್ಮುಖನಂತೆ ಬಲಶಾಲಿಯಾದ ವಾಹನವನ್ನೇರಿ ಅತಿ ವೇಗವಾದ ಸಂಚಾರದಲ್ಲಿ ಹಾದಿಯ ಅಂಗುಲ ಅಂಗುಲಗಳನ್ನು ಪ್ರಯಾಣಮಾಡಿಯೆ ಸ್ಪರ್ಧೆಯನ್ನು ಗೆಲ್ಲಬೇಕಾಗುತ್ತದೆ. ಮನುಷ್ಯನ ಹೃದಯವಾದರೊ ಗಣಪತಿಯಂತೆ ಅರೆಕ್ಷಣದ ಸತ್ಯಾನುಭವದಲ್ಲಿ ಈಶ್ವರಸಾಕ್ಷಾತ್ಕಾರ ಮಾಡಿಕೊಳ್ಳಬಲ್ಲುದು.

ಬಲು ಅರ್ಥಪೂರ್ಣವಾದ ಪ್ಲೇಟೊವಿನ ಒಂದು ಮಾತು ಹೀಗಿದೆ. ಈ ವ್ಯಕ್ತ ಸೃಷ್ಟಿಯ ಸತ್ಯ ಇದರ ಮೂಲಮೂರ್ತಿಯಾದ ಯಾವುದೊ ಒಂದು ಅವ್ಯಕ್ತಲೋಕದ ಸತ್ಯದ ನೆರಳು ಅಷ್ಟೆ, ಒಂದು ನಕಲು, ಪಡಿಯಚ್ಚು; ಎಲ್ಲ ಅನುಕರಣೆ, ಪ್ರತಿಬಿಂಬಗಳಂತೆ ಮೂಲದ ಗುಣಕ್ಕಿಂತ ಇದರ ಗುಣ ತುಂಬಾ ಕಡಿಮೆಯಾದುದು; ಆದರೆ ಈ ಸೃಷ್ಟಿಯ ಸೌಂದರ್ಯವೂ ಅವ್ಯಕ್ತವಾದ ಮೂಲಲೋಕದ ಸೌಂದರ್ಯವೂ ಮಾತ್ರ ಗುಣದಲ್ಲಿ, ಯೋಗ್ಯತೆಯಲ್ಲಿ ಸಮಾನವಾದುದು.

ಸತ್ಯದ ಮಾರ್ಗ ದೀರ್ಘವೂ, ದುಸ್ಸಾಧ್ಯವೂ ಎಂತಲೂ, ಸೌಂದರ್ಯದ ಮಾರ್ಗ ನೇರವೂ, ಕ್ಷಿಪ್ರವೂ, ಸುಲಭವೂ ಎಂತಲೂ ಇದರ ಅರ್ಥ ಆಗುತ್ತದೆ. ಸತ್ಯದ ಮೂಲಮೂರ್ತಿ ಉತ್ಸವಮೂರ್ತಿಗಳು ಬೇರೆ ಬೇರೆ; ಆದರೆ ಸೌಂದರ್ಯದ ಮೂಲ ಮೂರ್ತಿಯೂ ಒಂದೆ ಒಂದು. ಸಂಪೂರ್ಣ ಸತ್ಯದ ಸೊತ್ತು ಬಹುಶಃ ಮನುಷ್ಯ ಗ್ರಹಣೆಯ ಮಿತಿಯನ್ನು ಮೀರಿದೆ ಎಂದು ವಿಜ್ಞಾನಿಗಳೂ ಒಪ್ಪುತ್ತಾರೆ. ಆದರೆ ಸೌಂದರ್ಯ ಮಾತ್ರ, ಮನುಷ್ಯನ ಆರಾಧನೆಗೆ ಕ್ಷಣಮಾತ್ರದಲ್ಲಿಯೆ ಪ್ರತ್ಯಕ್ಷನಾಗುವ ದೇವರಂತೆ, ಸುಲಭಪ್ರಾಪ್ಯ. ಮನುಷ್ಯಜ್ಞಾನದ ಮಾರ್ಗ ಈ ಸತ್ಯದ್ದು; ಹೃದಯದ ಮಾರ್ಗ ಸೌಂದರ್ಯದ್ದು.

ಎಲ್ಲ ಪ್ರಾಕಾರ ಆಕಾರಗಳ ಕಲೆ, ಕಾವ್ಯ, ಒಂದು ಒಟ್ಟು ಹೆಸರಿನಿಂದ ಕರೆಯಬಹುದಾದರೆ, ಸಾಹಿತ್ಯ, ಈ ಹೃದಯದ ಅನುಭವದಿಂದ ಬಂದುದು.

ಸತ್ಯ ಅಡಕವಾಗಿರುತ್ತದೆ, ಅವ್ಯಕ್ತವಾಗಿರುತ್ತದೆ. ಅವ್ಯಕ್ತವಾದ ಸತ್ಯ ವ್ಯಕ್ತವಾದಾಗ, ನಿರಾಕಾರವಾದುದು ಆಕಾರಯುತವಾದಾಗ, ನಿರ್ಗುಣಶಕ್ತಿ ಸಗುಣವಾದಾಗ ಸೌಂದರ್ಯ ಸೃಷ್ಟಿಯಾಗುತ್ತದೆ. ಸತ್ಯದ ಮುಖವೆ ಸೌಂದರ್ಯ. ಈ ಮಾತನ್ನೆ ಕೀಟ್ಸ್ ಕವಿ ತನ್ನ ಪದ್ಯವೊಂದರಲ್ಲಿ "ಸೌಂದರ್ಯವೆ ಸತ್ಯ, ಸತ್ಯವೆ ಸೌಂದರ್ಯ" ಎಂದು ಹೇಳಿದ್ದಾನೆ.

ಸುಲಭವೂ ಒಡನೆ ಮಧುರವೂ ಆದ ವಿಧಾನದಿಂದ ಅಂತಿಮ ದಿವ್ಯಾನುಭವವನ್ನು ಮಾಡಿಕೊಡುವ ಸಾಧನ ಸಾಹಿತ್ಯ, ಕಾವ್ಯ. ಇಂಗ್ಲೀಷಿನ ಕವನವೊಂದರಲ್ಲಿ ಸೃಷ್ಟಿಯ ಪ್ರಪ್ರಥಮ ಸಂಗೀತಗಾರ ಪರಮಾತ್ಮ; ಆತನ ಹಾಡಿನ ಧ್ವನಿಯೆ ಈ ಸೃಷ್ಟಿ ಎಂಬ ಒಂದು ಮಾತು ಬರುತ್ತದೆ. ಹರಿಯುವ ನದಿಯಲ್ಲಿ, ಬೀಸುವ ಗಾಳಿಯಲ್ಲಿ, ಅರಳುವ ಹೂವಿನಲ್ಲಿ, ಹರಡುವ ಬೆಳಕಿನಲ್ಲಿ, ಚಲಿಸುವ ಪ್ರಾಣಿಗಳಲ್ಲಿ, ಪ್ರವಹಿಸುವ ಅನಂತರೂಪಿ ಚೈತನ್ಯವೆಲ್ಲ ಆ ಸಂಗೀತದ ನುಡಿಯ ಅಲೆಗಳು. ಕಲ್ಲುಮಣ್ಣುಗಳಿಗೆ ಆಕಾರ ಕೊಡುವ ಶಿಲ್ಪಿಯೂ, ಬಟ್ಟೆಯ ಬಯಲಮೇಲೆ ಬಗೆಬಗೆಯ ವರ್ಣಶೃಂಗಾರ ರಚಿಸುವ ಚಿತ್ರಕಲೆಗಾರನೂ, ನಕ್ಷತ್ರಗಾಯನದಂತೆ ನಿಶ್ಶಬ್ದವಾಗಿ ನಿರಂತರವಾಗಿ ಹಾಡುತ್ತಿರುವ ಪ್ರಕೃತಿಗರ್ಭದ ಸಂಗೀತದ ಅಲೆಅಲೆಯ ಮಾಂಜುಳ್ಯವನ್ನು, ಹೂವಿನಿಂದ ಹೂವಿಗೆ ಹಾರುವ ಚಿಟ್ಟೆಯನ್ನು ಕಾದು ತಟ್ಟನೆ ಹಿಡಿಯುವ ಬಾಲಕನಂತೆ, ಸೆರೆಹಿಡಿದು ಪ್ರತಿಧ್ವನಿಸಿ ಹಾಡುವ ಹಾಡುಗಾರನೂ, ಈ ಎಲ್ಲ ಆಕೃತಿ, ವರ್ಣ, ಧ್ವನಿ, ಅವುಗಳ ಹಿಂದಿನ ಅರ್ಥಗಳನ್ನೂ ಅನುಭವಿಸಿ ಒಂದುಗೂಡಿಸಿ ಎರಕ ಹೊಯ್ದು ಕವನ ಕಟ್ಟುವ ಕವಿಯೂ, ಎಲ್ಲರೂ ಆ ಬೃಹದ್‌ಸ್ವರೂಪಿ ಪರಮಾತ್ಮ ಗಾಯಕನನ್ನು ಮೆಚ್ಚಿ ಅನುಕರಿಸುವ ಬಾಲಕರು.

ಹೀಗೆ ಹುಟ್ಟಿದುದೆ ಸಾಹಿತ್ಯ. ಬೆಟ್ಟಗುಡ್ಡಗಳ ನಿಶ್ಚಂಚಲ ಗಾಂಭೀರ್ಯ; ಬಯಲಿನ ಶೂನ್ಯತೆ; ಎಡೆ ಅಡ್ಡಿ ಇರದೆ ಸುಳಿದು ಧಾವಿಸಿ ಬರುವ ಗಾಳಿಗಳ ತಂಪು;

ತಾಯಿಯ ಮುಗುಳುನಗೆಯಂತೆ ಭೂಮಿಯ ಕಂದನ ಯೋಗಕ್ಷೇಮಕ್ಕೆ ಸದಾ ಮಿಡಿಯುವ ಪೋಷಕನ ವಾತ್ಸಲ್ಯ; ಗೆಳೆತನದ ಅನುಕಂಪದಂತೆ, ಸಮಯಕ್ಕೆ ಸರಿಯಾಗಿ ಒದಗುವ ಸಹಾಯದಂತೆ, ಹರಿದುಬರುವ ಹಳ್ಳ ಹೊಳೆಗಳ ಕಾರುಣ್ಯ; ಒಲುಮೆಯಂತೆ, ಮೈತ್ರಿಯಂತೆ, ಸತ್ಸಹವಾಸದಂತೆ, ಪರರ ಸುಖಕ್ಕೆ ಅರಳುವ ಹೂವುಗಳ ಪ್ರೇಮ; ಹೊರಗಿನ ಪ್ರಕೃತಿಯ ವಿಸ್ತಾರ ವೈವಿಧ್ಯ ವೈಚಿತ್ರ್ಯದಂತೆಯೆ ಮನುಷ್ಯನ ಪ್ರಾಣದೊಳಗೂ ಹರಡಿರುವ ಕೋಟಿ ಚೇತನಗಳ ಚಟುವಟಿಕೆಗಳ ಲಾವಣ್ಯ; ತಾನೆ ಸುತ್ತಮುತ್ತಲೂ ಕಟ್ಟಿಕೊಂಡ ಸಾಮಾಜಿಕ ರಂಗಮಂಟಪದಲ್ಲಿ ಅನವರತವಾಗಿ ನಡೆಯುವ ಮಾನವ ಬಾಂಧವ್ಯದ ಮಹಾನಾಟಕದ ಲವಲವಿಕೆ; ಇವೆಲ್ಲವುಗಳ ಅನುಭವದಿಂದ ಸಮನ್ವಿತವಾಗಿ ಸಂಗೀತವಾಗಿ ಉಕ್ಕಿ ಬಂದ ಉದ್ಗಾರವೆ ಸಾಹಿತ್ಯ. ಈ ರೀತಿಯಲ್ಲಿ ಆದಿಚೈತನ್ಯದಿಂದ, ಮೂಲಸ್ಥಾನದಿಂದ ಉಗಿದು ಬಂದುದೂ ಅಲ್ಲದೆ, ಆ ಚೈತನ್ಯದ ಮೂಲಗಳೊಡನೆ ನಿರಂತರ ಸಂಪರ್ಕವನ್ನು ಉಳಿಸಿಕೊಂಡು, ಆ ಆಳದಿಂದಲೆ ನಿತ್ಯವೂ ತನ್ನ ಪ್ರಾಣವನ್ನು ಪೋಷಿಸಿಕೊಳ್ಳುತ್ತಿರುವ ಈ ಶಕ್ತಿ, ಮನುಷ್ಯ ಜೀವದ ಸಮನ್ವಿತ ಶಿಕ್ಷಣ ಸಾಧನವೂ, ಮನುಷ್ಯ ಜೀವನದ ಸಂಯೋಜಿತ ಯೋಗಕ್ಷೇಮ ಸಾಧಕವೂ, ಮಾನವತನದ ದಿವ್ಯಕಾಂಕ್ಷೆಯ ಸಿದ್ಧಿಯ ಉಪಾಯವೂ ಆಗಲು ಉಳಿದ ಒಂದೆ ಒಂದು ಹಾದಿ.

ಜೀವನಕ್ಕೂ, ಅದರಿಂದಲೆ ಹುಟ್ಟಿದ ಸಾಹಿತ್ಯಕ್ಕೂ ಒಂದು ಅದ್ವೈತ ಸಂಬಂಧವಿದೆ. ಬೆಳಕೂ ಚೈತನ್ಯವೂ ಒಂದೆ ಆಗಿರುವಂತೆ ಅವೆರಡೂ ಒಂದೆ. ಸಾಹಿತ್ಯ ಜೀವನದ ತಿರುಳು; **ಜೀವನದ ಸಮಗ್ರ ವಿಕಾಸನೆ, ಪ್ರಕಾಶನೆ ಸಾಹಿತ್ಯ.** ಉಳಿದ ಎಲ್ಲ ಕೃತಿ ಮನುಷ್ಯಶಕ್ತಿಯ ಅಂಶವೊಂದರ ಬಿಂಬ; **ಸಾಹಿತ್ಯ ಮಾತ್ರ ಮಾನವನ ಸರ್ವಾಂಗ ಪ್ರಸರಣ, ಸಂಪೂರ್ಣ ಅಭಿವ್ಯಕ್ತಿ.**

ದೈವಪ್ರಜ್ಞೆಗೆ ಅಗತ್ಯವಾದ ವಿಶಿಷ್ಟ ಮನಸ್ಥಿತಿ ನಿಲುಕಲಾರದ ಸಾಮಾನ್ಯ ಮನುಷ್ಯನಿಗೂ, ನ್ಯಾಯಪ್ರಜ್ಞೆಗೆ ಅವಶ್ಯವಾದ ವಿಶಿಷ್ಟ ಜ್ಞಾನ, ತ್ಯಾಗಭಾವನೆ, ಸಹೃದಯತೆ ಇಲ್ಲದ ಮನುಷ್ಯನಿಗೂ ಸಾಹಿತ್ಯಸಾಮರ್ಥ್ಯ ಮಾತ್ರ ಸ್ವಾಭಾವಿಕವಾಗಿ ಇದ್ದೆ ಇರುತ್ತದೆ. ಸಂಗೀತಪ್ರಿಯತೆ ಇಲ್ಲದ ಮನುಷ್ಯಜೀವ ಇಲ್ಲ ಎಂದು ಹೇಳುವ ಹಾಗೆಯೆ ಸಾಹಿತ್ಯಶಕ್ತಿ, ನಿರ್ಮಾಣ ಅಥವಾ ಅನುಭೂತಿ, ಇಲ್ಲದ ಮನುಷ್ಯ ಜೀವವೂ ಇಲ್ಲ ಎನ್ನಬಹುದು. ಅತಿ ಪುರಾತನ ಕಾಡುಮಾನವ ಸಹಿತ ಕತೆ ಕೇಳುತ್ತಿದ್ದ; ಚಿತ್ರ ಕೆತ್ತುತ್ತಿದ್ದ. ಮೊದಲ ಮಾನವನ ಮೊತ್ತಮೊದಲ ಕೂಗು ಕೂಡ ಸಾಹಿತ್ಯದ ಒಂದು ನುಡಿ. ದೇವರನ್ನು ಧಿಕ್ಕರಿಸಿ, ಸಂಗ್ರಾಮಪ್ರಿಯ ಸೈನಿಕ ಸಾಹಸವನ್ನು ತಿರಸ್ಕರಿಸಿ, ವಿಜ್ಞಾನದ ಪ್ರಚಂಡ ಭಗೀರಥ ಪರಾಕ್ರಮವನ್ನು ದೂರೀಕರಿಸಿ, ನಾಗರಿಕತೆಯ ಸಾವಿರ ಸೌಕರ್ಯಗಳನ್ನು ಒಲ್ಲೆನೆಂದು, ಸಾಮ್ರಾಜ್ಯಸಂಸ್ಥಾಪನೆ ಬೇಡವೆಂದು ಇರಬಲ್ಲ **ಮನುಷ್ಯ ಯಾವ ಬಗೆಯ ಸಂಬಂಧವೂ ಒಲ್ಲೆನೆಂದು ಇರಲಾರನು.**

ಅಂದರೆ ತತ್ತ್ವ ಧರ್ಮಬಂಧನ ಇರದ ಬಾಳು ಸಾಧ್ಯ; ವಿಜ್ಞಾನ ಪರಿಚಯ ಇರದ ಬಾಳು ಸಾಧ್ಯ; ಸಾಮಾಜಿಕ ರಾಷ್ಟ್ರೀಯ ವ್ಯವಸ್ಥೆಗೆ ಬೆನ್ನು ತೋರಿದ ಬಾಳು ಸಾಧ್ಯ; ದೇವಾಲಯ, ನ್ಯಾಯಾಲಯ ಇರದ ಬಾಳು ಸಾಧ್ಯ. ಆದರೆ ಕಾವ್ಯ ಪ್ರಜ್ಞೆ, ಅಂದರೆ ಸಾಹಿತ್ಯಪ್ರಜ್ಞೆ ಇರದ ಜೀವನ ಇಲ್ಲ. ಕರವಸ್ತ್ರವನ್ನು ಬೀಸಿ ಮಂಚಿಸಿ ಕೊಲ್ಲುವ ಗಳಿಗೆಯಲ್ಲಿಯೂ ಠಕ್ಕ ಹಾಡುತ್ತಿದ್ದ; ಮನೆಗೆ ಬಂದು ಮಗನಿಗೆ ಕತೆಯನ್ನೂ ಹೇಳುತ್ತಿದ್ದ.

ಇಂಥ ಚೈತನ್ಯವನ್ನು, ಈ ಪ್ರಜ್ಞೆಯನ್ನು ಅರಳಿಸಿ ಬೆಳಸಿ ಅದರಮೇಲೆ ನಿಂತುಕೊಂಡ ಒಂದು ಸಂಸ್ಕೃತಿ ಮಾತ್ರವೆ ಎಲ್ಲ ವಿಫಲವಾದ, ಈ ನಿರಾಸೆಗಳ, ಈ ನೀತಿಹೀನತೆಯ ಅಸ್ತವ್ಯಸ್ತ ಮಾನವ ಜೀವನದಲ್ಲಿ ಆತ್ಮವಿಕಾಸಕ್ಕೆ ಕಲ್ಯಾಣಕ್ಕೆ ಮಾರ್ಗವಾಗಬಹುದು.

ಉಳಿದ ಯಾವ ಉಪಾಯಗಳೂ ಸತತವಾಗಿ ಸಫಲವಾಗಿ ಕೊಡಲಾಗದ ನೀತಿಯನ್ನು, ಅಚ್ಚುಕಟ್ಟನ್ನು ಸಾಹಿತ್ಯಪ್ರಜ್ಞೆ ಸುಲಭವಾಗಿ ಮನುಷ್ಯ ಜೀವನಕ್ಕೆ ಈಯಬಲ್ಲುದು. ಫಲದ ಪ್ರಲೋಭನೆಯಿಂದಲೊ, ಶಿಕ್ಷೆಯ ಭಯದಿಂದಲೊ, ಬರಿಯ ತಾತ್ತ್ವಿಕ ಜ್ಞಾನದಿಂದಲೊ ಉಂಟಾದ ನೀತಿ ಸತ್ವಯುತವೂ ದೃಢವೂ ಚಿರಾಯುವೂ ಆಗುವುದಿಲ್ಲ.

ಮಾನಸಿಕವಾಗಿ, ಮನುಷ್ಯನ ತರ್ಕ ಒಂದೆ ಒಂದು ಆಳತೆಗೋಲಿನ ಮೇಲೆ ವ್ಯವಹರಿಸುತ್ತದೆ; ಪ್ರಿಯವಾದುದು ಇಲ್ಲವೆ ಅಪ್ರಿಯವಾದುದು. ಸತ್ಯ ಗುಣಕ್ಕಿಂತ ಈ ಗುಣಕ್ಕೆ ಹೆಚ್ಚು ಬೆಲೆ ಕೊಡುವ ಸುಭಾಷಿತವೊಂದು ಸಂಸ್ಕೃತದಲ್ಲಿ ಇದೆ. ತನಗೆ ಹಿತವನ್ನು ಉಂಟುಮಾಡುವುದು ಪ್ರಿಯವೂ, ಅಹಿತವನ್ನು ಉಂಟುಮಾಡುವುದು ಅಥವಾ ಹಿತವನ್ನು ಉಂಟುಮಾಡದೆ ಇರುವುದು ಅಪ್ರಿಯವೂ ಎಂದು ಭಾವಿಸುವುದು ಮನುಷ್ಯಸ್ವಭಾವದ ಮೂಲನೀತಿ. ಈ ಮೂಲ ಮನೋಧರ್ಮವನ್ನು ಒಪ್ಪಿಕೊಂಡು, ಅಥವಾ ಅನುಸರಿಸಿ ರಚಿತವಾದ ವೈಯಕ್ತಿಕ ಅಥವಾ ಸಾಮಾಜಿಕ ಅಥವಾ ಅಂತರರಾಷ್ಟ್ರೀಯ ನೀತಿ ಮಾತ್ರ ಸಮಂಜಸವೂ ಸತ್ವಶಾಲಿಯೂ ಪರಿಣಾಮಕಾರಿಯೂ ಆಗುತ್ತವೆ. ಭಯದ ದಂಡದ ಎದುರಿನಲ್ಲಿ, ಪ್ರಲೋಭನೆಯ ಶ್ವೇತ ಛತ್ರದ ಆಶ್ರಯದಲ್ಲಿ, ಹೇರಿದ ನೀತಿಯ ಹೊರೆಯ ಕೆಳಗಿನಿಂದ, ಆ ದಂಡ, ಶ್ವೇತ ಛತ್ರಗಳಿಂದ ದೂರವಾದ ಒಡನೆಯೆ, ನುಸುಳಿಕೊಳ್ಳುವುದು ಮನುಷ್ಯ ಸ್ವಭಾವ. ಹೀಗೆ ನುಸುಳಿಕೊಳ್ಳುತ್ತಾನೆ ಎಂದು ವಿಜ್ಞಾನದ ಬಲುಹೂ, ತುಂಬಿಕೊಂಡೆ ಇರುವ ಕಾರಾಗೃಹಗಳೂ, ಯುದ್ಧಭಯವೂ ಎತ್ತಿ ತೋರಿಸುತ್ತವೆ.

ಸತ್ಯವನ್ನು ಪ್ರಿಯವಾಗಿ ಮಾಡಬಲ್ಲ ಸಾಧನ ಏನಾದರೂ ಇದೆಯೆ ಎನ್ನುವುದು ಬಲು ಮುಖ್ಯವಾದ ಪ್ರಶ್ನೆ. ತನಗಲ್ಲದ ಹಿತವೂ, ತನಗೆ ತಕ್ಷಣ ಗೋಚರವಾಗದ ಹಿತವೂ, ತನಗೆ ಆಗದೆ ಪರರಿಗೆ ಆಗುವ ಹಿತವೂ, ಪ್ರಿಯವಾಗುವ ಮನೋ

ಧರ್ಮವನ್ನು ಸೃಷ್ಟಿಮಾಡಿ, ಅದನ್ನು ಅಳವಡಿಸಿದ ವಿದ್ಯೆಯನ್ನು ಕಲಿಸಿ, ಅದರಮೇಲೆ ನಿರ್ಮಿತವಾದ ಸಂಸ್ಕೃತಿಯನ್ನು ಹರಡಿದರೆ, ವೈಯಕ್ತಿಕ ಜೀವನದಲ್ಲಿ ಯಾವ ದುಃಖವೂ, ಕೌಟುಂಬಿಕ ಜೀವನದಲ್ಲಿ ಯಾವ ವೈಮನಸ್ಯವೂ, ಸಾಮಾಜಿಕ ಜೀವನದಲ್ಲಿ ಯಾವ ದೌಷ್ಟ್ಯವೂ, ರಾಷ್ಟ್ರೀಯ ಅಂತರರಾಷ್ಟ್ರೀಯ ಜೀವನದಲ್ಲಿ ಯಾವ ಕ್ರೌರ್ಯವೂ, ಒಟ್ಟಾರೆ ಯಾವ ಅನ್ಯಾಯವೂ ಉಳಿಯುವುದಿಲ್ಲ.

ಈ ನೀತಿಯನ್ನು ಯಾವುದು ಕಲಿಸಿ ಉಳಿಸಬಲ್ಲುದು? ದೈವಪ್ರಜ್ಞೆಯಿಂದ ಅದು ಆಗಲಿಲ್ಲ; ತಾತ್ವಿಕ ನ್ಯಾಯಪ್ರಜ್ಞೆಯಿಂದ ಆಗಲಿಲ್ಲ; ವಿಜ್ಞಾನದಿಂದ ಆಗಲಾರದು. ದೈವಪ್ರಜ್ಞೆ ಮೆದುಳಿನ ತರ್ಕಕ್ಕೆ ಬಾಗಿಹೋಯಿತು. ನ್ಯಾಯಪ್ರಜ್ಞೆ ಅಹಂಕಾರದಿಂದ ಮುರಿದುಹೋಯಿತು. ಕಾಣದ ದೇವರಿಗೆ ತಲೆಬಾಗದ ವ್ಯಕ್ತಿ ನೆರೆಯುವನನ್ನು ಕಂಡರೆ ಮುಗುಳುನಗೆ ತೋರದೆಯೂ ಹೋಗುತ್ತಾನೆ. ನರಕದ ಭಯಕ್ಕೆ ನಕ್ಕ ಬುದ್ಧಿ ಸೆರೆಮನೆಯ ಭೀತಿಯನ್ನೂ ಅಲ್ಲಗಳೆಯುತ್ತದೆ. (ಅಲ್ಲದೆ ತಪ್ಪುಗಳಿಗೆ ಇರುವ ಸೆರೆಮನೆಯಂತೆಯೆ ಒಪ್ಪುಗಳಿಗೆ ಇಲ್ಲಿ ಅರಮನೆ ಎಲ್ಲಿದೆ?)

ಹೀಗೆ ಬಲಂತವಾಗಿ, ಇನ್ನೊಂದು ವಸ್ತುವಿನ ನೆರವಿನಿಂದ ಹೊರಿಸಿದ ಸಂಸ್ಕೃತಿ ನಿಷ್ಫಲವಾಗಿಹೋದುದು ಸಹಜ ಎನ್ನಿಸುತ್ತದೆ. ಯಾವ ಭಯವೂ, ಯಾವ ಆಸೆಯೂ ಇಲ್ಲದ ಸ್ವತಂತ್ರವಾದ ನೀತಿಪ್ರಿಯತೆಯನ್ನು ಮನುಷ್ಯನಲ್ಲಿ ಉಂಟುಮಾಡುವ ಶಕ್ತಿ ಸಾಹಿತ್ಯದಲ್ಲಿ ಇದೆ. ಸತ್ಯ ಅಸತ್ಯಗಳ ವಿಮರ್ಶಾಶಕ್ತಿ, ವಿವೇಚನಾ ಚೈತನ್ಯ ಇಲ್ಲದ ಜೀವದಲ್ಲಿಯೂ ಸೌಂದರ್ಯ ಅಸೌಂದರ್ಯಗಳ ವಿಮರ್ಶಾಶಕ್ತಿ, ವಿವೇಚನಾ ಚೈತನ್ಯ ಇರುತ್ತವೆ. ಒಳ್ಳೆಯದನ್ನು ಸುಂದರವಾಗಿ ಗ್ರಾಹ್ಯವಾಗಿ ಅನುಕರಣೀಯವಾಗಿಯೂ, ಕೆಟ್ಟದನ್ನು ಅಸುಂದರವಾಗಿ ತ್ಯಾಜ್ಯವಾಗಿ ತಿರಸ್ಕರಣೀಯವಾಗಿಯೂ ತೋರಿಸಿ ತಿಳಿಸಿ ಅನುಭವಕೊಡುವ ರಹಸ್ಯವನ್ನು ಸಾಹಿತ್ಯಬಲ್ಲುದು. ಇದು ಸಾಹಿತ್ಯ, ಬೇಕಾದರೆ ಮಾಡಬಲ್ಲ ಕೆಲಸ. ಆದರೆ ಸಾಹಿತ್ಯವೆ ಈ ಸೌಂದರ್ಯ ದರ್ಶನದ, ಈ ಸೌಂದರ್ಯಾನುಭವದ ಪರಿಣಾಮವಾದುದರಿಂದ, ಈ ಸಾಹಿತ್ಯಪ್ರಜ್ಞೆ ನೇರವಾಗಿ ಮನುಷ್ಯಹೃದಯದಲ್ಲಿ ಸೌಂದರ್ಯದ ಅರಿವನ್ನು ಹುಟ್ಟಿಸುತ್ತದೆ. ಅಂಥ ಅರಿವನ್ನು ಪಡೆದ ಜೀವನದಲ್ಲಿ ಯಾವ ಕುರೂಪವೂ ಉಳಿಯುವುದಿಲ್ಲ. ಒಳಗಿನಿಂದಲೆ ಹುಟ್ಟಿದ ಆ ತೇಜಸ್ಸಿನಲ್ಲಿ ಎಲ್ಲ ಅಸುಂದರತೆಗಳೂ ಕತ್ತಲಿನಂತೆ ಕರಗಿಹೋಗುತ್ತವೆ. ಆ ಮೂಸೆಯಲ್ಲಿ ಕಾದ ಜೀವವಸ್ತು ದೋಷಗಳನ್ನೆಲ್ಲ ಕಳೆದು ಬಂಗಾರವಾಗಿ ಉಳಿಯುತ್ತದೆ. ಆಮೇಲೆ, ಒಳಗೆ ಕುರೂಪ ಇರದ ವ್ಯಕ್ತಿಯ ಯಾವ ಬಗೆಯ ಬಾಹ್ಯ ಜೀವನದಲ್ಲಿಯೂ ಕುರೂಪ ಬರುವುದೆ ಇಲ್ಲ. ಮಾನವತೆ ಅಲ್ಲಿ ದೇವತ್ವದ ಅರ್ಜನೆ ಮಾಡಿಕೊಂಡುಬಿಟ್ಟಿರುತ್ತದೆ; ಮನುಷ್ಯನ ಒಳಗಿನ ಮೃಗಗಳು ನಾಶವಾಗಿ ಮಾನವ ದೇವತೆಯಾಗುತ್ತಾನೆ. ಇದೇ ಜೀವನದ ಗುರಿ, ದೈವಸಾಕ್ಷಾತ್ಕಾರ.

ಇದು ಸಾಹಿತ್ಯದಿಂದ ಮಾತ್ರ ಸಾಧ್ಯ. ಈ ಅರ್ಥದಿಂದಲೆ, ಕವಿಗಳು ಜಗತ್ತಿನ ಅನಭಿಷಿಕ್ತ ಸಾರ್ವಭೌಮರು ಎಂದು ಷೆಲ್ಲಿ ಹೇಳಿದಾನೆ. ಪೋಲೀಸಿನವನಿಂದ, ನ್ಯಾಯಾಲಯಗಳಿಂದ, ಗುಡಿಯ ಪೂಜಾರಿಯಿಂದ, ಧರ್ಮಸಂಸ್ಥಾಪಕರಿಂದ, ಮಠಾಧಿಪತಿಗಳಿಂದ, ಸಾಮಾಜಿಕ ರಾಜಕೀಯ ಸಂಸ್ಥೆಗಳಿಂದ ಕಲಿಯದ ಬಲು ಮುಖ್ಯವಾದ ಎಷ್ಟೋ ಪಾಠಗಳನ್ನು ನಾವು ಸುಲಭವಾಗಿ ನಮಗೆ ಅರಿಯದಂತೆಯೆ ಕಲಿತುಕೊಂಡಿರುತ್ತೇವೆ.

ಅಲ್ಲದೆ ಕಲಿಸುವುದನ್ನು ಪ್ರಿಯವಾಗಿ ಕಲಿಸುವ ಕಲೆ ಸಾಹಿತ್ಯಕ್ಕೆ ಮಾತ್ರ ಇದೆ. ಏಕೆಂದರೆ ಸಾಮಾನ್ಯವಾಗಿ ಇದು ಯಾವುದನ್ನೂ ಕಲಿಸಲು ಹೋಗುವುದಿಲ್ಲ. ಹೀಗೆ ಮಾಡು; ಹಾಗೆ ಮಾಡಬೇಡ; ಇದು ಒಳ್ಳೆಯದು; ಅದು ಕೆಟ್ಟುದು ಎಂದು ಎಂದೂ ಅದು ನೇರವಾಗಿ ಹೇಳುವುದಿಲ್ಲ. ಆದರೂ ಕತೆ ಮುಗಿದಾಗ ನಾವು ಅದನ್ನೆಲ್ಲ ತಿಳಿದುಕೊಂಡೆ ಎದ್ದಿರುತ್ತೇವೆ.

ಹೀಗೆ ದೈವಭಯದ, ಸ್ವರ್ಗಾಭಿಲಾಷೆಯ ಆಶ್ರಯದಲ್ಲಿ ಅಥವಾ ನೆರೆಯವನ ಹಿತವಾದ, ಅಥವಾ ದಂಡದ ಎದುರಿನಲ್ಲಿ ಮನುಷ್ಯ ಗಳಿಸಲಾರದ ಸಂಸ್ಕೃತಿ ಈ ಸಾಹಿತ್ಯಜ್ಞಾನದಿಂದ, ಸಾಹಿತ್ಯಪ್ರಜ್ಞೆಯಿಂದ ಸುಲಭವಾಗಿ ಉಲ್ಲಾಸಯುತವಾಗಿ ಹಿತವಾಗಿ ಪ್ರಿಯವಾಗಿ ಲಭಿಸುತ್ತದೆ.

ಮನುಷ್ಯನ ಹೃದಯಕ್ಕೆ ತಲುಪದ ಜ್ಞಾನ ವಿನಾಶಕಾರಿ ಎಂದು ಮೂರು ಶತಮಾನಗಳ ವೈಜ್ಞಾನಿಕ ಸಂಸ್ಕೃತಿ ತೋರಿಸಿಕೊಟ್ಟಿದೆ; ಮನುಷ್ಯನ ಬುದ್ಧಿಗೆ ತಲುಪದ ಶ್ರದ್ಧೆ ವಿಶ್ವಾಸಗಳು ಬಲಹೀನ ಎಂದು ಸನಾತನ ಧಾರ್ಮಿಕ ಸಂಸ್ಕೃತಿ ತೋರಿಸಿಕೊಟ್ಟಿದೆ. ಹೃದಯವನ್ನೂ ಬುದ್ಧಿಯನ್ನೂ ಒಂದು ಸಂಘಟಿತ ಐಕಮತ್ಯದಲ್ಲಿ ಹೊಂದಿಸಿ ಪೋಷಿಸಬಲ್ಲ ವಿದ್ಯೆ ಬೇಕು, ಜ್ಞಾನ ಬೇಕು, ತಿಳಿವಳಿಕೆ ಬೇಕು. ಈ ಸಮನ್ವಯದಿಂದ ಹುಟ್ಟಿದ, ಇಂಥ ಸಮನ್ವಯವನ್ನು ಪ್ರವರ್ಧಿಸುವ ಸಂಸ್ಕೃತಿ ಬೇಕು. ಹೃದಯದ ದೇವರುಗಳನ್ನು ಮೆದುಳು ಒಪ್ಪುವಂತೆಯೂ, ಮೆದುಳಿನ ದೇವರುಗಳನ್ನು ಹೃದಯ ಒಪ್ಪುವಂತೆಯೂ ಮಾಡುವ ಧರ್ಮ ಬೇಕು. ಈ ಧರ್ಮ, ಈ ಮನೋಭಾವ, ಇಂಥ ಜೀವನ ನೀತಿ, ಇಂಥ ಸಂಸ್ಕೃತಿಯ ಮೇಲೆ ನಿರ್ಮಿತವಾದ ನಾಗರಿಕತೆ ಮಾತ್ರ ಅವಿನಾಶಿಯಾಗಿ ಉಳಿಯುತ್ತದೆ.

ಇದನ್ನು ಸಾಹಿತ್ಯ ಮಾತ್ರ ಕೊಡಬಲ್ಲುದು. ನ್ಯೂಟನ್, ಐನ್‌ಸ್ಟೀನ್ ಮುಂತಾದವರು ಕೊಟ್ಟ ಕಾಣಿಕೆ ಜ್ಞಾನ; ವ್ಯಾಸ, ಕಾಳಿದಾಸ, ಶೇಕ್ಸ್‌ಪಿಯರ್, ಮಿಲ್ಟನ್ನರು ಕೊಟ್ಟ ಕಾಣಿಕೆ ಜೀವನ. ಜೀವನ ಸ್ವಾಮಿ, ಜ್ಞಾನ ಸೇವಕ; ಜ್ಞಾನ ಜೀವನಕ್ಕೆ ಅಧೀನವಾಗಿರಬೇಕು; ಜೀವನ ದೊರೆ, ಜ್ಞಾನ ಆಸ್ಥಾನ ವಿದ್ವಾಂಸ.

ಜ್ಞಾನ ಕಟ್ಟಿದುದು ಬರಿಯ ಕಟ್ಟಡ; ಹೃದಯ ಪ್ರವೇಶಿಸಿ ಅಲಂಕರಿಸಿದ ಮೇಲೆ ಮನೆಯಾಗುತ್ತದೆ. ಗೃಹಿಣಿಯ ಬಲುವೆಯನ್ನು ದುಃಖಕ್ಕೆ ಈಡುಮಾಡುವ ಗೃಹದ ಐಶ್ವರ್ಯ ವೈಭವಗಳಿಗೆ ಹೇಗೆ ಬೆಲೆ ಇಲ್ಲವೊ ಹಾಗೆ ಮನುಷ್ಯನ ಹೃದಯಕ್ಕೆ ಹಿತವಲ್ಲದ ನಾಗರಿತೆ ಅಸಹನೀಯವೂ, ಅಲ್ಪಾಯುವೂ ಆಗುತ್ತದೆ. ಆತ್ಮಜ್ಞಾನ ವಿಲ್ಲದ ವಿಜ್ಞಾನ ತನ್ನನ್ನು ತಾನೆ ಗೆಲ್ಲದ ದಿಗ್ವಿಜಯದಂತೆ; ಅಕಿಲೀಸನ ಹಿಮ್ಮಡಿ ಯಂತೆ.

ಸಾಹಿತ್ಯ ಸಕಲ ಜ್ಞಾನಗಳ, ಸಕಲ ಧರ್ಮಗಳ ಮನ್ವಿತ ಸಾರಸಂಗ್ರಹ. ಅದರಲ್ಲಿ ಧರ್ಮವೂ, ವಿಜ್ಞಾನವೂ, ತತ್ವವೂ, ದೈವಪ್ರಜ್ಞೆಯೂ, ವೇದವೂ, ವೇದಾಂ ತವೂ ಎಲ್ಲವೂ ಇವೆ. ಅದು ಸಂಪೂರ್ಣ ಮನುಷ್ಯನ ಪ್ರತಿಧ್ವನಿ.

ಹಳ್ಳ ಕೊಳ ನದಿ ಕೆರೆಗಳ ನೀರು ಬತ್ತಿಹೊದಾವು; ಸಾಗರದ ನೀರು ಅಪಾರ ವಾದುದು. ಅನಂತವಾದುದು. ಹಳ್ಳ ಕೊಳ ಹೊಳೆಗಳ ನಂಬುಗೆಯ ಮೇಲೆ, ದಡದ ಮೇಲೆ ಕಟ್ಟಿದ ನಾಗರಿಕತೆಗಳು ನಿಶ್ಶೇಷವಾಗಿಹೋಗಿವೆ. ಸಾಗರದ ತಟಿಯಮೇಲೆ ನಿರ್ಮಿಸಿದ ಸಂಸ್ಕೃತಿಯ ವಿವೇಕವೊಂದೆ ನಾಗರಿಕತೆಯನ್ನು ಉಳಿಸಬಲ್ಲುದು.

——::——

# ಕಾವ್ಯ - ಕವಿಯ ಅನುಭವ



ಶ್ರೀ ಎಂ. ವಿ. ಸೀತಾರಾಮಯ್ಯ

**ಕವಿ** ಈ ಲೋಕದ ಕಡೆಗೆ ಬೆನ್ನು ತಿರುಗಿಸಿ, ಯಾರೂ ಕಾಣದ ಯಾವುದೋ ಕಾಲ್ಪನಿಕ ಲೋಕದಲ್ಲಿ ವಿಹರಿಸುತ್ತಾನೆ ಎಂಬುದು ಸಾಮಾನ್ಯರ ಗ್ರಹಿಕೆ. ಕಾವ್ಯದಿಂದ ಪ್ರತ್ಯಕ್ಷ ಪ್ರಯೋಜನವನ್ನು ನಿರೀಕ್ಷಿಸುವ ಇಂದಿನ ಹಲಕೆಲ ವಿಮರ್ಶಕರು ಕೂಡ ಕವಿಯನ್ನು 'ದಂತಗೋಪುರ' (Ivory Tower) ನಿವಾಸಿ ಎಂದು ನಿರ್ದೇಶಿಸುವುದು ರೂಢಿಯಾಗಿದೆ. ಕವಿಯ ಸೃಷ್ಟಿ-ಅದು ಯಾವುದೇ ಕಾಲದ ಯಾವುದೇ ಭಾಷೆಯ ಯಾವುದೇ ದೇಶದ ಕಾವ್ಯ-ಪ್ರಕಾರವಾಗಿರಲಿ-ಕಾಲ್ಪನಿಕ ಪ್ರಪಂಚವೇನೋ ಹೌದು; ಕವಿ ನಮಗಿಂತ ಭಿನ್ನನಾದ ವ್ಯಕ್ತಿಯಾಗಿ, ಅವನ ಪ್ರಪಂಚ ನಮಗಿಂತ ಭಿನ್ನವಾದ ಬೇರೊಂದು ಪ್ರಪಂಚವಾಗಿ, ಕಾಣಲೂಬಹುದು. ಎಷ್ಟೇ ವೈಪರೀತ್ಯ ವೈಚಿತ್ರ್ಯಗಳಿಗೆ ಸಿಲುಕಿದ್ದರೂ ಎಲ್ಲ ಮಾನವರಂತೆ ಅವನೂ ಹಸಿವು ನೀರಡಿಕೆ ಸುಖ ದುಃಖ ಕಾಮ ಕ್ರೋಧ ಮೊದಲಾದ ಮಾನವೀಯ ಸಂವೇದನೆಗಳಿಗೂ ರಾಗ ಭಾವಗಳಿಗೂ ಪಕ್ಕಾಗಿರತಕ್ಕವನು. ಅವನ ಅನುಭಾವಪ್ರಪಂಚ ಇತರರದ್ದಕ್ಕಿಂತ ಸಂಪೂರ್ಣವಾಗಿ ಭಿನ್ನವಾಗಿರಲು ಸಾಧ್ಯವಿಲ್ಲ. ಕವಿಯ ಪ್ರತಿಭೆ ಕನ್ನಡಿ ಹಿಡಿದು ತೋರುವ ಕಾಲ್ಪನಿಕ ಪ್ರಪಂಚದ ಪ್ರತಿಬಿಂಬಕ್ಕೆ ಮೂಲ ಬಿಂಬವಾದ ವಾಸ್ತವ ಪ್ರಪಂಚವೊಂದು ಇದ್ದೇ ತೀರಬೇಕು. ಕಾವ್ಯಮೀಮಾಂಸಕಾರರು ಕವಿತಾ ಕಾರಣಗಳನ್ನು ನಿರೂಪಿಸುವಂದು ಪ್ರತಿಭೆ ಮತ್ತು ಕಾವ್ಯಪರಿಚಯಗಳೊಂದಿಗೆ ಪ್ರಪಂಚಾನುಭವಕ್ಕೂ ಒಂದು ಗಣ್ಯಸ್ಥಾನವನ್ನು ಕೊಟ್ಟಿದ್ದಾರೆ. ಕವಿಯ ಲೋಕಾನುಭಾವವೇ

ಅವನ ಕಾವ್ಯದ ಮೂಲಸಾಮಗ್ರಿ ಎಂದರೂ ಸಲ್ಲುತ್ತದೆ.* ಕಥಾ ನಿರೂಪಣೆಗೆ, ಪಾತ್ರಚಿತ್ರಣಕ್ಕೆ, ಸನ್ನಿವೇಶ ವಾತಾವರಣ ನಿರ್ಮಾಣಕ್ಕೆ, ಕವಿ ಉಪಯೋಗಿಸುವ ವರ್ಣಸಾಮಗ್ರಿ ಎಂದರೆ ಅವನ ಅನುಭವ. ಅವನ ಅನುಭವ ಸಂಪತ್ತು ವಿಪುಲವಾಗಿ ಅಮೂಲ್ಯವಾಗಿದ್ದಷ್ಟೂ ಅವನ ಕಾವ್ಯದ ಸತ್ತ್ವವೂ ಅದಕ್ಕನುಗುಣವಾಗಿ ಅನರ್ಘ ವೆನಿಸುತ್ತದೆ. ಕವಿಯ ಅನುಭವ ಸಂಪತ್ತು ಕಂಗೊಳಿಸದ ಕಾವ್ಯವು ಬಾಲಿಶ ವಾಗುತ್ತದೆ. ನಮ್ಮ ಲೋಕಾನುಭವಕ್ಕೂ ಕವಿಯ ಲೋಕಾನುಭವಕ್ಕೂ ಮುಖ್ಯ ವ್ಯತ್ಯಾಸ ಇಷ್ಟೆ: ನಮ್ಮ ಲೋಕಾನುಭವ ನಮ್ಮಲ್ಲಿಯೆ ಅಂತರ್ಗತ, ಮೂಗನ ಮಹದಾನಂದ; ಇತರರಿಗೆ ಹೇಳಿಕೊಂಡರೂ, ವೃತ್ತ ಪತ್ರಿಕೆಯ ವರದಿಯ ಮಟ್ಟ ವನ್ನೂ ಮುಟ್ಟುವುದಿಲ್ಲ. ವರದಿಯಲ್ಲಿ ಸಂಗ್ರಹಗುಣವಾದರೂ ಇರುತ್ತದೆ; ನಮ್ಮ ಮಾತುಗಾರಿಕೆ, ಹರಟೆ, ಸಂಭಾಷಣೆ–ಎಲ್ಲವೂ ಹನುಮಂತರಾಯನ ಬಾಲವೆ! ಪಿಷ್ಟಪೇಷಣ, ಚರ್ವಿತಚರ್ವಣ; ತವುಡು ಕುಟ್ಟಾಟ. ಹಿತಮಿತವಾಗಿ ಹೇಳುವ ಕವಿಗಳೇ ವಿರಳ ಎಂದಮೇಲೆ, ಇನ್ನು ಸಾಮಾನ್ಯರ ಪ್ರಸಕ್ತಿ ಏಕೆ? ಇನ್ನೊಂದು ಮುಖ್ಯ ವ್ಯತ್ಯಾಸ ಎಂದರೆ, ಲೋಕಾನುಭವದ ಚಿನ್ನದ ಅದುರು ಕವಿ ಪ್ರತಿಭೆಯ ಮೂಸೆಯಲ್ಲಿ ಕರಗಿ, ಕಾಳಿಕೆಯೆಲ್ಲ ತೊಲಗಿ, ಅಪರಂಜಿಯಾಗುತ್ತದೆ. ಈ ಶುದ್ಧಿ ಕ್ರಿಯೆಯಲ್ಲಿ ಕವಿಯ ಔಚಿತ್ಯಜ್ಞಾನವೂ ಬಂದು ಪ್ರಮುಖಪಾತ್ರವನ್ನು ವಹಿಸುತ್ತದೆ. ಪ್ರಜ್ಞಾಪೂರ್ವಕವಾಗಿ ಔಚಿತ್ಯಜ್ಞಾನದ ಮೂಲಕ ನಡೆಯುವ ಈ ಕ್ರಿಯೆಗಿಂತಲೂ ಬಹುಶಃ ಹೆಚ್ಚು ಪ್ರಮುಖವಾಗಿ ಸುಪ್ತಪ್ರಜ್ಞೆಯಲ್ಲಿ ನಡೆಯುವ ರಹಸ್ಯ ರಸಕ್ರಿಯೆ ಯೊಂದು ನಡೆಯುತ್ತದೆ. ಆ ಕ್ರಿಯೆಗೆ ಅವಶ್ಯವಾದ ಶಕ್ತಿಯನ್ನೊದಗಿಸುವುದೇ ಪ್ರತಿಭೆ. ಕವಿಯ ಲೋಕಾನುಭವವನ್ನು ಕಾವ್ಯಪಾಕವಾಗಿ ಪರಿವರ್ತಿಸುವುದು ಪ್ರತಿಭೆಯೇ ಆದರೂ,' ಲೋಕಾನುಭದ ಮೂಲಸಾಮಾಗ್ರಿಯಿಲ್ಲದಿದ್ದರೆ ಪ್ರತಿಭೆ ಕ್ರಿಯಾಶೀಲವಾಗದು. ಇದರಿಂದ, ಕಾವ್ಯರಚನೆಯಲ್ಲಿ ಕವಿಯ ಲೋಕಾನುಭವಕ್ಕೆ ಯಾವ ಮಹತ್ವವಿದೆ ಎಂಬುದು ವೇದ್ಯವಾಗುತ್ತದೆ.

---

* "...ಕವಿ ಪ್ರತಿಭೆಯ ಕಾರ್ಯಕ್ಕೆಲ್ಲ ಅವನ ಜ್ಞಾನಾನುಭಾವಗಳೇ ಆಧಾರ ಸಾಮಗ್ರಿ ಯೆಂಬುದನ್ನೂ, ಅವನ ಮನಸ್ಸಿನ ಪರಿಪಾಕಕ್ಕೆ ಅನುಗುಣವಾಗಿ ಪ್ರತಿಭಾವ್ಯಾಪಾರವೂ ಹೆಚ್ಚು ಸಮರ್ಪಕವಾದೀತೆಂಬುದನ್ನೂ ಮರೆಯಬಾರದು. ಕವಿಯ ಅನುಭವ ವಿಸ್ತಾರಗೊಂಡಂತೆಲ್ಲ ಅವನ ಕಾವ್ಯದ ತಿರುಳೂ ಅಧಿಕವಾಗುವುದು; ಅವನ ಕೈ ಪಳಗಿದಹಾಗೆಲ್ಲ, ಓರೆಕೋರೆಗಳು ತಿದ್ದಿ ಕಾವ್ಯದ ರೂಪ ಹೆಚ್ಚು ಸುಂದರವಾಗುವುದು. ಕಾಳಿದಾಸನ 'ಶಾಕುಂತಲ'ವು ಖಂಡಿತ ಚಿಕ್ಕ ವಯಸ್ಸಿನಲ್ಲಿ ಬರೆದ ಗ್ರಂಥವಲ್ಲ."—ಪ್ರೊ|| ತೀ. ನಂ. ಶ್ರೀ: 'ಭಾರತೀಯ ಕಾವ್ಯ ಮೀಮಾಂಸೆ'–ಪು. ೧೬೩.

೨

ಕವಿಯ ಲೋಕಾನುಭವ ಮುಖ್ಯವಾಗಿ ಎರಡು ತೆರ ಎಂದು ಇಟ್ಟುಕೊಳ್ಳಬಹುದು: ಒಂದು, ಪ್ರತ್ಯಕ್ಷಾನುಭವ–ತಾನು ಕಂಡು ನೇರವಾಗಿ ಅನುಭವಿಸಿದ ಪ್ರಕೃತಿಸೌಂದರ್ಯ, ಸುಖ ದುಃಖ, ಲೋಕಜೀವನ ಸ್ವರೂಪ ಸ್ವಭಾವಗಳು; ಇನ್ನೊಂದು, ಪರೋಕ್ಷಾನುಭವ–ಕೇಳಿ, ಓದಿ, ತಿಳಿದು ತನ್ನದನ್ನಾಗಿ ಮಾಡಿಕೊಂಡ, ಹಿಂದಿನವರ ಲೋಕಾನುಭವ, ಮತ್ತು ತನ್ನ ಕಾಲದ ಲೋಕಜೀವನದ ಪರೋಕ್ಷ ಪರಿಚಯ. ಈ ಅನುಭವ, 'ಅನುಭವ' ಎಂಬ ಮಾತಿಗೆ ಅರ್ಹವಾಗಬೇಕಾದರೆ, ಕವಿ ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಪಡೆದ ಪ್ರಪಂಚಜ್ಞಾನ ಅವನ ಪ್ರಜ್ಞಾಕೋಶದಲ್ಲಿ ತುಂಬಿ, ಅದೇ ಒಂದು ಕಡಲಾಗಿ, ಅದರ ಮಥನ ಕಾರ್ಯವೊಂದು ಅಲ್ಲಿ ನಡೆದಿರಬೇಕು; ಅವನ ಪ್ರತಿಭೆ ಅಥವಾ ಕಲ್ಪನಾಶಕ್ತಿಯೇ ಆ ಕಡಲನ್ನು ಕಡೆಯುವ ಕಡೆಗೋಲು. ಈ ಮಥನ ಕ್ರಿಯೆಯಿಂದ ಮೂಡಿ ಬಂದದ್ದೆ ಕವಿಯ ಅನುಭವಾಮೃತ, ಅಥವಾ ಅನುಭವ ನವನೀತ. ಹೊರಗಣ ಪ್ರಪಂಚ ಹಾಗೂ ಅವರ ಅನುಭವ ಮೂಲ ಸಾಮಗ್ರಿಯಾಗಿ ಪರಿಣಮಿಸಿ, ಕವಿಯ ಹೃದಯದಲ್ಲಿ ಅದರ ಪುನಸ್ಸೃಷ್ಟಿಯೊಂದು ನಡೆಯುತ್ತದೆ; ಕಾವ್ಯ ಅದರ 'ಅನುಸೃಷ್ಟಿ'.*

ಈ ಬಗೆಯ ಅನುಭವ ಹೃದಯದಿಂದ ಮಾತಿನ ರೂಪದಲ್ಲಿ, ತನ್ನದೇ ಆದ ಒಂದು ಆಂತರಿಕ ನಿಯಮಕ್ಕೆ ಒಳಪಟ್ಟು, ಪರಿಣಾಮ ರಮಣೀಯವಾಗಿ ಹೊರಹೊಮ್ಮಿದರೆ ಅದು ಉತ್ತಮ ಸಾಹಿತ್ಯವಾಗುತ್ತದೆ. ಅದು ತಳೆಯುವ ರೂಪವೈವಿಧ್ಯಕ್ಕೆ ಇತಿಮಿತಿಯಿಲ್ಲ. ಗದ್ಯವಾಗಬಹುದು ಪದ್ಯವಾಗಬಹುದು; ಮುಕ್ತಕವಾಗಬಹುದು ಮಹಾಕಾವ್ಯವಾಗಬಹುದು; ಕಥೆಯಾಗಬಹುದು ಕಾದಂಬರಿ ಯಾಗಬಹುದು; 'ವಚನ'ವಾಗಬಹುದು; 'ಪದ'ವಾಗಬಹುದು. ಹನಿಯೂ ನೀರು ಕಡಲೂ ನೀರು ಹೇಗೋ ಹಾಗೆ, ಬಿಂದು ರೂಪವಾದರೂ ಕಾವ್ಯ, ಸಿಂಧುರೂಪವಾದರೂ ಕಾವ್ಯ. ಅಣುವಿನಿಂದ ಹಿಡಿದು ಮಹತ್ತಿನವರೆಗೆ ಪರತತ್ತ್ವ ಸರ್ವವ್ಯಾಪಿ

---

* ಕವಿಯ ಅನುಭವ ಸಾಮಗ್ರಿ ಯಾವ ರೀತಿ ಕಾವ್ಯರೂಪದಲ್ಲಿ ನಿರ್ಮಾಣಗೊಳ್ಳುತ್ತದೆ ಎಂಬುದು ಒಂದು ನಿಗೂಢ ತತ್ತ್ವ, ಮಾನಸಿಕ ಅದ್ಭುತ. ಈ ನಿರ್ಮಾಣ ಕಾರ್ಯದಲ್ಲಿ ತೊಡಗುವ ಕವಿಯ ಕಲ್ಪಕತೆಯನ್ನು ಇಂಗ್ಲಿಷಿನಲ್ಲಿ Creative Imagination ಎಂದು ಸಂಬೋಧಿಸಲಾಗಿದೆ. ಕವಿಯ ಕಲ್ಪಕ ಶಕ್ತಿಯ ಅಥವಾ ಪ್ರತಿಭೆಯ ಮೂಸೆಯಲ್ಲಿ ಆವನ ಜೀವಮಾನದ ಅನುಭವ ಸಾಮಗ್ರಿಯು ತುಣುಕುಗಳೆಲ್ಲ ಬಂದು ಬಿದ್ದು, ಭಾವ ಸಂಕರದ 'ಭಾವನೆ'ಯೊಂದು, ರಾಸಾಯನಿಕ ಕ್ರಿಯೆಯೊಂದು, ನಡೆದು ಹೇಗೆ ಕಾವ್ಯ ರೂಪಗೊಳ್ಳುತ್ತದೆ ಎಂಬುದಕ್ಕೆ S. T. Colerigo ಕವಿಯ 'Ancient Mariner' ಬಂದು ಉತ್ಕೃಷ್ಟ ನಿದರ್ಶನ. ಇದರ ವಿವರಣೆಯನ್ನು 'Road to Xanadu' ಎಂಬ ವಿಮರ್ಶಾತ್ಮಕ ಉದ್ಗ್ರಂಥದಲ್ಲಿ ಕಾಣಬಹುದು.

ಯಾಗಿರುವಂತೆ, ಕಾವ್ಯ ಸತ್ತ್ವವಾದ ಕವಿಯ ಅನುಭವ ರಸರೂಪಿಯಾಗಿ ಕಾವ್ಯದಲ್ಲಿ ನೆಲಸಿರುತ್ತದೆ.

ಭಾರತೀಯ ಸಂಸ್ಕೃತಿಯ ಇತಿಹಾಸದಲ್ಲಿ ಮೊದಲ ಕಾವ್ಯಗಳೆನ್ನಬಹುದಾದ ಉಪನಿಷತ್ತುಗಳು ದ್ರಷ್ಟಾರ ಋಷಿಗಳ ಅನುಭವ ಸಂಪತ್ತು. ವಾಲ್ಮೀಕಿಯ ಹೃದಯದಲ್ಲಿ ಶೋಕ ರೂಪದಲ್ಲಿ ಚಿಮ್ಮಿದ ಕಾವ್ಯಬಿಂದು ರಾಮಾಯಣ ರೂಪದಲ್ಲಿ ಹೊನಲು ಹರಿಯಿತು. ಮಾನವನನ್ನು ದೈವತ್ವಕ್ಕೆ ಏರಿಸಿದ ಋಷಿ ಕವಿಯ ಅನುಭವಸಿದ್ಧಿ ಅಲೌಕಿಕವಾದದ್ದು. ಮಹಾಭಾರತದಲ್ಲಿ ತಾನೇ ತಾನಾಗಿ ಭೋರ್ಗರೆಯುವ ವ್ಯಾಸರ ಅನುಭವಸಾಗರ ಅದ್ಭುತವಾದದ್ದು. ದೈವವರದಿಂದ ವ್ಯಾಧ ವಾಲ್ಮೀಕಿಯಾದ, ಕುರುಬ ಕಾಳಿದಾಸನಾದ ಎಂದರೂ ಅವರಿಗೆ ವರವಿತ್ತ ಆ ದೈವ ಒಂದು ಕೈಯಿಂದ ಕಾವ್ಯನಿರ್ಮಾಣ ಕ್ಷಮವಾದ ಪ್ರತಿಭೆಯನ್ನೂ ಇನ್ನೊಂದು ಕೈಯಿಂದ ಅನುಭವ ಪೂರ್ಣವಾದ ಅಕ್ಷಯ ಪಾತ್ರೆಯನ್ನೂ ವರವಾಗಿ ನೀಡಿರಬೇಕು. ಕಾಳಿದಾಸನ 'ಮೇಘದೂತ' ಯಾವ ಪುರಾಣ ಕಥೆ? ಯಾವ ಇತಿವೃತ್ತ? ಅದು ವೇದನೆಯ ಸುಂದರ ಕಾವ್ಯ ಸ್ರೋತ. 'ಶಾ ಕುಂ ತ ಲ'ದ ಕಥೆಯನ್ನು ಮಹಾಭಾರತದಿಂದ ಎರವಲು ಪಡೆದಿದ್ದರೂ ನಾಟಕದ ಸೂಕ್ತಿರತ್ನಗಳೆಲ್ಲ ಅವನ ಅನುಭಾವ ಭಂಡಾರಕ್ಕೆ ಸೇರಿದವು; ಪಾತ್ರಗಳೆಲ್ಲ ಅವನ ಮನೋಲೋಕದ ಪ್ರಜೆಗಳು. ಷೇಕ್ಸ್‌ಪಿಯರನ ನಾಟಕ ಪ್ರಪಂಚದಲ್ಲಿ ಹರವಿಕೊಂಡಿರುವ ಅನಭವ ಪ್ರಪಂಚ ಅವನ ಆಕರ ಗ್ರಂಥ ಪ್ಲೂಟಾರ್ಕಿನಲ್ಲಿ (Plutarch) ದೊರೆಯದು. ಶಿವಶರಣರ ವಚನಗಳು, ಸರ್ವಜ್ಞವಚನಗಳು, ಜಾನಪದಗೀತೆಗಳು, ಇತ್ತೀಚಿನ (ಡಿ.ವಿ.ಜಿ. ಯವರ) 'ಮಂಕು ತಿಮ್ಮನ ಕಗ್ಗ' ಇವೆಲ್ಲ ಅನುಭವಾಮೃತ ಬಿಂದುಗಳು.

ವಚನ ಸಾಹಿತ್ಯ ಹುಟ್ಟಿ ಬೆಳೆದದ್ದು ಶಿವಾನುಭವ ಮಂಟಪದಲ್ಲಿ. ಅದರ ಹುಟ್ಟಿನ ಪರಿಗೆ ಈ ವಚನವೊಂದು ಸಾಕ್ಷಿ.

"ಮರಮರವ ಮಥಸಿಸಿ ಕಿಚ್ಚು ಹುಟ್ಟಿ ಸುತ್ತಣ ತರುಮರಾದಿಗಳ ಸುಡಲಾಯಿತ್ತು. ಆತ್ಮವಾತ್ಮ ಮಥನಿಸಿ ಅನುಭಾವ ಹುಟ್ಟಿ ತನ್ನ ಗುಣಾದಿಗಳ ಸುಡಲಾಯಿತ್ತು. ಇದು ಕಾರಣ ನಿಮ್ಮ ಅನುಭಾವಿಗಳ ಅನುಭವ ತೋರಿ ಎನ್ನೊಡಲಸುಳುಹಿಕೊಳ್ಳಾ ಚೆನ್ನಮಲ್ಲಿಕಾರ್ಜುನಾ."

ಆತ್ಮ ಆತ್ಮಗಳ ಮಥನ, ಆತ್ಮಮಥನ-ಇದರ ಪರಿಣಾಮ ಫಲ ಸಿದ್ಧಿಯೇ 'ಅನು-ಭವ'. ಇದ್ದಿರುವ ಒಂದನ್ನು ಅನುಸರಿಸಿ ಆದ ಮತ್ತೊಂದರ 'ಭವ' ಎಂದರೆ 'ಹುಟ್ಟು'; ಕಾವ್ಯ ಅದರ ಪುನಸ್ಸೃಷ್ಟಿ, ಅದನ್ನು ಅನುಗೂಡಿ ಬಂದ 'ಅನುಸೃಷ್ಟಿ'. ಅನುಭವವಿಲ್ಲದೆ ಈ ಅನುಸೃಷ್ಟಿಯೂ ಇಲ್ಲ.

೩

ಕನ್ನಡದ ಆದಿಕವಿಯಾದ, ಹಿತಮಿತ ವಚನನಾದ, ಪಂಪನ 'ಆದಿ ಪುರಾಣ'ದಲ್ಲಿ ಮಗಳಿಗೆ ತಂದೆ ತಾಯಿಗಳು ಹೇಳುವ ಬುದ್ಧಿವಾದದ ಈ ಪದ್ಯವನ್ನು ನೋಡಿ :-

" ಮನಮರಿದಂಜಿ ಬೆರ್ಚಿ ಬೆಸಕೆಯ್ ; ನಿಜವಲ್ಲಭನೇನನೆಂದೊಡಂ
ಕಿನಿಸದಿರ್; ಒಂದಿಪಗ್ರಮಹಿಷೀಪದದಲ್ಲಿ ಪದಸ್ಥೆಯಾಗು; ನಂ
ದನರಂ ಅಗಣ್ಯಪುಣ್ಯಧನರಂ ಪಡೆಯೆಂದವರ್ದಪ್ಪಿಕೊಂಡುತ
ತ್ತನುಜೆಯಗಲ್ಕೆಯೊಳ್ ನೆಗಪಿದರ್ ಬಸಮಲ್ಲದ ಬಾಷ್ಪವಾರಿಯಂ."

[ನಿನ್ನ ಗಂಡನ ಮನಸ್ಸನ್ನು ಅರಿತು, ಅವನಿಗೆ ಹೆದರಿ, ಅವನ ಸೇವೆಮಾಡು ; ಅವನು ಏನೆಂದರೂ ಕೋಪಿಸಿಕೊಳ್ಳಬೇಡ; ನಿನಗೆ ಲಭಿಸಿದ ಹಿರಿಯ ರಾಣಿಯ ಸ್ಥಾನದಲ್ಲಿ ನೆಲೆಗೊಳ್ಳು ; ಅಪಾರ ಪುಣ್ಯವಂತರಾದ ಮಕ್ಕಳನ್ನು ಪಡೆ-ಎಂದು ತಮ್ಮ ಮಗಳನ್ನು ಅಪ್ಪಿಕೊಂಡು, ಅವಳನ್ನು ಅಗಲುವ ವೇಳೆಯಲ್ಲಿ ತಡೆಯಲಾಗದ ಕಣ್ಣೀರನ್ನು ಸುರಿಸಿದರು.]

ಕಾಳಿದಾಸನ 'ಶಾಕುಂತಲ'ದಲ್ಲಿ ಕಣ್ವಮುನಿಗಳು ತಮ್ಮ ಸಾಕು ಮಗಳಾದ ಶಕುಂತಲೆಯನ್ನು ಬೀಳ್ಕೊಡುವಾಗಲೂ ಹೆಚ್ಚು ಕಡಮೆ ಇದೇ ರೀತಿ ನುಡಿಯುತ್ತಾರೆ. ಪಂಪನು ಆ ಪದ್ಯಗಳನ್ನು ಓದಿದ್ದಿರಬೇಕು. ಆದರೂ ಪಂಪನ ಈ ಪದ್ಯ ತಂದೆ ತಾಯಿಗಳ ಅನುಭವವನ್ನು ತನ್ನ ರೀತಿಯಲ್ಲಿ ಮತ್ತೆ ತಿಳಿಸುತ್ತದೆ. 'ವಿ.ಸೀ.' ಅವರ 'ಮನೆ ತುಂಬಿಸುವ ಹಾಡು' ಇದೇ ಅನುಭವವನ್ನು ಹೊಚ್ಚ ಹೊಸದಾಗಿರುವಂತೆ ಮತ್ತೆ ಉಸುರಿದೆ. ತಂದೆ-ತಾಯಿಗಳ ಅನುಭವ ಎಲ್ಲ ಕಾಲಕ್ಕೂ ಒಂದೇ: ಆ ಮೂಕ ಸಂವೇದನೆಗೆ ಕವಿ ನುಡಿ ಗೊಟ್ಟಿದ್ದಾನೆ; ಇತರರ ಅನುಭವವನ್ನು ತನ್ನದನ್ನಾಗಿ ಮಾಡಿಕೊಂಡು, ಅಥವಾ ತನ್ನ ಅನುಭವವನ್ನೇ (ಏಕೆಂದರೆ, ಕವಿ ತಂದೆಯೂ ಆಗಿ ಆ ಅಗಲಿಕೆಯನ್ನು ಅನುಭವಿಸಿರಬಹುದಲ್ಲ.) ನಮ್ಮ ಮುಂದಿಟ್ಟಿದ್ದಾನೆ. ಇದೇ ಪಂಪ ತನ್ನ 'ವಿಕ್ರಮಾರ್ಜುನ ವಿಜಯ'ದಲ್ಲಿ ರಾಜರನ್ನು ಸೇವಿಸುವ ಕಷ್ಟ, ನಿಷ್ಠುರಗಳನ್ನು ಹೇಗೆ ಬಣ್ಣಿಸಿದ್ದಾನೆ, ನೋಡಿ :

" ಕಲಿಯನೆ ಪಂದೆಮಾಳ್ಪ, ಕಡುಪಂದೆಯನೊಳ್ಗಲಿ ಮಾಳ್ಪ, ತಕ್ಕನಂ
ಪೊಲೆಯನ ಮಾಳ್ಪ, ಮುಂ ಪೊಲೆಯನಂ ನೆರೆ ತಕ್ಕನಮಾಳ್ಪ, ತಮ್ಮೊಳ-
ಗ್ಗಲಿಸಿ ಪೊವಳ್ದು ಪರ್ವಿದವಿವೇಕಿತೆಯಿಂ ನೃಪಚಿತ್ತವೃತ್ತಿ ಸಂ-
ಚಲಂ ; ಅದರಿಂದವೋಲಗಿಸಿ ಬಾಳ್ವುದೆ ಕಷ್ಟಮಿಳಾಧಿನಾಥರಂ ||"

ಓಲಗಿಸಿ ಬಾಳುವ ಕಷ್ಟವನ್ನು ಅನೇಕ ಕವಿಗಳು ಬಣ್ಣಿಸಿದ್ದಾರೆ. ಅರಿಕೇಸರಿಯ ಆಸ್ಥಾನದಲ್ಲಿ ವಿದ್ವಾಂಸ-ಕವಿಯಾಗಿದ್ದ ಪಂಪನು ರಾಜಸೇವೆಯ ಕಷ್ಟವನ್ನು ತಾನೂ ಕೊಂಚವಾದರೂ ಅನುಭವಿಸಿ, ಅದನ್ನು ಕಣ್ಣಾರೆ ಕಂಡಿರಬೇಕು.

ಇದೇ ಅನುಭವವನ್ನು ತೋಡಿಕೊಂಡಿರುವ ಇನ್ನೊಂದು ಪದ್ಯವನ್ನು ಗಮನಿಸಿ. ಅವರಲ್ಲಿ ಹರಿಹರನು ತನ್ನ ಸ್ವಂತ ಅನುಭವದ ಕಹಿನೆನಪನ್ನೆ ಆವೇಶಪೂರ್ಣನಾಗಿ ವ್ಯಕ್ತಪಡಿಸಿದ್ದಾನೆ ಎಂಬಲ್ಲಿ ಬಹುಶಃ ಸಂದೇಹವಿರದು.

" ಪೋಗೆನೆ ಪೋಪ, ಬಾರೆಲವೊ ಬಾರೆನೆ ಜೀಯ ಹಸಾದವೆಂದು ಬೆ
ಳ್ಳಾಗುತೆ ಬರ್ಪ, ಮಾಣ್ ಎಲ್ಲವೊ ಸುಮ್ಮನಿರ್ ಎಂದೊಡೆ ಸುಮ್ಮನಿರ್ಪ, ಮ
ತ್ತಾಗಳೆ ಬಗ್ಗಿಸಲ್ ನಡುಗಿ ಬೀಳುವ, ಸೇವಿಪ ಕಷ್ಟವೃತ್ತಿಯಂ
ನೀಗಿದೆನಿಂದು ನಿಮ್ಮ ದಯೆಯಿಂ ಕರುಣಾಕರ ಹಂಪೆಯಾಳ್ದನೇ."

ಅಂದು ರಾಜರು, ಇಂದು ಸರಕಾರ. ಪ್ರಭುತ್ವದ ಸೇವಾವೃತ್ತಿಯ ಕಷ್ಟ ಎಲ್ಲ ಕಾಲಕ್ಕೂ ಒಂದೇ. 'ಕರಣಿಕರ ಕುಲತಿಲಕ'ನಾದ ಹರಿಹರನ ಅನುಭವ ಅದೆಂತು ಬೇರೆಯಾಗಿದ್ದೀತು ?

ಸೇವಾತತ್ಪರರಾದ, ಪ್ರಾಮಾಣಿಕರಾದ, ಸೇವಕರಿಗೆ ಹರಿಹರನಿಗೆಂತೊ ಅಂತೆ ಎದೆಗುದಿಯಾಗುತ್ತದೆ; ಈ ಸೇವೆ ಸಾಕಪ್ಪ ಎನಿಸುತ್ತದೆ. ಸ್ವಾರ್ಥಸಾಧಕರಾದ ಕರಣಿಕರು (ಲೆಕ್ಕಿಗರು, ಗುಮಾಸ್ತರು) ಎಲ್ಲ ಕಾಲದಲ್ಲೂ ಉಂಟು. ಅವರ ಸ್ವರೂಪ ಸ್ವಭಾವಗಳೇ ಬೇರೆ. ಅವರನ್ನು ಎದುರುಹಾಕಿಕೊಂಡರೆ ಒಡೆಯರೂ ಬದುಕು ವಂತಿಲ್ಲ, ಅವರ ಬಳಿ ಕೆಲಸ ನಡೆಯಿಸಿಕೊಳ್ಳಲು ಹೋದವರೂ ಉಳಿಯುವಂತಿಲ್ಲ. ಕುಮಾರವ್ಯಾಸನ ವಾಣಿಯನ್ನು ಆಲಿಸಿ :

(೧) " ಕರಣಿಕನ ಹಗೆಗೊಂಡವಂಗೈಶ್ವರಿಯ ಹಾನಿ."

(೨) " ಬರೆದ ಬಳಿಕದು ವಿಧಿಯ ಸೀಮೆಯ
ಬರಹ ನಿಜಕಾರ್ಯಾರ್ಥ ಲಾಭವು
ದೊರಕಿದೊಡೆ, ಪತಿಯರ್ಥ ನೀರಲಿ ಬರೆದ ಲಿಪಿಯಂತೆ ;
ಕರಗುಪಿತ ಲೋಲುಪರು ಲಂಚದ
ಪರಮಜೀವನ ಜಾಣರಾ ಸಿರಿ
ಕರಣದವರೊಪ್ಪಿದರು ಭೂಪಾಲಕನ ಸಭೆಯೊಳಗೆ."

ಇದು ಹಣದ ವ್ಯವಹಾರವನ್ನು ನೋಡಿಕೊಳ್ಳುವವರ ಮಾತಾಯಿತು. ಹಣ ಡೊಡೆಯರಾದ ಸಿರಿವಂತರ ಮಹಿಮೆಯನ್ನು ಕುರಿತು ಕುಮಾರವ್ಯಾಸನ ಅನುಭವದ ಮಾತು ಇದು :

" ಸಿರಿಯನುಳ್ಳವನವನೆ ಕುಲಜನು,
ಸಿರಿಯನುಳ್ಳವನೇ ವಿದಗ್ಧನು,
ಸಿರಿಯನುಳ್ಳವನೇ ಮಹಾತ್ಮನು ಸಕಲಗುಣಯುತನು ;

ಸಿರಿಯನುಳ್ಳವನೇ ಸುಶೀಲನು ;
ಸಿರಿರಹಿತ ಶಿವನಾದೊಡಾಗಲಿ,
ಸರಕುಮಾಡದು ಲೋಕವವನೀಪಾಲ ಕೇಳೆಂದ."

ಕವಿಗಳ ಸಿರಿ ಎಂದರೆ ಅವರ ಅನುಭವ ಸಂಪತ್ತು; ಲೋಕವೆಲ್ಲಾ ಹಂಚಿಕೊಂಡು ಸದಾ ಅನುಭೋಗಿಸಿದರೂ ಮುಗಿಯದ ಅಕ್ಷಯಸಂಪತ್ತು, ತವನಿಧಿ; ಆದರೂ, 'ಸಿರಿರಹಿತ'ರಾದ ಅವರನ್ನು ಲೋಕ 'ಸರಕುಮಾಡದು.'!

೪

ಮೇಲೆ, ಒಂದೆಡೆ, ತಂದೆ ತಾಯಿಗಳ ಅನುಭವ ಎಲ್ಲ ಕಾಲಕ್ಕೂ ಒಂದೇ ಎಂದು ಸೂಚಿಸಿದೆ. ಅದೇ ರೀತಿ ಎಲ್ಲ ಬಗೆಯ ಅನುಭವಗಳು. ಪುತ್ರವಾತ್ಸಲ್ಯ, ಪ್ರಿಯ ಪ್ರಿಯೆಯರ ಅಗಲಿಕೆಯ ವೇದನೆ, ಭಕ್ತಿ, ಸ್ವದೇಶಾಭಿಮಾನ, ಸೂರ್ಯೋದಯ ಸೂರ್ಯಾಸ್ತ ಚಂದ್ರೋದಯ ಋತುವೈಭವ ಮುಂತಾದ ಪ್ರಕೃತಿ ವ್ಯಾಪಾರಗಳನ್ನು ಕಂಡಾಗ ಆಗುವ ಸಂತಸ, ಮುಂತಾದ ಅಗಣಿತ ಅನುಭವಗಳ ಸ್ವರೂಪ ಎಲ್ಲ ಕಾಲಕ್ಕೂ ಒಂದೇ. ಆದರೂ, ಕವಿ ಕಾಣುವ ದೃಷ್ಟಿಯಲ್ಲಿ, ನುಡಿಯುವ ಪರಿಯಲ್ಲಿ, ನವ್ಯೋನವತೆಯಿದ್ದರೆ ಸೃಷ್ಟಿಯಷ್ಟೇ ಪುರಾತನವಾದರೂ ಆ ಅನುಭವ ಹೊಸತೆನಿಸುತ್ತದೆ; ಅಷ್ಟರಮಟ್ಟಿಗೆ ಕವಿಯ ಅನುಭವಕ್ಕೆ ಸ್ವೋಪಜ್ಞತೆ ಸಿದ್ಧಿಸಿ, ಕವಿತೆಯೂ ಸ್ವೋಪಜ್ಞವಾಗುತ್ತದೆ; ಆ ಅನುಭವ 'ಅವನದ್ದೇ' ಆಗುತ್ತದೆ. ಹಿಂದಿನ ಒಬ್ಬ ಕವಿ ವ್ಯಕ್ತಪಡಿಸಿದ ಅಚ್ಚಿನಲ್ಲೇ ಮುಂದಿನ ಕವಿಗಳೂ ಅದೇ ಅನುಭವವನ್ನು ಅದೇ ಅಚ್ಚಿನಲ್ಲಿ ಚಾಚು ತಪ್ಪದೆ ವ್ಯಕ್ತಪಡಿಸುತ್ತ ಹೋದರೆ 'ಕವಿಸಮಯ'ವೊಂದು ಏರ್ಪಡುತ್ತದೆ. 'ಕವಿಸಮಯ' ಭಕ್ತನಾದ ಕವಿ ತನ್ನ ಹೃದಯಮಂದಿರದಲ್ಲಿ ಕಾವ್ಯದೇವಿಯನ್ನು ಪ್ರತ್ಯಕ್ಷಮಾಡಿಕೊಳ್ಳದೆಯೇ ಕವಿತಾರಚನೆ ಮಾಡಿರುವ ನಿದರ್ಶನಗಳಿಗೆ ನಮ್ಮ ಪ್ರಾಚೀನ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಕೊರತೆಯಿಲ್ಲ. ಅನೇಕ ಸಲ ಅನೇಕ ಕವಿಗಳು ಹೇಳಿದ್ದನ್ನೇ ಮತ್ತೆ ಮತ್ತೆ ಹೊಸೆದು ಹೇಳುವುದು 'ಕವಿಸಮಯ'ವೆಂಬ ಆಲಂಕಾರಿಕ ಗೌರವಕ್ಕೆ ಪಾತ್ರವಾಗಿಬಿಟ್ಟಿದೆ! ಒಬ್ಬ ಕವಿಯ ಸುಂದರ ಅನುಭವವನ್ನು ಇನ್ನೊಬ್ಬ ಕವಿ ತನ್ನದನ್ನಾಗಿ ಮಾಡಿಕೊಂಡಾಗ ಅದನ್ನು 'ಭಾವಚೌರ್ಯ' (ಅಥವಾ 'ಅನುಭವಚೌರ್ಯ') ಎಂದು ಹೇಳುವ ಸತ್ಯನಿಷ್ಠುರತೆ ನಮ್ಮ ಅನೇಕ ವಿಮರ್ಶಕರಲ್ಲಿ ಇಲ್ಲವಾಗಿದೆ. ನಮ್ಮ ಪ್ರಾಚೀನ ಕವಿಗಳು ಸಂಸ್ಕೃತ ಸಾಹಿತ್ಯ ಭಂಡಾರದಿಂದ 'ಅನುಭವ ಸಾಮಗ್ರಿ'ಯನ್ನು ಎರವಲು ಪಡೆದಿದ್ದರೆ ಇಂದಿನ ಅನೇಕ ಕವಿಗಳು, ಕಾದಂಬರಿಕಾರರು, ಕತೆಗಾರರು ಪಾಶ್ಚಾತ್ಯ ಸಾಹಿತ್ಯ ಭಂಡಾರಕ್ಕೆ ಕೈಯಿಕ್ಕಿದ್ದಾರೆ. ಇಲ್ಲಿ ಇನ್ನೊಂದು ಭೇದವನ್ನು ನಾವು ಗಮನಿಸಬೇಕು. 'ವಸ್ತು ಸ್ವೀಕಾರ' ಬೇರೆ; ಇನ್ನೊಬ್ಬ ಕವಿಯ 'ಅನುಭವದ ಅಪಹಾರ' ಬೇರೆ. ಮೊದಲನೆ

ಯದು ಕ್ಷಮ್ಯ ಮಾತ್ರವಲ್ಲ, ಮಾನ್ಯ ; ಎರಡನೆಯದು ಅಕ್ಷಮ್ಯ, ಅಮಾನ್ಯ. ರನ್ನನು 'ಗದಾಯುದ್ಧ' ವಸ್ತುವನ್ನು ಪಂಪಭಾರತದಿಂದಲೂ 'ವೇಣೀಸಂಹಾರ'ದಿಂದಲೂ ಸ್ವೀಕರಿಸಿದ್ದರೆ ಬಾಧಕವಿಲ್ಲ. ಆದರೆ, ಪಂಪನ ಅನುಭವದ ಉಕ್ತಿಗಳನ್ನು ರನ್ನನು ಪಡಿನುಡಿದಾಗ, ರನ್ನನಂಥ ಸಮರ್ಥಕವಿಯ ಗೌರವಕ್ಕೆ ಕೊಂಚವಾದರೂ ಊನ. ರನ್ನನಷ್ಟೇ ಪ್ರೌಢ ವಾಕ್ಸಂಪತ್ತಿನ ಕವಿಯೆನಿಸಿದ 'ಜಗನ್ನಾಥ ವಿಜಯ'ಕರ್ತೃ ರುದ್ರ ಭಟ್ಟನು ಕೃಷ್ಣನ ಬಾಲಲೀಲೆಯನ್ನು ವರ್ಣಿಸುವಂದು ಲೀಲಾ ಶುಕಮುನಿಯ 'ಕೃಷ್ಣಕರ್ಣಾಮೃತ'ದ ಶ್ಲೋಕಗಳನ್ನು ಕನ್ನಡದಲ್ಲಿ ಅನುವಾದ ಮಾಡಿದರೆ, ಕನ್ನಡ ಪದ್ಯಗಳು ಅವನವಾದಾವೆ? ಶರಣರ ವಚನಗಳಲ್ಲಿ ಅನುಭವ-ಅನುಭಾವ ಸಂಪತ್ತು ಹೇರಳವಾಗಿವೆ; ಆದರೆ, ಅವುಗಳ ತಲಕಾವೇರಿಯನ್ನು ನಾವು ಮರೆಯಬಾರದು.

ಹೀಗೆ, ಕಾವ್ಯಗಳ ಬೆಲೆಕಟ್ಟುವಾಗ ಕವಿಗಳ ಅನುಭವ ಸಾಮಗ್ರಿಯ ಸೊಮ್ಮು ಎಷ್ಟರಮಟ್ಟಿಗೆ ಅವರದ್ದು ಎಂಬುದನ್ನು ಗುರುತಿಸಬೇಕಾದ್ದು ಅತ್ಯವಶ್ಯ. ಕಾವ್ಯ ವಿಮರ್ಶೆಯಲ್ಲಿ ಕವಿಯ ಅನುಭವದ ಸ್ವೋಪಜ್ಞತೆಯ ಮೌಲ್ಯನಿರ್ಣಯ ಒಂದು ಮುಖ್ಯವಾದ ಅಳತೆಗೋಲಾಗಿಲ್ಲ, ಕನ್ನಡ ಕಾವ್ಯವಿಮರ್ಶೆಯ ಪ್ರಪಂಚದಲ್ಲಿ. ಬಹು ಭಾಷಾ ಸಾಹಿತ್ಯಗಳ ನಿರ್ದುಷ್ಟ ಖಚಿತ ಪಾಂಡಿತ್ಯಬೇಕು ಈ ಗುರುತರ ಕಾರ್ಯಕ್ಕೆ. ಅಂಥ ದಕ್ಷ ವಿಮರ್ಶಕರು ಹುಟ್ಟಿ, ಕನ್ನಡ ಕಾವ್ಯವಿಮರ್ಶೆಯಲ್ಲಿ ಉನ್ನತ ಸಂಪ್ರದಾಯದ ಪೀಠಿಕೆ ಏರ್ಪಡಲಿ ಎಂದು ಹಾರೈಸಬೇಕಾಗಿದೆ.

———:·:———

# ಪರಂಪರೆ ಮತ್ತು ಪ್ರಯೋಗ.



**ಪ್ರೊ. ಸಂ. ಶಿ. ಭೂಸನೂರಮಠ, ಎಂ.ಎ.**

**ಕ**ನ್ನಡ ಸಾಹಿತ್ಯ, ಪರಂಪರೆ ಪ್ರಯೋಗ ಎಂಬೀ ಶಬ್ದಗಳು ನಮಗೆ ಚಿರ ಪರಿಚಿತವಾಗಿದ್ದರೂ ಇವುಗಳ ಸ್ಪಷ್ಟವಾದ, ನಿರ್ದಿಷ್ಟವಾದ ಅರ್ಥ ಮತ್ತು ಇಂದು ಈ ವಿಷಯದ ಮಹತ್ವ ನಮಗಿನ್ನೂ ನಿಚ್ಚಳವಾಗಿ ತಿಳಿದಿಲ್ಲ. ಆದುದರಿಂದ ಮೊದಲು ಪರಂಪರೆಯೆಂದರೇನು? ಪ್ರಯೋಗವೆಂದರೇನು? ಪರಂಪರೆಗೂ ಪ್ರಯೋಗಕ್ಕೂ ಇರುವ ಸಂಬಂಧವೇನು? ಎಂಬುದನ್ನು ನೋಡಿಕೊಂಡು ಮುಂದೆ; ಸಾಹಿತ್ಯದ ನಿಜ ವಾದ ಗುರಿಯೇನು? ಈ ಗುರಿಯನ್ನು ಸಾಧಿಸಲು ಕನ್ನಡ ಸಾಹಿತ್ಯದ ಪರಂಪರೆ ಹೇಗೆ ಹೆಣಗುತ್ತ ಬಂದಿದೆ? ಹಿಂದಿನ ಇಲ್ಲವೆ ಇಂದಿನ ಪ್ರಯೋಗಗಳು ಅದೇ ಗುರಿ ಯನ್ನಿಟ್ಟುಕೊಂಡು ನಡೆದಿವೆಯೇ? ಎಂಬೀ ಪ್ರಶ್ನೆಗಳನ್ನು ಎದುರಿಸಿ ಉತ್ತರ ಕೊಡಲು ಯತ್ನಿಸಬಹುದು.

ಪರಂಪರೆಯೆಂಬುದಕ್ಕೆ ಸಂಪ್ರದಾಯವೆಂದು ಬೇರೆಂದು ಹೆಸರು. ಹಿಂದೆ ಹಿಂದಿನ ವಿಚಾರ - ಆಚಾರ, ಭಾವ - ಭಾಷೆ, ತತ್ತ್ವ - ಸಂಸ್ಥೆ ಇವೇ ಮೊದಲಾದ ಮಾನವ ಜೀವನದ ಚಟುವಟಿಕೆಗಳು ಕಾಲಪ್ರವಾಹದ ಕೂಡ ಮುಂದೆ ಮುಂದಿನ ಪೀಳಿಗೆಗೆ ಹರಿದುಹೋಗುವವೇ ಪರಂಪರೆ ಇಲ್ಲವೆ ಸಂಪ್ರದಾಯ. ಮಾನವ ಜೀವನ ದಲ್ಲಿ ಪರಂಪರೆ ಹಾಸುಹೊಕ್ಕಾಗಿ ಹೆಣೆದುಕೊಂಡಿದೆ. ತತ್ತ್ವದಲ್ಲಿ ವಿಚಾರ ಪರಂಪರೆ ತರ್ಕ ಸರಣಿಯ ಸಂಪ್ರದಾಯ, ಧರ್ಮದಲ್ಲಿ ದೇವರ ಕಲ್ಪನೆಯ ಪರಂಪರೆ ನೀತಿ ನಡತೆಯ ಸಂಪ್ರದಾಯ, ಕಲಾ ಪ್ರಪಂಚದಲ್ಲಿ ಸಮಯ ಸಂಪ್ರದಾಯ, ಸಾಹಿತ್ಯ ಕ್ಷೇತ್ರದಲ್ಲಿ ಶಬ್ದ ವಿಷಯ, ಚಂಪೂ-ಷಟ್ಪದಿ, ಅಲಂಕಾರ, ರಸಗಳ ಪರಂಪರೆ, ಮದುವೆ ಮುಂಜಿಗಳ ಪರಂಪರೆ, ಯುದ್ಧ ನೃತ್ಯಗಳ ಪದ್ಧತಿ. ಪರಂಪರೆ ಎಂಬ ಶಬ್ದವೂ

ಪರಂಪರೆ, ಅವರ ಅರ್ಥ ಅದೂ ಪರಂಪರೆ; ಪ್ರಯೋಗ ಎಂಬ ಶಬ್ದವು ಇಂದಿನ ಹೊಸ ಪ್ರಯೋಗವಲ್ಲ. ಅದು ಪರಂಪರೆ ನಮಗೆ ಕೊಟ್ಟ ದಾನ. ಪರಂಪರೆ ಇಲ್ಲವೆ ಸಂಪ್ರದಾಯವನ್ನು ಬಿಟ್ಟು ವ್ಯವಹಾರ ಜೀವನ ನಡೆಯುವುದು ಕಷ್ಟ; ಅಸಾಧ್ಯವೆಂದೂ ಹೇಳಬಹುದು. ಎಲ್ಲೆಲ್ಲಿ ಹವೆಯಿದ್ದು ಅದನ್ನೇ ಉಸುರಾಡಿಸಿ ನಾವು ಬದುಕಿದ್ದರೂ ಹವೆಯ ಅರಿವು ನಮಗೆ ಹಗಲೆಲ್ಲ ಇಲ್ಲದಂತೆ ನಮ್ಮ ಜೀವನದ ವ್ಯಾಪಾರವನ್ನೆಲ್ಲ ವ್ಯಾಪಿಸಿಕೊಂಡಿರುವ ಸಂಪ್ರದಾಯದ ಅರಿವು ನಮಗೆ ಸಾಕಷ್ಟು ಇಲ್ಲ.

ಮಾನವ ಜೀವನದಲ್ಲಿ ಪರಂಪರೆಯ ಪ್ರಾಬಲ್ಯ ಇಷ್ಟಿದ್ದರೂ ಪರಂಪರೆಯ ಮೂಲ ಚೈತನ್ಯ ಶಕ್ತಿ ಪ್ರಯೋಗವೇ ಎಂಬುದು ಎಂದೂ ಮರೆಯತಕ್ಕ ಮಾತಲ್ಲ. ಪರಂಪರೆ ಪ್ರಯೋಗದ ಶಿಶು. ವಿಜಯಶಾಲಿಯಾದ, ಸತ್ವಯುತವಾದ ಮುಂದು ಮುಂದಿನ ವೇಳೆಗೆ ಅನುಕರಿಸತಕ್ಕ ಪ್ರಯೋಗದ ಕೂಸು ಪರಂಪರೆ.

ಯದ್ಯದಾ ಚರತಿ ಶ್ರೇಷ್ಠಃ ತತ್ತದೇವೇತರೋಜನಃ।
ಸಯತ್ ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ॥

ಎಂದು ಭಗವದ್ಗೀತೆ ಹೇಳುವಂತೆ ಶ್ರೇಷ್ಠರ ಆಚಾರವನ್ನೇ ಉಳಿದವರು ಅನುಕರಿಸುತ್ತಾರೆ. ಅದೇ ಕಾಲಕ್ರಮದಲ್ಲಿ ಪರಂಪರೆಯೆಂದೆನಿಸಿಕೊಳ್ಳುತ್ತದೆ. ಸಮಾಜದ ಮೇಲೆ ನಿಯಮ ನಿರ್ಬಂಧಗಳನ್ನು ಹೇರಿ ಹೊತ್ತುಬಂದಂತೆ ಅಲ್ಪಸ್ವಲ್ಪ ಸಡಿಲಾಗಿ ನಡೆವ ಪರಂಪರೆಗೆ ಶ್ರೇಷ್ಠ ಪುರುಷರೇ ಪ್ರಮಾಣ. ಪರಂಪರೆಗೆ ಅವರದೇ ಆಶೀರ್ವಾದ. 'ನಡೆದುದೆ ಮಾರ್ಗಮಾಯ್ತು ಶಿವನ ಮದಕರಿಗೆ' ಎಂದು ಹರಿಹರದೇವನು ಬೇರೊಂದು ಸಂದರ್ಭದಲ್ಲಿ ಹೇಳುವಂತೆ ಪ್ರಮಾಣ ಪುರುಷರ ಪ್ರಯೋಗಗಳೇ ಮುಂದಿನವರಿಂದ ಅನುಕರಿಸಲ್ಪಟ್ಟು ಪರಂಪರೆಯಾಗುತ್ತವೆ.

ಆದರೆ ಸಂಪ್ರದಾಯವೇ ಸರ್ವಾಧಿಕಾರಿ; ಅದು ಮಾಡಿದ್ದೇ ಮಾರ್ಗ; ಬೇರೆ ಹೊಸ ಮಾರ್ಗವೇ ಇಲ್ಲ ಎಂದು ಪ್ರಯೋಗ ಕೈಕಟ್ಟಿಕೊಂಡು, ಕಣ್ಣು ಮುಚ್ಚಿ ಕುಳಿತುಕೊಂಡು ನಡೆದರೆ ಜೀವನ, ಇಲ್ಲವೆ ಹೊಸತೊಂದು ರಸದಿಂದ ತುಂಬಿ ಸೂಸುವ ಹೊಸ ಬೆಳಗನ್ನು ಜೀವನಕ್ಕೆ ನೀಡುವ ಸಾಹಿತ್ಯ ಬದುಕಲಿಲ್ಲ; ಬಾಳಲಿಲ್ಲ; ಬೆಳೆಯಲಿಲ್ಲ. ಬೆಳೆಯುವ ಸಾಹಿತ್ಯ ಉಳಿವುದೆಂತು? ಉಳಿವುದೇಕೆ? ಹೊಸಹೊಸತನ್ನು ನೋಡುವ ಪ್ರಜ್ಞೆ, ಪ್ರತಿಭೆ, ಇದ್ದುದೇನು? ಇರಬೇಕಾದುದೇನು? ಎಂಬುದರ ಭವ್ಯವಾದ ಭವಿಷ್ಯದರ್ಶನ, ಮುನ್ನುಗ್ಗಿ ಅಸಾಧ್ಯವನ್ನೂ ಸಾಧಿಸಬೇಕೆಂಬ ಸಾಹಸ, ಉರಿಬರಲಿ, ಸಿರಿಬರಲಿ, ಇದಕಾರಂಜುವರು? ಇದಕಾರಳಕುವರು ಎಂಬ ಸುಸ್ಥಿರ ಧೈರ್ಯ :- ಇಂತಹ ಸತ್ವಗುಣವಿಲ್ಲದ ಬಾಳು ಹೆಣದ ಬಾಳು; ಇಂತಹ ಶಕ್ತಿಯಿಲ್ಲದ ಸಾಹಿತ್ಯ ಸತ್ತ ಸಾಹಿತ್ಯ. ಅದೋ ಕೇಳಿ, ಕಿವಿಯಲ್ಲಿ ನಿನಾದ ಮಾಡುತ್ತಿದೆ. ಜಗತ್ತಿನಲ್ಲಿ ಅತ್ಯಂತ ಶ್ರೇಷ್ಠ ತತ್ತ್ವಜ್ಞಾನಿಗಳಾದ ಪ್ರೊಫೆಸರ್ ಎ. ಎನ್. ವ್ಹಾಯಿಟ್

ಹೆಡ್ಡರ ಗಂಭೀರ ಗುರುವಚನ "A race preserves its vigour so long as it labours a real contrast between what has been and what may be and so long as it is nerved by the viogour to adventure beyond the saftics of the past. Withont adventure civiliagation is in full dedoy"

ಸಾಹಸವಿಲ್ಲದೆ ಸಂಸ್ಕೃತಿಯಾಗಿಲ್ಲ; ಸಾಹಸವಿಲ್ಲದ ಸಂಸ್ಕೃತಿ ಉಳಿದಿಲ್ಲ. ಸಂಸ್ಕೃತಿಯ ಅಂಗವಾದ ಸಾಹಿತ್ಯ ಕಲೆಯ ಸೃಷ್ಟಿಯಾಗಿರುವುದು ನಿತ್ಯನೂತನವಾದ ಸೌಂದರ್ಯದ ದರ್ಶನ ಮಾಡಿಕೊಂಡು ಲೋಕಾನುಭವದ ಹೃದಯದಲ್ಲಿ ಹುದುಗಿರುವ ಕಾವ್ಯಾನುಭವ ಪಡೆದು ಭಾವವನ್ನು ಕಾಸಿ, ಕರಗಿಸಿ, ಅದರ ಪೂರ್ವಾಶ್ರಯ ಕಳೆದು ಕಾವ್ಯರಸವನ್ನೇ ಮಾಡಿ ಹೊಸತೊಂದು ರಸ ಸೃಷ್ಟಿಯನ್ನೇ ನಿರ್ಮಾಣಮಾಡಿದ ಅಮರಕವಿಗಳ ಸಾಹಸ ಕರ್ಮವಲ್ಲದೆ ಮತ್ತೇನು?

ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿಸಂತತಿ, ವಾಮನಕ್ರಮಂ
ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ ಹರನಂ ನರನೊತ್ತಿ ಗಂಟಲಂ
ಮೆಟ್ಟುಗೆ ಮೆಟ್ಟದಿರ್ಕೆ ಕವಿಗಳ್ ಕೃತಿ ಬಂಧರೊಳೆತ್ತಿ ಕಟ್ಟಿದರ್
ಮುಟ್ಟಿದರೊತ್ತಿ ಮೆಟ್ಟಿದರಿದೇನಳವಗ್ಗವೋ ಕವೀಂದ್ರರಾ

ಸೇತುಬಂಧನ ಕಪಿಯ ಕರ್ಮ ಎಂಬ ವಿಷಯದಲ್ಲಿ ನೇಮಿಚಂದ್ರನಿಗೆ ಸಂಶಯ ವಿದೆ. ಆದರೆ ಅದು ಕವಿಯ ಸಾಹಸ ಕರ್ಮವೆಂಬುದರಲ್ಲಿ ಆತನಿಗೆ ಎಳ್ಳಷ್ಟೂ ಸಂಶಯವಿಲ್ಲ. ಇಂತ ಸಾಹಸ ಬುದ್ಧಿಯ ಪ್ರಯೋಗವಿಲ್ಲದೆ ಪರಂಪರೆಯ ಚೌಕಟ್ಟನಲ್ಲಿ ಕುಳಿತುಬಿಟ್ಟರೆ ಸಾಹಿತ್ಯ ಸೊರಗಿ ಸತ್ತುಹೋಗುತ್ತದೆ. ಅದೋ ಅಲ್ಲಿ ನೋಡಿ, ಆಂಗ್ಲ ಕವಿವರ್‍ಯ ಬ್ಲೇಕನ ಕಾವ್ಯದ ಕಮ್ಮಟದಲ್ಲಿ ನಡೆದಿರುವ ಪ್ರಯೋಗದ ಸಾಹಸವನ್ನು. ಆತ ಉಸುಬಿನ ಕಣಬಿಚ್ಚಿ ಒಳಗೆ ಜಗತ್ತನ್ನೇ ಕಾಣಬೇಕೆಂದಿದ್ದಾನೆ. ಕಾಡಹೂವಿನ ಮರೆಯಲ್ಲಿ ಸ್ವರ್ಗವನ್ನೇ ಕಾಣಬೇಕೆಂದಿದ್ದಾನೆ. ಅಂಗೈಯಲ್ಲಿ ಅನಂತವನ್ನು, ನಿರ್ಮಿತ ದಲ್ಲಿ ನಿತ್ಯವನ್ನು ಹಿಡಿಯಬಯಸುತ್ತಾನೆ. ಎಂತಹ ಅದ್ಭುತ ಪ್ರಯೋಗವಿದು! ವಿಜ್ಞಾನದ ಪ್ರಯೋಗಗಳು ನಮಗೆ ಉಗಿಬಂಡಿ, ವಿಮಾನಗಳನ್ನು ಕೊಟ್ಟಿವೆ. ಸಾಗರ ದಾಚೆಯಿಂದ ಮಿಂಚಿನ ವೇಗದಿಂದ ಬರುವ, ಈ ಬಾನುಲಿಯನ್ನು ತಂದಿವೆ. ಬಣ್ಣಿಸ ಬಾರದ ಅದ್ಭುತಗಳನ್ನು, ಎಣಿಸಬಾರದ ಅಸಾಧ್ಯಗಳನ್ನು ಸಾಧಿಸಿ ಕೊಟ್ಟಿವೆ. ಕೇವಲ ಸಂಪ್ರದಾಯ ಶರಣರಾಗಿ 'ವೇದಾಃ ಪ್ರಮಾಣಂ', 'ಆರಿಸ್ಟಾಟಲ್ ಹೀಗೆ ಹೇಳಿದ, 'ಪಂಪ ಮಹಾಕವಿ ಚಂಪೂರೂಪವಾಗಿ ಕಾವ್ಯ ಬರೆದ, ಎಂದುಕೊಂಡು ನಿಚ್ಚ ನಿಚ್ಚ ಹೊಚ್ಚ ಹೊಸತಾಗುತ್ತಿರುವ ಸೌಂದರ್ಯ ದೇವತೆಯ ಸತ್ಯ ಮಹಾದೇವನ ಸಂದರ್ಶನದ ಹಂಬಲವಿಲ್ಲದೆ, ಕಂಡದರ್ಶನವನ್ನು ಶಬ್ದದಲ್ಲಿ; ಬಣ್ಣದಲ್ಲಿ, ಕಲ್ಲಿನಲ್ಲಿ, ಧ್ವನಿಯಲ್ಲಿ ತುಂಬಿ ತುಂಬಿ ನೀಡುವ ಹೊಸ ಹೊಸ ಪ್ರಯೋಗಗಳಿಲ್ಲದಿರಲು ಕಲೆ

ಬದುಕುವವೆಂತು ? ಮಾನವನ ಅರಿವು ಹಿಗ್ಗಿ ಆನಂದಪಡುವವೆಂತು ? ಮಾನವನಿಗಾಗುವ ದುಃಖದ ಮುಪ್ಪಿಯನ್ನೊಡೆದು ಕರುಣರಸದ ಪರಮ ಮೂರ್ತಿಯಾದ ಸೀತಾದೇವಿಯನ್ನು ತೋರಿಸಿದ ಆದಿಕವಿ ವಾಲ್ಮೀಕಿ. ವಾಲ್ಮೀಕಿ ರಾಮಾಯಣ ಒಂದು ಸಾಹಿತ್ಯಕ್ಷೇತ್ರದಲ್ಲಿ ನಡೆದ ಮಹಾಪ್ರಯೋಗವಲ್ಲವೇ ? ಕಡು ಚಲುವೆಯಾದ ಹೆಂಡತಿಯ ವಿಷಯದಲ್ಲಿ ಗಂಡನಿಗೆ ಸಂಶಯ ಬಂದರೆ ಮನಃಸಂಸಾರದ ನರಕದಂತೆ ಕುದ್ದು ಉಕ್ಕಿ ವೈಯೆಲ್ಲ ಕಂದಿ ಕುಂದಿಹೋಗುತ್ತವೆ. ಆದರೆ ಇಣಿಕಿನೋಡಿರಿ ಷೇಕ್ಸ್ಪಿಯರನ ಪ್ರಯೋಗ ಶಾಲೆಯಲ್ಲಿ ! ಸಂಶಯಭಾವದ ಗರ್ಭವನ್ನು ಭೇದಿಸಿ ಬರುವ ರಸಸಾರ್ವಭೌಮ ಅಥೆಲೋನನ್ನು ! ಗಂಡನಾದ ಅಥೆಲೋನಿಂದ ಕುತ್ತಿಗೆ ಹಿಚುಕಿಸಿಕೊಂಡು ಸತ್ತು ನಿತ್ಯ ನಿರಂತರ ಬದುಕಿದ 'ಸರಸ ಮೃದು ಮಧುರ' ಸಾಧ್ವಿ ಡೆಸ್ಡೆಮೋನಾನನ್ನು ! ಕವಿಯ ಪ್ರತಿಭಾನ್ವಿತನ ಮುಟ್ಟಿದ ದುಃಖ ದುಃಖವಲ್ಲ; ಸಂಶಯ ಸಂಶಯವಲ್ಲ. ಅದನ್ನೊಂದು ನೋಡಿದರೆ ಅದೊಂದು ಉನ್ನತ ಶಾಂತಿ; ಅದೊಂದು ಗಂಭೀರ ಸೌಂದರ್ಯ. ಕಾವ್ಯರಸದಲ್ಲಿ ತಾನೆಲ್ಲ ಕರಗಿ ಪ್ರಲಯವಾಗುವ ರಸ ಸಮಾಧಿ. ಕಾವ್ಯವಿರಲಿ, ನಾಟಕವಿರಲಿ, ಕತೆಯಾಗಲಿ, ಕಾದಂಬರಿಯಾಗಲಿ ಸಾಹಿತ್ಯದ ರೂಪ ಎಂತಿದ್ದರೇನು ? ಸಹೃದಯರ ಹೃದಯವನ್ನು ಮುಟ್ಟಿ ಇಂತಹ ರಸ ಸಮಾಧಿಯನ್ನು ನೀಡಬಲ್ಲ ಸಾಹಿತ್ಯವೇ ಮಹಾ ಸಾಹಿತ್ಯ ; ಅದೇ ಶಾಶ್ವತ ಸಾಹಿತ್ಯ ; ಅದಕ್ಕೆ ದೇಶ, ಭಾಷೆಯ ಹದ್ದು ಮೇರೆಯಿಲ್ಲ; ಜಾತಿ ಜನಾಂಗದ ಕಟ್ಟುನಿಟ್ಟಿಲ್ಲ. ಡಾಂಟೆ, ವ್ಹರ್ಜಿಲ್, ಷೆಕ್ಸ್ಪಿಯರ್, ಮಿಲ್ಟನ್, ಮೊಪಾಸಾ, ಫಾಬರ್ಟ, ಟಾಲ್‌ಸ್ಟಾಯ್, ಮ್ಯಾಕ್ಸಿಮ್‌ಗಾರ್ಕಿ, ವಾಲ್ಮೀಕಿ, ಕಾಳಿದಾಸ, ಪಂಪ, ಹರಿಹರ – ಇವರ ಜಾತಿ ಯಾವುದು ? ಇವರ ದೇಶ ಇಂಗ್ಲೆಂಡ್ ಫ್ರಾನ್ಸ್ ಮೊದಲಾದುವೆ ? ಇವರ ಭಾಷೆ ಕನ್ನಡ, ಸಂಸ್ಕೃತ ಇಂಗ್ಲಿಷ್ ಫ್ರೆಂಚ್ ಎನ್ನಬಹುದೇ ? ಅವರಿದ್ದ ಕಾಲವಾವುದು ? ಕ್ರಿಸ್ತನಿಗಿಂತ ಮೊದಲೆ ? ಇಲ್ಲವೆ ಆಮೇಲೆಯೆ ? ಅವರ ಮಹಾಕಾವ್ಯರಸಸಾಗರ ಮಾನವನ ಸಣ್ಣ ಮನಸ್ಸಿನ ಒಡ್ಡು ಬಂಡೆಯನ್ನೆಲ್ಲ ಲೀಲಾಜಾಲವಾಗಿ ಕಿತ್ತೊಗೆದು ಮಾನವನ ಭಾವದ ಮುಚ್ಚಳವನ್ನು ತೆಗೆದು ಅಲ್ಲಿ ಮರೆಯಾಗಿರುವ ಪಾರಾವಾರವಾದ ಕಾವ್ಯರಸದ ಮಹಾಸಾಗರವನ್ನೆಬ್ಬಿಸಿ ಅದರೊಡನೆ ಸಮರಸವಾಗುತ್ತದೆ. ಇದೇ ಮಹಾಕಾವ್ಯದ ಮಹೋದ್ದೇಶ.

ಹೆಂಡತಿ ಡೆಸ್ಡಿಮೋನಾನ ಕುತ್ತಿಗೆ ಹಿಚುಕಿ ಕೊಲ್ಲಲಿರುವ ಅಥೆಲೊ ಆಕೆಯ ಶಯ್ಯಾಗೃಹದಲ್ಲಿ ಮೆಲ್ಲಗೆ ಬಂದು ಅಲ್ಲಿ ಉರಿವ ದೀವಿಗೆಯನ್ನು ನೋಡಿ 'ನಿನ್ನನ್ನು ಆರಿಸಿದರೆ ತಿರುಗಿ ಹಚ್ಚಬಹುದು; ಆದರೆ ಈ ಜೀವನದ ಜ್ಯೋತಿಯನ್ನು ನಂದಿಸಿ ಮತ್ತೆ ಬೆಳಗುವುದೆಂತು?' ಎಂಬ ಭಾವದ ಅಥೆಲೋನ ರುದ್ರಗೀತವನ್ನು ಕೇಳಿ:

'Put out the light and the put out the light
It is quench the thou flowing minister,

I can again thy former light restre,
Should I report me ; but once put out thy light
There cummingout pattern of excelling alone,
I know not where is that pemetheon heat,
That can thy light relume.'

ಎಲ್ಲಿದೆ ಕಾಲ, ದೇಶ, ಭಾಷೆ, ಜಾತಿ, ನೀತಿ ? ಹಾಕುವದು ಷೇಕ್ಸ್‌ಪಿಯರನ ಹೃದಯ; ಕಿವಿಗೊಟ್ಟು ಕೇಳಿ ಗಂಭೀರ ಸಮಾಧಿಯಲ್ಲಿ ಕುಳಿತಿರುವುದು ನಮ್ಮ ಹೃದಯ. ನಮ್ಮ ಪೂಜೆ ಫ್ರೆಂಚ್ ಇಲ್ಲವೆ ರಶಿಯಾದವರಿಗೆ ತಿಳಿಯಲಿಕ್ಕಿಲ್ಲ. ಆದರೆ ಶಂಕರಾಚಾರ್ಯರು ಹೇಳುವ 'ಯದ್ಯತ್ ಕರ್ಮಕರೋಮಿ ತತ್ತದಖಿಲಂ ಶಂಭೋ ತವಾರಾಧನಂ' ಮಾಡುವುದೆಲ್ಲ ಪೂಜೆ ಎಂದು ಹೇಳಿದರೆ ತಿಳಿಯದ ಜನಾಂಗವಾವುದು ? ದೇಶ, ಕಾಲ; ಜಾತಿ ಜನಾಂಗದಾಚೆ ಕೈಚಾಚಿ ವಿಶ್ವ ವಸ್ತುಗಳು ಹೊದ್ದುಕೊಂಡಿರುವ ಸಿರಿಯ ಸೀರೆಯನ್ನು ಸೆಳೆದು ವಿಶ್ವದ ನಿತ್ಯನಿರಂಜನವಾದ, ಸತ್ಯ ಸೌಂದರ್ಯವನ್ನು ಕಲ್ಪನೆಯ ಕೋಟಿಕಣ್ಣಿಗೆ ತೋರಿ, ಮಾನವನ ಭಾವವನ್ನು ಬೆಳಗಿ ಅದರಾಳವನ್ನು ತರತರವಾಗಿ ತೆಗೆದು ತೋರಿ, ಜಡವೆಂದು ತೋರುವ ವಿಶ್ವದ ಬಾಹ್ಯಸೌಂದರ್ಯ, ಭಾವದ ಅಂತಸ್ಸೌಂದರ್ಯ ಇವೆರಡೂ ಬೇರಲ್ಲ, ಒಂದೇ. ಇದೇ ಸತ್ಯ, ಇದೇ ಸುಂದರ, ಇದೇ ಶಿವ, ಇದೇ ಆನಂದ ಎಂದು ಬೀರಬಲ್ಲುದೇ ವಿಶ್ವದ ಸಾಹಿತ್ಯ. ಅದೇ ಸತ್ಯ ಸಾಹಿತ್ಯ, ಅದೇ ಶಾಶ್ವತ ಸಾಹಿತ್ಯ, ಮಾನವನನ್ನು ಪ್ರಜ್ವಲಗೊಳಿಸಿ ವಿಶ್ವಮಾನವನನ್ನಾಗಿ ಮಾಡಬಲ್ಲ ಸಾಹಿತ್ಯ ವಿಶ್ವಸಾಹಿತ್ಯವಲ್ಲದೆ ಮತ್ತೇನು ?

ಇಂತಹ ಉಜ್ವಲಸಾಹಿತ್ಯದ ಪರಂಪರೆ ಕನ್ನಡಕ್ಕಿದೆ. ಪರಂಪರೆ ಇಂತಹ ಸಾಹಿತ್ಯವನ್ನು ಹುಟ್ಟಿಸುವ ಸತ್ವವನ್ನು ಕಳೆದುಕೊಂಡಾಗ ಪಂಪ-ಹರಿಹರ, ಬಸವಣ್ಣ-ರಾಘವಾಂಕ, ಕುಮಾರವ್ಯಾಸ-ಚಾಮರಸ, ಆಂಡಯ್ಯ-ರತ್ನಾಕರವರ್ಣಿ, ನಿಜಗುಣ ಶಿವಯೋಗಿ-ಪುರಂದರದಾಸ ಸರ್ವಜ್ಞ ಇವರೇ ಮೊದಲಾದವರು ಒಂದು ಕೈಯಿಂದ ಹಿಂದಿನ ಸಾಹಿತ್ಯದ ಸತ್ವವನ್ನು ಹೀರಿ, ಮತ್ತೊಂದು ಕೈಯಿಂದ ನಿತ್ಯನೂತನ ಸಾಹಿತ್ಯವನ್ನು ಹುಟ್ಟಿಸಿದ್ದಾರೆ. ಪರಂಪರೆಯನ್ನು ಪ್ರತಿಭಟಿಸಿ ಪ್ರಯೋಗ ಮಾಡಿ ಕನ್ನಡ ಸಾಹಿತ್ಯದಲ್ಲಿ ಪರಂಪರೆ ಹಾಕಿಕೊಟ್ಟಿರುವರು ಕೆಲವರು. ಹೊಸ ಪ್ರಯೋಗಮಾಡಿ ವಿಜಯ ಸಂಪಾದಿಸಿ ಸಾಂಪ್ರದಾಯಕ್ಕೆ ನಿಲುಕದೆಹೋದವರು ಕೆಲವರು. ಅಂತೂ ನಮ್ಮ ಸಾಹಿತ್ಯಕ್ಕೆ ಉಜ್ವಲ ಪರಂಪರೆಯಿದೆ. ಉಜ್ವಲ ಪ್ರಯೋಗಗಳೂ ಇಲ್ಲಿ ನಡೆದಿವೆ. ಇಲ್ಲವಾದರೆ ಚಂಪೂ–ವಚನ, ರಗಳೆ–ಷಟ್ಪದಿ, ತ್ರಿಪದಿ–ಸಾಂಗತ್ಯ, ಮೊದಲಾದುವು ಹುಟ್ಟುತ್ತಿರಲಿಲ್ಲ. ಭಾರತ-ರಾಮಾಯಣ, ತೀರ್ಥಂಕರರ ಚರಿತೆ, ಶಿವಶರಣರ ಚರಿತೆ, ಅಲಂಕಾರ ಶಾಸ್ತ್ರ-ರಸಶಾಸ್ತ್ರ, ಛಂದಸ್ಸು-ವ್ಯಾಕರಣ ಇವೇ ಮೊದಲಾದುವು ನಿರ್ಮಾಣವಾಗುತ್ತಿರಲಿಲ್ಲ.

ಇನ್ನು ಇಂದಿನ ಮಾತು ಕನ್ನಡ ಸಾಹಿತ್ಯದಲ್ಲಿ ಹೊಸಹೊಸ ಪ್ರಯೋಗ ನಡೆದಿವೆ. ಇಂತಹ ಪ್ರಯೋಗ ನಡೆಯಲು ಆಂಗ್ಲ ಸಾಹಿತ್ಯವೇ ಪ್ರಚೋದಕ ಶಕ್ತಿ ಯೆಂಬುದು ಮರೆಯತಕ್ಕ ಮಾತಲ್ಲ. ಕನ್ನಡ ಸಾಹಿತ್ಯದ ರೂಪ, ವಿಷಯ, ಛಂದ ಎಲ್ಲಿ ನೋಡಿದಲ್ಲಿ ಆಂಗ್ಲ ಸಾಹಿತ್ಯದ ಅನುಕರಣ, ನಮ್ಮ ಉಜ್ವಲ ಪರಂಪರೆಯ ಮರೆವು. ತನ್ನ ತಾ ಮರೆದ ಅನ್ಯರ ಅನುಕರಣದಲ್ಲಿಯೇ ತೊಡಗಿದ ಸಾಹಿತ್ಯ ಉನ್ನತ ಸಾಹಿತ್ಯವಾಗಲಾರದು. ನಾವು ಅನುಕರಣಸ್ಥಲವನ್ನು ದಾಟಿ ನಮ್ಮ ನಿಜಸ್ಥಲಕ್ಕೆ ಏರಬೇಕು.

'ಕಾನೂರ ಸುಬ್ಬಮ್ಮ ಹೆಗ್ಗಡತಿ, ಮರಳಿ ಮಣ್ಣಿಗೆ, ಚೋಮನದುಡಿಯಂತಹ ಮಹಾ ಕಾದಂಬರಿ ಬಂದಿವೆ. ವಿಶ್ವಸಾಹಿತ್ಯಕ್ಕೆ ತಮ್ಮ ಸೇವೆ ಸಲ್ಲಿಸುವಂತಿವೆ. ಕೂಹು ಕೂಹು ಎಂದು ತನಿರಸವನ್ನೇ ಹಾಡಿ 'ಇಂಗ್ಲೀಷಿಗೆ ತರ್ಜುಮೆ ಮಾಡಿದರೆ ದೊರೆಯುವದು ನೋಬಲ್ ಬಹುಮಾನ' ಎಂಬ ಆತ್ಮವಿಶ್ವಾಸವುಳ್ಳ ಅರಸು ಕೋಗಿಲೆಗಳು ನಮ್ಮ ಸಾಹಿತ್ಯನಂದನವನ್ನು ಮಧುರಗೊಳಿಸುತ್ತಿವೆ. ಅದೇ ನಂದನ ದಲ್ಲಿ ಭೃಂಗದ ಜೇನ್ನೀರಿಬರುವ ಕಲ್ಪನಾ ವಿಲಾಸವನ್ನು ಕಂಡಿದ್ದೇವೆ. 'ಸುಬ್ಬಮ್ಮ ಮೊದಲಾದ ನೀಳ್ಗತೆಗಳೂ, ಸರಸವಾದ ಸಣ್ಣ ಕತೆಗಳೂ ಮೈದೋರಿವೆ. 'ಟೊಳ್ಳು ಗಟ್ಟಿ' ನಿರುತ್ತರ ಕುಮಾರದಂತಹ ಉತ್ತಮ ನಾಟಕಗಳನ್ನೂ ನೋಡಿದ್ದೇವೆ, ಎಂಡ್ಕುಡಕ ರತ್ನನ ಪದಗಳನ್ನೂ ಕೇಳಿದ್ದೇವೆ. ಶ್ರೀಯವರ ಶೈಲಿಯ ಸಂಪತ್ತು ನಮ್ಮ ಸಾಹಿತ್ಯವನ್ನು ಸಮೃದ್ಧಗೊಳಿಸಿದೆ. ಪದ್ಯದಲ್ಲಿ, ಗದ್ಯದಲ್ಲಿ ಹಲವಾರು ಪ್ರಯೋಗ ನಡೆದಿವೆ. ನಿಜವಾದ ಕೆಲವು ಪ್ರಯೋಗಗಳು ಗಟ್ಟಿಗೊಂಡು ಪರಂಪರೆಯಾ ಗುತ್ತಿವೆ. ನಿಷ್ಪ್ರಯೋಜಕವಾದ ಪ್ರಯೋಗಗಳು ನಡೆಯಲಾರದೆ ನಿಂತುಬಿಟ್ಟವೆ.

ಕನ್ನಡ ಸಾಹಿತ್ಯಕ್ಕೆ ಶಾಸ್ತ್ರೀಯ ಸಾಹಿತ್ಯದ ಕೊರತೆ ಅಷ್ಟಿಷ್ಟಲ್ಲ. ಪ್ರಪಂಚದ ಬೇರೆ ಬೇರೆ ಸಾಹಿತ್ಯಗಳ ಉತ್ತಮ ಭಾಗವನ್ನು ಕನ್ನಡಕ್ಕೆ ಅನುವಾದಿಸಿಕೊಳ್ಳುವ ಆವಶ್ಯಕತೆ ಹೇಳಬಾರದಷ್ಟು ಇಂದಿನ ನಮ್ಮ ಸಾಹಿತ್ಯದಲ್ಲಿ ಸ್ವಾತಂತ್ರ್ಯಕ್ಕಿಂತ ಸ್ವೈರ ಹೆಚ್ಚು; ವ್ಯುತ್ಪತ್ತಿಗಿಂತ ಅನುಕರಣ ಹೆಚ್ಚು; ವೈವಿಧ್ಯವಿದೆ; ವೈಪುಲ್ಯವಿಲ್ಲ; ಅಂತ ರ್ದೃಷ್ಟಿಯಿಲ್ಲ; ಸ್ಪಷ್ಟವಿಚಾರ ಮಾಡುವ ಶಕ್ತಿಯಿಲ್ಲ, ನಮ್ಮಲ್ಲಿ ಪ್ರಯೋಗ ಸಾಹಸ ಕಡಿಮೆ. ನ್ಯಾಯನಿಷ್ಠುರತೆ, ಬುದ್ಧಿಯ ಪ್ರಾಮಾಣಿಕತನ ನಮಗೆ ಬೇಕು. ಎಲ್ಲ ಕ್ಕಿಂತ ಹೆಚ್ಚೆಂದರೆ ನಮ್ಮ ಜೀವನ ದೊಡ್ಡದಾಗಬೇಕು. ಅಂದರೆ ನಮ್ಮ ಸಾಹಿತ್ಯ ದೊಡ್ಡದಾಗುತ್ತದೆ. ಜಾತಿ, ಮತ, ಪಕ್ಷ, ಪಂಗಡನೆಂಬ ರೋಗ ಹತ್ತಿ ಪ್ರಜ್ಞೆ ಪ್ರತಿಭೆ, ಅನುಭವ ಅಭ್ಯಾಸಗಳ ಬಡತನದಿಂದ ಸೊರಗಿ ಸಾಯುತ್ತಿರುವ ಜೀವನ ಸದಾರೋಗ್ಯ ಸಂಪತ್ತಿಯಿಂದ ಥಳಥಳಿಸಿ ಹೊಳೆವ ನಕ್ಷತ್ರದಂತಹ ಸಾಹಿತ್ಯವನ್ನು ಹಡೆದೀತೆ?

---

# ಕನ್ನಡ ಸಾಹಿತ್ಯದಲ್ಲಿ ಹಾಸ್ಯ.



**ಡಾ|| ಎಂ. ಎಸ್. ಸುಂಕಾಪುರ,** ಎಂ.ಎ., ಪಿ.ಹೆಚ್.ಡಿ.
ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.

**ಜೀ**ವನದಲ್ಲಿ ಹಾಸ್ಯಕ್ಕೆ ಮಹತ್ವದ ಸ್ಥಾನವಿದೆ. ಹಾಸ್ಯವಿಲ್ಲದ ಬಾಳು ಬರಿ ಗೋಳು. ಸಾಹಿತ್ಯವು ಜೀವನ ಚಿತ್ರವಾಗಿರುವದರಿಂದ, ಸಾಹಿತ್ಯದಲ್ಲಿಯೂ ಹಾಸ್ಯವು ಹಿರಿಯ ಸ್ಥಾನವನ್ನು ಪಡೆಯುವದು ಸಹಜವಾಗಿದೆ. ಆದರೆ ಮತ, ಧರ್ಮ-ತತ್ತ್ವಗಳಿಗೆ ಮಹತ್ವವನ್ನು ಕೊಟ್ಟ ಭಾರತೀಯರು ತಮ್ಮ ಸಾಹಿತ್ಯದಲ್ಲಿ ಹಾಸ್ಯಕ್ಕೆ ಯೋಗ್ಯ ಸ್ಥಾನವನ್ನು ನೀಡಲಿಲ್ಲವೆಂದು ಕೆಲವು ವಿಮರ್ಶಕರು ಅಭಿಪ್ರಾಯ ಪಟ್ಟಿದ್ದಾರೆ; ಕನ್ನಡ ಸಾಹಿತ್ಯವು ಸಹ ನಿಯಮಕ್ಕೆ ಅಪವಾದವಾಗಿಲ್ಲವೆಂಬ ಅಭಿಪ್ರಾಯವನ್ನು ವ್ಯಕ್ತಮಾಡುತ್ತಲೇ ಇದ್ದಾರೆ. ಈ ಮಾತು ಸಂಪೂರ್ಣ ಸತ್ಯವಾಗಿಲ್ಲ. ಕಣ್ಣಿಟ್ಟು ನೋಡುವವರಿಗೆ, ಕಿವಿಯಿಟ್ಟು ಕೇಳುವವರಿಗೆ, ಕನ್ನಡಸಾಹಿತ್ಯದಲ್ಲಿ ಹಾಸ್ಯವು ಹದವರಿತು ಬಂದಿರುವುದು ತಿಳಿಯಬಹುದಾಗಿದೆ. ಹಳಗನ್ನಡ ಸಾಹಿತ್ಯದಲ್ಲಿ ಇತರ ರಸಗಳಿಗೆ ದೊರೆತ ಸ್ಥಾನ ಹಾಸ್ಯಕ್ಕೆ ದೊರೆತಿರಲಿಕ್ಕಿಲ್ಲ. ಆದರೆ ಅಲ್ಲಿ ಹಾಸ್ಯವೇ ಇಲ್ಲವೆಂದು ಹೇಳುವ ಎದೆಗಾರಿಕೆ ಯಾರಿಗಿದೆ ? ಆಂಗ್ಲ ಸಾಹಿತ್ಯವು ಆಧುನಿಕ ಯುಗದಲ್ಲಿ ಹಾಸ್ಯದ ಹಿರಿಮೆಯನ್ನು ಎತ್ತಿ ತೋರಿಸಿದೆ. ಅದರ ಪ್ರಭಾವಕ್ಕೊಳಗಾದ ಹೊಸಗನ್ನಡದಲ್ಲಿ ಹಾಸ್ಯವು ಹಲವಾರು ರೂಪ ಧರಿಸಿ ಬಂದಿದೆ, ಬರುತ್ತಲಿದೆ; ಈ ಮಾತು ಸುಳ್ಳೆ ? ಒಟ್ಟಾರೆ ಕನ್ನಡಸಾಹಿತ್ಯದಲ್ಲಿ ಹಾಸ್ಯರಸವು ಯಾವರೀತಿಯಾಗಿ ಪ್ರವಹಿಸುತ್ತ ಬಂದಿದೆಯೆಂಬುದನ್ನು ಅರಿಯುವುದೇ ಈ ಬರವಣಿಗೆಯ ಗುರಿಯಾಗಿದೆ.

ಕನ್ನಡಿಗರು ಕುಲರಸಿಕರು, ಆಟನೋಟಗಳಲ್ಲಿ ಆಸಕ್ತಿಯುಳ್ಳವರು. ಅವರು ಮೊದಲಿಸಿಂದಲೂ ಹಾಡಿ-ಕುಣಿದು, ನಕ್ಕು-ನಲಿಯುತ್ತ ಬಂದವರು. ನಕ್ಕುನಲಿಯು

ವನಿಗೆ ಉಲ್ಲಾಸವೃತ್ತಿಯೇ ಕಾರಣ; ಅವರ ಕಾರ್ಯವೇ ನಗೆ. ರಸಿಕರಾದ ಕನ್ನಡಿಗರು ನಗೆಯನ್ನು ಬೆಳೆಸಿಕೊಂಡು ಬಳಸಿಕೊಂಡು ತಮ್ಮ ಬಾಳನ್ನು ಬೆಳಗಿಸುತ್ತ ಬಂದಿದ್ದಾರೆ. ಜೀವನದಲ್ಲಿರುವ ನಗೆ ಸಾಹಿತ್ಯದಲ್ಲಿ ಮೂಡಿ ರಸಾನುಭೂತಿಯನ್ನು ಪಡೆದಾಗ ಹಾಸ್ಯವೆನಿಸಿಕೊಳ್ಳುತ್ತದೆ. ಒಂದು ರೀತಿಯಲ್ಲಿ ಮಾನವ ಜೀವನದ ಅಪೂರ್ಣತೆಯನ್ನು ಉತ್ಪ್ರೇಕ್ಷಿಸಿ ತೋರಿಸುವುದೇ ಹಾಸ್ಯವೆನ್ನಬಹುದು. ಕಾವ್ಯ ಪ್ರಕಾಶಕಾರನು ಹಾಸ್ಯೋತ್ಪತ್ತಿಯನ್ನು ವಿವರಿಸುತ್ತ “ ವಿಪರೀತ ಅಲಂಕಾರ, ವಿಕೃತ ಆಚಾರ, ಅಭಿದಾನವೇ, ವಿಕೃತಾರ್ಥವನ್ನು ತೋರಿಸುವ ನುಡಿ – ಇವುಗಳ ಮೂಲಕ ವಿಶೇಷ ನಗೆಯನ್ನು ಹುಟ್ಟಿಸುವುದೇ ಹಾಸ್ಯ ”ವೆಂದು ಹೇಳಿದ್ದಾನೆ. ಪಾಶ್ಚಾತ್ಯ ಪಂಡಿತರು ಸಹ ವಸ್ತುವಿನಲ್ಲಿ ತೋರಿಬರುವ ವಿಸಂಗತಿಯೇ ಹಾಸ್ಯ ನಿರ್ಮಿತಿಗೆ ಕಾರಣವೆಂದು ಹೇಳುತ್ತಾರೆ. ಆ ವಿಸಂಗತಿ ಮಾತ್ರ ಅಸಂಬದ್ಧತೆಯ ತಳಹದಿಯ ಮೇಲೆ ಭದ್ರವಾಗಿ ನಿಲ್ಲಬೇಕು. ಇಲ್ಲದಿದ್ದರೆ ಹುಟ್ಟಿದ್ದು ಸರಿಯಾಗಿ ಹಾಸ್ಯವಾಗದೆ ಅಂದಾದುಂಡಿಯಾಗಿ ನಿಲ್ಲುತ್ತದೆ. ಈ ತತ್ವವನ್ನು ತಿಳಿದ ಕನ್ನಡ ಕವಿಗಳು ತಮ್ಮ ಕೃತಿಗಳಲ್ಲಿ ಉತ್ತಮ ತರಗತಿಯ ಹಾಸ್ಯವನ್ನು ಹರಿಸಲು ಪ್ರಯತ್ನಿಸಿದ್ದಾರೆ.

ಹಾಸ್ಯವನ್ನು ಸಾಮಾನ್ಯವಾಗಿ ಎರಡು ವಿಧವಾಗಿ ಹೆಸರಿಸಲಾಗುತ್ತದೆ—(೧) ರಸಹಾಸ್ಯ (೨) ವಿಡಂಬನೆ. ಮೊದಲನೆಯದು ನಮ್ಮನ್ನು ಕಾಯುತ್ತದೆ; ಎರಡನೆಯದು ಇರಿದು ದಾರಿಗೆ ತರಿಸುತ್ತದೆ. ಒಂದು ಮೆಚ್ಚುಮಾತಿನಲ್ಲಿ ತೇಲಿ ಬಂದರೆ, ಇನ್ನೊಂದು ಚುಚ್ಚುಮಾತಿಗೆ ಹಿಂಗೋಲಾಗಿ ಗೆರೆಯುತ್ತದೆ. ಒಂದು ಸಿಹಿ, ಇನ್ನೊಂದು ಕಹಿ ಎನ್ನಬಹುದಾದರೂ ಮಾನವಜೀವನಕ್ಕೆ ಅವೆರಡರ ಅವಶ್ಯಕತೆಯೂ ಇದೆ. ಬೇವು ಬೆಲ್ಲದ ಬೆರಕೆ ದೇಹಾರೋಗ್ಯಕ್ಕೆ ಮೂಲವಲ್ಲವೆ ? ನಕ್ಕು ನಗಿಸುವವನ ಜೀವನವು ಪರಿಶುದ್ಧಿ ಪಡೆದು ಬೆಳಗುತ್ತದೆ. ನಗಿಸಿಕೊಳ್ಳುವವನಿಗೂ ನಗುವ ಸಂದರ್ಭ ದೊರಕುತ್ತದೆ. ನಗುವ ಆನಂದದೊಡನೆ ನೀತಿ ದೊರೆತು ಜೀವನಮಾರ್ಗ ಸುಲಭವಾಗುತ್ತದೆ. ಇದರಿಂದ ಸರ್ವರಿಗೂ ಸುಖ. ಆದ್ದರಿಂದಲೇ ಹಾಸ್ಯವು ಸಮಾಜದ ಸ್ವಾಸ್ಥ್ಯವನ್ನು ಕಾಯುವುದಕ್ಕಾಗಿ ಹುಟ್ಟಿಬರುವದೆಂದು ತಿಳಿದವರ ಅಭಿಪ್ರಾಯ. ಅಂತಹ ಅಮೌಲ್ಯವಾದ ಹಾಸ್ಯವನ್ನು ಕಡೆಗಣಿಸಿ ನೋಡಿದರೆ ನಡೆದೀತೆ ?

ಕನ್ನಡ ಸಾಹಿತ್ಯಕ್ಕೆ ಪಂಡಿತರೂ ಪಾಮರರೂ ಕೂಡಿಯೇ ತಮ್ಮ ಪಾಲಿನ ಸೇವೆಯನ್ನು ಸಲ್ಲಿಸುತ್ತ ಬಂದಿದ್ದಾರೆ. ಪಂಡಿತ ಕವಿಗಳು ಪಾಂಡಿತ್ಯಪ್ರಪೂರ್ಣವಾದ ಕಾವ್ಯಗಳನ್ನು ಹೆಣೆಯುತ್ತ ಬಂದಂತೆ ಜಾನಪದ ಕವಿಗಳು ಸ್ವಯಂಸ್ಫೂರ್ತಿಯಿಂದ ತಿಳಿಯಾದ ಶೈಲಿಯಲ್ಲಿ ರಸಸಾಹಿತ್ಯವನ್ನು ಹೊಸೆದಿದ್ದಾರೆ. ಮೊದಲನೆಯದು ಪ್ರೌಢ ಸಾಹಿತ್ಯವೆಂದು ಮೆರೆದರೆ, ಎರಡನೆಯದು ಜಾನಪದ ಸಾಹಿತ್ಯವೆಂದು ಹೆಸರಾಗಿದೆ. ಪಂಪನನ್ನು ಮೊದಲ್ಗೊಂಡು ಮುದ್ದಣನ ಕಾಲದವರೆಗೆ ಬಾಳಿದ ಕವಿಗಳು ತಮ್ಮ ಕೃತಿಗಳು ಮಹಾಕಾವ್ಯಗಳಾಗಲೆಂದು ಪ್ರಯತ್ನಿಸಿದರು. ಈಗ ಉಪಲಬ್ಧವಿದ್ದ ಕನ್ನಡ

ಸಾಹಿತ್ಯವನ್ನು ಅವಲೋಕಿಸಿದರೆ, ಚಂಪೂಕೃತಿಗಳೇ ಮೊದ ಮೊದಲು ಇದ್ದುವೆಂಬುದು ತೋರಿಬರುತ್ತದೆ. ಪಂಪ, ಪೊನ್ನ, ರನ್ನ, ಹರಿಹರ, ರುದ್ರಭಟ್ಟ, ಷಡಕ್ಷರಿ ಮುಂತಾದ ಮಹಾಕವಿಗಳು ಚಂಪುಕೃತಿಗಳನ್ನು ರಚಿಸಿದ್ದಾರೆ. ಮಹಾಕಾವ್ಯದ ಕಟ್ಟುನಿಟ್ಟು ಗಳನ್ನು ಪಾಲಿಸಹೋಗಿ ನಮ್ಮ ಚಂಪುಕೃತಿಗಳು ಪಡಿಯಚ್ಚಿನಲ್ಲಿ ಮೂಡಿಬಂದಂತಾಗಿವೆ. ಮಹಾಕಾವ್ಯದಲ್ಲಿ ನವರಸಗಳಿಗೂ ಸ್ಥಾನವಿದೆ. ಆದರೆ ಶೃಂಗಾರ ವೀರ ಕರುಣರಸಗಳಿಗೆ ಪ್ರಧಾನ ಸ್ಥಾನವಿದ್ದಂತೆ ಹಾಸ್ಯ, ಭಯಾನಕಗಳಿಗೆ ಪ್ರಾಧಾನ್ಯವಿರಬಾರದೆಂದು ಶಾಸ್ತ್ರ ಹೇಳುತ್ತದೆ. ಕಾವ್ಯಶಾಸ್ತ್ರದ ನಿಯಮವನ್ನು ಪಾಲಿಸಿದ ಚಂಪುಕಾರರು ಹಾಸ್ಯವು ಶೃಂಗಾರರಸದ ಅಂಗವಾಗಿ ಬರುವಂತೆ ನೋಡಿಕೊಂಡಂತಿದೆ. ಆದರೂ ಕುಕವಿನಿಂದೆ, ಪುರವರ್ಣನೆ, ಜಲಕೇಳಿ, ಸೂಳೆಗೇರಿಯ ವರ್ಣನೆಗಳನ್ನು ಮಾಡುವಾಗ ಹಾಸ್ಯವನ್ನು ತಂದಿದ್ದಾರೆ. ಶೃಂಗಾರಾನುಕರಣದಿಂದ ಹುಟ್ಟುವ ಹಾಸ್ಯಕ್ಕೇ ಇಲ್ಲಿ ಪ್ರಾಧಾನ್ಯ. ಹಾಸ್ಯದ ವಿವಿಧ ಪ್ರಕಾರಗಳಿಗೆ ಇಲ್ಲಿ ಆಸ್ಪದ ದೊರೆತಂತಿಲ್ಲ. ಚತುರೋಕ್ತಿ, ವ್ಯಂಗ್ಯ ಅಲ್ಲಲ್ಲಿ ಮಿಂಚಿನಂತೆ ಮಿಂಚಿಹೋಗುವವನ್ನು ಕಾಣಬಹುದು. ಚಂಪೂಕೃತಿಗಳು ಹೆಚ್ಚಾಗಿ ಧರ್ಮಬೋಧೆಗಾಗಿ ರಚಿತವಾಗಿರುವುದರಿಂದ ಹಾಸ್ಯ ಸನ್ನಿವೇಶಗಳಿಗೂ ಹಾಸ್ಯ ಪಾತ್ರಗಳಿಗೂ ಅವಕಾಶ ಸಿಕ್ಕಂತಿಲ್ಲ. ಪಂಪ, ಹರಿಹರ, ರುದ್ರಭಟ್ಟ, ಷಡಕ್ಷರಿಗಳ ಕಾವ್ಯಗಳಲ್ಲಿ ರಸಹಾಸ್ಯ ಮಿನುಗಿದರೆ ಜನ್ನ, ನಯಸೇನ, ಬ್ರಹ್ಮಶಿವರ ಕೃತಿಗಳಲ್ಲಿ ಪರಮತ ವಿಡಂಬನೆ ಪ್ರಜ್ವಲಿಸಿದೆ. ಪರಮತ ವಿಡಂಬನೆ ಮಾಡುವುದು ಕನ್ನಡ ಕವಿಗಳ ವೈಶಿಷ್ಟ್ಯವೆನ್ನಬಹುದಾದರೂ ವೃತ್ತವಿಲಾಸ, ಬ್ರಹ್ಮಶಿವರು ಈ ಕಾರ್ಯದಲ್ಲಿ ಸ್ವಲ್ಪ ಮೇರೆ ಮೀರಿದ್ದಾರೆನ್ನಬಹುದಾಗಿದೆ. ಚಂಪುಕೃತಿಗಳಲ್ಲಿ ಅಮಾನುಷ ಜೀವನದ ಚಿತ್ರ ಬಂದಿರುವದರಿಂದಲೂ ಧಾರ್ಮಿಕ ವಾತಾವರಣವೇ ತುಂಬಿರುವದರಿಂದಲೂ ಹಾಸ್ಯವು ವೈಚಳಿ ಬಿಟ್ಟು ವಿಹರಿಸಲು ಸಾಧ್ಯವಿಲ್ಲದಾಗಿದೆ. ಅಂತು ಚಂಪುಕಾವ್ಯಗಳಲ್ಲಿ ಹಾಸ್ಯವೇ ಇಲ್ಲವೆಂದು ಹೇಳಲಾಗದು.

ಹನ್ನೆರಡನೆಯ ಶತಮಾನದಲ್ಲಿ, ಕನ್ನಡಸಾಹಿತ್ಯದಲ್ಲಿ ಒಂದು ದೊಡ್ಡ ಕ್ರಾಂತಿ ಯೊದಗಿತು. ವೀರಶೈವ ಕವಿಗಳು ಚಂಪುಕೃತಿಗಳನ್ನು ರಚಿಸುವ ಮಾರ್ಗವನ್ನು ಅಲ್ಲಗಳೆದು, ಷಟ್ಪದಿ, ರಗಳೆ, ಹಾಡು ಮುಂತಾದ ಕನ್ನಡ ಮಟ್ಟುಗಳನ್ನು ಆಶ್ರಯಿಸಿ ಹೊಸ ಮಾರ್ಗ ತುಳಿದು ಕಾವ್ಯ ಬರೆಯತೊಡಗಿದರು. ಕಾವ್ಯಬಂಧವು ಸಡಿಲಾಗಿ ಕಾವ್ಯಕನ್ನಿಕೆ ಸರಿಯಾಗಿ ಉಸಿರಾಡಿಸುವಂತಾಯಿತು. ಶಿವಶರಣರು ಶಿವನನ್ನೂ ಶಿವಶರಣರನ್ನೂ ಕುರಿತು ಹಾಡಲಾರಂಭಿಸಿದರೆ ಇತರ ಮತೀಯರು ರಾಮಾಯಣ, ಮಹಾಭಾರತಗಳಿಂದ ಕಥಾವಸ್ತುವನ್ನಾಗಿ ಮಾಡಿಕೊಂಡು ಕಾವ್ಯ ಕಟ್ಟಿದರು. ಹರಿಹರ, ರಾಘವಾಂಕ, ಕುಮಾರ ವ್ಯಾಸ, ವಿರೂಪಾಕ್ಷ ಪಂಡಿತ, ಲಕ್ಷ್ಮೀಶರು ಹಾಡಿದ ಷಟ್ಪದಿ ಕಾವ್ಯಗಳು ಜನಸಾಮಾನ್ಯರನ್ನೂ ತಣಿಸಿದವು. ಷಟ್ಪದಿ ಕಾವ್ಯಗಳಲ್ಲಿ ಬರುವ ಕಥೆ, ಉಪಕಥೆಗಳು ಉತ್ತಮ ಸಂಸಾರಚಿತ್ರಗಳಾಗಿರುವದರಿಂದ ಹಾಸ್ಯದ ಹರವು

ಹೆಚ್ಚಾಗಿ, ನಗೆಯ ಮಡುಗಳು ಕಾವ್ಯಗಳ ಒಡಲಲ್ಲಿ ಅನೇಕವಾಗಿ ಬಂದವು. ಹಾಸ್ಯದ ನಾನಾ ಪ್ರಕಾರಗಳು ತಲೆದೋರಿದವು. ವಿಡಂಬನೆ ಸರಸವಾಗುತ್ತ ಸಾಗಿತು. ಹಾಸ್ಯ ಸನ್ನಿವೇಶಗಳು ಸಹಜವಾಗಿ ಕಾವ್ಯದ ಕಥಾವಸ್ತುವಿನಲ್ಲಿ ಕಾಣಿಸಿಕೊಂಡವು. ಕುಮಾರ ವ್ಯಾಸನ ಉತ್ತರ ಕುಮಾರ, ಲಕ್ಷ್ಮೀಶನ ಚಂಡಿ, ಭೀಮಕವಿಯ ಮುಗ್ಧಸಂಗಯ್ಯ ಉತ್ತಮ ಮಾದರಿಯ ಹಾಸ್ಯಪಾತ್ರವೆನಿಸಿಕೊಂಡವು. ಒಟ್ಟಿನಲ್ಲಿ ಷಟ್ಪದಿ ಕಾವ್ಯ ಗಳಲ್ಲಿ ಬರುವ ಹಾಸ್ಯವು ವೈವಿಧ್ಯಪೂರ್ಣವಾಗಿದೆಯೆಂದು ಬೇರೆ ಹೇಳಬೇಕಾಗಿಲ್ಲ.

ಕನ್ನಡ ಸಾಹಿತ್ಯದಲ್ಲಿ, ಹಾಸ್ಯದೃಷ್ಟಿಯಿಂದ ರತ್ನಾಕರವರ್ಣಿಗೂ ಮುದ್ದಣ ನಿಗೂ ಬಹು ಮಹತ್ವದ ಸ್ಥಾನ ಸಲ್ಲುತ್ತದೆ. ರತ್ನಾಕರವರ್ಣಿ ಸಾಂಗತ್ಯದಲ್ಲಿ ಬರೆದರೆ, ಮುದ್ದಣ ಗದ್ಯದಲ್ಲಿ ರಾಮಾಯಣದ ಕಥೆ ಹೇಳಿದ್ದಾನೆ. ರತ್ನಾಕರವರ್ಣಿಯಲ್ಲಿ ಶೃಂಗಾರವೇ ಪ್ರಧಾನ ರಸ. ಶೃಂಗಾರದ ಅನುಕರಣದಿಂದ ಹುಟ್ಟಿಬರುವ ಹಾಸ್ಯವು ಭರತೇಶವೈಭವದಲ್ಲಿ ಸಮುದ್ರದ ತೆರೆಗಳಂತೆ ಅಲೆಯಲೆಯಾಗಿ ಬರುತ್ತದೆ. ಭರತೇಶನ ಅಸಂಖ್ಯಾತ ಸತಿಯರು ಸಾಲುಸಾಲಾಗಿ ನಿಂತು ಕಿಲಿಕಿಲಿ ನಕ್ಕು ಓದುಗರನ್ನು ನಗಿಸು ತ್ತಾರೆ. ಮುದ್ದಣನಂತೂ ತನ್ನ ಮಡದಿಯಾದ ಮನೋರಮೆಯನ್ನು ಕಾಡಿಸಿ ಪೀಡಿಸಿ ನಗುತ್ತಲೇ ಇರುತ್ತಾನೆ. ಅನ್ಯರಿಗೂ ನಗೆಯ ನೈವೇದ್ಯವನ್ನು ಸಿದ್ಧಪಡಿಸುತ್ತಾನೆ. ಒಂದೊಂದು ಸಲ ಮನೋರಮೆಯ ಮಾತಿನಲ್ಲಿ ಸಿಕ್ಕು ನಗಿಸಿಕೊಳ್ಳುತ್ತಾನೆ. ಹೀಗಾಗಿ ಈ ಇಬ್ಬರು ಕವಿಗಳಲ್ಲಿ ಬರುವ ಹಾಸ್ಯವು ಹೆಚ್ಚು ಸರಸವಾಗಿದೆಯೆಂದು ಹೇಳದವ ರಾರು ?

ಶಿವಶರಣರ ವಚನಗಳಲ್ಲಿ, ದಾಸರ ಹಾಡುಗಳಲ್ಲಿ ಹಾಸ್ಯ ಸ್ವಲ್ಪಮಟ್ಟಿಗೆ ಬರು ತ್ತದೆ. ಅಲ್ಲಿ ಸರಸಹಾಸ್ಯ ಕಡಮೆ; ಪರಮತ ವಿಡಂಬನೆ, ಸಮಾಜ ವಿಡಂಬನೆಯೇ ಹೆಚ್ಚೆನ್ನಬಹುದು. ಅಂತಹ ಸಂದರ್ಭಗಳಲ್ಲಿ ನಗೆ ಹೊಗೆಯಾಗುತ್ತದೆ. ವಿಡಂಬನೆಯು ನಿಂದೆಯ ರೂಪ ತಾಳಿ ಎದುರಾಳಿಯನ್ನು ಕೊಲ್ಲಲು ಯತ್ನಿಸುತ್ತದೆ. ಆದರೂ ಆ ವಿಡಂಬನೆಯ ಅಂತರಂಗದಲ್ಲಿ ಮರುಕ ಮನೆಮಾಡಿಕೊಂಡುದನ್ನು ಕಾಣಬಹುದು. ಜನರ ಆಚಾರವಿಚಾರಗಳಲ್ಲಿರುವ ನ್ಯೂನತೆಗಳನ್ನು ತಿದ್ದುವದೆ ಅದರ ಕಾರ್ಯವಾಗಿ ರುವದರಿಂದ ಆ ನಿಂದೆಯಿಂದಲೂ ಜನತೆಗೆ ಲಾಭವಿದೆ. ಆದರೆ ಇಂತಹ ಕಾರ್ಯ ವನ್ನು ಪೂರ್ತಿಮಾಡಿದ ಶ್ರೇಯಸ್ಸು ಸರ್ವಜ್ಞನಿಗೆ ಸಲ್ಲುತ್ತದೆ.

ಸರ್ವಜ್ಞ ಸ್ವತಂತ್ರಪ್ರಿಯ, ಕ್ರಾಂತಿಕಾರಕ; ಮೇಲಾಗಿ ಸಮಾಜದ ಲೋಪ ದೋಷಗಳನ್ನು ಕಟುವಾಗಿ, ನಿರ್ದಾಕ್ಷಿಣ್ಯವಾಗಿ ಟೀಕಿಸುವ ಎದೆಗಾರ. ಅವನಿಗೆ ಕಣ್ಣಿಟ್ಟಲ್ಲಿ ದೋಷ ಕಾಣಿಸುತ್ತದೆ. ಕಂಡ ದೋಷವನ್ನು ಹಿಂದು ಮುಂದು ನೋಡದೆ ಬೈಲಿಗೆಳೆದು ನಕ್ಕುಬಿಡುತ್ತಾನೆ ಸರ್ವಜ್ಞ. ಅವನಾಡುವ ಮಾತು ಕಿರಿದು; ಆದರೆ ಅರಿತ ಮಾತ್ರ ಬಲವಾದುದು. ಅನ್ಯರು 'ನೊಂದಾರು ಬೆಂದಾರು' ಎನ್ನುವದೇ ಇಲ್ಲ ಈ ವಿಡಂಬಕ. ಹೀಗಾಗಿ ಸರ್ವಜ್ಞನ ವಿಡಂಬನೆಯ ಭಲ್ಲೆಗೆ ಸಿಲುಕದವರೇ ಇಲ್ಲವೆನ್ನ

ವಂತಾಗುತ್ತದೆ. ಸುತ್ತಲೂ ಕಾಲುಜಾಡಿಸುವ ಅಸಗವಾಹನದಂತೆ, ಸರ್ವಜ್ಞ ಸರ್ವರಿಗೂ–ತಪ್ಪಿತಸ್ಥರಿಗೆ–ಲತ್ತೆ ಹಾಕುತ್ತಾನೆ. ಇಷ್ಟಾದರೂ ಸರ್ವಜ್ಞನು ಜನಪ್ರಿಯನು; ಅದಕ್ಕೆ ಕಾರಣ ಅವನಲ್ಲಿರುವ ಸತ್ಯಪ್ರೀತಿ; ನಿರ್ದಾಕ್ಷಿಣ್ಯಬುದ್ಧಿ. ಉತ್ತಮ ವಿಡಂಬಕನ ಸ್ಥಾನ ಮಹಿಮೆಯೇ ಅಂತಹದು. ಕುಲರಸಿಕನಿರುವಲ್ಲಿ ಕಡುನಗೆಯು ಹುತ್ತವೇ ಇರುವದೆಂದು ಸರ್ವಜ್ಞ ಹೇಳುತ್ತಾನೆ. 'ನಕ್ಕು ನಗಿಸುವಾ ನಗೆ ಲೇಸೆ'ಂದು ಸತ್ಯವಾತನ್ನೇ ಹೇಳುತ್ತಾನೆ; ಆದರೆ ಅವನು ಹೆಚ್ಚಾಗಿ ಬಳಸಿಕೊಳ್ಳುವುದು ವಿಡಂಬನೆಯನ್ನೇ. ಅದಕ್ಕೆ ಕಾರಣವೂ ಇದೆ. ಅವನು ಬಾಳಿದ ಸಮಾಜವು ಅವನತಿಗೆ ಇಳಿಯುತ್ತಿತ್ತು. ಅನಾಚಾರ, ಶುಷ್ಕವೇದಾಂತ ಜನತೆಯ ಜೀವನ ಗತಿಯಾಗಿದ್ದವು. ಆದ್ದರಿಂದಲೇ ಸರ್ವಜ್ಞನ ವಾಣಿ ಸ್ವಲ್ಪ ಚುರುಕಾಗಿಯೇ ಕೆಲಸ ಮಾಡಿರಬೇಕು–ಎನಿಸುತ್ತದೆ. ಸರ್ವಜ್ಞನು ಹೆಚ್ಚಾಗಿ ಬಳಸುವುದು ಆಕ್ಷೇಪಹಾಸ್ಯ(satire)ವನ್ನೇ. ಆಕ್ಷೇಪಹಾಸ್ಯಕ್ಕೆ ದಯೆದಾಕ್ಷಿಣ್ಯ ಇರುವದೇ ಇಲ್ಲ. ಜನತೆಯ ಬಹಿರಾಡಂಬರ, ಕಾಲದ ಕೊಂಕು, ಸಮಾಜದ ದುಸ್ಥಿತಿ, ಮನುಜರ ದುಸ್ಥಿತಿಗಳನ್ನು ಕೀಳುವದಕ್ಕೆ ಆಕ್ಷೇಪ ಹಾಸ್ಯವೇ ಲೇಸು. ಈ ಮಾತನ್ನು ಸರ್ವಜ್ಞ ಸಂಪೂರ್ಣವಾಗಿ ಅರಿತಿರಬೇಕು. ದೇವನ. ತಾನೇ ದೊಡ್ಡವನೆಂದು ಮೆರೆದರೆ ಸರ್ವಜ್ಞ ಕೇಳುವದಿಲ್ಲ.

ಹುಟ್ಟಿಸುವನಜನೆಂಬ । ಕಷ್ಟದಾ ನುಡಿ ಬೇಡ ।
ಹುಟ್ಟಿಪನು ತನ್ನ ಶಿರಹರಿಯೆ । ಮತ್ತೊಂದ
ಹುಟ್ಟಿಸನದೇಕೆ ಸರ್ವಜ್ಞ ॥

ಸರ್ವಜ್ಞನ ಸವಾಲಿಗೆ ಸೃಷ್ಟಿಕರ್ತನೂ ತಲೆಬಾಗಿಸದೆ ಇರನು. ಸಮಾಜದಲ್ಲಿ ಹೊಲೆಯರಿದ್ದಾರೆಯೆ ? ಯಾರು ಹೊಲೆಯರು ?

ತ್ತ ಕತ್ತೆಯ ಹೊತ್ತ । ರೆತ್ತಣದ ಹೊಲೆಯನು ।
ಉತ್ತಮನೆಂದು ಹೆರರೊಡವೆ । ಹೊತ್ತರವ
ನಿತ್ಯವೂ ಹೊಲೆಯ ಸರ್ವಜ್ಞ ॥

ಉತ್ತಮರ ಸೋಗು ಹಾಕಿ, ವಂಚಿಸುವವನೇ ಹೊಲೆಯನೆಂದು ಸರ್ವಜ್ಞನ ಮತ. ಈ ರೀತಿ ಸಮಾಜದ ವಿಡಂಬನೆಯನ್ನು ಮಾಡಿದ ಸರ್ವಜ್ಞ ಕನ್ನಡದಲ್ಲಿ ವಿಡಂಬನ ಸಾಹಿತ್ಯ ಬೆಳೆಯಲು ಕಾರಣವಾಗಿದ್ದಾನೆ. ಅದೇ ಅವನು ಕನ್ನಡಕ್ಕೆ ನೀಡಿದ ಕೊಡುಗೆ.

ಸರ್ವಜ್ಞನನ್ನು ಜಾನಪದ ಕವಿಗಳ ಮುಖಂಡನೆಂದು ಹೇಳಬಹುದು. ಜಾನಪದ ಸಾಹಿತ್ಯವು ಕನ್ನಡದಲ್ಲಿ ವಿಪುಲವಾಗಿದೆ. ಗರತಿಯರು ಕುಟ್ಟುವಾಗ, ಬೀಸುವಾಗು ಹರೆಯ ಬಡೆಯುವಾಗ, ಹಬ್ಬ ಹುಣ್ಣಿಮೆಯ ದಿನಗಳಲ್ಲಿ, ಮದುವೆಯ ಸಂಭ್ರಮಗಳಲ್ಲಿ ಅನೇಕ ಹಾಡುಗಳನ್ನು ಕಟ್ಟಿ ಹಾಡುತ್ತ ಬಂದಿದ್ದಾರೆ. ಅವರಂತೆ ಗಂಡಸರೂ ಹಂತಿ ತಿರುಗುವಾಗ, ಬಂಡೀ ಹೊಡೆಯುವಾಗ, ನಿತ್ಯದ ಕಾರ್ಯದಲ್ಲಿ ತೊಡಗಿದಾಗ,

ವಿವಿಧ ಸಂಭ್ರಮಗಳಲ್ಲಿ ಅನೇಕ ಹಾಡುಗಳನ್ನೂ ಲಾವಣಿಗಳನ್ನೂ ಹಾಡಿದ್ದಾರೆ. ಜಾನಪದ ಕವಿಗಳು ಸ್ವಯಂ ಸ್ಫೂರ್ತಿಯಿಂದ ತಮ್ಮ ನಿತ್ಯಜೀವನದ ಆಗುಹೋಗುಗಳನ್ನೇ ಕುರಿತು ಪದ್ಯ ರಚಿಸಿರುವದರಿಂದ ಅವರ ಹಾಡುಗಳಲ್ಲಿ ಸರಸಹಾಸ್ಯವು ಸ್ವಾಭಾವಿಕವಾಗಿ ಸೂರೆಗೊಂಡಿವೆ. ಮಹಾಕವಿಗಳಿಗಿಂತ ಅವರು ಯಾವ ವಿಷಯದಲ್ಲಿಯೂ ಹಿಂದೆ ಬಿದ್ದಿಲ್ಲ. ಒಬ್ಬ ಹೆಣ್ಣುಮಗಳು ತನ್ನ ಗಂಡನ ಸೌಂದರ್ಯ ಕುರಿತು,

ಕಾಜೀನಕಂಬಕ । ಮೋಜೀಲೆ ನಿಂತಾರ ।
ಒಂದೊಂದು ಕೇಳಿ ನಗತಾರ । ರಾಯರ್‍ನ
ಎಂಥ ಸಿರಿಗಂಗಿ ಹಡದಾಳ ॥

ಎಂದು ಹಾಡಿ ನಲಿಯುತ್ತಾಳೆ. ಒಮ್ಮೊಮ್ಮೆ ಅವಳಿಗೆ ತನ್ನ ಗಂಡನ ಸ್ವಭಾವದಲ್ಲಿ ಸಂಶಯ ಬಂದು,

ಎಲ್ಲಿ ಹೋಗಿದ್ದೀ ರಾಯ । ಸೆಲ್ಲೆ ಯಾಕ ಮಾಸೇದ ।
ಅಲ್ಲೊಬ್ಬರ ಕಂಡು ಸಲಗೀಯ । ನೀ ಮಾಡಿ
ಇಲ್ಲೆಂಬುದೇನ ನನ್ಮುಂದೆ ।

ಎಂದು ಕೇಳಿದಾಗ ಸರಸ ಚೆಲ್ಲವರಿಯುತ್ತದೆ. ಇಂತಹ ರಸಿಕರ ಹಾಡುಗಳಲ್ಲಿ ಹಾಸ್ಯ ಬೇಕಾದಷ್ಟು ಸಿಗುತ್ತದೆ.

ಜಾನಪದ ಕವಿಗಳು ಪಂಡಿತರಲ್ಲದಿದ್ದ ತಮ್ಮದೇ ತಮ್ಮದಾದ ಶೈಲಿಯಲ್ಲಿ ಚಮತ್ಕೃತಿಯನ್ನು ತಂದು ಹಾಸ್ಯದ ಹೊಳೆ ತುಂಬಿಬರುವಂತೆ ಮಾಡುತ್ತಾರೆ. ಇಬ್ಬರು ಸಖಿಯರು ಕೂಡಿಕೊಂಡು ಸಂಪಾದ ಬೆಳೆಸುವ ರೀತಿ ಹೀಗೆ:

ಒಬ್ಬಳು: ಒಬ್ಬನನು ಕಟ್ಟಿದ್ದೆ । ಒಬ್ಬನನು ಬಿಟ್ಟಿದ್ದೆ
ಒಬ್ಬನನು ಕರಕೊಂಡು ಒಳಗ್ಹೋದೆ ॥

ಮತ್ತೊಬ್ಬಳು: ಯಾರನ್ನು ಕಟ್ಟಿದ್ದೆ । ಯಾರನ್ನು ಬಿಟ್ಟಿದ್ದೆ ।
ಯಾರನ್ನು ಕರಕೊಂಡು ಒಳಗ್ಹೋದೆ ?

ಅದಕ್ಕೆ ಉತ್ತರ: ಆಕಳನು ಕಟ್ಟಿದ್ದೆ । ಕರುವನ್ನು ಬಿಟ್ಟಿದ್ದೆ ।
ಹಾಲನ್ನು ಕರಕೊಂಡು ಒಳಗ್ಹೋದೆ.

ಈ ಪ್ರಶ್ನೋತ್ತರ ಮಾಲಿಕೆ ಹಾಗೇ ಮುಂದುವರಿಯುತ್ತದೆ. ಗಂಭೀರವಾಗಿದ್ದುದನ್ನು ಒಮ್ಮೆಲೇ ಶಿಥಿಲತೆಗೆ ಎಳೆಯುವದರಿಂದ ನಗೆ ಆವಿರ್ಭವಿಸುತ್ತದೆ. ಈ ರೀತಿಯಲ್ಲಿ ಹಾಸ್ಯವು ಸರಸವಾಗಿ ಸಾಕಷ್ಟು ಬರುವದನ್ನು ಕಾಣಬಹುದು. ಜಾನಪದ ಸಾಹಿತ್ಯದ ಕಥಾವಸ್ತು ಜೀವನಕ್ಕೆ ಅತಿ ನಿಕಟವರ್ತಿಯಾಗಿರುವದರಿಂದಲೇ ಮಹಾಕವಿಗಳಲ್ಲಿಲ್ಲದ ಹಾಸ್ಯದ ಹೊಳಪು ಜಾನಪದದಲ್ಲಿ ಬೆಳಗುತ್ತದೆ.

ಇಂಗ್ಲೀಷ ಸಾಹಿತ್ಯದ ಪ್ರಭಾವದಿಂದ ಆಧುನಿಕ ಕನ್ನಡ ಸಾಹಿತ್ಯವು ವಿಕಾಸ ವಿಲಾಸಗಳೆರಡನ್ನೂ ಪಡೆದು ಹೆಚ್ಚು ಹುಲುಸಾಗಿ ವೈವಿಧ್ಯ ಪೂರ್ಣವಾಗಿ ಬೆಳೆಯುತ್ತ ನಡೆದಿರುವದು ಸಂತೋಷಕರ ವಿಷಯ. ಆಧುನಿಕ ಬರೆಹಗಾರರು ಹಾಸ್ಯದ ಕಾರ್ಯ ಕಾರಣಗಳನ್ನು ತಿಳಿದು, ಜೀವನವಲ್ಲಿ ಹಾಸ್ಯಕ್ಕಿರುವ ಮಹತಿಯನ್ನರಿತು, ಅದನ್ನು ಬಹುಮುಖವಾಗಿ ಬಳಸತೊಡಗಿದ್ದಾರೆ. ಹಾಸ್ಯನಿರ್ಮಿತಿಗಾಗಿಯೇ ಕೃತಿನಿರ್ಮಾಣ ಮಾಡುವ ಹಂಬಲ ಕೆಲವರಲ್ಲಿ ಒಡಮೂಡಿದೆ. ಇದು ಹಾಸ್ಯದ ದೃಷ್ಟಿಯಿಂದ ಅತಿ ಮಹತ್ವದ ಮಾತೇ ಸರಿ. ಇಂದಿನ ಭಾವಗೀತೆಗಳಲ್ಲಿ ಶೃಂಗಾರಾನುಕರಣದಿಂದ ಜನಿಸುವ ಹಾಸ್ಯ ಬೆಳೆವ ಬಂದುವರ ಜೊತೆಗೆ, ಹಾಸ್ಯವೇ ಜೀವಜೀವಾಳವಾಗಿರುವ ಅಣಕವಾಡುಗಳು ಹುಟ್ಟತೊಡಗಿವೆ. ನಾ. ಕಸ್ತೂರಿ, ರಾಜರತ್ನಂ, ಬಿಸ್ರಾ ಮುಂತಾದ ಕವಿಗಳು ಅಣಕವಾಡುಗಳನ್ನು ಹಾಡಿ ಜನತೆಯನ್ನು ನಗೆಗಡಲಲ್ಲಿ ತೇಲಿಸುವ ಕಾರ್ಯ ಮಾಡುತ್ತಿದ್ದಾರೆ. ಶ್ರೀರಂಗ, ಕಾರಂತ, ಬೀಚಿ, ನಾಡಗೇರರ ಲಘುಹರಟೆಗಳು ಸರಸ ಸಾಹಿತ್ಯವೆನಿಸಿಕೊಂಡಿವೆ. ಹರಟೆಗಳಲ್ಲಿ ಸರಸೋಕ್ತಿಗಳು ಮಾಲೆಮಾಲೆಯಾಗಿ ಬಂದರೆ ನಗೆಹನಿಗಳಲ್ಲಿ ಚತುರೋಕ್ತಿಯು ಪಟಾಕಿಯಂತೆ ಹಾರಿಬರುತ್ತವೆ. ಹಾಸ್ಯ ನಿರ್ಮಾಣಕಲೆಯಲ್ಲಿ ಮುಖ್ಯವಾಗಿ ಇರಬೇಕಾದುದು ವಸ್ತುವನ್ನು ನೋಡುವ ವಿಶಿಷ್ಟ ದೃಷ್ಟಿ ಮತ್ತು ವಿಷಯ ನಿರೂಪಣೆಯ ರೀತಿ. ಆಧುನಿಕ ಲೇಖಕರು ಹೇಳಬೇಕಾದ ವಿಷಯುವನ್ನು ಹಲವು ದೃಷ್ಟಿಯಿಂದ ನೋಡಿ, ವ್ಯಂಗ್ಯವಾಗಿ ಅದನ್ನು ಸೂಚಿಸಿ ಬರೆದು ಹೇಳುವದರ ಪರಿಣಾಮವಾಗಿ ಹಾಸ್ಯ ಹುಲುಸಾಗುವುದು ಸ್ವಾಭಾವಿಕ.

ಆಧುನಿಕ ಕನ್ನಡ ನಾಟಕಗಳಲ್ಲಿ ಹಾಸ್ಯಕ್ಕೆ ಮಹತ್ವದ ಸ್ಥಾನ ಬಂದಿದೆ. ನಾಟಕಗಳೆಂದರೆ ನಗೆಯಾಟಗಳು ಎನ್ನುವಷ್ಟರ ಮಟ್ಟಿಗೆ ಹಾಸ್ಯ ಅವುಗಳಲ್ಲಿ ಹರಿಯ ತೊಡಗಿದೆ. ಇಂದಿನ ನಾಟಕಕಾರರು ಅನ್ಯರಸಗಳಿಗಿಂತಲೂ ಹಾಸ್ಯರಸಕೆ ಹೆಚ್ಚು ಪ್ರಾಧಾನ್ಯ ಕೊಡುತ್ತಿದ್ದಾರೆ. ಅವರಲ್ಲಿ ಕೈಲಾಸಂ, ಶ್ರೀರಂಗ, ಕಾರಂತ, ಮಹಾ ಮನೆ ಎನ್ಕೆ, ಬೀಚಿ, ನಗೆಮಾರಿ ಮುಖ್ಯರೆನ್ನಬಹುದು. ಕಾರಂತರು ಗರ್ಭಗುಡಿ, ನಾರದ ಗರ್ವಭಂಗ ಮೊದಲಾದ ನಾಟಕಗಳನ್ನು ಬರೆದು, ಸಮಾಜದ ಅಂಕುಡೊಂಕು ಗಳನ್ನು ತಿದ್ದಲು ಯತ್ನಿಸಿ ನಕ್ಕಿದ್ದಾರೆ. ಅವರ ನಗೆಯಲ್ಲಿ ಹಿತವಾದ ಇರಿತವಿದೆ. ನಗೆಯ ನಂಜು ಒಮ್ಮೊಮ್ಮೆ ನಗಿಸಿಕೊಂಡವರನ್ನು ನುಂಗಿ ನೀರುಕುಡಿದು ಬಿಡುವಷ್ಟು ಘೋರವಾಗಿರುತ್ತದೆ. ಬೀಚಿಯವರಲ್ಲಿ ವಿನೋದವಷ್ಟೇ ಕುಚೇಷ್ಟೆ ಕಾರ್ಯ ಮಾಡು ತ್ತದೆ. ಎನ್ಕೆಯವರ ಏಕಾಂಕಗಳಲ್ಲಿ ಮುದುಗಾಟ ಹೆಚ್ಚು. ನಗೆಮಾರಿಯ ಏಕದೃಶ್ಯ ಗಳಲ್ಲಿ ವಿನೋದನ ಮರೆಯಲ್ಲಿ ಮರುಕ ಹುದುಗಿರುವದು ಗೋಚರಿಸುತ್ತದೆ. ಇನ್ನೂ ಅನೇಕ ಉದಯೋನ್ಮುಖ ನಾಟಕಕಾರರು ಹಾಸ್ಯದ ಹೊಳೆಯಲ್ಲಿ ಈಜಾಡುವವನ್ನು ನಾವು ಕಾಣುತ್ತೇವೆ.

'ಕನ್ನಡಕೊಬ್ಬನೇ ಕೈಲಾಸಂ' ಎನಿಸಿಕೊಂಡುದು ತಾವು ಬರೆದ ನಗೆನಾಟಕಗಳಿಂದ ಕೈಲಾಸಂ ತಮ್ಮ ಸುತ್ತಮುತ್ತಲಿನ ಜೀವನವನ್ನೆತ್ತಿಕೊಂಡು ನಾಟಕ ರಚಿಸಿ ನಗುತ್ತಾರೆ, ನಗಿಸುತ್ತಾರೆ. ಆದರೆ ಆ ನಗೆಯ ತಳದಲ್ಲಿ ನೋವು ಮರೆಮಾಡಿಕೊಂಡುದು ನಕ್ಕು ಮುಗಿಸಿದಾಗ ತಿಳಿದುಬರುತ್ತದೆ. ಸಮಾಜದಲ್ಲಿ ತಾಂಡವವಾಡುತ್ತಿರುವ ಅಂಕುಡೊಂಕುಗಳು ಅವರ ದೃಷ್ಟಿಯಲ್ಲಿ ಬೃಹದ್ರೂಪ ತಾಳುತ್ತವೆ. ಸಣ್ಣದೆಂದು ಕೈಬಿಟ್ಟರೆ, ಅದೇ ಮುಂದೆ ನಮ್ಮ ಕತ್ತನ್ನು ಹಿಚಕುವ ಹುಲಿಯಾಗುತ್ತದೆಂದು ಕೈಲಾಸಂ ಹೇಳುತ್ತಾರೆ. ತಪ್ಪು ಎಲ್ಲಿದ್ದರೂ ಅದು ಕಿತ್ತುಹೋಗದೆ ಸಮಾಜವು ಬಲಿಯಿದೆಂದು ಅವರು ನಂಬಿದ್ದಾರೆ. ಮರೆಮೋಸಗಳನ್ನು ಹೋಗಲಾಡಿಸುವದಕ್ಕೆ ವಿಡಂಬನೆಯ ಅಸ್ತ್ರವನ್ನು ಪಯೋಗಿಸಿ ಕೈಲಾಸಂ ಯಶಸ್ವಿಯಾಗಿದ್ದಾರೆಂದೇ ಹೇಳಬೇಕು. ಅವರಲ್ಲಿ ರೋಷವಿದೆ; ಮರುಕವಿದೆ. ಮರುಗುತ್ತಲೇ ಅವರು ರೊಚ್ಚಿಗೆದ್ದುದನ್ನು ಅವರ ಅನೇಕ ನಾಟಕಗಳಲ್ಲಿ ಕಾಣಬಹುದು. ದಯೆ ಬೆರೆತ ನಗೆಯನ್ನು ನೀಡಿದ ಶ್ರೇಯಸ್ಸು ಕೈಲಾಸಂ ಅವರಿಗೇ ಸಲ್ಲಬೇಕು. ಅವರ ನಾಟಕಗಳಲ್ಲಿ ಹಾಸ್ಯ ಸನ್ನಿವೇಶಗಳೂ ಹಾಸ್ಯ ಪಾತ್ರಗಳೂ ಒಂದಕ್ಕೊಂದು ಹೊಂದಿಬರುವದರಿಂದ ಕೈಲಾಸಂ ಅವರ ನಾಟಕಗಳು ವಿಶಿಷ್ಟಪೂರ್ಣವಾಗಿ ನಿಲ್ಲುತ್ತವೆ.

ಕೈಲಾಸಂ ಅವರಷ್ಟೆ ಪ್ರಸಿದ್ಧಿ ಪಡೆದ ನಾಟಕಕಾರನೆಂದರೆ ಶ್ರೀರಂಗರು. ಸಮಾಜದಲ್ಲಿರುವ ಕುಂದುಕೊರತೆಗಳನ್ನು ಕಂಡರೆ ಶ್ರೀರಂಗರ ವಿಡಂಬನೆ ಗರಿಗೆದರಿ ಹಾರುತ್ತದೆ, ಅವರ ನಾಟಕಗಳಲ್ಲಿ ತಿಳಿಹಾಸ್ಯಕ್ಕಿಂತಲೂ ವ್ಯಂಗ್ಯೋಕ್ತಿಗೆ ಹೆಚ್ಚು ಪ್ರಾಧಾನ್ಯವಿದೆ. ಶ್ರೀರಂಗರು ವಿಡಂಬನೆಯ ಬತ್ತಳಿಕೆಯಲ್ಲಿ ಕೈಯಿಡುವದೇ ತಡ; ಗದರಿಸುತ್ತ ಹೊರಬರುತ್ತವೆ ವಿಷಪೂರಿತ ಬಾಣಗಳು. ಅವರ ಮಾತಿನಷ್ಟೇ ಮೊನಚು ಹಾಸ್ಯದ ಚುರಿ. ಅವರ ನಾಟಕಗಳು ಕೊಂಕುಮಾತಿನಲ್ಲಿ ಪ್ರಾರಂಭವಾಗಿ ಕೊಂಕಿನಲ್ಲಿಯೇ ಮುಗಿಯುತ್ತವೆ. 'ಹರಿಜನ್ವಾರ', 'ಪ್ರಪಂಚಪಾಣಿಪತ್ತು', 'ಅಶ್ವಮೇಧ' ಮೊದಲಾದ ನಾಟಕಗಳನ್ನು ನೋಡಿದವರಿಗೆ ಈ ಮಾತಿನ ಅರ್ಥವು ಸ್ಪಷ್ಟವಾಗುತ್ತದೆ. ಈ ನಾಟಕಕಾರರು ಯಾವಾಗಲೂ ಬಿಚ್ಚುಮಾತಿನಲ್ಲಿ ಚುಚ್ಚಿ ಹೇಳುತ್ತ ನಗಿಸುತ್ತಾರೆ. ಅವರ ಶಬ್ದಾರ್ಥಚಮತ್ಕೃತಿ ಎಷ್ಟೋ ಸಲ ನಗೆಗೆ ಕಾರಣವಾಗುತ್ತದೆ.

ನಾಟಕ ಸಾಹಿತ್ಯದಲ್ಲಿರುವ ಹಾಸ್ಯವನ್ನು ಕುರಿತು ಬರೆಯುವವರು ಸ್ವಾಮಿ ಮಹಾಮನೆಯವರನ್ನು ಮರೆತರೆ ಬರೆಹವೇ ಅಪೂರ್ಣ ಎನ್ನಬಹುದು. ಮಹಾಮನೆ ಪ್ರಕಟನೆಗಳು ಉತ್ತಮ ನಾಟಕಗಳು ; ವಿಡಂಬನಾತ್ಮಕ ದೃಶ್ಯಗಳು ಆ ನಾಟಕಗಳ ತುಂಬ ತುಂಬಿಕೊಂಡುದನ್ನು ಕಾಣುತ್ತೇವೆ. ವಿಡಂಬಕನ ಕಾರ್ಯವನ್ನು ಅವರು ತುಂಬ ಜಾಗರೂಕತೆಯಿಂದ ನಿರ್ವಹಿಸಿದ್ದಾರೆ. ಅವರು ಬರೆದ "ತಾಲಿಕಟ್ಟೋದೀನ್ ತೀರ್ಥಯಾತ್ರೆ", "ಸತ್ತವನಗ್ ಸೂಲ್ಪಂತು", 'ತೂಕ್ದ್ ಬ್ಬಿಟ್ಟಗ್ರಿಕ್ಕಾಟ' ಮೊದಲಾದ ನಾಟಕಗಳು ಉತ್ತಮ ಹಾಸ್ಯವನ್ನೊಳಗೊಂಡಿವೆ. ಅವರ ನಾಟಕಗಳೆಂದರೆ ಹಾಸ್ಯ ದೃಶ್ಯಗಳು; ಅವರ ಪಾತ್ರರಚನೆಯೇ ಹಾಸ್ಯಕ್ಕೆ ಮೂಲ. ಮಹಾಮನೆಯವರ

ತೀಕ್ಷ್ಣ ದೃಷ್ಟಿ. ವಿಶಾಲ ಹೃದಯ ಹಾಸ್ಯಸೃಷ್ಟಿಗೆ ಒಪ್ಪಹಾಕುವದನ್ನು ಕಾಣಬಹುದು. ಒಟ್ಟಿನಲ್ಲಿ ಮಹಾಮನೆಯವರ ಹಾಸ್ಯವು ರಸಿಕರಿಗೆ ರಸದೂಟವೆಂದೇ ಹೇಳಬೇಕು.

ಹೊಸಗನ್ನಡ ಸಾಹಿತ್ಯದ ನಾನಾ ಪ್ರಕಾರಗಳಲ್ಲಿ ಹಾಸ್ಯವು ಮೈದುಂಬಿ ಹರಿದು ಬರುವದನ್ನು ಕಾಣುತ್ತೇವೆ. ಇಷ್ಟರಿಂದಲೇ ನಾವು ತೃಪ್ತಿಪಡಬೇಕಾಗಿಲ್ಲ, ನಮ್ಮ ಜೀವನವನ್ನು ಬೆಳಗಿಸುವ ಹಾಸ್ಯ ಇನ್ನೂ ಸಾಕಷ್ಟು ಬೆಳೆಯಬೇಕು. ಈಗಿರುವ ಕನ್ನಡ ಸಾಹಿತ್ಯದಲ್ಲಿ ಹಾಸ್ಯರಸ ಗಂಗೆ ಚಂಪುಕಾವ್ಯಗಳಲ್ಲಿ ಒಡಮೂಡಿ ಷಟ್ಪದಿ ಸಾಂಗತ್ಯ ಕೃತಿಗಳಲ್ಲಿ ಪುಟ ನೆಗೆದು ಕೆಳಗೆ ಜಿಗಿದು, ಜಾನಪದ ಸಾಹಿತ್ಯದಲ್ಲಿ ಭೋರ್ಗರೆದು ಹರಿಯುತ್ತ ಆಧುನಿಕ ಕಾಲದಲ್ಲಿ ಶಾಖೋಪಶಾಖೆಯಾಗಿ ಹರಿಯುತ್ತ, ಜನ ಮನವನ್ನು ತಣಿಸುತ್ತ ಹರಿದು ಬಂದುದನ್ನು ನಾವು ಅರಿಯುತ್ತೇವೆ. ಹಾಸ್ಯದ ಹೊಳೆ ಕಾಲಾನುಕ್ರಮದಲ್ಲಿ ಒಮ್ಮೊಮ್ಮೆ ಗುಪ್ತಗಾಮಿನಿಯಾಗಿ ಹರಿದಿರಬಹುದು. ಆದರೆ ಕನ್ನಡದಲ್ಲಿ ಹಾಸ್ಯವಿಲ್ಲೆಂದು ಹೇಳಲಿಕ್ಕಾದೀತೆ? ಕನ್ನಡ ಸಾಹಿತ್ಯವು ಹಾಸ್ಯದೃಷ್ಟಿಯಿಂದ ಎಂದೆಂದೂ ಬರಡಲ್ಲ, ಮುಂದಂತೂ ಬಡವಾಗಲಾರದು. ಅದು ಜೀವಂತವಾಗಿರುವವರೆಗೆ ನಮ್ಮ ಜೀವನವು ಜೀವಂತವೇ ಸರಿ.

———:———

# ಜನಪದ ಸಾಹಿತ್ಯ



**ಶ್ರೀ ಗ. ಸ. ಹಾಲಪ್ಪ, ಎಂ.ಎ.**

**ಜನಪದ** ಸಾಹಿತ್ಯವು ಜನಾಂಗದೊಡನೆ ಅವ್ಯಾಹತವಾಗಿ ಬಳೆದು ಬಂದಿದೆ. ಸಾವಿರಾರು ವರ್ಷಗಳಿಂದಲೂ ಜನಪದ ಜೀವನದಲ್ಲಿ ಬತ್ತಲಾರದ ಹಾಲಿನ ತೊರೆಯಂತೆ ಹರಿಯುತ್ತದೆ. ಕಳೆದ ಅರ್ಧ ಶತಮಾನದಲ್ಲಿ ಕನ್ನಡ ಜನಪದ ಸಾಹಿತ್ಯವು ಸುಶಿಕ್ಷಿತರ ಮನವನ್ನು ಸೆಳೆದಿದೆ. ಕನ್ನಡ ಜನಪದ ಸಾಹಿತ್ಯದ ಸೊಬಗನ್ನು ಅನೇಕ ಸಾಹಿತಿಗಳು ಬಣ್ಣಿಸುತ್ತ ಜನಪದ ಸಾಹಿತ್ಯ ಸಮುದ್ರದಲ್ಲಿದ್ದ ಅನೇಕ ರತ್ನಗಳನ್ನು ಹೊರಗಡೆ ತಂದಿದ್ದಾರೆ. ಜನಪದ ಸಾಹಿತ್ಯವು ಜನಪದ ಸಂಸ್ಕೃತಿಯ ಕೈಗನ್ನಡಿಯಾಗಿದೆ.

**ಜನಪದ ಸಾಹಿತ್ಯದ ಅರ್ಥ** :—ಸರ್ವಜ್ಞ ಕವಿಯು ಸಾಹಿತ್ಯವನ್ನು ಬಲ್ಲವರು ಕಡಿಮೆ ಎಂದು ಹೇಳಿದ್ದಾನೆ. ಎಲ್ಲರೂ ಮಹಾಕಾವ್ಯಗಳನ್ನು ಓದಿ ಆನಂದ ಪಡುವ ಪಾಂಡಿತ್ಯ ಪಡೆದಿಲ್ಲ. ಬಹು ಸಂಖ್ಯಾತ ಜನರಿಗೆ ದೊಡ್ಡ ಕಾವ್ಯದ ಭಾಷೆಯು ತಿಳಿಯಲಾರದು. ಆದರೆ ಕಠಿಣವಲ್ಲದ ವ್ಯಾಕರಣ ಛಂದಸ್ಸುಗಳ ಕಟ್ಟುಗಳಿಗೊಳಗಾಗದ ಮಾತುಗಳ ಮೂಲಕ ಜನರ ಭಾವನೆಗಳನ್ನು ವ್ಯಕ್ತಪಡಿಸುವ ಹಾಡುಗಳು ಎಲ್ಲರಿಗೂ ಅರ್ಥವಾಗುತ್ತವೆ. ಜನರ ಬಾಯಿಂದ ಬಾಯಿಗೆ ಪ್ರಸಾರವಾಗಿ ಅಸಂಖ್ಯಾತ ಜನರ ಜೀವಂತ ಆಸ್ತಿಯಾಗಿರುವ ಗ್ರಂಥಸ್ಥವಲ್ಲದ ಎಲ್ಲ ಬಗೆಯ ಈ ಹಾಡುಗಳೇ ಜನಪದ ಸಾಹಿತ್ಯವೆನಿಸಿಕೊಂಡಿವೆ.

ಜನಪದ ಸಾಹಿತ್ಯ ಪ್ರಪಂಚದ ಎಲ್ಲ ಜನಾಂಗಗಳಲ್ಲಿ ಇವೆ. ಸಾಮಾನ್ಯ ಜನರು ಅರ್ಥಮಾಡಿಕೊಳ್ಳುವಂತಹ ಸರಳ ಭಾಷೆಯಲ್ಲಿ ಹೇಳುವ ವಿಷಯವೇ ಜನಪದ ಸಾಹಿತ್ಯ. ಜನಪದ ಸಾಹಿತ್ಯ ಎಂಬ ಮಾತು ಪಾಶ್ಚಿಮಾತ್ಯರಿಂದ ನಮ್ಮಲ್ಲಿ ಬೆಳಕಿಗೆ

ಬಂದಿದೆ. ೧೮೪೬ ರಲ್ಲಿ ಥಾಮಸ್ ಎಂಬಾತನು ಜನಪದ ಸಾಹಿತ್ಯ ಎಂಬ ಶಬ್ದವನ್ನು ಸೃಷ್ಟಿಸಿದನು. ಜನಪದ ಸಾಹಿತ್ಯವನ್ನು ಯಾರೂ ಮೊದಲು ಬರೆದಿಡುತ್ತಿರಲಿಲ್ಲ. ಜನಪದ ಸಾಹಿತ್ಯ ಸಂಕಲನ ಕಾರ್ಯ ೧೮ನೇ ಶತಮಾನದಿಂದ ಪಾಶ್ಚಾತ್ಯರಲ್ಲಿ ಆರಂಭ ವಾಯಿತು. ಜನಪದ ಸಾಹಿತ್ಯಕ್ಕೆ ಇದೀಗ ಎಲ್ಲ ಕಡೆ ಪುರಸ್ಕಾರ ಸಿಕ್ಕಿದೆ. ಬಾನುಲಿ ಯಲ್ಲಿ, ಪತ್ರಿಕೆಗಳಲ್ಲಿ, ಸಭೆಗಳಲ್ಲಿ ಜನಪದ ಗೀತಗಳಿಗೆ ಪ್ರಾಮುಖ್ಯತೆ ಕೊಡಲಾಗಿದೆ. ಕೆಲ ಪಾಶ್ಚಾತ್ಯ ವಿಶ್ವವಿದ್ಯಾಲಯಗಳಲ್ಲಿ ಜನಪದ ಸಾಹಿತ್ಯದ ಅಭ್ಯಾಸಕ್ಕೂ ಅವಕಾಶ ಕಲ್ಪಿಸಲಾಗಿದೆ.

**ಜನಪದ ಸಾಹಿತ್ಯದ ಲಕ್ಷಣಗಳು**:—ಜನಪದ ಸಾಹಿತ್ಯವು ಭಾರತದಲ್ಲಿ ವಿಪುಲವಾಗಿದೆ. ಅದು ನಮ್ಮ ಸಂಸ್ಕೃತಿಯ ಭಾಗವಾಗಿ ಅರಳಿದೆ. ಸುಪ್ರಸಿದ್ಧ ಕವಿ ರವಿಂದ್ರನಾಥ ಟ್ಯಾಗೂರರು ಜನತೆಯ ಹೃದಯ ಮತ್ತು ಮನವನ್ನು ಅರಿಯಲು ಜನಪದ ಸಾಹಿತ್ಯವು ಸಹಾಯಕಾರಿಯಾಗುತ್ತವೆ ಎಂದು ಹೇಳಿದ್ದಾರೆ. ಭಾರತದ ವಿವಿಧ ಪ್ರಾಂತಗಳ ಎಲ್ಲ ಭಾಷೆಗಳಲ್ಲಿ ಜನಪದ ಸಾಹಿತ್ಯ ಅನೇಕ ರೂಪಗಳಲ್ಲಿ ಬೆಳೆದಿದೆ. ಭಾರತದ ವಿವಿಧ ಭಾಷೆಗಳ ಜನಪದ ಗೀತಗಳಲ್ಲಿರುವ ಭಾವನೆಗಳೆಲ್ಲ ಒಂದೇ ಆಗಿದೆ. ಭಾರತೀಯರ ಹೃದಯವನ್ನಿಲ್ಲಿ ಕಾಣಬಹುದು., ಜನಪದ ಸಾಹಿತ್ಯವು ಬಾಳಿನ ರನ್ನ ಗನ್ನಡಿ. ಹಳ್ಳಿಗರ ಜೀವನದ ಎಲ್ಲ ಪ್ರಸಂಗಗಳೂ ಜನಪದ ಸಾಹಿತ್ಯದ ವಸ್ತು. ಜನ ಪದ ಸಾಹಿತ್ಯ ವಿಷಯ ಬದುಕಿನಷ್ಟೇ ವಿಸ್ತಾರವಾಗಿದೆ. ಜೀವನದ ಏರಿಳಿತಗಳನ್ನು ರಸವತ್ತಾಗಿ ಸುಲಭ ಶೈಲಿಯಲ್ಲಿ ಚಿತ್ರಿಸುವುದು ಜನಪದ ಸಾಹಿತ್ಯದ ಕೆಲಸ. ಹಾಸ್ಯ, ಪ್ರಣಯ, ಬಾಳಿನ ಬೇಸರಿಕೆ, ಹಿಗ್ಗು ಹೀಗೆ ನಿತ್ಯ ಜೀವನದಲ್ಲಿ ಕಾಣುವ ಸಂಗತಿ ಗಳನ್ನು ಜನಪದ ಹಾಡುಗಳಲ್ಲಿ ನೋಡಬಹುದು. ಹಾಡುಗಳು ದೊಡ್ಡವಿರಬಹುದು, ಸಣ್ಣವಿರಬಹುದು, ಕತೆಯ ರೂಪದಲ್ಲಿರಬಹುದು ಅಥವಾ ಬೇರೆ ಯಾವ ರೂಪದಲ್ಲಿ ಯಾದರೂ ಇರಬಹುದು. ಜನಪದ ಸಾಹಿತ್ಯವು ಬಗೆ ಬಗೆಯ ರೂಪದಲ್ಲಿ ಸೃಷ್ಟಿಸಲ್ಪಡ ಬಹುದು. ಕನ್ನಡ ಜನಪದ ಸಾಹಿತ್ಯದಲ್ಲಿ ಅದರ ಹಲವಾರು ರೂಪಾಂತರಗಳನ್ನು ನೋಡಬಹುದು.

**ಜನಪದ ಸಾಹಿತ್ಯದಿಂದ ಪ್ರಯೋಜನ**:—ಜನಪದ ಸಾಹಿತ್ಯವು ಜನ ಸಾಮಾನ್ಯರಿಗೆ ಮನೋರಂಜನೆಯ ಸಾಧನವಾಗಿದೆ. ದುಡಿದು ಬೇಸತ್ತಾಗ ಜನಪದ ಹಾಡುಗಳನ್ನು ಹಾಡಿ ಅಥವಾ ಹಾಡುವವನ್ನು ಕೇಳಿ ಸಂತೋಷಪಡಬಹುದು. ಜನ ರಲ್ಲಿ ಸಾಮಾಜಿಕ ಸಂಪರ್ಕವನ್ನುಂಟು ಮಾಡಲು ಜನಪದ ಸಾಹಿತ್ಯವು ಬಹಳ ನೆರ ವಾಗಬಲ್ಲದು. ಬಯಲಾಟ, ಲಾವಣಿ ಹಾಡುಗಳು, ಗೀಗೀಪದ ಮೊದಲಾದವುಗಳನ್ನು ಕೇಳಲು ಅಥವಾ ನೋಡಲು ಸಾವಿರಾರು ಜನ ಜಾತಿ ಮತ ಭೇದವಿಲ್ಲದೆ ಒಂದೆಡೆ ಸೇರುತ್ತಾರೆ. ಜನರನ್ನು ಹೀಗೆ ಕೂಡಿಸಿ ಐಕ್ಯಮತ್ಯವನ್ನುಂಟು ಮಾಡಲು ಜನಪದ ಸಾಹಿತ್ಯವು ಸಹಾಯಕವಾಗುತ್ತದೆ. ಜನರಲ್ಲಿರಬಹುದಾದ ದೇಶಭಕ್ತಿ, ದೈವಭಕ್ತಿ,

ಭಾಷಾಪ್ರೇಮ ಮೊದಲಾದ ಭಾವನೆಗಳನ್ನು ಕೆರಳಿಸಿ ಜನರನ್ನು ಸನ್ಮಾರ್ಗಕ್ಕೆ ಹಚ್ಚಲು ಜನಪದ ಸಾಹಿತ್ಯವು ಪ್ರಬಲ ಅಸ್ತ್ರವಾಗಿದೆ. ನಾಡಪದಗಳು ಜನರಿಗೆ ಸ್ಫೂರ್ತಿ ಯನ್ನೀಯಬಲ್ಲವು. ಜನರನ್ನು ಹುರಿದುಂಬಿಸಲು ಜನಪದ ಗೀತಗಳು ಪ್ರೇರಕವಾಗ ಬಲ್ಲವು. ಇತ್ತೀತ್ತಲಾಗಿ ಚುನಾವಣೆ ಮೊದಲಾದ ರಾಜಕೀಯ ಪ್ರಸಂಗಗಳಲ್ಲಿ ಪ್ರಚಾರಕ್ಕಾಗಿ ಜನಪದ ಗೀತೆಗಳನ್ನು ಉಪಯೋಗಿಸಲಾಗುತ್ತದೆ. ಜನರ ಅಂತ ರಂಗವನ್ನು ತಟ್ಟಿ ಪ್ರಭಾವ ಬೀರುವ ಲಾವಣಿಕಾರರು ಪರಿಣಾಮಕಾರಿ ಪ್ರಚಾರ ಸಾಧನವಾಗಿದ್ದಾರೆ. ಜನಪದ ಸಾಹಿತ್ಯದ ಹಿರಿಮೆ ಮತ್ತು ಉಪಯುಕ್ತತೆ ಬಗ್ಗೆ ಹೆಚ್ಚು ಹೇಳುವುದು ಅನಾವಶ್ಯಕ. ಭಾರತದಲ್ಲಿ ವೇದ, ರಾಮಾಯಣ, ಮಹಾಭಾರತ ಕಾಲದಿಂದ ಜನಪದ ಸಾಹಿತ್ಯದ ಝರಿ ಹರಿದು ಬಂದಿದೆ. ಜನಪದ ಜೀವನ ಮತ್ತು ಜನಪದ ಸಾಹಿತ್ಯಗಳ ಸಂಬಂಧ ಬಹಳ ನಿಕಟವಾಗಿದೆ. ಜನಪದ ಸಾಹಿತ್ಯದಲ್ಲಿ ಜನಾಂಗದ ಜೀವಾಳವನ್ನು ಕಾಣಬಹುದು.

ಜನಪದ ಸಾಹಿತ್ಯದಿಂದಾಗುವ ಪ್ರಯೋಜನಗಳನ್ನು ಹೇಳುವಾಗ ಇನ್ನೊಂದು ಮಾತನ್ನು ನೆನಪಿನಲ್ಲಿಡಬೇಕು. ಜನಪದ ಕಥೆಗಳು ಜನಾಂಗದ ಇತಿಹಾಸದ ಆಧಾರ ವಾಗಿವೆ. ಇತರ ಇತಿಹಾಸ ದಾಖಲೆಗಳು ತಪ್ಪಬಹುದು. ಆದರೆ ಜನಪದ ಗೀತೆ ಗಳಲ್ಲಿರುವ ಸತ್ಯಾಂಶಗಳು ನಂಬಲರ್ಹವಾಗಿವೆ. ಇತರ ಜನವಾಣಿಯು ಇತಿಹಾಸ ವನ್ನು ಈ ಮೂಲಕ ಎತ್ತಿ ಹಿಡಿಯುತ್ತದೆ. ಹೀಗೆ ಸಂಶೋಧಕರಿಗೆ ಜನಪದ ಸಾಹಿ ತ್ಯವು ಬೆಳಕನ್ನು ತೋರಬಹುದಾಗಿದೆ.

**ಕನ್ನಡ ಜನಪದ ಸಾಹಿತ್ಯ :**—ಕನ್ನಡ ಜನ ಜನಪದ ಸಾಹಿತ್ಯಪ್ರೇಮಿಗಳು. ಕ್ರಿ.ಶ. ೯ನೆಯ ಶತಮಾನದ ನೃಪತುಂಗ ಕವಿಯು; ಕನ್ನಡಿಗರು ಬುದ್ಧಿವಂತರು, ಕುರಿತೋದದಿದ್ದರೂ ಕಾವ್ಯ ಕಟ್ಟುವ ಶಕ್ತಿ ಪಡೆದಿದ್ದಾರೆ; ಎಂದು ಅಂದಿನ ಕನ್ನಡ ಜನಪದದ ಕಾವ್ಯಪ್ರೇಮವನ್ನು ಕೊಂಡಾಡಿದ್ದಾನೆ. ಪ್ರಾಚೀನ ಕಾಲದಿಂದ ಜನಪದ ಗೀತೆಗಳು ಜನರ ನಾಲಿಗೆಯಲ್ಲಿ ನಿಂತಿವೆ. ಜನಪದ ಸಾಹಿತ್ಯ ಓದುಬಾರದ ಜನರಿಗೆ ಒಂದು ಹಬ್ಬವೇ ಸರಿ. ನಮ್ಮ ನಾಡಿನ ಜನರಿಗೆ ಜನಪದ ಸಾಹಿತ್ಯವು ಒಂದು ಜೀವಂತ ಆಸ್ತಿಯಾಗಿದೆ. ಮಹಾಭಾರತ ರಾಮಾಯಣಗಳನ್ನು ಸರಳ-ಶೈಲಿಯಲ್ಲಿ ಬರೆಯಲಾಗಿದೆ. ಮಲ್ಲಿ ಮಲ್ಲಾಣಿಯ ಹಾಡು, ಕುಮಾರ ರಾಮನಹಾಡು, ಕೋಳೂರ ಕೊಡಗೂಸಿನ ಹಾಡು ಮೊದಲಾದವುಗಳು. ಕನ್ನಡ ಜನಪದ ನೃತ್ಯದಂತೆ ಜನಪದ ಸಾಹಿತ್ಯ ಅಪಾರವಾಗಿದೆ. ಇದರಲ್ಲಿ ಬರುವ ಹಾಡುಗಳನ್ನು ಕೆಳಕಂಡಂತೆ ವಿಭಾಗಿಸಬಹುದು : ಸ್ತುತಿಯ ಹಾಡುಗಳು, ಸುಗ್ಗಿಯ ಹಾಡುಗಳು, ದೇಶಭಕ್ತಿಯ ಗೀತಗಳು, ಮಕ್ಕಳ ಹಾಡು, ಗರತಿಯ ಹಾಡು, ಕೋಲಿನ ಪದಗಳು, ಲಾವಣಿಗಳು ಮತ್ತು ಒಗಟಿನ ಪದಗಳು. ಕನ್ನಡ ಜನಪದ ಸಾಹಿತ್ಯದ ಒಂದು ಮುಖ್ಯ ವೈಶಿಷ್ಟ್ಯವೆಂದರೆ ಹೆಣ್ಣುಮಕ್ಕಳು ಪ್ರಧಾನ ಪಾತ್ರವಹಿಸುವುದು. ಬೀಸುವಾಗ,

ಕಟ್ಟುವಾಗ ನಿತ್ಯದ ಕೆಲಸದಲ್ಲಿ ತೊಡಗಿರುವಾಗ ಮತ್ತು ವಿಶೇಷ ಸಂದರ್ಭ ಗಳಲ್ಲಿ ಅಕ್ಷರ ಬಾರದ ಹೆಣ್ಣುಮಕ್ಕಳು ಇಂಪಾಗಿ ಹಾಡುತ್ತಾರೆ. ಜನಪದ ಸಾಹಿತ್ಯಕ್ಕೆ ಕನ್ನಡ ನಾಡಿನಲ್ಲಿ ವಿಶೇಷ ಮನ್ನಣೆಯಿದೆ. ಗ್ರಂಥಸ್ಥವಲ್ಲದ ಅಪರವಾದ ಜನಪದ ಗೀತಗಳನ್ನು ಸಂಗ್ರಹಿಸಿ ಅನೇಕ ಸಾಹಿತಿಗಳು ಸಂಕಲನಗಳನ್ನು ಪ್ರಕಟಿಸಿ ನಾಡವರಿಗೆ ಉಪಕಾರ ಮಾಡಿರುತ್ತಾರೆ. ದಿವಂಗತ ಮಧುರ ಚೆನ್ನ, ಸಿಂಪಿಲಿಂಗಣ್ಣ, ಬೇಂದ್ರೆ, ಮಾಸ್ತಿ, ವೆಂಕಟೇಶ ಅಯ್ಯಂಗಾರ್ ದೇವುಡು, ನರಸಿಂಹಶಾಸ್ತ್ರಿ, ಬಿ. ಎಸ್. ರಂಗಸ್ವಾಮಿ, ಬೆಟಗೇರಿ ಕೃಷ್ಣಶರ್ಮ ಮೊದ ಲಾದವರು ಜನಪದ ಸಾಹಿತ್ಯ ಪ್ರಸಾರ ಕಾರ್ಯಕ್ಕೆ ತುಂಬ ನೆರವಾಗಿದ್ದಾರೆ. ಇತ್ತೀ ಚಿಗೆ ಡಾ|| ಬಿ. ಎಸ್. ಗದ್ದಿಗಿಮಠ ಮೊದಲಾದವರು ಅಮೌಲ್ಯವಾದ ಜನಪದ ಹಾಡುಗಳನ್ನು ಬೆಳಕಿಗೆ ತಂದಿದ್ದಾರೆ. ಜನಪದ ಸಾಹಿತ್ಯ ಬಹಳ ದೊಡ್ಡದು. ಜನ ಪದ ಸಾಹಿತ್ಯವನ್ನು ಓದಿ ಹಾಡಿ ಆನಂದಿಸಬೇಕು. ಇಲ್ಲಿ ಉದಾಹರಣೆಗಾಗಿ ಕೆಲವು ಜನಪದ ಹಾಡುಗಳನ್ನು ಸಂಗ್ರಹಿಸಿ ಕೊಡಲಾಗಿದೆ. ಇವುಗಳನ್ನು ಓದಿದರೆ ಜನಪದ ಸಾಹಿತ್ಯದ ಸೊಬಗು ನಿಮಗೆ ಸ್ವಲ್ಪವಾದರೂ ಅರ್ಥವಾಗಬಹುದು.

## ಗರತಿಯ ಹಾಡುಗಳು

ಬ್ಯಾಸಗಿ ದಿವಸಕ ಬೇವಿನ ಮರ ತಂಪು
ಭೀಮರತಿಯೆಂಬ ಹೊಳಿ ತಂಪ। ಹಡೆದವ್ವ।
ನೀ ತಂಪ ನನ್ನ ತವರೀಗೆ॥
ಲಾಲೀಯ ಹಾಡಿದರ ಲಾಲಿಸಿ ಕೇಳ್ಯಾನ
ತಾಯ ಹಂಬಲ ಮರೆತಾನ। ಕಂದಯ್ಯಾ।
ತೋಳ ಬೇಡ್ಯಾನ ತಲೆಗಿಂಬ॥

## ಹಾಸ್ಯದ ಗೀತೆಗಳು

ಹಾಸ್ಯವಿರದಿದ್ದರೆ ಜೀವನ ಬೇಸರವಾಗುವುದು. ಬಾಳಿನ ದುಃಖಗಳನ್ನು ಮರೆಸು ವುದು ಹಾಸ್ಯ. ಹೆಂಡತಿಯನ್ನು ಬಿಟ್ಟು ಕಾಶಿಗೆ ಹೋಗಿ ಬಂದ ಮೇಲೆ ಗಂಡ ಹೆಂಡತಿ ಯನ್ನು ಕುರಿತು ನಾನಿಲ್ಲದಿದ್ದಾಗ ಹೇಗೆ ಕಾಲ ಕಳೆದೆ ಎಂದು ಕೇಳಿದಾಗ ಆಕೆ ಕೊಡುವ ಉತ್ತರವೆಷ್ಟು ಸ್ವಾರಸ್ಯವಿದೆ ನೋಡಿರಿ.

"ಕಾಶಿಗೆ ನಾನು ಹೋಗಿದ್ದೆ ಈಶ್ವರನ ಪೂಜೆಯ ಮಾಡಿದ್ದೆ
ಹ್ಯಾಂಗ್ಯಾಂಗ ಬಾಳುವೆ ಮಾಡಿದ್ದೀಳ 'ಹೂವಿನ'."
"ಒಬ್ಬನ್ನ ಇಕ್ಕಿದ್ದೆ, ಒಬ್ಬನ್ನ ಎಳೆದಿದ್ದೆ
ಒಬ್ಬನ್ನ ಕೈಯ ಹಿಡಿದಿದ್ದೆ."

ಯಾರನ್ನ ಇಕ್ಕಿದ್ವೆ ಯಾರನ್ನ ಎಳದಿದ್ವೆ, ಯಾರನ್ನ ಕೈಯ್ಯ ಹಿಡಿದಿದ್ದೆ ಎಂದು ಗಂಡ ಮತ್ತೆ ಪ್ರಶ್ನಿಸಲು ಆಕೆ ಹೀಗೆ ಉತ್ತರಿಸುತ್ತಾಳೆ.

"ಕದವ ನಾ ಇಕ್ಕಿದ್ದೆ,
ಅಗಳಿ ನಾ ಎದಿದ್ದೆ,
ದೀಪ ಕೈಯಾಗ ಹಿಡಿದಿದ್ದೆ."

ಹೀಗೆ ಜನಪದ ಸಾಹಿತ್ಯ ಕನ್ನಡದಲ್ಲಿ ಹುಲಸಾಗಿ ಬೆಳೆದಿದೆ. ಇಲ್ಲಿ ಸಾಂಗತ್ಯ, ತ್ರಿಪದಿ, ಮೊದಲಾದ ಸಾಹಿತ್ಯ ಪ್ರಾಕಾರಗಳನ್ನ ನೋಡಬಹುದು. ಜನಪದ ಸಾಹಿತ್ಯವು ಮಹಾ ಕಾವ್ಯದಂತೆ ಪ್ರೌಢ ಸಾಹಿತ್ಯವಲ್ಲದಿದ್ದರೂ ಅದು ಜನತೆಯ ಜೀವಂತ ಸಾಹಿತ್ಯ. ಜನರನ್ನ ತಣಿಸಬಲ್ಲ, ಹುರದುಂಬಿಸಬಲ್ಲ ಸಾಹಿತ್ಯ. ಇಲ್ಲಿ ವ್ಯಾಕರಣ ಛಂದಸ್ಸಿನ ನಿಯಮಗಳು ಸ್ವಲ್ಪ ಸಡಿಲವಾಗುವುದು ಸ್ವಾಭಾವಿಕ ಹಾಡುವದೇ ಮುಖ್ಯ. ಸಾಹಿತ್ಯದ ಗುರಿ ಮನುಷ್ಯನ ಹೃದಯವನ್ನ ಮಿಡಿಯುವುದು ಮತ್ತು ಆತನಲ್ಲಿ ಸಂತೋಷ ತೃಪ್ತಿಗಳನ್ನುಂಟುಮಾಡುವುದೇ ಆಗಿದೆ. ಜನಪದ ಸಾಹಿತ್ಯವು ನಾಡಿನ ಲಕ್ಷೋಪಲಕ್ಷ ನಿರಕ್ಷರ ಕುಕ್ಷಿಗಳ ಬಾಳಿನ ಗೋಳನ್ನ ಮರೆಸಿ ಹಿಗ್ಗನ್ನ ಉತ್ಸಾಹ ಸ್ಫೂರ್ತಿಗಳನ್ನ ನೀಡಿದಂತೆ ಬೇರಾವ ಸಾಹಿತ್ಯವು ಮಾಡಲಾರದು. ಜನಪದ ಸಾಹಿತ್ಯವು ಮನೋರಂಜನೆಯ ಸಾಧನ ಮಾತ್ರವಲ್ಲ. ಜೀವನದ ಪ್ರತಿಬಿಂಬವಾಗಿದೆ. ಜೀವನದ ಸಂಸ್ಕೃತಿ ಇಲ್ಲಿ ಚಿತ್ರಿಸಲ್ಪಟ್ಟಂತೆ ಇನ್ನೆಲ್ಲಿಯೂ ಚಿತ್ರಿತವಾಗಲಾರದು. ಜನಪದ ಸಾಹಿತ್ಯದಲ್ಲಿ ಪಾಂಡಿತ್ಯ ಅಷ್ಟಾಗಿರಲಿಕ್ಕಿಲ್ಲ. ಇಲ್ಲಿ ಪ್ರತಿಭೆಯ ಅಂಶವಿದೆ ಮತ್ತು ಸಂಗೀತದ ನಾದವಿದೆ. ಅಂತೇ ಅದು ನಾಡಿನ ಸಜೀವ ಸ್ವತ್ತು.

ಜನಪದಕೆ ಮಂಗಲಂ



# ಕನ್ನಡ ಸಾಹಿತ್ಯದಲ್ಲಿ ಸತ್ಕವಿಮಾರ್ಗ



**ಶ್ರೀ ಸಿ. ಮಹಾದೇವಪ್ಪ, ಎಂ.ಎ.,**
ರೀಡರ್, ಪ್ರಥಮ ದರ್ಜೆ ಕಾಲೇಜ್, ತುಮಕೂರು.

ಕವಿಗಳೆಂದರೆ ಯಾರು? ಅವರು ನಡೆದು ನುಡಿದು ತೋರಿದ ದಾರಿ ಯಾವುದು? ಅವರು ಎಂದಿನವರು? ಅವರ ಶಕ್ತಿ ಸಾಮರ್ಥ್ಯಗಳು ಎಂಥವು? ಸಮಾಜದಲ್ಲಿ ಅವರ ಸ್ಥಾನವೇನು? ಎಂಬಿವೇ ಮೊದಲಾದ ಕವಿ, ಕವಿಮಾರ್ಗ ಹಾಗೂ ಕಾವ್ಯಮಾರ್ಗಗಳ ವಿಷಯಕವಾದ ಜಿಜ್ಞಾಸೆ ಬಹಳ ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿದೆ. ಪ್ರಾಚ್ಯ ಹಾಗೂ ಪಾಶ್ಚಾತ್ಯರ ವಿವೇಚನೆಗೊಳಗಾದ ಈ ಕವಿ-ಕಾವ್ಯ ಸಂಗತಿ ಪ್ರತಿಭಾವಂತ ರಸಿಕಲೋಕದ ಚಿರನೂತನ ರಸಚಿಂತನೆಯಾಗಿದೆ.

ಮಾನವನಲ್ಲಿ ವಚನಪ್ರವೃತ್ತಿ ಸಹಜವಾದುದು. ಆದರೂ ಲೋಕದಲ್ಲಿ ಎಲ್ಲರೂ ಮಾತುಬಲ್ಲವರಲ್ಲ. ಮಾತರಿವವರಲ್ಲಿ ಕವಿತಾನೀತಿಯುಳ್ಳವರನ್ನೇ ಕವಿಗಳೆನ್ನುವುದು. ಅವರು ತಮ್ಮ ರಸಾನುಭವವನ್ನು ಛಂದೋಬದ್ಧವಾದ ಭಾಷೆಯಲ್ಲಿ ನಿರೂಪಿಸಿ ಓದುಗನಿಗೆ ರಸಾನಂದವನ್ನುಂಟುಮಾಡುವರು. ಪ್ರತಿಭಾವಂತರಾದ ಕವಿಗಳ ರಚನೆ ಸಹಜವಾಗಿ ಚಾತುರ್ಯಮಯವಾಗಿರುವ ಕಾರಣ ಅವನ್ನೋದಿದ ರಸಿಕರಿಗೆ ಹೃದಯಾನಂದ ಲಭಿಸುವುದು. ನೂತನ ರಚನಾಸಾಮರ್ಥ್ಯವಿಲ್ಲದವರು ಕವಿಗಳಾಗಲಾರರು. ವ್ಯಾಪಕವಾದ ರಸಭಾವ ಓದುಗನ ಮನಸ್ಸನ್ನು ಹೊಚ್ಚಹೊಸತಾಗುವಂತೆ ಮಾಡದಿದ್ದರೆ ಅದು ವಚನರಚನೆಯೇ ಅಲ್ಲ. ರಚನೆಯ ರಮಣೀಯವಾದ ರಸಕ್ರಿಯೆಯ ಸೊಗಸನ್ನು ಚಿತ್ರಿಸುವ ಕವಿರಾಜಮಾರ್ಗಕಾರನ ಮುಂದಿನ ಕಂದಗಳು ಮನನೀಯವಾದುವು.

ಪಸರಿಸಿದಾ ಬಗೆ ಮನಮಂ
ಪೊಸತಾಗೆ ನೆಗಬ್ಬುಲಜ್ಜೆಯುದಾ ರಚನೆಯೊಳೇಂ ।

ಬಸನಂ ತನಗಿನಿತರ ಬೇ
ವಸಮೇಂ ಕನರ್ದರುವೊಳರೆ ಕವಿಯಲ್ಲದರಂ ? 1.12.

ಬಗೆಬಗೆದು ಕೇಳ್ದು ಬುಧರೊಲ
ವೊಗೆದಿರೆ ಹೃದಯೊಳೆ ತಾಳ್ದ ಮಣಿಹಾರಂಬೊಲ್
ಸೊಗಯಿಸುವ ವಚನವಿರಚನೆ
ನೆಗಬ್ಬಿಂ ಭಾವಿಸುವೊಡದಜ ಪೆಂಪತಿಸುಲಭಂ ॥ ಕ.ರಾ. 1.13

ಓದುಗನ ಮನಸ್ಸನ್ನು ಪ್ರಸನ್ನಗೊಳಿಸುವ ಕವಿಭಾವಕೃತ ಸೂಕ್ತಮಾರ್ಗವೆ ಕಾವ್ಯ. ಅದು—

ಸವಿಶೇಷ ಶಬ್ದರಚನಂ
ವಿವಿಧಾರ್ಥ ವ್ಯಕ್ತಿವರ್ತಿತಾಲಂಕಾರಂ । ಕ.ರಾ. 1.22.

ಜಗತ್ತಿನ ನಾನಾ ದೇಶಗಳ ಸಾಹಿತ್ಯದ ಇತಿಹಾಸವನ್ನು ಬಲ್ಲವರಿಗೆ ಕವಿಗಳು ಇಂದಿನವರೇನಲ್ಲ. ಬಹಳ ಹಿಂದಿನಿಂದಲೂ ಬಂದವರೆಂಬುದು ತಿಳಿದ ಸಂಗತಿಯೇ ಆಗಿದೆ. ಕವಿರಾಜ ಮಾರ್ಗಕಾರನು ಹೇಳುವಂತೆ ಕನ್ನಡದಲ್ಲಿ ಅನಾದಿ ಕಾಲದಿಂದಲೂ ಕವಿಶ್ರೇಷ್ಠರಿದ್ದಾರೆ. ಅವರ ವಿಶಿಷ್ಟ ಪದ ಪ್ರಯೋಗಗಳು ಅನಂತ ವಿಧವಾದುವು. ಆದರಿಂದ ಮಾರ್ಗಗಳೂ ಹಲವಾದುವು. ತಮಗಿಂತ ಪ್ರಾಚೀನರಾದ ಕವಿಗಳ ರಚನಾಸ್ವಾರಸ್ಯವನ್ನು ಸೂರೆಗೊಳ್ಳಲು ಹೊರಟ ನವೀನ ಕವಿಗಳ ಸಂಪ್ರದಾಯ ಪಾಲನೆಯ ಮಾರ್ಗವೆ ಮುಂದೆ ಕವಿಮಾರ್ಗವೆನಿಸಿತು. ಆ ಕವಿಮಾರ್ಗವನ್ನು ಅನುಸರಿಸಿದ ಕವಿಗಳಲ್ಲಿ ಶ್ರೇಷ್ಠರಾದವರು ತುಳಿದ ಹಾದಿಯೇ ಆ ಬಳಿಕ "ಕವಿರಾಜ ಮಾರ್ಗ" ಎಂದಾಯಿತು. ಅದು ಕವಿಗಳು ನಡೆದು ಬಂದ ದಾರಿಯಷ್ಟೇ ಅಲ್ಲ. ಕವಿಗಳ ಕಾವ್ಯರಚನೆಗೆ ರಾಜಮಾರ್ಗವೂ ಆಯಿತು. ಅಂತಹ ಕವಿಮಾರ್ಗ ಅಥವಾ ಕವಿರಾಜರ ಮಾರ್ಗವನ್ನು ಕುರಿತ ಆಲಂಕಾರಿಕ ಗ್ರಂಥಗಳೂ ಕವಿಗಳ ಕೈಗನ್ನಡಿ ಯಾದುವು. ಕವಿಭಾವ, ಪದಪದ್ಧತಿ, ಅಲಂಕಾರ ರಚನೆಗಳಲ್ಲಿ ಯಾವುವು ಮನೋಹರವಾದುವೊ ಅವು ಮಾತ್ರ ಉಳಿದುಕೊಂಡುವು. ಮಿಕ್ಕವು ಅಳಿದು ಹೋದುವು. ಅಲ್ಲದೆ ಅಸಂಖ್ಯಾತ ಕವಿಗಳು ಕಾವ್ಯರಚನೆ ಮಾಡುವಾಗ ಅವರಿಗೇ ಗೋಚರವಾಗದಂತೆ ಅನೇಕ ದೋಷಗಳಾದುವು. ಹಾಗೆ ಆದ ದೋಷಗಳು "ನೆಲಸಿದ ಕಾವ್ಯಂ ಕಾವ್ಯಕ್ಕೆ ಲಕ್ಷಣಂ" ಎಂದೆಂಬ ಭಾವದಿಂದ ಬೇರೂರಿಬಿಟ್ಟವು. ಆ ದೋಷ ಗಳುಂಟಾಗುವುದಕ್ಕೆ ಕನ್ನಡದಲ್ಲಿ "ದೇಸಿ" ಬೇರೆ ಬೇರೆಯಾದುದೂ ಮತ್ತೊಂದು ಕಾರಣ. ಹೀಗೆ ಕವಿಗಳ ಪರಂಪರೆಯಲ್ಲಿ ತಲೆದೋರಿದ ತಪ್ಪುಗಳನ್ನು ಮುಂದೆಯೂ ಮಾಡದ ಹಾಗೆ ಎಚ್ಚರಿಸುವ ಗುರುತರ ಕಾರ್ಯ ಕಾವ್ಯಾಗಮಕೋವಿದರ ಮೇಲೆ ಬಿದ್ದಿತು. ನಿರಂತರವಾಗಿ ಸಾಗಿಬಂದ ಪುರಾಣಸಂತತಿಗತಮಾರ್ಗ ಕ್ರಮೇಣ ಆಗಮಕೋವಿದನಿಗದಿತ ಮಾರ್ಗವೆನಿಸಿತು. ಆ ದೋಷರಹಿತ ಶಾಸ್ತ್ರೋಕ್ತ ಮಾರ್ಗವೇ

"ಸುಮಾರ್ಗ"ವೆನಿಸಿತು. ಕಾಲಕಾಲಕ್ಕೆ ಸಮರ್ಥರಾದ ಹೊಸ ಕವಿಗಳ ಹೊಸ ದೃಷ್ಟಿ, ಧ್ಯೇಯ ಹಾಗೂ ಶಕ್ತಿಸಂಪನ್ನತೆಗಳಿಗನುಗುಣವಾಗಿ ಆ ಸುಮಾರ್ಗದ ರೀತಿಯೂ ನವ್ಯತೆಯುತ್ತ ಸಾಗುತ್ತ ಬಂದಿದೆ ಎಂಬುದನ್ನು ನಾವು ಮರೆಯದಿರೋಣ. ಪ್ರಾಚೀನ ಕವಿಗಳನ್ನು ಕವಿಮಾರ್ಗದ ರಸಜ್ಞರೆಂದೆಣಿಸಿದರೆ ಆಗಿನ ಕಾಲದ ಕಾವ್ಯ ಲಕ್ಷಣಕಾರರನ್ನು ಅಥವಾ ಆಲಂಕಾರಿಕರನ್ನು ಕವಿಮಾರ್ಗದ ರಹಸ್ಯಜ್ಞರೆಂದೂ ಆಧುನಿಕ ಕವಿಗಳ ಕಾವ್ಯಸೌಂದರ್ಯದ ಮೂಲತತ್ತ್ವಗಳ ಸ್ವರೂಪವನ್ನು ತಿಳಿಸ ಬಯಸುವ ಇಂದಿನ ವಿಮರ್ಶಕರನ್ನು ಈಗಿನ ಕವಿಮಾರ್ಗದ ಕಾವ್ಯತತ್ತ್ವಜ್ಞರೆಂದೂ ಭಾವಿಸಬಹುದಾಗಿದೆ.

ಈ ಸಂದರ್ಭದಲ್ಲಿ "ಮಾರ್ಗ"ವನ್ನು ಕುರಿತು ಕವಿಗಳೂ ಆಲಂಕಾರಿಕರೂ ಹೇಳಿರುವ ಅಭಿಪ್ರಾಯಗಳನ್ನು ಗಮನಿಸಬಹುದು. ಮಾರ್ಗವೆಂದರೆ ವಚನವಿನ್ಯಾಸ ಕ್ರಮ ಅಥವಾ ಪದರಚನಾಕ್ರಮ. ಅದನ್ನೇ ರೀತಿಯೆನ್ನುವುದು. ದೇಶ ಹಲವು, ಆದರಿಂದ ರೀತಿಗಳೂ ಹಲವು. ರೀತಿ ಅಥವಾ ಮಾರ್ಗವನ್ನು ಕವಿಗಳು ಅನುಸರಿಸು ವುದಗತ್ಯ. ಏಕೆಂದರೆ ಮಾರ್ಗಯುತನಾದ ಕವಿಯು ಅತ್ಯಂತ ಉನ್ನತ ಪ್ರಭಾವ ಶಾಲಿಯಾದವನು. ಕವಿಕಾಮನ ಅಭಿಪ್ರಾಯದಲ್ಲಿ :

ಮಾರ್ಗಯುತನೆನಿಪುದೆನಿಸೆ ಸ
ಮುಗ್ರೋದಗ್ರ ಪ್ರಭಾವನೆನಿಸುಗುಮದಱಿಂ ।
ಮಾರ್ಗವನೆ ಪಿಡಿವುದೆಂದುಂ
ಮಾರ್ಗಂದಪ್ಪಿ ದರನಾರುಮೇಂ ಮಚ್ಚುವರೇ ? ॥ ಶೃಂಗಾರರತ್ನಾಕರ : 1.5.

ಮಾರ್ಗವೆಂಬುದು ಕೇವಲ ಪದರಚನಾಕ್ರಮವೊಂದೇ ಆಗದೆ ನವರಸಾದಿಗಳ ಆವಿಷ್ಕಾ ರದ ಮಾರ್ಗವೂ ಆಯಿತು. ರಸಗಳ ವರ್ಣ ಮತ್ತು ಅವುಗಳ ಅಧಿದೈವಗಳ ನಾಮಾವಳಿಗಳು 'ಮಾರ್ಗಸಂಗತಂಗಳ್' ಎಂದು ಹೇಳಿ ರಸಸಂಗತಿ ಮಾರ್ಗಕ್ಕೆ ಸೇರಿದ ವಿಷಯವೆಂಬುದನ್ನು ಕವಿಕಾಮನು ತನ್ನ ಶೃಂಗಾರರತ್ನಾಕರದಲ್ಲಿ ಸ್ಪಷ್ಟ ಪಡಿಸಿದ್ದಾನೆ. ಹೀಗೆ ಪದರಚನೆಯ ಹಾಗೂ ನವರಸಗಳ ಸಂಬಂಧಿಯಾದ ಮಾರ್ಗ ವನ್ನು ಕವಿ ಸೃಷ್ಟಿಸಿದ್ದರಿಂದ ಅದು ಕವಿಮಾರ್ಗವೆಂದೆನಿಸಿತು. ಈ ಕವಿಮಾರ್ಗವನ್ನು ಕವಿಗಳು ಅನುಸರಿಸುವುದಲ್ಲದೆ ತಿಳಿಯದವರಿಗಾಗಿ ಅದರ ಸ್ವರೂಪವನ್ನು ತೋರಿಸಿ ಕೊಡಬೇಕಾದುದೂ ಅಗತ್ಯವಾಯಿತು. ಹಾಗೆ ದಿಗ್ದರ್ಶನ ಮಾಡಿಕೊಟ್ಟರೂ ಅರಿಯಾಲಾರದ ಮೂಢರುಂಟು ಎಂಬುದನ್ನು ಎಳಂದೂರ ಕವಿ ಹರೀಶ್ವರನ ಪೌರಾಣಿಕ ಮಾರ್ಗದ ಈ ಮಾರ್ಮಿಕ ವರ್ಣನೆಯಿಂದ ತಿಳಿಯಬಹುದಾಗಿದೆ.

ಆದಿಕವಿಮಾರ್ಗ ವ್ಯಾಕರಣ ನೈಘಂಟುಗಳ
ನೋದಿತೋರಿಮೊಡೊಡಂಬಡ ಮತ್ತೆ ಸ್ನೇಹದಿಂ
ಸಾದರದಿ ನೀಂ ಪ್ರಯೋಗಿಸುಮೆನಲು ಹುಚ್ಚು ಕೆರಳ್ದಂತೆ ಕೆರಳುತೆ ಸುಕವಿಯಂ।

ವ್ಯಾಧಿಯಿಂದದಿ ಪೀಡಿಸುವ ಮೂಢರಂ ಬ್ರಹ್ಮ
ಮೇದಿನಿಯೊಳುಂ ವಿಚಾರಿಸದೆ ಸೃಜಿಪರೇ ಎಂದು
ಜ್ಯಾಧರಂ ನಡುದಲೆಯ ಚಿವುಟಬಿಟ್ಟುದು ಸತ್ಯ ಲಾಲಿಪುದು ಧೀಯುಕ್ತರು ||
ಪ್ರಭುದೇವರ ಪುರಾಣ. 1. 32.

ಈ ಆದಿಕವಿಮಾರ್ಗವೆ ಕವಿತಾಮಾರ್ಗವಾಗಿ ಅಲಂಕೃತವಾಯಿತು. ರಸ ವಿಚಕ್ಷಣರಾದ ಬೇರೆ ಬೇರೆ ಕವಿಗಳಿಂದ ಈ ಕವಿತಾಮಾರ್ಗವು ಹೊಸಹೊಸತಾಗುತ್ತ ಹೋಗುವುದೆಂಬುವದನ್ನು ಕವಿ ಷಡಕ್ಷರದೇವನು ನಿದರ್ಶನಪೂರ್ವಕವಾಗಿ ಹೀಗೆ ವಿವರಿಸಿದ್ದಾನೆ :—

ಮಿಸುನಿ ಯದೊಂದಾದೊಡದೇಂ
ಪೊಸ ತೊಡವೆನಿಸುತ್ತೆ ಬೇರೆಬೇರೆನಿಸುವವೋಲ್ ।
ರಸವತ್ಕವಿತಾಮಾರ್ಗಂ
ರಸೆಯುಲ್ಲಿ ವಿಚಕ್ಷಣರ್ಕಳಿಂ ಪೊಸತೆನಿಕುಂ || ರಾ. ವಿ. 1—33.

ಹೀಗೆ ಹೊಸತಾಗುತ್ತ ಹೋಗುವ ಕವಿತಾಮಾರ್ಗದಿಂದ ಕಾವ್ಯಬಂಧ ಬಂಧುರವಾಗುತ್ತದೆ. ಆ ಕಾವ್ಯಬಂಧದ ಬಂಧುರತೆಯಿರುವುದು ದೇಸಿಮಾರ್ಗದಲ್ಲಿ ಎಂಬುದರ ಅರಿವನ್ನು ನಮಗೆ ಮೊದಲು ಮಾಡಿಕೊಟ್ಟವ ನೃಪತುಂಗ ; ಆ ಅನಂತರ ಪಂಪ. ದೇಸಿಯಲ್ಲಿ ಒಳಹೊಕ್ಕ ಮಾರ್ಗದಲ್ಲಿ ಹೊಂದಿಕೊಂಡರೆ ಕಾವ್ಯಬಂಧ ಹೇಗೆ ಶೋಭಿಸುವುದೆಂಬುದನ್ನು ಪಂಪನ ಮಧುರವಾಣಿಯಿಂದಲೆ ಮನಗಾಣೋಣ :—

ಬಗೆ ಪೊಸತಪ್ಪುದಾಗಿ ಮೃದುಬಂಧದೊಳೊಂದುವುದೊಂದಿ ದೇಸಿಯೊಳ್
ಪುಗುವುದು ಪೊಕ್ಕ ಮಾರ್ಗದೊಳೆ ತಪ್ಪದು ತಳ್ತೊಡೆ ಕಾವ್ಯಬಂಧಮೊ ।
ಪ್ಪುಗುಮೆಳಮಾವು ಕೆಂದಳಿರ ಪೂವಿನ ಬಿಣ್ಪೊಡೆಯಿಂ ಬಳಲ್ದು ತುಂ
ಬಿಗಳಿನೆ ತುಂಬಿ ಕೋಗಿಲೆಯೆ ಬಗ್ಗಿಸೆ ಸುಗ್ಗಿಯೊಳೊಪ್ಪುವಂತೆವೋಲ್ ||
ಪಂಪಭಾರತ : 1. 8.

'ಮಾರ್ಗಮೊಡಂಬಡೆ ದೇಸೆ, ಕಬ್ಬಮುಂ' ರಚಿಸಿದ ಕವಿರನ್ನನೂ ಕವಿಮಾರ್ಗ ಹಾಗೂ ಪೊಸದೇಸಿಯನ್ನು ಕುರಿತು ವಿಚಾರ ಮಾಡಿದ್ದಾನೆ :

ರಸಮುಂ ಭಾವಮುಮುಂ ಕಾ
ಳಸಮುಂ ಕುಣಿಕೆಯುಮುನಱಿದು ಕವಿಮಾರ್ಗದೊಳಂ ।
ಪೊಸದೇಸೆಯ ನುಡಿಗಳೊಳಂ
ಪೊಸಯಿಸ ಬಲ್ಮೆಗೆ ಚತುರ್ಮುಖಂ ಕವಿರನ್ನಂ ||
ಗದಾಯುದ್ಧ : 1. 39.

ಈ ಕವಿಮಾರ್ಗ ಅಥವಾ ಕವಿತಾಮಾರ್ಗಕ್ಕೂ ಸತ್ಕವಿಗಳಿಗೂ ಇರುವ ಸಂಬಂಧವನ್ನು ಕವಿಗಳು ಪ್ರಸ್ತಾಪಿಸಿದ್ದಾರೆ. ಕನ್ನಡದ ಆದಿಕವಿಯೆಂದು ಪ್ರಸಿದ್ಧನಾದ ಪಂಪ 'ಕವಿತಾರಹಸ್ಯಮುಂ ಸತ್ಕವಿಯಜಸ್ರಗುಂ'ಯೆಂದು ಹೇಳಿ ಕವಿತಾಪ್ರಪಂಚದಲ್ಲಿ ಸತ್ಕವಿಯೊಬ್ಬನಿಗೇ ಸ್ಥಾನವನ್ನು ಕೊಟ್ಟಿದ್ದಾನೆ. ಅಷ್ಟೇ ಅಲ್ಲದೆ ಆತ 'ಪಸರಿಪ ಕನ್ನಡಕ್ಕೊಡೆಯನೋರ್ವನೆ ಸತ್ಕವಿ ಪಂಪನ್' ಎಂದು ಕವಿ ನಾಗರಾಜನಿಂದ ಸ್ತುತ್ಯನೂ ಆಗಿದ್ದಾನೆ.

ಕವಿಮಾರ್ಗದೊಳೊಳಪೊಕ್ಕುಂ
ನವರಸಮುಂ ತೆಜ಼ಿಯೆ ನುಡಿಡನೆನಿಸಿದ ಕವಿ ಸ।
ತ್ಕವಿಯೆನಿಕುಂ ಗೂಡಾರದ
ಕವಿಯಂತಿರೆ ಮುಚ್ಚಿಪೋದ ಕವಿಯುಂ ಕವಿಯೆ ?॥

ಅಜಿತಪುರಾಣ : 1—87.

ಎಂಬೀ ಕಂದದಲ್ಲಿ ಕವಿ ರನ್ನನು ಕವಿಮಾರ್ಗವನ್ನು ಒಳಹೊಕ್ಕು, ನವರಸವನ್ನು ಹೊರ ಉಕ್ಕಿಸುವಂತೆ ಮಾಡಬಲ್ಲ ಕವಿಯೇ ಸತ್ಕವಿಯೆಂದು ಆತನು ಸಾರಿದ್ದಾನೆ. ಆತನು ಪದ್ಯರಚನೆಯಲ್ಲಿ ಕಾಳಿದಾಸನೂ, ಗದ್ಯರಚನೆಯಲ್ಲಿ ಬಾಣನೂ ಪ್ರಖ್ಯಾತರಾದವರೆಂದು ತಿಳಿಸುತ್ತ ಆ ಸತ್ಕವಿಗಳೆಲ್ಲರೂ ನಮಗೆ ಅಭಿವಂದ್ಯರೆಂದು ಕೊಂಡಾಡಿದ್ದಾನೆ. ಇದರಿಂದ ನಮ್ಮ ಪ್ರಾಚೀನ ಕನ್ನಡ ಕವಿಗಳು 'ಸತ್ಕವಿ'ಗಳಿಗೆ ತೋರಿದ ಗೌರವ ಅಮಿತವಾದುದೆಂಬುದು ಸ್ಪಷ್ಟ. ಆ ಸತ್ಕವಿಗಳು ನಿರ್ಮಿಸಿದ ಸತ್ಕೃತಿಗಳು ಜಗತ್ಕೌತುಕವೂ, ಲೋಕಪೂಜ್ಯವೂ ಆದುವು.

ಸತ್ಕವಿಗಳು ಕವಿಮಾರ್ಗವನ್ನು ಒಳಹೊಕ್ಕ ಕವಿಪುಂಗವರು ಮಾತ್ರವಲ್ಲ 'ದೇವಧರ್ಮಾರ್ಥದಾ ವಿಶೇಷಜ್ಞ'ರೂ ಆದ ದಾರ್ಶನಿಕರು. 'ಜಿನಸಮಯ ಪ್ರಕಾಶಕೃತ ಸತ್ಕವಿ' ಎಂದು ಸತ್ಕವಿ ಕಮಲಭವನಿಂದ ಸ್ತುತ್ಯನಾದ ಪಂಪನಿಗೆ ಕವಿವಾಣಿ ಬೇರೆಯಲ್ಲ, ಜಿನವಾಣಿ ಬೇರೆಯಲ್ಲ. ಆದಿ ಪುರಾಣದ

ಪರಮ ಜಿನೇಂದ್ರವಾಣಿಯೆ ಸರಸ್ವತಿ ಬೇಜದು ಪೆಣ್ಣ ರೂಪಮುಂ
ಧರಿಯಿಸಿ ನಿಂದುದಲ್ತದುವೆ ಭಾವಿಸಿಯೋದುವ ಕೇಳ್ವ ಪೂಜಿಪಾ।
ದರಿಸುವ ಭವ್ಯಕೋಟಿಗೆ ನಿರಂತರ ಸೌಖ್ಯಮನೀವುದಾನದ
ರ್ಕೆರೆದಪೆನಾ ಸರಸ್ವತಿಯೆ ಮಾಜ಼ಿಕ್ಕೆಮಗಿಲ್ಲಿಯೆ ವಾಗ್ವಿಳಾಸಮುಂ ॥ 1—9.

ಎಂಬೀ ವೃತ್ತದಲ್ಲಿ ಧರ್ಮದ ಉಸಿರು ಕಾವ್ಯ ಎಂಬ ದೃಢಭಾವನೆಯನ್ನು ಕವಿ ಪಂಪ ವ್ಯಕ್ತಪಡಿಸಿದ್ದಾನೆ. 'ನಾನೃಷಿಃ ಕುರುತೇ ಕಾವ್ಯಂ' ಎಂದೆನ್ನಿಸುವ ಮುನಿವರ ವಾಲ್ಮೀಕಿಯ ಮಹಿಮೆ ಈ ಲೋಕಕ್ಕೆ ಸಂದಿತೆಂದು ರುದ್ರಭಟ್ಟನು ತಿಳಿಸಿದ್ದರೆ ಕವಿ ಮಲ್ಲಣಾರ್ಯನು ಸತ್ಕವಿ 'ಋಷಿಕುಲೋದ್ಭವ'ನೆಂದೇ ಘೋಷಿಸಿದ್ದಾನೆ.

ಇವೆಲ್ಲಕ್ಕೂ 'ಕವಿರ್ಮನೀಷೀ ಪರಿಭೂಃ ಸ್ವಯಂಭೂಃ'ಆದಿಕರ್ತಾ ಕವಿ ಸಾಕ್ಷಾಚ್ಛೂಲ ಪಾಣಿರಿತಿಶ್ರುತಿಃ' ಎಂಬ ಪ್ರಮಾಣ ಪುರುಷರ ವಚನಗಳ ಆಧಾರವುಂಟೆಂಬುದನ್ನು ಕಾಣುತ್ತೇವೆ. 'ಸೃಷ್ಟಿಕರ್ತನೆಂಬ ಹೆಸರಿಗೆ ಅರ್ಹರಾದವರು ದೇವರು ಹಾಗೂ ಕವಿಯ ಹೊರತು ಬೇರೆ ಯಾರೊಬ್ಬರೂ ಇಲ್ಲ, 1 ಎಂದ ಇಟಲಿಯ ಕವಿ ಟ್ಯಾಸೋ ವಿನ ಈ ನುಡಿಯನ್ನು ಕೊಂಡಾಡಿದ ಆಂಗ್ಲಕವಿ ಷೆಲ್ಲಿ 'ಕವಿಯಾದವನು ನಿತ್ಯತೆಯ, ಅನಂತತೆಯ ಮತ್ತು ಕೇವಲಾದ್ವೈತದ ಸಹಭಾಗಿ*'. 'ಕವಿತಾಶಕ್ತಿ ವಾಸ್ತವಿಕ ವಾಗಿಯೂ ಒಂದು ಬಗೆಯ ದೈವಿಕಶಕ್ತಿ'.* 'ಬುದ್ಧಿಗಗೋಚರವಾದ ಒಂದು ದಿವ್ಯ ಪ್ರೇರಣೆಯ ದೀಕ್ಷಾ ಗುರುಗಳೇ ಕವಿಗಳು' * ಎಂದಿದ್ದಾನೆ. ಪ್ರಾಚ್ಯ ಹಾಗೂ ಪಾಶ್ಚಾತ್ಯ ದೃಷ್ಟಿಗಳಲ್ಲಿ ಕವಿಯ ಬಗೆಗೆ ಸಮಾನಾಭಿಪ್ರಾಯವಿರುವುದನ್ನು ನೋಡಿದರೆ ಕವಿಯ ಮಹತ್ತ್ವ ಲೋಕವ್ಯಾಪಿಯಾದುದು.

ಭರತ ಭೂಮಿಯಲ್ಲಿ ವೇದಗಳ ಕಾಲದಿಂದಲೂ 'ಕಾವ್ಯ' ಎಂಬ ಪದಕ್ಕೆ ದಿವ್ಯ ಜ್ಞಾನವನ್ನೂ, ದೈವೀ ಸ್ಫೂರ್ತಿಯನ್ನೂ ಪಡೆದ ರಸಋಷಿಯ ಗುಣಗಳನ್ನುಳ್ಳದ್ದೆಂಬ ಅರ್ಥವಿದೆ. ಆ ಕಾರಣದಿಂದಲೇ ಕಾವ್ಯ 'ಕಾವ್ಯಶ್ರೀ' ಎನಿಸಿತು. 'ಕಾವ್ಯಪಾವನ-ಕೃತಂ ಕವಿ ಕಣಾ' ಎಂಬ ಸೂತ್ರಪ್ರಾಯವಾದ ಈ ಕವಿವಾಣಿಯಲ್ಲಿ ಕವಿಯ ಕಾರ್ಯ ಕೇವಲ ಕೃತಿನಿರ್ಮಿತಿಯಲ್ಲ, ಕೃತಿಪವಿತ್ರತೆ ಎಂಬುದರ ಕಡೆಗೆ ನಮ್ಮ ಗಮನ ಹರಿಯ ದಿರದು. ಅಂಥ ಪಾವನದೃಷ್ಟಿಯುಳ್ಳ ಕಾವ್ಯಶ್ರೀಕರಣೋದ್ಯುಕ್ತನೆ ಕವಿ. ಆತನು ಕಾಲಗರ್ಭವನ್ನು ಒಳಹೊಕ್ಕು ದೇಶ, ದೂರಗಳನ್ನು ಮೀರಿ ತನ್ನ ಒಳಗಣ್ಣಿನಿಂದ ನಿತ್ಯ ಸತ್ಯವನ್ನು ಕಾಣಬಲ್ಲ ವಿಕ್ರಾಂತದರ್ಶನವುಳ್ಳವನು. 'ಕವಿರ್ವಿಕ್ರಾಂತದರ್ಶನಾತ್' ಎಂಬ ಉಕ್ತಿ ಕವಿಯ ದರ್ಶನ ಶಕ್ತಿಯನ್ನು ಸಾರುತ್ತಿದೆ. ಅಂಥ ಕವಿಯ ಕೃತಿ ಚಿರ ಕೃತಿ ; ಅವನ ಕೀರ್ತಿ ಕಲ್ಪಾಂತರಸ್ಥಾಯಿ. ಈ ಮಾತಿನ ಸತ್ಯವನ್ನು ಕವಿ ಹರೀಶ್ವರನ ರಸವಾಣಿ ನಿರೂಪಿಸುವ ಬಗೆಯಿದು :—

ಸೇವ್ಯಂ ಸೌಖ್ಯಂ ಪ್ರಸನ್ನಂ ನವರಸವಿಭವಂ ಪುಣ್ಯಪುಂಜಂ ಶುಭಂ ವಾ
ಗ್ದೇವ್ಯಾವಾಸಂ ವಿವೇಕೋನ್ನತಜನನಿಧಿ ಸಂಸಾರವಿಶ್ರಾಮದೇಶಂ ।
ದಿವ್ಯಜ್ಞಾನೋಕ್ತಿಮಾರ್ಗಂ ನಿರತಿಶಯಪದಂ ಕೂರ್ತು ಪೇಳ್ವಲ್ಲಿಯಿಂದಂ
ಕಾವ್ಯಂ ಕಲ್ಪಾಂತರಸ್ಥಾಯಿಯೆನಿಪ ನುಡಿ ಸತ್ಯಂ ಕವೀಶಾಧಿಪತ್ಯಂ ॥

ಗಿ. ಕ. 1—16.

ಸಾರ್ವಕಾಲಿಕ, ಸಾರ್ವಲೌಕಿಕ ಹಾಗೂ ಸಾರ್ವಜನಿಕ ಆತ್ಮಹಿತಾರ್ಥ ದೃಷ್ಟಿಯೇ ಸತ್ಕವಿಗಳೆಲ್ಲರ ಗುರಿ. ಅವರ ಕಾವ್ಯಗಳಲ್ಲಡಗಿರುವ ಅರ್ಥವನ್ನೂ ಪ್ರಯೋಜನವನ್ನೂ ಕುರಿತು ಕವಿರಾಜಮಾರ್ಗಕಾರನು :—

---

1 ನೋಡಿ : ಕಾವ್ಯಸಮರ್ಥನೆ, ಪುಟ ೫೦.

* ನೋಡಿ : ಕಾವ್ಯಸಮರ್ಥನೆ, ಪುಟಗಳು ಕ್ರಮವಾಗಿ ೬,೪೪ ಮತ್ತು ೫೫.

ಅಧಿಕೃತ ಸತ್ಪುರುಷಾರ್ಥ
ಪ್ರಧಾನ ಧರ್ಮಾರ್ಥ ಕಾಮಮೋಕ್ಷಂಗಳವಾ ।
ಬುಧಜನ ವಿವಿಕ್ತ ಕಾವ್ಯ
ಪ್ರಧಾರಿತಾರ್ಥಂಗಳಖಿಳ ಭುವನಹಿತಂಗಳ್ ॥ ಕ. ರಾ. 1—20.

ಪಾಪಮಿದು ಪುಣ್ಯಮಿದು ಹಿತ
ರೂಪಮಿದಹಿತಪ್ರಕಾರಮಿದು ಸುಖಮಿದು ದುಃ।
ಖೋಪಾತ್ತಮಿದೆಂದಱಿಪುಗು
ಮಾ ಪರಮ ಕವಿಪ್ರಧಾನರಾ ಕಾವ್ಯಂಗಳ್ ॥ ಕ.ರಾ. 1—18.

ಎಂದಿದ್ದಾನೆ.

ಸಾಧುಕಾವ್ಯದ ರಚನೆಯಿಂದಾಗುವ ಪ್ರಯೋಜನವನ್ನು ಪ್ರಾಚೀನ ಸಂಸ್ಕೃತ ಆಲಂಕಾರಿಕರೂ ಎತ್ತಿ ಹಿಡಿದಿದ್ದಾರೆ ಎಂಬುದು ಭಾಮಹನ ಕಾವ್ಯಾಲಂಕಾರದಿಂದ ಸ್ಪಷ್ಟಪಡುತ್ತದೆ:

ಧರ್ಮಾರ್ಥ ಕಾಮಮೋಕ್ಷೇಷು ವೈಚಕ್ಷಣ್ಯಂ ಕಲಾಸು ಚ ।
ಪ್ರೀತಿಂ ಕರೋತಿ ಕೀರ್ತಿಂ ಚ ಸಾಧುಕಾವ್ಯ ನಿಬಂಧನಂ ॥
ಕಾವ್ಯಾಲಂಕಾರ: 1—2.

ಅಲ್ಲದೆ 'ಸತ್ಕವಿತ್ವ'ವಿಲ್ಲದ ವಾಗ್ವಿದಗ್ಧತೆ ಯಾವ ಗಣನೆಗೂ ಬಾರದೆಂಬುದನ್ನು ಆತನ ಈ ಆಲಂಕಾರಿಕ ನಿರೂಪಣೆಯಲ್ಲಿ ಕಾಣಬಹುದು.

ವಿನಯೇನ ವಿನಾ ಕಾ ಶ್ರೀಃ ಕಾ ನಿಶಾ ಶಶಿನಾ ವಿನಾ
ರಹಿತಾ ಸತ್ಕವಿತ್ವೇನ ಕೀದೃಶೀ ವಾಗ್ವಿದಗ್ಧತಾ ॥ ಕಾವ್ಯಾಲಂಕಾರ 1—4.

ಇಲ್ಲಿರುವ ದೃಷ್ಟಾಂತಗಳು ಅರ್ಥಗರ್ಭಿತವಾದುವು. ವಿನಯದಿಂದ ಕೂಡಿದ ಆತ್ಮಶ್ರೀಯನ್ನು, ಅಜ್ಞಾನಾಂಧಕಾರವನ್ನು ತೊಲಗಿಸುವ ಆತ್ಮಜ್ಯೋತಿಯನ್ನೂ, ಸತ್ಕವಿತ್ವವನ್ನುಳ್ಳ ವಾಗ್ವಿದಗ್ಧತೆ ಬೆಳಗದಿದ್ದರೆ ಅದು ನಿಷ್ಫಲ. ಈ ದೃಷ್ಟಾಂತಗಳಲ್ಲಿ ಆಧ್ಯಾತ್ಮಿಕ ದೃಷ್ಟಿಯೂ ಇದೆ; ಸೌಂದರ್ಯದೃಷ್ಟಿಯೂ ಇದೆ. ಸತ್ಕವಿತ್ವದಲ್ಲಿರುವ ಈ ಉಭಯ ಕವಿದೃಷ್ಟಿಗಳಿಂದಲೆ ಕವಿಗಳು ಯಾವ ಮಾತೆಯ ವರಸುತರೋ ಆ ದೇವಿಯನ್ನು 'ಚಿರಂದೇವಿ', 'ಸರಸ್ವತಿ' ಎಂದು ಕರೆದಿರುವರು.

ಶ್ರೀ ವಿಶದವರ್ಣ ಮಧುರಾ
ರಾವೋಚಿತೆ ಚತುರರುಚಿರಪದರಚನೆ ಚಿರಂ ।
ದೇವಿ ಸರಸ್ವತಿ ಹಂಸವಿ
ಭಾವದೆ ನೆಲೆಗೊಳ್ಗೆ ಕೂರ್ತು ಮನ್ಮಾನಸದೊಳ್ ॥ ಕ. ರಾ. 1—2.

ಎಂದು ನೃಪತುಂಗನು ಆ ಸರಸ್ವತಿಯನ್ನು ಪ್ರಾರ್ಥಿಸಿದರೆ ಕವಿ ನಾಗಚಂದ್ರನು ಆಕೆಯನ್ನು '**ವಿದ್ಯಾನಟಿ**' ಎಂದು ಭಾವಿಸಿ ಬೇಡಿರುವ ಬಗೆಯಿದು:—

ಪರಮಬ್ರಹ್ಮ ಶರೀರಪುಷ್ಟಿ ಜನತಾಂತರ್ದೃಷ್ಟಿ ಕೈವಲ್ಯ ಬೋ
ಧರಮಾಮೌಕ್ತಿಕಹಾರಯಷ್ಟಿ ಕವಿತಾವಲ್ಲೀ ಸುಧಾವೃಷ್ಟಿ ಸ।
ರ್ವರಸೋತ್ಪಾದ ನವೀನಸೃಷ್ಟಿ ಬುಧಹರ್ಷಾಕೃಷ್ಟಿ ಸರ್ವಾಂಗ ಸುಂ
ದರಿ ವಿದ್ಯಾನಟಿ ನಾಟಕಂ ನಲಿಗೆ ಮತ್ಕಾವ್ಯಸ್ಥಲೀ ರಂಗದೊಳ್ ॥

ರಾ. ಚ. ಚ. ಪು. 1—6.

ಚಿರಂದೇವಿಯೂ, ವಿದ್ಯಾನಟಿಯೂ ಆದ **ಸರಸ್ವತಿಯ ಆರಾಧಕರಾದ ಕವಿಗಳು ಶೀಲದಲ್ಲಿ ಶುಚಿಯನ್ನೂ, ಚಾರಿತ್ರದಲ್ಲಿ ಸತ್ಯಶುದ್ಧತೆಯನ್ನೂ ಹೊಂದಿರ ಬೇಕಾದುದು ಅತ್ಯಗತ್ಯ.** ಹಾಗಿದ್ದರೆ ಮಾತ್ರ ಅವರು ಸತ್ಪುರುಷರಾಗುವರು. ಆಗ್ಗೆ ಅವರ ಕೃತಿ ಸತ್ಪುರುಷರಿಗೆ ಬೇಕಾದ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನು ನೀಡಬಲ್ಲುದು. ಅಲ್ಲದೆ ಅವರ ನೂತನ ರಸಾನುಭವದ ನಿಜಾರ್ಥವನ್ನೊಳಗೊಂಡು ಕಾವ್ಯವು ಒಂದು 'ನವೀನ ಸೃಷ್ಟಿ' ಎಂಬ ಹೆಸರಿಗೆ ಅರ್ಹ ವಾಗುವುದು. ಅವರ ಕವಿತೋಕ್ತಿಗಳು ಇನ್ನೆಲ್ಲೂ ಕಾಣಲಾಗದ ಅಪೂರ್ವ ಚಾತುರ್ಯದ ಗಣಿಗಳಾಗುವುವು. ನವರಸರುಚಿರೆಯೂ ಅನನ್ಯಪರತಂತ್ರೆಯೂ ಆದ ಭಾರತಿಗೆ ಅವು ಪ್ರಿಯವಾಗುವುವು. ಅನ್ಯಕವಿಗಳ ಅರ್ಥ ಅನ್ಯರದು, ತನ್ನದಲ್ಲ. ಅದಕ್ಕೆ ಕೈಹಾಕದಿದ್ದರೆ ಮಾತ್ರ ಸತ್ಕವಿಯ ಕೃತಿ ಕಿರಿದಾದರೂ ಹಿರಿದೆನ್ನಿಸಿಕೊಳ್ಳು ತ್ತದೆ ಎಂದು ಹೇಳಿ ಸತ್ಕವಿಯಾದವನು ಸತ್ಪುರುಷನಾಗಬೇಕಾದುದರ ಆವಶ್ಯಕತೆ ಯನ್ನು ಷಡಕ್ಷರದೇವನು ತಿಳಿಸಿದ್ದಾನೆ:

ಕಿರಿಯ ಕೃತಿ ಪಿರಿದೆನಿಕ್ಕುಂ
ಪೆರರರ್ಥಕೆ ಕೈದುಡುಂಕದಿರೆ ಸತ್ಕವಿಗಂ।
ಕಿರಿಯ ಸಿರಿ ಪಿರಿದೆನಿಕ್ಕುಂ
ಪೆರರರ್ಥಕೆ ಕೈದುಡುಂಕದಿರೆ ಮನುಜಂಗಂ॥ ರಾ. ವಿ. 1—32.

ಕವಿಗಿರಬೇಕಾದ ಗುಣ ಈ ವೈಶಿಷ್ಟ್ಯ. ಅದಿಲ್ಲದವನು ಕವಿ ಎನಿಸಿಕೊಳ್ಳಲಾರ ಎಂಬುದನ್ನು ಕವಿ ನಾಗಚಂದ್ರ ಹೀಗೆ ವರ್ಣಿಸಿದ್ದಾನೆ:—

ಪೆಜರ ನುಡಿ ಪೆಜರ ಮಾರ್ಗಂ
ಪೆಜರರ್ಥಂ ಪೆಜರ ದೇಸಿ ಪೆಜರೋಜೆಯೆನಲ್ ।
ಪೆಜರ ಬಟಿಸಂದು ತನ್ನಂ
ಮೆಜಿವಂ ಕವಿಯಲ್ಲವಾಟಕಾರರ ಜೋಹಂ॥ ಮ. ಪ್ರ. 1—32.

ಸತ್ಕವಿಯ ಕೃತಿಯಲ್ಲಿ ಬಗೆ, ಬಂಧ, ಕಾಂತಿ, ಅರ್ಥವ್ಯಕ್ತಿ, ಶ್ಲೇಷ, ಮಾರ್ಗ, ಭಾವ ಹಾಗೂ ರಸಗಳು ಹೇಗಿದ್ದರೆ ಆ ಕೃತಿ ಆಶ್ಚರ್ಯವನ್ನುಂಟುಮಾಡಬಲ್ಲುದು; ಮನೋಹರ ವಾಗಿರಬಲ್ಲುದು ಎಂಬುದನ್ನು ಆತನೆ ರಮ್ಯವಾದ ಈ ನಿರೂಪಣೆಯಿಂದ ಮನಗಾಣಿ ಸಿದ್ದಾನೆ:—

ಬಗೆ ಚೇತೋಬಂಧು ಬಂಧಂ ಶ್ರವಣಸಹಚರಂ ಕಾಂತಿ ಕಾಂತಾಕಟಾಕ್ಷಾ
ಸುಗಮರ್ಥವ್ಯಕ್ತಿ ವಾಣೀಮಣಿಮುಕುರಂ ಶ್ಲೇಷಮಕ್ಲಿಷ್ಟಮರ್ಥ್ಯಂ ।
ಸುಗಮಂ ಭಾವಂ ಪ್ರಸನ್ನಂ ರಸಮನವಧಿ ಮಾಧುರ್ಯಮಾಶ್ಚರ್ಯಮೆಂದೀ
ಜಗಮೆಲ್ಲಂ ಮೆಚ್ಚೆ ಪೇಳ್ವಂ ಚತುರಕವಿಜನಾಸ್ಥಾನ ರತ್ನಪ್ರದೀಪಂ ॥

ಮ. ಪು. 1—43.

ಫುಲ್ಲಶರಂ ಬಸಂತದ ಪುಗಿಲ್ ನೆಱೆದಿಂಗಳ ತಣ್ಪಿಸಿಲ್ಮಗು
ಳ್ಮಲ್ಲಿಗೆ ಬಂದ ಮಾವಲೆವ ತೆಂಕಣಗಾಳಿ ವಿಪಂಚಿಯಿಂಚರಂ
ನಲ್ಲಳ ಲಲ್ಲೆ ಕೋಗಿಲೆಯ ಬಗ್ಗಣೆ ತುಂಬಿಯ ಗೇಯಮೆಂಬಿನಂ
ಬಲ್ಲವರಂ ಮನಂಗೊಳಿಸುಗುಂ ಕೃತಿ ಸತ್ಕೃತಿ ನಾಗಚಂದ್ರನಾ

ಮ. ಪು. 1—44.

ಇಂಥ ಸತ್ಕೃತಿಯ ಸವಿ, ಸಾರ, ಸೌಖ್ಯಗಳ ಸ್ವರೂಪವನ್ನು ಚಿತ್ರಿಸುವ ಹಂಪೆಯ ಹರೀಶ್ವರನು :—

ಕೇಳಲೊಡಂ ಕಿವಿ ಸವಿಯೊಳ
ಗಾಳದೊಡಂ, ತನ್ಮನಂ ಮುಳುಂಗದೊಡಂ, ಸೌ ।
ಖ್ಯಾಳಂಬಿಯೆನಿಪ ಚಿತ್ತಂ
ಲೀಲೆಯೊಳವಗಾಹವಿರದೊಡದು ಸತ್ಕೃತಿಯೇ ? ॥ ಗಿ. ಕ. 1.21.

ಎಂದಿದ್ದಾನೆ.

ಸರ್ವಾಂಗಸುಂದರವೂ ನಿಸರ್ಗಸುಭಗವೂ ಆದ ಸಲ್ಲಲಿತ ಕವಿತ್ವವೆ ಸತ್ಕವಿತ್ವ. ಅದು ತಾನಾಗಿ ಲಭಿಸಬೇಕೇ ಹೊರತು ಶಾಸ್ತ್ರಬಲದಿಂದ ಅದನ್ನು ಪಡೆಯಲು ಸಾಧ್ಯವಿಲ್ಲ. ದೈವಾನುಗ್ರಹವಿಲ್ಲದೆ ಅದು ಲಭಿಸದೆಂಬುದು ಕನ್ನಡ ಕವೀಶ್ವರರೆಲ್ಲರ ಮತ. ಭಕ್ತಕವಿ ಕುಮಾರವ್ಯಾಸನು ಕಾವ್ಯದ ಈ ದೈವಮೂಲವನ್ನು ಕೃತಜ್ಞತೆಯಿಂದ ಕೊಂಡಾಡಿರುವುದಕ್ಕೆ—

'ವೀರ ನಾರಾಯಣನೆ ಕವಿ, ಲಿಪಿ
ಕಾರ ಕುವರವ್ಯಾಸ.'

ಎಂಬೀ ಆತನ ನುಡಿಯೆ ಸಾಕ್ಷಿ. ಹೀಗೆ ಅನುಗ್ರಹಕ್ಕೆ ಪಾತ್ರರಾದ ಕವಿಗಳೆ ಸುಕೃತಶಾಲಿಗಳು. ಅವರ ಮೂಲಕ ಪುಣ್ಯವಶದಿಂದ ಜಗತ್ತಿಗೆ ದೊರೆತ ಕೃತಿಗಳೇ ಸತ್ಕೃತಿಗಳು. ಅಪರ ಕಾವ್ಯರೂಪಗಳು ಈ ಮೂಲಸ್ವರೂಪಕ್ಕನುಗುಣವಾದುವು. ಆ ಕಾರಣವೆ ನಾರಣಪ್ಪನು ಹೇಳುವಂತೆ ಆತನ ಕೃತಿ—

ಚಾರು ಕವಿತೆಯ ಬಳಕೆಯಲ್ಲ, ವಿ
ಚಾರಿಸುವಡಳವಲ್ಲ

'ಕಲೆಗಾಗಿ ಕಲೆ' ಅಥವಾ 'ಕವಿತ್ವಕ್ಕಾಗಿ ಕವಿತ್ವ' ಎನ್ನುವವರಿಗೆ ಅದು ಸಲ್ಲದು ಎಂಬ ಉತ್ತರವನ್ನೂ ಇಲ್ಲಿ ಕಾಣಬಹುದು. ಬುದ್ಧಿಶ್ರಮದಿಂದ ಪಡೆದ ಕವಿತಾಪರಿಶ್ರಮಕ್ಕೂ ಭಕ್ತಿ ಭಾವಕ್ಕೊಲಿದ ಭಗವತ್ಕೃಪಾದತ್ತ ಕವಿತಾಶಕ್ತಿಗೂ ಎಲ್ಲಿಗೆಲ್ಲಿಗೆ ಸಂಬಂಧ! ಅವುಗಳ ರಚನಾಮಾರ್ಗಕ್ಕೂ ಅವುಗಳಲ್ಲಿರುವ ಉದ್ದೇಶಗಳಿಗೂ ಅಷ್ಟೇ ಸಂಬಂಧ!

ಕೇವಲ ಶಾಸ್ತ್ರಪ್ರಜ್ಞನಾದ ಮಹಾಕವಿಯ ಯಶಸ್ಸಿಗಿಂತಲೂ ಸತ್ಕವಿಯ ಕೀರ್ತಿಯೇ ಶಾಶ್ವತವಾದುದು. ' ಆ ಕಾರಣ ಆತನಿಗೆ ಸಮಾನನಾದವನು ಮತ್ತೊಬ್ಬನಿಲ್ಲ. ಹೇಗೆಂದರೆ :—

ಭುವನದೆ ಭೋಜರಾಜನ ಮಹಾಸಭೆಯೊಳ್ಬಹುಶಾಸ್ತ್ರಕೋವಿದ
ರ್ಕವಿ ಸಲೆ ಪೊಣ್ಮೆ ಪಾಡುವವರೇನಿರರೇ ತೆಗೆ ಕಾಳಿದಾಸ ಮು |
ಖ್ಯ ವಿವಿಧ ಸತ್ಕವೀಂದ್ರರ ಜಸಂ ಬಿಡದಿನ್ನುಮಿರುತ್ತೆ ತೋರ್ಪವೋ
ಲವ' ಜಸಂ ವಿರಾಜಿಪುದೆ ಸತ್ಕವಿಯೊಳ್ಸರಿವರ್ಪನಾವನೋ ? ||

ರಾ. ವಿ. 1. 28.

ಕನ್ನಡ ಸಾಹಿತ್ಯದಲ್ಲಿ ಸತ್ಕವೀಶ್ವರರೆನಿಸಿಕೊಂಡ ಪಂಪ, ರನ್ನ, ಹಂಪೆಯ ಹರೀಶ್ವರ, ರಾಘವಾಂಕ, ಕುಮಾರವ್ಯಾಸರೇ ಮೊದಲಾದವರು ಶಾಶ್ವತಕೀರ್ತಿಯನ್ನು ಗಳಿಸಿದವರು. ಅವರ ಕೀರ್ತಿಗೆ ಅವರನುಸರಿಸಿದ ಕವಿತಾಮಾರ್ಗವು ಎಷ್ಟರಮಟ್ಟಿಗೆ ಕಾರಣವಾದುವೋ ಅವರು ಆರಿಸಿಕೊಂಡ ಕಥಾವಸ್ತು ಹಾಗೂ ಉದ್ದೇಶಗಳೂ ಅಷ್ಟೇ ಕಾರಣವಾದುವು. ರೀತಿ ಮತ್ತು ರಸಪ್ರಧಾನವಾದ ಕಾವ್ಯದ ವಾಗ್ವಿಧಾನವನ್ನು ಕವಿತಾಮಾರ್ಗವೆಂದು ಕರೆದರೆ ಅದರ ವಸ್ತು ಹಾಗು ಉದ್ದೇಶಪ್ರಧಾನವಾದ ತತ್ತ್ವ ಅಥವಾ ಜೀವನದೃಷ್ಟಿಯನ್ನು ಕಾವ್ಯಮಾರ್ಗವೆಂದು ಕರೆಯಬಹುದು. ಕಾವ್ಯ-ವಸ್ತುವಿನಿಂದ ಅದರ ರಸ ರೀತಿಗಳನ್ನು ಬೇರ್ಪಡಿಸಲಾಗದಿದ್ದರೂ ವಿವೇಚನೆಗಾಗಿ ಬೇರೆ ಬೇರೆ ಮಾಡಿ ಆಲೋಚಿಸಬಹುದು. ಯಾವ ಒಂದು ವಸ್ತುವೂ ಉದ್ದೇಶವೂ ಇಲ್ಲದ ರಸ ರೀತಿಗಳಿಲ್ಲಿಯೂ ಸ್ವತಂತ್ರವಾಗಿರಲು ಸಾಧ್ಯವೂ ಇಲ್ಲ. ಕವಿತಾಪ್ರೇರಣೆಯನ್ನು ಯಾವುದಕ್ಕೆ ಸಲ್ಲಿಸಬೇಕೆಂಬ ಪ್ರಶ್ನೆಗೆ ಸತ್ಕವಿಗಳು ಕೊಟ್ಟಿರುವ ಉತ್ತರವೇ ಅವರ ಕಾವ್ಯಮಾರ್ಗವನ್ನೂ ಅದರ ಗುರಿಯನ್ನೂ ಸ್ಪಷ್ಟಪಡಿಸಿರುತ್ತದೆ. ಹೇಗೆಂದರೆ :

ಕವಿ ಭಾಳೇಕ್ಷಣ ಜನ್ನ ನಿನ್ನ ಕವಿತಾಪ್ರೋತ್ತುಂಗಸಂಪತ್ತಿ ಮೇ
ರುವಿನಂತಿರ್ದಪುದಿಂದ್ರನಂ ಮಱೆಯಿಸಲ್ ಸಾಲ್ದಪ್ಪುದೀ ನಿನ್ನ ಭ
ವ್ಯವಿಳಾಸಂ **ಕೃತಿಮಾರ್ಗ**ಪಾಂಡುಕಶಿಲಾಪಟ್ಟಾಗ್ರದೊಳ್ ವಾಕ್ಸುಧಾ
ಸವನಂ ಶ್ರೀ ಮದನಂತನಾಥಚರಿತಕ್ಕಿಂಬಾಗೆ ಸಂಭಾವಿಸಾ ||

ಎಂಬ ವಿನೇಯಜನರ ಈ ಕೋರಿಕೆಯಲ್ಲಿ ವಾಕ್ಸುಧಾಪ್ರೇರಣೆಯಾದ ಕವಿತಾ ಪ್ರಭಾವ, ಕಥಾನಾಯಕನನ್ನೊಳಗೊಂಡ ಕಾವ್ಯವಸ್ತು ಹಾಗೂ ಕಾವ್ಯಮಾರ್ಗ-

ಈ ಮೂರೂ ಬೇರೆ ಬೇರೆಯಾಗಿಯೇ ನಿರೂಪಿತವಾಗಿರುವುದನ್ನು ಗಮನಿಸಬಹುದಾಗಿದೆ.

ಕೇವಲ ಕವಿಯಾದವನು ರಸಾವೇಶವನ್ನು ಹೊಂದಿ ಅಸ್ಪಷ್ಟವಾಗಿರಬಹುದು. ತತ್ತ್ವಜ್ಞಾನಿಯಾದ ಸತ್ಕವಿಯಾದರೊ ತಿಳಿಯಾಗಿ, ನಿರ್ಣಯವಾಗಿ, ನಿಷ್ಕರ್ಷವಾಗಿ ರಸನಿರೂಪಣ ಮಾಡಬಲ್ಲನು–ರಸನಿರೂಪಣಸಮರ್ಥನನ್ನೇ ಕವಿಯೆನ್ನುವುದು–ಎಂಬುದನ್ನು ಇಲ್ಲಿ ನೆನಪಿನಲ್ಲಿಟ್ಟುಕೊಳ್ಳುವುದೊಳ್ಳಿತು.

"ಬೆಳಗುವೆನಿಲ್ಲ ಲೌಕಿಕಮನಲ್ಲಿ ಜಿನಾಗಮಮಂ" ಎಂದು ಹೇಳಿದ ಕವಿ ಪಂಪನು ಕಾವ್ಯಮಾರ್ಗಗಳೆರಡನ್ನು ಎತ್ತಿಹಿಡಿದಿದ್ದಾನೆ. ಲೌಕಿಕ ಒಂದು, ಆಗಮಿಕ ಮತ್ತೊಂದು. ಅವುಗಳೆರಡೂ ಆತನ ಲೌಕಿಕ ಮತ್ತು ಸಾಮಯಿಕ ವಿವೇಕದ ಅಭಿವ್ಯಕ್ತಿಗೆ ಆವಶ್ಯಕವಾಗಿದ್ದವು. ಕಾವ್ಯಧರ್ಮವಾದರೊ ಈ ಎರಡು ಕಾವ್ಯಮಾರ್ಗಗಳಿಗೂ ಉಭಯಸಾಮಾನ್ಯವಾದ ಧರ್ಮ. "ಕವಿಗಳೊಳಾಪುರಾಣಕವಿಪುಂಗವರೊಳ್ಳಿದರೀಗಳಿಲ್ಲ ಸತ್ಕವಿಗಳೆನಲ್ಕೆವೇಡ" ಎಂದು ಹೇಳಿದ ರನ್ನನೂ ಪಂಪನ ಈ ಕಾವ್ಯಮಾರ್ಗಗಳೆರಡನ್ನೂ ಅನುಸರಿಸಿದ್ದಾನೆ. ಆದರೂ ತನ್ನ ಕೃತಿರತ್ನಗಳಲ್ಲಿ ರತ್ನತ್ರಯವೆನಿಸಿದ ಪರಶುರಾಮಚರಿತೆ, ಚಕ್ರೇಶ್ವರಚರಿತೆ, ಅಜಿತತೀರ್ಥೇಶ್ವರಚರಿತೆಗಳಲ್ಲಿಯೇ ರನ್ನನಿಗೆ ಅಭಿಮಾನ; ಗದಾಯುದ್ಧದಲ್ಲಲ್ಲ. ತಾನು ಸತ್ಕವಿಯೆಂದು ಆತ ಭಾವಿಸಿದ್ದೆ ಅದಕ್ಕೆ ಕಾರಣವೆಂದು ತೋರುತ್ತದೆ. ಪಂಪ ರನ್ನರಿಬ್ಬರೂ ಆತ್ಮಶ್ರೇಯಸ್ಸಿನ ಮಹತ್ಸಾಧನವಾದ ಪ್ರತಿಭೆಯನ್ನು ಪಾವನಗೊಳಿಸಿದವರು. ಕವಿತೆಯಲ್ಲಿ ಆಶಿಸುವ ಫಲಗಳನ್ನು ಕುರಿತು ಪಂಪನು ವ್ಯಕ್ತಪಡಿಸಿರುವ ಅಭಿಪ್ರಾಯಗಳಿಂದಲೆ ಆತನ ಕಾವ್ಯಮಾರ್ಗದ ಗುರಿಯನ್ನು ಕಾಣಬಹುದು.

> ಕವಿತೆಯೊಳಾಸೆಗೆಯ್ವ ಫಲಮಾವುದೊ ಪೂಜೆ ನೆಗಳ್ತೆ ಲಾಭಮೆಂ
> ಬಿವೆ ವಲಮಿಂಪ್ರಪೂಜೆ ಭುವನಸ್ತುತಮಪ್ಪ ನೆಗಳ್ತೆ ಮುಕ್ತಿ ಸಂ।
> ಭವಿಸುವ ಲಾಭಮೆಂಬಿವೆ ಜಿನೇಂದ್ರ ಗುಣಸ್ತುತಿಯಿಂದೆ ತಾಮೆ ಸಾ
> ರವೆ ಪೆಱರೀವುದೇಂ ಪೆಱರ ಮಾಡುವುದೇಂ ಪೆಱರಿಂದವಪ್ಪುದೇಂ ॥

ಆ. ಪು. 1—36

ಕಾವ್ಯನಿರ್ಮಿತಿ ಪುಣ್ಯನಿಬಂಧನ. ಅದನ್ನು ಮೋಕ್ಷಲಕ್ಷ್ಮಿಗೆ ಮಾರಿ ಜನ್ಮವನ್ನು ಕವಿ ಸಾರ್ಥಕಮಾಡಿಕೊಳ್ಳಬೇಕು ಎಂಬ ಭಾವನೆ ಪಂಪನಿಂದ ಮೊದಲಾದದ್ದು ಆ ಅನಂತರವೂ ಮುಂದುವರಿಯಿತು. ಮೊದಲು ಇಹಪರಗಳೆರಡರ ಗುರಿಯಿಂದ ಹೊರಟ ಜೈನಕವಿಗಳ ಕಾವ್ಯಮಾರ್ಗ ಅನವಧಿಬೋಧಸಾಧನವೆನಿಸುವ ಜಿನೇಂದ್ರ ಮಹಾನುಭಾವವರ್ಣನದಲ್ಲಿಯೇ ಬಲ್ಮೆಯನ್ನು ಮೆರೆಯಬೇಕೆಂಬ ದೃಢಸಂಕಲ್ಪದಲ್ಲಿ ನೆಲಸಿತು. ಹೀಗೆ ಕಾವ್ಯರಚನೆ ಮಾಡಿದ ಕವಿಗೆ ಐಹಿಕ ಆಮುತ್ರಿಕಗಳೆರಡೂ ಆನುಷಂಗಿಕವೋ ಎಂಬಂತೆ ನಿಶ್ರೇಯಸ ಶ್ರೀಪದ ಕೈಗೂಡುವುದೆಂಬ ಭಾವನೆ ಬೇರೂರಿತು. ನಾಗಚಂದ್ರ

ಜನ್ನರಿಬ್ಬರೂ ತಮ್ಮ ಲೌಕಿಕ ಕಾವ್ಯಗಳಲ್ಲಿಯೂ ಜೈನಧರ್ಮದ ಪ್ರಭಾವವನ್ನೇ ಎತ್ತಿಹಿಡಿಯಲು ಪ್ರಯತ್ನಿಸಿರುವುದನ್ನಿಲ್ಲಿ ನೆನೆಯಬಹುದು. ಕಾವ್ಯಮಾರ್ಗದಲ್ಲಿ ಕಥೆ – ವರ್ಣನೆಗಳೂ ಅಳವಡುವುದರಿಂದ ಅವುಗಳ ಬಗೆಗೂ ಅವರ ದೃಷ್ಟಿ ಸ್ಪಷ್ಟಗೊಂಡಿದೆ.

ವೀರಶೈವ ಸತ್ಕವೀಶ್ವರರೂ ತಮ್ಮ ಕಾವ್ಯಮಾರ್ಗದ ಬಗೆಗೆ ಖಚಿತವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ರಸಯೊಳ್ ರಸವತ್ಕವಿತೆಯ
ನುಸಿರಲ್ಪಡೆದಸಮನಯನನಂ ಪೊಗಳದೆ ಮಾ।
ನಿಸರಂ ಸುರರಂ ಪೊಗಳ್ವುದು
ಕಸವರಮಂ ಕಳೆದು ಕಸವನಾಂತವೊಲಕ್ಕುಂ॥ ರಾ. ವಿ. 1—21

ಧರೆಯೊಳ್ಮೇಣ್ಪುಟ್ಟಿ ಪುಟ್ಟುತ್ತಿರುಳ್ವ ನರರ ಮೇಲುರ್ಬಿ ಕಬ್ಬಂಗಳಂ ಬಿ
ತ್ತರಿಸುತ್ತಂ ಸಪ್ರಯಾಸಂ ಕೆಲಕೆಲರಕಟಾ ಕಬ್ಬಿಗರ್ಕೆಟ್ಟು ಪೋದರ್।
ಹರಿದೇವಂ ದೇವದೇವೋತ್ತಮನ ಶರಣರಂ ಪಾಡಿ ಕೈವಲ್ಯಲಕ್ಷ್ಮೀ
ವರನಾದಂ ಮತ್ತವಂಗತ್ಯಧಿಕ ಶಿವಕವೀಂದ್ರಂಗದಾರ್ಸಾರ್ಟಿಯಪ್ಪರ್॥
ರಾ. ವಿ. 1—19

ಹೀಗೆ ಶಿವನನ್ನು ಇಲ್ಲವೆ ಶಿವಶರಣರನ್ನು ಕೊಂಡಾಡಿದ ಕವಿಗಳ ಜನ್ಮವೇ ಸಫಲವೆಂದು ಅವರು ಭಾವಿಸಿದ್ದಾರೆ. ಕಥೆ ವರ್ಣನೆಗಳಿಗಿರಬೇಕಾದ ನೈಜಸಂಬಂಧದ ಬಗೆಗೆ ಸತ್ಕವಿ ರಾಘವಾಂಕನು ನೀಡಿರುವ ಅಭಿಪ್ರಾಯ ಅಮೂಲ್ಯವಾದುದು. ಮಹಾಕಾವ್ಯ ಹಾಗೂ ಸತ್ಕಾವ್ಯ ಮಾರ್ಗಗಳಿಗಿರುವ ಸೂಕ್ಷ್ಮಭೇದಗಳ ಸೂಚನೆಯನ್ನು ನಮಗೆ ಮನಮುಟ್ಟುವಂತೆ ನಿರೂಪಿಸಿದ್ದಾನೆ. ಮಹಾಕಾವ್ಯ ಅಷ್ಟಾದಶವರ್ಣನೆಗಳಿಂದಲಂಕೃತವಾಗಿಯೂ ಅಸಂಕ್ಷಿಪ್ತವಾಗಿಯೂ ಇರಬೇಕು. ಅದರಲ್ಲಿ ಕಥೆಗಿಂತ ವರ್ಣನೆಗೇ ಪ್ರಾಧಾನ್ಯವಿರಬೇಕೆಂಬುದನ್ನು ಆತನು ಒಪ್ಪುವುದಿಲ್ಲ. ರಸಭರಿತವಾದ ಪುಣ್ಯಕಥೆಗೆ ಕಾವ್ಯವನ್ನು ರಚಿಸಲು ಸಮರ್ಥನಾದ ಕವಿಗೆ ಅಷ್ಟಾದಶಸ್ಥಲಗಳ ವರ್ಣನೆಗಳೇಕೆ? ಎಂದು ಪ್ರಶ್ನಿಸಿದ್ದಾನೆ. ಹಾಗೆ ವರ್ಣಿಸಿದ್ದೇ ಆದರೆ ಅಮೃತದಲ್ಲಿ ವಿಷ ಬೆರಸಿದಂತೆ. ಎಲ್ಲರಿಗೂ ಅರಿಯಲು ಬಾರದ ಅಂತಹ ವರ್ಣನೆಗಳನ್ನುಳ್ಳ ಮಹಾಕಾವ್ಯ ನೆಟ್ಟಕಲ್ಲಿನಂತೆ. ಅದು ಸುಳಿವ ಶಾಸನದಂತಿರುವ ಸತ್ಕೃತಿಯಾಗಲಾರದು. ನಾಯಕನ ಯಥಾರ್ಥಜೀವನ ಹೇಗೇ ಇರಲಿ ಆತನನ್ನು ನಾಯಕನನ್ನಾಗಿ ಮಾಡಿಕೊಂಡ ಮೇಲೆ ನಾಯಕನಲ್ಲಿರಬೇಕಾದ ಎಲ್ಲ ಗುಣಗಳೂ ಆತನಲ್ಲಿದ್ದೇ ತೀರಬೇಕೆಂಬ ಆಶಯದಿಂದ.

"....ಕವಿ ಕಾವ್ಯದೊಳ್ ಪೊಗಳಬೇಕೆಂಬ
ಹಾದಿಯಿಂ ಪೊಗಳ್ದಡೀಶ್ವರನಾಣೆ."

ಎಂದು ಆತ ಪ್ರತಿಜ್ಞೆ ತೊಟ್ಟಿದ್ದಾನೆ. ಸ್ವರೂಪತಃ ಸುಂದರವೂ, ರಸಮಯವೂ ಪುಣ್ಯಮಯವೂ ಆದ ಕಥೆ ಹೇಗಿರುವುದೋ ಹಾಗೆಯೇ ಅದರ ವರ್ಣನೆಯೂ ಇರಬೇಕು. ಸತ್ಕಥೆ ಪರುಷಮಣಿಯಿದ್ದಂತೆ. ಅದರ ಅಲಂಕರಣಕಾರ್ಯಕ್ಕೆ ಬೇಕಾದ ಸುವರ್ಣವನ್ನೂ ಅದೇ ಒದಗಿಸಿಕೊಡುತ್ತದೆ. ಆ ಕಾರಣ ಕಥಾವಸ್ತುವಿನಿಂದ ಅನ್ಯವಾದ ವರ್ಣನೆಗಾಗಿ ತೊಳಲಾಡುವುದು ಸರಿಯಲ್ಲವೆಂದು ಆತನು ಹೇಳಿದ್ದಾನೆಯೇ ಹೊರತು ವರ್ಣನೆಯೇ ಬೇಡ ಎಂದಿಲ್ಲ. ಸಂಪ್ರದಾಯಪಾಲನೆಗಾಗಿ ವರ್ಣನೆಯಿಂದ ಗಾತ್ರವನ್ನೂ ಬೆಲೆಯನ್ನೂ ಕೊಡಬೇಕೆಂದು ಕಥೆಯ ಸತ್ಯಕ್ಕೆ ದೂರವಾಗುವುದು ಸರಿಯಲ್ಲ. ಯಥಾರ್ಥತೆ ಇರಬೇಕೆಂಬುದನ್ನು ಕವಿ ರಾಘವಾಂಕನು ನಿರೂಪಿಸುವ ಬಗೆಯಿದು :—

> ವರಸುಧಾರೋಗಣಿಗೆ ಮಾಧುರದ ಹಂಗೇಕೆ
> ತರಣಿಯೋಲಗಕೆ ಸೊಡರಂ ಪಿಡಿವ ತೊಡಕೇಕೆ
> ಪರುಷದಾಭರಣಗೆಲಸಕ್ಕೆ ಮಿಸುನಿಯನರಸಿ ತೊಳಲುವಾಯಸವೇತಕೆ |
> ನೆರೆದ ಸೊಗಸಿನ ಸುಗ್ಗಿ ರಸದವಧು ಪುಣ್ಯದಾ
> ಗರವೆನಿಪ ಸಿದ್ಧರಾಮನ ಕಥೆಗೆ ಕಾವ್ಯಮಂ
> ವಿರಚಿಸುವಡಷ್ಟಾದಶಸ್ಥಲವ ಪೊಗಳಲೇಕಗ್ಗದ ಸಮರ್ಥಕವಿಗೆ. ||

ಸಿ. ಪು. 1—4

> ಸಲ್ಲಲಿತವಹ ಪುಣ್ಯಕಾವ್ಯ ಕಥನದೊಳು ಮು
> ನ್ನಿಲ್ಲದುದ ನುಡಿದುಳ್ಳುದಂ ಪೂಳ್ದು ಹುಲ್ಲು ಹೊಲ
> ನೆಲ್ಲವಂ ಪೊಗಳಿ ಸುಧೆಯೊಳಗೆ ನಂಜಿಡುವಂತೆ ಮೇಳವಿಸಿ ಪೇಳೆ ನಾನು |
> ಬಲ್ಲಂತೆ ಮತ್ಯಾರ್ಥನುಸಾರದಿಂ ಶಿವಸಿದ್ಧ
> ವಲ್ಲಭನ ಮಹಿಮೆಯುಂ ಸರ್ವರರಿಯಲು ನಟ್ಟ
> ಕಲ್ಲೆನಿಸದಿಳೆಯೊಳಗೆ ಸುಳಿವ ಶಾಸನವೆನಿಸಿ ಪೇಳ್ವೆನೀ ಸತ್ಕೃತಿಯನು. ||

ಸಿ. ಪು. 1—5

ಕಥೆ–ವರ್ಣನೆಗಳ ವಿಶಿಷ್ಟ ಸಂಬಂಧದ ಈ ಒಳನೋಟವಲ್ಲಿ ಸತ್ಕವಿಯ ಯಥಾರ್ಥತಾ ದೃಷ್ಟಿ ಎದ್ದುಕಾಣುವುದು. ಕಾವ್ಯಕಥೆಯ ವರ್ಣನೆ ಸತ್ಯಕಥೆಯ ಯಥಾರ್ಥವರ್ಣನೆಯಾಗಿ ಆತ್ಮವಿಕಾಸ ಹಾಗೂ ಆತ್ಮಪ್ರಕಾಶಗಳ ರಸಕ್ರಿಯೆಯಾಗಬೇಕಲ್ಲದೆ ಕೇವಲ ವಿನೋದಕ್ಕಾಗಲಿ ವಿಲಾಸಕ್ಕಾಗಲಿ ಆದರೆ ಸತ್ಕವಿತೆಯೂ ಜಾಣ್ಮೆಯೂ ಹರಿದು ಹಂಚಿ ಹೋಗುವುದು. ಅಂಥ ಸ್ಥಿತಿಯನ್ನು ಕಂಡು ನೊಂದ ಸುರಂಗ ಕವಿಯ ಮನೋವ್ಯಥೆಯ ಚಿತ್ರವನ್ನಿಲ್ಲಿ ಕಾಣಬಹುದು.

> ಅರಿಯದೆ ಬಾಯ್ಗೆ ಬಂದ ಪರಿಯೊಳ್ನುಡಿದುರ್ಬುವನೊರ್ಬ ಕಬ್ಬಿಗಂ
> ಬರಿವೆ ಪೊದಳ್ದು ಮೆಚ್ಚಿ ತಲೆದೂಗುವನಂತವನೊರ್ವ ಜಾಣನಿಂ |

ತೊರೆವುದು ಮುರ್ಕನಾಂತೊರಸಿಕೊಂಬುದುಮಲ್ಲಕಟೆಂತು ವೀಕ್ಷಿಸಲ್
ನೆರೆ ಪರಿಯಾಯ್ತು ಸತ್ಕವಿತೆ ಜಾಣ್ಮೆಯು ಪೆಂಪವನೀತಳಾಗ್ರದೊಳ್ ||
—ತ್ರಿಷಷ್ಟಿಪುರಾತನ ವಿಲಾಸ 1—21.

'ಸತ್ಕವಿ' ಎಂಬ ಪದಕ್ಕೆ ವೀರಶೈವರು ಒಂದು ವಿಶಿಷ್ಟ ಸ್ಥಾನವನ್ನಿತ್ತಿದ್ದಾರೆ. ಕನ್ನಡ ಕವಿ ಶಿರೋಮಣಿಯಾದ ಭಕ್ತಿಕೋಶ ಹಂಪೆಯ ಹರೀಶ್ವರನೇ ವೀರಶೈವ ಸತ್ಕವಿ ಪರಂಪರೆಯ ಆಚಾರ್ಯ ಕವಿ. ಆತನನ್ನು ಅನುಸರಿಸಿ ಬಂದ ಮಿಕ್ಕೆಲ್ಲ ಕವಿಗಳೂ ತಮ್ಮನ್ನು ಸತ್ಕವಿಗಳೆಂದು ಕರೆದುಕೊಂಡಿದ್ದಾರೆ. ಧರ್ಮಬದ್ಧವಾದ ಜೀವನದ ಉದ್ಧಾರಕ್ಕೆ ಧರ್ಮಜ್ಞರಾದ ಕವಿಗಳು ಹಾಕಿದ ಜೀವನಾದರ್ಶವಾದರೋ ಮಹೋದಾತ್ತವಾದುದು. ಅಲ್ಲವೆ ಪ್ರತಿಭಾವಂತ ಸತ್ಕವಿಗಳೆನಿಸಿದ ಶರಣಕವಿಗಳನ್ನು ಬಹು-ಶಾಸ್ತ್ರ ಕೋವಿದರಾದ ಮಹಾಕವಿಗಳೆನಿಸಿಕೊಂಡವರೊಡನೆ ಹೋಲಿಸುವ ಗೋಜಿಗೆ ಹೋಗುವುದು ಸಾಧುವಲ್ಲ. ಏಕೆಂದರೆ ನಡೆ ನುಡಿಯಲ್ಲಿ ಅರಿತೆನೆಂಬ ಅರಿವಿನ ಸುಳಿವೂ ಇರದ ಅಂಥ ಶರಣಕವಿಗಳ ಜೀವಿತವೇ ಒಂದು ರಸಮಯವಾದ ಕಾವ್ಯವಾಗಿರುತ್ತದೆ. ಆತ್ಮಾಹಂಕಾರದಿಂದ ಮೆರೆದು ವಿನಯರಹಿತವಾದ ಆತ್ಮಶ್ಲಾಘನೆ ಮಾಡಿಕೊಳ್ಳುವ ಮಹಾ ಕವಿಗಳೊಡನೆ ಹೋಲಿಸುವುದರಿಂದ ಸಾಹಿತ್ಯವಿಮರ್ಶೆಗಾಗುವ ಅನುಚಿತವಿರಲಿ, ಆ ಸಾಹಿತ್ಯ ರೂಪಿಸಬೇಕಾದ ನಿರ್ಮಲ ಚಾರಿತ್ರಕ್ಕೇ ಅನುಚಿತವೆಸಗಿದಂತೆ. ಕಲಾದೃಷ್ಟಿಯಿಂದ ಸುಂದರನೆನಿಸುವ ಬಾಳು ಅಂತರಂಗದ ಭಾವ ನೈರ್ಮಲ್ಯದ ದೃಷ್ಟಿಯಿಂದಲೂ ಸುಂದರವೆನಿಸಬೇಕಾದುದು ಅನಿವಾರ್ಯ. ಜೀವನವೇ ಒಂದು ಕಲೆ. ಅದರ ಸೌಂದರ್ಯಕ್ಕಿಂತಲೂ ಸೌಂದರ್ಯವಿಲ್ಲ. ಆ ಕಲಾಮಯವಾದ ನಿರ್ಮಲ ಚಾರಿತ್ರ್ಯವನ್ನು ಬಿಟ್ಟ ಶುದ್ಧ ಸಾಹಿತ್ಯದ ಕಲ್ಪನೆ ಒಂದು ಬಿಸಿಲ್ಗುದುರೆ.

*ಕವಿ ಆರಾಧ್ಯದೇವನು ಹೇಳುವಂತೆ ಸತ್ಕಾವ್ಯವು ಚಿತ್ತೋಲ್ಲಾಸಮಯವಾದ ಈಶ್ವರಾರಾಧನೆ. ಭಕ್ತಿರಸವಿಲ್ಲದ ಐಹಿಕಪ್ರಧಾನವಾದ ಬಾಳಿಗೆ ಸತ್ಕಾವ್ಯವು ರುಚಿಸದೇ ಹೋಗಬಹುದು. ಆದರೆ ಅದರ ಹಿರಿಮೆಗೆ ಚ್ಯುತಿಯಿಲ್ಲ.

ನಿಜಗಬ್ಬದ ಬಗೆಗೆ ಸುರಂಗನು ಹೀಗೆಂದಿದ್ದಾನೆ:—

ಮೇದಿನಿಯೊಳ್ ವಿಯೋಗಿ ರಜನೀಶಮರೀಚಿಯ ನೊಲ್ಲದಿರ್ದೊಡೇ
ನಾದುದು ಭೇಕನಬ್ಧಿಯ ಗಭೀರತೆಯಂ ಮುಳಿದೊಲ್ಲದಿರ್ದೊಡೇ |
ನಾದುದು ಕೇಳ್ಸುರಂಗ ನಿಜಗಬ್ಬಮನುದ್ಧತನೊಲ್ಲದಿರ್ದೊಡೇ
ನಾದುಮು ಕಾಗೆ ಮೆಚ್ಚದೊಡೆ ಕೋಕಿಲನಾದದ ಪೆರ್ಮೆ ಮಾಣ್ಬುದೇ ||
ತ್ರಿ. ಪು. ವಿ. 1—20.

ಪ್ರತಿಯೊಂದು ಕಾವ್ಯವೂ ತನ್ನ ರಸಪರಿಣಾಮವನ್ನುಂಟುಮಾಡಬೇಕಾದರೆ

---

* ನೋಡಿ: Research Corner Series No. 2. The unknown pages in the History of Kannada Literature 1. Published by Research Corner, First Grade College, Tumkur.

ಓದುಗನಲ್ಲಿ ಸಹೃದಯತೆ ಅಗತ್ಯ. ಆತ ರಸಜ್ಞನಲ್ಲದೆ ಹೋದರೆ ಎಂತಹ ಅಮೋಘ ಕಾವ್ಯವೂ ಅಸಾರ್ಥಕವಾಗಿ ಬಿಡುತ್ತದೆ. ಕವಿ ಪಂಪನು ಹೇಳುವಂತೆ :—

ಕೋಗಿಲೆಯ ಸರವರಣ್ಯದೊ
ಳೇಗೆಯ್ದುದೊ ಮೂರ್ಖಜಡಜನಾರಣ್ಯದೊಳಿಂ ।
ಪೋಗಡಿಸಿದ ಕವಿಶಬ್ದಮು
ದೇಗೆಯ್ದುದರಣ್ಯರುದಿತಮದು ಬಗೆವಾಗಳ್ ॥ ಅ. ಪು. 1—23.

ಇದರಂತೆಯೇ ಸತ್ಕಾವ್ಯವೂ ತನ್ನ ಸತ್ಪರಿಣಾಮವನ್ನುಂಟುಮಾಡಬೇಕಾದರೆ ಓದುಗನಾದವನಲ್ಲಿ ರಸಿಕತೆಯ ಜೊತೆಗೆ ಸಚ್ಚಿದಾನಂದದೃಷ್ಟಿ, ಸಚ್ಚಾರಿತ್ರಪ್ರೇಮ, ಸದಾಚಾರ ಸಂಪನ್ನತೆ, ಸನ್ಮಾರ್ಗವರ್ತನೆ—ಇವೇ ಮೊದಲಾದ ಸದ್ಗುಣ ಸಂಪತ್ತು ಮೂಲಧನ ಸ್ವರೂಪವಾಗಿ ಆತ್ಮನಿಷ್ಠವಾಗಿರುವುದು ಅವಶ್ಯ. ಸಚ್ಚಿದಾನಂದ ಸ್ವರೂಪನಾದ ಭಗವಂತನ ಅಖಂಡರೂಪವನ್ನು ಸದ್ರೂಪ, ಚಿದ್ರೂಪ, ಆನಂದರೂಪವೆಂದು ಖಂಡದೃಷ್ಟಿಯಿಂದ ಬೇರೆ ಬೇರೆ ಮಾಡಿ ನೋಡುವುದರಿಂದ ನಮ್ಮ ಅಜ್ಞಾನವನ್ನು ಹೊರಗೆಡಹಿದಂತಾಗುತ್ತದೆ. ಪೂರ್ಣ ಸ್ವರೂಪನಿಗೆ ಅಪೂರ್ಣತೆಯನ್ನಾರೋಪಿಸುವುದು ಒಂದು ದೋಷ. ಅಂತೆಯೇ ಕಾವ್ಯದರ್ಶನದ ಅಖಂಡತೆಯನ್ನು ಮಾನ್ಯ ಮಾಡದಿರುವುದೂ ಒಂದು ದೋಷ. ಸಾರ್ವಕಾಲಿಕ, ಸಾರ್ವಲೌಕಿಕ ಹಾಗೂ ಸಾರ್ವಜನಿಕ ಮೌಲ್ಯವನ್ನುಳ್ಳ ಸಹಜ ದಿವ್ಯಜ್ಞಾನೋಕ್ತಿಮಾರ್ಗವಾದ ಸತ್ಕಾವ್ಯಗಳನ್ನು ಐಹಿಕವೂ ಕೃತಕವೂ ಆದ ಮಹಾ ಕಾವ್ಯಗಳೊಡನೆ ಹೋಲಿಸಿದಾಗ ಆ 'ರಸೋ ವೈ ಸಃ' ದೃಷ್ಟಿಯ ಆಧ್ಯಾತ್ಮಿಕ ರಸಪರಿಪೂರ್ಣತೆಯ ಮುಂದೆ ಈ ಲೌಕಿಕ ಕಾವ್ಯದ ನಿಲವು ಯಾವ ನಿಲವು? ಸತ್ಕಾವ್ಯದ ಪೂರ್ಣದೃಷ್ಟಿಯಲ್ಲಿ ಅದರ ರಸ, ಭಾವ, ಅಲಂಕಾರಾದಿಗಳೆಲ್ಲವೂ ಸ್ವರೂಪತಃ ಪೂರ್ಣವೆಂಬ ಅರಿವನ್ನು ಮಾಡಿಕೊಟ್ಟ ಸತ್ಕವಿಗಳು ಮಹಾಕವಿಗಳಿಗೆ ಎಂದೆಂದೂ ಮಾರ್ಗದರ್ಶಕರು.

ಸಚ್ಚಿದಾನಂದನಲ್ಲಿ ಯಾರ ಆತ್ಮವು ಮಿಂದು ಪವಿತ್ರವಾಗಿರಲು ಆಚರಣೆಯಲ್ಲಿ ಎಡೆಯುಂಟೋ ಅಂಥವರಿಗೆ ಎಂದರೆ, ಅರಿವು ಆಚರಣೆಗಳಲ್ಲಿ ಅಂತರವಿಲ್ಲದವರಿಗೆ ಸತ್ಕಾವ್ಯಗಳ ಮಹಿಮೆ ಮನದಟ್ಟಾಗುತ್ತದೆ. ಲೌಕಿಕದಲ್ಲಿ ಅಲೌಕಿಕವನ್ನು ಸಾಧಿಸಿದ, ಶೃಂಗಾರದಲ್ಲಿ ಭಕ್ತಿಯನ್ನು ಕಂಡ, ಸಾಮಾನ್ಯದಲ್ಲಿ ಅಸಾಮಾನ್ಯ ದೈವೀಭಾವವನ್ನು ಗುರುತಿಸಿದ, ಪದಾರ್ಥದಲ್ಲಿ ಪ್ರಸಾದದ ಪ್ರಸನ್ನತೆಯನ್ನನುಭವಿಸಿದ, ಜೀವನದಲ್ಲಿ ಶಿವನನ್ನು ಸಾಕ್ಷಾತ್ಕರಿಸಿದ ಸಂಸ್ಕೃತಿವಂತರಿಗೆ ಸತ್ಕಾವ್ಯಗಳು ಭವ್ಯವೂ ಸೇವ್ಯವೂ ಆದುವು. ಅಳಿಯದೆ ಉಳಿಯುವ 'ಸತ್'ನ ಮಹತ್ತು ಕೇವಲ ಮಹತ್ತಿನ ಮಹತ್ತಿಗಿಂತಲೂ ಮಿಗಿಲಾಗಿರುವುದು ಅದರ ಸತ್ಸ್ವರೂಪದ ನಿತ್ಯತೆಯಿಂದಲೆ. ಕಾವ್ಯದ 'ಆತ್ಮನಿಷ್ಠೆ'ಯನ್ನೂ 'ನಿತ್ಯತೆ'ಯನ್ನೂ ಉಳಿಸಿ ಬೆಳಸಿರುವ ಸತ್ಕವಿ ಪರಂಪರೆಯ ಕಾವ್ಯಮಾರ್ಗ ಕನ್ನಡ ಸಾಹಿತ್ಯದ ಆತ್ಮೋನ್ನತಿಯ ಪ್ರಗತಿಮಾರ್ಗ.

---

# ಆಧುನಿಕ ಅಸ್ಸಾಮಿ ಕಾವ್ಯ



**ಶ್ರೀ ಹೇಮ ಬರೂವ, ಎಂ.ಎ., ಎಂ.ಪಿ., ಹೊಸದಿಲ್ಲಿ.**

ಆಧುನಿಕ ಅಸ್ಸಾಮಿ ಸಾಹಿತ್ಯವು ಒಂದು ನವೋದಯದ ಇತಿಹಾಸವನ್ನು ಪ್ರತಿನಿಧೀಕರಿಸುತ್ತದೆ. ಭಾರತದ ಇತರ ಸಾಹಿತ್ಯಗಳೂ ಆಂಗ್ಲ ಸಾಹಿತ್ಯದಿಂದ ಸ್ಫೂರ್ತಿ ಪಡೆದಿವೆ. ಉರ್ದು ಮತ್ತು ಬಂಗಾಳಿ ಸಾಹಿತ್ಯಗಳ ಮೇಲಾದ ಆಂಗ್ಲ ಸಾಹಿತ್ಯದ ಪ್ರಭಾವವನ್ನು ಶ್ರೀಮಾನ್ ಲ್ಯಾಟೆಫ್ ಮತ್ತು ಪಿ. ಆರ್. ಸೇನ್ ವಿವರಿಸಿದ್ದಾರೆ. ೧೮೨೬ರಲ್ಲಿ ಯಂದಬೂ ಒಪ್ಪಂದವಾದ ಮೇಲೆ ಬ್ರಿಟಿಷ್ ಪ್ರಭುತ್ವವು ಭಾರತದಲ್ಲಿ ಪ್ರಬಲಗೊಂಡಂತೆ, ಅಸ್ಸಾಮಿ ಸಾಹಿತ್ಯದಲ್ಲಿ ಬದಲಾವಣೆಗಳಾಗತೊಡಗಿದವು. ಯಂದಬೂ ಒಪ್ಪಂದವು ರಾಜಕೀಯವಾಗಿ ಹಳೆಯ ಆಡಳಿತವನ್ನು ಮೂಲೆಗೊತ್ತಿದರೆ, ಆಂಗ್ಲ ವಿದ್ಯಾಭ್ಯಾಸವು ಬೌದ್ಧಿಕ ಬದಲಾವಣೆಯನ್ನುಂಟುಮಾಡಿತು.

ಆಂಗ್ಲ ವಿದ್ಯಾಭ್ಯಾಸಕ್ಕೂ, ಅಸ್ಸಾಮಿ ಸಾಹಿತ್ಯದ ನವೋದಯಕ್ಕೂ ಕಾರಣರಾದವರು ಅಮೆರಿಕದ ಬ್ಯಾಪ್ಟಿಷ್ಟ್ ಮಿಷನ್‌ದವರು ನವಗಾಂಗ್‌ದ ಶ್ರೀಮಾನ್ ಆತ್ಮಾರಾಮಶರ್ಮರು ಅನುವಾದಿಸಿದ ಬೈಬಲ್‌ನ್ನು ಬಂಗಾಳದಲ್ಲಿಯ ಸೀರಾಂಪುರದ ಬ್ಯಾಪ್ಟಿಷ್ಟ್ ಮಿಷನ್‌ನವರು ೧೮೧೮ರಲ್ಲಿ ಪ್ರಕಟಿಸಿದಂದಿನಿಂದ ಆಧುನಿಕ ಅಸ್ಸಾಮಿ ಸಾಹಿತ್ಯದ ಪ್ರಾರಂಭವಾಯಿತೆನ್ನಬಹುದು. ಆ ಕಾಲವು ಅಸ್ಸಾಮಿ ಭಾಷೆಗೆ ಹೋರಾಟದ ಸಮಯವಾಗಿದ್ದಿತು. ಇಂಗ್ಲೆಂಡಿನಲ್ಲಿ ಡೂಕ್ ಮರ್ಮಂಡಿಯ ಕಾಲದಲ್ಲಿ ಫ್ರೆಂಚ್ ಭಾಷೆಯು ಆಂಗ್ಲ-ಸ್ಯಾಕ್ಸನ್ ಭಾಷೆಯನ್ನು ಮೂಲೆಗೊತ್ತಿದಂತೆ, ಸರಕಾರದ ಕೃಪಾಕಟಾಕ್ಷ ಪಡೆದ ಬಂಗಾಳಿಯು ಅಸ್ಸಾಮಿಯನ್ನು ಸ್ಥಳೀಯ ಶಾಲಾ ಕಚೇರಿಗಳಿಂದ ಸ್ಥಾನಾಂತರಗೊಳಿಸಿ, ಅದರ ಸ್ಥಾನವನ್ನಾಕ್ರಮಿಸಿತು. ಜಾರಿಷ್ಟ್ ಸೈನ್ಯದಲ್ಲಿ ಕೊಸ್ಯಾಕ್ಸರು ತುಂಬಿಕೊಂಡಂತೆ ಬಂಗಾಳಿಗಳು ಅಸ್ಸಾಮದ ಕಚೇರಿಗಳಲ್ಲಿ

ನೆಲೆಗೊಂಡರು. ಅಸ್ಸಾಮಿ ಭಾಷೆಯು ಆಡಳಿತದಲ್ಲಿ, ವಿದ್ಯಾಸಂಸ್ಥೆಗಳಲ್ಲಿ ನ್ಯಾಯಬದ್ಧವಾದ ಸ್ಥಾನವೂ ದೊರೆಯದೆ ಪೂರ್ಣನಿರ್ಮೂಲಗೊಳಿಸಲ್ಪಟ್ಟಿತಲ್ಲದೆ, ಬಾಳಿ ಬೆಳೆಯುವ ಸಾಮರ್ಥ್ಯವನ್ನು ಕಳೆದುಕೊಂಡಿತು.

ಅಸ್ಸಾಮಿ ಭಾಷೆಯ ಪುನರುತ್ಥಾನವು ಅಮೇರಿಕದ ಬ್ಯಾಪ್ಟಿಷ್ಟ್ ಮಿಷನ್‌ನವರ ಕೈಯಿಂದಲೇ ಆಯಿತು. ಅವರು ಅದಕ್ಕೊಂದು ಹೊಸ ಜೀವವಿತ್ತರು. ತಮ್ಮ ವಿದ್ಯಾಸಂಸ್ಥೆಗಳಲ್ಲಿ ಅಸ್ಸಾಮಿಗೆ ನ್ಯಾಯಬದ್ಧವಾದ ಮಾನ್ಯತೆಯನ್ನು ದೊರಕಿಸಿ ಕೊಟ್ಟರು. ಹತ್ತಿಕ್ಕಲಾಗದ ಪರಿಸ್ಥಿತಿಯ ಒತ್ತಡದಿಂದಾಗಿ ಸರ್ ಜಾರ್ಜ್ ಕ್ಯಾಂಪ್‌ಬೆಲ್ಲರ ಸರಕಾರವು ಅಸ್ಸಾಮಿ ಭಾಷೆಗೆ ಆಡಳಿತದ ಮುದ್ರೆ ಕೊಡಲು ಇರುವ ಸಾಧ್ಯಾಸಾಧ್ಯತೆಗಳನ್ನು ವಿಚಾರಿಸತೊಡಗಿತು. ೧೮೫೩ರಲ್ಲಿ ಕಲ್ಕತ್ತ ಹೈಕೋರ್ಟ್ ನ್ಯಾಯಾಧೀಶರಾದ ಶ್ರೀ ಎ. ಜೆ. ಮೊಫತ್‌ಮಿಲ್ಸ್‌ರವರು ಅಸ್ಸಾಮದ ಬಗ್ಗೆ ವರದಿ ಮಾಡಲು ನಿಯಮಿಸಲ್ಪಟ್ಟರು. ೧೮೫೪ರಲ್ಲಿ ಪ್ರಕಟವಾದ ಅವರ ವರದಿಯು ಉತ್ತಮ ಸಾಕ್ಷ್ಯವಾಗಿದೆ. ಇದರಲ್ಲಿ ಅವರು ಹೀಗೆ ಬರೆದಿದ್ದಾರೆ.

"An English youth is not taught Latin until he is well-grounded in English, and in the same manner an Assamese should not be taught a foreign language until he knows his own."

ಅವರ ವರದಿಯ ಪರಿಣಾಮವಾಗಿ ಅಸ್ಸಾಮಿಯು ಪ್ರಾಂತೀಯ ಆಡಳಿತ ಭಾಷೆಯಾಗಿ ಅಂಗೀಕರಿಸಲ್ಪಟ್ಟಿತು. ಇಷ್ಟಾಗಿರದಿದ್ದರೆ ಆಧುನಿಕ ಅಸ್ಸಾಮಿ ಸಾಹಿತ್ಯದ ಈಗಿನ ಇರವು ಸಾಧ್ಯವಾಗುತ್ತಿರಲಿಲ್ಲವೇನೊ! ಹಾಗಲ್ಲದಿದ್ದರೂ ಅದರ ಅಸ್ತಿತ್ವ ಮುಂದೂಡಲ್ಪಡುತ್ತಿತ್ತಲ್ಲದೆ, ಬೆಳವಣಿಗೆಯೂ ಕುಂಠಿತವಾಗುತ್ತಿತ್ತು.

೧೮೪೬ರಲ್ಲಿ ಬ್ಯಾಪ್ಟಿಷ್ಟ್ ಮಿಷನ್‌ನವರು 'ಅರುಣೋದಯ' ಎನ್ನುವ ಮಾಸ ಪತ್ರಿಕೆಯನ್ನು ಪ್ರಕಟಿಸಿದರು. ಅದರಿಂದ ಸ್ಫೂರ್ತಿಗೊಂಡು ಬರಹಗಾರರ ಗುಂಪೊಂದು ಹುಟ್ಟಿಕೊಂಡಿತಲ್ಲದೆ ಪುಸ್ತಕಗಳೂ, ಪತ್ರಿಕೆಗಳೂ, ಪ್ರಾರಂಭವಾದವು. ಬ್ಯಾಪ್ಟಿಷ್ಟ್ ಮಿಷನ್‌ನವರು ಪ್ರಾರಂಭಿಸಿದ 'ಅರುಣೋದಯ' ಮುದ್ರಣಾಲಯ ಹಾಗೂ ಶಾಲೆಗಳಿಂದಾಗಿ ಪಾಶ್ಚಿಮಾತ್ಯ ವಿಜ್ಞಾನ, ಸಾಹಿತ್ಯ ಮತ್ತು ವಿದ್ಯಾಭ್ಯಾಸಗಳು ತಕ್ಕಷ್ಟು ಜನರಿಗೆ ದೊರೆಯುವಂತಾಯಿತು.

ಈ ಕಾಲದಲ್ಲಿ ಪಾಶ್ಚಾತ್ಯ ಸಾಹಿತ್ಯ ಪ್ರವಾಹದ ಪ್ರಭಾವವು ಅಸ್ಸಾಮಿ ಸಾಹಿತ್ಯದ ಮೇಲೆ ನೇರವಾಗಿ ಆಗಿರಲಿಲ್ಲ. ಆದರೆ ಆಂಗ್ಲ-ಬಂಗಾಳಿಯ ಪ್ರಭಾವವು ತೀವ್ರವಾಗಿತ್ತು. ಅದು ಹಾಗೆಯೇ ಕೆಲವು ಕಾಲದವರೆಗೆ ಮುಂದುವರಿಯಿತು. ಕಲ್ಕತ್ತೆಯಲ್ಲಿ ಉಚ್ಚ ಶಿಕ್ಷಣಕ್ಕೆಂದು ಹೋದ ವಿದ್ಯಾರ್ಥಿಗಳ ಗುಂಪೊಂದು ೧೮೮೯ರಲ್ಲಿ 'ಜಾನಕಿ' ಎನ್ನುವ ಮಾಸಪತ್ರಿಕೆಯನ್ನು ಪ್ರಕಟಿಸಿತು. ಇದರಿಂದಲೇ ಅಹೋಮ್ ತರುವಾಯದ ಪರಿವರ್ತನ ಕಾಲದಲ್ಲಿ ಅಜ್ಞಾತಾವಸ್ಥೆಯನ್ನು ಅನುಭವಿಸುತ್ತಿದ್ದ ಅಸ್ಸಾಮಿ

ಸಾಹಿತ್ಯವು ಬೆಳೆಯುವ ಬಲವನ್ನು ಪಡೆಯಿತು. 'ಅರುಣೋದಯ' (೧೮೪೬) ಮತ್ತು 'ಜಾನಕಿ' (೧೮೮೯) ಪತ್ರಿಕೆಗಳು ಆಧುನಿಕ ಅಸ್ಸಾಮಿ ಸಾಹಿತ್ಯದ ರೂಪರೇಖೆಗಳನ್ನು ಬದಲಾಯಿಸುವುದರಲ್ಲಿಯ ಎರಡು ಮೈಲುಗಲ್ಲುಗಳು.

ಹತ್ತೊಂಬತ್ತನೆಯ ಶತಮಾನದ ಕೊನೆಯ ಕಾಲುಭಾಗವು ಅಸ್ಸಾಮು ಹಾಗೂ ಅದರ ಸಾಹಿತ್ಯಕ್ಕೆ ಅತ್ಯುತ್ಸಾಹದ ಕಾಲವಾಗಿತ್ತು. ಅದು ಆಳವಿಚಾರದ ವಿಶೇಷ ಸ್ಫೂರ್ತಿಯ ಕಾಲವೆನ್ನಬಹುದು. ಹೊಸ ಮಾದರಿಗಳು, ಹೊಸ ರೀತಿಗಳು ಬೆಳಕು ಕಂಡವಲ್ಲದೆ ಸಾಹಿತ್ಯವು ಆಶಾದಾಯಕ ಉಚ್ಛ್ರಾಯ ಸ್ಥಿತಿಯನ್ನು ಪಡೆಯಿತು. ರೊಮ್ಯಾಂಟಿಕ್ ಕಾವ್ಯ ಪದ್ಧತಿಯು ಹಳೆಯ ವರ್ಣನಾತ್ಮಕ ಕಾವ್ಯಗಳ ಸ್ಥಾನವನ್ನು ಪಡೆಯಿತು. ಭಾವಗೀತೆಗಳು ಮುಖ್ಯಸ್ಥಾನಕ್ಕೇರಿದವು.

ಹಳೆಯ ಕಟ್ಟುಪಾಡುಗಳು ಸಿಥಿಲಗೊಂಡು, ಹೊಸರೂಢಿ ಪದ್ಧತಿಗಳು ಅವುಗಳ ಸ್ಥಾನವನ್ನಾಕ್ರಮಿಸಿಲ್ಲದಾಗ ಮನುಷ್ಯ ಬುದ್ಧಿಯ ಆಂತರಿಕ ವಿಕಾಶವು ಸಾಧ್ಯವಾಗುತ್ತದೆ. 'ಜಾನಕಿ'ಯ ಕಾಲವು (೧೮೮೯) ಅಸ್ಸಾಮಿ ಸಾಹಿತ್ಯದಲ್ಲಿ ಸ್ವತಂತ್ರ ಪ್ರವೃತ್ತಿಯ ಪರಿಪಕ್ವದಕಾಲ. ಒಂದು ರೀತಿಯಿಂದ ಲಕ್ಷ್ಮೀನಾಥ ಬೆಜ್‌ಬರೂವ ಹಾಗೂ ಚಂದ್ರಕುಮಾರ ಅಗರವಾಲರು ಆ ಕಾಲದ ದಾತೃಗಳೆಂದು ಹೇಳಬಹುದು. ಅವರ ಭಾವನಾಪರತೆ, ವರ್ಣಾನಂದ, ಭೌತಸೌಂದರ್ಯೋಪಾಸನೆ, ಪ್ರೇಮಪ್ರಿಯತೆ ಮತ್ತು ಕಾವ್ಯಾನಂದದಿಂದ ರೊಮ್ಯಾಂಟಿಕ್ ಯುಗದ ಕವಿಗಳ ಕಾವ್ಯಸರಣಿ ವೇದ್ಯವಾಗುತ್ತದೆ. ಈ ಇಬ್ಬರೊಂದಿಗೆ ಹೇಮಚಂದ್ರ ಗೋಸ್ವಾಮಿಯವರನ್ನು ಸೇರಿಸಿದರೆ ಆಧುನಿಕ ಅಸ್ಸಾಮಿ ಕಾವ್ಯದ ರೊಮ್ಯಾಂಟಿಕ್ ತ್ರಿವೇಣಿ ಸಂಗಮವಾದಂತಾಗುತ್ತದೆ. ಅವರಿಂದಲೇ ಈ ವಾಹಿನಿಯ ಉಗಮವಾಯಿತು. ಕಲಾಕಾರನ ಕೈ ವೀಣೆಯನ್ನು ನುಡಿಸುವಂತೆ ಇವರು ಸೌಂದರ್ಯ ಪಿಪಾಸೆಯನ್ನು ಜಾಗೃತಗೊಳಿಸಿದರು. ಈ ಉತ್ಸುಕ ಸೃಷ್ಟಿಚೇತನವನ್ನು ಆಧುನಿಕ ಅಸ್ಸಾಮಿ ಸಾಹಿತ್ಯದ ಪ್ರತಿ ಮುಖದಲ್ಲೂ ಕಾಣಬಹುದು. ರೊಮ್ಯಾಂಟಿಕ್ ಪದ್ಧತಿಯು ಲೇಖಕರನ್ನು ರೂಢಾಚಾರಗಳ ಕಟ್ಟಿನಿಂದ ಬಿಡಿಸಿ, ಅಲೌಕಿಕ ಕಾವ್ಯವಿಷಯಗಳ ಸಂಕೋಲೆಯಿಂದ ಮುಕ್ತಗೊಳಿಸಿತು. ಆಧುನಿಕ ಕವಿಗಳು ಪ್ರಕೃತಿಯನ್ನು ಚೇತನರೂಪವಾಗಿ ನೋಡಿ ಪ್ರೀತಿಸತೊಡಗಿದರು.

ಆಧುನಿಕ ಅಸ್ಸಾಮಿ ಸಾಹಿತ್ಯದ ವಿಶಿಷ್ಟವಾದೊಂದು ಮುಖ ಪ್ರೇಮಗೀತೆಗಳು. ಅವುಗಳಲ್ಲಿ ಪ್ರಾಚೀನ ಮೂಲಕಾವ್ಯಗಳಲ್ಲಿರುವಂತೆ ಕಾಮದ ಘಟ್ಟೀಕರಣವಿದೆ. ಬೆಜ್‌ಬರೂವರವರ ಮಾಲತಿ, ಫೇರಿಂಗ್ ಪ್ರೇಮಿಕರ್ ಜ್ಯೂಯಿ ಮೊದಲಾದ ಕವನಗಳಲ್ಲಿ ಈ ಹೊಸ ಧ್ವನಿಯನ್ನು ಕಾಣಬಹುದು. ಕನ್ಯಾಸೌಂದರ್ಯದ ಬಗ್ಗೆ ಅಗರವಾಲರು ಬರೆದಿರುವ 'ಮಾಧುರಿ' ಈ ಸಾಲಿಗೆ ಸೇರಿದುದು.

ಸ್ವಚ್ಛಂದ ಕಲ್ಪನಾಪರತೆ ಹೊಸಯುಗದ ರೊಮ್ಯಾಂಟಿಕ್ ಕಾವ್ಯದ ವಿಶೇಷ ಲಕ್ಷಣ. ಇದರಿಂದಲೇ ರಘುನಾಥ ಚೌಧುರಿಯವರು ಕಮಲವನ್ನು 'ಸಂಯೋಗಕ್ಕೆ

ಹಂಬಲಿಸುವ 'ಬೆಳಗಿ'ನ ದಾಹಕಾಮುಕ' ಎಂದು ವರ್ಣಿಸಲು ಸಾಧ್ಯವಾದುದು; ಜತಿನ್ ದುವಾರವರು ಪ್ರಕೃತಿಯು 'ಮೃತ್ಯುಕಹಳೆಯನ್ನೂದುವು'ದನ್ನು ಕೇಳುವಂತಾದುದು; ದೇವಕಂತ ಬರೂವಾರವರು 'ಯೋಗಿಗಳ ಸಮಾಧಿಯನ್ನೂ ಅಲುಗಿಸುವ ಕುಡಿನೋಟದ' ಅಪ್ಸರೆಯನ್ನು ಕಲ್ಪಿಸಲು ಅನುವುಂಟಾದುದು! ಹೀಗೆ 'ಜಾನಕಿ' ಕಾಲದ ಕವಿಗಳು ತಮ್ಮ ವರ್ಣಾನಂದ, ಸೌಂದರ್ಯೋಪಾಸನೆ, ಪ್ರೇಮಪೂಜೆ, ಕಾವ್ಯಾನಂದ ಹಾಗೂ ಭಾವುಕತೆಗಳಿಂದ ಸಾಹಿತ್ಯದಲ್ಲೊಂದು ಹೊಸಯುಗವನ್ನೇ ಸೃಷ್ಟಿಸಲು ಸಮರ್ಥರಾದರು.

ಭಾವಗೀತೆಗಳು ಬೆಳೆದಂತೆ ಅವುಗಳಲ್ಲಿ ಕವಿಯ ವ್ಯಕ್ತಿತ್ವಪ್ರದರ್ಶನವೂ ಬೆಳೆಯತೊಡಗಿತು. ವೈಷ್ಣವ ಕಾವ್ಯಗಳಲ್ಲಿ ಮುಖ್ಯವಾಗಿ ಕಾಣುವ ಧಾರ್ಮಿಕತೆಯ ಬದಲಾಗಿ ಪ್ರೇಮಗೀತೆಗಳೂ, ಪ್ರಕೃತಿ ಪದ್ಯಗಳೂ, ಗೂಢಾರ್ಥದ ಹಾಡುಗಳೂ, ಲಾವಣಿಗಳೂ, ಹಾಗೂ ಪ್ರಹಸನ ಕಾವ್ಯಗಳೂ ತಮ್ಮ ವೈಯಕ್ತಿಕ ವಿಶೇಷದೊಂದಿಗೆ ತಲೆಯೆತ್ತಿದವು. ಪದ್ಯವು ತನ್ನ ಅಮೋಘ ಬೆಲೆಯನ್ನು ಕಳೆದುಕೊಳ್ಳಲಿಲ್ಲವಾದರೂ ದೈವಿಕತೆಯಿಂದ ಇಳಿದು ವೇದಾಂತಿಕ, ಧಾರ್ಮಿಕ ಅಥವಾ ಪೌರಾಣಿಕ ಕಾವ್ಯಗಳ ಉಪದೇಶಾತ್ಮಕತೆಯನ್ನು ಬಿಟ್ಟು, ಹೆಚ್ಚು ಹೆಚ್ಚು ಐಹಿಕವಾಗತೊಡಗಿತು. ಹೊಸ ಪ್ರವಾಹದ ಪ್ರಚೋದನೆಯು ಪಾಶ್ಚಾತ್ಯರಿಂದ ಬಂದಿತಾದರೂ ರಾಬರ್ಟ್ ಬರ್ನ್ಸ್ ಸ್ಕಾಟ್ಲೆಂಡಿನ ದೃಶ್ಯಗಳಿಂದ, ಅಲ್ಲಿಯ ಹಳ್ಳಿಗರಿಂದ ಸ್ಫೂರ್ತಿ ಪಡೆದಂತೆ, ಆಧುನಿಕ ಅಸ್ಸಾಮಿ ಕವಿಗಳು ತಮ್ಮ ಸಂಸ್ಕೃತಿಯಲ್ಲೇ ಸ್ಫೂರ್ತಿ ಸೆಲೆಯನ್ನು ಕಂಡುಕೊಂಡರು. ಪಾಶ್ಚಾತ್ಯ ಪ್ರಭಾವ ಝರಿ ಉತ್ಕೃಷ್ಟ ಸೆಲೆಯಿಂದ ಬಂದ ನದಿಯೊಂದಿಗೆ ಬೆರೆತುಹೋಯಿತು.

ಇಪ್ಪತ್ತನೆಯ ಶತಮಾನದ ರೊಮ್ಯಾಂಟಿಕ್ ಮತ್ತು ಆಧುನಿಕ ಕಾವ್ಯಪ್ರಕಾರಗಳನ್ನು ನಾನಿಲ್ಲಿ ಚಿತ್ರಿಸಲು ಪ್ರಯತ್ನಿಸಿದ್ದೇನೆ. ಅಸ್ಸಾಮಿ ಸಾಹಿತ್ಯದ ಅಜ್ಞಾತದ ಕುತ್ತಿನಿಂದ, ಹೋರಾಟದಿಂದ ಬಿಡುಗಡೆ ಹೊಂದಿ ರೂಪಗೊಂಡುದರ ಕೆಲವಷ್ಟು ಐತಿಹ್ಯಗಳನ್ನು ಮೇಲಿನ ಸಾಲುಗಳಲ್ಲಿ ವಿವರಿಸಿಯಾಗಿದೆ. ಇನ್ನು ಆಧುನಿಕ ಕಾವ್ಯವನ್ನು ನೋಡಬಹುದು.

ಆಧುನಿಕ ಕಾವ್ಯ ಇತ್ತೀಚಿನದು; ಯುಗಧರ್ಮದಲ್ಲುಂಟಾದ ಅನಿವಾರ್ಯ ಬದಲಾವಣೆಗಳಿಂದ ಮೂಡಿಬಂದುದು. ಇಂದಿನ ಅಸ್ಸಾಮಿ ಪದ್ಯದ ಭಾವ ಬಂಧದಲ್ಲೂ, ವಿಷಯವಿಚಾರದಲ್ಲೂ ವಿಶಿಷ್ಟ ಬದಲಾವಣೆಗಳು ಕಾಣುತ್ತವೆ. ಮಾರ್ಕ್ಸ್‌ನ ತರ್ಕದಿಂದ, ಫ್ರಾಯಿಡನ ಮನಶ್ಶಾಸ್ತ್ರಗಳ ಅಭ್ಯಾಸದಿಂದಾಗಿ ಯೋಚನೆಯ ಪುನರಾವರ್ತನೆಯಾಯಿತಲ್ಲದೆ ಅಭಿವ್ಯಕ್ತಿಯ ರೀತಿಯಲ್ಲೂ ಹೊಸತನ ಕಾಲಿಟ್ಟಿತು. ಹಳೆಯ ಭಾವನೆಯ ಹಿಡಿತ ಸಡಿಲಾಗಿ ಕಲೆಗೆ ದೊರೆತ ಹೊಸ ಬೆಲೆಯು ಕಾವ್ಯಕ್ಕೆ ಹೊಸ ನೋಟವನ್ನಿತ್ತಿತು. ರೊಮ್ಯಾಂಟಿಕ್ ಕಾವ್ಯದ 'ಆಕಾಶಕುಸುಮ' ಪ್ರೇಮ ಕಡಿಮೆಯಾಗಿ ಸೌಂದರ್ಯಾನುಭೂತಿಯಲ್ಲಿ ಮೂಲಭೂತವಾದ ಬದಲಾವಣೆಯಾಯಿತು.

'ಹುಳುವಿಗೆ ಅದರ ವಿಾಸೆಯಿದ್ದಂತೆ ಸಮಾಜಕ್ಕೆ ಕವಿಗಳು!' ಎನ್ನುತ್ತಾರೆ ಹೆರ್ಬರ್ಟ್ ರೀಡ್. ಈ ರೀತಿಯದು ಸಮಾಜ ಪ್ರಜ್ಞ ಕಾವ್ಯ. ಅದು ಈ ಶತಮಾನದ ನಲವತ್ತರ ಸುಮಾರಿನಲ್ಲಿ 'ಜಯಂತಿ' ಎನ್ನುವ ಮಾಸಪತ್ರಿಕೆಯ ಮೂಲಕ ಅಸ್ಸಾಮಿ ಸಾಹಿತ್ಯದಲ್ಲಿ ತಲೆ ಹಾಕಿತು. ಸ್ವಾತಂತ್ರದ ಹೋರಾಟ ಹಾಗೂ ಸಮಾಜವಾದಿ ಪ್ರಭುತ್ವದ ಕನಸು ಈ ಪದ್ಯ ಪ್ರಾಕಾರದ ಜೀವನಾಡಿಯನ್ನು ಚುರುಕುಗೊಳಿಸಿದವು. ಕಲ್ಕತ್ತಾ ಕೊಲೆಯಲ್ಲಿ ಆಹುತಿಯಾದ ಯುವಕ ಕವಿ 'ಅಮೂಲ್ಯ ಬರೂವ' ಈ ಕಾಲದ ಕವಿಚಂದ್ರ! ಈ ಶತಮಾನದ ಮೂವತ್ತರ ಕೊನೆಯಲ್ಲಿ ಪ್ರಪಂಚದ ಆಧುನಿಕ ಸಾಹಿತ್ಯಕ್ಕೆ ವಿಾಸಲಾಗಿದ್ದ 'ಅವಾಹೋ್' ಎನ್ನುವ ಮಾಸಿಕದ ಮೂಲಕ ಹೊಸ ಭಾವನೆಗಳನ್ನು ಕೆಲವು ಪ್ರಬಂಧಗಳಲ್ಲಿ ಪ್ರಕಟಿಸಲಾಯಿತು. ಅವುಗಳ ಮಥಿತಾರ್ಥವನ್ನು ಮಾಯಾಕೊವಿಸ್ಕಿಯವರ ಮಾತಿನಲ್ಲಿ ಈ ರೀತಿ ಹೇಳಬಹುದು;

"Why must I write about the love of Jack and Jill and not consider myself part of the social organism which is building life."

'ಜಯಂತಿ' ಗುಂಪಿನ ತರುಣ ಕವಿಗಳು, ಸಮಾಜಶಕ್ತಿಗಳನ್ವಯ ಜೀವನ ಹಾಗೂ ಕಲೆಯ ಊರ್ಜಿತತೆಗಾಗಿ 'ಅವಾಹೋನ್' ಪತ್ರಿಕೆಯ ಮೂಲಕ ನಡೆದ ನಿರಂತರ ಪ್ರಚಾರದ ಫಲಗಳು ಎನ್ನಬಹುದು. ಆದರೆ ಆಧುನಿಕ ಅಸ್ಸಾಮಿ ಕವಿಗಳು ಎಲ್ಲ ರೀತಿಯ ರಾಜಕೀಯ ಪಂಗಡಗಳನ್ನೂ ತಿರಸ್ಕರಿಸುತ್ತಾರೆನ್ನುವುದನ್ನು ಮರೆಯಲಾಗದು. ಎರ್‌ನೆಷ್ಟ್ ಟೊಲ್ಲೆರ್ ಹೇಳುವಂತೆ ಕೆಲವು ಪದ್ಯಗಳೇನೋ "ರಾಜಕೀಯ ಮಹತ್ವ ಉಳ್ಳವುಗಳು; ಆದರೆ ಅವುಗಳನ್ನು ಕಲೆಯ ಮುಸುಕಿನಲ್ಲಿಯ ರಾಜಕೀಯ ಪ್ರಚಾರಗಳೆಂದು ತಪ್ಪು ತಿಳಿಯಬಾರದು."

ಈಗಿನ ಅಸ್ಸಾಮಿ ಕಾವ್ಯದ ಮೇಲೆ ಅತಿ ನಿಚ್ಚಳ ಪ್ರಭಾವ ಬೀರಿದವರೆಂದರೆ ಟಿ. ಎಸ್. ಎಲಿಯಟ್, ಡೈಲನ್‌ಥಾಮಸ್, ಎಜ್ರಪೌಂಡ್ ಮತ್ತಿತರ ಪಾಶ್ಚಿಮಾತ್ಯ ಆಧುನಿಕ ಕವಿಗಳು, ಈ ರೀತಿಯ ಬುದ್ಧಿ ಕಾವ್ಯವು (intellectual poetry) 'ಪಜೋವ' (ಈಗ ನಿಂತಿದೆ) ಹಾಗೂ 'ಕಾಮಧೇನು' ಮುಂತಾದ ಮಾಸಪತ್ರಿಕೆಗಳ ಮೂಲಕ ಬೆಳಕು ಕಂಡು, ರೂಢಿಗೆ ಬಂದಿತು. ಇತ್ತೀಚೆಗೆ ಪ್ರವಾಹವು ಪುನಃ ರೊಮ್ಯಾಂಟಿಕ್ ಕಾವ್ಯರೀತಿಯ ಕಡೆ ತಿರುಗಿದೆ. ಆದರೂ ಹಳೆಯ ರೊಮ್ಯಾಂಟಿಕ್ ಕಾವ್ಯಕ್ಕೂ ಈಗಿನದಕ್ಕೂ ಭಾವಾಭಿವ್ಯಕ್ತಿಯಲ್ಲಿ, ನಿರೂಪಣ ವೈವಿಧ್ಯದಲ್ಲಿ ಸಾಕಷ್ಟು ವ್ಯತ್ಯಾಸವಿದೆ. ಅನವಶ್ಯಕ ಛಂದೋಬಂಧನ ಈಗಿನ ಕವಿತೆಗಳಲ್ಲಿಲ್ಲ. ಕಟ್ಟೊಡೆದ ಈ ಹೊಸ ಪ್ರವಾಹ ಅನೇಕ ತರುಣ ಕವಿಗಳನ್ನು ಬೆಳಕಿಗೆ ತಂದಿದೆ; ಆಧುನಿಕ ಅಸ್ಸಾಮಿ ಕಾವ್ಯದ ಮೇರೆಗಳನ್ನು ವಿಸ್ತರಣಗೊಳಿಸಿದೆ.

——::——

# ಗುಜರಾತಿ ಸಾಹಿತ್ಯದ ಬೆಳವಣಿಗೆ



ಶ್ರೀ "**ನಾರಾಯಣ**", ಧಾರವಾಡ.

**ಆ**ಧುನಿಕ ಗುಜರಾತಿ ಸಾಹಿತ್ಯವನ್ನು ಕುರಿತು ವಿವೇಚಿಸುವ ಮೊದಲು ಅದರ ಐತಿಹಾಸಿಕ ಹಿನ್ನೆಲೆಯನ್ನು ಮತ್ತು ಅದು ಕ್ರಮಕ್ರಮವಾಗಿ ಬೆಳೆದು ಬಂದ ರೀತಿಯನ್ನು ಸ್ವಲ್ಪದರಲ್ಲಿ ಅರಿತುಕೊಳ್ಳುವದು ಅಪ್ರಸ್ತುತವೆನಿಸಲಾರದು. ಗುಜರಾತಿ ಸಾಹಿತ್ಯವೂ ಮತ್ತು ಆ ಭಾಷೆಯೂ ಈಗಿರುವ ಮಟ್ಟಕ್ಕೆ ಬಂದು ತಲುಪಲು ಸುಮಾರು ಮೂರು ನೂರು ವರುಷಗಳಿಗೂ ಮಿಕ್ಕಿದ ಅವಧಿಯನ್ನು ತೆಗೆದುಕೊಂಡಿವೆ. ಈ ಅವಧಿಯ ಪೂರ್ವಾರ್ಧದಲ್ಲಿ ಹೇಳಿಕೊಳ್ಳುವಂಥ ಸಾಹಿತ್ಯರಚನೆ ಏನೂ ನಡೆಯಲಿಲ್ಲ. ಇದಕ್ಕೆ ಅನೇಕ ಕಾರಣಗಳಿದ್ದು ಅವುಗಳಲ್ಲಿ ಮುಖ್ಯವಾದವುಗಳನ್ನು ಮಾತ್ರ ಇಲ್ಲಿ ನೋಡುವಾ.

ಮೊದಲನೆಯದಾಗಿ ಗುಜರಾತಿ ಭಾಷೆಗೆ ಆಗ ಈಗಿನಂತೆ ತನ್ನದೇ ಆದ ಒಂದು ಸ್ವತಂತ್ರ ಲಿಪಿಯು ಇರಲಿಲ್ಲ. ಆ ಕಾಲವಲ್ಲಿ ಗುಜರಾತಿ ಭಾಷೆಯು ನಾಗರಿ ಲಿಪಿಯಲ್ಲಿಯೇ ಬರೆಯಲ್ಪಡುತ್ತಿತ್ತು. ಈ ಭಾಷೆಯ ಸಹೋದರ ಭಾಷೆಗಳಾದ ಮರಾಠಿ, ಹಿಂದಿ ಮೊದಲಾದ ಭಾಷೆಗಳ ಲಿಪಿಯು ಸಹ ನಾಗರಿಯಾಗಿದ್ದು, ಅವುಗಳ ಪ್ರಭಾವವು ಈ ಭಾಷೆಯ ಮೇಲೆ ವಿಶೇಷವಾಗಿ ಬಿದ್ದದ್ದೇ ಇದಕ್ಕೆ ಕಾರಣವು. ಆದರೆ ಗುಜರಾತವು ನಾಗರಿ ಲಿಪಿಯನ್ನು ತನ್ನ ಅಧಿಕೃತ ಲಿಪಿಯನ್ನಾಗಿ ಸ್ವೀಕರಿಸಲು ಸಿದ್ಧವಾಗಲಿಲ್ಲ. ಯಾಕಂದರೆ ನಾಗರಿಲಿಪಿಯಲ್ಲಿಯ ಹ್ರಸ್ವ ದೀರ್ಘಗಳ ಪ್ರಯೋಗ, ಸಂಯುಕ್ತಾಕ್ಷರಗಳ ಜೋಡಣೆ ಮೊದಲಾದವುಗಳು ಈ ಭಾಷೆಗೆ ಸರಿಹೊಂದಲಿಲ್ಲ. ಆದ್ದರಿಂದ ನಾಗರಿಯನ್ನು ಗುಜರಾತದ ವಿವಿಧ ಪ್ರಾದೇಶಿಕ ಭಾಷೆಯ ಉಚ್ಚಾರಗಳಿಗೆ ಸರಿಹೊಂದುವಂತೆ ಸೂಕ್ತವಾಗಿ ಬದಲಾಯಿಸಿಕೊಂಡು ಇಂದಿನ ಪ್ರಚಲಿತ ಗುಜರಾತಿ ಲಿಪಿಯನ್ನಾಗಿ ಪರಿವರ್ತಿಸಲಾಯಿತು.

ಗುಜರಾತದ ಪುರಾತನ ಗ್ರಂಥಗಳು ನಾಗರೀ ಲಿಪಿಯಲ್ಲಿ ಕಂಡುಬರುವದಕ್ಕೆ ಇದೇ ಮುಖ್ಯ ಕಾರಣವು. ಈ ಕಾಲದ ಉಪಲಬ್ಧವಿದ್ದ ಸಾಹಿತ್ಯಕೃತಿಗಳಲ್ಲಿ ನರಸಿಂಹ ಮೇಹತಾರವರ ಭಕ್ತಿಪರವಾದ ಅನೇಕ ಹಾಡುಗಳು, ಭಜನೆಗಳು, ಕರ್ಣಮಂತ್ರಿ ವಿರಚಿತ "ಸೀತಾಹರಣ" ಕೇಶವ ಕವಿಯ "ದಶಮಸ್ಕಂದ" ಭೀಮಕವಿಯ "ಹರ್ಲಿ ಲೀಲಾ" ಮೊದಲಾದ ಕಾವ್ಯಗಳೂ, ಗಣಪತಿಕೃತ "ಮಾಧವಾನಲಪ್ರಬಂಧ" ಲಾವಣೀ ಸಮಗಣಿ ಕೃತ "ವಿಮಲಪ್ರಬಂಧ" ಮೊದಲಾದ ಪ್ರಬಂಧ ಗ್ರಂಥಗಳೂ ಪ್ರಮುಖ ವಾಗಿವೆ. ಇವುಗಳಿಗಿಂತ ಪುರಾತನವಾದ "ಕಾನ್ಹಡದೇ ಪ್ರಬಂಧ"ವೆಂಬ ಗ್ರಂಥವು ಅಲ್ಲಾವುದ್ದೀನ ಮತ್ತು ರಾಜಪೂತರ ಯುದ್ಧಗಳಿಗೆ ಸಂಬಂಧಿಸಿದ್ದು ; ಇದರಲ್ಲಿ ಅನೇಕ ರಾಜಸ್ಥಾನೀ ಶಬ್ದಗಳು ಮಿಶ್ರಿತವಾದದ್ದು ಕಂಡುಬರುತ್ತದೆ. ಇದರ ಕರ್ತೃವು ಪದ್ಮನಾಭ. ಇವುಗಳನ್ನು ಬಿಟ್ಟರೆ ಹೇಳಿಕೊಳ್ಳುವಂಥ ಇತರ ಯಾವ ಸಾಹಿತ್ಯ ಕೃತಿ ಗಳೂ ನಿರ್ಮಾಣಗೊಳ್ಳಲಿಲ್ಲ. ಕ್ರಮಬದ್ಧವಾದ ಒಳ್ಳೆಯ ಶಬ್ದಕೋಶವು ಆ ಕಾಲ ದಲ್ಲಿ ರಚಿಸಲ್ಪಟ್ಟಿರಲಿಲ್ಲವಾದ್ದರಿಂದ ಈ ಭಾಷೆಯ ಕಠಿಣ ಶಬ್ದಗಳು ಕೇವಲ ಪಂಡಿತರ ಸೊತ್ತುಗಳಾಗಿ ಸಾಮಾನ್ಯ ಜನತೆಯಲ್ಲಿಯ ಜಿಜ್ಞಾಸುಗಳವರೆಗೆ ಬಂದು ಮುಟ್ಟುವದು ಅಸಾಧ್ಯವಾದ ಮಾತಾಗಿತ್ತು. ವ್ಯಾಕರಣವು ಸುಸಂಸ್ಕೃತ ಭಾಷೆಗಳ ಜೀವಾಳವು. ಲಿಖಿತ ಗುಜರಾತಿ ಭಾಷೆಯ ಸೂತ್ರಗಳನ್ನು ಮತ್ತು ಅದರ ಯಥೋಚಿತ ನಿಯಮ ಗಳನ್ನು ತಿಳಿಸುವಂಥ ವ್ಯಾಕರಣಗಳು ಸಹ ಆ ಕಾಲದಲ್ಲಿ ಉಪಲಬ್ಧವಿರಲಿಲ್ಲ.

ಇವೆಲ್ಲ ಕಾರಣಗಳಿಂದಾಗಿ ಆಗ ಸಾಹಿತ್ಯದ ವಿವಿಧ ಪ್ರಕಾರಗಳ ನಿರ್ಮಾಣಕ್ಕೆ ಅನುಕೂಲವಾದ ಪರಿಸ್ಥಿತಿ ಇರಲಿಲ್ಲ. ಆದರೆ—ಕಾಲಾನುಕ್ರಮದಲ್ಲಿ ಈ ಪರಿಸ್ಥಿತಿ ಯಲ್ಲಿ ಸುಧಾರಣೆಗಳಾಗುತ್ತ ನಡೆದವು. ಸ್ವತಂತ್ರ ಲಿಪಿಯ ಆಯ್ಕೆಯ ಕೂಡ ಶಬ್ದ ಕೋಶಗಳ ರಚನೆಯ ಬಗ್ಗೆಯೂ, ಸೂಕ್ತವಾದ ವ್ಯಾಕರಣ ನಿರ್ಮಾಣದ ದಿಶೆ ಯಲ್ಲಿಯೂ ಪ್ರಯತ್ನಗಳು ನಡೆದವು. ಕವಿ ನರ್ಮದರು ಶಬ್ದಕೋಶಗಳ ಮಹತ್ವ ವನ್ನು ಮನಗಂಡು ಅದರ ರಚನೆಗೆ ತಾವೇ ಕೈಹಾಕಿ "ನರ್ಮಕೋಶ"ವೆಂಬ ಕೋಶ ವನ್ನು ರಚಿಸಿದರು.

ನವನವೀನ ಕವಿತೆಗಳು, ನಾಟಕಗಳು ವಿವಿಧ ಪ್ರಕಾರದ ಕಾದಂಬರಿಗಳು ಮೊದಲಾದ ಪ್ರಗತಿಪರ ಸಾಹಿತ್ಯದ ಯಾವ ಪ್ರಕಾರಗಳೂ ಆಗ ಪ್ರಚಲಿತವಿರಲಿಲ್ಲ ವಾದ್ದರಿಂದ ಜನತೆಯು ಪುರಾತನ ಕೃತಿಗಳಲ್ಲಿಯೂ, ರಾಜಾ ವಿಕ್ರಮನ ಸಾಹಸ ಕಥೆ ಗಳಂಥ ಕಥೆಗಳಲ್ಲಿಯೂ, ವಿವಿಧ ಪ್ರಕಾರಗಳ ದಂತ ಕತೆಗಳಲ್ಲಿಯೂ ತೃಪ್ತಿಪಟ್ಟು ಕೊಳ್ಳುತ್ತಿತ್ತು. ಆದರೆ ಈ ಗತಕಾಲವು ಕೂಡ ಇಂದಿಗೂ ಮತ್ತು ಎಂದೆಂದಿಗೂ ಮರೆಯಲಾಗದ ಅತ್ಯಂತ ಸುಂದರ ಮತ್ತು ಹೃದಯ ಸ್ಪರ್ಶಿಗಳಾದ ಜಾನಪದ ಸಾಹಿತ್ಯದ ಕೆಲವು ಮಾದರಿಗಳನ್ನು ಗುಜರಾತಕ್ಕೆ ನೀಡಿದೆ. ಇವುಗಳಲ್ಲಿ ಅತಿಮುಖ್ಯ ವಾದ ಒಂದೆರಡು ಉದಾಹರಣೆಗಳನ್ನು ಇಲ್ಲಿ ನೋಡುವಾ.

ಗುಜರಾತದ ವೈಶಿಷ್ಟ್ಯವೂ ಅತ್ಯಂತ ನಯನ ಮನೋಹರವೂ ಎನಿಸಿದ ಜಾನಪದ ಕಲೆಗಳಲ್ಲಿ "ಗರಬಾ" ನೃತ್ಯವೂ ಒಂದು. ಅತ್ಯಂತ ಕಲಾಪೂರ್ಣವಾಗಿ ಕಲಶಗಳನ್ನು ಒಂದರ ಮೇಲೊಂದು ಬರುವಂತೆ ರಚಿಸಿ ಅದರ ಸುತ್ತ ನಿದಿ. ಷ್ಟಪಡಿಸಿದ ಅಂತರದ ಮೇಲೆ ವೃತ್ತಾಕಾರದಲ್ಲಿ ಮಾಡುವ ನೃತ್ಯವೇ ಗರಬಾನೃತ್ಯವು. ಬಣ್ಣ ಬಣ್ಣದ ಬಟ್ಟೆಗಳನ್ನು ಧರಿಸಿ ವಿವಿಧ ಆ ಭೂಷಣಗಳಿಂದ ಕಂಗೊಳಿಸುವ ಸುಂದರ ಗುಜರಾತೀ ಹೆಂಗಳೆಯರು, ಹಿಂದೆ ಒಲೆಯುತ್ತ ಮುಂದೆ ಬಾಗುತ್ತ, ತಾಳಕ್ಕೆ ತಕ್ಕಂತೆ ಹೆಜ್ಜೆಗಳನ್ನು ಹಾಕುತ್ತ ಗೆಜ್ಜೆಗಳ ಗೂಂಜಾರವದೊಡನೆ ಮಾಡುವ ಈ "ಗರಬಾ" ನೃತ್ಯದ ಸೊಬಗೇ ಸೊಬಗು! ಈ ನರ್ತನವು ಮೂಕನರ್ತನವಲ್ಲ. ನರ್ತನದೊಡನೆ ಹಾಡುಗಳನ್ನು ಹಾಡುವುದುಂಟು. ಈ ಹಾಡುಗಳಿಗೆ "ಗರಬಿ" ಹಾಡುಗಳೆಂದು ಹೆಸರು. ಈ ಹಾಡುಗಳ ವೈಶಿಷ್ಟ್ಯವೇ ಬೇರೆ. ನೃತ್ಯದ ಕ್ಲಿಷ್ಟವಾದ ಭಂಗಿಗಳಿಗೆ ಸರಿಹೊಂದುವಂತೆ, ಲಯ, ಪ್ರಾಸಗಳಿಂದೊಡಗೂಡಿ ಈ ಹಾಡುಗಳು ರಚಿತವಾಗಿದ್ದರೂ ಇವುಗಳ ಅರ್ಥ ಮಾತ್ರ ಬಹು ಸುಲಭ. ಸಾಮಾನ್ಯ ಜನರಿಗೆ ಬಹು ಬೇಗ ಅರ್ಥವಾಗುವಂಥವು. ಈ "ಗರಬಿ" ಹಾಡುಗಳೆಲ್ಲ ಸಾಮಾನ್ಯವಾಗಿ ಗೋಪಿಕಾ-ಕೃಷ್ಣರ ರಾಸಕ್ರೀಡೆಗಳನ್ನೇ ಆದರಿಸಿ ಬರೆದವುಗಳು.

ಗುಜರಾತದ ಜನಜೀವನದಲ್ಲಿ ಅತಿಮುಖ್ಯಸ್ಥಾನ ಪಡೆದ ಜಾನಪದ ಸಾಹಿತ್ಯದ ಇತರ ಪ್ರಕಾರಗಳಲ್ಲಿ ಅಲ್ಲಿಯ ಲೋಕಗೀತೆಗಳು ಬಹು ಪ್ರಮುಖವಾದವುಗಳು. ಕರ್ನಾಟಕ, ಮಹಾರಾಷ್ಟ್ರಗಳಲ್ಲಿ ಲಾವಣಿಗಳದೊಂದು ವಿಶಿಷ್ಟ ಶೈಲಿಯುಂಟು. ಆದರೆ ಗುಜರಾತದಲ್ಲಿ ಲಾವಣಿಗಳ ಶೈಲಿಯ ಜಾನಪದ ಪದ್ಯಗಳಿಲ್ಲ. ಎಲ್ಲರಿಗೂ ಸುಲಭವಾಗಿ ಅರ್ಥವಾಗುವಂತೆ ರಚಿಸಲ್ಪಟ್ಟ ಈ ಗೀತೆಗಳಲ್ಲಿ ಖಂಡ ಪದ್ಯಗಳೇ ಹೆಚ್ಚು. ಐತಿಹಾಸಿಕ ಘಟನೆಗಳು, ಶೂರವೀರರ ಸಾಹಸಕೃತಿಗಳು, ಯುದ್ಧ ವರ್ಣನೆಗಳು, ಪೌರಾಣಿಕ, ನೈತಿಕ, ಕಥೆಗಳು ಇವೇ ಈ ಗೀತೆಗಳ ಮುಖ್ಯ ವಿಷಯಗಳು.

ಸಾಧಾರಣವಾಗಿ ಸಾರಂಗಿಯನ್ನು ಹೋಲುವ ಆದರೆ ಅದಕ್ಕಿಂತ ಚಿಕ್ಕದಾದ ಒಂದು ಪ್ರಕಾರದ ವಾದ್ಯಕ್ಕೆ ತಂತಿಗಳನ್ನು ಜೋಡಿಸಿ ಅದರ ಮೇಲೆ ಬಿಲ್ಲಿನಾಕಾರದ ಒಂದು ಸಾಧನ(Bow) ತಿಕ್ಕಿ ಸ್ವರಗಳನ್ನು ಹೊರಡಿಸಿ ಅದರೊಂದಿಗೆ ಈ ಗೀತೆಗಳನ್ನು ರಾಗಬದ್ಧವಾಗಿ ಹಾಡಲಾಗುತ್ತದೆ. ವಾದ್ಯದಿಂದ ಹೊರಡುವ ರಾಗಗಳಿಗನುಗುಣವಾಗಿ ಬಿಲ್ಲಿಗೆ ಕಟ್ಟಿದ ಗೆಜ್ಜೆಗಳು ತಾಳಬದ್ಧವಾಗಿ ನುಡಿಯುವಂತೆ ಬಿಲ್ಲನ್ನು ಬಹು ಜಾಣ್ಮೆಯಿಂದ ವಾದ್ಯದ ತಂತಿಗಳ ಮೇಲೆ ಆಡಿಸಲಾಗುತ್ತದೆ. ಆಗ ವಾದ್ಯದ ಸ್ವರಗಳೊಂದಿಗೆ ತೇಲಿಬರುವ ಈ ಪದ್ಯಗಳು ಬಹು ಕರ್ಣಾನಂದಕರವಾಗಿರುತ್ತವೆ.

ಇದೇ ರೀತಿಯ ಅಥವ ಇದಕ್ಕಿಂತ ಸ್ವಲ್ಪ ದೊಡ್ಡದಾದ ಮತ್ತು ಹೆಚ್ಚು ತಂತಿಗಳಿಂದ ಕೂಡಿದ ವಾದ್ಯವನ್ನೇ ಮುಖ್ಯಸಾಧನವನ್ನಾಗಿಟ್ಟುಕೊಂಡು ಅದರೊಂದಿಗೆ

ನಮ್ಮಲ್ಲಿಯ ಡಪ್ಪು, ಖಂಜಿರ, ಮೊದಲಾದವುಗಳನ್ನು ಹೋಲುವ ಕೆಲವು ಉಪವಾದ್ಯಗಳೊಂದಿಗೆ ಸೌರಾಷ್ಟ್ರದ "ಚಾರಣ" ಗೀತೆಗಳನ್ನು ಹಾಡಲಾಗುತ್ತದೆ. ಈ ಚಾರಣ ಗೀತೆಗಳು ಪೂರ್ವಕಾಲದಲ್ಲಿ ವಂದಿಮಾಗಧಿಗರಿಂದ ಹಾಡಲ್ಪಡುತ್ತಿದ್ದವೆಂದು ಹೇಳಬಹುದಾಗಿದೆ. ಯಾಕಂದರೆ ಇವುಗಳಲ್ಲಿ ಸೌರಾಷ್ಟ್ರದ ಗತವೈಭವ, ಅಲ್ಲಿಯ ರಾಜರ ಗುಣಗಾನ, ರಾಜಮನೆತನಗಳಿಗೆ ಸಂಬಂಧಿಸಿದ ರಂಜಕ ಕಥೆಗಳು, ಈ ವರ್ಣನೆಗಳೇ ಹೆಚ್ಚಾಗಿ ಕಂಡುಬರುತ್ತವೆ. ಈ ಚಾರಣ ಗೀತೆಗಳ ಸಾಹಿತ್ಯ ಸ್ವಲ್ಪ ಗಡುಚಾದದು. ಆದ್ದರಿಂದ ಆ ಗೀತೆಗಳನ್ನು ಹಾಡುವ ಮೇಳದಲ್ಲಿ ಮೂರು ಅಥವಾ ಅದಕ್ಕಿಂತ ಹೆಚ್ಚು ಜನರಿರುತ್ತಾರೆ. ಮೊದಲನೇಯುವನು ರಾಗಬದ್ಧವಾಗಿ ಮುಖ್ಯ ವಾದ್ಯಮೊಂದಿಗೆ ಗೀತೆಗಳನ್ನು ಹೇಳುತ್ತಾನೆ. ಎರಡನೆಯುವನು ಅದೇ ಸ್ವರವನ್ನು ಹಿಡಿದು ಅದರ ಸಾರಾಂಶವನ್ನು ಹೇಳುತ್ತಾನೆ. ನಂತರ ಮೂರನೇಯುವನೂ ಮತ್ತು ಇತರರೂ ಮತ್ತೆ ಮೊದಲಿನ ಗೀತೆಯನ್ನೇ ಉಪವಾದ್ಯಗಳೊಂದಿಗೆ ಹೇಳುವರು. ಆಗ ಗೀತೆಯ ಅರ್ಥ ಲಾಲಿತ್ಯ ಮತ್ತು ಸಾರಾಂಶಗಳು ಒಮ್ಮೆಲೆ ಮನದಟ್ಟಾಗಿ ಶ್ರೋತೃಗಳು ಮಾತ್ರ ಮುಗ್ಧರಾಗುತ್ತಾರೆ.

ಗತಕಾಲದ ಮಹಾನ್ ಕೊಡುಗೆಗಳಾದ ಜಾನಪದ ಸಾಹಿತ್ಯಕ್ಕೆ ಸೇರಿದ ಈ ಗರಬಾ ನೃತ್ಯ, ಲೋಕಗೀತೆಗಳು—ಚಾರಣಗೀತೆಗಳು ಇಂದಿಗೂ ಗುಜರಾತ, ಸೌರಾಷ್ಟ್ರಗಳ ಜನಜೀವನದಲ್ಲಿ ಹಾಸುಹೊಕ್ಕಾಗಿ ಹೊಂದಿಕೊಂಡಿವೆ.

ಭಕ್ತಶ್ರೇಷ್ಠರಾದ ಶ್ರೀ ನರಸಿಂಹ ಮೆಹತಾರವರು ಗುಜರಾತದ ಆದಿಕವಿಗಳು. ಈ ಪ್ರಾತಃಸ್ಮರಣೀಯರ ಅಮರ ಕೃತಿಗಳು ಕಳೆದ ಮೂರು ನೂರು ವರುಷಗಳಿಂದ ಗುಜರಾತವನ್ನು ಬೆಳಗಿವೆ. ಇವು ಹದಿನೇಳನೇಯ ಶತಮಾನದ ಕವಿಗಳಿಗೆ ಪ್ರೇರಣೆಯನ್ನು ನೀಡಿವೆಯಾದರೆ, ಅದೇ ಹದಿನೇಳನೇಯ ಶತಮಾನದ ಕವಿವರ್ಯ ಪ್ರೇಮಾನಂದರಿಗೆ ಉತ್ತೇಜನಕಾರಿಯಾಗಿವೆ. ಕವಿನರ್ಮದರ ಕಾವ್ಯಕ್ಷೇತ್ರವನ್ನು ಹತ್ತೊಂಭತ್ತನೇಯ ಶತಮಾನದಲ್ಲಿ ವಿಶಾಲಗೊಳಿಸಿವೆ.

ಇವರ ಸಮಕಾಲೀನ ಸಾಹಿತ್ಯ ರಚನೆಗಳಲ್ಲಿ ಹಿಂದೆ ಹೇಳಲಾದ "ಸೀತಾಹರಣ" "ದಶಮಸ್ಕಂದ", "ಹರಿಲೀಲಾ" ಮೊದಲಾದ ಕಾವ್ಯಗಳೂ "ವಿಮಲ ಪ್ರಬಂಧ" ಮೊದಲಾದ ಪ್ರಬಂಧ ಕಾವ್ಯಗಳೂ ಬರುತ್ತವೆ. ಈ ಎಲ್ಲ ಗ್ರಂಥಗಳು ಸುಮಾರು ೧೪೫೦-೧೫೫೦ನೇ ಶತಮಾನದಲ್ಲಿ ರಚಿತವಾದವುಗಳು. ಇವುಗಳಲ್ಲಿಯ ಕಾವ್ಯಗಳು ಸಾಮಾನ್ಯವಾಗಿ, ಕೃಷ್ಣಭಕ್ತಿ, ಕೃಷ್ಣಚರಿತ್ರೆ, ಮತ್ತು ಕೆಲವು ಪೌರಾಣಿಕ ಕತೆಗಳು ಇವುಗಳನ್ನೇ ಕುರಿತು ಬರೆದವುಗಳಾಗಿದ್ದು ಅವುಗಳಲ್ಲಿ, ಭಕ್ತಿ, ಶೃಂಗಾರ, ವಾತ್ಸಲ್ಯ, ಮೊದಲಾದ ಸೌಮ್ಯರಸಗಳೇ ಹೆಚ್ಚಾಗಿ ಕಂಡುಬರುತ್ತವೆ, ಹದಿನೇಳನೇಯ ಶತಮಾನದ ಅಂತ್ಯದವರೆಗೂ ಸಾಹಿತ್ಯಕ್ಷೇತ್ರದಲ್ಲಿ ಇದೇ ಸ್ಥಿತಿಯು

ಸಾಮಾನ್ಯವಾಗಿ ಮುಂದುವರಿಯಿತು. ಹದಿನಾರನೇಯ ಶತಮಾನದ ಕವಿಗಳಲ್ಲಿ ಆಖಾಭಗತ್, ಮತ್ತು ಕವಿ ಪ್ರೇಮಾನಂದ ಇವರು ಪ್ರಮುಖಸ್ಥಾನವನ್ನು ಪಡೆದವರು.

ಆಖಾಭಗತರ ಕಾಲ ಸುಮಾರು ೧೬೧೫ ರಿಂದ ೧೭೦೪. ಚಿಕ್ಕಂದಿನಲ್ಲಿಯೇ ಅನಾಥರಾದ ಇವರು ಅತ್ತಿತ್ತ ಅಲೆಯುತ್ತ ಕಾಶಿಗೆ ಹೋದರು. ಅಲ್ಲಿ ಶಂಕರ ಸಿದ್ಧಾಂತದ ಉಪದೇಶವನ್ನು ಪಡೆದ ಇವರಲ್ಲಿ ವೈರಾಗ್ಯ ಉದ್ಭವಿಸಿತು. ಅದ್ವೈತ ಸಿದ್ಧಾಂತ ಕುರಿತು ಇವರು ಅನೇಕ ಗ್ರಂಥಗಳನ್ನು ರಚಿಸಿದ್ದು ಅವುಗಳಲ್ಲಿ "ಆಖೇ ಗೀತಾ" "ಚಿತ್ತವಿಕಾರ ಸಂವಾದ" "ಪಂಚೀಕರಣ" "ಅನುಭವಬಿಂದು" "ಗುರು-ಶಿಷ್ಯ ಸಂವಾದ" ಮೊದಲಾದವುಗಳು ಪ್ರಮುಖವಾದವುಗಳು. ಸರಳವೂ ಸುಂದರವೂ ಆದ ಇವರ ಕೆಲವು ಕೃತಿಗಳನ್ನು ಗುಜರಾತದಲ್ಲಿ ಆಬಾಲವೃದ್ಧರಾದಿಯಾಗಿ ಅನೇಕರು ಇಂದಿಗೂ ಪಠಿಸುತ್ತಾರೆ.

ಕವಿ ಶ್ರೀ ಪ್ರೇಮಾನಂದರು ಆಖಾಭಗತರ ಸಮಕಾಲೀನರು. ಅವರಂತೆ ಇವರೂ ಸಹ ಚಿಕ್ಕಂದಿನಲ್ಲಿಯೇ ಪರದೇಶಿಗಳಾದರು. ಉತ್ತರ ಭಾರತಕ್ಕೆ ಅಲೆಯುತ್ತ ಹೋದ ಇವರು ಅಲ್ಲಿ ವ್ಯರ್ಥವಾಗಿ ನಿಲ್ಲದ ಮಾರ್ಗದಲ್ಲಿ ಕಾಲಹರಣ ಮಾಡಿದರು. ಆದರೆ ಭಗವತ್ಕೃಪೆಯಿಂದ ಪರಿವರ್ತಿತರಾದ ಇವರು ಗುಜರಾತದ ಮಹಾಕವಿಗಳಲ್ಲಿ ಒಬ್ಬರೆಂದು ಪರಿಗಣಿಸಲ್ಪಟ್ಟರು. ಇವರ ಕಾಲ ೧೬೩೬ ರಿಂದ ೧೭೩೪. ಸಂಸ್ಕೃತ ಭಾಷೆಯ ಸೌಂದರ್ಯಕ್ಕೆ ಮಾರುಹೋದ ಇವರು ಗುಜರಾತಿ ಭಾಷೆಯನ್ನು ಸಂಸ್ಕೃತದಷ್ಟೇ ಸರ್ವಾಂಗಸುಂದರ ಭಾಷೆಯನ್ನಾಗಿ ಪರಿವರ್ತಿಸಲು ಪಣತೊಟ್ಟರು. ಇವರು ಎಷ್ಟೋ ಕಾವ್ಯಗಳನ್ನು ಹಾಗೂ ಕೆಲವು ನಾಟಕಗಳನ್ನು ಬರೆದಿದ್ದು ಅವುಗಳಲ್ಲಿ "ಚಂದ್ರಹಾಸಾಖ್ಯಾನ" "ದ್ರೌಪದೀ ಸ್ವಯಂವರ" "ಮಾಂಧಾತಾಖ್ಯಾನ" "ಸುಧಾಮ ಚರಿತ್ರ" "ಮದಾಲಸಾಖ್ಯಾನ" "ಓಖಾಹರಣ" ಮೊದಲಾದವು ಶ್ರೇಷ್ಠವಾದವುಗಳು. ಇವುಗಳಲ್ಲಿ "ಓಖಾಹರಣ" ಎಂಬುದು ಬಹು ಮನೋಹರವಾದ ಕಾವ್ಯವು. ಅನಿರುದ್ಧ ಮತ್ತು ಓಖಾ ಇವರ ಪರಿಣಯವನ್ನು ಕುರಿತು ಬರೆದ ಕಾವ್ಯವಿದು.

ಗುಜರಾತಿ ಸಾಹಿತ್ಯದ ಪ್ರಾಚೀನ ಪರಂಪರೆಯು ಕವಿ ಪ್ರೇಮಾನಂದರಿಂದ ಕೊನೆಗೊಂಡು ನವೀನತೆಯಲ್ಲಿ ಪಾದಾರ್ಪಣ ಮಾಡಿತು. ಸಾಹಿತ್ಯದ ಈ ನವೀನ ಯುಗ ಪ್ರವರ್ತಕರಲ್ಲಿ ದಯಾರಾಮರು ಮೊದಲಿಗರು.

ಇವರು ೧೭೬೭ರಲ್ಲಿ ಚಾಂದೋಡಾ ಎಂಬಲ್ಲಿ ಜನಿಸಿದರು. ಸ್ವಾಮಿಶ್ರೀ ಕೇಶವಾನಂದರಿಂದ ಅನುಗ್ರಹಿತರಾಗಿ ಅವರ ಪ್ರಮುಖ ಶಿಷ್ಯರಲ್ಲಿ ಒಬ್ಬರೆನಿಸಿದರು. ಇವರು "ವಲ್ಲಭನೋ ಪರಿವಾರ" "ಚೋರಾಸಿ ವೈಷ್ಣವನೋ ದೋಲಾ" "ಭಕ್ತಿಪೋಷಣ" ಎಂಬ ಗ್ರಂಥಗಳು ಹಾಗೂ "ಅಜಾಮಿಳಾಖ್ಯಾನ"ವೆಂಬ ಪೌರಾಣಿಕ ಕಾವ್ಯವನ್ನು "ನರಸಿಂಹ ಮೆಹತಾನಿ ಹುಂಡಿ" ಮತ್ತು "ಋತುವರ್ಣನ" ಎಂಬ ಇತರ ಗ್ರಂಥಗಳನ್ನು ಇವರು ಬರೆದಿದ್ದಾರೆ. ಸುಪ್ರಸಿದ್ಧವಾದ ಗರಬಾ ನೃತ್ಯಕ್ಕೆ ಇಲ್ಲಿಯವರೆಗೆ

ಪರಂಪರಾನುಗತವಾದ ಕೇವಲ ಕೆಲವೇ ಪದ್ಯಗಳನ್ನು ಮಾತ್ರ ಅಳವಡಿಸಿಕೊಳ್ಳಲಾಗಿತ್ತು. ಆದರೆ ದಯಾರಾಮರು ನವೀನ ಶೈಲಿಯಲ್ಲಿ ಸುಂದರವಾದ ಗರಬಿ ಪದ್ಯಗಳನ್ನು ಬರೆದು ಆ ನೃತ್ಯದಲ್ಲಿ ಹೊಸಯುಗವನ್ನೇ ಪ್ರಾರಂಭಿಸಿದರು. ಅವರು ಬರೆದ ಈ ಪದ್ಯಗಳು ಅವರ "ಗರಬಿ ಸಂಗ್ರಹ" ಎಂಬ ಪುಸ್ತಕದದ ಸಂಗ್ರಹಿತವಾಗಿವೆ.

ಹದಿನೆಂಟನೇಯ ಶತಮಾನದ ಆದಿಯಿಂದ ಗುಜರಾತಿ ಸಾಹಿತ್ಯವು ಬಹುಮುಖ ಏಳ್ಗೆಯನ್ನು ಸಾಧಿಸಿತು. ಈ ಶತಮಾನದ ಎದ್ದು ಕಾಣುವ ಸಾಹಿತಿಗಳಲ್ಲಿ ಕವಿ ದಲಪತರಾಮ ಮತ್ತು ಕವಿ ನರ್ಮದಾಶಂಕರ ಇವರು ಪ್ರಮುಖರಾದವರು. ಸ್ವದೇಶಾಭಿಮಾನ, ಸ್ವದೇಶಪ್ರೀತಿ, ಮಾತೃಭಾಷಾಭಿಮಾನ ಮೊದಲಾದ ರಾಷ್ಟ್ರೀಯ ಭಾವನೆಗಳಿಂದೊಡಗೂಡಿದ ಕವಿಗಳಲ್ಲಿ ದಲಪತರಾಮರು ಸುಪ್ರಸಿದ್ಧರೂ ಅಗ್ರಗಣ್ಯರೂ ಎಂದು ಹೇಳಬಹುದು. ಇವರು ಬರೆದ "ಹುನ್ನರ ಖಾನಾನಿ-ಚಡಾಯಿ" (ಅಂದರೆ ಯಾಂತ್ರಿಕ ಯುಗದ ಆಕ್ರಮಣ) ಎಂಬ ಕಾವ್ಯವು ಸ್ವದೇಶಿ ಚಳುವಳಿಗೆ ಸಂಬಂಧಪಟ್ಟ ಪ್ರಥಮ ಕಾವ್ಯವು. ಇವರಿಂದ ರಚಿತವಾದ ಎಲ್ಲ ಕೃತಿಗಳನ್ನು "ದಲಪತಕಾವ್ಯ"ವೆಂಬ ಗ್ರಂಥದಲ್ಲಿ ಸಂಗ್ರಹಿಸಲಾಗಿದೆ.

ಸಮಾಜ ಸುಧಾರಣೆಗಳಿಗಾಗಿ ಹೋರಾಡಿದ ಗುಜರಾತದ ಕವಿಗಳಲ್ಲಿ ಮೊದಲಿಗರೆಂದರೆ ಕವಿವರ್ಯ ನರ್ಮದರು. ವಿಧವಾ ವಿವಾಹ, ಅಂಧಶ್ರದ್ಧೆಗಳ ನಿರ್ಮೂಲನೆ ಇವುಗಳಿಗಾಗಿ ಇವರು ಸಾಕಷ್ಟು ಹೋರಾಡಿದ್ದಾರೆ. "ನರ್ಮಕೋಶ"ವನ್ನು ರಚಿಸಿ ಗುಜರಾತಿ ಸಾಹಿತ್ಯಕ್ಕಿದ್ದ ದೊಡ್ಡ ಕೊರತೆಯನ್ನು ತುಂಬಿದ ಶ್ರೇಯಸ್ಸು ಅವರದು. ಇವರು ತಮ್ಮ ಕಾವ್ಯಗಳಲ್ಲಿ ಅಲಂಕಾರ, ಶೃಂಗಾರ ಇವುಗಳಿಗೆ ವಿಶೇಷ ಸ್ಥಾನಗಳನ್ನು ಕೊಟ್ಟಿದ್ದಾರೆ. ಕವಿತೆಗಳಲ್ಲಿ ನವೀನ ಶೈಲಿಗಳನ್ನು ಇವರೇ ಮೊದಲು ಪ್ರಾರಂಭಿಸಿದರು. "ಪಿಂಗಲ ಪ್ರಕಾಶ" "ಅಲಂಕಾರ ಪ್ರವೇಶ" "ಶೃಂಗಾರಪ್ರವೇಶ" ಇವರ ಕಾವ್ಯಗ್ರಂಥಗಳು. "ವನವರ್ಣನ" "ಪ್ರವಾಸವರ್ಣನ" ಎಂಬ ಇತರ ವರ್ಣನಾತ್ಮಕ ಗ್ರಂಥಗಳನ್ನು ಇವರು ಬರೆದಿರುವರು.

ಗುಜರಾತಿ ಸಾಹಿತ್ಯ ಸಾಗರದಲ್ಲಿ ಕಾದಂಬರಿ ಪ್ರವಾಹವನ್ನು ಪ್ರಥಮವಾಗಿ ಸಮ್ಮಿಲಿತಗೊಳಿಸಿದವರಲ್ಲಿ ಬಹು ಪ್ರತಿಭಾಶಾಲಿಗಳಾದ ಗೋವರ್ಧನರಾಮ ತ್ರಿಪಾಠಿಯವರು. ಇವರಿಂದ ರಚಿತವಾದ ಕೃತಿಗಳಲ್ಲಿ "ಸರಸ್ವತಿ ಚಂದ್ರ" ಎಂಬ ಬೃಹತ್ ಕಾದಂಬರಿಯು ಗ್ರಂಥರತ್ನವೆಂಬ ಹೆಸರನ್ನು ಗಳಿಸಿದೆ. "ಸಾಕ್ಷರ-ಜೀವನ" "ಲೀಲಾವತಿ ಜೀವನಕಾಲ" ಮತ್ತು ಇಂಗ್ಲಿಷಿನಲ್ಲಿ ಬರೆದ The Classical poets of Gujarath ಎಂಬವುಗಳು ಇವರ ಇತರ ಕೃತಿಗಳು.

ಮಣಿಲಾಲ ನಭುಭಾಯಿದ್ವಿವೇದಿಯವರು ಅರ್ವಾಚೀನ ಗುಜರಾತಿ ಸಾಹಿತ್ಯಕ್ಕೆ ಬಹುವಾಗಿ ಸೇವೆ ಸಲ್ಲಿಸಿದವರು. ಶೈಕ್ಷಣಿಕ, ನಿಬಂಧಾತ್ಮಕ, ಐತಿಹಾಸಿಕ, ಆಧ್ಯಾತ್ಮಿಕ ಮೊದಲಾದ ಅನೇಕ ದಿಶೆಗಳಲ್ಲಿ ಇವರು ಸಾಹಿತ್ಯಸೇವೆಯನ್ನು ಸಲ್ಲಿಸಿದ್ದಾರೆ. ಅನೇಕ

ಸಂಸ್ಕೃತ ಗ್ರಂಥಗಳನ್ನು ಇವರು ಗುಜರಾತಿಯಲ್ಲಿ ಅನುವಾದಿಸಿದ್ದು ಅವುಗಳಲ್ಲಿ "ಮಾಲತಿಮಾಧವ" "ಉತ್ತರರಾಮಚರಿತ" "ಪರಾಮರ್ಶ ಖಂಡ" "ಭೋಜಪ್ರಬಂಧ" "ಚತುರ್ವಿಂಶತಿ ಪ್ರಬಂಧ" ಮೊದಲಾದ ಅನೇಕ ಗ್ರಂಥಗಳು ಪ್ರಮುಖವಾದವುಗಳು. ಇವರು ಬರೆದ "ಗುಲಾಬಸಿಂಹ" ಕಾದಂಬರಿಯ ಮೇಲೆ ಆಂಗ್ಲಕಾದಂಬರಿಗಳ ಶೈಲಿ ವಿಶೇಷವಾಗಿ ಕಂಡುಬರುತ್ತದೆ. "ಕಾಂತಾ" ಮತ್ತು "ನೃಸಿಂಹಾವತಾರ" ಎಂಬ ಒಂದೆರಡು ನಾಟಕಗಳನ್ನು ಸಹ ಇವರು ಬರೆದಿದ್ದಾರೆ.

ಮಣಿಲಾಲ ನಭುಭಾಯಿ ದ್ವಿವೇದಿಯವರ ಸಮಕಾಲೀನ ಹೆಸರಾಂತ ಸಾಹಿತ್ಯ ಕಾರರಲ್ಲಿ "ಕಲಾಪಿ" ಮಣಿಶಂಕರ ಭಟ್ಟ ("ಕಾಂತ"), ಕೇಶವಲಾಲ ಧೃವ, ಬಾಲಾ ಶಂಕರ (ಕವಿಬಾಲ) ಮೊದಲಾದವರು ಪ್ರಮುಖರಾಗಿದ್ದಾರೆ.

ಸೂರಸಿಂಹಜಿ ಗೋಯೆಲ್‌ರವರ ಕಾವ್ಯನಾಮ "ಕಲಾಪಿ" ಇವರಿಂದ ರಚಿತ ವಾದ ಕೃತಿಗಳಲ್ಲಿ "ಕಲಾಪಿನೋ ಕೇಕಾರವ" ಕಾವ್ಯವೂ "ಕಾಶ್ಮೀರನೋಪ್ರವಾಸ" ವೆಂಬ ಪ್ರವಾಸ ಗ್ರಂಥವೂ, "ಮಾಲಾ ಅನೆ ಮುದ್ರಿಕಾ" ಎಂಬ ಕಾದಂಬರಿಯೂ ಮುಖ್ಯವಾಗಿವೆ. "ಕಲಾಪಿನೋ ಕೇಕಾರವ" ಎಂದರೆ ನವಿಲಿನ ಕೂಗು ಎಂದರ್ಥ. ನವಿಲಿನ ಕೂಗು ಕರ್ಣಕರ್ಕಶವಾದರೂ ಇವರ ಕಾವ್ಯದಲ್ಲಿಯ ನವಿಲು ಮಾತ್ರ ಕರ್ಣ ಮಧುರವಾಗಿ ಕೂಗುತ್ತದೆ.

ಮಣಿಶಂಕರ ರತ್ನಾಜಿ ಭಟ್ಟ-(ಕಾಂತ) ಅವರು ಬರೆದ ಕವನಗಳು "ಪೂರ್ವಾ ಲಾಪ" ಎಂಬ ಗ್ರಂಥದಲ್ಲಿ ಸಂಗ್ರಹಿಸಲ್ಪಟ್ಟಿವೆ. ಅವುಗಳಲ್ಲಿ "ವಸಂತ ವಿಜಯ" "ಚಕ್ರವಾಕ-ಮಿಥುನ" ಮೊದಲಾದ ಕಾವ್ಯಗಳು ಬಹು ಶ್ರೇಷ್ಠವಾದವುಗಳು. ಮಣಿ ಲಾಲ ನಭುಬಾಯಿ ದ್ವಿವೇದಿಯವರನ್ನು ಇವರು ಗುರುಸ್ಥಾನದಲ್ಲಿ ಕಾಣುತ್ತಿದ್ದರು.

ಕೇಶವಲಾಲ ಧೃವ ಇವರು "ಅಮರ ಶತಕ" "ಗೀತಗೋವಿಂದ" "ಮುದ್ರಾ ರಾಕ್ಷಸ" ಮೊದಲಾದ ಕೃತಿಗಳನ್ನು ರಚಿಸಿದ್ದಾರೆ.

ಕವಿತಾದೇವಿಯ ಅಖಂಡ ಉಪಾಸನೆಯೇ ಕವಿಬಾಲಾ ಶಂಕರರ (ಕವಿಬಾಲ) ಜೀವನದ ಮುಖ್ಯ ಸೂತ್ರವಾಗಿತ್ತು. ಕಾವ್ಯರಸಾಸ್ವಾದನೆಯನ್ನು ಇತರರು ಅನುಗಾಲ ಮಾಡಿ ತೃಪ್ತರಾಗಲೆಂಬುದೇ ಇವರ ಮಹದಾಕಾಂಕ್ಷೆಯಾಗಿತ್ತು. ಇವರು ಸ್ವತಃ ತಮ್ಮ ಜೀವನಕಾಲದಲ್ಲಿ ಸುಖವನ್ನು ದಾರುಣದುಃಖವನ್ನು ನಿರ್ಲಿಪ್ತಭಾವದಿಂದ ಅನು ಭವಿಸಿ ತಮ್ಮ ಅನುಭವಾಮೃತದಿಂದೊಡಗೂಡಿದ ಅನೇಕ ಕೃತಿಗಳನ್ನು ರಚಿಸಿದರು. ಇವರ ಕೃತಿಗಳನ್ನು ಸಾಮಾನ್ಯವಾಗಿ ಮೂರು ವರ್ಗಗಳಲ್ಲಿ ವಿಂಗಡಿಸಬಹುದಾಗಿದೆ. ಮೊದಲನೇಯ ವರ್ಗದಲ್ಲಿ ಇವರ ಶುದ್ಧ ಕಾವ್ಯಗಳೂ ಎರಡನೇಯ ವರ್ಗದಲ್ಲಿ ನಿಬಂಧ ಮತ್ತು ವಿವರಣಾತ್ಮಕ ಕೃತಿಗಳೂ ಮತ್ತು ಮೂರನೇಯ ವರ್ಗದಲ್ಲಿ ಇವರು ಮಾಡಿದ ಭಾಷಾಂತರಗಳೂ ಬರುತ್ತವೆ. "ಚಂದ್ರಾವತಿ" ಎಂಬ ನಾಟಕ, "ಕಲಾಂತ ಕವಿ"

ಎಂಬ ಖಂಡ ಕಾವ್ಯವೂ "ಸೌಂದರ್ಯಲಹರಿ" ಎಂಬ ಪದ್ಯಾತ್ಮಕ ಭಾಷಾಂತರ ಇವು ಇವರ ಮುಖ್ಯ ಕೃತಿಗಳಲ್ಲಿ ಕೆಲವು.

ಕವಿತಾ ಸುಂದರಿಯ ವಿರಹವು ಕವಿಗೆ ಎಂಥ ವ್ಯಥೆಯನ್ನು ತಂದೊಡ್ಡಬಲ್ಲದು ಎಂಬ ವಿಷಯವನ್ನು "ಕಲಾಂತಕವಿ"ಯಲ್ಲಿ ಕವಿಯು ಬಹು ಮಾರ್ಮಿಕವಾಗಿ ವರ್ಣಿಸಿದ್ದಾನೆ. ಇವರ ಭಾಷಾ ಶೈಲಿ, ರಚನೆ, ಇವುಗಳು ಬಹು ಉನ್ನತ ಮಟ್ಟದವಿದ್ದು ಪ್ರೌಢತೆ, ಸುಸಂಸ್ಕೃತಿ, ಇವುಗಳು ಇವರಲ್ಲಿ ಸಾಕಾರವಾಗಿ ಮೈದಳೆದಿವೆ.

ಹತ್ತೊಂಬತ್ತನೇಯ ಶತಮಾನದ ಆದಿಭಾಗದ ಸಾಹಿತ್ಯಕಾರರಲ್ಲಿ ಜನ್ಮಶಂಕರ ಬೂಚ್, ಇಚಾರಾಮ, ಚುನಿಲಾಲವರ್ಧಮಾನಶಾ, ಭೋಗಿಂದ್ರ ದಿವೇಟಿಯಾ, ಮೊದಲಾದವರು ಪ್ರಮುಖರಾದವರು.

"ಲಲಿತನೋಕಾವ್ಯ" "ಸೀತಾವನವಾಸ" ಎಂಬೆರಡು ಹೆಸರಾಂತ ಕಾವ್ಯಗಳನ್ನು ಜನ್ಮಶಂಕರಬೂಚ್ ಅವರು ರಚಿಸಿದ್ದಾರೆ. ಶಿವಾಜಿಯ ಸೂರತನಗರದ ಸುಲಿಗೆಗೆ ಸಂಬಂಧಿಸಿದ "ಗಂಗಾ" ಎಂಬ ಕಾದಂಬರಿಯನ್ನು ಇಚಾರಾಮರು ಬರೆದಿದ್ದಾರೆ. "ಸೋರಠಿಸೋಮನಾಥ" "ಗುಜರಾತನಿಜೂನಿವಾರತಾ" ಎಂಬ ಎರಡು ಗ್ರಂಥಗಳನ್ನು ಚುನಿಲಾಲ ವರ್ಧಮಾನಶಾರವರು ಬರೆದಿದ್ದಾರೆ. ಮಣಿಲಾಲ ಚಬಾರಾಮರ "ಪೃಥ್ವಿರಾಜ ಚವ್ಹಾಣ" ಠಾಕೂರ ನಾರನಜೀಯವರ "ಪದ್ಮಿನಿ" ಈ ಗ್ರಂಥಗಳೂ ಸಹ ಇದೇ ಸಮಯದಲ್ಲಿ ರಚಿಸಲ್ಪಟ್ಟವು. ಸಟ್ಟುವಾಲಾರವರು ಇದೇ ಕಾಲದಲ್ಲಿ "ವಿಕ್ರಮನಿ ವೀಸಮಿಸದಿ" ಎಂಬ ಪುಸ್ತಕವನ್ನು ಬರೆದಿದ್ದು ಅದು ಇಂದಿಗೂ ಸಹ ಓದುಗರ ಕುತೂಹಲವನ್ನು ಕೆರಳಿಸುವಂಥ ಕೃತಿಯಾಗಿದೆ.

ಮಹಾತ್ಮಾ ಗಾಂಧಿಯವರ ಬರೆಹಗಳನ್ನು ಕುರಿತು ಕೇವಲ ಕೆಲವೇ ಪಂಕ್ತಿಗಳಲ್ಲಿ ಅಭಿಪ್ರಾಯ ವ್ಯಕ್ತಪಡಿಸುವದು ನಿಜವಾಗಿಯೂ ಕಷ್ಟದ ಕೆಲಸ. ಮಹಾತ್ಮಾ ಗಾಂಧಿಯವರು ಬರೆದ "ಮಾರಿ ಆತ್ಮಕಥಾ" "ನನ್ನ ಆತ್ಮಕಥೆ" ಎಂಬ ಗ್ರಂಥವು ಲೋಕ ವಿಖ್ಯಾತವಾಗಿದ್ದು ಅದು ಜಗತ್ತಿನ ಎಲ್ಲ ಭಾಷೆಗಳಲ್ಲಿಯೂ ಅನುವಾದಿಸಲ್ಪಟ್ಟಿವೆ.

ದತ್ತಾತ್ರಯ ಬಾಲಕೃಷ್ಣ ಕಾಲೇಕರರನ್ನು ಜನರು "ಕಾಕಾ ಕಾಲೇಕರ" ಎಂದು ಕರೆಯುವರು. ಇವರು ಮಹಾರಾಷ್ಟ್ರದವರಾದರೂ ಗುಜರಾತಿ ಭಾಷೆಯಲ್ಲಿ ಬಹು ಪಳಗಿದವರು. "ಹಿಮಾಲಯನೊ ಪ್ರವಾಸ" "ಪೂರ್ವರಂಗ" "ಸ್ಮರಣಯಾತ್ರಾ" ಮತ್ತು "ಲೋಕಮಾತಾ" ಮೊದಲಾದ ಗ್ರಂಥಗಳನ್ನು ಇವರು ಬರೆದಿರುವರು. ಇವುಗಳಲ್ಲಿ "ಲೋಕಮಾತಾ" ಎಂಬ ಗ್ರಂಥವು ಭಾರತ ದೇಶದ ನದಿಗಳು ಮತ್ತು ಅವುಗಳ ಮಹತ್ತ್ವವನ್ನು ಕುರಿತು ಬರೆಯಲ್ಪಟ್ಟಿದ್ದು ಇವರ ಮಹತ್ತ್ವದ ಕೃತಿಗಳಲ್ಲಿ ಒಂದಾಗಿದೆ.

ಹತ್ತೊಂಬತ್ತನೇಯ ಶತಮಾನದ ಪ್ರಥಮಾರ್ಧದಿಂದ ಗುಜರಾತಿ ಸಾಹಿತ್ಯವು ಸಂಪದ್ಭರಿತವಾಗಿಯೂ, ವಿಶಾಲವಾಗಿಯೂ, ಸಾಹಿತ್ಯದ ಅನೇಕ ಪ್ರಕಾರಗಳಿಂದ

ಕೂಡಿಯೂ ಭರದಿಂದ ಬೆಳೆಯುತ್ತ ನಡೆದಿದ್ದು ಕಂಡುಬರುತ್ತದೆ. ಕ. ಮಾ. ಮುನಶಿ ಯವರಂಥ ಪ್ರೋಢಾವಿಗಳೂ, ರಾಜಕಾರಣ ಪಟುಗಳೂ ಸಾಹಿತ್ಯ ರಂಗಕ್ಕಿಳಿದು ಗುಜ ರಾತಿ ಸಾಹಿತ್ಯಕ್ಕೆ ಅಪಾರ ಸೇವೆಯನ್ನು ಸಲ್ಲಿಸಿದ್ದಾರೆ. ಇವರು ಬರೆದ ಐತಿಹಾಸಿಕ ಕಾದಂಬರಿಗಳಂತೂ ಗುಜರಾತದಲ್ಲಿ ಆದರಣೀಯ ಗ್ರಂಥಗಳಾಗಿವೆ. ಅವುಗಳಲ್ಲಿ "ಪಾಟಣನಿಪ್ರಭುತಾ" "ಗುಜರಾತನೋನಾಥ" "ಭಗವಾನ್ ಕೌಟಿಲ್ಯ" ಮೊದ ಲಾದವುಗಳು ಅತ್ಯಂತ ಸುಪ್ರಸಿದ್ಧ ಕಾದಂಬರಿಗಳು. ಮೊದಲಿನ ಮೂರು ಕಾದಂಬರಿ ಗಳೂ ಗುಜರಾತದ ಇತಿಹಾಸದಲ್ಲಿ ಸುವರ್ಣಯುಗವೆಂದು ಹೆಸರಾದ ಸಿದ್ಧರಾಜ ಸೋಲಂಕಿ ಮೊದಲಾದ ರಾಜರ ಆಳಿಕೆಯಲ್ಲಿಯ ಘಟನೆಗಳನ್ನು ಕುರಿತು ಬರೆದವುಗಳು.

ಶ್ರೀ ಮುನಶಿಯವರಿಂದ ಸುಮಾರು ೪೦-೪೫ ಗ್ರಂಥಗಳು ರಚಿತವಾಗಿದ್ದು ಇಂಗ್ಲಿಷಿನಲ್ಲಿಯೂ ಅವರು ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ಈ ಕೆಳಗಿನವು ಅವುಗಳಲ್ಲಿ ಮುಖ್ಯವಾದವುಗಳು.

(1) The Glory that was Gurjara Desh (In 3 Parts).
(2) Early Aryans in Gujarat·
(3) The ruin that British wrough.
(4) The Bhagavadgeeta and Modern life.
(5) Gujrat and its literature.

ಗೌರಿಶಂಕರ ಜೋಶಿಯವರ ಕಾವ್ಯನಾಮ ಧೂಮಕೇತು. ಸಣ್ಣ ಕತೆಗಳ ಬರೆಹಗಾರರಲ್ಲಿ ಇವರು ಶ್ರೇಷ್ಠರಾದವರು. ಇವರು ಬರೆದ ಸಣ್ಣ ಕತೆಗಳು "ತಣಖಾ" ಅಂದರೆ ಕಿಡಿಗಳು ಎಂಬ ಪುಸ್ತಕದಲ್ಲಿ ಸಂಗ್ರಹಿತವಾಗಿವೆ. ಸಣ್ಣ ಕತೆಗಳ ಬರೆಹ ಗಾರರಾದ ಇವರು ಸುಪ್ರಸಿದ್ಧ ಕಾದಂಬರಿಕಾರರೂ ಅಹುದು. ಸುಮಾರು ಹದಿನೈದು ಇಪ್ಪತ್ತು ಐತಿಹಾಸಿಕ ಕಾದಂಬರಿಗಳನ್ನು ಇವರು ಬರೆದಿದ್ದು ಅವುಗಳನ್ನು ಸಾಮಾನ್ಯ ವಾಗಿ ಎರಡು ವರ್ಗಗಳಲ್ಲಿ ವಿಂಗಡಿಸಬಹುದಾಗಿದೆ. ಮೊದಲನೇಯ ವರ್ಗದಲ್ಲಿ ಇವರು ಬರೆದ ಗುಜರಾತದ ಚಾಲುಕ್ಯ ವಂಶದ ಅರಸರ ಆಳಿಕೆಗೆ ಸಂಬಂಧಿಸಿದ ಕಾದಂಬರಿಗಳನ್ನು ಸೇರಿಸಿದರೆ ಎರಡನೇಯ ವರ್ಗದಲ್ಲಿ ಗುಪ್ತಯುಗಕ್ಕೆ ಸಂಬಂಧಿಸಿದ ಐತಿಹಾಸಿಕ ಕಾದಂಬರಿಗಳನ್ನು ಸೇರಿಸಬಹುದಾಗಿದೆ. ಮೊದಲನೇಯ ವರ್ಗದ ಕಾದಂಬರಿಗಳಲ್ಲಿ "ತ್ರಿಭುವನ ಗಂಡ" "ಅವಂತಿನಾಥ" "ಚೌಲಾದೇವಿ" "ರಾಜ ಸಂನ್ಯಾಸಿ" "ಕರ್ಣಾವತಿ" "ರಾಜಕನ್ಯಾ" "ಗುರ್ಜರೇಶ್ವರ ಕುಮಾರಪಾಲ" ಮೊದ ಲಾದವು ಪ್ರಮುಖವಾದವುಗಳು. ಗುಪ್ತಯುಗದ ಕಾದಂಬರಿಗಳಲ್ಲಿ "ಆಮ್ರಪಾಲಿ" "ವೈಶಾಲಿ" "ಮಗಧಪತಿ" "ಮಹಾಮಾತ್ಯ ಚಾಣಕ್ಯ" "ಚಂದ್ರಗುಪ್ತ ಮೌರ್ಯ" "ರಾಜಮುಗುಟ" "ರುದ್ರಶರಣ" ಮೊದಲಾದವು ಹೆಸರುವಾಸಿಗಳಾದವುಗಳು.

ಇವರು ಅನೇಕ ನಾಟಕಗಳನ್ನು, ಜೀವನಚರಿತ್ರೆಗಳನ್ನು, ಪ್ರವಾಸ ಗ್ರಂಥಗಳನ್ನು ಪ್ರೌಢಶಿಕ್ಷಣಕ್ಕೆ ಸಂಬಂಧಿಸಿದ ಅನೇಕ ಪುಸ್ತಕಗಳನ್ನು ಬರೆದಿದ್ದಾರೆ.

ಸರ್ವಾಂಗ ಸುಂದರವಾಗಿ ದಿನೆ ದಿನೇ ಅಭಿವೃದ್ಧಿಯನ್ನು ಪಡೆಯುತ್ತಿರುವ ಅರ್ವಾಚೀನ ಗುಜರಾತಿ ಸಾಹಿತ್ಯದಲ್ಲಿ ಲೇಖಕಿಯರು ಮಾತ್ರ ಅತಿ ವಿರಳವೆಂದು ಹೇಳಬಹುದಾಗಿದೆ. ಇಷ್ಟ ಆರೇಳು ಮಂದಿ ಬರಹಗಾರ್ತಿಯರಲ್ಲಿ ಶ್ರೀಮತಿ ಲೀಲಾವತಿ ಮುನಷಿಯವರ ಹೆಸರು ಗಣ್ಯ ಸ್ಥಾನವನ್ನು ಪಡೆದಿದೆ. ಇವರು "ಜೀವನಮಾಥಿ ಜಡೇಲಿೊ" "ಕುಮಾರದೇವಿ" "ಬುದ್ಧಿ ಶಾಲಿನೊ ಅಖಾಡೊ" ಮೊದಲಾದ ಗ್ರಂಥ ಗಳನ್ನು ಬರೆದಿದ್ದಾರೆ. ಇವರು ಬರೆದ ಹಲವು ಲೇಖನಗಳು "ರೇಖಾಚಿತ್ರ" ಎಂಬ ಸಂಕಲನದಲ್ಲಿ ಸಂಗ್ರಹಿಸಲ್ಪಟ್ಟಿವೆ.

ಶ್ರೀಮತಿ ಮುನಷಿಯವರ ನಂತರ-ಶ್ರೀಮತಿ ಹಂಸಾಬೆನ್ ಮೋಹತಾರವರ ಹೆಸರು ದ್ವಿತೀಯ ಸ್ಥಾನಕ್ಕೇರಬಲ್ಲದು. ಇವರು ಕೆಲವು ನಾಟಕಗಳನ್ನು ವಿವಿಧ ವಿಷಯಗಳ ಮೇಲೆ ಅನೇಕ ಪುಸ್ತಕಗಳನ್ನು ಬರೆದಿದ್ದಾರೆ. ಬಾಲಕರಿಗಾಗಿ ಇವರು ಉತ್ತಮ ಸಾಹಿತ್ಯವನ್ನು ಒದಗಿಸಿದ್ದಾರೆ. ಉಳಿದ ಸಾಹಿತ್ಯ ಕಲಾವಿದೆಯರಲ್ಲಿ ಕವಿಯತ್ರಿ ಶ್ರೀಮತಿ-ಸುಮತಿ ತ್ರಿವೇದಿ ಶ್ರೀಮತಿ-ಪ್ರಿಯಮತಿ, ಶ್ರೀಮತಿ ಭಾರತೀ ಬೆನ್ ಸಾರಾಭಾಯಿ ಇವರೇ ಮೊದಲಾದವರು ಹೆಸರುವಾಸಿಗಳಾದವರು.

ಧೂಮಕೇತು ಅವರಿಂದ ಬಿತ್ತಲ್ಪಟ್ಟ ಸಣ್ಣ ಕತೆಗಳ ಬೀಜವನ್ನು ನೀರೆರೆದು ಬೆಳೆಸಿಕೊಂಡು ಬಂದವರಲ್ಲಿ ರಾಮನಾರಾಯಣ ವಿಶ್ವನಾಥ ಪಾಠಕರು ಒಬ್ಬರು. "ದ್ವಿರೇಪನಿವಾರತಾ" ಎಂಬ ಗುಚ್ಛದಲ್ಲಿ ಇವರ ಸಣ್ಣ ಕತೆಗಳು ಸಮ್ಮಿಲಿತಗೊಂಡಿವೆ. ಅನೇಕ ಕವಿತೆಗಳನ್ನು ಸಹ ಇವರು ಬರೆದಿದ್ದು ಅವು "ಷೇಷನೋಕಾವ್ಯ" ಮತ್ತು "ಕಾವ್ಯಸಮುಚ್ಚಯ" ಎಂಬ ಎರಡು ಸಂಕಲನಗಳಲ್ಲಿ ಸಂಗ್ರಹಿತವಾಗಿವೆ.

ಇತ್ತೀಚಿನ ಕವಿಗಳಲ್ಲಿ ಶ್ರೀ ಉಮಾಶಂಕರ ಜೋಷಿ ಮತ್ತು ಚಂದ್ರವದನ ಮೇಹತಾ ಇವರ ಸ್ಥಾನಗಳು ಅತ್ಯುಚ್ಚ ಮಟ್ಟದವು. ಉಮಾಶಂಕರ ಜೋಷಿಯವರ ಕಾವ್ಯಗಳಲ್ಲಿ ಉಚ್ಚಮಟ್ಟದ ಭಾವ ಅರ್ಥ ಗಾಂಭೀರ್ಯ ಪದಲಾಲಿತ್ಯ ಮೊದಲಾದ ಲಕ್ಷಣಗಳು ಹಾಸುಹೊಕ್ಕಾಗಿ ತುಂಬಿಕೊಂಡಿವೆ. "ಗಂಗೋತ್ರಿ" "ನಿಸಿಥ" "ಆತಿಥ್ಯ" "ವಸಂತ ವರ್ಷ" "ಸಮಸಂವೇದನ" ಮೊದಲಾದ ಕಾವ್ಯಗಳು ಇವರ ಅತಿಮುಖ್ಯ ಕೃತಿಗಳಾಗಿವೆ.

ಚಂದ್ರವದನ ಚುನಿಲಾಲ ಮೇಹತಾರವರು ರಾಗ-ದ್ವೇಷಗಳಿಂದ ಅತಿದೂರ ದಾದವರು. ಇವರ ಹೃದಯ ಬಹು ಕೋಮಲವಾದದು. ಯಾರನ್ನಾದರೂ ಮುಗ್ಧಗೊಳಿಸಿ ತನ್ನವರನ್ನಾಗಿ ಮಾಡಿಕೊಳ್ಳುವ ದಿವ್ಯವ್ಯಕ್ತಿತ್ವ ಇವರದು. ಇವರ ಹೃದಯದ ಕೋಮಲತೆಯು ಇವರ ಕಾವ್ಯಗಳಲ್ಲಿ ಅಚ್ಛೊತ್ತಿದಂತೆ ಮೂಡಿ ಬಂದಿದೆ.

ಒಡಹುಟ್ಟಿದವರೆಂದು ಭಾವಿಸಿಕೊಂಡ ಹೆಂಗಳೆಯರಿಬ್ಬರು ಇಹಲೋಕವನ್ನು ತ್ಯಜಿಸಿದಾಗ ಆದ ದಾರುಣ ದುಃಖವನ್ನು ಕುರಿತು ರಚಿಸಿದ ಕಾವ್ಯದ ಹೆಸರು "ಇಲಾಕಾವ". ಇದು ಚಂದ್ರವದನ ಮೆಹತಾರ ಕೃತಿರತ್ನಗಳಲ್ಲಿ ಒಂದು. "ವಿಸರ್ಜನ" "ರತನ" ಮೊದಲಾದ ಇತರ ಕಾವ್ಯಗಳನ್ನು ಹಾಗೂ "ಮಾಝುಮರಾತ" ಮೊದಲಾದ ಅನೇಕ ನಾಟಕಗಳೂ ಇವರಿಂದ ಬರೆಯಲ್ಪಟ್ಟಿವೆ.

ಪ್ರಕೃತ ಕಾದಂಬರಿಕಾರರಲ್ಲಿ ಝವೇರಚಂದ ಮೇಘಾನಿ, ಪನ್ನಾಲಾಲ ಪಟೇಲ, ಜಯಭಿಕ್ಕು ಮೊದಲಾದವರು ಹೆಸರುವಾಸಿಗಳಾದವರು.

ಝವೇರಚಂದ ಮೇಘಾನಿಯವರು ಜೀವನವನ್ನು ಸೂಕ್ಷ್ಮಬುದ್ಧಿಯಿಂದ, ನ್ಯಾಯಪರವಾದ ಮಾರ್ಗದಲ್ಲಿ ಅವಲೋಕಿಸಿ, ಸಾಮಾಜಿಕ ಕಾದಂಬರಿಗಳನ್ನು ಬರೆದಿದ್ದಾರೆ.

ಸೌರಾಷ್ಟ್ರದ ವನಶ್ರೀಯೂ, ಅಲ್ಲಿಯ ಗಿರಿರಾಜಿಯ ಜುಳು ಜುಳು ನಿನಾದದಿಂದ ಹರಿಯುವ ಅಲ್ಲಿಯ ಆ ನದಿಗಳೂ ಆನಂದಮಯವಾದ ಸ್ವಚ್ಛಂದ ಗ್ರಾಮ್ಯಜೀವನವೂ, ಅದ್ಭುತ ಚರಿತ್ರೆಗಳಿಂದೊಡಗೂಡಿದ ಅದರ ಐತಿಹಾಸಿಕ ಹಿನ್ನೆಲೆಯೂ ಮೇಘಾನಿಯವರನ್ನು ಅತಿಸುಂದರ "ಸೌರಾಷ್ಟ್ರನಿ ರಸಧಾರ" ಎಂಬ ಕೃತಿಯನ್ನು ನಿರ್ಮಿಸಲು ಪ್ರೇರೇಪಿಸಿದವು. ೫೦–೬೦ ಗ್ರಂಥಗಳನ್ನು ಇವರು ಬರೆದಿದ್ದು ಅವುಗಳಲ್ಲಿ ಅನೇಕ ಕಾದಂಬರಿಗಳಿರುವವು. ಅವುಗಳಲ್ಲಿ "ಸೋರಠತಾರಾ ವಹೆತಾಪಾಣಿ" "ಸತ್ಯನಿ ಶೋಧಮಾ" "ಬಿಡೇಲಾದ್ವಾರ" "ಗುಜರಾತನೋ ಜಯ" "ತುಲಸೀ ಕ್ಯಾರೋ" ಮೊದಲಾದವು ಮುಖ್ಯವಾದವುಗಳು.

ಜೀವನದಲ್ಲಿ ದಾರುಣವಾದ ದುಃಖಗಳು ಒಂದರಿಂದೊಂದು ಬಂದರೂ ಸಹ ಪರಮಾತ್ಮನಲ್ಲಿ ಅಚಲವಾದ ಶ್ರದ್ಧೆ ಇಟ್ಟರೆ ದುಃಖವೆಂಬ ಅಂಧಕಾರವು ಕರಗಿ ಸುಖವೆಂಬ ರವಿಯ ಉದಯವು ಯಾವ ಪ್ರಕಾರ ಆಗುತ್ತದೆ ಎಂಬ ವಿಷಯವು "ತುಲಸೀ ಕ್ಯಾರೋ" ಎಂಬ ಕಾದಂಬರಿಯಲ್ಲಿ ಹೃದಯಂಗಮವಾಗಿ ವರ್ಣಿತವಾಗಿದೆ.

"ರಾಣೋಪ್ರತಾಪ" "ಶಾಹಜಹಾಂ" "ರಾಜಾರಾಣಿ" ಮೊದಲಾದ ಪ್ರಸಿದ್ಧ ನಾಟಕಗಳನ್ನು ಇವರು ಬರೆದಿರುವರು.

ಗ್ರಾಮ್ಯ ಜೀವನವನ್ನು ಕುರಿತು ಗ್ರಾಮ್ಯ ಭಾಷಾಶೈಲಿಯಲ್ಲಿ ಚಿತ್ತಾಕರ್ಷಕವಾದ ಶೈಲಿಯಲ್ಲಿ ಕಾದಂಬರಿಗಳನ್ನು ಬರೆಯುವವರಲ್ಲಿ ಪನ್ನಾಲಾಲ ಪಟೇಲರದು ಪಳಗಿದ ಕೈ.

"ಮಳೇಲಾಜೀವ" "ವಳಾಮಣಾ" "ಸರಭಿ" "ಪಾಛಲೇಬಾರಣೇ" "ಜಿಂದಗೀನಾ ಖೇಲ" ಮೊದಲಾದ ಹತ್ತುಹದಿನೈದು ಕಾದಂಬರಿಗಳನ್ನು ಇವರು ಬರೆದಿದ್ದಾರೆ. "ವಳಾಮಣಾ" ಮತ್ತು "ಮಳೇಲಾಜೀವ" ಈ ಎರಡು ಕಾದಂಬರಿಗಳು ಅತ್ಯಂತ

ಸುಂದರವಾಗಿದ್ದು ಅತಿ ಚಿಕ್ಕ ಗ್ರಾಮಗಳ ಸುತ್ತ ಇವುಗಳ ಕಥಾವಸ್ತು ಹೆಣೆಯಲ್ಪಟ್ಟಿವೆ. ಅವುಗಳಲ್ಲಿಯ ಗ್ರಾಮ್ಯ ಪಾತ್ರಗಳು ಅತಿ ಸಜೀವವಾಗಿದ್ದು ಓದುಗರ ಸ್ಮೃತಿಪಟಲದ ಮೇಲೆ ಬಹುಕಾಲ ನೆಲಸುವಂಥವಾಗಿವೆ.

ಇದುವರೆಗೆ ವಿವರಿಸಿದ ಐತಿಹಾಸಿಕ ಕಾದಂಬರಿಕಾರರ ಶೈಲಿಗಿಂತಲೂ ಭಿನ್ನವಾದ ಮತ್ತು ಪ್ರೌಢವಾದ ಶೈಲಿಯಲ್ಲಿ ಅನೇಕ ಐತಿಹಾಸಿಕ ಕಾದಂಬರಿಗಳನ್ನು ಜಯಭಿಕ್ಕು ಅವರು ಬರೆದಿದ್ದಾರೆ. ಸಂವಾದದ ಶೈಲಿ, ದೃಶ್ಯಗಳನ್ನು ವರ್ಣಿಸುವ ರೀತಿ ಇವುಗಳು ಇವರ ವಿಶೇಷತೆಗಳಾಗಿದ್ದು ಆ ಶೈಲಿಯನ್ನು ಇದುವರೆಗೆ ಯಾರೂ ಪ್ರಯೋಗ ಮಾಡಿದಂತೆ ಕಂಡು ಬರುವುದಿಲ್ಲ.

"ವಿಕ್ರಮಾದಿತ್ಯ ಹೇಮೂ" "ಭಾಗ್ಯ ನಿರ್ಮಾಣ" "ದಿಲ್ಲೀಶ್ವರ" "ಭಗವಾನ್ ವೃಷಭದೇವ" ಇವು ಇವರ ಮುಖ್ಯ ಕೃತಿಗಳು.

ಸರ್ವ ಪ್ರಕಾರಗಳಿಂದ ಒಡಗೂಡಿದ ಸಾಹಿತ್ಯದಲ್ಲಿ ಹಾಸ್ಯರಸದಿಂದೊಡಗೂಡಿದ ಸಾಹಿತ್ಯಕೃತಿಗಳು ಇಲ್ಲದಿದ್ದರೆ ಅದು ಪರಿಪೂರ್ಣ ಸಾಹಿತ್ಯವೆನಿಸಲಾರದು. ಸರ್ವಾಂಗ ಸುಂದರವಾಗಿ ಬೆಳೆದ ಗುಜರಾತಿ ಸಾಹಿತ್ಯದಲ್ಲೂ ಹಾಸ್ಯಪ್ರಧಾನವಾದ ಕೃತಿಗಳಿವೆ. ಅವುಗಳ ಕರ್ತೃಗಳಿದ್ದಾರೆ.

ಗುಜರಾತದ ಜ್ಯೋತೀಂದ್ರದವೆಯವರು "ಅಲ್ಪಾತ್ಮನು-ಆತ್ಮ ಪುರಾಣ", "ರಂಗ ತರಂಗ", "ಮಾರಿನೊಂಧ ಪೋತಿ" ಮೊದಲಾದ ಕೆಲವು ಹಾಸ್ಯರಸಪೂರ್ಣ ಕೃತಿಗಳನ್ನು ರಚಿಸಿದ್ದಾರೆ. ಇವರ ಕೆಲವು ಹಾಸ್ಯ ಕಥೆಗಳು "ಹಾಸ್ಯ ಕಥಾವೋ" ಎಂಬ ಪುಸ್ತಕದಲ್ಲಿ ಸಂಗ್ರಹಿತವಾಗಿವೆ.

ಜ್ಯೋತೀಂದ್ರದವೆಯವರ ರೀತಿ ಒಂದಾದರೆ ಈಶ್ವರ ಪೇಟಲಿಕರರ ರೀತಿ ಬೇರೊಂದು. ಸಮಾಜದ ನ್ಯೂನತೆಗಳನ್ನು ಹಾಸ್ಯಪೂರ್ಣವಾದ ಶೈಲಿಯಲ್ಲಿ ಹೊರಗೆಳೆದು ಜನತೆಯ ಮುಂದಿಡುವ ಇವರ ಶೈಲಿ ಬಹು ವಿಚಿತ್ರವೂ ಹಾಸ್ಯಮಯವೂ ಆಗಿದೆ.

"ತರಣಾ ಓಥೆಡುಂಗರ", "ಲೋಕಸಾಗರನೇ ತೀರೆ, ತೀರೆ", "ಕಾಶಿನು ಕರವತ", ಪಾರಸಮಣಿ" ಮೊದಲಾದವು ಇವರ ಕೃತಿಗಳು.

ಪ್ರಸ್ತುತ ಸಮಯದಲ್ಲಿ ಗುಜರಾತದಲ್ಲಿ ಇನ್ನೂ ಅನೇಕಾನೇಕ ಸಾಹಿತಿಗಳು ಸಾಹಿತ್ಯ ಕಲಾರಾಧನೆಯಲ್ಲಿ ತೊಡಗಿದ್ದು ಅವರೆಲ್ಲರನ್ನು ಕುರಿತು ಬರೆಯುವದಾದರೆ ದೊಡ್ಡದೊಂದು ಗ್ರಂಥವನ್ನೇ ಬರೆಯಬೇಕಾದೀತು. ಹೆಚ್ಚಿನ ವಿವರಗಳನ್ನು ಕೊಡದೆ ಆ ಸಾಹಿತಿಗಳ ಹೆಸರುಗಳನ್ನು ಮಾತ್ರ ಈ ಕೆಳಗೆ ಸೂಚಿಸಲಾಗಿದೆ. ಮುಂದೆ ಬರೆದ ಅಂಕಿಗಳು ಅವರ ಕೃತಿಗಳ ಸಂಖ್ಯೆಯಾಗಿವೆ.

| | | |
|---|---|---|
| ಗುಣವಂತರಾಯ ಆಚಾರ್ಯ | — | ಸುಮಾರು ೩೦ ಕೃತಿಗಳು. |
| ಮನುಭಾಯಿ ಜೋಧಾಣಿ | — | ,, ೧೦ – ೧೫. |
| ನರಸಿಂಹರಾವದಿವೇಟಿಯಾ | — | ,, ೬ – ೭. |
| ರಮಣಲಾಲಸೋನಿ | — | ,, ೨೦. |
| ಧೀರಜಲಾಲಶಾ | — | ,, ೮. |
| ಮಾಣಿಕಲಾಲಜೋಶಿ | — | ,, ೧೦ – ೧೫. |
| ಪುಷ್ಕರ ಚಂದರವಾಕರ | — | ,, ೬ – ೭. |
| ಜಯಂತಿದಲಾಲ | — | ,, ೮ – ೧೦. |
| ಚಂದ್ರಭಾಯಿ ಭಟ್ಟ | — | ,, ೨೦. |

ಕೃತಿ ರಚನೆಗಳಲ್ಲಿ ನವನವೀನ ಕಲೆಗಳ ಆಯ್ಕೆಯಲ್ಲಿಯೂ, ವಿಶಾಲವಾದ ದೃಷ್ಟಿಯನ್ನು ಅಳವಡಿಸಿಕೊಂಡು ಪರಂಪರಾನುಗತ ಬಂಧನಗಳನ್ನು ಕಿತ್ತೊಗೆಯುವುದರಲ್ಲಿಯೂ ಅರ್ವಾಚೀನ ಗುಜರಾತಿ ಸಾಹಿತ್ಯವು ಪ್ರಬಲವಾದ ಕ್ರಾಂತಿಯನ್ನೇ ಎದುರಿಸಬೇಕಾಯ್ತು. ಗದ್ಯ ಸಾಹಿತ್ಯವು ದಿನಗಳೆದಂತೆ ಹೆಚ್ಚು ಹೃದ್ಯವೂ ಬಲಿಷ್ಠವೂ ಆಗುತ್ತ ಬಂದಿತು. ಉನ್ನತ ಮಟ್ಟವನ್ನು ಕಂಡ ಸಣ್ಣ ಕತೆಗಳ ಕಾದಂಬರಿಗಳ ರಚನೆಯು ಅರ್ವಾಚೀನ ಗುಜರಾತಿ ಸಾಹಿತ್ಯದಲ್ಲಿ ವಿಪುಲವಾಗಿ ಬೆಳೆಯಿತು.

ಪ್ರಸಕ್ತ ಗುಜರಾತಿ ಸಾಹಿತ್ಯವು ಭಾರತದ ಪ್ರಚಲಿತ ಯಾವ ಸಾಹಿತ್ಯಕ್ಕೂ ಹಿಂದಿಲ್ಲವೆಂದು ನಿಸ್ಸಂದೇಹವಾಗಿ ಹೇಳಬಹುದಾಗಿದೆ.

ಧಾರ್ಮಿಕ, ನೈತಿಕ, ಸಾಹಿತ್ಯ ರಚನೆಯೂ ಗುಜರಾತದಲ್ಲಿ ವಿಪುಲವಾಗಿ ಬೆಳೆದಿದ್ದು ಆಧ್ಯಾತ್ಮಕ್ಕೆ ಸಂಬಂಧಿಸಿದ ದೊಡ್ಡ ದೊಡ್ಡ ಗ್ರಂಥಗಳು ಜನತೆಗೆ ಸುಲಭವಾದ ಬೆಲೆಯಲ್ಲಿ ಸಿಕ್ಕುವಂತೆ ಮಾಡಲು ಅನವರತ ಪ್ರಯತ್ನಗಳು ನಡೆದೇ ಇವೆ.

———:———

# ಆಧುನಿಕ ಮರಾಠಿ ಕಾವ್ಯದಲ್ಲಿ ಪ್ರತಿಮಾವಾದ



**ಪ್ರೊ: ಪಂಡಿತ ಅವಳೀಕರ, ಎಂ.ಎ.,**
ಕರ್ನಾಟಕ ಕಾಲೇಜ್, ಧಾರವಾಡ.

ಇತ್ತೀಚಿನ ಮರಾಠಿ ಕಾವ್ಯಪ್ರಪಂಚದಲ್ಲಿ ಪ್ರತಿಮಾವಾದದೆಡೆಗೆ ಬಲವಾದ ಒಲವಿದ್ದುದು ಕಾಣಬರುತ್ತದೆ. ಅಲ್ಲಿ ನವ್ಯಕಾವ್ಯದೊಂದಿಗೇ ಪ್ರತಿಮಾವಾದ (Imagism)ವೂ ಜನ್ಮತಾಳಿತು, ಪ್ರತಿಮಾಸಂವಿಧಾನವು (Imagery) ನವ್ಯಕಾವ್ಯದ ಜೀವಾಳ, ಒಂದು ಅಂಗ, ಒಂದು ವೈಶಿಷ್ಟ್ಯ ಪ್ರತಿಮಾಸಂವಿಧಾನದಲ್ಲಿ ಹೊಸ ಹೊಸ ಅನುಭವಗಳ ಪರಿಣಾಮಕಾರಿ ಸಂವೇದನೆಯನ್ನು ಬಿಂಬಿಸಲು ಕವಿಯು ಹೊಸದೊಂದು ವಿಧಾನವನ್ನು ಉಪಯೋಗಿಸುತ್ತಾನೆ. ಅದು ಪ್ರತಿಮೆಗಳ ಬಳಕೆ. ಅದನ್ನು ಮೊದಲು ಮಾಡಿದವರು ಶ್ರೀ ಮರ್ಢೇಕರ ಅವರು. ಅವರು ಅದನ್ನು ವಿಪುಲವಾಗಿ ಬಳಸಿರಲಿಕ್ಕಿಲ್ಲ; ಆದರೆ ಮೊಟ್ಟಮೊದಲು ಬಳಸಿದ ಶ್ರೇಯಸ್ಸು ಅವರಿಗೆ ಸಲ್ಲಲೇಬೇಕು. ಆದರೆ ಹೊಸದಾಗಿ ಹುಟ್ಟಿದ 'ಪ್ರತಿಮಾವಾದ'ದಲ್ಲಿ ಮರ್ಢೇಕರರಿಗೆ ಅಗ್ರಸ್ಥಾನ ಕೊಡುತ್ತಿಲ್ಲ. ಮರ್ಢೇಕರರು ಮಾಡಿದ ಪ್ರತಿಮಾಸಂವಿಧಾನವನ್ನು ಸ್ಥೂಲದಲ್ಲಿ ಪರೀಕ್ಷಿಸಬಹುದು.

ಇಲಿ, ಇರುವೆ ಮೊದಲಾದವುಗಳನ್ನು ಕಾವ್ಯದಲ್ಲಿ ಪ್ರತಿಮೆಗಳು ಎಂದು ಬಳಸಿ, ಇಂದಿನ ಜೀವನದ ಶೋಕಾಂತಿಕ ಅನುಭವವನ್ನು ಮರ್ಢೇಕರರು ಪರಿಣಾಮಕಾರಿಯಾಗಿ ಬಿಂಬಿಸಿದ್ದಾರೆ. ಈ ಪ್ರತಿಮೆಗಳು ಅವರ ಯಾವ ಭಾವಮಂಥನದಿಂದ ಹುಟ್ಟಿ, ಜೀವನಾನುಭವವನ್ನು ಪ್ರತಿನಿಧೀಕರಿಸುತ್ತವೆ ಎಂಬುದನ್ನು ಅರ್ಥಮಾಡಿಕೊಳ್ಳಬೇಕು. ಅರ್ಥಮಾಡಿಕೊಳ್ಳದ ಜನ ಅನುಕರಣವನ್ನು ಮಾತ್ರ ಮಾಡಿದರು. ಅವರು ತಮ್ಮನ್ನು ಪ್ರತಿಭಾಶಾಲಿಗಳು ಎಂಬುದಕ್ಕಿಂತ ಪ್ರತಿಮಾಶಾಲಿಗಳು ಎಂದು

ಕೊಳ್ಳುವದರಲ್ಲಿಯೇ ಆನಂದವನ್ನು ಪಡೆಯ ಹತ್ತಿದರು. ಕೆಲವರು ಕುರಿಮರಿಯನ್ನು ಬಳಸಿದರೆ ಮತ್ತೆ ಕೆಲವರು ಪಂಜರದ ಗಿಳಿಯನ್ನು ಬಳಸಿದರು, ಇನ್ನು ಕೆಲವರು ಕತ್ತೆಯನ್ನೂ ಬಳಸಿದರು. ಅಲ್ಲದೆ ಕಾವ್ಯದಲ್ಲಿ ಕುದುರೆಯ ಕುಣಿತವೂ ಆಯಿತು. ಕೆಲವು ಕವಿಗಳು ಪ್ರತಿಮೆಯ ಸಂಜ್ಞೆ ಪ್ರಾಣಿವಾಚಕವೆಂದು ಭಾವಿಸಿದರು. ಆದರೆ ಆ ಭಾವನೆ ಅವರ ತಪ್ಪು ಕಲ್ಪನೆಯ ಫಲ. ಈ ತಪ್ಪು ಭಾವನೆಯಿಂದ ಮರಾಠಿ ಕಾವ್ಯ ಪ್ರಪಂಚ ಪ್ರಾಣಿಸಂಗ್ರಹಾಲಯವಾದೀತೆಂಬ ಭಯ ಕಾವ್ಯರಸಿಕರಿಗೆ ಉಂಟಾಯಿತು. ಪ್ರತಿಮಾಸಂವಿಧಾನ ಮತ್ತು ಅಲಂಕಾರದ ಬಳಕೆ ಇವುಗಳ ಬಗೆಗೆ ನಿಶ್ಚಿತ ಕಲ್ಪನೆಯಿಲ್ಲದರ .ಮೂಲಕ ಪ್ರತಿಮೆಗಳನ್ನು ಅಲಂಕಾರಗಳೆಂದು ಕವಿಗಳೂ ಟೀಕಾಕಾರರೂ ತಿಳಿದರು. ಪ್ರತಿಮೆ ಮತ್ತು ಪ್ರತೀಕ; ಪ್ರತಿಮೆ, ಮತ್ತು ರೂಪಕ ಅಥವಾ Metonomy ಅಥವಾ Synecdothe ಇವುಗಳಲ್ಲಿ ಸಾಮ್ಯವಿರುವದು ನಿಜ. ಪ್ರತಿಮೆಗಳಲ್ಲಿ ಅಲಂಕಾರಗಳ ಛಾಯೆ ಮೂಡುವದೂ ನಿಜ. ಪ್ರತಿಮೆಯಿಲ್ಲದ ಕವಿತೆಯನ್ನು ಅನಲಂಕೃತ, ಎಂದರೆ ಉಪಯುಕ್ತ ಸವಿಮಾಕರಣ ಎಂದು ಹೇಳುವದು ಸರಿಯಾಗಲಿಕ್ಕಿಲ್ಲ. ಪ್ರತಿಮೆಯೆಂದರೆ ಶಬ್ದಚಿತ್ರ ಎಂದೂ ಕೆಲವು ಜನರ ತಿಳಿವಳಿಕೆ. ಪ್ರತಿಮೆಯೆಂದರೆ ಚಿತ್ರವಲ್ಲ. ಅದೊಂದು ಸಂವೇದನಾ ವಿಶ್ವ. ಅಲ್ಲಿ ಕೇವಲ ದೃಕ್‌ಸಂವೇದನೆ ಮಹತ್ತ್ವದ್ದಲ್ಲ. ಅದರೊಂದಿಗೆ ಶೃತಿ, ರುಚಿ, ಗಂಧ ಸ್ಪರ್ಶ ಇವುಗಳ ಸಂವೇದನೆಯೂ ಮಹತ್ತ್ವದ್ದು. ಇಂಥ ಸಂವೇದನೆಗಳೊಳಗಿಂದ ಹುಟ್ಟಿದ ಪ್ರತಿಮೆಗಳು ಕಾವ್ಯದಲ್ಲಿ ಬೇಕು. ದೃಕ್ ಸಂವೇದನೆಯು ಸುಲಭವೂ ಪರಿಚಿತವೂ ಇದ್ದಮೂಲಕ ಪ್ರತಿಮೆ ಎಂದರೆ ಚಿತ್ರ ಎಂಬ ಅಭಿಪ್ರಾಯ ದೃಢವಾದಂತೆ ತೋರುತ್ತದೆ. ಉಳಿದ ಸಂವೇದನೆಗಳಿಂದ ಉಂಟಾಗುವ ಅನುಭವವನ್ನು ವ್ಯಕ್ತಪಡಿಸುವದು ಅಷ್ಟು ಸುಲಭವಲ್ಲವಾದ್ದರಿಂದ, ದೃಕ್‌ಸಂವೇದನಾತ್ಮಕ ಪ್ರತಿಮೆಗಳು ಹೆಚ್ಚಾಗಿದ್ದ, ಕವಿತೆಗಳ ನಿರ್ಮಿತಿ ಮರಾಠಿ ಸಾಹಿತ್ಯದಲ್ಲಿ ಆಯಿತು. ಉಳಿದ ನಾಲ್ಕು ಸಂವೇದನೆಗಳಿಂದ ಹುಟ್ಟಿದ ಕವಿತೆಗಳು ವಿರಳ.

ಪ್ರತಿಮಾ ಪ್ರಧಾನ ಕಾವ್ಯ (Imagist Poetry)ದಲ್ಲಿ ರೂಪಕ್ಕಿಂತ ಸಂವೇದನೆಗೆ ಹೆಚ್ಚು ಮಹತ್ತ್ವ. ಅಲ್ಲಿVisual quality ಗಿಂತ Sensational quality) ಹೆಚ್ಚಾಗಿ ಕಂಡುಬರುತ್ತದೆ. ಸದಾನಂದ ರೇಗೆ, ಮತ್ತು ಮಂಗೇಶ ಪಾಡಗಾಂವಕರ ಇವರಿಬ್ಬರು ಪ್ರತಿಮಾವಾದಿ ಕಾವ್ಯ ಲೇಖಕರಲ್ಲಿ ಪ್ರಮುಖರು ಎಂದು ಪರಿಗಣಿಸಲಾಗುತ್ತದೆ. ರೇಗೆ ಅವರ ಕವಿತೆಗಳಲ್ಲಿ ಚಿತ್ರವತ್ತತೆ (Visnal quality) ಹೆಚ್ಚಾಗಿದ್ದರೆ ಪಾಡಗಾಂವಕರರ ಕವಿತೆಗಳಲ್ಲಿ ಸಂವೇದನಾತ್ಮಕತೆ (Sensational quality) ಹೆಚ್ಚಾಗಿದೆ. ಹೀಗಾಗಿ ಪಾಡಗಾಂವಕರರೇ ನಿಜವಾದ ಪ್ರತಿಮಾವಾದಿಗಳು ಎಂದು ತೋರುತ್ತದೆ. ರೇಗೆ ಅವರು ಇನ್ನೂ ಪೂರ್ಣ imagist ಆಗಿಲ್ಲ.

ರೇಗೆಯವರ ನಿಸರ್ಗ ಕವಿತೆಗಳ ವೈಶಿಷ್ಟ್ಯವೆಂದರೆ 'ಪ್ರತಿಮೆಗಳ ಸಾಲೇಸಾಲು

ಎಂಬ ಪ್ರಾ. ವಾ.ಲ. ಕುಲಕರ್ಣಿಯವರ ಮತ ಸರ್ವ ಸಮ್ಮತವಾದೀತೆಂದು ಹೇಳಲು ಬರುವಂತಿಲ್ಲ. ಬೇಸಗೆ ಮಳೆಯ ಪಕ್ಷಿ, ಮಳೆಯ ಪಕ್ಷಿ, ಪಕ್ಷಿ ಬಿಸಿಲಿನದು, ಪಕ್ಷಿಗಳು ಮಳೆಯಹನಿಗಳು ಅಥವಾ ಆಷಾಢದ ಗುಬ್ಬಿಗಳು ಮೊದಲಾದವುಗಳನ್ನು ಪ್ರತಿಮೆಯೆನ್ನುವದಕ್ಕಿಂತ ಶಾಬ್ದಿಕ ಕಸರತ್ತು ಎಂದರೆ ಹೆಚ್ಚು ಶೋಭಿಸೀತು. "Of beauty there is little it is elbowed out by a Succession of vivid Fashion-plate pictures alternating with Kaleidoscope designs" ಎಂದು Edith Sitwell ಅವರ ಬಗೆಗೆ ಕೊಡುವ ಅಭಿಪ್ರಾಯವನ್ನೇ ರೇಗೆ ಅವರ ಪ್ರತಿಮಾ ಸೃಷ್ಟಿಗೂ ಕೊಡಬಹುದು. ರೇಗೆ ಅವರಿಗೆ ಪ್ರತಿಮೆಗಳೆಂದರೆ ಏನು ಎಂಬದೇ ಗೊತ್ತಿಲ್ಲದಾಗ, ಟೀಕಾಕಾರರು ಅವರನ್ನೇ ಪ್ರತಿಮಾವಾದಿ ಎಂದು ಕರೆಯುತ್ತಾರೆ.

ಪಾಡಗಾಂವಕರರಿಗೆ ಪ್ರತಿಮೆಯ ರಹಸ್ಯ ತಿಳಿದಿರುವಂತೆ ಇಂದಿರಾಬಾಯಿ ಯವರಿಗೂ ತಿಳಿದಿದೆ. ಪ್ರತಿಮಾವಾದದ ಬಗೆಗೆ ವಿಚಾರಿಸುವಾಗ ಇವರಿಬ್ಬರ ವಿಚಾರ ಮಾಡುವದು ಅತ್ಯವಶ್ಯ. ನಿಜವಾದ ಪ್ರತಿಮಾವಾದಿ ಕವಿತೆ ಬರೆಯುವವರು ಇವರಿಬ್ಬರೇ. ಇವರ ಪ್ರತಿಮೆಗಳು ಅನುಭವದ ಕುಲುಮೆಯಿಂದ ಹೊರಹೊಮ್ಮಿವೆ. ಇಂದಿರಾಬಾಯಿಯವರ ಕವಿತೆಗಳಲ್ಲಿ ಬರುವ "ಅಂಧಕಾರ" ಮತ್ತು ಪಾಡಗಾಂವಕರರ ಕವಿತೆಗಳಲ್ಲಿಯ "ಶುಕ್ರತಾರೆ" ಎಂಬವು ಅಲಂಕಾರವೆಂದು ಬರುವದಿಲ್ಲ. ಆ ಕ್ಷಣದ ಭಾವವೃತ್ತಿಯ ಅವಿಭಾಜ್ಯ ಒಂದು ಅಂಗವಾಗಿ ಬರುತ್ತವೆ.

ಪ್ರತಿಮೆಯು ಅನುಭವಸ್ವರೂಪಿ. ಪ್ರತ್ಯೇಕ ಅನುಭವಕ್ಕೆ ಅದರದೇ ಆದ ಒಂದು Paittern ಇರುತ್ತದೆ. ಅದು ಕವಿಗೆ ಮುಂಚಿತವಾಗಿ ಗುರುತಿಸಲು ಬರುವದಿಲ್ಲ. ಮತ್ತು ಅನುಭವ ಉತ್ಕಟವಿದ್ದಲ್ಲಿ ಅದು ವಿಶಿಷ್ಟ ಸ್ವರೂಪವನ್ನು ಪಡೆದೇ ಹೊರ ಬರುತ್ತದೆ. ಪ್ರತಿಮೆ ಆಕಾರ (Pattern)ದ ಜಾತಿಯದು ಎಂದಮೇಲೆ ಅದು ಆಶಯವೋ ಆವಿಷ್ಕಾರವೋ ಎಂಬ ಪ್ರಶ್ನೆ ವಿಚಾರಣೀಯ. ಹೀಗಿದ್ದೂ ಪ್ರತಿಮೆಯು ಜ್ಞಾನವೊಂದು ಆಶಯವೆಂದು ಹೇಳಲಾಗದು. ಆಶಯದಿಂದೊಡಗೂಡಿದ ಅನುಭವದ ಆವಿಷ್ಕಾರವೇ ಪ್ರತಿಮೆ ಬಳಸುವ ರೀತಿ. ಈ ರೀತಿಯು ಎಳೆದು ತಂದದ್ದಾಗಲಿ, ಅಪೂರ್ಣವಾಗಲಿ ಇರದೇ ಇರುವದೇ ಒಳ್ಳೆಯ ಪ್ರತಿಮೆಯ ಲಕ್ಷಣ. ಎಷ್ಟೋ ಸಾರೆ ಪ್ರತಿಮೆಯ ಹೆಸರಿನಿಂದ ಬೌದ್ಧಿಕ ಕಸರತ್ತು ನಡೆಯುತ್ತದೆ. ಆಗ ಅಲ್ಲಿ ಪ್ರತಿಮೆ ಇರುವದಿಲ್ಲ, ಪ್ರತಿಮಾಭಾಸವಿರುತ್ತದೆ.

ಇತ್ತೀಚಿನ ಮರಾಠಿ ಕಾವ್ಯದಲ್ಲಿ ಪ್ರತಿಮಾಭಾಸವನ್ನೇ ಪ್ರತಿಮಾ ಎಂದು ಕರೆಯುತ್ತಾರೆ. ಆದುದರಿಂದ ಪ್ರತಿಮಾವಾದದೆಡೆಗೆ ದೃಷ್ಟಿಕ್ಷೇಪ ಮಾಡುವದು ಅವಶ್ಯವಿದೆ. ಸುಮಾರು ೧೯೧೨ರಲ್ಲಿ ಆಂಗ್ಲಭಾಷೆಯಲ್ಲಿ ಪ್ರತಿಮಾವಾದದ ಜನ್ಮವಾಯಿತು. ಕಾವ್ಯದ ಬಾಹ್ಯಮೌಲ್ಯ (Extra Poetic Values) ಮತ್ತು ಅವ್ಯವಸ್ಥಿತದ ತಂತ್ರ ಇವುಗಳ ವಿರುದ್ಧ ಪ್ರತಿಕ್ರಿಯೆಗೆಂದು ಕೆಲವು ಪ್ರಯೋಗ ಶೀಲ

ಕವಿಗಳು ಒಂದು ಕ್ಲಬ್ಬನ್ನು ನಿರ್ಮಿಸಿದರು. ಈ ಉತ್ಸಾಹಿ ಕವಿಗಳು ಹೊಸತಂತ್ರ ಶೋಧನೆಗಾಗಿ, ಜಪಾನಿ, ಹಿಬ್ರೂ, ಫ್ರೆಂಚ, ಮೊದಲಾದ ಸಾಹಿತ್ಯದ ಅಭ್ಯಾಸಕ್ಕೆ ಟೊಂಕಕಟ್ಟಿ ನಿಂತರು. Flint 'ಫ್ಲಿಂಟ' ಇವನು ಈ ಗುಂಪಿನ ಅಧ್ವರ್ಯು ಕವಿತೆಯಲ್ಲಿ ಭಾವವು ಸಹಜವೇದ್ಯವೂ ಅಲ್ಪಾಕ್ಷರವುಳ್ಳದೂ ಆಗಿರಬೇಕು, ಎಂದು Flintನ ಮತ. ಕವಿಯು ಹೇಳಬೇಕಾದ ವಿಷಯವನ್ನು ನೇರವಾಗಿ (ಸ್ಪಷ್ಟವಾಗಿ) ಹೇಳಬೇಕು. ಮತ್ತು ಅದು ಸೂತ್ರವತ್ತಾಗಿರಬೇಕು. ಶ್ರೇಷ್ಠ ಕವಿಯು ಹರಿಸಿ ರಸಿಕವೃಂದವಿದ್ದಾಗಲೇ ವಿದಿತವಾಗುತ್ತದೆ. Ezra Poundನು ಪ್ರತಿಮಾ ಮಂದಿರದ ಶಂಕುಸ್ಥಾಪನೆ ಮಾಡಿದನು. ಅವನ ಚತುಃಸೂತ್ರವೆಂದರೆ ೧. ಸಮರ್ಪಕ ಶಬ್ದರಚನೆ. ೨. ಸಾಮಾನ್ಯರಿಗೆ ತಿಳಿಯುವಂಥ ಭಾಷೆ–ದೇಸಿ. ೩. ಹೊಸ ಛಂದ. ೪. ವಿಷಯದ ಆಯ್ಕೆಯಲ್ಲಿ ಸ್ವಾತಂತ್ರ್ಯ. ಅಲ್ಲದೆ ಇನ್ನೂ ಎರಡನ್ನು ಹೇಳಿದ್ದಾನೆ. ೫. ಹೇಳಬೇಕಾದುದನ್ನು ನೇರವಾಗಿ ಹೇಳುವಿಕೆ. ೬. ಹೇಳಬೇಕಾದುದನ್ನು ಸ್ಪಷ್ಟವಾಗಿ ಹೇಳುವಿಕೆ.

ಪ್ರತಿಮಾವಾದವೂ ಒಂದು ತತ್ವಜ್ಞಾನವಾಗುತ್ತ ನಡೆದಂತೆ ಬೇರೆಬೇರೆ ಕವಿಗಳನ್ನು ತಮ್ಮ ಪಂಥಕ್ಕೆ ಎಳೆದುಕೊಳ್ಳುವ ಗಡಿಬಿಡಿಯುಂಟಾಯಿತು. ಪ್ರತಿಮಾವಾದದ ಬಗೆಗೆ Aldingtonನ (ಅಲ್ಡಿಂಗಟನ್) ಭಾಷಣಗಳನ್ನು ಲಂಡನ್ನಿನಲ್ಲಿ ಏರ್ಪಡಿಸಲಾಯಿತು. ಆದರೆ ಅವು ಯಶಸ್ವಿಯಾಗಲಿಲ್ಲ. ಪ್ರತಿಮಾವಾದಿ ಕವಿಗಳ ಈ ಗುಂಪಿಗೆ "A very loud Voiced little mutual adimination society" ಎಂದು ಹೆಸರಿಟ್ಟರು. 'ಕ್ಷುದ್ರ ಭಾವನೆಗಳನ್ನೆಲ್ಲ ಜನತೆಯ ಮುಂದೆ ಏಕೆ ಇಡುತ್ತಿದ್ದಾರೆ' ಎಂದು ಜನವೆಲ್ಲ ಮೂಗು ಮುರಿಯಹತ್ತಿತು. ಪ್ರತಿಮಾವಾದಿಗಳೂ ಹಟತೊಟ್ಟರು. ತರಬೇತುಗೊಳಿಸಲೆಂದು ಲಾ: ರೆನ್ಸನಂಥ ಕವಿಯನ್ನು ತಮ್ಮ ಕಡೆಗೆ ಸೌಜನ್ಯದಿಂದ ಎಳೆದು ತಂದರು. ಎಮಿಲಾವೆಲ್‌ಳು ಶೇಕ್ಸಪಿಯರನನ್ನೂ ಮೀರಿದವಳು ಎಂದು ಮಾತಾಡಹತ್ತಿದರು. ಪ್ರತಿಮಾ ಪ್ರಧಾನ ಕಾವ್ಯದ ಉಗಮದೊಂದಿಗೆ ಅದರ ಅವನತಿಯನ್ನೂ ಪೌಂಡನು ಕಂಡುಕೊಂಡಿದ್ದನು. ಆದುದರಿಂದಲೇ ಕೆಳಗಿನಂತೆ ತಕರಾರು :

"At present its chief defeels and sloppiness, lack of cohesion, lack of organic centrein individual poems, vheforie, a conventional form of language...... a tendancey more than slight towards the futurist's, linematographic fluidity"

ಈ ವಾದದ ಮೂಲ ಪ್ರತಿಮಾವಾದಿಗಳು ಪೌಂಡನನ್ನು ದೂರ ಸರಿಸಿದರು. ಪೌಂಡ ಪ್ರತಿಮಾವಾದದಲ್ಲಿ ಆಸಕ್ತಿಯನ್ನು ಕಳೆದು ಕೊಳ್ಳಲಿಲ್ಲ. ಆದರೆ ಪ್ರತಿಮಾವಾದ ಪೌಂಡನಲ್ಲಿ ಆಸಕ್ತಿಯನ್ನು ಕಳೆದುಕೊಂಡಿತು. ಹ್ಯೂಮನು ಪ್ರತಿಮಾ

ತಂತ್ರದ ಆಳವನ್ನು ಶೋಧಿಸಿದನು. ಪ್ರತಿಮೆಯು ಕಾವ್ಯದ ಅಲಂಕರಣವಲ್ಲ, analogy ಎಂದು ಹ್ಯೂಮನು ಒತ್ತಿ ಹೇಳಿದ. ಕಾವ್ಯದಲ್ಲಿಯ analogyಯನ್ನು ಚಿಕ್ಕ ಮಕ್ಕಳ ಸಾಮ್ಯದಂತೆ ಅರ್ಥ ಗಾಂಭೀರ್ಯದಿಂದ ಹಾಗೂ ಅರ್ಥ ಹಸನ್ಮುಖತೆಯಿಂದ ಸ್ವೀಕರಿಸುವ ಹಾಗೆ ಸ್ವೀಕರಿಸಬೇಕು. ಪ್ರತಿಮೆಯು ಕಾವ್ಯದ ಅಲಂಕರಣವಲ್ಲವೆಂದು ಹೇಳಿದ ಹ್ಯೂಮನು ಅವುಗಳೊಳಗಿನ ಭೇದವನ್ನು ತಿಳಿಯಪಡಿಸಲು ಯತ್ನಿಸಿದ್ದಾನೆ. ಪ್ರತೀಕದಲ್ಲಿ ಮೂಲಕಲ್ಪನೆಯು ಆವರಣಬದ್ಧವಾಗಿರುತ್ತದೆ. ನೇರವಾಗಿ ಅಭಿವ್ಯಕ್ತಗೊಳಿಸಲು ಸಾಧ್ಯವಿಲ್ಲದ ಭಾವಗಳನ್ನು ಪ್ರತೀಕಾತ್ಮಕ ಕವಿತೆಯು ಸೂಚಿಸುತ್ತದೆ. ಎಷ್ಟೋಸಾರೆ ಪ್ರತಿಮೆ ಮತ್ತು ಪ್ರತೀಕಗಳಲ್ಲಿ ಸಾಮ್ಯ ತೋರಿದರೂ maogism is not symbolism ಎಂಬುದನ್ನು ಒಪ್ಪಬೇಕಾಗುತ್ತದೆ. ಪ್ರತಿಮಾವಾದಿಗಳು ಪ್ರತೀಕವಾದಿಗಳ ಬಗೆಗೆ ಸಹಿಷ್ಣುತೆ ತೋರಿಸಿದರು. ಫ್ಲಿಂಟನ ಕವಿತೆಗಳಲ್ಲಿಯ 'ಪ್ರತಿಮೆ' ಎಂಬ ಪ್ರತೀಕಗಳು ಹಂಸದಂತೆ ಸುಳಿದಾಡುತ್ತವೆ.

ಪ್ರತಿಮಾ ವಾದದಲ್ಲಿ ವಿಶೇಷಣಕ್ಕೆ ಮಹತ್ವ ಹೆಚ್ಚಾಯಿತು. ಮುಕ್ತಹಸ್ತದಿಂದ ಉಪಯೋಗಿಸುತ್ತಿರುವ ಈ ವಿಶೇಷಣಗಳಿಗೆ ವಿರೋಧವುಂಟಾಯಿತು. ದೃಕ್ ಸಂವೇದನೆಯ ಅಭಿವ್ಯಕ್ತಿಯಲ್ಲಿ ಉಪಯೋಗಿಸಿದ ವಿಶೇಷಣಗಳು ಒಂದೇ ಪಡಿಯಚ್ಚಿನವು ಆದುವು. ಇಂಥ ವಿಶೇಷಣಗಳನ್ನು ಉಪಯೋಗಿಸುವದೇ ಒಂದು ಫ್ಯಾಶನ್ನಾಯಿತು. ಧಕ್ಕೆ, ಆಘಾತ (Shok, Stroke) ಗಳನ್ನು ಹುಟ್ಟಿಸುವಂಥ ವಿಶೇಷಣಗಳನ್ನೇ ಬಳಸಬೇಕು ಎಂಬ ಹಟ ಬೆಳೆಯಹತ್ತಿತು. ರೂಪಕಗಳನ್ನೂ ಮೀರಿಹೋಗುವ ಭಾಷೆಯನ್ನು ಬಳಸುವದೂ ಇದೇ ಕಾಲಕ್ಕೆ ಪ್ರಾರಂಭವಾಯಿತು. ರೂಪಕಗಳಿಗೆ ಅತಿ ಮಹತ್ತ್ವ ಕೊಟ್ಟವರಲ್ಲಿ ಅರಿಸ್ಟಾಟಲ್ ಮತ್ತು ಹರ್ಬರ್ಟರೀಡ. ಅರಿಸ್ಟಾಟಲ್ಲನು "A Command of metaphor" ಎಂದು ಹೇಳಿದರೆ ಹರ್ಬರ್ಟರೀಡನು ಕವಿಯ ಮೌಲಿಕತೆಯ ರೂಪಕವೇ ಒರೆಗಲ್ಲು ಎಂದಿದ್ದಾನೆ. ಹೀಗಿದ್ದರೂ ಪ್ರತಿಮೆಯ ಮುಂದೆ ಇವುಗಳ ಆಟ ಸಾಗಲಿಲ್ಲ. ರೂಪಕದ ಸಹಾಯದಿಂದ ಪ್ರತಿಮೆಯು ನಿರ್ಮಾಣವಾದಾಗ, ಅದರಲ್ಲಿ ಬರಿ ರೂಪಕದ ಅರ್ಥ ಮಾತ್ರ ವಿರದೆ ಯಾವದೋ ಒಂದು ಹೊಸ ಸಂವೇದನೆ ಇರುತ್ತದೆ. ಯಾವದೊಂದು ಮಾತನ್ನು ಸೂತ್ರಬದ್ಧವಾಗಿ ಹೇಳಬೇಕಾದರೆ ರೂಪಕದ ಆಶ್ರಯ ಪಡೆಯಬೇಕಾಗುತ್ತದೆ. ಹೀಗಾಗಿ ಪ್ರತಿಮೆಗಳು ರೂಪಕದಂತೆ ಕಾಣುತ್ತವೆ. ಪ್ರತಿಮೆಗಳಲ್ಲಿ ಬಹು ಅರ್ಥವನ್ನು ತುಂಬಿದರೆ ದುರ್ಬೋಧತೆಯ ದೋಷ ನಿರ್ಮಾಣವಾಗುತ್ತದೆ. ರೂಪಕವನ್ನು ಮೀರಿ ಹೋಗುವಾಗ ಈ ದೋಷವೂ ಉಂಟಾಯಿತು. ಕವಿಯು ಪ್ರತಿಮೆಗಳ ನಿರ್ಮಿತಿಯನ್ನು ಮಾಡುತ್ತಿರುವಾಗ ಪರಿಪಕ್ವ ಭಾವನೆಯುಳ್ಳವನಾಗಿರಬೇಕು. ಮತ್ತು ಅದೇ ಭಾವನೆಯನ್ನು ಓದುಗನಲ್ಲಿ ನಿರ್ಮಿಸಲು ಸಮರ್ಥನಾಗಿರಬೇಕು. ಈ ಕಾರ್ಯಕ್ಕೆ ಯಾವಾಗಲೂ ನವೀನವಾದ ಪ್ರತಿಮೆಗಳೇ ಬೇಕು ಎಂದಿಲ್ಲ. ಚಂದ್ರ, ಗುಲಾಬಿ, ದೀಪ

ಪಶ್ಚಿಮ, ಮೊದಲಾದ ಪ್ರತಿಮೆಗಳ ಬಳಕೆ ಸಾಕಷ್ಟು ಕಾಣಬರುತ್ತದೆ. ಇವುಗಳಿಗೇ H. W. Rylands 'ಅಭಿಷಿಕ್ತ (Consecrated) ಪ್ರತಿಮೆ' ಎನ್ನುತ್ತಾನೆ. ಈ ಆವಾಹನಕ್ಷಮತೆಯು ಪ್ರತಿಮೆಯ ವ್ಯಕ್ತಿನಿಷ್ಠ ಒರೆಗಲ್ಲಾಗಿದೆ. ಅಲಂಕರಣಾತ್ಮಕ (Decorative) ಪ್ರತಿಮೆಗಳಲ್ಲಿ ವ್ಯಕ್ತಿನಿಷ್ಠತೆ ಇಲ್ಲದುದರಿಂದ ಅವು ಸೂಚಕತೆಯನ್ನು ಗಭೀರತೆಯನ್ನೂ ಕಳೆದುಕೊಂಡಿರುತ್ತವೆ.

ಪ್ರತಿಮಾವಾದದ ಪ್ರಯೋಗವನ್ನು Sit well flint ಮತ್ತು pound ರು ಮಾಡಿ ನೋಡಿದರು; ಆದರೆ ಅವು ಬಳಕೆಯಲ್ಲಿ ಬಹುಕಾಲ ಬಾಳಲಿಲ್ಲ. ಆದುದರಿಂದ ಪಾಶ್ಚಿಮಾತ್ಯರಲ್ಲಿ ಅದು ಈಗ ಇತಿಹಾಸ ಮಾತ್ರವಾಗಿದೆ.

ಪಾಶ್ಚಿಮಾತ್ಯರಲ್ಲಿ ಹಳೆಯದಾದ ವಿಷಯವನ್ನು ಎರವಲಾಗಿ ತಂದು ಅದು ನಮ್ಮದೇ ನಿರ್ಮಿತಿ ಎಂದು ಜಂಭ ಕೊಚ್ಚಿಕೊಳ್ಳುವದು ನಮ್ಮ ಜನರ ಸ್ವಭಾವವಾಗಿದೆ. ಆಂಗ್ಲ ಸಾಹಿತ್ಯದಲ್ಲಿ ಉದ್ಭವಿಸುವ ಹೊಸ ಪ್ರವೃತ್ತಿಗಳ ಆಕಲನ ಮತ್ತು ಪತನ ಮಾಡಿಕೊಳ್ಳಲು ಬಹಳ ಕಾಲ ಹಿಡಿಯುತ್ತದೆ ಎಂದು ನನಗೆನಿಸುತ್ತದೆ. ನಮ್ಮಲ್ಲಿಯ ಹೊಸ ಪ್ರಯೋಗಗಳು ಪಾಶ್ಚಿಮಾತ್ಯರಲ್ಲಿ ಯಾವ ಸ್ಥಿತಿಯಲ್ಲಿವೆ ಎಂಬುದನ್ನು ನೋಡುವದರ ಕಡೆಗೆ ಉತ್ಸಾಹಿ ಕವಿಗಳ ಲಕ್ಷ್ಯವಿಲ್ಲ. ಉತ್ಸಾಹವೂ ಶ್ರೇಷ್ಠ ಕಲಾವಿದರಿಗೆ ಶೋಭಿಸುವ ಮಾತಲ್ಲ.

'ಬಾಲಕವಿ' ಪ್ರತಿಮಾವಾದಿ ಕವಿಯಾದರೂ ತನ್ನ ಕಾವ್ಯವನ್ನು ಕುರಿತು ಎಲ್ಲಿಯೂ ಪ್ರತಿಮಾವಾದಿ ಕಾವ್ಯವೆಂದು ಹೇಳಿಲ್ಲವಲ್ಲದೆ ಆ ಬಗೆಗೆ ಯಾವ ರೀತಿಯ 'ಜಾಹೀರಾತನ್ನೂ ಕೊಡಲು ಬಯಸಿಲ್ಲವೆಂಬುದು ಗಮನಾರ್ಹವಾದ ವಿಷಯ. ಯಾವ ವಿಮರ್ಶಕನೂ ಕೂಡ 'ಬಾಲಕವಿ'ಗಳ ಪ್ರತಿಮಾಸೃಷ್ಟಿಯ ಕಡೆಗೆ ಲಕ್ಷ ಹಾಕದುದು ಶೋಚನೀಯ. 'ಬಾಲಕವಿ'ಗಳು ನಿಜವಾದ ಒಳ್ಳೆ ಪ್ರತಿಮಾವಾದಿ ಕವಿಗಳು. ಅವರ ಒಂದು ಪ್ರತಿಮೆಯೂ ಅನೇಕಾರ್ಥದ ಸುಂದರ ಶಿಲ್ಪ ಕಲಾಕೃತಿ. "ಬಿಂದುವೊಂದರಲಿ ಅಡಗಿದೆ ಸಿಂಧು" ಎಂಬಂತಿವೆ ಅವರ ಪ್ರತಿಮೆಗಳು.

ಪ್ರತಿಮಾವಾದಿಯ ಕಾವ್ಯದ ನೈಸರ್ಗಿಕವಾದ ಪ್ರಯೋಗವನ್ನು 'ಬಾಲಕವಿ'ಯ ಹಾಗೆ ಇಂದಿರಾಬಾಯಿಯವರಲ್ಲಿಯೂ ಕಂಡು ಬರುತ್ತದೆ.

ಪಾಡಗಾಂವಕರರು ಪ್ರತಿಮೆಗಳ ಪ್ರೇಮಪಾಶದಲ್ಲಿ ಸಿಲುಕುತ್ತಾರೆ. ಹಾಗಿದ್ದರೂ ಇನ್ನುಳಿದ ಕವಿಗಳೊಂದಿಗೆ ಹೋಲಿಸಿ ನೋಡಿದಾಗ ಪಾಡಗಾಂವಕರರು ಯಶಸ್ವಿ ಕವಿಯೆಂದು ಹೇಳಬಹುದು. ಮಿಶ್ರಸಮಾಸದ, ಚಮತ್ಕಾರಿಕ ಕ್ರಿಯಾಪದಗಳು ವಿಕ್ಷಿಪ್ತ ವಿಶೇಷಣ ಇವುಗಳ ಸಹಾಯದಿಂದ ಪ್ರತಿಮಾವಾದಿ ಎಂಬ ಪದವಿಯನ್ನು ದೊರಕಿಸಲು ಹಾತೊರೆಯುವ ಕವಿಗಳ ಗುಂಪಿನಲ್ಲಿ ಪಾಡಗಾಂವಕರರ ಸಮಾವೇಶವಾಗುವದಿಲ್ಲ. 'ಪ್ರತಿಮಾ' ಒಂದು ಸಾಧನ. ಅದು ಸಾಧ್ಯವಲ್ಲ; ಎಂಬ ಎಚ್ಚರಿಕೆಯು

ಕೆಂಪುದೀಪವನ್ನು ಕಣ್ಣಿಗೆ ಕಾಣುವಂತೆ ಸಿಲ್ಲಿಸಿದರೆ ಅವರ ಪ್ರಯೋಗ ಯಶಸ್ವಿಯಾಗಬಹುದು.

'ಕಣ್ಣಿಗೆ ಕೇಳುವ, ಕಿವಿಗೆ ಕಾಣುವ, ಮೂಗಿಗೆ ಸ್ಪರ್ಶಜ್ಞಾನವಾಗುವದು' ಸಾಮಾನ್ಯ ಜನರಿಗೆ ಅಶಕ್ಯ. ಆದರೆ ಪ್ರತಿಮಾವಾದಿ ಕವಿಗೆ ಇಂಥ ಅಲೌಕಿಕ ಅನುಭವಗಳು ಬರುತ್ತಿರುವದು ಕಾಣುತ್ತವೆ. ಒಂದು ಜ್ಞಾನೇಂದ್ರಿಯಕ್ಕೆ ಮತ್ತೊಂದು ಜ್ಞಾನೇಂದ್ರಿಯದ ಜ್ಞಾನಾನುಭವ ಆಗುವದು, ಅಥವಾ ಆದಂತೆ ವರ್ಣಿಸುವದು ಎಷ್ಟೋ ಜನರಿಗೆ ಸೇರುತ್ತದೆ. ಹೀಗಾಗಿ ಸಂವೇದನೆಯ ಸಂಕರದೊಳಗಿಂದ ಚಮತ್ಕಾರಿಕ ಪ್ರತಿಮೆಗಳ, ಜನ್ಮವಾಗುತ್ತದೆ. ಸಾಮಾನ್ಯ ಓದುಗನಲ್ಲಿ ಪ್ರತಿಮೆಯೆಂಬ ಪ್ರಕಾರದ ಬಗೆಗೆ ಹೆದರಿಕೆ ಉಳಿದಿದೆ. 'ಗೊರಕೆ ಹೊಡೆಯುತ್ತ ಮಲಗಿರುವ ಕಪ್ಪೆಯ ಬೆನ್ನಿನ ಹಾಗೆ, ಎಂದು ರಾತ್ರಿಯನ್ನು ವರ್ಣಿಸುವದರಲ್ಲಿ ಕವಿಗೆ ಸುಖವಿದ್ದರೂ ಈ ಸಾಮಾನ್ಯ ಓದುಗನಿಗೆ ಭಯವುಂಟಾಗುವ ಸಂಭವ ಅಧಿಕವಾಗಿದೆ.

ಪ್ರತಿಮಾವಾದಿಯೆನ್ನಿಸಿಕೊಳ್ಳುವದರ ಸಲುವಾಗಿ ಗದ್ಯ ಸದೃಶವಾಗಿ ಬರೆಯಬೇಕು ಎಂಬ ಒಂದು ತಿಳಿವಳಿಕೆ ಇದೆ. Poetry "is a spoken and not a written art" ಅಥವಾ "syntax or vocabulary unsuitable to prose has no place in poetry" ಇಂಥ ವಾಕ್ಯಗಳೇ ಈ ಜನರ ಪ್ರಮಾಣ ವಾಕ್ಯಗಳು. ಹೀಗಾಗಿ ಪೂರ್ಣ ಗದ್ಯವೂ ಅಲ್ಲ ಪದ್ಯವೂ ಅಲ್ಲ ಎಂಬಂಥದೊಂದು ಕೃತಿ ಹೊರಬರುತ್ತದೆ. ಆದುದರಿಂದ ಪ್ರತಿಮಾವಾದಿ ಕವಿತೆಗಳ ಬಗೆಗೆ ಕಾರಣವಿಲ್ಲದೇ ತಪ್ಪುಕಲ್ಪನೆಯಾಗುತ್ತದೆ.

ವಾಙ್ಮಯದಲ್ಲಿ ಧ್ವನಿ ಕಡಿಮೆ, ಪ್ರತಿಧ್ವನಿ ಹೆಚ್ಚು, ಎಂಬ ಮಾತಿನ ನಿದರ್ಶನವು ಮರಾಠಿ ಕಾವ್ಯದಲ್ಲಿಯ ಪ್ರತಿಮಾವಾದದ ಬಗೆಗೆ ವಿವೇಚನೆಯನ್ನು ಮಾಡುವಾಗ ಕಂಡು ಬರುತ್ತದೆ. ಪ್ರತಿಮಾ ನಿರ್ಮಿತಿಯನ್ನು ಮಾಡುವಾಗ ಅದರದೇ ಆದ ತಂತ್ರವನ್ನು ಅವಲಂಬಿಸಬೇಕೇ ಹೊರತು ಬಾಹ್ಯಾನುಕಾರಣವನ್ನಲ್ಲ. ತಂತ್ರವು ಒಂದು ಉತ್ತಮ ಕೃತಿಯಲ್ಲಿ ಮಂತ್ರದ ಅಂಗವಾಗಿ ಬರುತ್ತದೆ. ಸಾಧನವು ಸಾಧ್ಯದೊಡನೆ ಏಕಜೀವವಾಗಿರುತ್ತದೆ. ಅದು ಕೂಡ ಕ್ವಚಿತ್ತಾಗಿ ಆಗುತ್ತದೆ. ಕಲೆಯಲ್ಲಿ ಸಾಧನ ಮತ್ತು ಸಾಧ್ಯ ಏಕಜೀವವಾಗುವದೇ ಸರ್ವೋಚ್ಚವಾದ ಯಶ. ಒಂದು ಜೀವಮಾನದಲ್ಲಾದರೂ ಒಂದು ಒಳ್ಳೆಯ ಪ್ರತಿಮೆ ಹುಟ್ಟೀತೆಂದು ಹೇಳಲು ಬರುವಂತಿಲ್ಲ. "It is better to present one image in a lifetime, than to produce voluminous work." ಈ ಎಚ್ಚರವನ್ನು ಮರಾಠಿ ಕವಿಗಳು ಲಕ್ಷ್ಯದಲ್ಲಿಟ್ಟರೆ ಪ್ರತಿಮಾವಾದವು ಯಶಸ್ವಿಯಾಗಬಲ್ಲದು.

——::——

# ಆಧುನಿಕ ಹಿಂದೀ ಕಾವ್ಯ.



ಪ್ರೊ|| ಎಸ್. ವಿ. ಭಟ್, ಎಂ.ಎ., ಸಾಹಿತ್ಯರತ್ನ,
ಕರ್ನಾಟಕ ಕಾಲೇಜು, ಧಾರವಾಡ.

## ಹಿನ್ನೆಲೆ

**ಸ**ಮಾಜ ಶಾಸ್ತ್ರದ ಒಂದು ನಿಯಮವಿದೆ. ಆದರಲ್ಲಿಯೂ ಮಾನವ ಸಮಾಜ ಶಾಸ್ತ್ರದ ವೈಶಿಷ್ಟ್ಯವೆಂದರೆ ಪ್ರಗತಿಶೀಲ ಶಕ್ತಿಗಳು ಪರತಂತ್ರ ದೇಶವನ್ನು ಬಡಿದೆಬ್ಬಿಸದ ಹೊರತು ಉದ್ಬೋಧನೆ ಚೇತನೆಗಳು ಸ್ಫುರಣಗೊಳ್ಳುವದಿಲ್ಲ. ಅಂತೆಯೇ ಎಚ್ಚೆತ್ತ ಭಾರತ ಪ್ರಬುದ್ಧ ರಾಷ್ಟ್ರಗಳ ಮಾಲಿಕೆಯಲ್ಲಿ ತನ್ನದೇ ತನ್ನದಾದ ವೈಶಿಷ್ಟ್ಯ ಕಾಂತಿ ಪ್ರಭೆಗಳಿಂದ ಕೂಡಿದ ಸ್ಥಾನ, ಮಾನ ನಿರ್ಮಿಸಿಕೊಳ್ಳಲು 'ಒಂದು ಆಧುನಿಕ ಚೇತನೆ' ಯನ್ನು ಪಡೆದುಕೊಂಡಿದೆ. ಇಪ್ಪತ್ತನೆಯ ಶತಮಾನದ ಜೀವನ ಹಾಗೂ ಸಾಹಿತ್ಯ ಈ ನವಚೇತನೆಯ ನವಜಾಗೃತಿಯ ಕಾಲವೆನ್ನಬಹುದು. ಪಶ್ಚಿಮೀ ಶಕ್ತಿಯ ಬಿರುಗಾಳಿಯಲ್ಲಿಯೂ ಪೂರ್ವೀಶಕ್ತಿಯ ಸಂಸ್ಕೃತಿ ದೀಪ ಆರಲಿಲ್ಲ. ಗಾಳಿ ಬೀಸಿದಷ್ಟು ತನ್ನ ಪ್ರಖರ ತೇಜವನ್ನೇ ಬಾಳಿಗೆ ಬೆಳಗಿ ನೀಡಿತು.

ಕೋಲಾಹಲವು ಮೂಲೆಮೂಲೆಗೂ ಮುಟ್ಟುವಂತೆ ರೇಲ್ವೆ, ಟಪಾಲು, ತಂತಿ, ಮುಂತಾದವು ಬಹಳೇ ಸಹಾಯವಾದವು. ಭಾರತೀಯ ಜನಜೀವನದಲ್ಲಿ ಮೊಟ್ಟ ಮೊದಲಿನ ಮಾನಸಿಕ ಕ್ರಾಂತಿಯ ಸೂಚಕಗಳೊ-ಪ್ರತೀಕಗಳೋ ಎಂಬಂತೆ ಬ್ರಹ್ಮ ಸಮಾಜ, ಆರ್ಯ ಸಮಾಜ, ಪ್ರಾರ್ಥನಾ ಸಮಾಜ, ರಾಮಕೃಷ್ಣ ಮಿಶಿನ್, ಥಿಯೋಸೋಫಿಕಲ್ ಸೋಸಾಯಿಟಿ ಮುಂತಾದವು ಹುಟ್ಟಿಕೊಂಡವು. ರಾಜನೈತಿಕ ಕ್ಷೇತ್ರದಲ್ಲಿ 'ಸ್ವಶಾಸನ', 'ಸ್ವಾಧಿಕಾರ' ಪ್ರಾಪ್ತಿಯ ಹವಣಿಯೂ ಕೇಳಬರಹತ್ತಿತು. ಕಾಂಗ್ರೆಸ್ ಹಾಗೂ ಅನ್ಯರಾಜನೈತಿಕ ಪ್ರವೃತ್ತಿಗಳು ಸ್ವರಾಜ್ಯ ಸ್ಥಾಪನೆಯಲ್ಲಿ

ತೊಡಗಿದವು. ಇದೇ ಕಾಲಕ್ಕೆ ಸಾಹಿತ್ಯ ಕ್ಷೇತ್ರದಲ್ಲಿ ಗುಜರಾತದಲ್ಲಿ ನರ್ಮದ, ಬಂಗಾಲದಲ್ಲಿ ಬಂಕಿಮ್, ಮಾಯಿಕಲ್, ಮಧುಸೂದನ್‌ರಂತೆ ಹಿಂದೀ ಸಾಹಿತ್ಯ ಕ್ಷೇತ್ರದಲ್ಲಿ ಭಾರತದ ಇಂದು ರೂಪವೆನ್ನುವಂತೆ ಭಾರತೇಯು ಹರಿಶ್ಚಂದ್ರರು ಯುಗ ಚೇತನ ಪುರುಷರಾಗಿ ಕಾಣಿಸಿಕೊಂಡರು. ಹೀಗೆ ನವಸಂಪರ್ಕ ಸಂಸರ್ಗಗಳು ಎಲ್ಲ ಕ್ಷೇತ್ರದಲ್ಲಿಯೂ ಕಾಣಿಸಿಕೊಂಡವಲ್ಲದೆ ಸರ್ವತರದಿಂದಲೂ ಭವ್ಯವಾದ ಉನ್ನತಿ ಹಾಗೂ ಉತ್ಕರ್ಷಗಳ ಬೀಜಾರೋಪಣವು ಈ ಕಾಲದಲ್ಲಿಯೇ ಆಯಿತು. ವೈಜ್ಞಾನಿಕ ದೃಷ್ಟಿ ಬಂದುದರ ಪರಿಣಾಮವಾಗಿ ಹೃದಯ ಹಾಗೂ ಬುದ್ಧಿಯ ಮಟ್ಟಗಳಲ್ಲಿ ಆಮೂಲಾಗ್ರ ಕ್ರಾಂತಿಯೇ ಕಾಣಬರತೊಡಗಿತು. ಈ ನವಯುಗ ಚೇತನೆಯನ್ನು ವಿಶಾಲತೆ ಹಾಗೂ ವ್ಯಾಪಕತೆಯ ದೃಷ್ಟಿಯಿಂದ ವಿಶ್ಲೇಷಿಸಿ ನೋಡಿದರೆ ಕೆಳಗಿನ ಪ್ರವೃತ್ತಿಗಳು ಕಂಡುಬರುವವು :—೧) ಬುದ್ಧಿವಾದ, ೨) ಆದರ್ಶವಾದ, ೩) ಜನ ವಾದ, ೪) ರಾಷ್ಟ್ರವಾದ, ೫) ಮಾನವತಾವಾದ, ೬) ವ್ಯಕ್ತಿವಾದ.

ಈ ವಾತಾವರಣದಲ್ಲಿ ಆಧುನಿಕ ಹಿಂದೀ ಕವಿತೆಯನ್ನು ಕುರಿತು ಚರ್ಚಿಸ ಬೇಕಾಗಿದೆ. ಹಿಂದೀ ಕವಿತೆ ಹಾಗೂ ಸಮಗ್ರ ಸಾಹಿತ್ಯದಲ್ಲಿ ಕ್ರಾಂತಿಯ ಮೊದಲ ಹೆಜ್ಜೆಯು ೧೯ನೇ ಶತಾಬ್ದಿಯ ಕೊನೆಯ ಭಾಗದಲ್ಲಿಯೂ, ಎರಡನೆಯ ಹೆಜ್ಜೆಯು ೨೦ನೇ ಶತಮಾನದ ಮೊದಲನೆಯ ಭಾಗದಲ್ಲಿಯೂ ಆಯಿತೆಂದು ಸ್ಥೂಲರೂಪವಾಗಿ ಹೇಳಬಹುದು. ಈ ಆಧುನಿಕ ಹಿಂದೀ ಕವಿತೆಯಲ್ಲಿ ಮೊದಲು ಕ್ರಾಂತಿಯಾದದ್ದು ಅದರ 'ಬಣ್ಣ'ದಲ್ಲಿ. ಅಂದರೆ ಭಾವ ವಿಷಯಕ್ಕೆ ಸಂಬಂಧಪಟ್ಟ ಅಂತರಂಗ ಕ್ರಾಂತಿ. ಇನ್ನು ಎರಡನೆ ಹೆಜ್ಜೆಯಲ್ಲಿ ಕ್ರಾಂತಿಯಾದದ್ದು ಅದರ 'ರೂಪ'ದಲ್ಲಿ—ಅಂದರೆ—ಅದರ ಬಹಿರಂಗ ಕ್ರಾಂತಿ. ಹೀಗೆ ಆಧುನಿಕತೆಗೆ ತಕ್ಕಂತೆ ರೂಪ, ಬಣ್ಣ ಎರಡೂ ದೃಷ್ಟಿ ಯಿಂದ ಹಿಂದೀ ಕವಿತೆಯಲ್ಲಿ ಒಂದು ಹೊಸ ಯುಗವೇ ಪ್ರಾರಂಭವಾಯಿತು. ಇನ್ನು ಮೂರನೆಯ ಹೆಜ್ಜೆಯು ಅದರ ಪುನರ್ಜನ್ಮವೆಂಬಂತೆ ಈವರೆಗೆ ರಾಜಸ್ಥಾನೀ, ಬ್ರಜ ಭಾಷೆ, ಅವಧೀ, ಮೈಥಿಲೀ ಭಾಷೆಗಳಲ್ಲಿ ವ್ಯಕ್ತವಾಗುತ್ತಿದ್ದ ಹಿಂದೀ ಕವಿತೆ ಈ ಆಧು ನಿಕ ಯುಗಕ್ಕೆ—೨೦ನೆಯ ಶತಮಾನಕ್ಕೆ ತಕ್ಕಂತೆ ಸಾರ್ವದೇಶಿಕ, ಲೋಕಭಾಷೆ, ರಾಷ್ಟ್ರಭಾಷೆಯಾದ ಖಡೀಬೋಲೀ—ಹಿಂದೀಯಲ್ಲಿ ವ್ಯಕ್ತವಾಗತೊಡಗಿತು; ಹಾಗೂ ವ್ಯಕ್ತಿಜೀವನದ 'ಸ್ವ' 'ಪರ' ಹಾಗೂ ಪರೋಕ್ಷ-ಮೂರೂ ಪಕ್ಷಗಳನ್ನೂ, ಶಕ್ತಿಗಳನ್ನೂ ಈ ಆಧುನಿಕ ಕವಿತೆಯು ಅಳವಡಿಸಿಕೊಂಡಿತು. ಕಾವ್ಯದ ಸರ್ವಾಂಗಗಳೂ, ಸರ್ವ ರೂಪಗಳೂ—ಲಘುಕಾವ್ಯ, ಖಂಡಕಾವ್ಯ, ಮಹಾಕಾವ್ಯ, ಗೀತಕಾವ್ಯ, ಗೀತರೂಪಕ, ಚಂಪೂ ಎಲ್ಲವೂ ಈ ಕಾಲದಲ್ಲಿ ಕಾಣಿಸಿಕೊಂಡವು; ಬಿರಗು, ಮೆರಗುಗಳಿಂದ ನೂತನ ಕಾವ್ಯ ಜಾತಿಯು ಸಂಚಯಗೊಳ್ಳುತ್ತಿತ್ತು.

ಈ ಹೊಸ ಯುಗದಲ್ಲಿ ಕಾವ್ಯ ಪಕ್ಷವು ಕಲಾಪಕ್ಷ, ಭಾವಪಕ್ಷಗಳೆರಡೂ ಸ್ವಾಯತ್ತ ಪ್ರೇರಣೆಯಿಂದ ಉನ್ಮತ್ತವಾಗಿ ಸ್ವಾತಂತ್ರ್ಯದಾಗಕ್ಕೆ ಮುಟ್ಟುವ

ಸ್ಫೂರ್ತಿಯನ್ನು ಪಡೆದವು. ಸ್ವಲ್ಪದರಲ್ಲಿ ಹೇಳುವದಾದರೆ ಛಂದ ಯೋಜನೆಯು ಪ್ರಯೋಗಾತ್ಮಕ ಸ್ಥಿತಿಯಿಂದ ಪ್ರಾರಂಭಿಸಿ ಕಾವ್ಯರಚನೆಯ ಪೂರ್ಣ ಸಾಧನಾವಸ್ಥೆಗೆ ಮುಟ್ಟದ ಈ ಕಾಲವೇ ಆಧುನಿಕ ಹಿಂದೀ ಸಾಹಿತ್ಯದ ನವ್ಯ–ದಿವ್ಯ–ಕಾವ್ಯ ಕಾಲವೆನ್ನ ಬಹುದು.

ಈ ನವ್ಯ ಯುಗದ ಕಾವ್ಯದಲ್ಲಿ ಕಂಡುಬರುವ ಮುಖ್ಯ ಪ್ರವೃತ್ತಿಗಳು ಎರಡು. ೧) ಛಾಯಾವಾದ, ೨) ರಹಸ್ಯವಾದ. ಈ ಎರಡು ವಾದಗಳ ಜನ್ಮಕ್ಕೆ ಅವೆಷ್ಟೋ ಕಾರಣಗಳಿವೆ :—

೧) ರಾಷ್ಟ್ರೀಯ ಆಂದೋಲನದ ಪರಿಣಾಮವಾಗಿ ಹತಾಶರಾದ ಯುವಕರ ಮನೋಭಾವನೆ.

೨) ಮಹಾ ಯುದ್ಧದ ಸಮಾಪ್ತಿಯ ಫಲಸ್ವರೂಪವಾಗಿ ಮೊದಲೇ ತಲೆತಿನ್ನು ತ್ತಿರುವ ರಾಷ್ಟ್ರೀಯ ಸಾಮಾಜಿಕ ಸಮಸ್ಯೆಗಳೊಡನೆ ಆರ್ಥಿಕ ಸಮಸ್ಯೆಯೊಂದು ಬಂದು ಸೇರಿದುದು.

ಇವುಗಳ ಪರಿಣಾಮ ಸ್ವರೂಪವಾಗಿ ಕವಿಗಳ ಸೌಂದರ್ಯಾನುಭೂತಿಯು ಕಾರುಣ್ಯ ಪರಿಪಾಕವೊಡಗೂಡಿ ಬಂದಿತು. ಹೊರಗಿನ ಅರಿವು ಮರೆಯುವಂತಿರ ಲಿಲ್ಲಾ. ಆದರೆ ಈ ಪರಿಸ್ಥಿತಿಯ ಪರಿಣಾಮವಾಗಿ ಹಿಂದೀ ಕವಿಗಳು ಕ್ಷೋಭೆ ಯನ್ನಷ್ಟೇ, ವಿದ್ರೋಹವನ್ನಷ್ಟೇ ವ್ಯಕ್ತಮಾಡದೆ ಆಧ್ಯಾತ್ಮಿಕತೆಯ ಆವರಣದಲ್ಲಿ ಕವಿತಾ ಕಾಮಿನಿಯನ್ನು ಕಂಡರು. ಪ್ರಸಾದರ 'ಆಂಸೂ' (ಕಣ್ಣೀರು), ಪಂತರ 'ಉಚ್ಛ್ವಾಸ', ರಾಮಕುಮಾರ ವರ್ಮಾ, ಮಹಾದೇವಿ ವರ್ಮರ ಗೀತಗಳಲ್ಲಿ ಇಂತಹ ಕರುಣಾ ಸೌಂದರ್ಯಭರಿತ ಮಾರ್ಮಿಕ ಚಿತ್ರಗಳನ್ನು ಕಾಣಬಹುದು.

## ಆಧುನಿಕ ಹಿಂದೀ ಕವಿತೆಯ ವಿಭಿನ್ನ ಪ್ರವಾಹಗಳು.

ಭಾರತೇಂದು ಹರಿಶ್ಚಂದ್ರರು ಅಧುನಿಕ ಹಿಂದೀ ಕವಿತೆಯ ಅಗ್ರದೂತರೆನಿಸು ತ್ತಾರೆ. ಮನಸ್ಸಿನ ವಿಲಾಸವನ್ನು ತೀರಿಡಿಕೊಳ್ಳಲು ಬರೆಯಲ್ಪಡುವ ರೀತಿಕಾಲೀನ ಕವಿತಾ ಪ್ರವಾಹದ ಭಾವಧಾರೆ ಹಾಗೂ ವಿಷಯವನ್ನು ವಿಲಾಸಮಂದಿರದಿಂದ ಹೊರ ದೆಗೆದು ಪ್ರಶಸ್ತ ರಾಜಮಾರ್ಗಕ್ಕೆ ಮೊದಲಿಗೆ ತಂದವರು ಬಾಬೂ ಭಾರತೇಂದು ಹರಿ ಶ್ಚಂದ್ರರು. ಜೀವನದಿಂದ ದೂರವಿದ್ದ ಕವಿತೆಯು ಜೀವನವನ್ನಪ್ಪಿಕೊಳ್ಳುವಂತೆ ಮಾಡಿದವರು ಇವರೇ. ಅಂದಿನಿಂದ ಮಾನವ ಜೀವನದ ಅಂಗಾಂಗಗಳನ್ನು ಕವಿತೆ ಮುಟ್ಟತೊಡಗಿತು. ಕಾಲಮಾನಕ್ಕನುಸರಿಸಿ ಅವರ ಕವಿತೆಯು ಜನತೆಯ ಕಂಠ ಸ್ವರವಾಯಿತು. ಆ ಸ್ವರದಲ್ಲಿ ಅಭಾವ, ಅಭಿಯೋಗ ಹಾಗೂ ಆಶೆ ಆಕಾಂಕ್ಷೆಗಳು ರೂಪುಗೊಂಡವು. ತತ್ಕಾಲೀನ ನೈತಿಕ, ಸಾಮಾಜಿಕ, ಧಾರ್ಮಿಕ, ರಾಜನೈತಿಕ ಸ್ಥಿತಿ ಪರಿಸ್ಥಿತಿಗಳು ಚಿತ್ರಿತಗೊಂಡವು. ರಾಷ್ಟ್ರೀಯ ಕವಿತೆಯ ಸೂತ್ರಪಾತವು

ಮೊಟ್ಟಮೊದಲಿಗೆ ಇವರ ಅಮೃತ ಹಸ್ತದಿಂದಲೇ ಆಯಿತು. ರಾಷ್ಟ್ರದ ಸ್ವರವನ್ನು ಕಾವ್ಯ ವೀಣೆಯ ಮೇಲೆ ಹಾಡಿದರು.

ಈ ಕಾಲವಲ್ಲಿ ಉದಯ ಹೊಂದಿದ ಕವಿತೆಗಳು ವರ್ತಮಾನಕಾಲದ ಚೇತನ ಗಳಿಂದ ತುಂಬಿದ್ದ ಮೂಲಕ ಈ ಕಾಲಕ್ಕೆ ಸಾಮಾಜಿಕ ಕವಿತೆಯ ಕಾಲವೆನ್ನಬಹುದು. ಈ ಕಾಲದ ಎಲ್ಲ ಕವಿಗಳೂ ಈ ಸಾಮಾಜಿಕ ಪ್ರವಾಹದಲ್ಲಿಯೇ ಈಜಿದರು; ಬರಗಾಲ, ಹಸಿವೆ, ಕರಭಾರ, ಚಂದಾ, ಸುಂಕ, ಪೋಲಿಸರ ಅತ್ಯಾಚಾರ ಮುಂತಾದವೇ ಕಾವ್ಯ ವಿಷಯಗಳಾದವು. ವ್ಯಂಗ್ಯ, ಉಪಹಾಸ, ಒಗಟುಗಳ ಮುಖಾಂತರ ನಿದ್ದೆಗೈದ ಭಾರತವನ್ನು ಬಡಿದೆಬ್ಬಿಸುವದೇ ಕವಿಗಳ ಆದ್ಯ ಕರ್ತವ್ಯವಾಗಿ ಬಂತು. ದೇಶ ಭಕ್ತಿಯೇ ಕಾವ್ಯಾಂಗನೆಯ ಪ್ರಾಣ ಉಸಿರುಗಳಾದವು. ಪ್ರತಾಪ ನಾರಾಯಣ ಮಿಶ್ರ, ಪ್ರೇಮಘನ, ರಾಧಾಚರಣ ಗೋಸ್ವಾಮಿ, ಅಂಬಿಕಾದತ್ತವ್ಯಾಸ ಮುಂತಾದ ವರು ಈ ಮಾರ್ಗದಲ್ಲಿ ಭಾರತೆಂದುರವರ ಸಹಯೋಗಿಗಳಾಗಿ ಮುನ್ನಡೆದರು. ಭಾರತೆಂದು ಹರಿಶ್ಚಂದ್ರರು ಭಾರತದಲ್ಲಿ ಕವಿದ ಕತ್ತಲೆ ತೊಲಗಿಸುವ (ಇಂದು) ಚಂದ್ರಸ್ವರೂಪರಾಗಿಯೂ, ಸತ್ಯಕ್ಕಾಗಿ ಪ್ರಾಣ ಪಣಕ್ಕೊಡ್ಡಿದ ಹರಿಶ್ಚಂದ್ರರಾಗಿಯೂ ಕಂಗೊಳಿಸಿ ಜನಮನಗಳ ಕಣ್ಮಣಿಯಾದರು.

ಸಾಮಾಜಿಕ ರಾಷ್ಟ್ರೀಯ ಚೇತನೆಯು ಪೂರ್ಣವಿಕಾಸವಾದನಂತರ ಬರುವ ಯುಗವೇ ದ್ವಿವೇದಿಯುಗವೆನ್ನಬಹುದು. ಸರಸ್ವತಿ ಸೇವಕರಾದ 'ಸರಸ್ವತಿ' ಸಂಪಾದಕ ಆಚಾರ್ಯ ಮಹಾವೀರ ಪ್ರಸಾದ ದ್ವಿವೇದಿಯವರು ಈ ಯುಗದ ಅಧ್ವರ್ಯರು, ಸ್ವನಾಮಧನ್ಯ ಆಚಾರ್ಯರು. ಆಧುನಿಕ ಹಿಂದೀ ಕಾವ್ಯ ಮಾರ್ಗ ದಲ್ಲಿ ಇವರು ಇನ್ನೊಂದು ದೀಪಸ್ತಂಭ ಬೆಳಗಿದರು. ಭಾರತೆಂದೂರವರು ಕವಿತೆಯ ಅಂತಶ್ಶುದ್ಧಿ ನೆರವೇರಿಸಿದರೆ ದ್ವಿವೇದಿಯವರು ಬಹಿಃಶುದ್ಧಿ ಜರುಗಿಸಿದರು. ಕಾವ್ಯಾಂ ಗನೆಯು ಬ್ರಜಭಾಷಾ ಪೋಷಾಕನ್ನು ಬಿಟ್ಟು ಖಡೀಬೋಲಿಯ,' ಸಾರ್ವದೇಶಿಕ ಭಾಷೆಯ ಪೋಷಾಕನ್ನು ತೊಟ್ಟಳು. ತೊಡಿಸಿದವರು ಮಹಾವೀರ ಪ್ರಸಾದರೇ. ಹೆಸರಿಗೆ ತಕ್ಕಂತೆ ಮಹಾ ವೀರರಾಗಿ ಹೊಸ ನೈವೇದ್ಯಮಾಡಿ ಹೊಸ ಪ್ರಸಾದವನ್ನು ಹಂಚಿದರು. ಈ ತಮ್ಮ ಕಾಲದ ಕವಿಗಳನ್ನು ತಮ್ಮ ಅಂಕೆಯಲ್ಲಿ ತಂದರು. ಇವರ ನೇತೃತ್ವದಲ್ಲಿಯೇ ಮೈಥಿಲೀ ಶರಣಗುಪ್ತ, ಸಿಯಾರಾಮ ಶರಣಗುಪ್ತ, ರೂಪನಾರಾ ಯಣ ಪಾಂಡೇಯ, ಗಿರಿಧರಶರ್ಮ, ರಾಮಚರಿತ ಉಪಾಧ್ಯಾಯ, ಲೋಚನಪ್ರಸಾದ ಪಾಂಡೇಯರಂತಹ ಸಿದ್ಧ ಪ್ರಸಿದ್ಧ ಕವಿಗಳು ಖಡೀಬೋಲಿಯ ಜನ್ಮ ಹಾಗೂ ಶೈಶವ ವನ್ನು ಆಚಾರ್ಯರ ನೇತೃತ್ವದಲ್ಲಿ ಕಾವ್ಯಸುಧಾಪಾನ ಮಾಡಿಸುತ್ತ ಪಾಲಿಸಿ ಪೋಷಿಸಿ ದರು. ಹಿಂದೀಯ ಖಡೀಬೋಲೀ ಕಾವ್ಯಗಂಗೆಯು ಹುಟ್ಟಿದ ಗಂಗೋತ್ರಿಯು ಇದೇ. ಮುಂದೆ ಅನೇಕಾನೇಕ ಶಾಖೆ ಉಪಶಾಖೆಗಳಿಂದ ಕೂಡಿದ ಗಂಗೆ ಪಾವನ ಕಾವ್ಯ ಗಂಗೆಯಾಗಿ ಜನಮನ ತಣಿಸುವಂತಾಯಿತು. ಈ ಕಾಲದ ಕವಿಸಾಮ್ರಾಟ

ರೆಂದರೆ ಬಾಬೂ ಮೈಥಿಲೀ ಶರಣಗುಪ್ತರು. ಇವರು ನಮ್ಮ ರಾಷ್ಟ್ರವೀಣೆಯ ಸ್ವರ ಸಂಧಾನಮಾಡಿ, ಸಾಹಿತ್ಯ ಸಾಧನೆಯ ಋಷಿಯೋಪಾದಿಯಲ್ಲಿ ನಮ್ಮ ಭಾರತೀಯ ಸರಲತೆ, ಸೌಜನ್ಯ ಹಾಗೂ ಸ್ಪಷ್ಟವಾದಿತ್ವದ ಪ್ರತೀಕರಾಗಿರುವರು. ಇವರ ಸಂಗಡಿಗರು ಇವರ ಹೃದಯದ ವಿಶಾಲತೆ ವಿಚಾರಗಳ ಉತ್ಕರ್ಷವನ್ನು ಚನ್ನಾಗಿ ಬಲ್ಲರು. ಇವರಿಂದ ವಿರಚಿತ 'ಸಾಕೇತ', 'ಪಂಚವಟಿ', 'ಯಶೋಧರಾ', 'ಜಯದ್ರಥ ವಧ' 'ದ್ವಾಪರ' ಮುಂತಾದವೇ ಇವರ ಮನನಶೀಲ ಸ್ವಭಾವದ ಸಾಕ್ಷಿ ಕೃತಿಗಳು. ಜಗತ್ತಿನ ಕೋಲಾಹಲದಿಂದ ದೂರವಿರುವ, ಚಿರಗಾಂವ ಹಳ್ಳಿಯ ಒಂದು ಮೂಲೆಯಲ್ಲಿ ಅವರು ಭಾರತೀಯ ಸಂಸ್ಕೃತಿಯ ಪ್ರತಿನಿಧಿತ್ವ ಮಾಡುತ್ತಲಿದ್ದಾರೆ. ಪ್ರಾಚೀನ ಹಾಗೂ ಅರ್ವಾಚೀನ ಯುಗಧರ್ಮದ ಆದರ್ಶಗಳ ಅಪೂರ್ವ ಸಾಮಂಜಸ್ಯವನ್ನು ಅವರ ಕೃತಿಗಳಲ್ಲಿ ಕಾಣುತ್ತೇವೆ.

ಆಚಾರ್ಯರು ಒಬ್ಬ ನಿಜವಾದ ಗುರುವಿನೋಪಾದಿಯಲ್ಲಿ ತಮ್ಮ ಕವಿಶಿಷ್ಯರಿಗೆ ಕಠಿಣ ಕಾವ್ಯ ಮಾರ್ಗದಲ್ಲಿ ನಡೆವುದನ್ನು ಕಲಿಸಿದರು. ಹಾಗೂ ಸಮಸ್ತ ಬಹಿರ್ ಜಗತ್ತನ್ನು ಕಾವ್ಯ ವಿಷಯವನ್ನಾಗಿ ಅಳವಡಿಸಿಕೊಳ್ಳುವದನ್ನೂ ಕಲಿಸಿದರು. ಪರಿಣಾಮ ಸ್ವರೂಪವಾಗಿ 'ಇರಿವೆಯಿಂದ ಆನೆಯವರೆಗೂ, ಹನಿಯಿಂದ ಸಮುದ್ರ, ಅನಂತ ಆಕಾಶವವರೆಗೂ ಚರ್ಮಚಕ್ಷುವಿಗೆ ಹೊಳೆವ ವಸ್ತುಗಳೆಲ್ಲ ಕಾವ್ಯ ವಿಷಯವಾದವು. ಸಮಾಜಹಿತವೇ ಏಕಮಾತ್ರ ಉದ್ದೇಶ, ಲೋಕ ಕಲ್ಯಾಣವೇ ಏಕಮಾತ್ರ ಲಕ್ಷ್ಯವಾಗಿರುವ ಕವಿತೆಯ ರಸಪ್ರವಾಹವು ಕಂಗೆಟ್ಟ ಈ ಭೂಮಿಯಲ್ಲಿ ಧಾರಾಳವಾಗಿ ಹರಿಯಿತು. ಎಲ್ಲ ವಾದಗಳ ಮೂಲವೇ 'ರಾಷ್ಟ್ರವಾದ' ವೆಂಬಂತೆ ಈ ಕಾಲದ ಪ್ರವೃತ್ತಿಗಳು ಕಂಡು ಬರುವವು. ಅತೀತ ಗೌರವ, ವರ್ತಮಾನ ಪರಿಸ್ಥಿತಿ ಕುರಿತು ಕ್ಷೋಭೆ, ಭವಿಷ್ಯತ್ ನಿರ್ಮಾಣಕ್ಕೋಸುಗ ಆಶೆ, ಭಾರತದ ರಾಜನೀತಿಯ ಗತಿ ಸ್ಪಂದನ, ಸ್ವಾತಂತ್ರ್ಯ ಮಾರ್ಗದಲ್ಲಿ ಬರುವ ಬಾಧೆಗಳನ್ನು ಚೂರ್ಣಗೊಳಿಸುವ ಪ್ರೇರಣೆ, ಹಾಗೂ ಉಭಯ ಸ್ವರಗಳೇ ಈ ಕಾಲದ ಕಾವ್ಯಪ್ರೇರಣೆಗಳು. ಮೈಥಿಲೀ ಶರಣಗುಪ್ತರ 'ಭಾರತ ಭಾರತಿ' ತ್ರಿಕಾಲದರ್ಶಿನಿ ಕನ್ನಡಿಯಾದರೆ ಸಿಯಾರಾಮ ಶರಣ ಗುಪ್ತರ "ಮೌರ್ಯವಿಜಯ" ಅತೀತಗೌರವಸ್ತಂಭ ಪಂಡಿತ್‌ರಾಮ ನರೇಶ ತ್ರಿಪಾಠಿಯವರು ತಮ್ಮ "ಪಥಿಕ," "ಮಿಲಿನ್," "ಸ್ವಪ್ನ" ಎಂಬ ಕಾವ್ಯಗಳಲ್ಲಿ ಭಾರತದ ರಾಜನೀತಿಯಲ್ಲಿ ಕಂಡು ಬರುವ ಗಾಂಧೀವಾದೀ ಚಳವಳಿಗಳ ಚಿತ್ರಗಳನ್ನು ಕಾಣಬಹುದು. ಈ ಕಾಲದ ಮಹತ್ಕಾಣಿಕೆಗಳೆಂದರೆ–ಮೈಥಿಲೀಶರಣ ಗುಪ್ತರ 'ಸಾಕೇತ', ಹಾಗೂ ಅಯೋಧ್ಯಾಸಿಂಹ ಉಪಾಧ್ಯಾಯರ 'ಪ್ರಿಯಪ್ರವಾಸ' ಇಪ್ಪತ್ತನೇ ಶತಮಾನದ ಈ ಇಬ್ಬರು ದರ್ಶನಿಕ–ರ ನಂತರ ಮುಂದೆ ಕಂಡು ಬರುವ ನಾಲ್ಕು ಮಹಾ ಕವಿಗಳ ಕಾಲವೆಂದರೆ 'ಪ್ರಸುಮನ ಕಾಲ'ವೆನ್ನಬಹುದು. ಹೇಗೆಂದರೆ. 'ಪ್ರಸಾದ, ಸುಮಿತ್ರ ನಂದನ ಪಂಚ, ಮಹಾದೇವಿ, ಹಾಗೂ ನಿರಾಲಾ ಎಂಬ

ಮಹಾನ್ ಕವಿಗಳ ಪ್ರಥಮಾಕ್ಷರಗಳನ್ನು ತಗೊಂಡು ಈ ಕಾಲಕ್ಕೆ ಹೆಸರು ಕೊಡ ಬಹುದು. ಬಹಿರ್ಜಗತ್ತನ್ನು ಕುರಿತು ಹೇಳಬೇಕಾದುದನ್ನೆಲ್ಲ, ಹೇಳಿ ಕವಿತೆ ಈ ಪ್ರವಾಹ ಈಗ ಅಂತರ್ಜಗತ್ತನ್ನು ಸೇರಿ ಅಲ್ಲಿಯ ಅಸಂಖ್ಯ ಭಾವನೆ ಹಾಗೂ ಅನು ಭೂತಿಗಳನ್ನು ಅನಂತದೆಡೆಗೆ ಹರಿಸತೊಡಗಿತು. ಈ ಯುಗದ ಕವಿತೆ ಆತ್ಮಗತ ಅಥವಾ Subjective ಎನ್ನಬಹುದು. ಈ ಅಂತರ್ಜಗತ್ತಿನ ಕಥೆಯನ್ನು ಹೇಳ ಬಯಸುವ ಕವಿಯು ಪ್ರಕೃತಿಯೊಡನೆ ಆತ್ಮಭಾವ ಸ್ಥಾಪಿಸಿ ತನ್ನ ಭಾವನೆಗಳನ್ನು ಚಿತ್ರಿಸಲು ಪ್ರಕೃತಿಯ ಅನೇಕ ಬಿಂಬ ಪ್ರತಿಬಿಂಬ (ಛಾಯಾ)ಗಳ ನೆರವು ಪಡೆದನು. ಹಾಗೂ ಪ್ರಕೃತಿಯ ಸಜೀವ ಚಿತ್ರಣಕ್ಕೋಸುಗ ಅದಕ್ಕೆ ಮಾನವೀಯ ಚೇತನೆ ಯನ್ನು ನೀಡಿದನು. ಕವಿಯು ಮೂಲಭೂತ ತತ್ವವಾಗಿ ಸರ್ವ ಚೇತನವಾದವನ್ನು ಅಪ್ಪಿಕೊಂಡನು ಹೀಗೆ ಪ್ರಕೃತಿಯಲ್ಲಿ ಚೇತಾನಾಭಾಸ ಹಾಗೂ ಮಾನವೀಯ ವ್ಯಾಪಾರಗಳ ಆರೋಪಣೆಯೇ 'ಛಾಯಾವಾದವೆನಿಸಿತು. ಈ ಛಾಯಾವಾದದ ಪೂರ್ಣತೆಯೋ ಎಂಬಂತೆ ಪ್ರಸಾದರ ಮಹಾಕಾವ್ಯ 'ಕಾಮಾಯನೀ' ಹುಟ್ಟಿ ಕೊಂಡಿತು. ಪ್ರಾಚೀನ ಭಾರತೀಯ ಸಂಸ್ಕೃತಿಯ ಉಪಾಸಕರಾದ ಪ್ರಸಾದರು (ಜಯಶಂಕರ ಪ್ರಸಾದ) ತಮ್ಮ ಜೀವನವನ್ನೆಲ್ಲಾ ಮಧು ಮಧುರ ಹಾಸ್ಯದೊಡನೆ ಸಾಹಿತ್ಯ ಸುಧೆ ಸುರಿಸುವದರಲ್ಲಿ ಕಳೆದುದಲ್ಲದೆ ಗೀತೆಗಳಲ್ಲಿ ನವೀನತೆ, ಭಾಷೆಯಲ್ಲಿ ಪ್ರೌಢತೆಯು ವಿಚಾರಗಳಲ್ಲಿ ಪರಿಪಕ್ವತೆ ಹಾಗೂ ಭಾವಾಭಿವ್ಯಂಜನೆಯಲ್ಲಿ ನವ್ಯ ನೂತನತೆ ತರುವವರಲ್ಲಿ ಜಯಶಂಕರರು ಜಯಶಂಕರರಾಗಿ ಕೋಮಲ, ಸೌಂದರ್ಯ ಪ್ರಸಾದ ಗುಣಗಳಿಂದ ಕೂಡಿದ ಪ್ರೇಮ ಕವಿ ಪ್ರಸಾದರೇ ಆದರು ಅವರು ಮಿಡಿದ ತಂತಿಯಲ್ಲಿ ಹೊಸ ಸಂಗೀತವೂ ಸ್ವರದಲ್ಲಿ ಸುಸ್ವರತೆಯೂ ತುಂಬಿತ್ತಲ್ಲದೆ ಬುದ್ಧನ ಕರು ಣೆಯ ಚತುರ ಚಿತ್ರಕಾರರಾದ ಅವರು ತಪಸ್ಯೆ ಹಾಗೂ ಸಾಧನೆಯ ಅಮರ ಕಲಾ ಕಾರರೆಂದರೆ ಅತಿಶಯೋಕ್ತಿ ಎನಿಸದು. ಅವರ ಗೀತದ ಒಂದು ಕನ್ನಡ ಭಾವಾನುವಾದ:

'ಎದ್ದೇಳು ಮನದನ್ನೆ, ಉಷೆಯೆಂಬ ಚದುರ್ಹೆಣ್ಣೆ ಆಗಸದ ಕೆರೆಯಲ್ಲಿ,
ನಕ್ಷತ್ರ ಕೊಡವನ್ನು ಮುಳುಗಿಸುತಿಹಳು. ಪಕ್ಷಿಕುಲ ಕುಲುಕುಲನೆ
ಹಾಡುತಿಹುದು. ಚೆಂದಳಿರು ಸೆರಗು ಅಲ್ಲಾಡಿಸುತೆ
ತಲೆ ಅಲ್ಲಾಡಿಸುತಿಹುದು ನೋಡಲ್ಲಿ
ಮಗ್ಗೆ ರಸಘಟವ ತುಂಬಿ ನಿಂತಿದೆ;
ಕಲ್ಪನೆ ಮೋಹಕವಾಗಿದೆ; ಮಧುರವಾಗಿದೆ; ಭಾವಪೂರ್ಣವಾಗಿದೆ.

ಖಡೀಬೋಲೀಯಲ್ಲಿ ಕಾವ್ಯಜನ್ಯ ಮಾಧುರ್ಯಚಂದ ಮೊದಲಕವಿ ಸುಮಿತ್ರ ನಂದ ಪಂತರು. ಮಾತೆ ಭಾರತಿಯು ಕವಿಗೆ ವರದಾನವಾಗಿ ಕೋಮಲ ಕಾಂತಿ ಪೂರ್ಣ ಶಬ್ದಭಂಡಾರ ಆಶೀರ್ವದಿಸಿದ್ದಾಳೆ. ಪಂತರು ಕೇವಲ ನೂತನ ಅನುಪಮ

ಕಲ್ಪನೆಯ ಕವಿಗಳಷ್ಟೇ ಅಲ್ಲ ಜೀವನದ ಮಧುರ ಸುಖದುಃಖಗಳ ಗುಂಜಾರವವೂ ಅವರ ಕಾವ್ಯದಲ್ಲಿದೆ.

ಯುಗಧ್ವನಿಯೊಡನೆ ಧ್ವನಿಗೂಡಿಸಿ ನಡೆವುದೇ ಅವರ ಕಾವ್ಯಧರ್ಮವಾಗಿದೆ. ಉನ್ಮುಕ್ತ ರೂಪವಾಗಿ ಪ್ರಗತಿಶೀಲ ಕಾವ್ಯ ಸೃಷ್ಟಿಯೇ ಅವರ ದೃಷ್ಟಿ. ತಾವು ಕಂಡ ನಕ್ಷತ್ರ ಲೋಕದ ಕಾಂತಿ ಜ್ಯೋತ್ಸ್ನೆಯನ್ನು ಕಾವ್ಯಭೂಮಿಗೆ ಅವರು ಉಣಿಸಿದ್ದಾರೆ. ಹಿಂದೀ ಕಾವ್ಯವು ಲೋಕಿ ಅವರಿಗೆ ಚಿರಋಣಿ. ಅನೇಕ ಯುವಕ ಕವಿಗಳಿಗೆ ಅವರು ಪಥಪ್ರದರ್ಶಕರು. ಛಾಯಾವಾದಿಯುಗ ನಿರ್ಮಾತರೆಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಛಾಯೆಗೆ ಜೀವದಾನ ಕೊಟ್ಟ ಮಹಾಕವಿ ಅವರು.

ಪ್ರಕೃತಿಯ ಆಕರ್ಷಕ ಪರಿವರ್ತನಶೀಲ ರೂಪವನ್ನು ಅನೇಕ ಬಣ್ಣಗಳಲ್ಲಿ ಚಿತ್ರಿಸುವ ಕ್ಷಮತೆಯು ಅವರವೇ ಅವರದಾಗಿದೆ. ಅವರ ಕವಿತೆಯಲ್ಲಿ ಪ್ರೇಮ ಸ್ವರೂಪಿರಾಮ ಹಾಗೂ ಶ್ರೇಯ ಸ್ವರೂಪಿ ಭರತರ ಮಿಲನವನ್ನು ಅದ್ಭುತವಾಗಿ ಕಾಣಬಹುದು.

ಆತ್ಮಗತ ಕವಿತೆಯ ಎರಡನೇ ಪ್ರವೃತ್ತಿಯೆಂದರೆ ಹೃದಯವಾದ. ಹೃದಯದ ಸೂಕ್ಷ್ಮಮಾರ್ಮಿಕ ಭಾವನಿರೂಪಣೆಯಲ್ಲಿ ಕವಿಗಳು ತಮ್ಮ ಮನೋಸ್ಥಿತಿಗನುಕೂಲವಾಗಿ ಚಿತ್ರಿಸಿದ್ದಾರೆ. ಈ ಮನಸ್ಥಿತಿಯ ಮೇಲೆ ವೈಯಕ್ತಿಕ, ಸಾಮಾಜಿಕ, ಹಾಗೂ ರಾಜನೈತಿಕ ಬಾಧೆ ಬಂಧನಗಳು ಅವುಗಳಿಂದ ಉಂಟಾದ ಕುಂಠಿತ ಪರಿಸ್ಥಿತಿಗಳ ನೆರಳನ್ನು ಗಾಢವಾಗಿ ಕಾಣಬಹುದು. ಇಂತಹ ಚಿತ್ರಣದಲ್ಲಿ ಮಹಾದೇವಿ ವರ್ಮಾರವರು ಎತ್ತಿದ ಕೈ. ಭಾರತೀಯ ತತ್ವಜ್ಞಾನದ 'ನಶ್ವರ ಭಾವನಾ' ಚಿತ್ರಣವು ನಿರಾಶಾವಾದಕ್ಕೆ ಜನ್ಮಕೊಟ್ಟಿದೆ. ಅಂತೆಯೇ ಮಹಾದೇವಿಯ ಚಿತ್ರಗಳಲ್ಲಿ ವೇದನೆ, ದುಃಖ ತುಂಬಿದೆ. ತನ್ನ ಜೀವನದ ಅತಿಸುಖವೇ ತನ್ನ ಅತಿ ದುಃಖಕ್ಕೆ ಕಾರಣವೆಂದು ಮಹಾದೇವಿಯವರೇ ಉಸುರಿದ್ದಾರೆ. ಇಂತಹ ನಿರಾಶಾವಾದವನ್ನು ಪಂತ, ರಾಮಕುಮಾರ್ ವರ್ಮಾಭಗವತಿ ಚರಣವರ್ಮಾರವರ ಕವಿತೆಗಳಲ್ಲಿಯೂ ಕಾಣಬಹುದು.

ಸೂರ್ಯಕಾಂತ ತ್ರಿಪಾಠಿ ನಿರಾಲಾರವರು ಸಾಹಿತ್ಯ ಕ್ಷೇತ್ರದಲ್ಲಿ ಸೂರ್ಯಕಾಂತ ಮಣಿಯಂತೆ ತನ್ನದೇ ತನ್ನದಾದ ಸ್ಥಾನವನ್ನು ನಿರ್ಮಿಸಿದರು. ಅವರ ಭಾಷೆ ಹಾಗೂ ಭಾವಸಂಕುಳ ಅಂಕುಶವರಿಯದು. ಸಂಪೂರ್ಣ ಮುಕ್ತ, ಜೀವನ, ಚೇತನೆಯೇ ಅವರ ವೈಶಿಷ್ಟ್ಯ. ಅಂತೆಯೇ ಅವರ ಕವಿತೆಯೂ ಪ್ರಾಣ ಪೂರ್ಣಮಯ. ಅವರು ಕಂಡ ದೇವ ಶುದ್ಧ ಹಾಗೂ ಜ್ಞಾನಮಯ ಚಿನ್ಮಯನು; ಅದೇ ಬಿಂದುವಿನಲ್ಲಿ ಜೀವ ಶಿವಮಿಲನದ ರಹಸ್ಯ ತುಂಬಿದೆ. ಅವರ ಕವಿಜಗತ್ತು ಭಾವನೆಗಳ ಆಧಿಕ್ಯಕ್ಕಾಗಿ ಕವಿಜಗತ್ತೆಲ್ಲಾ ಚಿಂತನೆಯ ಪರಿಣಾಮವಾಗಿ ಕವಿಜಗತ್ತಾಗಿದೆ. ಆ ಜಗತ್ತಿನ ಧ್ವನಿಯೆಂದರೆ ಅವರ ಅಂತಃಕರಣದ ಕೂಗೇ ಆಗಿದೆ. ಅಲ್ಲಿ ಕಪಟ ಕೃತ್ರಿಮತೆಗೆ ಸ್ಥಾನವಿಲ್ಲ.

ಪ್ರಲಯ ಶಂಕರನಂತೆ ಆತನು ದೃಢ ಹಾಗೂ ಪ್ರಲಯಕಾರಿ. ಸಾಹಿತ್ಯದ ಕುಸ್ತಿಯ ಕಣದಲ್ಲಿ ಆಹ್ವಾನಿಸುವ ವೀರನನ್ನು ಹುಡುಕುತ್ತ ನಿಂತ ಸಾಹಿತಿ ಆತ; ಎದುರಾಳಿ ಮಾತ್ರ ಇನ್ನೂ ಬಂದಿಲ್ಲಾ.

ಈ ಆಧುನಿಕ ಕಾಲದಲ್ಲಿ ಯಥಾರ್ಥವಾದದ ಮೂರನೆಯ ಪ್ರವೃತ್ತಿಯನ್ನು ನೋಡಬಹುದು. ಕವಿ ತನ್ನ ವೈಯಕ್ತಿಕ ಸಾಮಾಜಿಕ ಹಾಗೂ ರಾಜನೈತಿಕ-ನೋವು, ವ್ಯಥೆ, ದುರ್ಬಲತೆ, ಅಭಾವಗಳನ್ನು ಈ ಕಾಲದಲ್ಲಿ ಏನೇನೂ ಮುಚ್ಚಿಡದೆ ವ್ಯಕ್ತಗೊಳಿಸಲಿಚ್ಛಿಸುತ್ತಾನೆ. ನೈತಿಕಕ್ಷೇತ್ರದಲ್ಲಿ ಬಂಧನಗಳನ್ನು ಆತ ಲೆಕ್ಕಿಸುವದಿಲ್ಲ. ಸ್ವಚ್ಛಂದಪ್ರೇಮ ಪ್ರವೃತ್ತಿಯಲ್ಲಿಯೂ ಪಾಪ ಭಾವನೆಯನ್ನು ಪೂರ್ಣವಾಗಿ ಬಹಿಷ್ಕರಿಸುತ್ತಾನೆ. ಈ ತೆರನಾದ ಯಥಾರ್ಥವಾದವು ಮುಂದುವರಿದ ಮಾರ್ಗಗಳು ಎರಡು. ಯಥಾರ್ಥ ಜೀವನದ ಕಠೋರತೆ, ಕುರೂಪತೆಗಳ ಹೊಡತದಿಂದ ಎಚ್ಚತ್ತಾಗ ಗಾಬರಿಯಾಗಿ 'ಆ ಲೋಕ' ಸೇರಲು ಚಡಪಡಿಸಿದ ಮಾರ್ಗ ಒಂದು, 'ಆ ಲೋಕ' ಮಾರ್ಗದ ಆ ಲೋಕಕ್ಕೆ 'ಪಲಾಯನವಾದ'ವೆಂತಲೂ ಅಂದರು. ಇನ್ನು ಎರಡನೆ ದಿಶೆಯಲ್ಲಿ–ಜೀವನದಲ್ಲಿ ಯಥಾರ್ಥವಾಗಿ ತುಂಬಿದ ನಿರಾಶೆ, ವ್ಯಥೆ, ಹಾಗೂ ವೇದನೆ ನೋವುಗಳನ್ನು ಮರೆಯಲು, ಮರೆಸಲು ಮದಮತ್ತಾದ ಭಾವನೆ ತುಂಬುವ ಪ್ರಯತ್ನವನ್ನು ಕವಿಗಳು ಮಾಡಿದರು. ಇದೇ ಹಾಲಾವಾದ, ಮಧುವಾದವೆಂದು ಕರೆಯಲ್ಪಟ್ಟಿತು. ಪಲಾಯನವಾದ ಪ್ರವೃತ್ತಿಯು ಛಾಯಾವಾದ ರಹಸ್ಯವಾದದ ಎಲ್ಲ ಕವಿಗಳಲ್ಲಿ ಇದ್ದೇ ಇದೆ. ಆದರೆ ಹರಿವಂಶರಾಯ 'ಬಚ್ಚನ್'ರವರ ಗೀತೆಗಳಲ್ಲಿ ಈ ಮಧುವಾದವೇ ಹಾಲಾವಾದವೇ ಪ್ರಮುಖವಾಗಿದೆ. ಕವಿವರ ನರೇಂದ್ರ ಅಂಚಲ್, ಹಾಗೂ ಭಗವತೀ ಚರಣವರ್ಮರವರು ಯಥಾರ್ಥವಾದದ ಮೂಲರೂಪದ ಕವಿಗಳಾದರು. ಅವರು ಹಿಂದೀ ಸಾಹಿತ್ಯದಲ್ಲಿ ಉಮರ ಖಯ್ಯಾಮರಂತಿದ್ದಾರೆ.

ಕವಿಗಳು ಈ ಕಾಲದಲ್ಲಿ 'ಸ್ವ' 'ಪರಪಕ್ಷಗಳನ್ನೆತ್ತಿಕೊಂಡು ತಮ್ಮ ಅನುಭೂತಿ ಅಭಿವ್ಯಕ್ತಿಗಳನ್ನು ಅನೇಕ ತರಹದ ಗೀತೆಗಳಲ್ಲಿ ಹಾಡಿದರು. ಆದರೆ ಪರೋಕ್ಷ ಸತ್ತೆಯನ್ನು ಕುರಿತು ಅವರು ಈ ಕಾಲದಲ್ಲಿ ಮೌನರಾಗಿಯೇ ಇದ್ದಾರೆ. ಮೈಥಿಲೀ ಶರಣಗುಪ್ತ ಹಾಗೂ ಜಯಶಂಕರ ಪ್ರಸಾದರು ಈ ಯುಗದಲ್ಲಿ ಭಕ್ತಿಕಾಲದಂತೆ ಆ ಪರೋಕ್ಷ ಸತ್ತೆಯ ಕಡೆಗೆ ಕಣ್ಣು ಹೊರಳಿಸಿದರು. ಏನೇ ಆದರೂ ಭಕ್ತಿ ಯುಗದ ಸಗುಣ ನಿರ್ಗುಣ ಪ್ರವಾಹವು ಈ ಬೌದ್ಧಿಕ ವೈಜ್ಞಾನಿಕ ಭೂಮಿಯಲ್ಲಿ ಹರಿಯುವುದು, ಹರಿಸುವದು ಸಾಧ್ಯವಾಗಲಿಲ್ಲಾ. ಆದರೂ 'ಭಕ್ತಿ' ಅನುಭೂತಿಯ ಬೌದ್ಧೀಕರಣವಾಗಿ 'ಮಾನವವಾದ'ವಾಗಿ ಅದು ಮೆರೆಯತೊಡಗಿತು. ಕಾವ್ಯದಲ್ಲಿ ಮಾನವವಾದಕ್ಕೆ ಈ ಯುಗದಲ್ಲಿ ಶ್ರೀ ಗಣೇಶ ಮಾಡಿದವರು ರವೀಂದ್ರನಾಥ ಠಾಕೂರರು. ಪೂಜಕನಿಗೆ ಪೂಜಾಪಾಠ ಬಿಟ್ಟು ಕರ್ಮಯೋಗಿಯಾಗಿ ಬಾಳೆಂದು

ಬೋಧಿಸಿದನು. ಪರೋಕ್ಷ ಸತ್ತೆಯನ್ನು ಕುರಿತು ಹಾಡುವ ಕವಿವಾಣಿ ರಹಸ್ಯವಾದಕ್ಕೆ ಜನ್ಮವಿತ್ತಿತು. ಭಾರತೀಯ ತತ್ವಜ್ಞಾನವಲ್ಲಿಡಗಿದ ಅದ್ವೈತವಾದವು ಕಬೀರ ಜಾಯಸಿ ಮುಂತಾದ ಕವಿಗಳಲ್ಲಿ ದಿವ್ಯಾನುಭೂತಿಯ ರಸ ನಿಮಿಷಗಳನ್ನು ನಿರ್ಮಿಸುತ್ತ ರಹಸ್ಯವಾದವಾಗಿ ಪರಿಣಮಿಸಿದರೆ ಆಧುನಿಕ ಕವಿಗಳಲ್ಲಿ ಮಾನವ ಜೀವನದ ರಸ ನಿಮಿಷಗಳು ಹೊಸ ರಹಸ್ಯಾನುಭೂತಿ ಪಡೆದು ನೂತನ ರಹಸ್ಯವಾದಕ್ಕೆ ಜನ್ಮ ವಿತ್ತವು. ಈ ಪ್ರವಾಹದ ಪ್ರವರ್ತಕರೂ ಠಾಕೂರರೇ. ಹಿಂದೀ ಸಾಹಿತ್ಯದಲ್ಲಿ ಪ್ರಸಾಹ, ಪಂತ, ನಿರಾಲಾ, ಮಹಾದೇವಿ, ರಾಮಕುಮಾರ ವರ್ಮಾರವರ ಲೇಖನಿ ಯಿಂದ ಈ ಬಗೆಯ ರಹಸ್ಯವಾದವು ಅನಂತಧಾರೆಯಾಗಿ ಹರಿಯಿತು. ರಹಸ್ಯವಾದೀ ಭಾವನೆಯು ಚಿಂತನೆಯ ದೃಷ್ಟಿಯಿಂದ ಚಿರಂತನವೂ ಅರ್ವಾಚೀನ ದೃಷ್ಟಿಯಿಂದ ಪ್ರಯೋಗಮಯವೂ ಆಗಿದೆ.

ಈ ತೆರನಾಗಿ ಆದುನಿಕ ಹಿಂದೀ ಕಾವ್ಯದ ವಿಭಿನ್ನ ಪ್ರವಾಹಗಳು ಶತರೂಪ ಸಹಸ್ರರೂಪವಾಗಿ ಹರಿದು ಕಂಗೆಟ್ಟ ಭಾರತ ಹೃದಯವನ್ನು ಸಂತೈಸಿ-ಸುಖ ಸಮುದ್ರ ದೆಡೆಗೆ ವಿಶಾಲದೆಡೆಗೆ, ಒಯ್ಯಲು ಪ್ರಯತ್ನಿಸಿದವು.

---

# ಪ್ರಾಣಿಗಳಲ್ಲಿ ಆತ್ಮರಕ್ಷಣೆ



ಬರೆದವರು : **ಎಸ್. ಬಿ. ಮುತಾಡ್**, ಎಂ.ಎಸ್‌ಸಿ.,
ಪ್ರಾಣಿಶಾಸ್ತ್ರದ ಅಧ್ಯಾಪಕರು, ಕರ್ನಾಟಕ್ ಸೈನ್ಸ್ ಕಾಲೇಜ್, ಧಾರವಾಡ.

**ಪ್ರಾ**ಣಿಗಳಿರುವದು ಕೋಟ್ಯಾವಧಿ ಸಂಖ್ಯೆಯಲ್ಲಿ. ಅವೆಲ್ಲವೂ ತಮ್ಮ ಜೀವನದುದ್ದಕ್ಕೂ ವಿವಿಧ ಬಗೆಯ ಚಟುವಟಿಕೆ ವ್ಯಕ್ತಪಡಿಸುವವು. ಸೂಕ್ಷ್ಮವಾದ ಅಭ್ಯಾಸದಿಂದ ಈ ಎಲ್ಲ ಚಟುವಟಿಕೆ ನಿರ್ದೇಶಿತವಾಗಿರುವದು ಅತಿ ಮುಖ್ಯವಾದ ಎರಡು ಗುರಿಗಳೆಡೆಗೆ ಎಂದು ಕಂಡುಬರುವುದು. ಒಂದು ಆಹಾರ ಸಂಪಾದನೆ, ಇನ್ನೊಂದು ಸಂತಾನ ಪಡೆಯುವಿಕೆ. ಅವೆರಡನ್ನು ಸಾಧಿಸುವಲ್ಲಿ ಶತ್ರುಗಳು ಅವಕ್ಕೆ ದೊಡ್ಡ ಆತಂಕವಾಗಿವೆ. ಶತ್ರುಗಳಿಂದ ರಕ್ಷಣೆ ಪಡೆಯುವದೇ ಆತ್ಮರಕ್ಷಣೆ. ಆತ್ಮರಕ್ಷಣೆಯು ಪ್ರತಿನಿತ್ಯದ ಚಟುವಟಿಕೆಯಲ್ಲಿ ಹಾಸುಹೊಕ್ಕಾಗಿ ಹೊಂದಿಕೊಂಡು ಪ್ರಾಣಿಗಳ ಜೀವನದಲ್ಲಿ ಅತಿ ಮಹತ್ವದ ಪಾತ್ರ ವಹಿಸುವದು. ಪ್ರಾಣಿಗಳಲ್ಲಿಯ ಆತ್ಮರಕ್ಷಣೆಯಲ್ಲಿ ವೈವಿಧ್ಯವಿದೆ, ಸೋಜಿಗವಿದೆ, ಸೌಂದರ್ಯವೂ ಇದೆ.

ಆತ್ಮರಕ್ಷಣೆಗೆ ಬರಿ ದೇಹಶಕ್ತಿಯೊಂದೇ ಸಾಲದು. ರಕ್ಷಣಾ ಸಾಧನಗಳೂ ಅಷ್ಟೇ ಅವಶ್ಯಕ ಇವು ಬೇರೆ ಬೇರೆ ಪ್ರಾಣಿಗಳಲ್ಲಿ ವಿವಿಧ ಬಗೆಯವು ಆಗಿವೆ. ಆದರೆ ಇವು ಎಂಥ ಬಲಿಷ್ಠವಾದರೂ ಯಾವ ಪ್ರಾಣಿಗೂ ಪೂರ್ಣ ರಕ್ಷಣೆ ಕೊಡಲಾರವು. ಹಾಗೆ ಕೊಡಬಾರದೆಂಬುದೇ ಸೃಷ್ಟಿಯ ಉದ್ದೇಶವಾಗಿರಬೇಕು. ಹಿಂಸ್ರ ಪ್ರಾಣಿಗಳಿಗೆ ಸಿಕ್ಕದಂತೆ ಇತರ ಪ್ರಾಣಿಗಳು ಪೂರ್ಣ ರಕ್ಷಣೆ ಪಡೆದರೆ ಹಿಂಸ್ರ ಪಶುಗಳ ಗತಿಯೇನು ? ಅವು ಆಹಾರವಿಲ್ಲದೆ ಸಾಯಬೇಕಾದೀತು. ಆದ್ದರಿಂದ ಸೃಷ್ಟಿಯು ಆತ್ಮರಕ್ಷಣೆಗಾಗಿ ಕೊಡಮಾಡಿದ ಸಾಧನೆಗಳಿಗೂ ಒಂದು ಮಿತಿಯಿದೆ. ಇಂಥ ಮಿತಿಯಲ್ಲಿಯೇ ಅವು ರಕ್ಷಣೆ ಪಡೆಯಬೇಕು. ಸೃಷ್ಟಿಯು ನಿಷ್ಪಕ್ಷಪಾತಿ. ಎಲ್ಲ ಪ್ರಾಣಿಗಳಿಗೂ ಸರಿಸಮಾನ

ವಾದ ಅವಕಾಶ ಕೊಡಮಾಡಿದೆ. ಇಂಥ ಅವಕಾಶಗಳು ಅವುಗಳ ಜೀವನದಲ್ಲಿಯ ನಿರಂತರ ಹೋರಾಟಕ್ಕೆ ಕಾರಣವಾಗಿವೆ.

ಯಾವ ಪ್ರಾಣಿಯೂ ತಾನಾಗಿಯೇ ಶತ್ರುವಿಗೆ ಕಾಣಿಸಿಕೊಂಡು ಸಾವನ್ನು ಅಪ್ಪಲು ಇಚ್ಛಿಸುವದಿಲ್ಲ. ಸಾಧ್ಯವಾದಷ್ಟು ಶತ್ರುವಿನ ಕೈಗೆ ಬೀಳದಂತೆ ಸಾಕಷ್ಟು ಮುಂಜಾಗ್ರತೆ ವಹಿಸುತ್ತದೆ. ಮುಂಜಾಗ್ರತೆಯು ಫಲಿಸದೆ ಶತ್ರುವು ಎದುರಾಗಿಯೆ ಬಿಟ್ಟರೆ, ಆತ್ಮರಕ್ಷಣೆಗಾಗಿ ಹೋರಾಡಲು ಸಿದ್ಧವಾಗುವದು. ತನಗಿರುವ ಸಾಧನೆ ಗಳಿಂದ ಶತ್ರುವನ್ನು ಕೊಲ್ಲಲು ಇಲ್ಲವೆ ಹೊಡೆದೋಡಿಸಲು ಹೆಣಗಾಡುವದು. ಈ ಹೆಣಗಾಟದಲ್ಲಿ ಶತ್ರುವು ಜಯ ಹೊಂದುವಂತೆ ಕಂಡರೆ ಅಲ್ಲಿಂದ ಪಲಾಯನ ಮಾಡು ವದೇ ಕೊನೆಯ ರಕ್ಷಣಾ ಸಾಧನ.

ಶತ್ರುವಿನ ದೃಷ್ಟಿಯಿಂದ ಅದೃಶ್ಯವಾಗಿರುವಂತೆ ವಹಿಸುವ ಮುಂಜಾಗ್ರತೆಗಳಲ್ಲಿ ದೇಹದ ವರ್ಣ, ಆಕಾರ, ರಚನೆ ಬಹಳ ಮಹತ್ವವುಳ್ಳವುಗಳಾಗಿವೆ. ಅರಣ್ಯದಲ್ಲಿಯ ಗಿಡಮರಗಳ, ಬಿದಿರು ಮೆಳೆಗಳ ಕೆಳಗೆ ಹರಡಿರುವ, ನೆರಳು-ಬೆಳಕುಗಳಲ್ಲಿ ವಾಸಿಸು ವಂಥ ಹುಲಿ, ಚಿರತೆಗಳಂಥ ಪ್ರಾಣಿಗಳು ಮನುಷ್ಯನ ಕಣ್ಣಿಗೆ ಬೀಳುವದು ಕಷ್ಟ. ಮರುಭೂಮಿಯಲ್ಲಿ ವಾಸಿಸುವ ಪ್ರಾಣಿಗಳ ದೇಹವು ಉಸುಬಿನ ವರ್ಣದ್ದು. ಮರದ ಮೇಲೆ ಮತ್ತು ಹುಲ್ಲಿನಲ್ಲಿ ವಾಸಿಸುವ ಹಾವು ಬಹುಶಃ ಹಸಿರು. ಎರೆಮಣ್ಣಿನಲ್ಲಿ ಓಡಾಡುವ ಬಟ್ಟೆ-ಬೆನಕ, ಹಾವು ಕಪ್ಪು. ಮರದ ಮೇಲೆ ಇರುವ ಉಡವು ಮರದ ತೊಗಟೆ ವರ್ಣದ್ದು. ಕೆಲವು ಕಂಬಳಿ ಹುಳ, ಕೀಡೆಗಳು ಎಳೆ ಟೊಂಗೆಗಳ ಮೇಲೆ ಹರಿ ದಾಡುವಾಗ ಹಸಿರಾಗುವವು. ಅವೆ ದೊಡ್ಡವಾದ ಮೇಲೆ ಬಲಿತ ಟೊಂಗೆಗಳ ಮೇಲೆ ಕಂದು ವರ್ಣ ಹೊಂದುವವು. ಚಿಟ್ಟೆ, ಪಾತರಗಿತ್ತಿ ಗಿಡಗಳ ಮೇಲೆ ಕುಳಿತಾಗ ಅವುಗಳನ್ನು ಎಲೆಗಳಿಂದ ಗುರುತಿಸುವದು ಕಷ್ಟ. ಎಲೆಗಳ ಜೊತೆಗೆ ಅವು ಅಷ್ಟೊಂದು ಹೊಂದಿಕೊಳ್ಳುತ್ತವೆ. ಇನ್ನು ಕೆಲವು ಪ್ರಾಣಿಗಳು ತಮ್ಮ ಸುತ್ತಲಿನ ಪರಿಸ್ಥಿತಿ ಬದ ಲಾಯಿಸಿದಂತೆಲ್ಲ, ತಮ್ಮ ದೇಹದ ವರ್ಣವನ್ನು ಬದಲಿಸುವ ಶಕ್ತಿಯನ್ನು ಪಡೆದಿವೆ. ಉತ್ತರ ಧ್ರುವವಾಸಿಯಾದ ಮೋಲ ಎಂಬ ಪ್ರಾಣಿಯು ಒಂದು ವರುಷದಲ್ಲಿ ಮೂರು ಸಲ ತನ್ನ ವರ್ಣ ಬದಲಿಸುವದು. ಚಳಿಗಾಲದಲ್ಲಿ ಹಿಮ ಬೀಳುವಾಗ ಹಿಮದಂತೆ ಬಿಳಿಯಾಗಿ, ವಸಂತ ಋತುವಿನಲ್ಲಿ ಸಸ್ಯಗಳು ಚಿಗುರೊಡೆದಾಗ ಚಿಗುರಿನಂತೆ ಹಸು ರಾಗಿ, ಬೇಸಗೆಯಲ್ಲಿ ಹೂ, ಹಣ್ಣುಗಳು ಬಿಟ್ಟು ಪ್ರದೇಶವೆಲ್ಲ ಕಂದು ವರ್ಣದ್ದಾದಾಗ ತಾನು ಕಂದಿಯಾಗಿ ಕಾಣುವದು. ಅದರೂ ವರ್ಣವನ್ನು ಬದಲಿಸುವ ಅಪಾರ ಶಕ್ತಿ ಯನ್ನು ಪಡೆದ ಹಲ್ಲಿಯ ಜಾತಿಯ ಗೋಸಂಬಿಯನ್ನು ಯಾವ ಪ್ರಾಣಿಯೂ ಸ್ಪರ್ಧಿಸ ಲಾರದು. ಗೋಸುಂಬಿ ಆಫ್ರಿಕಾ, ಅರಬಸ್ತಾನ, ಸಿಲೋನ, ದಕ್ಷಿಣ ಭಾರತದಲ್ಲಿ ವಾಸವಾಗಿವೆ. ಅದು ರಾತ್ರಿಯಲ್ಲಿ ಮಸುಕಾದ ಹಳದಿ-ನೇರಿಳೆ ಮಿಶ್ರವರ್ಣದ್ದಾಗಿ, ಹಳದಿ ಕಲೆಗಳಿಂದ ಕೂಡಿರುವದು. ಸೂರ್ಯೋದಯ, ಸೂರ್ಯಾಸ್ತ ಸಮಯಗಳಲ್ಲಿ

ಬೂದು-ಹಸಿರು ವರ್ಣ ತೋರುವದು. ದಿನದ ಹೆಚ್ಚು ಪ್ರಕಾಶದಲ್ಲಿ ವಿವಿಧ ಹಸಿರು ವರ್ಣದ್ದಾಗುವದು. ಕೋಪ ಬಂದಾಗ ಕಿತ್ತಳೆ, ಮರೂನ ತಲೆಗಳನ್ನು ಪ್ರದರ್ಶಿಸುವದು. ಗೋಸುಂಬಿ ತನ್ನ ವರ್ಣವನ್ನು ಎಷ್ಟು ಬದಲಿಸಿದರೇನು? ಕ್ಷಣಕ್ಷಣಕ್ಕೂ ತನ್ನ ವರ್ಣ ಬದಲಿಸುವ ಮನುಷ್ಯನನ್ನು ಅದು ಸ್ಪರ್ಧಿಸಬಲ್ಲುದೆ?

ಈ ಪ್ರಾಣಿಗಳೆಲ್ಲ ವರ್ಣದಿಂದ ಆತ್ಮರಕ್ಷಣೆ ಪಡೆದರೆ ಇನ್ನು ಕೆಲವು ಪ್ರಾಣಿಗಳು ತಮ್ಮ ಸುತ್ತಲಿನ ವಸ್ತು ಇಲ್ಲವೆ ಪ್ರದೇಶವನ್ನು ಹೋಲುವಂತೆ ತಮ್ಮ ದೇಹದ ಆಕಾರ, ರಚನೆಯನ್ನು ಬದಲಿಸುತ್ತವೆ. ಕಟ್ಟಿಗೆ, ಕಡ್ಡಿಗಳ ಮಧ್ಯೆ ವಾಸಿಸುವ ಕಡ್ಡಿಯಂಥ ಕೀಟಕಗಳು ಅವಕ್ಕೆ ಎಷ್ಟು ಸರಿಯಾಗಿ ಹೊಂದಿಕೊಳ್ಳುವವೆಂಬುದನ್ನು ಪ್ರತ್ಯಕ್ಷ ನೋಡಿಯೇ ಆನಂದಿಸಬೇಕು. ಕೆಲವು ಏಡಿಗಳು ತಮ್ಮ ದೇಹಕ್ಕೆ ಜೊಂಡ, ಪಾಚಿಗಳನ್ನು ಅಂಟಿಸಿಕೊಂಡು, ಅವುಗಳ ಮಧ್ಯೆ ಇದ್ದುಕೊಂಡು ಅವುಗಳಂತೆಯೇ ಕಾಣುವವು. ಕಡಲು ಕುದುರೆ ಎಂಬ ಮೀನು ಏಡಿಯಂತೆ ಜೊಂಡನ್ನು ತನ್ನ ಮೈಗೆ ಅಂಟಿಸಿಕೊಳ್ಳದೆ, ಅದು ತನ್ನ ದೇಹದ ಕೆಲವು ಭಾಗಗಳನ್ನೇ ಜೊಂಡಿನಂತೆ ಬೆಳೆಸುವದು.

ದೇಹದ ವರ್ಣ, ಆಕಾರ, ರಚನೆ ಪ್ರಾಣಿಗಳು ಅದೃಶ್ಯವಾಗಿದ್ದುಕೊಂಡು ಶತ್ರುಗಳಿಂದ ಸಂರಕ್ಷಣೆ ಪಡೆಯಲು ಸಹಾಯವಾದರೆ, ಎಚ್ಚರಿಕೆ ಕೊಡುವ ವರ್ಣವಿನ್ಯಾಸ, ವಿಷಯುಕ್ತ ಕೊಂಡಿ, ಮುಳ್ಳು ಮತ್ತು ಹಲ್ಲು, ಹರಿತವಾದ ಮತ್ತು ಬಲವಾದ ನಖ ಮತ್ತು ಹಲ್ಲು ಶಕ್ತಿಯುತವಾದ ಕೋಡು, ದುರ್ಗಂಧ ವಾಸನೆಯನ್ನು ಹರಡುವ ಗ್ರಂಥಿಯಂಥ ಹಲವಾರು ಸಾಧನೆಗಳು ಇನ್ನುಳಿದ ಪ್ರಾಣಿಗಳಿಗೆ ರಕ್ಷಣೆ ಕೊಡುವವು. ಕಪ್ಪು-ಹಳದಿ ಕಲೆಗಳುಳ್ಳ ಕೆಂಪು ವರ್ಣದ ಹವಳದ ಹಾವು, ಕಣ್ಣು ಕೋರೈಸುವ ವರ್ಣವುಳ್ಳ ಪತಂಗ, ಕಪ್ಪು-ಅರಿಶಿಣ ವರ್ಣ ಹೊಂದಿದ ಕಪ್ಪೆಯ ಜಾತಿಯ ಸ್ಯಾಲಮಾಂಡರ್ ಎಂಬ ಪ್ರಾಣಿ, ಅಚ್ಚ ಕರಿವರ್ಣದ ಮೇಲೆ ಬಿಳಿ ಪಟ್ಟೆಯುಳ್ಳ ಅಮೇರಿಕೆಯ ಸ್ಕಂಕ ಪ್ರಾಣಿ ಮೊದಲಾದವುಗಳು ಎಚ್ಚರಿಕೆ ಕೊಡುವ ವರ್ಣವಿನ್ಯಾಸದ ಉದಾಹರಣೆ. ಇಂತಹ ವರ್ಣಗಳು ಶತ್ರುಗಳನ್ನು ಬೆರಗುಗೊಳಿಸಿ ಎಚ್ಚರಿಕೆ ಕೊಡುತ್ತವೆ. ಸ್ಕಂಕ ವರ್ಣವಿನ್ಯಾಸವನ್ನಲ್ಲದೆ ದುರ್ಗಂಧ ವಾಸನೆ ಬೀರುವ ಗ್ರಂಥಿಗಳನ್ನು ಹೊಂದಿದೆ. ಇವು ಅದರ ಹಿಂಭಾಗದಲ್ಲಿದ್ದು, ಶತ್ರುವು ಹತ್ತಿರ ಸುಳಿದರೆ ಸಾಕು, ತಮ್ಮ ಕಾರ್ಯ ಪ್ರಾರಂಭಿಸಿ ಬಿಡುವವು. ಎಂತಹ ಶತ್ರುವಿಗೂ ಇಂತಹ ವಾಸನೆಯ ಪರಿಚಯ ಒಂದು ಸಲವಾದರೂ ಸಾಕು, ಅದು ಈ ಪ್ರಾಣಿಯ ಗೋಜಿಗೆ ಇನ್ನೆಂದೂ ಹೋಗದು. ಅಲ್ಲದೆ ಈ ವಾಸನೆಯ ದ್ರವವು ಕಣ್ಣಲ್ಲಿ ಬಿದ್ದರೆ ಕಣ್ಣು ಕುರುಡಾಗುವದು. ದೇಹದ ಮೇಲೆ ಬಿದ್ದರೆ ಕೊಳ್ಳಿಯಿಟ್ಟಂತಾಗುವದು. ವಿಷಯುಕ್ತ ಕೊಂಡಿಯುಳ್ಳ ಚೇಳು, ಕಣಜಿಗ-ಜೇನು ನೊಣಗಳು ಎಲ್ಲರಿಗೂ ಗೊತ್ತು. ಚೇಳು ಶತ್ರುವನ್ನು ಕಚ್ಚಿ ಕಾಲಾಗಿ ಒದ್ದಾಡಿಸುವದು. ಆದರೆ ಜೇನುನೊಣ ಪಾರಾದರೂ ಬದುಕುವ ಆಸೆಯಿಲ್ಲ. ಕಚ್ಚಿದ

ಕೂಡಲೆ ಅದು ಹಾರಲು ಯತ್ನಿಸುವಾಗ ಕೊಂಡಿಯ ಜೊತೆಗೆ ಅದರ ಕರುಳೂ ಹೊರಗೆ ಎಳೆಯಲ್ಪಟ್ಟು ಸತ್ತು ಹೋಗುತ್ತದೆ. ಸ್ಟಿಂಗರೆ ಎಂಬ ಚಪ್ಪಟೆ ಮೀನು ತನ್ನ ವಿಷಯುಕ್ತ ಮುಳ್ಳಿನಿಂದ ರಕ್ಷಣೆ ಪಡೆಯುತ್ತದೆ. ಇದು ಉಸುಬಿನಲ್ಲಿ ಹುದುಗಿ ಚಾಬೂಕದಂತಿರುವ ತನ್ನ ಬಾಲದ ತುದಿಗಿರುವ ಮುಳ್ಳನ್ನು ಮಾತ್ರ ಉಸುಬಿನ ಮೇಲೆ ಎತ್ತಿರುತ್ತದೆ. ಶತ್ರುವು ಅರಿತೊ, ಅರಿಯದೆಯೋ ಮುಳ್ಳನ್ನು ಮುಟ್ಟಿದರೆ ಸಾಕು, ಚೇಳಿನಂತೆ ಬಲವಾಗಿ ಕಚ್ಚುತ್ತದೆ. ಅಮೇಝೊನ ನದಿಯಲ್ಲಿ ವಾಸಿಸುವ ಇಂತಹ ಮೀನುಗಳು ಕಚ್ಚಿದರೆ ಮನುಷ್ಯ ಬದುಕುವದೇ ಕಷ್ಟ. ಕಚ್ಚಲ್ಪಟ್ಟ ಕೆಲವರು ಸತ್ತ ಉದಾಹರಣೆ ಉಂಟು. ಚೇಳು-ಮೀನು, ವ್ಹೀವರ-ಮೀನುಗಳಿಗೂ ಇಂಥ ಮುಳ್ಳು ಇವೆ. ಇವು ಬಹಳ ಅಪಾಯಕರ. ಎಷ್ಟೋ ಮೀನುಗಾರರು ಇವಕ್ಕೆ ಆಹುತಿಯಾಗಿದ್ದಾರೆ. ಕ್ಯಾಟಫಿಶ್ ಎಂಬ ಇನ್ನೊಂದು ಮೀನು ಇಂತಹ ಮುಳ್ಳಿನಿಂದ ಕಚ್ಚಿದರೂ ಅಪಾಯವಿಲ್ಲ.

ಕೆಲವು ಜಾತಿಯ ಹಾವುಗಳಲ್ಲಿ ವಿಷಯುಕ್ತ ಹಲ್ಲುಗಳಿರುವದು ಸಾಮಾನ್ಯವಾಗಿ ತಿಳಿದ ವಿಷಯ. ಇಂತಹ ಹಲ್ಲುಗಳು ಯಾವಾಗಲೂ ಹಾವಿನ ಮೇಲಿನ ದವಡೆಯಲ್ಲಿದ್ದು ಎರಡು ಇಲ್ಲವೆ ನಾಲ್ಕು ಇರಬಹುದು. ಇವು ಹೆಚ್ಚು ಉದ್ದವಾಗಿ ಒಳಗಡೆ ಬಾಗಿದ್ದು ವಿಷ ಹರಿದು ಬರಲು ಒಳಗೆ ಪೊಳ್ಳಾಗಿವೆ. ಇವು ಹಿಂದುಗಡೆ ಇರುವ ವಿಷದ ಚೀಲಗಳಿಗೆ ಜೋಡಿಸಲ್ಪಟ್ಟಿರುತ್ತವೆ. ಹಾವುಗಳು ಕಚ್ಚುವಾಗ ಈ ಹಲ್ಲುಗಳ ಒತ್ತುವಿಕೆಯಿಂದ ವಿಷದ ಚೀಲಗಳ ಮೇಲೆ ಒತ್ತಡ ಬಿದ್ದು, ವಿಷವು ಹಲ್ಲುಗಳ ಪೊಳ್ಳಿನಲ್ಲಿ ಹಾಯ್ದು, ಗಾಯದ ಮಾರ್ಗವಾಗಿ ನಮ್ಮ ದೇಹವನ್ನು ಪ್ರವೇಶಿಸುವದು. ಕಚ್ಚುವಾಗ ಹಾವು ತನ್ನ ಬಾಯಿ ತೆರೆದು, ತಲೆ ಹಿಂದಕ್ಕೆ ನೀಡಿ, ರಭಸದಿಂದ ಎರಗಿ ಕಚ್ಚಿ, ತಕ್ಷಣವೆ ವಿಷ ಬಿಟ್ಟು, ತನ್ನ ಹಲ್ಲುಗಳನ್ನು ಕಿತ್ತುಕೊಂಡು ಓಡುವದು. ಕಣ್ಣುಮುಚ್ಚಿ ಕಣ್ಣು ತೆರೆಯುವ ಸರಳವಾದ ಕಾರ್ಯ ಪೂರೈಸಲು ನಮಗೆ ಎರಡು ಸೆಕಂಡುಗಳಾದರೂ ಬೇಕಲ್ಲವೆ? ಆದರೆ ಹಾವು ಇಷ್ಟೆಲ್ಲ ಕೆಲಸವನ್ನು ಅರ್ಧ ಸೆಕಂಡಿನಲ್ಲಿಯೇ ಮುಗಿಸಬಲ್ಲುದು ಎಂದು ಹೇಳಿದರೆ ನಿಮಗೆ ನಂಬಿಕೆಯಾದೀತೆ?

ಹುಲಿ, ಸಿಂಹ, ಚಿರತೆಯಂತಹ ಹಿಂಸ್ರ ಪ್ರಾಣಿಗಳಿಗೆ ತಮ್ಮ ಹಲ್ಲು ಮತ್ತು ನಖಗಳೇ ತಮ್ಮ ಆತ್ಮರಕ್ಷಣೆಯ ಮುಖ್ಯ ಸಾಧನಗಳು. ಈ ಹಲ್ಲುಗಳ ಮಧ್ಯೆ ಸಿಕ್ಕ ಶತ್ರುವಿನ ಕುತ್ತಿಗೆ ನುಚ್ಚು ನೂರಾಗುವದು. ನಖಗಳ ಒಂದೇ ಒಂದು ಹೊಡೆತದಿಂದ ಹೊಟ್ಟೆ ಹರಿದು, ಕರುಳು ಹೊರಬೀಳುವದು. ಈ ಸಾಧನೆಗಳ ಜತೆಗೆ ಅವಕ್ಕೆ ತುಂಬ ಶಕ್ತಿಯಿರುವದೂ ಸಹಾಯವಾಗಿದೆ. ಸಾರಂಗ, ಕಾಡುಕೋಣ, ಖಡ್ಗಮೃಗ ಮೊದಲಾದವುಗಳಿಗೆ ಬಲಿಷ್ಠವಾದ ಕೋಡುಗಳಿವೆ. ಸಾರಂಗದ ಕೋಡಿನ ಹೊಡೆತಕ್ಕೆ ಹುಲಿ ಕೂಡ ನರಳುವದು. ಕಾಡುಕೋಣ ಕ್ರೂರಪ್ರಾಣಿಯನ್ನು ಎದುರು ಹಾಕಿಕೊಂಡು ಕಾದಾಡಬಲ್ಲುದು. ಖಡ್ಗಮೃಗದ ಕೋಡುಗಳು ಕೂದಲಿ

ನೀವ ಮಾಡಲ್ಪಟ್ಟಿರುವವೆಂಬುದು ಆಶ್ಚರ್ಯಕಾರಕ ವಿಷಯ. ಆದರೂ ಅವು ಎಂತಹ ಬಲಿಷ್ಠವಾದ ಕೋಡಿನಂತೆಯೆ ಗಟ್ಟಿಯಾಗಿವೆ. ಇಂತಹ ಕೋಡು ಒಂದು ಇಲ್ಲವೆ ಎರಡು ಇದ್ದು ಆ ಪ್ರಾಣಿಯ ಮೂಗಿನ ಮೇಲೆ ಅವು ಇವೆ. ಇವು ಮುಂದೆ ಚೂಪಾಗಿದ್ದು ನಾಲ್ಕೈದು ಅಡಿಯವರೆಗೆ ಬೆಳೆಯಬಹುದು. ಅಲ್ಲದೆ ಮದ್ದು ಗುಂಡುಗಳೂ ಗಾಯ ಗೊಳಿಸದಂತಹ ಕಠಿಣವಾದ ಚರ್ಮದ ಹೊದಿಕೆಯೂ ಅವಕ್ಕೆ ಇದೆ. ಇವು ಸಾಲವೋ ಎಂಬಂತೆ ಆನೆಗಿರುವ ಪ್ರಚಂಡ ಶಕ್ತಿ ! ಒಟ್ಟಿನಲ್ಲಿ ಖಡ್ಗಮೃಗವೆಂದರೆ ಸೃಷ್ಟಿಯ ಚಲಿಸುವ ಒಂದು ಸಜೀವ ಕೋಟೆಯಿದ್ದಂತೆ. ಹನ್ನೆರಡು ಅಡಿ ಉದ್ದ ಬೆಳೆಯಬಲ್ಲ ಇದು ರೌದ್ರಾವತಾರ ತಾಳಿದರೆ ಆನೆಗಿಂತಲೂ ಉಗ್ರ. ಆದರೆ ಆನೆಯ ಜಾಣತನ ಇದಕ್ಕೆ ಇಲ್ಲ. ಇಂಥ ಬಲಿಷ್ಠವಾದ ಪ್ರಾಣಿ ಕತ್ತೆಕಿರುಬ, ಮೊಸಳೆಗಳಂಥ ಚಿಕ್ಕ ಪ್ರಾಣಿಗಳಿಗೆ ಆಹುತಿಯಾಗುವದು. ಕೀಟಕ, ಪಕ್ಷಿಗಳು ಸಹಾಯವಿಲ್ಲದೆ ಹೋಗಿದ್ದರೆ ಈ ಮೂಢ ಪಶು ಬಹುಶಃ ಎಂದೋ ನಿರ್ವಂಶವಾಗುತ್ತಿತ್ತು. ಕೀಟಕಗಳು ಅದರ ದೇಹದ ಮೇಲೆ ಅಲ್ಲಲ್ಲಿ ಗೂಡುಕಟ್ಟಿ ವಾಸಿಸುವವು. ಈ ಕೀಟಕಗಳನ್ನು ಆರಿಸಿ ತಿನ್ನಲು ಪಕ್ಷಿಗಳು ಅದರ ದೇಹದ ಮೇಲೆ ಬಂದು ಕೂಡುವವು. ಬೇಟೆಗಾರರ ಸುಳಿ ವಾದರೆ ಈ ಪಕ್ಷಿಗಳು ಒದರಿ ಖಡ್ಗ ಮೃಗವನ್ನು ಎಚ್ಚರಿಸುವವು.

ಕೆಲವು ಪಶುಗಳು ಕೋಡಿನಿಂದ ರಕ್ಷಣೆ ಪಡೆದರೆ, ಕೆಲವು ಮೀನುಗಳು ಕೋಡು ಗಳಿಗಿಂತ ಬಲವಾದ ಆಯುಧ ಪಡೆದಿವೆ. ಕರಗಸ ಮೀನಿಗೆ ಮುಖದ ಮುಂದೆ ಎರಡೂ ಬದಿಗೆ ಹಲ್ಲು ಇರುವ ಕರಗಸದಂತಹ ಆಯುಧವಿದೆ. ಈ ಮೀನು ೨೮ ಅಡಿ ಉದ್ದ ಬೆಳೆದು ೪,೨೦೦ ಪೌಂಡು ತೂಗಬಲ್ಲುದು ! ಇದು ಮೀನುಗಳ ಗುಂಪಿನ ಮಧ್ಯೆ ಹೊಕ್ಕು, ತನ್ನ ಕರಗಸವನ್ನು ರಭಸದಿಂದ ಅಲ್ಲಾಡಿಸಿ, ಅವನ್ನು ಆಹುತಿ ತೆಗೆದು ಕೊಳ್ಳುವದು. ತನಗೆ ಈ ಚೆಲ್ಲಾಟ ಸಾಕೆನಿಸಿದಾಗ ಸತ್ತ ಮೀನುಗಳನ್ನು ತಿನ್ನುತ್ತ ಹೋಗುವದು. ಕರಗಸ ಮೀನು ತನಗಿಂತ ದೊಡ್ಡದಾದ ಮೀನು ಮತ್ತು ತಿಮಿಂಗಿಲ ಗಳನ್ನು ಕೂಡ ಕೊರೆದು, ಕೊಂದು ಭಕ್ಷಿಸಬಲ್ಲುದು. ನಮ್ಮ ದೇಶದಲ್ಲಿ ದೊರೆಯುವ ಈ ಮೀನು ಮನುಷ್ಯರನ್ನೂ ಕೂಡ ಎರಡು ತುಂಡಾಗಿ ಕತ್ತರಿಸಿದ ಕತೆಗಳಿವೆ. ಕರಗಸ ಮೀನು ತತ್ತಿಗಳನ್ನಿಡದೆ ಮರಿಗಳನ್ನೇ ಹೆರುವದು. ಆಗ ತಾನೆ ಹುಟ್ಟುವ ಮರಿಗೂ ಕರಗಸ ಇರುತ್ತದೆ. ಆದರೆ ಹೆರುವಾಗ ತಾಯಿಗೆ ಅಪಾಯವಾಗದೆ ಇರಲೆಂದು ನಿಸರ್ಗವು ಈ ಕರಗಸದ ಸುತ್ತಲೂ ಹೊದಿಕೆಯನ್ನು ಇರಿಸಿದೆ. ಖಡ್ಗದಂತಹ ಆಯುಧವನ್ನು ಖಡ್ಗ ಮೀನು ಎಂಬ ಜಾತಿಯ ಮೀನು ಪಡೆದಿದೆ. ಕರಗಸದಂತೆ ಇದೂ ಕೂಡ ಮೇಲಿನ ದವಡೆಯಿಂದ ಮಾರ್ಪಾಡು ಹೊಂದಿ ೩-೪ ಅಡಿ ಉದ್ದ ಬೆಳೆದಿದ್ದು, ಎರಡೂ ಬದಿಗೆ ಖಡ್ಗದಂತೆ ಹರಿತವಾಗಿದೆ. ಈ ಮೀನು ಶಾರ್ಕ ಮೀನು, ತಿಮಿಂಗಿಲು, ಮನುಷ್ಯರನ್ನು ಬಲಿ ತೆಗೆದುಕೊಂಡ ಘಟನೆಗಳು ಇವೆ. ದೋಣಿಗಳನ್ನು ಮುಳುಗಿಸಿದ ಕತೆಗಳಿವೆ. ಹಡಗುಗಳ ಮೇಲೆಯೂ ಭೀಕರ ದಾಳಿ ಮಾಡಿದ ಉದಾ

ಹರಣೆಗಳಿವೆ. ಇಂಗ್ಲಂಡದ ವಸ್ತು ಸಂಗ್ರಹಾಲಯದಲ್ಲಿ ಹಡಗದ ತುಂಡೊಂದು ಪ್ರದರ್ಶನಕ್ಕೆ ಇದೆ. ಈ ತುಂಡಿನಲ್ಲಿ ಖಡ್ಗವು ಒಂದು ಅಡಿಗಿಂತಲೂ ಆಳವಾಗಿ ನಟ್ಟಿರುವದನ್ನು ಕಾಣಬಹುದು. ಬ್ರಿಟಿಶ ಮ್ಯೂಜಿಯಂನಲ್ಲಿ ಇರುವ ಇನ್ನೊಂದು ತುಂಡಿನಲ್ಲಿ ಎರಡು ಅಡಿಗಿಂತಲೂ ಅದು ಹೆಚ್ಚು ನಟ್ಟಿದೆ. ಇಷ್ಟೊಂದು ಆಳವಾಗಿ ನೆಡಬೇಕಾದರೆ ಮೀನು ಎಷ್ಟೊಂದು ವೇಗವಾಗಿ ಹಡಗಕ್ಕೆ ಅಪ್ಪಳಿಸಿರಬಹುದು? ಹೀಗೆ ನೆಟ್ಟ ಖಡ್ಗವನ್ನು ಕಿತ್ತುಕೊಳ್ಳಲಾಗದೆ ಅದನ್ನು ಹಡಗದಲ್ಲಿಯೇ ಮುರಿದುಕೊಂಡು ಅದು ಎಷ್ಟೋ ಸಲ ಪಲಾಯನ ಮಾಡಬೇಕಾಗುವದು.

ಇನ್ನು ಕೆಲ ಪ್ರಾಣಿಗಳು ರಕ್ಷಣೆಗಾಗಿ ತಮ್ಮ ದೇಹದ ಸುತ್ತಲೂ ರಕ್ಷಣಾ ಕವಚ ಪಡೆದಿರುವವು. ಆಮೆಯ ಕವಚವು ಎಲುಬಿನಿಂದಾದ ಪೆಟ್ಟಿಗೆ. ಅಪಾಯ ಸೂಚನೆ ಯಾದರೆ ತಲೆ, ಕಾಲುಗಳನ್ನು ಪೆಟ್ಟಿಗೆಯಲ್ಲಿಳೆದುಕೊಂಡು ಕೋಟೆಯಲ್ಲಿದ್ದಂತೆ ಸುರಕ್ಷಿತ ವಾಗಿರುವದು. ಅಪಾಯ ದೂರವಾದಾಗ ಮಾತ್ರ ಹೊರಗೆ ಬರುವದು. ಆದರೂ ಇವಕ್ಕೆ ಶತ್ರುಪೀಡೆ ತಪ್ಪಿಲ್ಲ. 'ನೀನು ಚಾಪೆ ಕೆಳಗೆ ನುಸಿದರೆ ನಾನು ರಂಗೋಲಿಯ ಕೆಳಗೆ ನುಸಿಯಬಲ್ಲೆ' ಎಂಬಂತೆ ರಣಹದ್ದು ಆಮೆಯನ್ನು ತಮ್ಮ ಬಲವಾದ ಕಾಲಲ್ಲಿ ಹಿಡಿದು, ಗಗನಕ್ಕೆ ಹಾರಿ, ಬಂಡೆಗಲ್ಲು ಇರುವಲ್ಲಿ ಅದನ್ನು ಕೆಳಗೆ ಚೆಲ್ಲುವವು. ಆಗ ಎಲುಬಿನ ಪೆಟ್ಟಿಗೆ ಒಡೆದು, ಆಮೆಯು ರಣಹದ್ದಿಗೆ ಆಹುತಿಯಾಗುವದು. ಚಾಮರಾಜ ನಗರದ ಬಳಿ ದೊರೆಯುವ ಚಿಪ್ಪು ಕಿರುಬ ಪ್ರಾಣಿಗೆ ಹಿಂಭಾಗ ಮತ್ತು ಎರಡೂ ಬದಿಗೆ ತಲೆಯಿಂದ ಬಾಲದವರೆಗೆ ಎಲುಬಿನಂಥಹ ಗಡುಚಾದ ಪರೆಗಳ ಕವಚವಿದೆ. ಪರೆಗಳು ಚಾವಣಿಯ ಹಂಚಿನಂತೆ ಜೋಡಿಸಲ್ಪಟ್ಟವೆ. ಅಪಾಯ ಒದಗಿದಾಗ ಈ ಪ್ರಾಣಿಯು ಚಂಡಿನಂತೆ ದುಂಡಾಗಿ ಸುತ್ತಿಕೊಳ್ಳುವದು. ಈ ಸುತ್ತನ್ನು ಬಿಡಿಸುವದು ಅಸಾಧ್ಯವಾದ ಕೆಲಸ. ಮೈಸೂರು ಮೃಗಾಲಯದಲ್ಲಿ ಕಾಣಸಿಗುವ ಅರ್ಮಾಡಿಲ್ಲೊ ಪ್ರಾಣಿಗೆ ಎಲುಬಿನ ತಟ್ಟೆಯಿಂದಾದ ಕವಚವಿದೆ. ಮುಳ್ಳುಹಂದಿ, ಶಲ್ಯ ಪ್ರಾಣಿಗಳಿಗೆ ಮುಳ್ಳಿನಿಂದಾದ ರಕ್ಷಾ ಕವಚವಿದೆ. ಮುಳ್ಳು ಹಂದಿಯು ತನ್ನ ಮುಳ್ಳುಗಳನ್ನು ಬಿಲ್ಲಿನಿಂದೆಸೆದ ಬಾಣಗಳಂತೆ ಶತ್ರುವಿನ ಎಡೆಗೆ ಎಸೆಯುವದಂತೆ. ಮುಳ್ಳುಗಳು ಒಮ್ಮೊಮ್ಮೆ ದೇಹದಿಂದ ಕಳಚಿ ಸ್ವಲ್ಪದೂರ ಹೋಗಬಲ್ಲವು. ಆದರೆ ಅವನ್ನು ಎಸೆ ಯುವ ಶಕ್ತಿ ಮಾತ್ರ ಅದಕ್ಕೆ ಇಲ್ಲ. ಕೆಲವು ಕೀಟಕ, ಏಡಿ ಮತ್ತು ಚೇಳುಗಳ ಜಾತಿಗೆ ಸೇರಿದ ಪ್ರಾಣಿಗಳಿಗೂ ಕವಚಗಳಿವೆ. ನಮಗೆ ಹಲವು ವಿಧದಲ್ಲಿ ಪ್ರಯೋ ಜನವುಳ್ಳ ಸಿಂಪಿ, ಶಂಖ, ಕವಡೆಗಳು ಬೇರೇನೂ ಆಗಿರದೆ ಮೃದ್ವಂಗಿ ಎಂಬ ಪ್ರಾಣಿಗಳ ಕಲ್ಲಿನಂತೆ ಬಿರುಸಾದ ಕವಚಗಳಾಗಿವೆ.

ಇದುವರೆಗೆ ವಿವರಿಸಿದ ಸಾಧನೆಗಳನ್ನು ಹೊಂದಿರದೆ, ತಮ್ಮದೆ ಆದ ವಿಶಿಷ್ಟ ತಂತ್ರ, ಯುಕ್ತಿಗಳಿಂದ ಆತ್ಮರಕ್ಷಣೆ ಪಡೆಯುವ ಪ್ರಾಣಿಗಳೂ ಇವೆ. ನಾವು ಹಿಡಿಸಿ ದಾಗ ಕೆಲವು ಕೀಟಕಗಳು ಸತ್ತಂತೆ ಬೀಳುವದೂ ಇಂಥ ಒಂದು ಯುಕ್ತಿ. ಅಮೇರಿಕಾ

ಮೇಲಿನ ಅಪೋಜಮ ಪ್ರಾಣಿಯು ಶತ್ರುವಿನ ಕೈಗೆ ಸಿಕ್ಕಾಗ ಈ ಕೀಟಕಗಳಂತೆಯೆ ನಟಿಸುವದು. ಕೆಲವು ಮೀನುಗಳು ಶತ್ರುವು ಎದುರಾದಾಗ ಹವೆ ಇಲ್ಲವೆ ನೀರನ್ನು ತಮ್ಮ ವಿಶೇಷವಾದ ಒಂದು ಚೀಲದಲ್ಲಿ ಎಳೆದುಕೊಂಡು, ತಮ್ಮ ಗಾತ್ರದ ಎಷ್ಟೋ ಪಟ್ಟು ದೊಡ್ಡವಾಗಿ ಉಬ್ಬಬಲ್ಲವು. ಹೀಗೆ ಉಬ್ಬಿಕೊಂಡ ಮೀನುಗಳನ್ನು ಕಂಡ ಶತ್ರುವು ತನಗೆ ನುಂಗಲಾರದ ತುತ್ತೆಂದು ಬಗೆದು, ಮುಂದೆ ಸಾಗುವದು. ಶಿರಪಾದಿ ಎಂಬ ಪ್ರಾಣಿಯು ಆತ್ಮರಕ್ಷಣೆ ಪಡೆಯುವ ಉಪಾಯವು ಸ್ವಾರಸ್ಯವಾಗಿದೆ. ಅದು ಶತ್ರುವನ್ನು ಕಂಡಾಗ, ಕಪ್ಪು ಮಸಿಯಂತಿರುವ ಒಂದು ದ್ರವವನ್ನು ತನ್ನ ಸುತ್ತಲಿನ ಸಮುದ್ರದ ನೀರಿನಲ್ಲಿ ಹೊರಸೂಸುವದು. ಇದರಿಂದ ನೀರು ಕಪ್ಪಾಗಿ, ತಾನು ಶತ್ರುವಿಗೆ ಅಗೋಚರವಾಗಿ ಬೇರೊಂದು ದಾರಿಯಿಂದ ತಪ್ಪಿಸಿಕೊಳ್ಳುವದು. ದಕ್ಷಿಣ ಅಮೇರಿಕಾದ ಹೊಳೆ, ಸರೋವರಗಳಲ್ಲಿ ವಾಸಿಸುವ ಹಾವು ಮೀನು ತಮ್ಮ ದೇಹದಿಂದ ವಿದ್ಯುತ್ತನ್ನು ಹುಟ್ಟಿಸಬಲ್ಲವು. ಅವು ಕುದುರೆಯಂಥ ದೊಡ್ಡ ಪ್ರಾಣಿ ಮತ್ತು ಮನುಷ್ಯರನ್ನೂ ಕೂಡ ಇಂಥ ತಂತ್ರದಿಂದ ಕೊಂದ ಉದಾಹರಣೆ ಇವೆ. ಕ್ಯಾಟಫಿಶ್ ಎಂಬ ವಿದ್ಯುತ್ ಮೀನು ತನ್ನ ವಿದ್ಯುತ್ತನ್ನು ರಕ್ಷಣೆಗಾಗಿ ಅಲ್ಲದೆ ಆಹಾರ ಸಂಪಾದಿಸಲೂ ಉಪಯೋಗಿಸುವದು. ಆಹಾರ ತಿನ್ನುವ ಇನ್ನೊಂದು ಮೀನಿನ ಮೇಲೆ ಎರಗಿ ವಿದ್ಯುತ್ ಬಿಡುವದು. ಆಘಾತಗೊಂಡ ಮೀನು ತನ್ನ ಆಹಾರ ಬಿಟ್ಟು ಪಲಾಯನ ಮಾಡಿದಾಗ ಅದನ್ನು ತಾನು ಎತ್ತಿಕೊಂಡು ತಿನ್ನುವದು. ಇನ್ನು ಕೆಲ ಪ್ರಾಣಿಗಳು ಆತ್ಮರಕ್ಷಣೆಗಾಗಿ ತಮ್ಮ ದೇಹದ ಕೆಲವು ಇಂದ್ರಿಯಗಳನ್ನು ತ್ಯಾಗಮಾಡಲು ಸಿದ್ಧ. ಹಲ್ಲಿಯು ಪೀಡೆಗೊಳಗಾದಾಗ ತನ್ನ ಬಾಲವನ್ನೇ ಕತ್ತರಿಸಿಕೊಂಡರೆ, ಏಡಿಗಳು ತಮ್ಮ ಕಾಲನ್ನೇ ಕಳಚಿ ಬಿಡುವವು. ಮುಂದೆ ಕೆಲವು ದಿನಗಳ ನಂತರ ಇವು ಕಳೆದುಕೊಂಡ ತಮ್ಮ ಇಂದ್ರಿಯಗಳನ್ನು ಮರಳಿ ಪಡೆಯುವದು ಇನ್ನೂ ಹೆಚ್ಚು ಸೋಜಿಗವಾಗಿದೆ. ಕಾರವಾರ ಸಮುದ್ರದ ಹತ್ತಿರ ದೊರೆಯುವ ಸಮುದ್ರದ ಸವತೆ ಎಂಬ ಪ್ರಾಣಿಯು ಆತ್ಮರಕ್ಷಣೆಗಾಗಿ ತನ್ನ ಅನ್ನನಾಳವನ್ನೇ ಹೊರಗೆ ಎಸೆಯುವದು. ಶತ್ರುವು ಈ ಅನ್ನ ನಾಳವನ್ನೇ ತನ್ನ ಆಹಾರವಾಗಿ ಉಪಯೋಗಿಸುತ್ತಿರುವಾಗ, ಸಮುದ್ರದ ಸವತೆ ಪಾರಾಗಿ ಹೋಗುವದು. ಹಲ್ಲಿ ಮತ್ತು ಏಡಿಗಳಂತೆ ಅದು ಕೂಡ ಕಳೆದುಹೋದ ತನ್ನ ಅನ್ನನಾಳವನ್ನು ಮತ್ತೆ ಪಡೆಯುವದು.

——::——

# ಕರ್ನಾಟಕದಲ್ಲಿ ಉಭಯ ಸಂಗೀತ



**ಶ್ರೀ ಆರ್. ಟಿ. ಶೇಷಾದ್ರಿ ಗವಾಯ್,**
ಶ್ರೀ ಅರವಿಂದ ಸಂಗೀತ ವಿದ್ಯಾಲಯ ಪ್ರಿನ್ಸಿಪಾಲ್, ಬೆಂಗಳೂರು.

**ಭಾ**ರತೀಯರಾದ ನಾವು ಯುಗಾಂತರಗಳಿಂದಲೂ ಸಂಗೀತ ಮಹಾಕಲೆಗೆ ಪ್ರಾಶಸ್ತ್ಯವನ್ನು ಕೊಡುತ್ತಾ ಬಂದಿದ್ದೇವೆ. ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನು ಚತುರ್ವೇದಗಳಲ್ಲಿ ಸಾಮವೇದವೇ ನಾನೆಂದು ಹೇಳಿದ್ದಾನೆ. ಅದಕ್ಕೋಸ್ಕರವೇ ಸಾಮವೇದಕ್ಕೆ ಗಂಧರ್ವವೇದವೆಂತಲೂ, ನಾದವೇದವೆಂದೂ ಕರೆಯುತ್ತಾರೆ.

ನಾಹಂ ವಸಾಮಿ ವೈಕುಂಠೇ ಯೋಗಿನಾಂ ಹೃದಯೇ ನ ಚ ।
ಮದ್ಭಕ್ತಾ ಯತ್ರ ಗಾಯಂತಿ ತತ್ರ ತಿಷ್ಠಾಮಿ ನಾರದ ॥

ನಾನು ವೈಕುಂಠದಲ್ಲಿ ವಾಸವಾಗಿರದಿದ್ದರೂ ಯೋಗಿಗಳ ಹೃದಯದಲ್ಲಿರದಿದ್ದರೂ ನನ್ನ ಭಕ್ತನು ಗಾಯನ ಮಾಡುವ ಸ್ಥಳದಲ್ಲಿ ಇದ್ದೇ ಇರುವೆನೆಂದು ಹೇಳಿರುವ ಭಗವದ್ವಾಣಿಯನ್ನು ಮೇಲಿನ ಶ್ಲೋಕದಿಂದ ಗಮನಿಸಿದ್ದಾರೆ. ಪರಮಾತ್ಮನಿಗೆ ಸಂಗೀತದಲ್ಲಿರುವ ಅತುಲವಾದ ಪ್ರೇಮವು ವ್ಯಕ್ತವಾಗುತ್ತದೆ. ಅಲ್ಲದೆ ಪರಮಾತ್ಮನ ಕೃಪೆಗೆ ಪಾತ್ರರಾದ ಹಿಂದಿನ ಭಗವದ್ಭಕ್ತರ ಮಾಲಿಕೆಯಲ್ಲಿ ಸಂಗೀತ ಹಾಡಿ ಅವನ ಕೃಪೆಗೆ ಪಾತ್ರರಾದವರೇ ಹೇರಳವಾಗಿ ಸಿಕ್ಕುತ್ತಾರೆ. ಮೀರಾಬಾಯಿ, ಸೂರ್‌ದಾಸ್ ಕಬೀರ್‌ದಾಸ್, ವಿಜಯ ವಿಠ್ಠಲದಾಸ್, ನಿಜಗುಣ ಶಿವಯೋಗಿ, ಸರ್ಪಭೂಷಣ ಶಿವಯೋಗಿ, ಮುಪ್ಪಿನಷಡಕ್ಷರಿ, ತುಳಸೀದಾಸ್, ಪುರಂದರದಾಸ್, ಕನಕದಾಸ್, ನಾಮದೇವ್, ತುಕಾರಾಮ್, ನಾನಕ್, ತ್ಯಾಗರಾಜ, ಪುರಂದರದಾಸ್, ಮೊದಲಾದ ಸಾವಿರಾರು ಜನ ಭಗವದ್ಭಕ್ತರೆಲ್ಲಾ ಸಂಗೀತಗಾರರಾಗಿದ್ದರಲ್ಲವೇ ಪ್ರಚಲಿತ ಸಂಗೀತದಲ್ಲಿ ಹೆಚ್ಚಾಗಿ ಆ ಮಹನೀಯರ ಸಾಹಿತ್ಯವೇ ತುಂಬಿರುವ ವಿಚಾರ ಸರ್ವವೇದ್ಯವಾಗಿದೆ. ಮಹಾಭಕ್ತ ಕಬೀರದಾಸನು ಸಂಗೀತ ಕಲೆಗಾಗಿ ತನ್ನ ಮೆಚ್ಚಿಗೆಯನ್ನು ವ್ಯಕ್ತಪಡಿಸುತ್ತಾ—

ಗಾಗರೀಝು ತನ ದೇತ ವೃಗ ತೇನರ
ಪಶುಸೇ ಅಧಿಕ ಜೋಸುನೂ ಕಮನದೇತ

ಅಂದರೆ ವ್ಯಾಧನು ಜಿಂಕೆಯನ್ನು ಹಿಡಿಯುವುದಕ್ಕಾಗಿ ಸಂಗೀತವನ್ನು ಪ್ರದರ್ಶಿಸುತ್ತಾನೆ, ಆ ಜಿಂಕೆಯು ವೈಮರೆತು ಕೇಳುತ್ತಿದ್ದಾಗ್ಗೆ ಅದನ್ನು ಬಲೆಯಿಂದ ಹಿಡಿದು ಕೊಲ್ಲುತ್ತಾನೆ. ಆ ಮೂಕ ಜಂತುವು ಸಂಗೀತ ಕೇಳಿದ್ದಕ್ಕೆ ಪ್ರತಿಯಾಗಿ ತನ್ನ ಪ್ರಾಣವನ್ನೇ ವ್ಯಾಧನಿಗೆ ಕಾಣಿಕೆಯಾಗಿ ಅರ್ಪಿಸುತ್ತದೆ. ಅಂದಮೇಲೆ ಸಂಗೀತ ಕೇಳಿ ಯಾರ ಮನಸ್ಸು ಅರಳುವುದಿಲ್ಲವೋ, ಸಂಗೀತ ಕಲೆಗೆ ತನ್ನ ಕೈಲಾದ ಪ್ರೋತ್ಸಾಹವನ್ನು ಯಾರು ಕೊಡುವುದಿಲ್ಲವೋ ಅವನು, ಆ ಮೂಕ ಜಂತುವಿಗಿಂತಲೂ ಕಡೆಯೆಂದು ಮೇಲ್ಕಂಡ 'ದೋಹ'ದಲ್ಲಿ ಹೇಳಿದ್ದಾನೆ.

ಸಂಗೀತವು ಮನುಷ್ಯನ ಜೀವಿತದಲ್ಲಿ ಹಾಸು ಹೊಕ್ಕಾಗಿ ಬೆರೆತುಕೊಂಡು ಬಂದಿದೆ. ಅದಕ್ಕಾಗಿಯೇ ಉಳುವಾಗ ಸಂಗೀತ, ಬಿತ್ತುವಾಗ ಸಂಗೀತ, ತೂರುವಾಗ ಸಂಗೀತ, ಮದುವೆಯ ಮನೆಯಲ್ಲಿ ಸಂಗೀತ, ದೇವಸ್ಥಾನದಲ್ಲಿ ಸಂಗೀತ. ಹುಟ್ಟಿದಲ್ಲಿ ಸಂಗೀತ, ಸತ್ತಾಗ ಸಂಗೀತ, ಯುದ್ಧಕ್ಕೆ ಹೋಗುವಾಗ ಸಂಗೀತ ಹೀಗೆ ಸಂಗೀತವು ಮಾನವನ ಜೀವನದಲ್ಲಿ ರಕ್ತಗತವಾಗಿದೆ. ಅಲ್ಲದೆ ಮಾನವನು ತಾನು ಆರಾಧಿಸುವ ದೇವತೆಯನ್ನು ಸಂಗೀತ ಸಹಿತವಾಗಿಯೇ ಕಲ್ಪಿಸಿದ್ದಾನೆ. ಈಶ್ವರನು ನರ್ತಿಸುತ್ತಾ ಢಮರುಗವನ್ನು ಧರಿಸಿದ್ದಾನೆ. ಕೃಷ್ಣನು ಕೊಳಲು ಹಿಡಿದಿದ್ದಾನೆ. ಸರಸ್ವತಿಯು ವೀಣೆ ಹಿಡಿದಿದ್ದಾಳೆ. ನಾರದನು ತಂಬೂರಿ ಧರಿಸಿದ್ದಾನೆ. ಬ್ರಹ್ಮನು ಮೃದಂಗ ಬಾರಿಸುವುದಾಗಿ ಉಲ್ಲೇಖವಿದೆ. ಅಂದರೆ ಮನುಷ್ಯನು ಸಂಗೀತಕ್ಕೆ ಎಷ್ಟು ಪವಿತ್ರತೆಯನ್ನು ಕೊಟ್ಟಿದ್ದಾನೆಂಬುದು ವ್ಯಕ್ತವಾಗುತ್ತದೆ.

## ಉತ್ತರ ಮತ್ತು ದಕ್ಷಿಣ ಸಂಗೀತ

ಭಾರತೀಯ ಸಂಗೀತದಲ್ಲಿ ಉತ್ತರಾದಿ ಮತ್ತು ದಕ್ಷಿಣಾದಿ ಸಂಗೀತಗಳೆಂದು ಎರಡು ಪದ್ಧತಿಗಳಿವೆ. ಎರಡು ಸಂಗೀತದ ಮೂಲಗಳೂ ಒಂದೇ ಆಗಿದ್ದರೂ ಹಾಡುವ ಪದ್ಧತಿಯಲ್ಲಿ ವ್ಯತ್ಯಾಸವಿದೆ. ಉತ್ತರದವರು ಕೃತಿಗೆ ಹೆಚ್ಚು ಪ್ರಾಧಾನ್ಯವನ್ನು ಕೊಟ್ಟು ಹಾಡಿದರೆ, ದಕ್ಷಿಣದವರು ತಾಳಕ್ಕೆ ಪ್ರಾಧಾನ್ಯ ಕೊಟ್ಟು ಹಾಡುತ್ತಾರೆ. ಅಂದರೆ ಉತ್ತರದಲ್ಲಿ ತಾಳವಿಲ್ಲವೆಂದಂತಾಗಲೀ, ದಕ್ಷಿಣದಲ್ಲಿ ಕೃತಿ ಇಲ್ಲವೆಂದಂತಾಗಲಿ ಹೇಳುವುದಿಲ್ಲ. ಉತ್ತರದವರು ಕೃತಿಗೆ ಸಂಬಂಧಿಸಿದ ವಿಷಯಗಳನ್ನು ಸಂಗೀತದಲ್ಲಿ ಹೆಚ್ಚು ಪ್ರದರ್ಶಿಸುತ್ತಾರೆ. ದಕ್ಷಿಣದವರು ತಾಳದ ಸಂಬಂಧವಾದ ಹಲವು ವಿಧಗಳನ್ನು ರೂಢಿಸಿಕೊಂಡಿದ್ದಾರೆ ಅಷ್ಟೆ. ಉಭಯ ಸಂಗೀತಕ್ಕೂ ಕೃತಿ ಲಯಗಳೇ ತಾಯಿ ತಂದೆಗಳು.

## ಕನ್ನಡ ನಾಡಿನಲ್ಲಿ

ಮೇಲೆ ವಿವರಿಸಲಾಗಿರುವ ಉಭಯ ಗಾಯನ ಪದ್ಧತಿಗಳು ನಮ್ಮ ಕನ್ನಡ

ನಾಡಿನಲ್ಲಿ ಪ್ರಚಾರದಲ್ಲಿರುವ ವಿಚಾರ ಕನ್ನಡಿಗರಾದ ನಮ್ಮ ಭಾಗ್ಯವೆಂದೇ ಹೇಳಬೇಕು. ಉತ್ತರ ಕರ್ನಾಟಕದಲ್ಲಿ ಉತ್ತರಾದಿ ಸಂಗೀತ ಹಾಡುವ ಸಂಗೀತಗಾರರು, ಉತ್ತರದಲ್ಲಿರುವ ಯಾವ ಸಂಗೀತ ವಿದ್ವಾಂಸರಿಗೂ ಕಡಿಮೆ ಇಲ್ಲದಂತೆ ಹಾಡಿ ಭಾರತದ ಮೂಲೆ ಮೂಲೆಗೂ ಉತ್ತರಾದಿ ಸಂಗೀತ ಧ್ವಜಪತಾಕೆಯನ್ನು ಹಾರಿಸಿರುವ ವಿಚಾರ, ಕೈ|| ಪಂ|| ಗುರುವರ್ಯ ಶ್ರೀ ಪಂಚಾಕ್ಷರ ಗವಾಯಿಗಳವರು, ಗುರುವರ್ಯ ಶ್ರೀಪುಟ್ಟರಾಜಗವಾಯಿಗಳವರು ಶ್ರೀ ಬಸವರಾಜ ರಾಜ ಗುರುರವರು, ಶ್ರೀ ಗಂಗೂಬಾಯಿ ಹಾನಗಲ್‌ರವರು, ಶ್ರೀ ಭೀಮಸೇನ ಜೋಷಿಯವರು, ಶ್ರೀಮಲ್ಲಿಕಾರ್ಜುನ ಮನ್ಸೂರ್ ಅವರೇ ಮೊದಲಾದ ಕರ್ನಾಟಕದ ಗವಾಯಿಗಳ ಶ್ರೇಣಿಯನ್ನು ನೆನೆಸಿ ಕೊಂಡಾಗ, ಮನವಟ್ಟಾಗಿ ಯಾವ ಕನ್ನಡಿಗನಿಗಾಗಲಿ ಹೆಮ್ಮೆಯಾಗುವುದೇನು ಹೆಚ್ಚಲ್ಲ. ಇನ್ನು ದಕ್ಷಿಣಾದಿ ಸಂಗೀತ ವಿಚಾರವಾಗಿ ಆಲೋಚಿಸಿದರೆ, ದಕ್ಷಿಣಾದಿ ಸಂಗೀತಕ್ಕೆ ಆಚಾರ್ಯರಾದ ಶ್ರೀ ತ್ಯಾಗರಾಜರಿಗೆ ಶ್ರೀ ಪುರಂದರದಾಸರ ಕೀರ್ತನೆಗಳೇ ಸ್ಫೂರ್ತಿಯಾಗಿರುವ ವಿಚಾರ ಸರ್ವವೇದ್ಯವಾಗಿದೆ. ಕೈ|| ಬಿಡಾರಂ ಕೃಷ್ಣಪ್ಪನವರು, ವೀಣೆ ಶೇಷಣ್ಣನವರು, ವೀಣೆ ಸುಬ್ಬಣ್ಣನವರು, ಚಿಕ್ಕ ರಾಮರಾಯರು ಮೊದಲಾದ ದಾಕ್ಷಿಣಾತ್ಯ ಸಂಗೀತ ಆಚಾರ್ಯರು ದಕ್ಷಿಣ ದೇಶದ ಯಾವ ವಿದ್ವಾಂಸನಿಗೂ ಕಡಿಮೆ ಇಲ್ಲವಂತೆ ದಕ್ಷಿಣ ಸಂಗೀತದಿಂದ ಕರ್ನಾಟಕದ ಹಿರಿಮೆಯನ್ನು ಎತ್ತಿ ಹಿಡಿದಂತೆ, ಈಗಲೂ ಅನೇಕ ಉತ್ತಮ ವಿದ್ವಾಂಸರು ನಮ್ಮ ದೇಶದಲ್ಲಿದ್ದಾರೆ.

ಕೈ|| ಪಂ|| ಶ್ರೀ ಪಂಚಾಕ್ಷರಿ ಗವಾಯಿಗಳವರು ಭಾರತೀಯ ಉಭಯ ಗಾಯನಗಳಲ್ಲೂ ಅದ್ವಿತೀಯ ಪಾಂಡಿತ್ಯ ಪಡೆದಿದ್ದರು. ಸಾವಿರಾರು ಬಡ ವಿದ್ಯಾರ್ಥಿಗಳಿಗೆ ಅನ್ನವಸ್ತ್ರಗಳನ್ನು ಕೊಟ್ಟು ವಿದ್ಯಾದಾನಮಾಡಿ, ನಾಡಿಗೆ ಹಿರಿಯ ಸೇವೆಗೈದ ಶ್ರೀ ಪಂಚಾಕ್ಷರಿಗವಾಯಿಗಳು ಸಹ ಕರ್ನಾಟಕದವರು. ಶ್ರೀ ಪಂಚಾಕ್ಷರಿಗವಾಯಿಗಳ ಪಾಠಶಾಲೆಗೆ ಈಗಿನ ಮಾಲಿಕರಾದ ಉಭಯ ಗಾಯನಾಚಾರ್ಯ, ಸಂಗೀತ ಸಾಹಿತ್ಯ ವಿಶಾರದ, ಉಭಯ ಗಾನವಾದನ ಕಂಠೀರವ, ಗಾನಯೋಗಿ ಗುರುವರ್ಯ ಶ್ರೀ ಪುಟ್ಟರಾಜ ಗವಾಯಿಗಳವರು ಭಾರತದ ಎರಡು ಪದ್ಧತಿಯ ಸಂಗೀತದಲ್ಲಿ ಅದ್ವಿತೀಯ ಪಾಂಡಿತ್ಯ ಪಡೆದಿರುವುದಲ್ಲದೆ ಶ್ರೀ ಪಂಚಾಕ್ಷರಿಗವಾಯಿಗಳಂತೆ ವಿದ್ಯಾದಾನ ಮಾಡುತ್ತಿರುವುದರ ಜೊತೆಗೆ ಹುಟ್ಟು ಕುರುಡರಾದ ಅವರು ಹಿಂದಿ, ಕನ್ನಡ, ಸಂಸ್ಕೃತಗಳಲ್ಲಿ ಹಲವಾರು ಕಾವ್ಯ, ನಾಟಕ, ಗೀತೆಗಳನ್ನು ರಚಿಸಿ ಸಂಗೀತದ ಜೊತೆಗೆ ಸಾಹಿತ್ಯಕ್ಕೂ ಮಿಗಿಲಾಗಿ ಸೇವೆಸಲ್ಲಿಸಿದ್ದಾರೆ. ಸಲ್ಲಿಸುತ್ತಲೂ ಇದ್ದಾರೆ. ಅಂದಮೇಲೆ ಕರ್ನಾಟಕವು ಭಾರತೀಯ ಉಭಯಗಾನಗಳಿಗೂ ತವರುಮನೆ. ಭಾರತದ ಉಭಯಗಾಯನಗಳನ್ನೂ ಹಾಡುವ ಜನ ಕರ್ನಾಟಕದಲ್ಲೇ ಹೇರಳವಾಗಿರುವ ವಿಚಾರ ಕನ್ನಡಿಗರ ಭಾಗ್ಯವೆಂದೇ ಹೇಳಬೇಕು.

——:.——

# ವಿಜ್ಞಾನವನ್ನು ಪಳಗಿಸಬೇಕು



ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರು, ಬೆಂಗಳೂರು.

ನಮ್ಮ ಈಗಿನ ಪ್ರಗತಿಗೆ ವಿಜ್ಞಾನ ಕಾರಣ.

ಈಗಿನ ದುಃಸ್ಥಿತಿಗೂ ವಿಜ್ಞಾನವೇ ಕಾರಣ.

ಜಗತ್ತನ್ನು ಒಂದು ಚಾಪೆಯ ಹಾಗೆ ಸುತ್ತುವಷ್ಟು ಚಿಕ್ಕದು ಮಾಡಿ, ದೇಶಗಳನ್ನು ಅಕ್ಕಪಕ್ಕಕ್ಕೇ ತಂದಿಟ್ಟ ವಿಜ್ಞಾನ.

ಮನುಷ್ಯರನ್ನು ದೂರ ಮಾಡಿತು. ಹತ್ತಿರ ಹತ್ತಿರವೇ ಇದ್ದರೂ ದೂರ ಮಾಡಿತು. ಮನುಷ್ಯರ ನಡುವೆ ಪರದೆ ಹಾಕಿತು, ಗೋಡೆ ಕಟ್ಟಿತು.

ಮನುಷ್ಯರಿಗೆ ಮನುಷ್ಯರ ಪ್ರತ್ಯಕ್ಷ ಸ್ಪರ್ಶವಿಲ್ಲ. ಯಾವುದೋ ಮುಖವಾಡ, ಯಾವುದೋ ವೇಷ ಎದುರಿಗೆ ಬರುತ್ತವೆಯೋ ವಿನಾ ಹೃದಯವಂತ, ಮಾನವತಾಪೂರ್ಣ ಮನುಷ್ಯ ಕೈಗೆ ಸಿಗುವುದಿಲ್ಲ.

ಕೈಕುಲುಕಿದರೆ ಕೈಗೆ ಸಿಗುವುದು ಕೈಚೀಲ, ಎದೆಯಪ್ಪಿದರೆ ಎದೆಗೆ ತಗಲುವುದು ಕಬ್ಬಿಣದ ಕವಚ, ಎದೆಯಿಲ್ಲ.

ಮನುಷ್ಯ ಮನುಷ್ಯರ ನಡುವೆ ಅಂತಃಕರಣದ ದರ್ಶನವಾಗುತ್ತಿಲ್ಲ. ರಸಸ್ಪರ್ಶವಿಲ್ಲ. ರಸವೇ ಇಲ್ಲದೆ ಸಮರಸವೇನು ಬಂತು?

ಮನುಷ್ಯ ಜಾತಿಯ ಸಂಪ್ರದಾಯ, ಸಂಸ್ಕಾರ, ಇಷ್ಟದೈವ, ಗ್ರಂಥ-ಪಂಥ, ಸಂಸ್ಥೆ, ಸದಸ್ಯತ್ವ, ಗುಡಿಗುಂಡಾರ ಮುಂತಾದವೆಲ್ಲವೂ ಈ ಗೋಡೆ ಕಟ್ಟಿವೆ.

ಮನುಷ್ಯನನ್ನು ಮನುಷ್ಯ ಅರಿಯಲು ಅಂತರಾಯವನ್ನು ತಂದೊಡ್ಡಿವೆ.

ಇವೆಲ್ಲವರ ಜೊತೆಗೆ ಈಗ ವಿಜ್ಞಾನದ ಪ್ರಚಂಡ ಶಕ್ತಿ ಸಾಮರ್ಥ್ಯಗಳೂ ಸೇರಿವೆ.

ಆ ಎಲ್ಲವೂ ಮನುಷ್ಯನ ಮನಸ್ಸಿನ ವೈಶಾಲ್ಯವನ್ನು ಕುಗ್ಗಿಸಿದ್ದವು. ಮನಸ್ಸನ್ನೇ ನಾಶ ಮಾಡಿ ಮನುಷ್ಯನನ್ನು ಬರೀ ಯಂತ್ರವಾಗಿ, ಕೀಲು ಗೊಂಬೆಯಾಗಿ ಅವು ಮಾಡಲಿಲ್ಲ.

ಆ ಕಾರ್ಯವನ್ನು ಸಾಧಿಸಿದುದು ವಿಜ್ಞಾನ.

ನಮ್ಮ ಶಾರೀರಿಕ ಶಕ್ತಿಯನ್ನು, ನಮ್ಮ ಇಂದ್ರಿಯಗಳ ಸಾಮರ್ಥ್ಯವನ್ನು, ಕರಣ-ಉಪಕರಣಗಳ ಬಲವನ್ನು ಮಿತಿಯೇ ಇಲ್ಲದ ಹಾಗೆ ಬೆಳೆಸಿದೆ ವಿಜ್ಞಾನ.

ಮುಷ್ಟಿಯುದ್ಧ ಮಾಡುತ್ತಿದ್ದ ಅನಾಗರಿಕ ಮನುಷ್ಯ ಈಗ ಗದೆ, ಬಿಲ್ಲು-ಬಾಣ ಕೋವಿ, ಫಿರಂಗಿಗಳನ್ನು ದಾಟಿ ಅಣುಬಾಂಬಿನವರೆಗೆ ಬಂದಿದಾನೆ.

ಒಂದೆರಡು ಮೈಲಿ ದೂರದವರೆಗೆ ನೋಡಬಲ್ಲ ಕಣ್ಣು ಈಗ ಚಂದ್ರಗ್ರಹದ ದೃಶ್ಯವನ್ನು ನೋಡುತ್ತಿದೆ.

ಆದರೆ ಮನುಷ್ಯನ 'ಅಂತಃ-ಕರಣ'ವನ್ನು ಚಿತ್ತದ ಶಕ್ತಿಯನ್ನು ಬೆಳೆಸಲಿಲ್ಲ, ಮೊಟಕು ಮಾಡಿದೆ.

ಮನುಷ್ಯನ ಮನಸ್ಸು, ಚಿತ್ತ ಎಂಬುದು ಅವನ ದೇಹದ ಒಂದು ಪರಿಮಳ. ಶಾರೀರಕ ಜೀವನದ ಒಂದು ಅರಳು-ಎನ್ನುತ್ತಾರೆ ವಿಜ್ಞಾನವಾದಿ ರಾಜಕೀಯದವರು.

ಆದ್ದರಿಂದ ವಿಜ್ಞಾನದ ಈ ಪ್ರಚಂಡ ಶಕ್ತಿಯನ್ನು ಮಾನವ ವಿನಾಶಕ್ಕೆ, ಯುದ್ಧಕ್ಕೆ ಉಪಯೋಗಿಸಲು ಅವರು ಹಿಂಜರಿಯರು.

ಇಲ್ಲದಿದ್ದರೆ ದೇಶ ದೇಶಗಳ ಆಯವ್ಯಯದ ಅಂದಾಜು ಪಟ್ಟಿಗಳನ್ನು ಯುದ್ಧ ವಿಜ್ಞಾನಕ್ಕೆ ಇಷ್ಟು ಕೋಟಿ ಕೋಟಿ ರೂಪಾಯಿ ಬೇಕೆ ?

ಹಿಂದೆ ಒಂದು ಕಾಲದಲ್ಲಿ ಹಿಂದುಸ್ಥಾನದಲ್ಲಿ ಯೋಗ ವಿದ್ಯೆಯನ್ನು ಸಾಧಿಸಿದ ಜನ ಅಷ್ಟ ಸಿದ್ಧಿಗಳಿಗೆ ಮನಸೋತರು, ಚಿತ್ತಶುದ್ಧಿ ಕಳೆದುಕೊಂಡರು, ಆತ್ಮಸಿದ್ಧಿಯನ್ನು ಮರೆತರು.

ಈ ಸಿದ್ಧಿಗಳ ಕಾಟ ಹೆಚ್ಚಾದಾಗ ಇಂಥ ಸಿದ್ಧಿಗಳ ಸಾಧನೆ ಗೌಣ, ಆತ್ಮನಾಶಕ ಎಂದು ತಿಳಿದವರು ಸಾರಿ ಹೇಳಬೇಕಾಯಿತು.

ಸಿದ್ಧಿಗಳ ಬಯಕೆ ಆತ್ಮನಾಶದ ಬಯಕೆ ಎಂದು ತಿರಸ್ಕರಿಸಬೇಕಾಯಿತು.

ಈಗ ಮತ್ತೆ ಅಂಥದೇ ಕಾಲ ಬಂದಿದೆ.

ವಿಜ್ಞಾನದ ಸಿದ್ಧಿಗಳನ್ನು ಶುದ್ಧಿಗೊಳಿಸಬೇಕಾಗಿದೆ ಈಗ. ಮತಿಗೆಟ್ಟ ವೈಜ್ಞಾನಿಕ ಗತಿಯನ್ನು ತಡೆಯಬೇಕಾಗಿದೆ. ಸನ್ಮತಿಯನ್ನು ಪ್ರತಿಷ್ಠಿಸಬೇಕಾಗಿದೆ-ವಿಜ್ಞಾನ ಸಿದ್ಧಿಗಳನ್ನು ಮಾನವ ಕಲ್ಯಾಣಕ್ಕೆ ಉಪಯೋಗಿಸಲಿಕ್ಕೆ.

ಮಾನವ ಕಲ್ಯಾಣಕ್ಕೆ ಈಗ ಅಡ್ಡಿಯಾಗಿರುವ ಕಂಟಕ, ಕಲಹ, ಘರ್ಷಣೆ

ಗಳನ್ನು ನಿವಾರಿಸಬೇಕು. ಮನುಷ್ಯನ ಚಿತ್ತ ಶಕ್ತಿಯನ್ನು ಬುದ್ಧಿ ಶಕ್ತಿಯನ್ನು ವಿಶ್ವ ವ್ಯಾಪಕವಾಗುವಂತೆ ಬೆಳೆಸಬೇಕು.

ಇದು ವಿಜ್ಞಾನದ ಕೆಲಸ. ಇದು ಸತ್ಯದ ಕೆಲಸ. ವಿಜ್ಞಾನ ಸತ್ಯನಿಷ್ಠವಾದುದರಿಂದ ಇದು ವಿಜ್ಞಾನದ ಕೆಲಸ.

ಭೇದ, ಕಲಹ, ಘರ್ಷಣೆ ಸಮಾಜ ಹುಟ್ಟಿದಾಗಿನಿಂದಲೂ ಇವೆ. ಈಗಿರುವ ಹಾಗೇ ಲೋಕ ಇದ್ದರೆ ಜಗತ್ತಿನಲ್ಲಿ ಘರ್ಷಣೆ ತಪ್ಪಿದ್ದೇ ಅಲ್ಲವೇನೋ–ಎಂದೆಂದಿಗೂ–ಎನಿಸುತ್ತದೆ.

ಎಷ್ಟೋ ಪ್ರಯತ್ನ ಮಾಡಿವೆ ಸಮಾಜ. ಪರಿವರ್ತನೆ ಮಾಡಿವೆ. ಪುನರ್ವ್ಯವಸ್ಥೆ ಮಾಡಿವೆ. ದೇಶ ದೇಶಗಳನ್ನು ಹತ್ತಿರ ಸೆಳೆದಿವೆ. ಒಟ್ಟಿಗೆ ಕೂಡಿಸಿದೆ.

ಆದರೂ ಕಲಹ, ಘರ್ಷಣೆ ತಪ್ಪಿಲ್ಲ.

ಸಾವಿರಾರು ವರ್ಷಗಳಿಂದ ನಮ್ಮನ್ನು ಕಾಡುತ್ತಿರುವ ಈ ದ್ವೇಷಾಸೂಯೆ, ಕಲಹ ಏನೋ ಗುಟ್ಟನ್ನು ಅಡಗಿಸಿಟ್ಟುಕೊಂಡಿವೆ. ಏನು ಅದರ ಗುಟ್ಟು ?

ಎಲ್ಲ ವಿರಸಕ್ಕೂ ಕಾರಣ ಮನುಷ್ಯನ ಮನಸ್ಸೇ. ಲೋಕವನ್ನು ಕಟ್ಟುವುದೂ ಮನಸ್ಸು, ಮುರಿಯುವುದೂ ಮನಸ್ಸು.

ಈ ಮನಸ್ಸು ಇಲ್ಲಿಯವರೆಗೆ ಭೇದ–ವಿರಸಗಳಲ್ಲಿ ಹುಟ್ಟಿ ಬೆಳೆದು ಬಂದಿದೆ.

ವಿರೋಧ–ವಿರಸ, ದ್ವೇಷ–ಅಸೂಯೆ ನಮ್ಮ ಸ್ವಭಾವ ಎನ್ನುವ ಹಾಗೆ ಆಗಿದೆ ನಮ್ಮ ಸ್ಥಿತಿ.

ಒಬ್ಬರ ಏಳಿಗೆ ಇನ್ನೊಬ್ಬರ ಬೀಳಿಗೆ. ಇವರ ಮಾತು ಅವರಿಗೆ ಕಹಿ. ಅವರ ಗುರಿ ಇವರಿಗೆ ವಿನಾಶಕಾರಿ.

ಹೀಗೆ ಪರಸ್ಪರ ವಿರುದ್ಧ ಸಂಕಲ್ಪಗಳ–ಉದ್ದಿಶ್ಯಗಳ ಗೊಂದಲ ಆಗಿದೆ ಜಗತ್ತು.

ಒಂದು ಸರ್ವಸಮ್ಮತ, ಅವಿರುದ್ಧ ಮಾನವ ಸಂಕಲ್ಪವನ್ನು ಗುರುತಿಸದಿದ್ದರೆ, ಅದನ್ನು ಬೆಳೆಸದಿದ್ದರೆ ಈ ವಿರಸ ಕಡಮೆಯಾಗದು.

ಸ್ಪರ್ಧೆ, ವೈರಗಳನ್ನು ಬಿಟ್ಟು ಸಹಕಾರವನ್ನು ಅವಲಂಬಿಸದಿದ್ದರೆ ಜಗತ್ತಿನಲ್ಲಿ ಶಾಂತಿಯ ಕ್ರಾಂತಿಯಾಗದು.

ಈ ಸಹಕಾರವೂ ಅಂಥ ಅಪರಿಚಿತ, ಅಜ್ಞಾನ ವಸ್ತುವಲ್ಲ. ಯಾರೂ ಎಂದೂ ಕಂಡು ಅರಿಯುವಂಥ ಪದಾರ್ಥವಲ್ಲ.

ದಿನವೂ ಸಾವಿರ ಮಾತಿನಲ್ಲಿ ಸಮಾಜ ಪರಸ್ಪರ ಸಹಕಾರದಿಂದಲೇ ನಡೆಯುತ್ತಿದೆ. ಒಂದೇ ಉದ್ದೇಶಕ್ಕಾಗಿ ಸಹಕರಿಸುತ್ತೇವೆ. ಬೇರೆ ಬೇರೆ ಉದ್ದಿಶ್ಯಗಳಿಗಾಗಿ–ಪರಸ್ಪರ ಪೂರಕವಾದರೆ–ಸಹಕರಿಸುತ್ತೇವೆ.

ಮಾರುವವನು ಪದಾರ್ಥಗಳನ್ನು ಕೊಡುತ್ತಾನೆ. ಕೊಳ್ಳುವವನು ತೆಗೆದುಕೊಳ್ಳುತ್ತಾನೆ. ಇಬ್ಬರ ಉದ್ದಿಶ್ಯ–ಕ್ರಿಯೆ ಬೇರೆ ಬೇರೆ.

ಆದರೂ ಅಲ್ಲಿ ಸಾಮರಸ್ಯ ಇದೆ, ಸ್ನೇಹ ಇದೆ.

ಒಂದಕ್ಕೆ ಒಂದು ವಿರುದ್ಧವಲ್ಲ, ಸಹಾಯಕ. ಕೊಡು-ಕೊಳ್ಳುವ ಕ್ರಿಯೆಗಳು.

ಹೀಗೆ ಸಮಾಜದಲ್ಲಿ ಸಹಕಾರವೂ ಇದೆ; ಜೊತೆಯಲ್ಲೇ ವಿರಸವೂ ಇದೆ. ಯಾವಾಗಲೂ ಇದೆ ಈ ದ್ವಂದ್ವ.

ಮನುಷ್ಯನ ವೈಯಕ್ತಿಕ ಜೀವನದಲ್ಲೂ ಇದೆ, ಸಾಮಾಜಿಕ ಜೀವನದಲ್ಲೂ ಇದೆ ಈ ವಿರಸ-ಸಮರಸಗಳ ಬೇವು ಬೆಲ್ಲ; ಈ ದ್ವೇಷ-ಸ್ನೇಹಗಳ ಕಿಚಡಿ.

ಯಾರ ಬಾಳಿನಲ್ಲಿ ದ್ವೇಷ ಕಡಮೆಯಾಗಿ ಸ್ನೇಹ ಹೆಚ್ಚುತ್ತದೆಯೋ, ವಿರಸ ಅಳಿದು ಸಮರಸ ಹೆಚ್ಚುತ್ತದೆಯೋ ಅವರ ಬಾಳು ಧನ್ಯ ! ಆ ಬಾಳು ಶಾಂತಿಪೂರ್ಣ.

'ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವಚ' ಎಂದಾಗ ಭಗವದ್ಗೀತೆ ಚಿತ್ರಿಸಿದ್ದು ಇದನ್ನೇ.

ಹಿಂದೆ ಈ ಮಾತನ್ನು ವ್ಯಕ್ತಿಯ ಜೀವನದ ಆದರ್ಶವಾಗಿ ಹೇಳಿತ್ತು. ಈಗಿನಷ್ಟು ಸಾಮೂಹಿಕತೆ ಆಗ ಇರಲಿಲ್ಲ. ಈಗಿನಷ್ಟು ಅಪಾರ ಶಕ್ತಿಯೂ ಆಗ ಇರಲಿಲ್ಲ.

ಮನುಷ್ಯರು ಮನುಷ್ಯರಿಗೆ ಶತ್ರುಗಳಾಗಿ ಪರಸ್ಪರ ವಿನಾಶ ಮಾಡಬಲ್ಲ ಶಕ್ತಿ ಈಗ ನೂರ್ಮಡಿಯಾಗಿದೆ. ವಿಜ್ಞಾನ ಮನುಷ್ಯನ ವಿಧ್ವಂಸಕ ಶಕ್ತಿಗೆ ಅಷ್ಟು ಬಲ ಕೊಟ್ಟಿದೆ.

ವಿಜ್ಞಾನ ಬರುವ ಮುಂಚೆ ವಿರಸ-ವಿರೋಧ ವ್ಯಕ್ತಿ ವ್ಯಕ್ತಿಗಳಲ್ಲಿ, ಚಿಕ್ಕ ಗುಂಪುಗಳಲ್ಲಿ ಇತ್ತು. ಉಳಿದವರ ಬಾಳು-ಬದುಕಿಗೂ ಅದಕ್ಕೂ ಸಂಬಂಧವಿರುತ್ತಿರಲಿಲ್ಲ.

ರಾಮ-ರಾವಣ ಜಗಳವಾಗಲಿ, ಯುದ್ಧ ಮಾಡಲಿ, ಅದರಿಂದ ನಮಗೇನು ಆಗಬೇಕು ? ಯಾರಾದರೂ ಗೆಲ್ಲಲಿ. ಯಾರು ಗೆದ್ದರೂ ಯಾರು ಸೋತರೂ ನಮ್ಮ ಬಾಳಿನ ಶಾಂತಿಯುತ ಪ್ರವಾಹಕ್ಕೆ ಅಡ್ಡಿಯಿಲ್ಲ ಎಂಬ ಕಾಲ ಅದು.

ಈಗ ಹಾಗಿಲ್ಲ.

ವಿಜ್ಞಾನದ ಶೋಧನೆಗಳ ಸಹಾಯದಿಂದ ಮನುಷ್ಯ ತನ್ನ ಬಾಳನ್ನು ತೊಡಕು-ತೊಡರು ಮಾಡಿದಾನೆ.

ಈಗ ಆ ನೆಮ್ಮದಿ ಇಲ್ಲ.

ಯಾವ ಗಳಿಗೆಯಲ್ಲಿ ಯಾರು ಏನು ಮಾಡುತ್ತಾರೋ ಎಂದು ಸದಾ ಅಂಜುತ್ತ ಅಂಜುತ್ತ ಬದುಕುತ್ತಿದೇವೆ.

ಇಷ್ಟುದಿನ ನಮ್ಮ ಪ್ರಥಮ ಶ್ರೇಣಿಯ ಫಿರಂಗಿಗಳು ಹಾರಿಸಿದ ಗುಂಡು ಗಾತ್ರದ ದೂರ ಹಾರುತ್ತಿತ್ತು. ಈಗ ಬಂದಿರುವ ಆಟಂಬಾಂಬು ದಕ್ಷಿಣ ಧ್ರುವದಲ್ಲಿ ಹಾರಿದರೆ ಉತ್ತರ ಧ್ರುವದಲ್ಲಿರುವವರನ್ನು ಸುಟ್ಟೀತು.

ಲಕ್ಷಾಂತರ ಜನರ ದೊಡ್ಡ ದಂಡಲ್ಲ ಈಗ ಬೇಕಾದ್ದು ಯುದ್ಧಕ್ಕೆ, ರಾಶಿ ರಾಶಿ ಅಣುಬಾಂಬು.

ಎಲ್ಲಾ ದೇಶಗಳೂ ತಮತಮಗೆ ಶಕ್ತಿಯಿದ್ದಷ್ಟು ಈ ಹೊಸ ಆಯುಧಗಳನ್ನು ತಯಾರಿಸುತ್ತಿವೆ. ಏನು ಪ್ರಗತಿಯೋ, ಎಂಥ ಪ್ರಗತಿಯೋ?

ಈ ಮತಿಗೇಡಿ ವಿಜ್ಞಾನವನ್ನು ಬಿಗಿಹಿಡಿಯಬೇಕು, ವಿಜ್ಞಾನವ ಕುದುರೆ ನಾಗಾಲೋಟದಿಂದ ಓಡುತ್ತಿರುವ ದಾರಿ ಊರಿನ ದಾರಿಯಲ್ಲ, ಕಾಡಿನ ದಾರಿ.

ಲಗಾಮು ಹಿಡಿದು ದಾರಿ ತಿರುಗಿಸಬೇಕು.

ಗೊತ್ತುಗುರಿ ಇಲ್ಲದೆ ಸುಮ್ಮನೆ ಅತ್ತ ತಿತ್ತ ಓಡಿದರೆ ಬಂತೆ, ಹಳ್ಳಕೊಳ್ಳಕ್ಕೆ ಬಿದ್ದರೆ ಬಂತೆ?

ಮಾನವರು ಮಾನವರಾಗಿ ಬಾಳುವಂತೆ, ಲೋಕದಲ್ಲಿ ಶಾಂತಿ ನೆಲೆಸುವಂತೆ, ಮನುಷ್ಯರ ಬಾಳು ಸಹಕಾರಾತ್ಮಕವಾಗಬೇಕು. ಮನುಷ್ಯ ಜೀವನ 'ಸರ್ವೇಷಾಂ ಅವಿರೋಧೇನ' ಯಾರಿಗೂ ವಿರುದ್ಧವಾಗದ ರೀತಿಯಲ್ಲಿ ಸಾಗಬೇಕು. ಆ ಸನ್ಮತಿ ಮನುಷ್ಯನಿಗೆ ಬರಬೇಕು.

ಸಿದ್ಧಿ ಹೆಚ್ಚಿದಷ್ಟೂ ಶುದ್ಧಿ ಹೆಚ್ಚಬೇಕು. ಶುದ್ಧಿಯಿಲ್ಲದ ಸಿದ್ಧಿ ಲೋಕಕಂಟಕ. ಸನ್ಮತಿಯಿಲ್ಲದ ಪ್ರಗತಿ, ನಿಗ್ರಹವಿಲ್ಲದಬಲ ರಾಕ್ಷಸೀ ಸ್ವಭಾವದ್ದು. ಅದು ಆಸುರೀ ಸಂಪತ್ತು. ವಿಜ್ಞಾನ ಸ್ವಯಂಭೂ ಅಲ್ಲ. ಮನುಷ್ಯನ ಬುದ್ಧಿಯೇ ಅದನ್ನು ಬೆಳೆಸಿದ್ದು. ಸಾವಿರ ಪ್ರಯೋಗಮಾಡಿ ಕೋಟಿಜನರ ನೆರವು ಪಡೆದು ವಿಜ್ಞಾನವನ್ನು ಬೆಳೆಸಿದೇವೆ.

ಅದರಿಂದ ಮನುಷ್ಯರಿಗೆ ಲಾಭವಾಯಿತು. ಆ ಲಾಭದಾಸೆಗೆ ಬಿದ್ದು ಲೋಭಕ್ಕೆ ಗುರಿಯಾಗಿ ಅದು ಹೋದತ್ತ ಹೋಗಲಿ ಎಂದು ಕೈಬಿಟ್ಟು ಕೂತಿದಾರೆ ಮನುಷ್ಯರು.

ಯಾರೂ ಇಂದಿನವರೆಗೆ ವಿಜ್ಞಾನಕ್ಕೆ, ಅದರ ಗತಿಗೆ ಒಂದು ಗೊತ್ತು-ಗುರಿ ಕಲ್ಪಿಸಿಲ್ಲ. ಈಗ ಆ ಕೆಲಸ ನಡೆಯಬೇಕು.

ಹಿಂದೆ ಕಾಡುಮೃಗಗಳಾಗಿ ಮನುಷ್ಯನ ವೈರಿಗಳಾಗಿದ್ದ ಪ್ರಾಣಿಗಳನ್ನು ಮನುಷ್ಯ ಕಷ್ಟಪಟ್ಟು ಪಳಗಿಸಿದ. ಅವು ತನಗೆ ವೈರಿಗಳಾಗದೆ ಗೆಳೆಯರಾಗುವಂತೆ ಸಹಕರಿಸುವಂತೆ ಮಾಡಿದ. ಈಗ ವಿಜ್ಞಾನವನ್ನು ಪಳಗಿಸಬೇಕಾಗಿದೆ. ಅದಕ್ಕೆ ಅಹಿಂಸೆಯ ಲಗಾಮನ್ನು ತೊಡಿಸಬೇಕಾಗಿದೆ.

ನಮ್ಮ ಸಂಸ್ಥೆ, ಸಂಪ್ರದಾಯ, ಸಂಸ್ಕೃತಿ, ಶಿಕ್ಷಣ, ರಾಜ್ಯವ್ಯವಸ್ಥೆ, ಆರ್ಥಿಕ ರಚನೆ ಎಲ್ಲದರಲ್ಲೂ ಅಹಿಂಸೆಯನ್ನು ಪ್ರತಿಷ್ಠಿಸಬೇಕು.

ಅಹಿಂಸೆ ಮನುಷ್ಯ ಜೀವನದ ಸರ್ವವಿಭಾಗಗಳಲ್ಲೂ ಸಾರ್ವಭೌಮ ತತ್ತ್ವವಾಗಬೇಕು. ಸಾಮಾಜಿಕ ಪರಮ ಸತ್ಯವಾದ ಶಾಂತಿಯನ್ನು ಸ್ಥಾಪಿಸಲು ಅಹಿಂಸೆ ಸಾರ್ವಭೌಮ ಪರಮ ಧರ್ಮವಾಗಬೇಕು, ವ್ಯಾಪಕವಾಗಬೇಕು. ಏಕೆ?

ವಿಜ್ಞಾನ ಈಗ ಸಾರ್ವಭೌಮ, ವ್ಯಾಪಕ. ಅದರ ಲಗಾಮು ಅಷ್ಟೇ ವ್ಯಾಪಕ, ಸಾರ್ವಭೌಮ ಆಗದಿದ್ದರೆ?

——::——

# ಕನ್ನಡವನ್ನುದ್ಧರಿಸಿದ ಪುಣ್ಯಪುರುಷ



**ಪ್ರೊ: ಸ. ಸ. ಮಾಳವಾಡ.** ಎಂ.ಎ.,
ಕರ್ನಾಟಕ ಕಾಲೇಜ್, ಧಾರವಾಡ.

೨೦ನೆಯ ಶತಮಾನದ ಭಾರತದಲ್ಲಿ ತಲೆದೋರಿದ ಜಾಗೃತಿಯ ಬೀಜಗಳು ೧೯ನೆಯ ಶತಮಾನದಲ್ಲಿಯೇ ಅಡಕವಾಗಿದ್ದವು. ಆಧುನಿಕ ಜಗತ್ತಿನಲ್ಲಿ ಭಾರತದ ಕೀರ್ತಿಯನ್ನು ವಿಸ್ತರಿಸಿದ ಮಹಾವ್ಯಕ್ತಿಗಳನ್ನು ಗರ್ಭೀಕರಿಸಿಕೊಂಡ ಕಾಲ ವಿಭಾಗವು ೧೯ನೆಯ ಶತಮಾನವೇ ಆಗಿದೆ. ಈ ಮಾತು ಕರ್ನಾಟಕಕ್ಕೂ ಅನ್ವಯಿಸುವಂತಿದೆ. ಆಧುನಿಕ ಕರ್ನಾಟಕದ ಪುನರುತ್ಥಾನದ ಶಕ್ತಿ ವಿಶೇಷಗಳು ೧೯ನೆಯ ಶತಮಾನದ ಕಾಲಗರ್ಭದಿಂದ ಹೊರಹೊಮ್ಮಿ ಬಂದಿವೆ.

ಕನ್ನಡ ಕವಿಚರಿತ್ರೆಕಾರರು ಪ್ರಾಚೀನ ಕನ್ನಡ ಸಾಹಿತ್ಯ ಚರಿತ್ರೆಯ ಬಗೆಗೆ ವ್ಯಾಪಕವಾದ ವಿಷಯ ಸಂಗ್ರಹವನ್ನು ಒದಗಿಸಿದರು. ಸಾಹಿತ್ಯ ಚರಿತ್ರೆಯ ಹಿನ್ನೆಲೆಯ ಶಕ್ತಿ ವಿಶೇಷಗಳನ್ನು ವಿವರವಾಗಿ ರೂಪಿಸುವ ಕಾರ್ಯ ಅವರ ಯೋಜನೆಯಲ್ಲಿ ಇರಲಿಲ್ಲ. ಇ. ಪಿ. ರಾಯಿಸರಿಗೂ ಕೂಡ ೧೯ನೆಯ ಶತಮಾನದ ಕಾಲ ಖಂಡವನ್ನು ಕುರಿತು ಹೆಚ್ಚಿನ ವಿವೇಚನೆಯನ್ನು ಒದಗಿಸಲು ಸಾಧ್ಯವಿರಲಿಲ್ಲ. ಆದರೆ ಅವರು ಈ ಕಾಲದ ಸಾಹಿತ್ಯ ರಚನೆಯ ವೈಶಿಷ್ಟ್ಯವನ್ನು ಸೂಚಿಸಿದ್ದಾರೆ. ಈ ಶತಮಾನದಲ್ಲಿ ಕನ್ನಡ ಸಾಹಿತ್ಯದ ಹೊಸ ಯುಗವು ಆರಂಭವಾಯಿತು. ಪಾಶ್ಚಿಮಾತ್ಯ ಪದ್ಧತಿಯ ಶಿಕ್ಷಣದ ಪುನರ್ಘಟನೆಯು ಇವಕ್ಕೆ ಕಾರಣವಾಯಿತು–ಎಂಬ ಮಾತುಗಳನ್ನು ರಾಯಿಸ್‌ರು ತಮ್ಮ ಚಿಕ್ಕ ಹೊತ್ತಿಗೆಯಲ್ಲಿ ನಿರ್ದೇಶಿಸಿದ್ದಾರೆ. ಕನ್ನಡ ಸಾಹಿತ್ಯ ಚರಿತ್ರೆಯನ್ನು ಕುರಿತ ತಮ್ಮ ಆಂಗ್ಲ ಗ್ರಂಥದಲ್ಲಿ ಆರ್. ನರಸಿಂಹಾಚಾರ್ಯರು ಒಂದು ವಿಹಂಗಮ ನೋಟವನ್ನು ಕೊಟ್ಟಿದ್ದಾರೆ. ಅದರಲ್ಲಿ ೧೯ನೆಯ

ಶತಮಾನದ ಕನ್ನಡ ಸಾಹಿತ್ಯಕ್ಕೆ ಹೊಸ ಪ್ರಚೋದನೆಯು ಮೈಸೂರು ಅರಮನೆಯಿಂದ ದೊರೆತುದನ್ನು ಉಲ್ಲೇಖಿಸಲಾಗಿದೆ. ಆದರೆ ಅಲ್ಲಿ ಉತ್ತರ ಕರ್ನಾಟಕ ಶಕ್ತಿ ವಿಶೇಷಗಳನ್ನು ಸೂಚಿಸಲಾಗಿಲ್ಲ. ತೀರ ಇತ್ತೀಚಿನ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಡಾ|| ರಂ. ಶ್ರೀ ಮುಗಳಿಯವರು ಈ ಅಂಶವನ್ನು ಕೆಲಮಟ್ಟಿಗೆ ವಿವೇಚಿಸಿದ್ದಾರೆ. ಆದರೆ ೧೯ನೆಯ ಶತಮಾನದ ವಿವೇಚನೆಗೆ ಅಲ್ಲಿ ವಿಶೇಷ ಗಮನ ದೊರೆತಿಲ್ಲ. ಹೊಸಗನ್ನಡ ಸಾಹಿತ್ಯ ಚರಿತ್ರೆ ಸಿದ್ಧವಾಗಬೇಕಾಗಿರುವ ಈ ಕಾಲದಲ್ಲಿ ಈ ವಿಷಯದ ವಿವೇಚನೆ ಹೆಚ್ಚು ಮಹತ್ವದ್ದಾಗಿದೆ. ಇಂಥ ವಿವೇಚನೆಯನ್ನು ಕೆಲವು ಲೇಖನಗಳಲ್ಲಿ ಈಗಾಗಲೆ ಬಂದಿದೆ. ಸಾಹಿತ್ಯ ಚರಿತ್ರೆಯನ್ನು ವಿವೇಚಿಸಬೇಕಾದಾಗ ಆ ಆ ಕಾಲದ ಹಿನ್ನೆಲೆಯ ಪ್ರೇರಕ ಶಕ್ತಿಗಳನ್ನು ಪ್ರಥಮತಃ ನಾವು ಗಮನಿಸಬೇಕಾಗುತ್ತದೆ. ೧೮೧೮ರ ವರೆಗೆ ಧಾರವಾಡ ಪ್ರದೇಶದ ಕರ್ನಾಟಕವು ಪೇಶ್ವೆಯವರ ಅಧಿಕಾರಕ್ಕೆ ಒಳಗಾಗಿತ್ತು. ಅಂತೆಯೇ ಇಲ್ಲಿಯ ಆಡಳಿತ ಕ್ರಮದಲ್ಲಿ ಮರಾಠಿ ಭಾಷೆಯು ಕನ್ನಡವನ್ನು ಹಿಂದೆ ಸರಿಸಿತ್ತು. ೧೮೧೮ರ ನಂತರ ಬ್ರಿಟಿಷರ ಆಡಳಿತೆಗೆ ಈ ಪ್ರದೇಶ ಒಳಪಟ್ಟಿತು. ಆದರೆ ಈ ಮೊದಲೇ ರೂಢವಾಗಿದ್ದ ಸಾಂಪ್ರದಾಯಗಳನ್ನು ಹಾಗೆಯೇ ಮುಂದುವರಿಸಲಾಯಿತು. ಹೀಗಾಗಿ ಕನ್ನಡದ ಬಗೆಗೆ ಇಲ್ಲಿ ಆಸ್ಥೆಯಾಗಲಿ ಉತ್ಸಾಹವಾಗಲಿ ಕಂಡು ಬರುತ್ತಿರಲಿಲ್ಲ. ಒಂದು ನೂರು ವರುಷದ ಹಿಂದೆ ಧಾರವಾಡದಲ್ಲಿ ಕನ್ನಡದ ಪರಿಸ್ಥಿತಿಯು ತುಂಬ ಶೋಚನೀಯವಾಗಿತ್ತು. ಈ ಭಾಗದಲ್ಲಿ ರಾಜಕೀಯ ವಿಪ್ಲವದ ಕಿಡಿಯು ಕಿತ್ತೂರ ಚೆನ್ನಮ್ಮನಿಂದಾಗಿ ೧೮೨೪ರಲ್ಲಿಯೇ ಹೊರಹೊಮ್ಮಿತ್ತು ನಿಜ. ಮರಾಠರಿಂದ ಬ್ರಿಟಿಷರ ಹಸ್ತಾಂತರ ಪಡೆದ ಕರ್ನಾಟಕದ ಈ ಭಾಗದಲ್ಲಿ ನೆಮ್ಮದಿ ನೆಲೆಸಲು ಕೆಲವೊಂದು ಅವಧಿಯೂ ಬೇಕಾಗಿತ್ತು. ಅಲ್ಲದೆ, ಶಿಕ್ಷಣ, ಸಾಂಸ್ಕೃತಿಕ ರಂಗಗಳಲ್ಲಿ ಕರ್ನಾಟಕವು ಇನ್ನೂ ಕಣ್ದೆರೆಯದಂತಹ ಗಾಢಾಂಧಕಾರದಲ್ಲಿ ಉಳಿದ ಸಂದರ್ಭ ಸನ್ನಿವೇಶವೂ ಆಗ ಕಂಡು ಬರುತ್ತಿತ್ತು.

ಪರಿಸ್ಥಿತಿಯು ಹಾಗಿರುವಾಗ ಕನ್ನಡದ ಪೋಷಣೆಯು ಕಠಿಣವಾದ ಕಾರ್ಯವೂ ಆಗಿತ್ತು. ಇಂಥಹ ವಿಷಮ ಪರಿಸ್ಥಿತಿಯಲ್ಲಿ ಈ ಭಾಗದಲ್ಲಿ ಕನ್ನಡವನ್ನುದ್ಧರಿಸಿದ ಪುಣ್ಯ ಪುರುಷರ ಒಂದು ಚಿಕ್ಕಪಡೆ ಆಗ ಸಿದ್ಧವಾಗಬೇಕಾಯಿತು. ಅಂತಹ ಪಡೆಯು ಸಿದ್ಧವಾಗುವಂತೆ ಕ್ಷೇತ್ರವನ್ನು ಹದಗೊಳಿಸುವ, ಪ್ರೇರಕ ಶಕ್ತಿಯನ್ನು, ಜಾಗ್ರತಿಯನ್ನು, ಗತಿಶೀಲ ಸಂಘಟನೆಯನ್ನು ಒದಗಿಸುವ ಕಾರ್ಯವನ್ನು 'ಕನ್ನಡದ ಹುಲಿ' ಡೆಪ್ಯೂಟಿ ಚೆನ್ನಬಸಪ್ಪನವರು ಅಂದು ಕೈಗೊಂಡರು. ಇಂದಿಗೆ ಒಂದು ನೂರು ವರುಷಗಳ ಹಿಂದೆ ಡೆಪ್ಯೂಟಿ ಚೆನ್ನಬಸಪ್ಪನವರು ಧಾರವಾಡದಲ್ಲಿ ಹಚ್ಚಿದ ಕನ್ನಡದ ದೀಪವು ಇಂದು ಅದೆಷ್ಟು ಪ್ರಕಾಶಮಾನವಾಗಿದೆಯೆಂಬುದು ನಮಗೆಲ್ಲ ತಿಳಿದ ಮಾತಾಗಿದೆ.

ಮುಂಬಯಿಯಲ್ಲಿ ವಿದ್ಯಾಖಾತೆ ಆರಂಭವಾದುದು ೧೮೩೩ರಲ್ಲಿ. ಆದರೆ ಕರ್ನಾಟಕದ ಈ ವಿಭಾಗದಲ್ಲಿ ಶಾಲೆಗಳು ಆರಂಭವಾದುದು ೧೮೩೬ರಲ್ಲಿ. ಶಾಲೆಗ

ಳೇನೋ ಆರಂಭವಾದವು. ಆದರೆ ಇಲ್ಲಿಯ ಜನತೆಯ ಭಾಷೆಯಾದ ಕನ್ನಡವನ್ನು ಬಿಟ್ಟುಕೊಟ್ಟು ಮರಾಠಿ ಭಾಷೆಯನ್ನು ಆ ಶಾಲೆಗಳಲ್ಲಿ ಕಲಿಸಲಾಗುತ್ತಿತ್ತು. ಸಾರ್ವಜನಿಕ ಜೀವನದಲ್ಲಿ ಮರಾಠಿಯನ್ನೇ ಬಳಸಲಾಗುತ್ತಿತ್ತು. ಇಲ್ಲಿಯ ಜನತೆಯ ಭಾಷೆ ಕನ್ನಡವೆಂದು ಸರಕಾರಕ್ಕೆ ತಿಳಿದು ಬಂದದ್ದು ೧೮೬೨ರಲ್ಲಿ. ಆ ಕಾಲದ ವಿಚಿತ್ರ ಮತ್ತು ವಿಷಮ ಪರಿಸ್ಥಿತಿಯನ್ನು ರಸೆಲ್ ಎಂಬ ಈ ವಿಭಾಗದ ವಿದ್ಯಾಧಿಕಾರಿಯ ವರದಿಯು ಮಾರ್ಮಿಕವಾಗಿ ಆದರೆ ವಾಸ್ತವಿಕವಾಗಿ ಚಿತ್ರಿಸುತ್ತಿದೆ. ಆಗ ಇಲ್ಲಿ ಶಿಕ್ಷಕರು, ಶಿಕ್ಷಣದ ಮೇಲ್ವಿಚಾರಕರು ಕನ್ನಡಿಗರಾಗಿರಲಿಲ್ಲ; ಶಾಲೆಗಳಲ್ಲಿ ಕನ್ನಡವನ್ನು ಕಲಿಸುತ್ತಿರಲಿಲ್ಲ ಎಂಬ ಮಾತುಗಳು ರಸೆಲ್‌ರ ವರದಿಯಲ್ಲಿವೆ. ಈ ವರದಿ ರಚನೆಗೆ ಚೆನ್ನಬಸಪ್ಪನವರೂ ಕಾರಣರಾಗಿರಬೇಕು. ಕನ್ನಡವನ್ನು ಕಲಿಸಲು ಆರಂಭಿಸಿದಾಗ ಕನ್ನಡ ಪುಸ್ತಕಗಳೂ ಇರಲಿಲ್ಲವೆಂಬೇ ಅಲ್ಲದೆ ಕನ್ನಡದಲ್ಲಿ ಪುಸ್ತಕ ಭಾಷಾಂತರಿಸಲು ನೇಮಿಸಿದ ಧಾರವಾಡದ ಅಧಿಕಾರಿಯು ಮರಾಠಿ ಭಾಷಿಕನಾಗಿದ್ದು ಅವನಿಗೆ ಕನ್ನಡವು ಬರುತ್ತಿರಲಿಲ್ಲವೆಂದೂ ವೆಂಕಟರಂಗೋ ಕಟ್ಟಿಯವರು ಬರೆದಿದ್ದಾರೆ. ಅಂತು ಇಲ್ಲಿಯ ಜನಜೀವನದ ಭಾಷೆಯು ಮರಾಠಿಯೇ ಆಗಿರಬೇಕೆಂಬ ಭ್ರಮೆ ಆಗ ಸಂಪೂರ್ಣವಾಗಿ ನೆಲಸಿತ್ತು. ಇಲ್ಲಿಯ ಜನತೆಯೂ ಅದನ್ನು ಪ್ರತಿಭಟಿಸಲು ಮುಂದಾಗಿರಲಿಲ್ಲ. ರಸೆಲ್‌ರ ಮೂಲಕ ಈ ಪರಿಸ್ಥಿತಿಯನ್ನು ಮಾರ್ಪಡಿಸಲು ಹೆಣಗಿದ ಧೀರರೇ ಡೆಪ್ಯೂಟಿ ಚೆನ್ನಬಸಪ್ಪನವರು.

ಅವರು ೧೮೩೩ರಲ್ಲಿ ಧಾರವಾಡದಲ್ಲಿ ಜನ್ಮ ತಳೆದರು. ಬಾಲ್ಯದಲ್ಲಿಯೇ ತಂದೆಯನ್ನು ಕಳೆದುಕೊಂಡರು. ಬಡತನವನ್ನು ಎದುರಿಸಿಯೂ ಶಿಕ್ಷಣದಲ್ಲಿ ಮುಂದುವರಿಯುವ ಸಾಹಸ ಕೈಗೊಂಡರು. ಹಳೆಯ ಪದ್ಧತಿಯ ಅಯ್ಯನವರ ಶಾಲೆಯಲ್ಲಿ ಪ್ರಾಥಮಿಕ ಶಿಕ್ಷಣ ಪೂರೈಸಿದರು. ಕಾಲುನಡಿಗೆಯಿಂದಲೆ ಪುಣೆಗೆ ಪ್ರಯಾಣ ಬೆಳೆಸಿ ಅಲ್ಲಿಯ ಒಬ್ಬ ಸದ್ಗೃಹಸ್ಥನ ನೆರವಿನಿಂದ ಇಂಗ್ಲಿಷ್ ಶಿಕ್ಷಣವನ್ನು ಪ್ರಾರಂಭಿಸಿ ಉಚ್ಚ ಶಿಕ್ಷಣ ಪಡೆದರು ಅವರು. ೧೮೫೫ರ ವರೆಗೆ ಪುಣೆಯಲ್ಲಿ ತಮ್ಮ ಶಿಕ್ಷಣವನ್ನು ಮುಂದುವರಿಸಿದರು. ಅವರು ಮೇಧಾವಿಯಾದ ವಿದ್ಯಾರ್ಥಿಯಾಗಿದ್ದು ಇಂಜನಿಯರಿಂಗ್ ಕಾಲೇಜಿನಲ್ಲಿ ಶಿಕ್ಷಣ ಪೂರೈಸಿ ಅಲ್ಲಿಯೇ ಕೆಲಕಾಲ ಅಧ್ಯಾಪಕರಾಗಿಯೂ ಕೆಲಸ ಮಾಡಿದರು. ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಇಂಗ್ಲೆಂಡಿಗೆ ಕಳಿಸಬೇಕಾಗಿದ್ದ ಐದು ಜನ ಭಾರತದ ವಿದ್ಯಾರ್ಥಿಗಳಲ್ಲಿ ಅವರೂ ಒಬ್ಬರಾಗಿದ್ದರು. ಆದರೆ ಆ ಯೋಜನೆಯು ಕಾರ್ಯರೂಪಕ್ಕೆ ಬರಲಿಲ್ಲ. ೧೮೫೫ರಲ್ಲಿ ಧಾರವಾಡಕ್ಕೆ ಮರಳಿ ಬಂದ ಅವರು ಕೆಲ ಕಾಲ ಪೋಸ್ಟ್ ಖಾತೆಯಲ್ಲಿ ಸೇರ್ಪಡೆ ಹೊಂದಿದ್ದರು. ಮುಂದೆ ಶಿಕ್ಷಣ ಖಾತೆಯನ್ನು ಸೇರಿ ೧೮೫೭ರಲ್ಲಿ ಆಗ ಧಾರವಾಡದಲ್ಲಿ ಸ್ಥಾಪಿತವಾದ 'ನಾರ್ಮಲ್ ಕ್ಲಾಸ್' ಎಂಬ ಸಂಸ್ಥೆಯ ಹೆಡ್ ಮಾಸ್ತರರಾದರು. ಆ "ನಾರ್ಮಲ್ ಕ್ಲಾಸ್" ಸಂಸ್ಥೆಯೇ ೧೮೫೭ರಲ್ಲಿ ಟ್ರೈನಿಂಗ್ ಕಾಲೇಜ್ ಆಗಿ ಮಾರ್ಪಟ್ಟಿತು. ಚನ್ನಬಸಪ್ಪನವರು ಆ ಕಾಲೇಜಿನ

ಪ್ರಥಮ ಪ್ರಿನ್ಸಿಪಾಲರಾಗಿ ನೇಮಕಗೊಂಡರು. ಈ ಮೊದಲೇ ಡೆಪ್ಯೂಟೀ ಎಜ್ಯುಕೇಷನಲ್ ಇನ್‌ಸ್ಪೆಕ್ಟರ್ ಆಗಿ ಕೆಲಸ ಮಾಡಿದ ಅವರು ೧೮೬೭ರಲ್ಲಿ ಮತ್ತೆ ಆ ಕೆಲಸ ಕೈಗೊಂಡು ತಮ್ಮ ಜೀವನದ ಕೊನೆಯವರೆಗೆ ಆ ಸ್ಥಾನದಲ್ಲಿದ್ದೇ ಸೇವೆ ಸಲ್ಲಿಸಿದರು. ಅಂತೆಯೇ ಅವರ ಅಡ್ಡ ಹೆಸರು 'ಧಾರವಾಡ' ಎಂದಿದ್ದರೂ ಡೆಪ್ಯೂಟಿ ಎಂಬ ಹೆಸರಿನಿಂದಲೇ ಪ್ರಸಿದ್ಧಿ ಪಡೆದಿದ್ದಾರೆ. ೧೮೮೧ರಲ್ಲಿ ಧಾರವಾಡದಲ್ಲಿ ಅವರು ತಮ್ಮ ಇಹಲೋಕದ ಯಾತ್ರೆಯನ್ನು ಮುಗಿಸಿದರು.

ಅವರ ಸಾಹಸಗುಣ, ಸಚ್ಛೀಲ, ವಿದ್ಯಾಪ್ರೇಮ, ನಿಸ್ಪೃಹಸ್ವಭಾವ, ದಯಾಳುಗುಣ ಅವುಗಳಿಂದಾಗಿ ಚನ್ನಬಸಪ್ಪನವರು ಆ ಕಾಲದ ವರ್ಚಸ್ವೀ ಹಾಗೂ ಜನಪ್ರಿಯ ನಾಯಕರಾಗಿದ್ದರು. ಅವರು ಒಳ್ಳೆಯ ವ್ಯಾಸಂಗಿಗಳೂ ಆಗಿದ್ದರು. ತತ್ವಜ್ಞಾನ, ಶಾಸ್ತ್ರೀಯ ವಿಷಯ ಇವುಗಳ ಕಡೆಗೇ ಹೆಚ್ಚು ಗಮನ ಕೊಡುತ್ತಿದ್ದರು. ಅವರ ವ್ಯಕ್ತಿತ್ವ ಮೋಹಕ, ಧ್ವನಿ ಗಂಭೀರ. ಅವರು ಆ ಕಾಲದ ಶ್ರೇಷ್ಠ ವಾಗ್ಮಿಗಳೂ ಆಗಿದ್ದರು. ತಮ್ಮ ಪರಿಣಾಮಕಾರಕವಾದ ವಕ್ತೃತ್ವದಿಂದ ಅವರು ಜನರನ್ನು ಜಾಗೃತಗೊಳಿಸಿದರು. ಹಳ್ಳಿಹಳ್ಳಿಗಳನ್ನು ತಿರುಗಿ ಭಾಷಣ ಮಾಡಿ ಕನ್ನಡದ ಬಗೆಗೆ ಜನರಲ್ಲಿ ಆಸ್ಥೆಯನ್ನು, ಪ್ರೇಮವನ್ನು ಉಂಟು ಮಾಡಿದರು. ಕನ್ನಡ ಪ್ರಾಥಮಿಕ ಶಾಲೆಗಳಿಗೆ ಮಕ್ಕಳನ್ನು ಕಳಿಸಬೇಕೆಂಬ ಪ್ರಚಾರವನ್ನೂ ಚನ್ನಬಸಪ್ಪನವರು ಕೈಗೊಂಡು ಯಶಸ್ವಿಯಾದರು. ಬಿ. ಎಂ. ಶ್ರೀ ಅವರ ಕಾಲದ ಕನ್ನಡಾಭಿಮಾನದ ತಳಹದಿಗೆ ಚನ್ನಬಸಪ್ಪನವರೇ ಕಾರಣ.

ಅವರಿಗಿದ್ದ ಕನ್ನಡದ ಅಭಿಮಾನ ಅಪಾರ. ಅಂದಿನ ಕಾಲದಲ್ಲಿ ಕನ್ನಡಿಗರಿಗೆ ತಾವು ಕನ್ನಡಿಗರೆಂಬ ಅರಿವೇ ಇದ್ದಿರಲಿಲ್ಲ. ಶಿಕ್ಷಣ ರಂಗದಲ್ಲಿ, ವ್ಯಾಪಾರೀ ರಂಗದಲ್ಲಿ, ಸಾರ್ವಜನಿಕ ಜೀವನದಲ್ಲಿ, ಆಡಳಿತೆಯ ಕ್ರಮದಲ್ಲಿ ಕನ್ನಡದ ಬಗೆಗಿದ್ದ ಅನಾಸ್ಥೆಯನ್ನು ಹೊಡಮೋಡಿಸಲು ಚನ್ನಬಸಪ್ಪನವರು ಧೀರರಾಗಿ ಹೋರಾಡಬೇಕಾಯಿತು. ಕನ್ನಡದಲ್ಲಿ ಮಾತನಾಡಲು, ಕನ್ನಡದಲ್ಲಿ ಅಂಕಿ, ಮಗ್ಗಿ ಹೇಳಲು; ಕನ್ನಡ ಅಕ್ಷರಗಳನ್ನು ಬರೆಹದಲ್ಲಿ ಬಳಸಲು, ಕನ್ನಡದಲ್ಲಿ ಸಹಿ ಮಾಡಲು ಅವರು ಧಿಟ್ಟತನದಿಂದ ಜನರನ್ನು ಒತ್ತಾಯಿಸಿದರು. ಡೆಪ್ಯೂಟೀ ಎಜ್ಯುಕೇಷನಲ್ ಇನ್‌ಸ್ಪೆಕ್ಟರ್ ಅಧಿಕಾರವನ್ನು ಈ ದಿಸೆಯಲ್ಲಿ ಅವರು ಉಪಯೋಗಿಸಿಕೊಳ್ಳಬೇಕಾಯಿತು. ಬೆದರಿಕೆ, ಚುಚ್ಚುಮಾತು, ನೈತಿಕ ಪ್ರಭಾವ, ಮನವೊಲಿಸುವಿಕೆ ಇವೆಲ್ಲ ಸಾಧನಗಳಿಂದ ಅವರು ಕನ್ನಡದ ಬಗೆಗೆ ಅರಿವಿನ ಎಚ್ಚರವನ್ನು ಮಾಡಿಸಲು ಹೆಣಗಿದರು. ಅಂತಹ ಅರಿವಿನ ಎಚ್ಚರವನ್ನು ಈ ಭಾಗದಲ್ಲಿ ಅಂದು ಅವರು ಮೂಡಿಸದೆ ಹೋಗಿದ್ದರೆ ಇಂದು ಧಾರವಾಡವು ಕನ್ನಡದ ಜಾಗೃತ ಸ್ಥಾನವಾಗುವುದು ಸಾಧ್ಯವಿರಲಿಲ್ಲ. ಈ ಮಾತನ್ನು ಮನವಂದು ೧೯ನೆಯ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಚನ್ನಬಸಪ್ಪನವರ ಸ್ಥಾನವನ್ನು ನಾವು ಅರಿತುಕೊಳ್ಳಬೇಕಾಗುತ್ತಿದೆ.

ಕನ್ನಡದ ಬಗೆಗೆ ಪ್ರೇಮ ಆಸಕ್ತಿಗಳನ್ನು ಅವರು ಬೆಳೆಸಹತ್ತಿದಾಗ ಪಠ್ಯಪುಸ್ತಕಗಳ ಅಭಾವವೂ ಇತ್ತು. ಈ ಕೊರತೆಯನ್ನು ನೀಗಿಸಲು ಅವರು ತಾವೇ ಮುಂದಾದರು. ಸಮರ್ಥಲೇಖಕರನ್ನು ಹುಡುಕಿ, ಕಲೆಹಾಕಿ, ಸಂಘಟನೆಮಾಡಿ ಅಂದು ಬೇಕಾದ ಕನ್ನಡ ಪಠ್ಯಗ್ರಂಥಗಳನ್ನು ಒದಗಿಸಿದರು. ಅವರು ಸ್ವತಃ ಗಣಿತ ವಿಷಯವನ್ನು ಕುರಿತು ಎರಡು ಪಠ್ಯಪುಸ್ತಕಗಳನ್ನು ಬರೆದರು. ಕನ್ನಡದಲ್ಲಿ ಅಭಿಮಾನ ತೋರಿ, ಕನ್ನಡ ಪಠ್ಯಪುಸ್ತಕಗಳನ್ನು ಬರೆಯಲು ಮುಂದೆ ಬಂದವರನ್ನು ಅವರು ಪ್ರೋತ್ಸಾಹಿಸುತ್ತಿದ್ದರು. ಅಲ್ಲದೆ ಅಂತಹರಿಗೆ ತಮ್ಮ ಅಧಿಕಾರ ಕ್ಷೇತ್ರದಲ್ಲಿ ಶಿಕ್ಷಕರ ಜಾಗೆಗಳನ್ನು ಒದಗಿಸಿದರು. ಅಂತಹರಲ್ಲಿ; ಗಂಗಾಧರ ಮಡಿವಾಳೇಶ್ವರ ತೂರಮರಿ, ವೆಂಕಟರಂಗೋಕಟ್ಟಿ, ಶಾಂತವೀರ ರಾಚಿದೇವ ಕಿತ್ತೂರ, ಶೇಷೋ ರಾಮಚಂದ್ರ ತೂರಮರಿ, ವೀರಭದ್ರ ಮಡಿವಾಳೇಶ್ವರ ಪಂಡಿತ, ಭುಜಂಗರಾವ ಹುಯಿಲಗೋಳ – ಈ ಹೆಸರುಗಳನ್ನು ಇಲ್ಲಿ ಉಲ್ಲೇಖಿಸಬಹುದು. ಇವರೆಲ್ಲ ಆ ಕಾಲದಲ್ಲಿ ಕನ್ನಡವು ಬಾಳಿಬೆಳೆಯಲು ಮಹತ್ವದ ಸೇವೆಯನ್ನು ಸಲ್ಲಿಸಿದ ಪುರೋಗಾಮಿಗಳಾಗಿದ್ದಾರೆ. ಇವರೆಲ್ಲರಿಗೆ ಚೆನ್ನಬಸಪ್ಪನವರು ಸ್ಫೂರ್ತಿಯ, ಶಕ್ತಿಯ ಕೇಂದ್ರವಾಗಿದ್ದರು. ಈ ದೃಷ್ಟಿಯಿಂದಲೂ ಚೆನ್ನಬಸಪ್ಪನವರ ಕನ್ನಡದ ಸೇವೆಯನ್ನು ಕರ್ನಾಟಕ ಚರಿತ್ರೆಯಲ್ಲಿ ಉಲ್ಲೇಖಿಸಬೇಕಾಗಿದೆ. ತೂರಮರಿ ಶೇಷಗಿರಿರಾಯರು ತಮ್ಮ ವಿದ್ಯಾಗುರುಗಳಾದ ಡೆಪ್ಯೂಟಿ ಚೆನ್ನಬಸಪ್ಪನವರ ಬಗೆಗೆ ತೋರಿದ ಆದರದ ಭಕ್ತಿಯು ಕೆಳಗಿನ ಪದ್ಯದಿಂದ ಸ್ಪಷ್ಟವಾಗುತ್ತಿದೆ :

ಕಡು ಗುರುಭಕ್ತಿಯಿಂ ತುರಮರೀತ್ಯುಪನಾಮಕ ರಾಮಚಂದ್ರಜಂ ।
ಜಡಮತಿ ಕಬ್ಬಿ ಶೇಷಗಿರಿಯೆಂಬವನೀಕೃತಿಗೈದು ಮಾಡಿದಂ ॥
ಬಡವರ ವಿದ್ಯೆಗಾಗಿ ತನುವಿಂ ಮನದಿಂ ಧನದಿಂದೆ ಸಾಹಸಂ ।
ಬಡುತಿಹ ಧೀರ ಚೆನ್ನಬಸವೇಶ್ವರ ದಿವ್ಯರ ಪಾದಭೂಷಣಂ ॥

ತನುಮನ – ಧನದಿಂದ ಕನ್ನಡ ವಿದ್ಯಾಪ್ರಸಾರದ ಕಾರ್ಯವನ್ನು ಚೆನ್ನಬಸಪ್ಪನವರು ಅಂದು ಸಾಧಿಸಿದರು. ಅಂದಿನ ಆ ಪ್ರಾಥಮಿಕ ವಿದ್ಯಾಪ್ರಸಾರವು ಇಂದು ಧಾರವಾಡದಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯವೆಂಬ ವೃಕ್ಷವು ಬೆಳೆದು ಬರಲು ಬೀಜರೂಪವಾಗಿ ಪರಿಣಮಿಸಿತು. ಆ ಬೀಜಗಳಿಗೆ ಧಾರವಾಡದ ಟ್ರೈನಿಂಗ್ ಕಾಲೇಜ್ ಒಳ್ಳೆಯ ಕ್ಷೇತ್ರವನ್ನು ಒದಗಿಸಿತು. ಆಗ ಟ್ರೈನಿಂಗ್ ಕಾಲೇಜ್ ಹೊಸಗನ್ನಡ ವಾಙ್ಮಯ ರಚನೆಯ ಅಭ್ಯಾಸದ ಪ್ರಸಾರ ಕೇಂದ್ರಬಿಂದುವಾಗಿತ್ತು. ಆ ಟ್ರೈನಿಂಗ್ ಕಾಲೇಜಿನ ಕಟ್ಟಡದಲ್ಲಿಯೇ ಕರ್ನಾಟಕ ವಿಶ್ವವಿದ್ಯಾನಿಲಯವು ತನ್ನ ಕಾರ್ಯವನ್ನು ಆರಂಭಿಸಿದುದು ಅರ್ಥ ಪೂರ್ಣ ಘಟನೆಯೆಂದೇ ತಿಳಿಯಬೇಕಾಗಿದೆ.

ಚೆನ್ನಬಸಪ್ಪನವರ ಪ್ರೋತ್ಸಾಹದಿಂದ ಅಂದು ಕನ್ನಡ ಗ್ರಂಥಕರ್ತರ, ಕಾರ್ಯಕರ್ತರ ಒಂದು ಪಡೆಯೇ ಸಿದ್ಧವಾಯಿತು. ಅವರೆಲ್ಲ ಮುಂದೆ ಕನ್ನಡಕ್ಕೆ

ಬಗೆಬಗೆಯ ಸೇವೆ ಸಲ್ಲಿಸಿದರು. ಇದಲ್ಲದೆ ರೆವ್ಹರೆಂಡ ಕಿಟ್ಟೆಲ್ಲರ ಎಂಬುವರ ಸಂಪರ್ಕವನ್ನು ಚೆನ್ನಬಸಪ್ಪನವರು ಬೆಳೆಯಿಸಿಕೊಂಡರು. ಹಾಗು ಅವರು ಇಂಗ್ಲಿಷ-ಕನ್ನಡ ನಿಘಂಟನ್ನು ರಚಿಸುವಲ್ಲಿ ಪ್ರೋತ್ಸಾಹನವನ್ನೂ, ನೆರವನ್ನೂ ನೀಡಿದರು. ಹೀಗೆ ಚನ್ನಬಸಪ್ಪನವರು ವ್ಯಾಸಂಗ ದೃಷ್ಟಿಯಿಂದ ಪ್ರಯೋಜನಕಾರಿಯಾದ ವಿಖ್ಯಾತ ಕಿಟ್ಟೆಲ್ಲರ ಡಿಕ್ಶನರಿಯ ರಚನೆಗೂ ಕಾರಣರಾದುದು ಮಹತ್ವದ ಸಂಗತಿಯಾಗಿದೆ. ಇಲ್ಲಿ ಇನ್ನೂ ಒಂದು ಮಹತ್ವದ ಸಂಗತಿಯನ್ನು ಉಲ್ಲೇಖಿಸಬಹುದು. ಈ ಭಾಗದಲ್ಲಿ ಶಾಂತಕವಿಗಳು ಮಾಡಿದ ಕನ್ನಡದ ಪ್ರಸಾರದ ಕಾರ್ಯ ಈ ಶತಮಾನದ ಸಾಹಿತ್ಯ ಚರಿತ್ರೆಯಲ್ಲಿ ಮಹತ್ವದ್ದಾಗಿದೆ. ಶಾಂತಕವಿಗಳು, ಶಾಂತವೀರ ರಾಚಿದೇವ ಕಿತ್ತೂರ ಎಂಬವರ ಶಿಷ್ಯರಾಗಿದ್ದರು. ಗುರುಭಕ್ತಿಯನ್ನು ತೋರಿಸಲು ಬಾಳಾಚಾರ್ಯ ಸಕ್ಕರಿಯವರು ಶಾಂತಕವಿಯೆಂಬ ಕಾವ್ಯನಾಮವನ್ನಿಟ್ಟುಕೊಂಡರು. ಈ ಶಾಂತವೀರ ರಾಚಿದೇವ ಕಿತ್ತೂರ ಅವರು ಡೆಪ್ಯೂಟಿ ಚೆನ್ನಬಸಪ್ಪನವರ ಆಶ್ರಯದ ವಲಯಕ್ಕೆ ಸೇರಿದವರಾಗಿದ್ದರು. ಅರ್ಥಾತ್ ಶಾಂತಕವಿಗಳ ಕನ್ನಡದ ನಿಸ್ಸೀಮ ಪ್ರೇಮದ ಸ್ಫೂರ್ತಿಯ ಮೂಲದಲ್ಲಿ ಡೆಪ್ಯೂಟಿ ಚೆನ್ನಬಸಪ್ಪನವರ ಸಂಬಂಧವೂ ಇದೆ. ಅರ್ಥಾತ್ ಈ ಶತಮಾನದ ಉತ್ತರಾರ್ಧದಲ್ಲಿ ನಡೆದ ಕನ್ನಡದ ಜಾಗೃತಿಯ ಆದಿಪುರುಷರೇ ಚೆನ್ನಬಸಪ್ಪನವರಾಗಿದ್ದಾರೆ. ಕನ್ನಡ ಶಿಕ್ಷಣ, ವಾಙ್ಮಯ ಪ್ರಸಾರದ ಅಧ್ವರ್ಯುಗಳಾಗಿ ಕಾರ್ಯಸಂಘಟನೆಯನ್ನು ಕೈಕೊಂಡು ಸ್ಫೂರ್ತಿಯನ್ನು ಒದಗಿಸಿ ಹೋರಾಟ ನಡೆಯಿಸಿ ಇಂದಿನ ಕನ್ನಡ ಸಾಹಿತ್ಯದ ಬೆಳಸಿಗೆ ಪೂರ್ವಸಿದ್ಧತೆಯನ್ನು ನಡೆಯಿಸಿದ ಪುರೋಗಾಮಿಗಳೆಂದು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಚನ್ನಬಸಪ್ಪನವರ ಹೆಸರನ್ನು ಉಲ್ಲೇಖಿಸಬೇಕಾಗಿದೆ. 'ದಕ್ಷಿಣ-ಮಹಾರಾಷ್ಟ್ರ' ಎಂಬ ಅನುಚಿತ ನಾಮಧೇಯವನ್ನು ಪಡೆದ ಜಿಲ್ಲೆಗಳಲ್ಲಿ ಧಾರವಾಡವು ಸಂಪೂರ್ಣ ಕನ್ನಡದ್ದಾಗಿ ಉಳಿದುಬಂದುದರ ಶ್ರೇಯಸ್ಸು ಚೆನ್ನಬಸಪ್ಪನವರಿಗೆ ಸಲ್ಲಬೇಕಾಗಿದೆ.

ಜನಜಾಗ್ರತಿ, ಕನ್ನಡ ಭಾಷಾಸೇವೆ, ಶಿಕ್ಷಣ ಪ್ರಸಾರ, ಗ್ರಂಥರಚನೆ, ಗ್ರಂಥ ಪ್ರಚಾರ, ವಿದ್ಯಾಪೋಷಣೆ, ಪ್ರತಿಕೂಲ ಪರಿಸ್ಥಿತಿಯಲ್ಲಿ ಪ್ರಭಾವಶಾಲಿಯಾದ ಹೋರಾಟ ಇತ್ಯಾದಿ ಕಾರ್ಯಗಳಲ್ಲಿ ನಿರತರಾಗಿದ್ದ ಚೆನ್ನಬಸಪ್ಪನವರು ಕನ್ನಡ ಗ್ರಂಥ ಕರ್ತರ ನಿರ್ಮಾಪಕರೂ ಆಗಿದ್ದರು. ಅಲ್ಲದೆ ಅವರು 'ಕಾಮಿಡಿ ಆಫ್ ಎರರ್ಸ್' ಮತ್ತು 'ಮ್ಯಾಕ್ಬೆಥ್' ಎಂಬ ಷೇಕ್ಸ್ಪಿಯರನ ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿದರು.

ಪ್ರಭಾವಶಾಲಿ ವ್ಯಕ್ತಿಗಳ ಹೆಸರಿನಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯ ವಿಭಾಗಗಳನ್ನು ನಾವು ಇಟ್ಟುಕೊಳ್ಳುವುದಾದರೆ ೧೮೮೦ರಿಂದ ಮುಂದಿನ ಅರವತ್ತು ವರುಷಗಳ ಅವಧಿಯನ್ನು ಡೆಪ್ಯೂಟೀ ಚೆನ್ನಬಸಪ್ಪನವರ ಯುಗವೆಂದು ಕರೆಯಬೇಕಾಗುತ್ತದೆ. ೧೯೨೦ರ ಹೊಸಗಾಳಿ ನಮ್ಮ ಸಾಹಿತ್ಯರಂಗದಲ್ಲಿ ಬೀಸುವವರೆಗಿನ ಕಾಲ ಈ ಯುಗದಲ್ಲಿ ಸೇರ್ಪಡೆಯಾಗುತ್ತಿದೆ. 

# ಭಾರತೀಯ ಚಿತ್ರಕಲೆ



**ಶ್ರೀ ಬಿ. ಎಸ್. ಗೌಡ,** ಕಲಾವಿದ (ಶಾಂತಿನಿಕೇತನ)

**ಜ**ಗತ್ತು ಹುಟ್ಟಿದಂದಿನಿಂದ ಮಾನವ ಸಂಸ್ಕೃತಿ ಸಂಸ್ಕಾರದ ಇತಿಹಾಸದಲ್ಲಿ ಅನೇಕ ಪರಿಳಿತಗಳು ಬಂದಿವೆ. ಆಯಾ ಕಾಲದ ನಾಗರಿಕತೆ ಮತ್ತು ಸಂಸ್ಕೃತಿ ಸಂಸ್ಕಾರವನ್ನು ಅಳೆಯಲು ಕಲೆ ಮತ್ತು ಸಾಹಿತ್ಯ ಮಾನದಂಡಗಳೆಂದು ನಿಸ್ಸಂದೇಹ ವಾಗಿ ಹೇಳಬಹುದು. ಸಾಹಿತ್ಯಕ್ಕಿಂತಲೂ ಮೊದಲು ಕಲೆ ಹುಟ್ಟಿತೆಂದು ನನ್ನ ಮನ ವರಿಕೆಯಾಗಿದೆ. ನಿಸರ್ಗವೇ ಕಲಾಮಯವಾಗಿರುವಾಗ ನಿಸರ್ಗದಲ್ಲಿ ಹುಟ್ಟಿ ಬೆಳೆ ಯುವ ಮಾನವ ಕಲೆಯು ಇದರಿಂದಾದರೂ ಇರಬಲ್ಲುದೆ? ನಿಸರ್ಗದಲ್ಲಿ ಹುಟ್ಟಿ ಬೆಳೆ ಯುವ ಮಾನವನು ನಿಸರ್ಗದಿಂದಲೇ ಕಲಿಸಲ್ಪಡುವನೆಂದು ನಂಬಲಾಗಿದೆ. ಮನು ಷ್ಯನು ಸಾಹಿತಿಯಲ್ಲದಿದ್ದಾಗ ಕಲಾಮಯ ಜೀವಿಯಾಗಿದ್ದನು. ಅದರ ಸಂಗಡವೇ ಸಂಸ್ಕಾರ ಬೆಳೆದು ಬಂತು. ಇವೆರಡೂ ಬೇರೆ ಬೇರೆ ಎನ್ನದಷ್ಟು ಹೊಂದಿಕೊಂಡು ಇದ್ದವು. ಎಂದರೆ: ಅವನ ಜೀವನದಲ್ಲಿ ಸಂಸ್ಕಾರ ಮತ್ತು ಕಲೆ ಬೆರೆತು ಹೋಗಿದ್ದವು. ಸಂಸ್ಕಾರವು ಜೀವನವಾದರೆ ಕಲೆಯು ಭಾವವಾಗಿತ್ತು. ನೃತ್ಯ, ಸಂಗೀತ, ಶಿಲ್ಪ, ವಾಸ್ತು, ಚಿತ್ರ ಮತ್ತು ಸಾಹಿತ್ಯ ಇವು ಧರ್ಮ ಪ್ರೇರಿತವಾದ ಸಂಸ್ಕಾರಗಳ ಅಂಗ ವಾಗಿಯೇ ಹುಟ್ಟಿದವು. ಕೇವಲ ಇತ್ತೀಚಿನ ಜೀವನದಲ್ಲಿ ಬೇರೆ ಬೇರೆಯಾಗುತ್ತ ಬಂದುವು. ಮತ-ಧರ್ಮಗಳು ಬೇರೆಯಾಗಿ ಕಾಣಿಸುತ್ತಿದ್ದರೂ ಕಲೆಗಳನ್ನಳೆಯು ವಾಗ, ಅವು ಆಯಾಕಾಲದ ಜನತೆಯ ಸಂಸ್ಕೃತಿ ಸಂಸ್ಕಾರಗಳ ಸೂಚಿಯೆಂದೇ ಹೇಳ ಬೇಕು. ಇಂಥ ಮಹತ್ವದ ಕಲೆಗಳಲ್ಲೊಂದಾದ ಚಿತ್ರ ಕಲೆಯ ಬಗ್ಗೆ ವಿಚಾರಿಸೋಣ.

ಹಕ್ಕಿಗಳು ಎಂದರೆ ಕೋಗಿಲೆ, ಭ್ರಮರ ಇವುಗಳು ಹಾಡುವುದನ್ನು ಕೇಳಿ ಮಾನವನು ತನ್ನ ಸಂತೋಷದಲ್ಲಿ ಹಾಡಿದ, ನವಿಲು ಇನ್ನಿತರ ಪ್ರಾಣಿಗಳು ಕುಣಿ ದಂತೆ, ಸಂತೋಷದಲ್ಲಿ ಕುಣಿದ. ಆದರೆ ಕಲೆಯು ಅವಶ್ಯ ಬಿದ್ದಾಗ ತಾನು ನೋಡಿದು

ದನ್ನು ಮತ್ತು ತನ್ನ ಅನುಭವ ವಿಚಾರಗಳನ್ನು ಇನ್ನೊಬ್ಬನ ಮುಂದೆ ಪ್ರಕಟಿಸುವಾಗ ಸಂಕೇತಕ್ಕಾಗಿ ಚಿತ್ರಕಲೆ ಉಪಯೋಗಿಸಿಕೊಂಡನೆಂದು ಎನಿಸುತ್ತದೆ. ಇದುವೆ ಚಿತ್ರಕಲಾ ಸೃಷ್ಟಿಯ ಮೂಲವೆಂದು ಹೇಳಬಹುದು. ಇದಕ್ಕೆ ಹರಪ್ಪ ಮಹಂಜೋದಾರಗಳಲ್ಲಿ ಸಿಕ್ಕ ಚಿತ್ರ ಲಿಪಿಗಳೇ ಸಾಕ್ಷಿ. ಅವಂತಿರಲಿ ಇಂದಿಗೂ ವ್ಯವಹಾರ ಭಾಷೆಯಾಗಿರುವ ಚೀನ ಜಪಾನೀ ಭಾಷೆಗಳು ಚಿತ್ರಲಿಪಿಯ ಸುಧಾರಣೆ ಹೊಂದಿದ ರೂಪಗಳಾಗಿವೆ ಹಿಂದಿನಿಂದ ಇಂದಿನವರೆಗೆ ಚಿತ್ರಲಿಪಿಯು ಮಾನವ ಜೀವನದ ಅತಿಮುಖ್ಯ ಸ್ಥಾನವನ್ನು ಗಳಿಸಿವೆ. ಬರುಬರುತ್ತ ಚಿತ್ರಕಲೆಯು ಸಿಂಗಾರ ಸಾಧನಕ್ಕಾಗಿ ಉಪಯೋಗವಾಯಿತಲ್ಲದೆ ಅದುವೇ ಸಿಂಗಾರವೆನ್ನುವಷ್ಟಕ್ಕೆ ಬಂದಿತು. ಉದಾ:— ಕುಂಬಾರ ಮಡಿಕೆಯನ್ನು ರೇಖಾ ಚಿತ್ರಗಳಿಂದ ಸಿಂಗರಿಸಿದಾಗ ಅದು ಕಲಾಮಯವಾಗಿದೆ ಎಂದು ಹೇಳುತ್ತೇವೆ. ಎಂದರೆ ಕಲೆಯೇ ಸಿಂಗಾರವೆಂದು ಹೇಳಿದ ಹಾಗಾಗುತ್ತದೆ.

ಭಾರತೀಯ ಚಿತ್ರಕಲೆಯು ಜಗತ್ತಿನಲ್ಲಿ ತನ್ನದೇ ಆದ ಒಂದು ವಿಶಿಷ್ಟ ಸ್ಥಾನವನ್ನು ಗಳಿಸಿಕೊಂಡಿದೆ. ಜಗತ್ತಿನಲ್ಲಿ ಸಂಸ್ಕಾರ, ಸಂಸ್ಕೃತಿಗಳ ಸಂಗಡ ಅವರವರ ವಿಚಾರಗಳು ಬದಲಾಗುವುದಲ್ಲದೆ ಅವರವರ ನೋಟದಲ್ಲಿಯೂ ಬದಲಾವಣೆ ಹೊಂದುತ್ತದೆ. ಅಂತೆಯೇ ಭಾರತೀಯ ಸಂಸ್ಕಾರ, ಸಂಸ್ಕೃತಿ ಬೇರೆಯಾಗದಂತೆ ಅವರ ವಿಚಾರ, ನೋಟವೂ ಬದಲಾಗಿದೆ ಎಂಬುದಕ್ಕೆ ಜಗತ್ತಿನ ಚಿತ್ರಕಲೆಯ ಸಂಗಡ ಹೋಲಿಸಿ ನೋಡಿದಾಗ ತಾನೇ ಮನದಟ್ಟಾಗುತ್ತದೆ. ಭಾರತೀಯ ಚಿತ್ರಕಲೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ, ಜಗತ್ತಿನ ಚಿತ್ರಕಲೆಗಿಂತ ಎಷ್ಟು ಮೇಲ್ಮಟ್ಟದ್ದೆಂದು ಅರ್ಥವಾಗದಿರದು. ಪಾಶ್ಚಾತ್ಯ ಚಿತ್ರಕಲೆಯು ಮೈಕಲಿಂಜಲೊ, ರಾಫಿಲ್ ಮೊದಲಾದವರ ಕಾಲದಲ್ಲಿ ಒಳ್ಳೇ ಶ್ರೇಷ್ಠತೆಯನ್ನು ಪಡೆಯಿತಲ್ಲದೆ ಆ ಕಾಲದ ಭಾರತ ಚಿತ್ರಕಲೆಯನ್ನು ಮೀರಿಸಲಿಲ್ಲವೆಂದೇ ಹೇಳಬೇಕು. ಅನಂತರ ಪಾಶ್ಚಾತ್ಯ ಚಿತ್ರಕಲೆಯು ಸ್ವಾಭಾವಿಕ (Realistic) ರೀತಿಯಲ್ಲಿ ಬೆಳೆಯಿತು. ಆದರೆ ಭಾರತವು ೧೯ನೇ ಶತಮಾನದವರೆಗೂ ಅನೇಕ ರೀತಿಯ ಕಲೆಗೆ ಜನ್ಮ ಕೊಟ್ಟಿತು. ಮಟ್ಟವನ್ನು ಮಾತ್ರ ಇಳಿಸಲಿಲ್ಲ. ಇದಕ್ಕೆ ಇವರ ಉಚ್ಚ ಮಟ್ಟದ ವಿಚಾರಗಳೇ ಕಾರಣ. ಯಾರ ವಿಚಾರ ಸಾಮಾನ್ಯವಿರುವವೋ ಅವರ ಚಿತ್ರಗಳು ಸಾಮಾನ್ಯ ಮಟ್ಟದವು ಮತ್ತು ಸ್ವಾಭಾವಿಕತೆಯನ್ನು ಹೊಂದಿರುತ್ತವೆ. ಯಾರ ವಿಚಾರದ ಬಲವು ಹೆಚ್ಚಾಗುವವೋ ಅವರ ಚಿತ್ರಗಳು ಸ್ವಾಭಾವಿಕತೆಯಿಂದ ದೂರವಾಗಿರುತ್ತವೆ. ವಿಚಾರ ಹೆಚ್ಚಿದಾಗ ಚಿತ್ರಕಾರನು ಚಿತ್ರವನ್ನೇ ಚಿತ್ರಿಸದೆ, ಅದರಲ್ಲಿ ತನ್ನ ವಿಚಾರವನ್ನು ಕೂಡ ಪ್ರಕಟಿಸುತ್ತಾನೆ. ಇವೇ ವಿಚಾರಪೂರ್ಣ ಚಿತ್ರಗಳಾಗುವವು. ಪಾಶ್ಚಾತ್ಯ ಚಿತ್ರಕಾರರು (ವಾಸ್ತವಿಕ) ಇದ್ದುದನ್ನು ಇದ್ದಹಾಗೆ ಚಿತ್ರಿಸುತ್ತಾರೆ ಎಂದರೆ ಅವರು ತಮ್ಮ ಸಾಮಾನ್ಯ ವಿಚಾರದಿಂದ ನೋಡುವ ಜಗತ್ತನ್ನು ಸಾಮಾನ್ಯ ಜನರಂತೆ ಕಾಣುತ್ತಾರೆ. ಸಾಮಾನ್ಯ ಜನಗಳಿಗೆ

ಹೊರಜಗತ್ತಿನ ಪದಾರ್ಥಗಳು ಒಂದು ಕಡೆ ನೆರಳು ಇನ್ನೊಂದು ಕಡೆ ಬೆಳಕು (Shade and light) ಮತ್ತು ದೂರ ಹೋದಹಾಗೆ ಸಣ್ಣಾಗಿ ಕಾಣುವದು (Perspective) ಎಂದರೆ ಇದ್ದದ್ದು ಇದ್ದಹಾಗೆ ಕಾಣುತ್ತವೆ. ಇಲ್ಲಿ ವಿಚಾರಗಳಿಗೆ ಪ್ರಾಧಾನ್ಯವಿಲ್ಲ. ಭಾರತೀಯ ಚಿತ್ರಕಾರರು ಇಂಥ ಬಂಧನಗಳನ್ನು ತೊರೆದರೂ ಅದಕ್ಕೂ ಒಂದು ಛಂದಸ್ಸು ಉಂಟು ಉ:—ಹರಿಹರನು ಕಾವ್ಯದ ಕಟ್ಟುಸಿಟ್ಟುಗಳನ್ನು ಕಿತ್ತೊಗೆದನೆಂದರೆ 'ರಗಳೆ'ಗೂ ಒಂದು ಛಂದಸ್ಸು ಉಂಟು. ಅದರ ಹಾಗೆ ಭಾರತೀಯ ಚಿತ್ರಕಲೆ ವಿಚಾರಗಳು ಬೆರೆತಾಗ ನೋಟವೂ ಅದರ ಸಂಗಡ ಬದಲಾವಣೆ ಹೊಂದುತ್ತದೆ. ಇವರ ವಿಚಾರಗಳೂ ನೋಟಗಳೂ ಸಾಮಾನ್ಯ ಜನರಿಂದ ದೂರವಾಗಿದ್ದವು. ಛಾಯೆ, ಬೆಳಕು (Shade and light) ದೂರ ಹೋದಂತೆ ಸಣ್ಣ ಕಾಣುವಿಕೆ (Perspective)ಯನ್ನು ಇವೆಲ್ಲವುಗಳನ್ನು ತೊರೆದರಂದರೆ ಇವುಗಳನ್ನು ಅವು ಇದ್ದ ಸ್ಥಳದಲ್ಲಿ ಇಡದೆ ತಮಗೆ ಬೇಕಿದ್ದ ಸ್ಥಳದಲ್ಲಿ ಉಪಯೋಗಿಸಿದ್ದಾರೆ. ಇಷ್ಟೆಲ್ಲಾ ಮಾರ್ಪಾಡು ಮಾಡಬೇಕಾದರೆ ಅಸಾಮಾನ್ಯಯೋಗ್ಯತೆಯು ಬೇಕಾಗುತ್ತದೆ. ಅಲ್ಲದೆ ಸೌಂದರ್ಯವೆಂದರೇನು? ಅದನ್ನು ಹೇಗೆ ಚಿತ್ರಿಸಬೇಕು? ಎಂಬುದನ್ನು ಅರಿಯಬೇಕು. ಇಷ್ಟು ವಿಚಾರಿಸಿ ಸುಂದರಗೊಳಿಸುವ ಭಾರತೀಯ ಚಿತ್ರಗಳೆಲ್ಲಿ? ಇದ್ದುದನ್ನು ಯಥಾರ್ಥವಾಗಿ ಎದುರಿಗೆ ನೋಡಿ ಛಾಯೆ ಇದ್ದ ಕಡೆ ಛಾಯೆ, ಬೆಳಕು ಇದ್ದ ಕಡೆ ಬೆಳಕು ಮಾಡಿಸಿ ತೋರಿಸುವ ಪಾಶ್ಚಿಮಾತ್ಯ ಚಿತ್ರಗಳೆಲ್ಲಿ?! ಇಷ್ಟು ಅಂತರವಿದೆ. ಭಾರತೀಯ ಮತ್ತು ಪಾಶ್ಚಾತ್ಯ ಚಿತ್ರಕಲೆಯಲ್ಲಿ ಇದೇ ಭಾರತೀಯ ವೈಶಿಷ್ಟ್ಯ. ಇದನ್ನು ತಿಳಿದವರಿಗೆ ಮಾತ್ರ.

ಭಾರತೀಯ ವಿಚಾರ ಪೂರ್ಣ ಚಿತ್ರಕಲೆಯು ಓರ್ವ ಜೀವನ, ಧರ್ಮ, ಸಂಸ್ಥೆಯನ್ನು ತೋರಿಸುತ್ತದಲ್ಲದೆ ಚಿತ್ರಕಾರರ ಯೋಗ್ಯತೆ, ಸ್ಫೂರ್ತಿಯನ್ನು ಕೂಡ ತೋರಿಸುತ್ತದೆ. ಈಗ ಭಾರತೀಯ ಚಿತ್ರ ಕಲೆಯನ್ನು ನಾಲ್ಕು ಭಾಗಗಳಾಗಿ ವಿಂಗಡಿಸಬಹುದು. (೧) ಬೌದ್ಧ ಚಿತ್ರಕಲೆ (೨) ಹಿಂದೂ ಚಿತ್ರಕಲೆ (೩) ಮೊಗಲರ ಚಿತ್ರಕಲೆ (೪) ಆಧುನಿಕ ಚಿತ್ರಕಲೆ.

## ಬೌದ್ಧ ಚಿತ್ರಕಲೆ

ಬೌದ್ಧ ಚಿತ್ರಕಲೆಯು ಭಾರತದಲ್ಲಿ ದೊಡ್ಡ ಸ್ಥಾನವನ್ನು ಗಳಿಸಿದೆ. ಅದರ ದೊಡ್ಡ ಉದಾಹರಣೆಗಳೆಂದರೆ: ಅಜಂತಾ ಮತ್ತು ಬಾಗಾ ಗವಿಗಳಾಗಿವೆ.

ವಿಶ್ವದ ಚಿತ್ರಕಲೆಯ ಇತಿಹಾಸದಲ್ಲಿ ತನ್ನದೇ ಆದ ಸ್ಥಾನ ಗಳಿಸಿಕೊಂಡಿರುವ ಅಜಂತಾ ಚಿತ್ರಕಲೆಯು ಭಾರತೀಯ ಚಿತ್ರಕಲೆಯ ಅಸ್ತಿಭಾರವಾಗಿದೆ. ಇದು ಭಾರತೀಯ ಜನಜೀವನ, ಧರ್ಮ, ಸಂಸ್ಕೃತಿಗಳನ್ನು ತೋರಿಸುವುದಲ್ಲದೆ ಚಿತ್ರಕಾರರ ಯೋಗ್ಯತೆ ಮತ್ತು ಸ್ಫೂರ್ತಿಯನ್ನು ತೋರಿಸುತ್ತದೆ. ಕ್ರಿ. ಪೂ. ೧ನೇ ಶತಮಾನದಿಂದ ೭ನೇ ಶತಮಾನಗಳ ಅವಧಿಯಲ್ಲಿ ಚಿತ್ರಿಸಲ್ಪಟ್ಟ ಅಜಂತಾ ಗುಹೆಯ ಚಿತ್ರಗಳು ವಿಶಾಲ ಭಿತ್ತಿಚಿತ್ರಗಳು ಭಾರತದ ಹಿಂದಿನ ಕಾಲದ ಮತ್ತು ಆಗಿನ ಸಮಕಾಲದ

ರಾಜರ, ಮಹಾರಾಜರ, ಸಾಮಾನ್ಯ ಜನಗಳ ಸುಂದರ ಕಲ್ಪನೆಯು ಮತ್ತು ಸ್ಫೂರ್ತಿದಾಯಕ ನಾಗರಿಕತೆಯನ್ನು ಪ್ರದರ್ಶಿಸುತ್ತವೆ. ತಕ್ಕ ವ್ಯವಸ್ಥೆ ಇಲ್ಲದೆ ಕಾಲಾನುಕ್ರಮದಲ್ಲಿ ಚಿತ್ರಗಳ ಬಹು ಅಂಶ ನಾಶವಾಗಿದ್ದರೂ, ಕೃತಿಗಳು ಕಲೋಪಾಸಕರನ್ನು ಇಂದಿಗೂ ಆಕರ್ಷಿಸುತ್ತವೆ. ಇವುಗಳ ಬೆಲೆಯನ್ನರಿತ ಮೇಜರ್‌ಗಿಲ್‌ಗಿ ಪತ್ನಿ ಲೇಡಿ ಹೆರಿಂಗ್ ಹೇಮ್, ಇವರುಗಳ ಸಾಹಸ ಪ್ರಯತ್ನಗಳಿಂದಲೂ ಮತ್ತು ಅವರಿಗೆ ಬೇಕಾದ ರೀತಿಯಲ್ಲಿ ಸಹಕರಿಸಿದ ಹೈದರಾಬಾದ ಸರಕಾರದ ಸಹಾಯದಿಂದಲೂ ಅಜಂತೆಯ ಕೆಲವು ಚಿತ್ರಗಳು ಪ್ರತಿಮಾಡಲ್ಪಟ್ಟವೆ.

ಕ್ರಿ. ಶ. ಪೂರ್ವ ಒಂದನೆಯ ಶತಮಾನಕ್ಕೆ ಮೊದಲು ಚಿತ್ರಕಲೆಯು ಉಚ್ಛ ಸ್ಥಿತಿಯಲ್ಲಿದ್ದ ಕಾರಣ ಅಜಂತದ ಚಿತ್ರಕಾರರು ಅವುಗಳಿಂದ ಸ್ಫೂರ್ತಿ ಪಡೆದು ಮಹೋನ್ನತ ಕೃತಿಗಳನ್ನು ಭಾರತಕ್ಕೆ ಕಾಣಿಕೆ ಇತ್ತರು. ಅನೇಕ ರಾಜ ಮಹಾರಾಜರ ಸಂಪ್ರದಾಯದಲ್ಲಿ ಬೆಳೆದರೂ ಕಲಾವಿದರ ಉದ್ದೇಶವಾಗಿರುವ ಬೌದ್ಧ ಚಿತ್ರಕಲೆಗೆ ಆತಂಕವಾಗಲಿಲ್ಲ. ಅಲ್ಲಲ್ಲಿ ವೈದಿಕ-ಧರ್ಮದ ಪ್ರಭಾವವಿದೆಯೆಂದು ಕೆಲವರ ವಾದವಿದೆ. ವೈದಿಕ ಧರ್ಮದ ಕಲಾವಿದರು ಬೌದ್ಧ ಧರ್ಮದ ಚಿತ್ರಗಳನ್ನು ತೆಗೆಯುವಾಗ ಅವುಗಳಲ್ಲಿ ಆದ ಮಾರ್ಪಾಡುಗಳೆಂದೇ ಹೇಳಬೇಕು. ಇಂಥ ಸಣ್ಣ ಪುಟ್ಟ ಬದಲಾವಣೆಗೆ ಮಹತ್ವಕೊಡದೆ ಈ ಗವಿಗಳು ಬೌದ್ಧ ಧರ್ಮದ ದರ್ಪಣದಂತಿವೆಯೆಂದು ಧಾರಾಳವಾಗಿ ಹೇಳಬಹುದು.

ಭಾರತೀಯ ಚಿತ್ರಕಲೆಯ ಸುವರ್ಣ ಇತಿಹಾಸವೇ ಆಗಿರುವ ಈ ಗುಹೆಗಳು ಭಾರತದ ರಾಷ್ಟ್ರೀಯ ಪ್ರದರ್ಶನಾಲಯಗಳಂತೆ ನಿಂತಿವೆ. ಇವು ಭಾರತದಲ್ಲಿಷ್ಟೆ ತಮ್ಮ ಪ್ರಭಾವವನ್ನು ಬೀರದೆ ನೆರೆ ರಾಷ್ಟ್ರಗಳಾದ ಬರ್ಮಾ, ಚೀನಿ, ಜಪಾನ್ ಮತ್ತು ಲಂಕೆಯವರೆಗೂ ಇವುಗಳ ಪ್ರಭಾವ ಬೆಳೆದಿದೆ. ಕಲಾವಿದರು ಬುದ್ಧನ ನಿಜವಾದ ಸೌಂದರ್ಯವನ್ನು ಕಂಡರಲ್ಲದೆ ವಿಶಾಲ ತತ್ವವನ್ನು ಸಾರುವಲ್ಲಿ ಸಫಲರಾಗಿದ್ದಾರೆ. ಬುದ್ಧನ ತತ್ವಗಳು ಅನುರವಾಗುವಂತೆ ಮಾಡಿದ್ದಾರೆ. ಸ್ತ್ರಿ ಪುರುಷರ ಸುಂದರ ಕೃತಿಗಳಲ್ಲಿ ತಮ್ಮ ಉದ್ದೇಶವನ್ನು ಸರಳವಾಗಿ ಸಾಧಿಸಿ ಕೊಂಡಿದ್ದಾರೆ.

ಅಜಂತದ ಸುಂದರ ಚಿತ್ರಗಳಾದ ಅವಲೋಕಿತೇಶ್ವರ ಪದ್ಮಪಾಣಿ ನೀಲಕಮಲ ಹಿಡಿದ ಬುದ್ಧನ ಚಿತ್ರ। ಬುದ್ಧ ಕರುಣಾಮಯನೆಂದು ಸಾಮಾನ್ಯ ಜನಗಳಿಗೆ ಅರ್ಥವಾಗುವಂತೆ ಚಿತ್ರಿಸಿದ್ದಾರೆ. ಇದಲ್ಲದೆ ಅವರ ಮೇಲೆ ಬೀರಿದ ಪ್ರಭಾವವನ್ನು ಕೂಡ ಚಿತ್ರಿಸಿದ್ದಾರೆ.

## ಚಿತ್ರಕಾರರ ವಿಶ್ವತೋಮುಖ ದೃಷ್ಟಿ

ಅಜಂತೆಯ ಚಿತ್ರಕಾರರು ಸೃಷ್ಟಿಯ ಪ್ರತಿಯೊಂದು ವಸ್ತುವಿನಲ್ಲಿಯೂ ಸೌಂದರ್ಯವಿದೆಯೆಂದು ಸಾರಿದ್ದಾರೆ. ಸಾಮಾನ್ಯ ನೋಟಕ್ಕೂ ಕಲಾವಿದನ

ನೋಟಕ್ಕೂ ಇರುವ ವ್ಯತ್ಯಾಸವನ್ನು ಅಜಂತ ಗುಹೆಗಳ ಭಿತ್ತಿ ಚಿತ್ರಗಳಲ್ಲಿ ಸ್ಪಷ್ಟವಾಗಿ ಕಾಣಬಹುದು. ಯಾವ ವಸ್ತುವಿನಲ್ಲಿಯೂ ಸೌಂದರ್ಯವಿಲ್ಲದಿಲ್ಲ. ಅದರ ವಸ್ತುಗಳನ್ನು ನೋಡುವವನ ದೃಷ್ಟಿಕೋನದ ಮೇಲೆ ಅವಲಂಬಿಸಿರುತ್ತದೆ. ಸಾಮಾನ್ಯ ಜನಗಳಿಗೆ ಸುಂದರವಾಗಿ ಕಾಣದ ವಸ್ತುಗಳಾಗಿರಬಹುದು. ಆದರೆ ಅವುಗಳಲ್ಲಿ ಸೌಂದರ್ಯವಿಲ್ಲವೆಂದಲ್ಲ. ಯಾವ ದಿಕ್ಕಿನಿಂದ ನೋಡಿದರೆ ಸುಂದರವಾಗಿ ಕಾಣಬಹುದು ಎಂಬುದನ್ನು ಅವರರಿಯರು. ಅದನ್ನೇ ಅಜಂತದ ಕಲಾವಿದರು ಸಾಧಿಸಿ ಸಾಮಾನ್ಯರು ಸೌಂದರ್ಯವನ್ನು ಕಾಣದ ವಸ್ತುಗಳಲ್ಲಿಯೂ ಸೌಂದರ್ಯವನ್ನು ಕಂಡಿದ್ದಾರೆ. ಕಮಲದಲ್ಲಿ ಕಂಡ ಸೌಂದರ್ಯವನ್ನು ತರಗೆಲೆ ಬಣ್ಣದ ಗಿಡಗಳಲ್ಲಿಯೂ ಕಂಡಿದ್ದಾರೆ. ಇವರು ಪ್ರತಿಯೊಂದು ವಸ್ತುವಿನಲ್ಲಿ ಸೌಂದರ್ಯವನ್ನು ಕಂಡದ್ದಲ್ಲದೆ ಪ್ರತಿಯೊಂದು ವಸ್ತುವಿಗೆ ಅಷ್ಟೇ ಗೌರವ ಕೊಟ್ಟರು. ರಾಜನಿಗಿದ್ದ ಗೌರವ ಪ್ರಜೆಗಳಿಗೂ ಕೊಟ್ಟರು. ರಾಜನು ಪ್ರಜೆಗಳಿಗೆ ಒಡೆಯನು ಅಧಿಕಾರವುಳ್ಳವನು ಎಂದು ಅವನ ಚಿತ್ರವನ್ನು ಚೆನ್ನಾಗಿ ಚಿತ್ರಿಸಿ, ಉಳಿದ ಪ್ರಜೆಗಳ ಚಿತ್ರಗಳನ್ನು ಚಿತ್ರಿಸುವಲ್ಲಿ ಉಪೇಕ್ಷೆಮಾಡಲಿಲ್ಲ. ಸುಂದರವಾದ, ಕೋಮಲ ಕಮಲವನ್ನು ಶ್ರದ್ಧೆಯಿಂದ ಚಿತ್ರಿಸಿ, ತರಗಲೆ, ಒಣಗಿದ ಗಿಡ, ಬಂಡೆಗಲ್ಲು, ಇವುಗಳನ್ನು ಚಿತ್ರಿಸುವಾಗ ಅಶ್ರದ್ಧೆ ವಹಿಸಲಿಲ್ಲ. ಅವರು ಬುದ್ಧನ ಶಾಂತತೆಯನ್ನು ಚಿತ್ರಿಸಿದರಲ್ಲದೆ ಗೂಳಿ, ಕೋಳಿಗಳ ಕಾದಾಟವನ್ನು ತೋರಿಸಿ ಸಿಟ್ಟನ್ನು ಚಿತ್ರಿಸಿದ್ದಾರೆ. ಇದೆಲ್ಲವೂ ಚಿತ್ರಕಾರರ ವಿಶ್ವತೋಮುಖ ದೃಷ್ಟಿಯನ್ನು ಪ್ರದರ್ಶಿಸುತ್ತದೆ.

## ಹೆಣ್ಣಿನ ನಿರೂಪಣೆ

ವೇದಗಳು ಹೆಣ್ಣನ್ನು ಕೀಳಾಗಿ ತಿಳಿದಂತೆ ಅಜಂತೆಯ ಚಿತ್ರಕಾರರು ತಿಳಿಯಲಿಲ್ಲ. ಸೌಂದರ್ಯ ನಿಧಿಯಾದ ಹೆಣ್ಣನ್ನು ಅನೇಕ ರೀತಿಯಲ್ಲಿ ಚಿತ್ರಿಸಿದ್ದಾರೆ. ಪ್ರತಿಯೊಂದು ಸ್ಥಳದಲ್ಲಿ ಬೇಕಾಗುವ ಭಾಗವನ್ನು ನಿರೂಪಿಸಿದ್ದಾರಲ್ಲದೆ, ಅದೆಷ್ಟು ಕೋಮಲ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಅಂದರೆ ಚಿತ್ರಕಾರರು ಚಿತ್ರಕಾರರಷ್ಟೇ ಅಲ್ಲ ಲಕ್ಷಣ ಶಾಸ್ತ್ರವನ್ನೂ ಬಲ್ಲವರಾಗಿದ್ದರು.

"ಈ ಸಮಯದಲ್ಲಿ ವಿಶ್ವಖ್ಯಾತಿ ಗಳಿಸಿದ ಚಿತ್ರ 'ತಾಯಿ ಮಗು' (ಗುಹೆ ೧೭) ಭಿಕ್ಷುವಾಗಿ ಬಂದಿರುವ ತಥಾಗತನ ಎದುರಿಗೆ ತಾಯಿ, ಮಗ, ನಿಂತಿದ್ದಾರೆ. ತಾಯಿ ಮಗುವಿನ ಕೈಯಿಂದ ತಥಾಗತನ ಕೈಯಲ್ಲಿ ಭಿಕ್ಷೆ ಹಾಕಿಸಿದ್ದಾಳೆ. ಮಗುವಿನ ತೋಳುಗಳನ್ನು ಹಿಡಿದು ಭಿಕ್ಷೆ ಹಾಕಿಸುವಂತೆ ಅವಳ ನೋಟ ಭಗವಂತನಲ್ಲಿ ನೆಟ್ಟಿದೆ. ತಾಯಿಗೆ ಮಗುವಿನಲ್ಲಿರುವ ಅಪಾರ ಪ್ರೇಮವನ್ನು ಚಿತ್ರ ತೋರಿಸುತ್ತಲ್ಲಿದೆ ಭಗವಂತನ ಕಟಾಕ್ಷ ಮಗುವಿನ ಮೇಲೆ ಬೀಳಬೇಕೆಂಬ ತ್ಯಾಗ ಮನೋಭಿಲಾಷೆ ಅವಳದಾಗಿದೆ." ಇಂಥ ಅನೇಕ ರೀತಿಯ ಭಾವಪೂರಿತ ಚಿತ್ರಗಳನ್ನು ಹೇರಳವಾಗಿ ಈ ಗುಹೆಗಳಲ್ಲಿ ಕಾಣಬಹುದು.

## ಕಲಾಕೌಶಲ್ಯ

ಭಾರತೀಯ ಕಲಾವಿದರು ಯಾವುದನ್ನೇ ಚಿತ್ರಿಸಲಿ ಅದು ಯಾವ ಜಾತಿಯದು ಮತ್ತು ಯಾವುದರ ಮೇಲೆ ಬರೆಯಲಾಗಿದೆ ಎಂದು ಸರಳವಾಗಿ ತಿಳಿದುಕೊಳ್ಳುವಂತೆ ಚಿತ್ರಿಸಿರುವರು. ಅಜಂತ ಚಿತ್ರಕಲೆಯು ಭಿತ್ತಿ ಚಿತ್ರವಾದುದರಿಂದ ಭಿತ್ತಿಯ ಗುಣವನ್ನು ಕಾಯ್ದುಕೊಂಡು ಹೋಗಿದ್ದಾರೆ. ಇದರಲ್ಲಿ ಆಕಾಶವುಳ್ಳ ಚಿತ್ರಗಳು ವಿರಳವಾಗಿ ಸಿಕ್ಕಬಹುದು.

ಭಾರತದ ಯಾವ ಕಾಲದಲ್ಲೂ ಕೂಡ ರೇಖೆ ಇಲ್ಲದ ಚಿತ್ರಗಳಿಲ್ಲ. ಆದರೆ ಅಜಂತೆಯ ಗುಹೆಗಳಲ್ಲಿ ಉಪಯೋಗಿಸಿದ ರೇಖೆಗಳು (Accemted lines) ಒಂದೆಡೆ ದಪ್ಪವಾಗಿ ಒಂದೆಡೆ ತೆಳುವಾಗಿರುತ್ತವೆ. ಮತ್ತೊಂದೆಡೆ ಕಾಣದಂತೆ ಆಗುತ್ತವೆ. ಸುಳುವುಗಳಲ್ಲಿ ಬಿಟ್ಟು ಉಳಿದ ಸ್ಥಳಗಳಲ್ಲಿ ಹಿಂಭಾಗದ ಬಣ್ಣದಿಂದ ಸಹಾಯ ತೆಗೆದುಕೊಂಡಿದ್ದಾರೆ. ಹಾಗೆ ಮಾಡಲು ಬಣ್ಣಗಳ ಉಪಯೋಗದಲ್ಲಿ ನಿಪುಣತೆಯನ್ನು ಪಡೆದಿರಬೇಕಾಗುತ್ತದೆ. ಬಣ್ಣಗಳನ್ನು ಒಳ್ಳೇ ತೂಕವಾಗಿ ಉಪಯೋಗಿಸಿದ್ದಾರೆ. ಒಂದೊಂದು ಚಿತ್ರವನ್ನು ನೋಡಿದರೂ ಬೇಸರ ಬರಕೂಡದು. ಇಲ್ಲವೆ ಇಡಿಯಾಗಿ ಗೋಡೆಯನ್ನು ನೋಡಿದರೂ ಬೇಸರ ಬರಕೂಡದು. ಬಣ್ಣಗಳಿಂದಲೇ ಚಿತ್ರ ಪರಿಪೂರ್ಣ ಹೊಂದದು. ಅವರು ತೆಗೆದುಕೊಂಡಿರುವ ವಿಷಯಗಳಲ್ಲಿ ಬರುವ ಜನಗಳು, ಪ್ರಾಣಿಗಳು, ಪದಾರ್ಥಗಳನ್ನು ಎಲ್ಲಿ ಉಪಯೋಗಿಸಿದರೆ ನೋಡುವವನ ಕಣ್ಣು, ಮನಸ್ಸು ಅದರ ಮೇಲೆ ಸುಳಿದೀತು? ಎಂಬುದನ್ನು ಅವರು ಚೆನ್ನಾಗಿ ಅರಿತಿದ್ದಾರೆ. ಇದಕ್ಕೆ ಚಿತ್ರದ ತೂಕ (Picture ballance) ಎಂದು ಹೇಳುತ್ತಾರೆ. ಅಜಂತೆಯ ಕಲಾವಿದರು ಇವೆಲ್ಲವುಗಳಲ್ಲಿ ಪರಿಪೂರ್ಣತೆಯನ್ನು ಪಡೆದಿದ್ದರು. ಅವರ ವಿಷಯಗಳು ಒಂದೊಂದು ಬೇರೆ ಬೇರೆಯಾಗಿರದೆ ಒಂದರ ಹಿಂದೆ ಮತ್ತೊಂದು ಹೇಗೆಯೋ ಚಿತ್ರಗಳು ಗವಿ ಮುಗಿಯುವವರೆಗೆ ನಡೆದಿರುತ್ತವೆ. ಎಂದರೆ ಇಡೀ ಗವಿಯೇ ಒಂದು ಚಿತ್ರದಂತೆ ಇರುತ್ತದೆ. ಇದೂ ಕುಶಲತೆಯ ಒಂದು ಭಾಗವಾಗಿದೆ. ಬುದ್ಧ ಇಲ್ಲವೆ ರಾಜನ ಚಿತ್ರಗಳು ಒಂದಲ್ಲ ಬೇರೆ ಜನಗಳಿಗಿಂತ ಇವರ ಚಿತ್ರಗಳ ಗಾತ್ರ, ಎತ್ತರ ದೊಡ್ಡದಾಗಿರುತ್ತದೆ. ನೋಡುವ ಸಾಮಾನ್ಯ ಜನಗಳಿಗೆ ಇವರು ದೊಡ್ಡವರೆಂಬ ಭಾವನೆ ಮೂಡಬೇಕೆಂಬುದೇ ಚಿತ್ರಕಾರರ ಉದ್ದೇಶವಾಗಿದೆ. ಅಜಂತ ಗುಹೆಗಳಲ್ಲಿ ಛಾಯೆ, ಬೆಳಕುಗಳ ಉಪಯೋಗ ಬಹಳ ಸೊಗಸಾಗಿದೆ. ಸ್ವಾಭಾವಿಕತೆಯಿಂದ ದೂರವಾಗಿದ್ದರೂ ಕಲಾಪೂರ್ಣವಾಗಿವೆ. ಇವರಂತೆ ಚಿತ್ರಗಳಲ್ಲಿ ಬರುವ ಮನೆಗಳ ನಿರ್ಮಾಣವು ವಿಚಿತ್ರವಾಗಿವೆ, ಎಂದರೆ ಇವರ ಪ್ರತಿಯೊಂದು ಕೃತಿಯು ವಿಚಿತ್ರವೆಂದು ಹೇಳಿದ ಹಾಗಾಯಿತು.

ಅಜಂತೆಯ ಚಿತ್ರಗಳನ್ನು ನೋಡಿದಾಗ ಅವು ಹೃದಯದ ಆಕಾಶದಲ್ಲಿ, ವಿಚಾರದ ಬೆಳಕಿನಲ್ಲಿ ಮಸುಕು ಮಸುಕಾಗಿ ಕಾಣುವ ದೃಶ್ಯಗಳಂತೆ ಭಾಸವಾಗುವುವು.

ಇಷ್ಟು ಸಿಂಗಾರಪೂರ್ಣ ಚಿತ್ರಗಳಿದ್ದರೂ ಒಂದು ರೀತಿಯಲ್ಲಿ ಸ್ವಾಭಾವಿಕತೆ ಉಂಟೆಂದು ನಿಪುಣ ಚಿತ್ರಕಲಾ ವಿಮರ್ಶಕರಾದ ಶ್ರೀ ಗ್ರಿಫಿತ್ ಸಿಯೋಗದವರ ವಿಚಾರವಾಗಿದೆ. ಆದರೂ ಪಾಶ್ಚಾತ್ಯ ಸ್ವಾಭಾವಿಕತೆಗೆ ಹೊಂದುವದೇ ಇಲ್ಲ.

ಇದರ ನಂತರ ಬಂದ ಉತ್ತರಪ್ರದೇಶದ ಗ್ವಾಲೀರ್ ವಿಭಾಗದಲ್ಲಿರುವ 'ಬಾಗ್ ಗವಿಗಳು' ಅಜಂತದ ಎಲ್ಲ ರೀತಿ ನೀತಿಗಳನ್ನು ಹೋಲುತ್ತವೆ. ಅವರಲ್ಲಿ ಬೌದ್ಧ ಧರ್ಮ ಸ್ವೀಕಾರಾನಂತರದ ಅಶೋಕನ ಚಿತ್ರಗಳಿವೆ. ಅದೇ ರೀತಿಯ ಬಣ್ಣ, ರೇಖೆ, ಛಾಯೆ, ಬೆಳಕು ವಿಷಯ ನಿರೂಪಣೆಯಲ್ಲಿ ಸಾಮ್ಯವಿದೆ.

ಅಜಂತ, ಬಾಗ್ ಗವಿಗಳಲ್ಲದೆ ಸಿತ್ತಿನಿವಾಸಲಾ (ದಕ್ಷಿಣ ಭಾರತ) ಎಂಬಲ್ಲಿ ಭಿತ್ತಿ ಚಿತ್ರಗಳನ್ನು ಕಾಣಬಹುದು. ೮ನೇ ಶತಮಾನದ ಅನಂತರ ಇಷ್ಟು ವಿಶಾಲ ವಾದ ಭಿತ್ತಿ ಚಿತ್ರಗಳು ಕಾಣೆಯಾದವೆಂದೆ ಹೇಳಬೇಕು. ಆ ನಂತರ ಜಿನುಗು (Miniature) ಚಿತ್ರಗಳ ಪರಂಪರೆಯು ಪ್ರಾರಂಭವಾಯಿತು. ಇದುವರೆಗೆ ತಿಳಿದ ಹಾಗೆ ಪಾಲಾಪರಂಪರೆ (೯ರಿಂದ ೧೨ನೆ ಶತಮಾನ) ಬೆಂಗಾಲ, ಪೂರ್ವ ಭಾರತ, ಗುಜರಾತ ಪರಂಪರೆ (೧೧ರಿಂದ ೧೫ನೇ ಶತಮಾನ) (ಪಶ್ಚಿಮ ಭಾರತ) ಯ ಜಿನುಗು ಚಿತ್ರಗಳನ್ನು ಈಗಾಗಲೇ ಅನೇಕ ಕಡೆ ಪ್ರಸಿದ್ಧಿಸಲಾಗಿದೆ. ಬೆಂಗಾಲ ಪಾಲಾ ಚಿತ್ರಗಳು ಮಹಾಯಾನ ಬೌದ್ಧ ಧರ್ಮದ ನಾಯಕತ್ವದಲ್ಲಿ ಚಿತ್ರಿಸಲ್ಪಟ್ಟವೆ. ಮನಸ್ಸಿನ ಉದ್ವೇಗ, ಸ್ಫೂರ್ತಿ, ಭಕ್ತಿಯನ್ನು ಚಿತ್ರಿಸಿದ್ದಾರಲ್ಲದೆ ವಕ್ರ ಸುಳಿವು, ಮೃದುವಾದ ಛಾಯೆಯನ್ನು ಸಹಜವಾಗಿ ಚಿತ್ರಿಸಿದ್ದಾರೆ. 'ಪ್ರಜ್ಞಾ ಪರಮಿತ' ಎಂಬ ಗ್ರಂಥಗಳಲ್ಲಿ ಚಿತ್ರಿಸಲಾದ ೧೧ ಮತ್ತು ೧೨ನೇ ಶತಮಾನದ ಚಿತ್ರಗಳು ಇನ್ನೂ ಎಷ್ಟೋ ಇವೆ.

ಗುಜರಾತದ 'ಪಾಲಾ' ಜಿನುಗು ಮತ್ತು ಸೂಕ್ಷ್ಮ ಚಿತ್ರಗಳ ಪರಂಪರೆಯು ಐದು ಶತಮಾನಗಳ ಕಾಲ ಅಸ್ತಿತ್ವದಲ್ಲಿತ್ತು. (೧೧ ನೆಯ ಶತಮಾನದಿಂದ ೧೫ ನೇ ಶತಮಾನದವರೆಗೆ) ಈ ಪರಂಪರೆಯ ಚಿತ್ರಗಳು ಎರಡು ಭಾಗವಾಗಿವೆ. ಮೊದಲನೆ ಯದು ತಾಳೆಗರಿಗಳ ಮೇಲೆ ಚಿತ್ರಿಸಲಾದ ಜಿನುಗು ಚಿತ್ರಗಳು; ಎರಡನೆಯದು (ಕ್ರಿ. ಶ. ೧೫೫೦ರಿಂದ ೧೪೫೦) ಕಾಗದದ ಮೇಲೆ. ಮುಂದೆ ಒಳ್ಳೆ ಮಟ್ಟದ ಚಿತ್ರಗಳು ಬರುವವರೆಗೆ ಚಿತ್ರಗಳಲ್ಲಿ ಹೆಚ್ಚಾಗಿ ಪ್ರೊಫೈಲ್ (Profile) ಮುಖಗಳು, ಚೂಪಾದ ಮೂಗು, ಕಮಲಗಣ್ಣುಗಳು ಈ ಜಿನುಗು ಚಿತ್ರಗಳು $2\frac{1}{2}$" $2\frac{1}{2}$" ಅಳತೆ ಯುಳ್ಳವುಗಳಾಗಿವೆ. ಪ್ರಾರಂಭ ದೆಶೆಯಲ್ಲಿ ಈ ಚಿತ್ರಗಳ ಹಿಂಭಾಗ ಇಟ್ಟಂಗಿ ಎಳ್ಳೆಯ ಬಣ್ಣದಂತಿದ್ದವು. ಅನಂತರದ ಚಿತ್ರಗಳಲ್ಲಿ ಎಂದರೆ ೧೫ನೇಯ ಶತಮಾನದ ಅನಂತರ ನೀಲಿ ಮತ್ತು ಬಂಗಾರ ಉಪಯೋಗಿಸುತ್ತಿದ್ದರು. ಈ ಚಿತ್ರಗಳನ್ನು ಸಾಮಾನ್ಯವಾಗಿ ಎರಡು ಭಾಗ ಮಾಡಬಹುದು. ಪ್ರಾರಂಭದ ಚಿತ್ರಗಳು ಜೈನದ ಮತದವು, ಅನಂತರದ ಚಿತ್ರಗಳು ವೈಷ್ಣವ ಇಲ್ಲವೆ ಹಿಂದೂಧರ್ಮದ ಚಿತ್ರಗಳೆನ್ನಬಹುದು.

ಇಲ್ಲಿಯವರೆಗೆ ಬೌದ್ಧ ಮತ್ತು ಜೈನಧರ್ಮದ ಪ್ರಭಾವದಲ್ಲಿ ಬೆಳೆದ ಚಿತ್ರಗಳ ಕಾಲವನ್ನು ಕಂಡೆವು. ಇನ್ನು ಮುಂದೆ ವೈಷ್ಣವ ಇಲ್ಲವೆ ಹಿಂದೂ ಧರ್ಮದ ಕಾಲವನ್ನಿಷ್ಟು ನೋಡೋಣ.

## ವೈಷ್ಣವ ಇಲ್ಲವೆ ಹಿಂದೂ ಚಿತ್ರಗಳು

'ಪಾಲಾ' ಗುಜರಾತಿನ ಚಿತ್ರಗಳಲ್ಲಿ ಎರಡನೆಯ ಭಾಗದ ಚಿತ್ರಗಳೇ ವಿಷ್ಣುವಿನ ವಿಷಯವುಳ್ಳವುಗಳಾಗಿವೆ. ಉದಾ: ಗೀತಗೋವಿಂದ, ಭಾಗವತ ಮತ್ತು ಬಾಲಗೋಪಾಲ ಸ್ತುತಿ ಅಲ್ಲದೆ ಪ್ರೇಮದ ವಿಷಯಗಳೂ ಇವೆ.

'ವಸಂತ ವಿಲಾಸ' ಎಂಬ ಬಟ್ಟೆಯ ಸುರುಳಿ ಚಿತ್ರಗಳು (ಕ್ರಿ. ಶ. ೧೪ರಿಂದ ೧೫) ವಸಂತಕಾಲದ ಸೌಂದರ್ಯವನ್ನು ಪ್ರದರ್ಶಿಸುತ್ತವೆ. ಅಲ್ಲದೆ ಈ ಚಿತ್ರಗಳು ಕವಿ ಮತ್ತು ಅವನ ಹೆಂಡತಿಯ ಪ್ರೇಮವನ್ನು ತೋರಿಸುತ್ತವೆ. ಇವು ರಾಜಸ್ಥಾನದ ಆ ಕಾಲದ ಪ್ರಾರಂಭ ದೆಸೆಯ ಚಿತ್ರಗಳಾಗಿವೆ. ಈ ಚಿತ್ರಗಳಲ್ಲಿ ನಿಷ್ಕಳ ಮತ್ತು ಬಣ್ಣದ ಸ್ವಾರಸ್ಯ, ಚಿತ್ರದ ಓಜಸ್ಸು, ಕ್ಷೀಣ ಮತ್ತು ಸರಳ ರೇಖೆಗಳು ಗಮನಿಸಬೇಕಾದ ವಿಷಯಗಳಾಗಿವೆ. ಚಿತ್ರದ ಪ್ರತಿಯೊಂದು ಭಾಗವೂ ಸಿಂಗಾರಪೂರ್ಣ (Decorative) ಮತ್ತು ಸಮಂಜಸವಾಗಿ ರೂಪಿಸಲ್ಪಟ್ಟಿವೆ.

ರಾಜಸ್ಥಾನ: ರಾಜಸ್ಥಾನದ ಚಿತ್ರಗಳು ಭಾರತ ಕಲೆಯ ಅತಿ ಮುಖ್ಯ ಸ್ಥಾನವನ್ನು ಆಕ್ರಮಿಸಿವೆ. ತನ್ನದೇ ಆದ ಶೈಲಿಯನ್ನು ನಿರ್ಮಿಸಿವೆ. ಭಕ್ತಿ ಮತ್ತು ಪ್ರೇಮ ವಾದವನ್ನು ಒಪ್ಪುವವರ ಮನ ಸೆಳೆಯುತ್ತವೆ. ರಾಜಸ್ಥಾನದ ಪ್ರತಿಯೊಂದು ಜಿನುಗು ಚಿತ್ರಗಳು ಬಹಳ ನಯವಾಗಿವೆಯಲ್ಲದೆ ಭಾರತದ ಸಾಮೂಹಿಕ ಜೀವನದ ಅನುಕಂಪವನ್ನು ನಿವೇದಿಸುತ್ತವೆ. ಕುಮಾರಸ್ವಾಮಿಯವರು "ರಾಜಸ್ಥಾನ ಕತೆಗಾರರು ಜಗತ್ತಿನ ಅತಿ ದೊಡ್ಡ ಕತೆಗಾರರಲ್ಲಿ ಗೌರವದ ಸ್ಥಾನವನ್ನು ಪಡೆಯಲು ಅರ್ಹರು" ಎಂದಿದ್ದಾರೆ. ಜನಗಳ ಎದೆಯಲ್ಲಿ ಈ ಸ್ಫೂರ್ತಿ ದೊರೆಯಲು ಕಾರಣವೆಂದರೆ ಕವಿತೆ, ಸಂಗೀತ, ನಾಟಕ. ಇವು ಅವರ ಜೀವನದ ಸಂಗಡ ಬೆರತುಹೋಗಿವೆ. ಇವುಗಳ ಮೂಲಕಾರಣವೆಂದರೆ ಪ್ರೇಮ.

ಕತೆಗಾರರು ಒಳ್ಳೆ ನಿಚ್ಚಳವಾದ ಬಣ್ಣಗಳನ್ನು ಹಿಂಪರಾವಿಧಾನದಲ್ಲಿ ಪ್ರಭಾವಿತ ಕಟ್ಟುನಿಟ್ಟುಗಳನ್ನು ತೋರಿದು ಬಣ್ಣಗಳ ಸಂಯೋಗವನ್ನು ಮಾಡಿದ್ದಾರೆ. ಜಾನಪದ ರೀತಿ ನೀತಿಗಳನ್ನು ಅನುಸರಿಸಿದ ಚಿತ್ರಗಳು ರಾಜಸ್ಥಾನ ಮತ್ತು ಹಿಮಾಚಲ ಪ್ರದೇಶದಲ್ಲಿವೆ. ಅವರ ಸಾಮಾನ್ಯ ವಿಷಯಗಳೆಂದರೆ ಕೃಷ್ಣನ ಕಾಲಚಕ್ರ, ಸಿಂಗಾರ, ನಾಯಕ ನಾಯಿಕೆಯರ ಪ್ರೇಮ ಶಿವ ಪಾರ್ವತಿಯರ ವಿಲಾಸ ರಾಮಾಯಣ ಮತ್ತು ಮಹಾಭಾರತಗಳ ದೃಶ್ಯಗಳು ಇವಲ್ಲದೆ (ಋತುಮಾನಗಳ ದೃಶ್ಯಗಳು) ರಾಗಮಾಲತಿಯನ್ನು ಚಿತ್ರಿಸಿದ್ದಾರೆ. ರಾಗಮಾಲತಿಯ ಚಿತ್ರಗಳನ್ನು ಕಲಾಮಯವಾಗಿ ಚಿತ್ರಿಸಿ

ದ್ದಾರೆ. ಅವರ ಧಾರ್ಮಿಕದ ಪಟ್ಟ ಉನ್ನತವಾಗಿತ್ತು. ಭಾರತ ಚಿತ್ರಕಲೆಯಲ್ಲಿಯೂ ಉಚ್ಚಮಟ್ಟವನ್ನು ಗಳಿಸಿದ್ದಾರೆ. ೧೭ನೆ ಶತಮಾನದ ಇವರ ಚಿತ್ರಗಳು ಭಾರತದ ಯಾವಕಾಲದ ಚಿತ್ರಗಳಿಗಿಂತಲೂ ಕಡಿಮೆಯಿಲ್ಲ. ಚಿತ್ರಕಲೆ ಮತ್ತು ಸಂಗೀತವನ್ನು ಮಿಶ್ರಮಾಡಿ ಚಿತ್ರಿಸಿದ ಭಾರತ ಚಿತ್ರಕಲೆಯು ಅಪೂರ್ವವಾಗಿದೆ. ರಾಗದ ಚಿತ್ರ ತೆಗೆದು ಅಲ್ಲಿಯ ಜನರ ಬುದ್ಧಿವಂತಿಕೆ ಮತ್ತು ಯೋಗ್ಯತೆಯನ್ನು ತೋರಿಸಿದ್ದಾರೆ

ಸೃಷ್ಟಿಯ ಭೌತಿಕಜಗತ್ತಿನ ಒಂದು ಕನ್ನಡಿಯೆನ್ನುವಂತೆ ಮಾಡಿತೋರಿಸಿದ್ದಾರೆ. ಉದಾ :–'ತೋಡಿರಾಗ–ಒಬ್ಬ ಸುಂದರ ಮಹಿಳೆಯು ವೀಣೆಹಿಡಿದು ಹಾಡುತ್ತಾಳೆ. ಅದರ ಮಿಡಿತವು ಮಿಂಚುಬಣ್ಣದ ಜಿಂಕೆಯನ್ನು ಆಕರ್ಷಿಸುತ್ತದೆ. ಯುವತಿಯನ್ನು ತೋರಿಸುವವೆಂದರೇ ಉದಯಿಸುತ್ತಿರುವ ಯವ್ವನದ ಹೃದಯದಲ್ಲಿ ಪ್ರೇಮವನ್ನು ಚೇತರಿಸುವದು.

ರಾಜಸ್ತಾನದ ಜಿನಗು ಚಿತ್ರಗಳ ಪ್ರಭಾವವು (ಪಹಾಡಿ) ಗುಡ್ಡಗಾಡು ಜಿನಗು ಚಿತ್ರಗಳಲ್ಲಿಯೂ ಕಾಣಬಹುದು. ಜಮ್ಮು, ಬಾಸಷ್ಟೋಲಿ, ಚಂಬ ನರಪೂರ್, ಕಾಂಗ್ರಾ, ಕುಲು, ಮಂದಿ ಮತ್ತು ಸುಕೇಟ್ ಘರ್ವಾಲಿನ ದಕ್ಷಿಣ ಪ್ರದೇಶದ ಉಪ ಪಾಂಡಗಳ ಚಿತ್ರಗಳ ೧೮ನೇ ಮತ್ತು ೧೯ನೇ ಶತಮಾನದ ಪ್ರಾರಂಭ ಕಾಲದ ಊರ್ಜ ಸ್ಥಿತಿಯ ಕಾಂಗ್ರಾ ಪರಂಪರೆಯನ್ನು ಬಹಳ ಮಟ್ಟಿಗೆ ಹೋಲುತ್ತವೆ. ಅಲ್ಲಿಯ ಚಿತ್ರಗಳು ಬಹುವಾಗಿ ಬಾಲಕೃಷ್ಣನ ಚಲ್ಲಾಟ ಮತ್ತು ರಾಧೆಯ ಸಂಗಡ ಪ್ರಣಯ ಲೀಲೆ, ಸಂಗೀತ, ನೃತ್ಯ ಇವೇ ಇವರ ಮುಖ್ಯ ವಿಷಯಗಳಾಗಿವೆ. ಬಾಸ್‌ವ್ಹೋಲಿ ಚಿತ್ರಗಳು ವಾಡಿಕೆಯಂತೆ ಒಳ್ಳೆ ನಿಚ್ಚಳ ಬಣ್ಣಗಳು, ಸಂಜೀವಭಾವ, ಗತಿ, ವಿಶಾಲ ರಚನೆ, ಪ್ರಕಾಶಮಾನವಾದ ಬಣ್ಣದ ಸಮರಸವೆಂದು ಹೇಳಲಾಗುವ ಈ ಚಿತ್ರಗಳು ಗುಡ್ಡಗಾಡು ಪ್ರದೇಶದ ಚಿತ್ರಗಳಲ್ಲಿ ಪ್ರಾಮುಖ್ಯತೆಯನ್ನು ಗಳಿಸಿವೆ.

## ಮೊಗಲರ ಚಿತ್ರಕಲೆ

ಮೊಗಲರ ಆಶ್ರಯದಲ್ಲಿ ಪೋಷಣೆಗೊಂಡು ಪ್ರಕಾಶಿಸಲ್ಪಟ್ಟ ಚಿತ್ರಕಲೆಯು ನೂತನ ಯುಗವನ್ನೇ ನಿರ್ಮಿಸಿದೆ. ತನ್ನದೇ ಆದ ಶೈಲಿಯ ಚಿತ್ರಕಲೆಯನ್ನು ಅಕ್ಬರು ಬಾದಷಹನಿಂದ ಪರಂಪರೆಯನ್ನು ಮುಂದುವರಿಸಲು ನಾಡಿನ ನಾಲ್ಕು ನಿಟ್ಟಿನಿಂದ ಕಲಾವಿದರಿಗೆ ಔತಣ ಕೊಟ್ಟು ಕರೆಯಿಸಿದನು. ರಾಜಸ್ತಾನ, ಗುಜರಾತ ಕಲೆಗಾರರಿಂದ ಸಂಸ್ಕೃತ ಮತ್ತು ಪರ್ಶಿಯದ ಅನುಪಮ ಸಾಹಿತ್ಯದ ಚಿತ್ರಗಳನ್ನು ತೆಗೆಯಿಸಿ ಅಲಂಕರಿಸಿದನು. ಇವುಗಳಲ್ಲಿ 'ತೈಮೂರನಮನೆ' ಎಂಬ ಚಿತ್ರವು ತನ್ನವೇ ಆದ ಶೈಲಿಯಲ್ಲಿ ಅನುಪಮವಾಗಿದೆ. ಇದನ್ನು ಬಂಕೀಪುರದಲ್ಲಿ ಕಾದಿಡಲಾಗಿದೆ. 'ರಜಮನಾಮಾ' ಎಂಬ ಗ್ರಂಥದ ೧೪೯ ಚಿತ್ರಗಳು ಜೈಪೂರದಲ್ಲಿ ಶೇಖರಿಸಲ್ಪಟ್ಟಿವೆ. 'ಹಜಮನಾಮಾ' (ಕಾಲ್ಪನಿಕ ಕಥೆಗಳ ಸಂಕಲನ) ಅಕಬರನ ಹೆಚ್ಚು

ಪ್ರೀತಿಗೆ ಪಾತ್ರವಾದುದರಿಂದ ೧೪೦೦ ಚಿತ್ರಗಳನ್ನು ಬಟ್ಟೆಯ ಮೇಲೆ ತೆಗೆಯಿಸಿದನು. ರಾಮಾಯಣ, 'ಅಕಬರನಾಮಾ' (ಅಬುಲ್‌ಫಜಲ್ ಬರೆದ ಅಕಬರನ ಚರಿತ್ರೆ 'ಅಯಾರೆ-ಎ-ದಾನಿಷ್' ಮುಂತಾದುವುಗಳ ಪ್ರತಿಯೊಂದು ಚಿತ್ರಗಳು ಸಾಮೂಹಿಕ ಕಲೆಗಾರರಿಂದ ಚಿತ್ರಿಸಲ್ಪಟ್ಟವು. ಪ್ರತಿಯೊಂದು ಧರ್ಮದ ಅತ್ಯುತ್ತಮವಾದ ಅಂಶಗಳಿಂದಾಪ್ತ ಪರಂಪರೆಯಾಗಿದ್ದುವು. ಇದು ಅಕಬರನಿಂದ ಮಾತ್ರ ಸ್ಫೂರ್ತಿ ಪಡೆಯಿತು. ರಾಜಸ್ಥಾನ ಮತ್ತು ಪರ್ಶಿಯಾದ ಪರಂಪರೆಯು ಮೂಲ ತತ್ತ್ವವನ್ನು ವಿಲೀನಗೊಳಿಸಿ ಭಾರತೀಯ ಭಾವನೆಯಲ್ಲಿ ಪರಿವರ್ತಿಸಿದರು. ಅಷ್ಟು ಹೊತ್ತಿಗೆ ಮೊಗಲರು ಭಾರತೀಯರೆನಿಸಿಕೊಳ್ಳುವಷ್ಟು ಬೇರು ಬಿಟ್ಟಿದ್ದರು. ಅಂತೆಯೇ ಭಾರತೀಯ ಲಕ್ಷಣವುಳ್ಳ ಚಿತ್ರಕಲೆಯನ್ನು ಪೋಷಿಸಿ ಬೆಳೆಯಿಸಿದ್ದರಿಂದ ಭಾರತದಾದ್ಯಂತ ಹಬ್ಬಿತು. ಮೊದಲು ಇದು ಕೇವಲ ಪುಸ್ತಕ ಅಲಂಕರಿಸಲು ಅರಸು ಪರಿವಾರದವರ ಚಿತ್ರ ತೆಗೆಯಲು, ದರ್ಬಾರದಲ್ಲಿ ಚಿತ್ರಿಸಲು, ಮತ್ತು ಅರಸರ ಜೀವನ ಚಿತ್ರಿಸಲು ಮೀಸಲಾಗಿತ್ತು. ಮೊಗಲ ರೀತಿಯ ಮುಖ್ಯ ಲಕ್ಷಣವೆಂದರೆ ಕಲಾಪೂರ್ಣರೇಖೆ ಮತ್ತು ಬಣ್ಣಗಳಿಂದ ಪ್ರತಿನಿಧಿಸುವುದು.

ಜಹಂಗೀರನು ಚಿತ್ರಗಳಲ್ಲಿ ಅತ್ಯುತ್ಸಾಹ ಮತ್ತು ಪ್ರೇಮವುಳ್ಳವನಾಗಿದ್ದನಲ್ಲದೆ ವಿಪುಲ ಕಲೆಗಳ ಆಶ್ರಯದಾತನಾಗಿದ್ದನು. ವಿಪುಲ ಚಿತ್ರರಾಶಿಯಲ್ಲಿ ಯಾವ ಚಿತ್ರಗಳು ಯಾರಿಂದ ತೆಗೆಯಲ್ಪಟ್ಟವೆ ಎಂಬುದನ್ನು ಕಂಡು ಹಿಡಿಯುತ್ತಿದ್ದನೆಂದು ಹೇಳಲಾಗುತ್ತದೆ. ಹೆಚ್ಚಾಗಿ ಪ್ರಾಣಿ ಪಕ್ಷಿಗಳ ಅಮೂಲ್ಯ ಚಿತ್ರಗಳು ಉಸ್ತಾದ "ಮನ್ಸೂರ"ರಿಂದ ತೆಗೆಯಲ್ಪಟ್ಟವೆ. ಷಹಜಾನನ ಕಾಲದಲ್ಲಿ ಕಲೆಯು ಆ ಮಟ್ಟವನ್ನೇರಲಿಲ್ಲ. ಹೆಚ್ಚಾಗಿ ವಾಸ್ತುಕಲೆಗೆ ಮಹತ್ವ ಸಿಕ್ಕಿತು. ಔರಂಗಜೇಬನ ಕಾಲದಲ್ಲಿಯಂತೂ ಅದು ನಶಿಸಿ ಹೋಗುವ ಸ್ಥಿತಿಯಲ್ಲಿತ್ತು.

ಮೊಗಲರ ಕಲೆಯು ಶಾಖೆಯಂತಿರುವ ದಕ್ಷಿಣ ಭಾರತದ ಪ್ರಾಂತಗಳಾದ ಗೋಳಕೊಂಡ, ವಿಜಾಪುರದ ಅರಸರ ಪ್ರೋತ್ಸಾಹದಲ್ಲಿ ಬೆಳೆದ ಚಿತ್ರಕಲೆಯು ೧೭ನೇ ಶತಮಾನದಲ್ಲಿ ಊರ್ಜಸ್ಥಿತಿಯನ್ನು ಹೊಂದಿತು. ಇವರ ವಿಷಯಗಳು ಔದಾರ್ಯವನ್ನು ತೋರಿಸುತ್ತವೆ. ಪೊಟ್ರೇಟ್, ಪುಸ್ತಕ ಅಲಂಕಾರ, ರಾಗಮಾಲ, ದರ್ಬಾರದ ಕಲೆ ಮತ್ತು ಅರಮನೆ ದೃಶ್ಯಗಳಲ್ಲದೆ ಬಟ್ಟೆಗಳ ಮೇಲೆ ದೊಡ್ಡ ಚಿತ್ರಗಳನ್ನು ಯಶಸ್ವಿ ರೀತಿಯಲ್ಲಿ ಪ್ರಯೋಗಿಸಿದ್ದಾರೆ. ಇವುಗಳ ಪ್ರತಿಯೊಂದು ರೀತಿಯೂ ಮೊಗಲರ ಕಲೆಯನ್ನು ಬಹಳ ಮಟ್ಟಿಗೆ ಹೋಲುತ್ತದೆ.

ಮೊಗಲರ ಕಲೆಯು ವೈಭವಯುತವಾದ ಸ್ವಭಾವವುಳ್ಳದ್ದಾಗಿತ್ತಲ್ಲದೆ ಎಚ್ಚರಿಕೆಯಿಂದ ತಯಾರಿಸಿದ ಚಿತ್ರಗಾರಿಕೆಯಾಗಿತ್ತು. ಇದಲ್ಲದೆ ಅವುಗಳಿಗೆ ಐತಿಹಾಸಿಕ

ಬೆಲೆಯೂ ಇದೆ. ಇವುಗಳಲ್ಲಿ ಗುಣ ಗ್ರಹಣದ ರತ್ನಗಳಂತಿರುವ ಕೆಲವು ಚಿತ್ರಗಳು ಭಾರತೀಯ ಮತ್ತು ಜಗತ್ತಿನ ಕೆಲವು ವಿಮರ್ಶಕರಿಂದಲೂ ಹೊಗಳಲ್ಪಟ್ಟವೆ.

## ಆಧುನಿಕ ಭಾರತೀಯ ಚಿತ್ರಕಲೆ

೧೮ನೇ ಶತಮಾನದವರೆಗೆ ಪೌರಾಣಿಕ ಚಿತ್ರಕಲೆಯ ಪರಂಪರೆಯು ನಡೆದು ಬಂದು ಜಗತ್ತಿನ ಚಿತ್ರಕಲೆಯಲ್ಲಿ ಅತಿ ಮುಖ್ಯ ಸ್ಥಾನವನ್ನು ಗಳಿಸಿತು. ಮಧ್ಯದಲ್ಲಿ ಒಂದು ಶತಮಾನಕ್ಕಿಂತಲೂ ಹೆಚ್ಚುಕಾಲ ಸ್ಥಗಿತಗೊಂಡು ಪೌರಾಣಿಕ ಚಿತ್ರಕಲೆ ಉತ್ಕರ್ಷವನ್ನು ಹೊಂದದಾಯಿತು. ಪಾಶ್ಚಾತ್ಯ ಪ್ರಭಾವದಿಂದ ಅನೇಕರು ತಮ್ಮ ಶೈಲಿಯನ್ನು ಬಿಟ್ಟು ಕೆಳಮಟ್ಟದ ಶೈಲಿಯಕಡೆಗೆ ಹೊರಳಿದರು. ಅಂಥವರಲ್ಲಿ ರಾಜ ರವಿವರ್ಮರು ಮಾತ್ರ ಪಾಶ್ಚಾತ್ಯ ಪದ್ಧತಿಯ ಒಳ್ಳೇ ಚಿತ್ರಗಳನ್ನು ಕೃತಿಗಿಳಿಸಿದರು. ಉಚ್ಚಮಟ್ಟದ ಕೆಲವು ಚಿತ್ರಗಳು ಸಾಮಾನ್ಯ ಜನಗಳಲ್ಲಿ ಪ್ರಚಾರವಿಲ್ಲ. ಅವುಗಳಲ್ಲಿ ಒಂದಾದ 'ತಿರುಕನಮಹಿಳೆ' ಎಂಬ ಚಿತ್ರವು ತ್ರಿವೇಂದ್ರಂದಲ್ಲಿ ಕಾದಿಡಲ್ಪಟ್ಟಿದೆ. ನಮ್ಮ ದಾರಿಯು ಅವನತಿಯ ಕಡೆಗೆ ತಿರುಗಿದೆ ಎಂಬುದನ್ನು ನಮ್ಮ ಜನಗಳು ತಿಳಿಯದೆ ಹೋಗಿದ್ದರು. ಅಂಥ ಸಮಯದಲ್ಲಿ ಲಾರ್ಡ್ ಕರ್ಜನ್ ಎಂಬುವರು ಭಾರತೀಯ ಉಚ್ಚಮಟ್ಟದ ಕಲೆಯನ್ನು, ಸಂಸ್ಕೃತಿಯನ್ನು ನೋಡಿ ಬೆರಗುಗೊಂಡು, ಚಿತ್ರಗಳನ್ನು ರಕ್ಷಿಸುವಲ್ಲಿ ಮತ್ತು ಸಂಗ್ರಹಿಸುವ ಕಾರ್ಯದಲ್ಲಿ ತೊಡಗಿದರು. ಇವರ ಅನಂತರ ಇ. ಬಿ. ಹೆವೆಲ್‌ರು (ಕಲ್ಕತ್ತಾ ಸ್ಕೂಲ್ ಆಫ್ ಆರ್ಟ್ಸದ ಮುಖ್ಯ ಪ್ರಾಧ್ಯಾಪಕರು) ಪಾಶ್ಚಾತ್ಯ ಅನುಕರಣೆಯಲ್ಲಿ ಕೆಳಮಟ್ಟದ ಚಿತ್ರಗಳು ಹೊರಬರುತ್ತಿದ್ದುದನ್ನು ಮನಗಂಡು ರಾಷ್ಟ್ರಕ್ಕೆ ಕಳೆ ತರುವ ಪರಂಪರೆ ಹಾಳಾಗುವದೆಂಬ ಕಳಕಳಿಯಿಂದ ಭಾರತೀಯ ಪೂರ್ವಕಲಾ ಪರಂಪರೆಯನ್ನು ಪುನರುಜ್ಜೀವನಗೊಳಿಸಿದರು. ಪೌರ್ವಾತ್ಯದ ಆಧಾರವನ್ನೇ ಹಿಡಿದು ಬೆಂಗಾಲವು ಆಧುನಿಕ ಚಿತ್ರಕಲೆಯ ಕೇಂದ್ರವಾಯಿತು. ಇದರ ಮುಖ್ಯ ಕರ್ತೃಗಳೆಂದರೆ ಇ.ಬಿ. ಹೆವೆಲ್‌ರೆಂದೇ ಹೇಳಬೇಕು. ಅವರ ವಿಚಾರಗಳನ್ನು ಕೃತಿಗಿಳಿಸಿದವರು ಶ್ರೀಯುತ ಅಬನೀಂದ್ರನಾಥ ಠಾಕೂರರು. ಚೈನಾದ ತಿಲಿಗ್ರಾಫಿಕ್, ಜಪಾನದ ಬಣ್ಣ, ಪರ್ಶಿಯದ ಮುಕ್ತಾಯಗೊಳಿಸುವಿಕೆ-(parcian finishing) ಇವೆಲ್ಲವುಗಳನ್ನು ಸಮರಸಗೊಳಿಸಿ ಆಧುನಿಕ ಚಿತ್ರಕಲೆಗೆ ಒಂದು ಹೊಸ ಪದ್ಧತಿಯನ್ನು ತಂದುಕೊಟ್ಟರು. ಅಂತೆಯೇ ಅವರು "ಭಾರತೀಯ ಚಿತ್ರಕಲಾ ಪಿತಾಮಹ"ರೆಂದು ಬಿರುದು ಗಳಿಸಿದರು. ಒಳ್ಳೆ ಮಟ್ಟದ ಕಲಾವಿದರನ್ನು ಭಾರತ ಇವರಿಂದಲೇ ಪಡೆಯಿತು. ಅವರ ಶಿಷ್ಯವೃಂದದಲ್ಲೊಬ್ಬರಾದ ಶ್ರೀ ನಂದಾಲಾಲ್ ಬೋಸರು 'ಪದ್ಮವಿಭೂಷಣ' ಎಂಬ ಭಾರತ ಸರಕಾರದ ಪ್ರಾಶಸ್ತ್ಯಿಯನ್ನು ಪಡೆದರು. ಶ್ರೀ ಅಬನೀಂದ್ರರಲ್ಲಿ ಪಳಗಿದ ಇವರು ಗುರುವಿನಂತೆ ಎಲ್ಲಾ ಪದ್ಧತಿಯ ಚಿತ್ರಕಲೆಯನ್ನು ಅಭ್ಯಸಿಸಿ ಯಾವುದರಲ್ಲಿಯೂ ಇಲ್ಲದ ವಿನೂತನ ಶೈಲಿಯನ್ನು ಆಧುನಿಕ ಚಿತ್ರಕಲೆಗೆ ಇತ್ತರು. ಇವರ ನೇತೃತ್ವದಲ್ಲಿ ಕಲಾಭವನವು ಉನ್ನತ

ಶಿಖರವನ್ನೇರಿತು. ಇಲ್ಲಿ ಅನೇಕ ಆಧುನಿಕ ಚಿತ್ರಕಾರರು ಹೊರಬಂದು ಪ್ರಸಿದ್ಧಿಯನ್ನು ಪಡೆದರು. ಬಂಗಾಲ ಕೇಂದ್ರವು ನೂತನ ಚಿತ್ರಕಲಾಯುಗದ ಅಡಿಗಲ್ಲು ಹಾಕಿತು. ಈ ಕೇಂದ್ರವು ಅಜಂತ, ರಾಜಪೂತ, ಮೊಗಲ್ ಮತ್ತು ಗುಡ್ಡಗಾಡು ಜನಗಳ ಚಿತ್ರಗಳಿಂದ ಸ್ಫೂರ್ತಿಪಡೆಯಿತು. ಚೈನಾ, ಜಪಾನಗಳಿಂದಲೂ ಸ್ಫೂರ್ತಿ ಪಡೆಯುತ್ತಲಿದೆ.

ಭಾರತ ಚಿತ್ರಕಲೆಯು ೧೮ನೆಯ ಶತಮಾನದವರೆಗೆ ಶಿಖರಕ್ಕೇರಿ ಅನಂತರ ಅವನತಿ ಹೊಂದಿ ೨೦ನೇ ಶತಮಾನದಲ್ಲಿ ಪುನರುನ್ನತಿಯ ಪ್ರಾರಂಭದ ಹೆಜ್ಜೆಯನ್ನಿಟ್ಟಿತು. ಜಗತ್ತಿನ ಸಂಪರ್ಕವಿಲ್ಲದಿದ್ದಾಗ ಭಾರತ ಚಿತ್ರಕಲೆಯು ತನ್ನದೊಂದು ಮಟ್ಟದಲ್ಲಿ ಪರಿಪೂರ್ಣತೆಯನ್ನು ಕಂಡಿತ್ತು. ಈಗ ಜಗತ್ತಿನ ಸಂಪರ್ಕ ಹೆಚ್ಚಾಗಿ ಜಗತ್ತು ಸಣ್ಣದಾಗಿದೆ ಮತ್ತು ಅನೇಕ ಸಂಸ್ಕೃತಿ, ಸಂಸ್ಕಾರಗಳ ಪ್ರಭಾವ ಭಾರತದ ಮೇಲೆ ಬೀಳುತ್ತಲಿದೆ. ಅಂತೆಯೇ ಇಂದಿನ ಕಲೆಯೂ ಅದೇ ರೀತಿಯದಾಗಿದೆ. ಈಗ ಬೆಳೆಯುತ್ತಿರುವ ಚಿತ್ರಕಲಾವಿದರ ಸಂತತಿಯು ಅಶ್ರದ್ಧೆಯುಳ್ಳವರಾಗಿದ್ದುದರಿಂದ ಕೆಳಮಟ್ಟದ ಚಿತ್ರಗಳು ಹೆಚ್ಚಾಗಹತ್ತಿವೆ. ಇಂಥ ಸಮಯದಲ್ಲಿ ಭಾರತ ಸರ್ಕಾರದವರು ಪ್ರೋತ್ಸಾಹ ಕೊಡುತ್ತಿದ್ದುದರಿಂದ ಒಳ್ಳೆ ಕಲೆಗಾರರು ಹುಟ್ಟಿ ಬರುವರೆಂಬ ಆಶೆಯುಳ್ಳವರಾಗೋಣ. ಶ್ರೇಷ್ಠ ಕಲೆಗಾರರಿಗೆ ಹೆಚ್ಚು ಪ್ರೋತ್ಸಾಹ ಸಿಕ್ಕರೆ ಇಂದಿಗೂ ಯಾವ ರಾಷ್ಟ್ರಕ್ಕಿಂತಲೂ ನಾವು ಹಿಂದುಳಿಯಲಾರೆವು.



# ಸಿರಿಯಾಳನ ಕಥೆಯ ಐತಿಹಾಸಿಕತೆ



ಶ್ರೀ ಎಚ್. ದೇವೀರಪ್ಪನವರು

ಶಿವಭಕ್ತ ಸಿರಿಯಾಳನ ಕಥೆ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಗಣ್ಯಸ್ಥಾನವನ್ನು ಆಕ್ರಮಿಸಿದೆ ಎಂದರೆ ತಪ್ಪಾಗಲಾರದು. ಸಿರಿಯಾಳ ರಗಳೆ, ಸಿರಿಯಾಳ ಸಾಂಗತ್ಯ, ಸಿರಿಯಾಳ ವಾರ್ಧಕ ಸಿರಿಯಾಳ ನಾಟಕಗಳಲ್ಲಿ ಇದೇ ಪ್ರಧಾನವಸ್ತು. ಶಿವಶರಣರ ಚರಿತ್ರೆಗಳನ್ನೊಳಗೊಂಡಿರುವ ವೀರಶೈವ ಗ್ರಂಥಗಳಲ್ಲೆಲ್ಲಾ ಈ ಕಥೆಗೂ ಸ್ಥಾನವುಂಟು. 'ಸಿರಿಯಾಳ ಪ್ರಸಂಗ' ಕನ್ನಡ ನಾಡಿನಲ್ಲೆಲ್ಲ ತುಂಬ ಜನಪ್ರಿಯವಾದ ಯಕ್ಷಗಾನ. ಸಾಧು ಸಂತರ ಸೀಮೆಯೆಂದು ಪ್ರಸಿದ್ಧಿ ಗೊಂಡಿರುವ ನಾಡಿನಲ್ಲಿ ಭಕ್ತಿಸಪ್ರಧಾನವಾದ ಕಥೆಗಳು ಜನಮನವನ್ನು ಸೂರೆಗೊಳ್ಳುವುದು ಸ್ವಾಭಾವಿಕ.

ಕನ್ನಡ ಸಾಹಿತ್ಯದಲ್ಲಿ ಬಹುಶಃ ಮೊತ್ತಮೊದಲು ಈ ಹೆಸರು ಕಾಣಿಸಿಕೊಳ್ಳುವುದು ಬಸವಣ್ಣನವರ ವಚನಗಳಲ್ಲಿ.

ಭಕ್ತಿ ಎಂತಹುದಯ್ಯಾ, ಸಿರಿಯಾಳ ಮಾಡಿದಂತಹುದಯ್ಯಾ–೧೪೬ನೇ ವಚನ*  
ಸಿರಿಯಾಳನ ಮಗನ ಬೇಡಿಪಂದಿಂದ ಭಯಕಾಣಿರಣ್ಣಾ ೧೪೭  
ನೆಜಸಿಸಂಜಿ ನೆಜಸಿ ನಂಬೋ ಸಿರಿಯಾಳ ಚಂಗಳೆಯುಂತೆ ೧೪೯  
ಸಿರಿಯಾಳನ ಸಾರ್ದ ನರರೆಲ್ಲಾ ಸುರರಾಗರೆ? ೧೫೧  
ಪರುಷದ ಹೊರೆಯಲ್ಲಿ ಕಬ್ಬುನವೆಲ್ಲಾ ಹೊನ್ನಾಯಿತು ನೋಡಿರೆ;  
ಅವ್ವಾ ಚಂಗಳೇ, ನೀನೆದ್ದೇಳು ಕೇರಿಯುವನು ಲಿಂಗದ ನೋಂಪಿಯ  
ನೋಂತರೆ? ಕೂಡಲಸಂಗಮದೇವಂಗೆ ಚೀಲಾಳನೆಂಬ ಬಾಯಿನವ  
ನಿಕ್ಕಿದರೆ ಹೇಳಾ. ೧೫೨

---

* ಲಿಂ. ಶಿ. ಶಿ. ಬಸವನಾಳರು ಸಂಪಾದಿಸಿರುವ ವಚನಗಳ ಕ್ರಮಸಂಖ್ಯೆ.

ಸಿರಿಯಾಳನಂತೆ ಉಣಲಿಕ್ಕಬಲ್ಲನೆ ? ೩೧೯
ಸಿರಿಯಾಳ ತನ್ನ ಮಗನನಿತ್ತು ಪ್ರಾಣಪ್ರಸಾದವ ಪಡೆದ ೩೨೦
ಸೆಟ್ಟಿಯೆಂಬೆನೆ ಸಿರಿಯಾಳನ ? ೩೪೪
ಎನ್ನಕ್ಕ ಕಂಚಿಯಲ್ಲಿ ಬಾಣಸವ ಮಾಡುವಳು ೩೫೧
ಬೇಡನೆ ಸಿರಿಯಾಳನ ಮಗನ ೪೩೨
ಸಿರಿಯಾಳನ ಮಗನ ಬೇಡಿದಾತನೀವ ೪೩೪
ಸಿರಿಯಾಳನ ಬೇಡದವನ್ನು ಕಂಚಿಯ ಪುರವ ಕೈಲಾಸ
ಕ್ಕೊಯಿದರೆ ನಿಮ್ಮ ದೇವರೆಂಬೆ ೪೪೩
ಕಾಮನಾರಿ ಜಂಗಮನಾಗಿ ಬಂದು ಸಿರಿಯಾಳನ ಮಗನ ಬೇಡಿದ.
ಕೊಟ್ಟ ಸಿರಿಯಾಳಶೆಟ್ಟಿ; ಕಂಚಿಯಪುರವ ಕೈಲಾಸಕ್ಕೊಯ್ದ ೬೨೧
ಸತಿ ಪತಿ ರತಿಸುಖವಬಿಟ್ಟರೆ ಸಿರಿಯಾಳ ಚಂಗಳೆಯರು ? ೬೩೮
ಸಿರಿಯಾಳ ತನ್ನ ಮಗನಕೊಟ್ಟನಲ್ಲದೆ ತನ್ನಕೊಟ್ಟುದಿಲ್ಲ ೬೮೦
ಸಿರಿಯಾಳನ ಮಗನ ಬೇಡುವುದೊಂದು ಗರುವತನವೆ ? ೭೩೯
ಸಿರಿಯಾಳನ ಮಗನ ಬಾಣಸವಮಾಡಿಸಿ ಉಣಲೊಲ್ಲದೆ ಕಾಡಿಸಿದೆ ೧೪೦
ಸಿರಿಯಾಳನಿಂದ ಮಾನಿಸಲೋಕಗಂಡೆ ೭೪೧

ಈ ವಚನಖಂಡಗಳನ್ನು ಗಮನಿಸಿದರೆ ಸಿರಿಯಾಳನ ಪರಮ ಭಕ್ತಿಯ ಪರಾಕಾಷ್ಠೆ ಬಸವಣ್ಣನವರ ಮೇಲೆ ಅವಿಚಲ ಪ್ರಭಾವ ಬೀರಿರಬೇಕೆಂದು ಊಹಿಸಬೇಕಾಗುತ್ತದೆ. ಯಾವ ಪುರಾತನನ ಯಾವ ಶರಣನ ಚಿತ್ರವೂ ಇಷ್ಟೇಸಲ ಬಸವಣ್ಣನವರ ಅನುಭಾವ ಲೋಕದಲ್ಲಿ ಸುಳಿದಿಲ್ಲ. ಈ ವಚನ ಭಾಗಗಳಿಂದ ಸಿರಿಯಾಳ ಚಾರಿತ್ರವನ್ನು ಹೀಗೆ ಕಲ್ಪಿಸಿಕೊಳ್ಳಬಹುದು.

ದ್ರಾವಿಡ ದೇಶದಲ್ಲಿ ಕಂಚೀ ಎಂಬ ಪಟ್ಟಣ. ಅಲ್ಲಿ ಸಿರಿಯಾಳಸೆಟ್ಟಿ ಎಂಬ ಒಬ್ಬ ಮಹಾ ಶಿವಭಕ್ತ. ಅವನ ಮಡದಿ ಚಂಗಳೆಯೂ ಪತಿಯಂತೆಯೇ ಪರಮ ಶಿವಭಕ್ತೆ. ಅವರಿಬ್ಬರಿಗೆ ಚೀಲಾಳನೆಂಬ ಒಬ್ಬನೇ ಒಬ್ಬ ಮಗನಿದ್ದನು. ಜಂಗಮರು ಬಂದು ಏನು ಬೇಡಿದರೂ ನೀಡುವೆನೆಂಬ ಪ್ರತಿಜ್ಞೆ ಸಿರಿಯಾಳನದು. ಹೀಗಿರುವಾಗ ಶಿವನು ಜಂಗಮ ವೇಷಧಾರಿಯಾಗಿ ಬಂದು ಸಿರಿಯಾಳನನ್ನು 'ನಿನ್ನ ಮಗನ ಮಾಂಸವನ್ನು ಉಣಬಡಿಸು' ಎಂದು ಕೇಳಿದನು. ಸಿರಿಯಾಳನು ಇಲ್ಲವೆನ್ನಲಿಲ್ಲ. ಆ ಜಂಗಮನ ಬಯಕೆಯಂತೆ ಚಂಗಳೆಯೇ ಮಗನ ಮಾಂಸವನ್ನು ಬೇಯಿಸಿ ಅಡಿಗೆ ಮಾಡಿದಳು. ಸಂತೋಷದಿಂದ ಮಾಡಿ ಸಂತೋಷದಿಂದ ನೀಡಿದ ಅಡಿಗೆಯನ್ನು ಆ ಜಂಗಮ ಉಣಲೊಲ್ಲದೆ ಕಾಡಿದನು; ಅನಂತರ ನಿಜರೂಪ ತೋರಿದನು. ಕೊನೆಯಲ್ಲಿ ಸಿರಿಯಾಳ ಅದೇ 'ಜಂಗಮ'ದಿಂದ ಪ್ರಾಣಪ್ರಸಾದವ ಪಡೆದು ಕಂಚಿಯ ಪುರವನ್ನು ಕೈಲಾಸಕ್ಕೆ ಕೊಂಡೊಯ್ದನು. 'ಸಿರಿಯಾಳನ ಸಾರ್ದ ನರರಿಲ್ಲಾ ಸುರರಾಗರೆ ?'

'ಸಿರಿಯಾಳನ ರಗಳೆ' ಎಂಬ ಅಪ್ರಕಟಿತ ರಗಳೆಯು[1] ಕಥಾಸರಣಿಗೂ ಈ ಕಥೆಗೂ ಬಹುಮಟ್ಟಿನ ಹೋಲಿಕೆಯಿದೆ.[2] ರಗಳೆಯ ಆದಿಯಲ್ಲಿ ಕಂದದ ನಾಲ್ಕನೆಯ ಪಾದದಲ್ಲಿ 'ಸಿರಿಯಾಳನ ಮೆಚ್ಚಿದನೆಮ್ಮ ಹಂಪೆಯರಾಯಂ' ಎಂದೂ, ಮೂರನೆಯ ಅಂದರೆ ಕಡೆಯ ಸ್ಥಲದ ಕೊನೆಯಲ್ಲಿನ ಕಂದಪದ್ಯದ ನಾಲ್ಕನೆಯ ಪಾದದಲ್ಲಿ 'ವರದ ವಿರೂಪಾಕ್ಷ ಕರುಣಿ ವರಪದವಿತ್ತಂ' ಎಂದೂ ಇದೆ. ಕಥಾಸಾರವಿಷ್ಟು ;

ಕಾಂಚೀ ಪುರದಲ್ಲಿ ವೈಶ್ಯಕುಲತಿಲಕನೆನಿಸಿದ ಅತ್ಯಾಣಸೆಟ್ಟಿ ಎಂಬ ವರ್ತಕನಿದ್ದನು. ಅವನಿಗೆ ಮಕ್ಕಳಿರಲಿಲ್ಲ.

ತನ್ನ ಧನದೇಳ್ಗೆಗೆ ಕುಬೇರನುಂ ಸರಿಯಲ್ಲ
ಉನ್ನತೈಶ್ವರ್ಯಕ್ಕೆ ಮಹಲಕ್ಷ್ಮಿಯುಂ ಸರಿಯಲ್ಲ
ಇಂತಪ್ಪನತ್ಯಾಣಸೆಟ್ಟಿಯುಂ ತಾಂ ನೋಡೆ
ಚಿಂತಿಸಿದ ತನಗೆ ಸುತರಿಲ್ಲೆಂದು ಮನಕೂಡೆ[3]

ಹೀಗೆ ಚಿಂತಿಸುತ್ತಾನೆ. ಆದರೆ ಇವನ ಭಕ್ತಿಗೆ ಮೆಚ್ಚಿದ ಶಿವನು ಇವನಿಗೆ ಪುತ್ರ ಸಂತಾನವನ್ನು ಕರುಣಿಸುತ್ತಾನೆ. ಸಿರಿಯಾಳ ಶಿಶುವಿನ ಶೈಶವ, ಬಾಲ್ಯ ವಿದ್ಯಾಭ್ಯಾಸ, ಯೌವನ, ಅನಂತರ ಆತನು ಧನಪಾಲಸೆಟ್ಟಿಯ ಪುತ್ರಿಯನ್ನು ವರಿಸುವುದು, ಸಾಧ್ಯವಾದ ಮಟ್ಟಿಗೆ ಹರಿಹರನ ಶೈಲಿಯಲ್ಲಿಯೇ ವಿವರಿಸಲ್ಪಟ್ಟಿದೆ. ಸಿರಿಯಾಳನು ಜಂಗಮರಿಗೆ ಅವರು ಬೇಡಿದುದನ್ನು 'ಇಲ್ಲೆನ್ನದೀವ'. ಹೊಗಳಿದರೆ ನೊಂದು ಕಿರಿದಾಗುತ್ತಿದ್ದನಾದುದರಿಂದ ಅವನಿಗೆ ಸಿರಿಯಾಳ್ದನೆಂಬ ಹೆಸರು ಬಂದಿತಂತೆ. ಈತನು ಶಿವಕೃಪೆಯಿಂದ ಪುತ್ರನೊಬ್ಬನನ್ನು ಪಡೆಯುತ್ತಾನೆ. ಆ ಮಗುವಿಗೆ ಚೀಲಾಳ ಎಂಬ ನಾಮಕರಣವಾಗಿ ಜ್ಞಾನಸಂಬಂಧದಿಂದ ಉಪದೇಶವಾಗಿ ಅನಂತರ ಅವನ ವಿದ್ಯಾಭ್ಯಾಸ ಸಾಗುತ್ತಿರುತ್ತದೆ.

---

1. ಇದರ ಮೊದಲನೆಯ ಸ್ಥಲ ಲಲಿತ ರಗಳೆಯಲ್ಲಿಯೂ, ಎರಡನೆಯದು ಕಾವ್ಯಮಯವಾದ ಗದ್ಯದಲ್ಲಿಯೂ, ಇನ್ನೊಂದು ಉತ್ಸಾಹ ರಗಳೆಯಲ್ಲಿಯೂ ಇವೆ. ಹರಿಹರದೇವನು ಒಂದೇ ಕಥೆಗೆ ಎರಡು ಬಗೆಯ ರಗಳೆಗಳನ್ನೂ ಬಳಸಿಲ್ಲವಾದುದರಿಂದ ಇದು ಆ ಕವಿಯದಲ್ಲವೇನೋ ಎನ್ನಿಸುತ್ತದೆ.

2. ಸಿರಿಯಾಳನ ತಾಯಿತಂದೆಗಳ ವಿಚಾರ, ಅವನ ಮದುವೆ–ಈ ಭಾಗ ರಗಳೆಯಲ್ಲಿ ಹೆಚ್ಚು.

3. ಈ ನಾಲ್ಕು ಪಾದಗಳನ್ನು ನೋಡಿದರೆ ಈ ಕೃತಿ ಹರಿಹರನದಿರಲಾರದೆನ್ನಿಸುತ್ತದೆ. ಹರಿಹರನ ಶೈಲಿಗೂ ಈ ಶೈಲಿಗೂ ವ್ಯತ್ಯಾಸವಿದೆ. ರಗಳೆಯ ಆದಿ ಅಂತಗಳಲ್ಲಿ ಹಂಪೆಯ ರಾಯನ ಅಂಕಿತವಿದೆಯಾದರೂ ಮದರಾಸಿನ ಒಂದು ಪ್ರತಿಯಲ್ಲಿ 'ವಿಶ್ವೇಶ' ಎಂಬ ಅಂಕಿತವಿದೆ. ಹರಿಹರಕೃತ ಸಿರಿಯಾಳನ ರಗಳೆ ಇನ್ನೂ ಸಿಕ್ಕಿಲ್ಲವೆಂದೇ ಹೇಳಬೇಕಾಗುತ್ತದೆ.

ಈ ಶೆಟ್ಟಿಯನ್ನು ಪರೀಕ್ಷೆ ಮಾಡಬೇಕೆಂದು ಶಿವನು ಭೈರವ ವೇಷದಿಂದ ಬರುತ್ತಾನೆ. ಆ ಸಮಯದಲ್ಲಿ ಸಿರಿಯಾಳನು ಮನೆಯಲ್ಲಿರುವದಿಲ್ಲ. ತಾನು ಆಚದ ಮರದ ಹತ್ತಿರ ಕಾಯುತ್ತಿರುವೆನೆಂದು ಚಂಗಳೆಗೆ ಹೇಳಿ ಹೋಗುತ್ತಾನೆ. ಮನೆಗೆ ಬಂದ ಸಿರಿಯಾಳನಿಗೆ ಭೈರವನು ಬಂದಿದ್ದನೆಂದೂ ಆಚದ ಮರದ ಬಳಿ ಕಾಯುತ್ತಿರುವನೆಂದೂ ಚಂಗಳೆಯು ತಿಳಿಸುತ್ತಾಳೆ. ಸಿರಿಯಾಳನು ಆ ಭೈರವನೆಡೆಗೆ ಹೋಗುತ್ತಾನೆ. ಆ ಜಂಗಮ 'ನಮ್ಮ ಭೋಜನಕ್ಕೆ ನರಪಿಶಿತವಾಗಬೇಕು' ಎನ್ನುವನು. ಆಗಬಹುದು ಎನ್ನುತ್ತಾನೆ ಸಿರಿಯಾಳ. 'ಪಂಚವರ್ಷದ ಕೋಮಲಾಂಗನಂ ಸರ್ವಾವಯವದೊಳ್ ಕೊಱತೆಯಿಲ್ಲದ ಕುಲಯುತನಪ್ಪ ಸುಕುಮಾರನಂ ಸದಾಚಾರ ಸಂಪನ್ನನಂ ಸಲ್ಲಕ್ಷಣ ಮಾಡಾತನಂ ಮಾತೆಪಿತರ್ ಕೈಯ್ಯಾರೆ ಶಿರಮನರಿಯಲ್ವೇಳ್ಕುಂ. ಆ ತಾಯಿ ನಿಶ್ಚಿಂತೆಯಿಂ ಶಾಕಪಾಕಮಂ ಮಾಡಲೊಡನೆ ಸುಖದಿಂ ಭೋಜನಮಂ ಮಾಳ್ಪೆನು' ಎಂದ.

ಸಿರಿಯಾಳನಿಗೆ ಇಂತ ಅವಕಾಶ ಸಿಕ್ಕಿದುದಕ್ಕಾಗಿ ಇನ್ನೂ ಆನಂದವಾಗುತ್ತದೆ. ಮನೆಗೆ ಬಂದು ತನ್ನ ಮಡದಿಗೆ 'ಮಧುರವಚನದಿಂದ' ಭೈರವನ ನಿಬಂಧನೆಗಳನ್ನು ತಿಳಿಸುತ್ತಾನೆ. ಚೆಂಗಳೆಯೂ ಸಂತೋಷದಿಂದ ಒಪ್ಪಿಕೊಳ್ಳುತ್ತಾಳೆ. 'ಶಿವವೇಷಧಾರಿಯಾದ ಆತನೇ ಭೋಜನ ಮಾಡಬೇಕೆಂದು ನುಡಿದುದು ಚೋದ್ಯವಲ್ಲ. ಬಿತ್ತಿದ ಬೆಳೆಯನ್ನು ಬಿತ್ತಿದವನು ಕೊಯ್ದು ಊಟ ಮಾಡುತ್ತಾನೆ; ಹುಟ್ಟಿಸುವನು ಶಿವ, ಸಂಹರಿಸುವವನೂ ಶಿವನೆ; ಎರಡಕ್ಕೂ ತಾನೇ ಕಾರಣನಾದಮೇಲೆ "ನಾಂ ಪಿಡಿವವಳಲ್ಲ ನೀಂ ಕೊಯ್ವವನಲ್ಲ, ತಾನೆ ಕಾರಣನು." ಎಂದು ಪತಿಗೇ ಉಪದೇಶವೀಯುವಳು. ಅನಂತರ ಸಿರಿಯಾಳನು ಮಗನನ್ನು ಕರೆದುತರಲು ಪಾಠಶಾಲೆಗೆ ಹೋಗುತ್ತಾನೆ.

ಇತ್ತ ಆ 'ಗರಳಗ್ರೀವ' ಸಿರಿಯಾಳನಿಲ್ಲದ ಸಮಯದಲ್ಲಿ ಚೆಂಗಳೆಯನ್ನು ಕುರಿತು "ತಾಯೆ, ಇಂದಿಗೋರ್ವ ರಕ್ಕಸಂಗೆ ನಿನ್ನಣುಗಮಾಹಾರಮಾಡ. ನಿನ್ನೊಡಲೆಂತಕ್ಕುಮೊ, ಎಂತು ಸೈರಿಪುದೊ ನಿನಗೆ"–ಹೀಗೆಂದು ಕೆಣಕುತ್ತಾನೆ. ಚಂಗಳೆಯ ನಿರ್ಧಾರ ಕದಲಲಿಲ್ಲ. ಆ ಮೊದಲೇ ಚೀಲಾಳನಲ್ಲಿಗೂ ಹೋಗಿ, ಅವನನ್ನು ತಪ್ಪಿಸಲೂ ಪ್ರಯತ್ನಿಸುತ್ತಾನೆ. ಈ ಕಪಟ ಜಂಗಮ. "ಕಪಟನಾಟಕನಪ್ಪ ದೇವಂ ಮಗನಂ ನೋಡಿ ಬಿಗಿಯಪ್ಪಿ ಕಂಬನಿದುಂಬುತ್ತಿಂತೆಂದಂ– ಎಲೆಮಗನೆ, ನಿಮ್ಮಯ್ಯನೊರ್ಬ ರಕ್ಕಸಂಗೆ ನಿನ್ನಂ ವಧಿಸಿ ಉಣಲಿಕ್ಕಿದಪನೆಂದಪಂ. ನೀನೆತ್ತಲಾದರೂ ಪೋಗಿ ಅಡಗಿರು ಸತ್ತು ಕಾಣ್ಬ ಸ್ವರ್ಗವೇಕೆ" ಎಂದ ಶಿವನಿಗೆ, ಆ ಐದು ವರ್ಷದ ಮಗು ಹೀಗೆ ಹೇಳುತ್ತಾನಂತೆ: "ಈ ಶರೀರಂ ಸಕಲ ವ್ಯಾಧಿಗೆ ತವರುಮನೆಯಪ್ಪ ದೇಹಂ. ಅನಿತ್ಯಮೆಂಬುದನಱಿಯಾ? ಕೆಡುಪೊಡಲು ನಿತ್ಯನ ಕಾಯಕ್ಕೆ ಸಂದರೆ ಧನ್ಯನಾದೆಂ ಮಾನ್ಯನಾದೆಂ ಪೂಜ್ಯನಾದೆಂ ನೀಂ ಪೋಗು." ತಪಸ್ವಿ ಮೆಚ್ಚಿ ಹಿಂತಿರುಗುತ್ತಾನೆ.

ಅನಂತರ ಸಿರಿಯಾಳನು ಓದುವ ಮಠಕ್ಕೆ ಹೋಗಿ 'ಬಾಯೆನ್ನ ಪುಣ್ಯದ ಫಲವೆ, ಬಾಯೆನ್ನ ಮುಕ್ತಿನ ನೆಲೆಯೇ' ಎಂದು ಕೊಂಡಾಡಿ ಎತ್ತಿಕೊಂಡು ಬರುತ್ತಾನೆ. ತಾಯಿ ತಂದೆಗಳೆ ಅವನನ್ನು ಕಯ್ಯಾರೆ ಕತ್ತರಿಸಬೇಕಷ್ಟೆ. "ಎನ್ನಾಳ್ದ ನಾರೋಗಿಪ ಮಧುರಫಲವಿತನೆಂದು ಭಯದಿಂದಿರ್ವರ್ ಮೂರ್ಧ್ನಿಘ್ರಾಣಮಂಡಲು" ಬಲ್ಲರು. ತನು ಸೋಂಕದೆ ಮನದಲ್ಲಿಯೆ ಬಿಗಿಯಪ್ಪುವರು. ಇನ್ನೇನು ಅವನನ್ನು ಕತ್ತರಿಸಬೇಕು, ಆ ಸಮಯದಲ್ಲಿ ಬಾಲಕ, "ಎನ್ನಮೇಲಣ ಮೋಹಮಂ ಬಿಟ್ಟು ಪನ್ನಗಧರಂಗೆ ಸಂತಸಮಪ್ಪಂತೆ ಮಾಡಿ" ಎಂದು ಅವರನ್ನು ಎಚ್ಚರಿಸುತ್ತಾನೆ. ಶಿರದ ಮಾಂಸ ಅಭೋಜ್ಯವೆಂದು ಶಿರವನ್ನುಮಾತ್ರ ತೆಗೆದಿಟ್ಟು ಉಳಿದ ಪಿಶಿತವನ್ನು ಸುಗಂಧ ದ್ರವ್ಯಗಳನ್ನೂ ಸಂಭಾರ ದ್ರವ್ಯಗಳನ್ನೂ ಬೆರಕಿಸಿ ತಾಯಿಯೆ ಬೇಯಿಸುತ್ತಾಳೆ. ಅಡಿಗೆ ಸಿದ್ಧವಾಗುತ್ತದೆ.

ಸಿರಿಯಾಳನು, ಆಚದ ಮರದ ನೆಳಲಿನಲ್ಲಿ ಮೂರ್ತಿಗೊಂಡಿದ್ದ ಶಿವನನ್ನು ಕರೆಯಲು ಬಂದಾಗ, ಆತನ ನಿಷ್ಠೆಗೆ ಮೆಚ್ಚಿದರೂ ತನ್ನ ನಿಜರೂಪವನ್ನು ತೋರುವುದಿಲ್ಲ. ತುಳುಕುತ್ತಿದ್ದ ಗಂಗೆಯನ್ನು ಜಡೆಯಲ್ಲಿ ಅಡಗಿಸುತ್ತಿದ್ದನಂತೆ. ನೊಸಲಕಣ್ಣನ್ನು ಭಸ್ಮ ಧರಿಸಿಕೊಳ್ಳುವ ನೆವದಿಂದ ಒತ್ತಿಕೊಳ್ಳುತ್ತಿದ್ದನಂತೆ.

ಶಿವಕಳೆಯಿಂದ ಬೆಳಗುತ್ತಿರುವ ರತ್ನಖಚಿತ ಗದ್ದುಗೆಯ ಮೇಲೆ ಕುಳಿತುಕೊಳ್ಳುತ್ತಾನೆ ಆ ಜಂಗಮ. ರನ್ನದಡ್ಡಣಿಗೆಯ ಮೇಲೆ ಹೊನ್ನಿನ ಹರಿವಾಣದಲ್ಲಿ ತನ್ನ ಮಗನ ಮಾಂಸದಿಂದ ಮಾಡಿದ ಅಡುಗೆಯನ್ನು ಭಕ್ತಿಭರಿತಳಾಗಿ ಎಡೆ ಮಾಡುತ್ತಾಳೆ. ಆದರೆ ಇಂಥ ಉಪಚಾರದಲ್ಲಿಯೂ ಆ ಶಿವ ಒಂದು ಕುಂದನ್ನೆಣಿಸುತ್ತಾನೆ. ಮಾಂಸದಲ್ಲೆಲ್ಲ ಶಿರದ ಮಾಂಸ ಶ್ರೇಷ್ಠವಂತೆ. ಅದನ್ನು ಬಡಿಸಿಲ್ಲವಂತೆ. ಅದನ್ನು ಬಡಿಸುತ್ತಾರೆ. ಆದರೆ ಆ ಜಂಗಮನ ಜೊತೆಗೆ ಕುಳಿತು ಭೋಜನ ಮಾಡಿದರೇ ಅವನಿಗೆ ಸಂತೋಷವಂತೆ. ಸಿರಿಯಾಳನು ಕೇರಿ ಕೇರಿಯಲ್ಲಿ ಹುಡುಕಿ, ಯಾರೂ ಸಿಕ್ಕದಿರಲು ತಾನೇ ಜೊತೆಗೆ ಕುಳಿತು ಊಟ ಮಾಡುವೆನೆಂದು ತಿಳಿಸುತ್ತಾನೆ. ಮಗನ ಮಾಂಸ, ಬಡಿಸುವಳು ಹೆಂಡತಿಯೆ. ತಾನು ಉಣ್ಣಬೇಕು. ಉಣ್ಣದಿದ್ದರೆ ಜಂಗಮ ಪ್ರಸನ್ನನಾಗುವುದಿಲ್ಲ. ಚಂಗಳೆ ತಂದು ಬಡಿಸಿದ ಅಡುಗೆಯನ್ನು ಅತಿಥಿಯೂ ಬೇಗ ಬೇಗ ಸ್ವೀಕರಿಸಲೆಂಬ ಆಸೆಯಿಂದ, ಅವನಿಗಿಂತ ಮೊದಲು ತಾನೇ ಊಟಮಾಡಲು ಇನ್ನೇನು ತಟ್ಟೆಗೆ ಕೈಯಿಡಬೇಕು, ಆಗ ಆ ಜಂಗಮ ಇನ್ನೊಂದು ಆಟ ಹೂಡುತ್ತಾನೆ: 'ನಿನ್ನ ಮಗನನ್ನು ಕರೆ, ಅವನು ನನ್ನೊಡನೆ ಊಟ ಮಾಡಲಿ. ಮೊದಲು ಅತಿಥಿ ಉಂಡಮೇಲೆ ಭೃತ್ಯ ಊಟ ಮಾಡುವುದು ಸರಿಯಾದ ಕ್ರಮ" ಎನ್ನುತ್ತಾನೆ. ಯಾವ ನೆಪವನ್ನು ಹೇಳಿದರೂ ಅವನು ಊಟ ಮಾಡದೆ "ಸುತನಜಿಸಿ ಬೇಗ ತಂದೊಡಲ್ಲದಾನು ಉಣ್ಣೆನು" ಎಂದು ಬಿರಿ ಹಾಕುತ್ತಾನೆ.

ಇವೆಲ್ಲ ಜಂಗಮನ ಕರುಣೆಯೆ ಎಂದು ತಿಳಿದ ಸಿರಿಯಾಳನ ಮಡದಿ

ಮಗನಕರೆಯಲೆಂದು ಶಂಕೆಯಿಲ್ಲದಿರ್ದರೆಳ್ದು ಪೋಗಿ
ಮಗನೆ ಮಗನೆ ಬಾರೆನುತ್ತ ತಂದೆ ಕರೆದು ನೋಡಿ ಬೇಗಿ
ಕಲದ ಮಣಿಯೆ ಗುಣದ ಖಣಿಯೆ ಕಾಂಬಿನಾಥ ಬಾರೆನುತ್ತ
ಕುಲಜರಹಿತ ಭಕ್ತಿಭರಿತ ಭುಂಜಿಸಲ್ಕೆ ಬಾರೆನುತ್ತ
ಕಾಣಬಾರದಿರ್ಪ ಸುತನ ನಿಂತು ಮಾತೆ ಕರೆವುತಿರಲು

ಅಣುಗ ಬಂದೇ ಬಂದ! ರತ್ನ ಖಚಿತ ಕಂಕಣಗಳನ್ನು ಧರಿಸಿದ ಕಾಲಿನಲ್ಲಿ ಗೆಜ್ಜೆ ಕಟ್ಟಿ ನಗುನಗುತ್ತ ಕುಣಿಯುತ್ತ ಬರುತ್ತಾನೆ ಚೀಲಾಳ. ಕಮಲದಂತಹ ಹೊಳೆ ಹೊಳೆಯುವ ಕಣ್ಣುಗಳ ವರಕುಮಾರ. ಬಂದು ತಾಯಿಯನ್ನು ಅಪ್ಪಿಕೊಳ್ಳುತ್ತಾನೆ. ಪಾಕ ಗಂಧವು ಅಣುಗನ ಅವಯವಗಳಲ್ಲಿ ತೋರಿಬರುತ್ತಿರುತ್ತದೆ.

ಮಗನನ್ನೊಡಗೊಂಡು ಈಗ ತಪಸ್ವಿಯು ಊಟಮಾಡಿಯೇ ಮಾಡುವ ನೆಂಬ ಭರವಸೆಯಿಂದ ಸತಿ–ಪತಿ, ಚೀಲಾಳ ಬರುತ್ತಾರೆ: ಅಲ್ಲಿ ಜಂಗಮ ಮಂಗ ಮಾಯ! ಹರಿವಾಣದಲ್ಲಿದ್ದ ಅಡಿಗೆಯೂ ಮಂಗಮಾಯ. ಜಂಗಮದೇವನನ್ನು ತೃಪ್ತಿಪಡಿಸಲಾಗಲಿಲ್ಲವೇ ಎಂದು ಇವರು ಕೊರಗುತ್ತಿರಲು ಶಿವನೇ ಪ್ರತ್ಯಕ್ಷನಾಗು ತ್ತಾನೆ. ಹೂಮಳೆ ಕರೆಯುತ್ತದೆ. ಸುರದುಂದುಭಿ. ಸಿರಿಯಾಳನು ಬಂಧುಬಾಂಧ ವರೇ ಮೊದಲಾಗಿ ಏಳು ಕೇರಿಯ ಜನರನ್ನು ಕರೆದುಕೊಂಡು ಕೈಲಾಸಕ್ಕೆ ಏರುತ್ತಾನೆ.

ಬಸವಣ್ಣನವರ ವಚನಗಳಲ್ಲಿ ಸೂಚ್ಯವಾಗಿ ಹೇಳಿರುವ ಕಥೆಗೂ ಈ ಕಥನಕ್ಕೂ ಕೊಂಚ ವ್ಯತ್ಯಾಸ. ಸಿರಿಯಾಳನು ತಾಯಿ-ತಂದೆಗಳ ವೃತ್ತಾಂತ, ಅವನ ಮದುವೆಯ ಪ್ರಸ್ತಾಪ ರಗಳೆಯಲ್ಲಿ ಹೆಚ್ಚು. ಈ ಪ್ರಸ್ತಾಪ ಇನ್ನಾವ ಕನ್ನಡ ಕಾವ್ಯಗಳಲ್ಲಿಯೂ ಪ್ರಾಯಶಃ ಬಂದಿಲ್ಲ. ಬಸವಪುರಾಣ ಮೊದಲಾಗಿ ಭೈರವೇಶ್ವರ ಕಾವ್ಯಸೂತ್ರ ರತ್ನಾ ಕರ ಕಡೆಯಾಗಿ, ಎಲ್ಲ ವೀರಶೈವ ಕಾವ್ಯಗಳಲ್ಲಿಯೂ ವಚನಗಳಲ್ಲಿ ಸೂಚಿಸಿರುವ ಕಥೆಯೇ ಚಿತ್ರಿಸಲ್ಪಟ್ಟಿದೆ. ಸಿರಿಯಾಳ, ದಭ್ರಭಕ್ತ, ಚಿರುತೊಂಡ–ಈ ಮೂರೂ ಒಬ್ಬನ ಹೆಸರುಗಳೆ.

ತಮಿಳು ಪೆರಿಯ ಪುರಾಣದ ಕಥೆಗೂ ಈ ಕಥೆಗೂ ಕೆಲವು ಗಮನಾರ್ಹವಾದ ವ್ಯತ್ಯಾಸಗಳಿವೆ. ಆ ಕಾವ್ಯದಲ್ಲಿ ಹೇಳಿರುವಂತೆ ಸಿರಿಯಾಳನು ತಿರುಚೆಂಗಟ್ಟಾಂಗುಡಿ ಎಂಬ ಗ್ರಾಮದವನು; ಅಮಾತ್ಯವರ್ಗದ ಬ್ರಾಹ್ಮಣ ಶ್ರೇಷ್ಠನು. ಸಕಲ ಶಾಸ್ತ್ರ ಗಳನ್ನೂ ಪರಂಪರೆಯಿಂದ ಅರಿತವನು, ತನ್ನ ಗುಣಶೀಲ ಸಂಪನ್ನತೆಯಿಂದ ಪರಂಜ್ಯೋತಿ ಎಂದು ಪ್ರಖ್ಯಾತನಾದವನು. ವಾತಾಪಿ ದೊರೆಯನ್ನು ಸೋಲಿಸಿ ತನ್ನ ಸ್ವಾಮಿಯಾದ ಪಲ್ಲವ ನರಸಿಂಹನನ್ನು ಮೆಚ್ಚಿಸಿದವನು. ದೊರೆ ಈತನು ಮಹಾ ಶಿವಭಕ್ತನೆಂದು, ಈತನಿಂದ ಸೇವೆ ಮಾಡಿಸುವುದು ಒಳ್ಳೆಯದಲ್ಲವೆಂದೂ ಸಕಲ ಮರ್ಯಾದೆಗಳೊಂದಿಗೆ ಈತನನ್ನು ಕಳುಹಿಸಿಕೊಡುತ್ತಾನೆ. ಇವನ ನಡೆ

ನುಡಿ ಭಕ್ತಿ ಭಾವಗಳನ್ನು ಮೆಚ್ಚಿದ ಜನರು ಇವನಿಗೆ ಸಿರುತ್ತೊಂಡನೆಂದು ಕರೆದರು. ಇವನ ಹೆಂಡತಿಯ ಹೆಸರು ತಿರುವೆಂಗಡ ಮಂಗೈ, ಮಗ ಸೀರಾಳ, ದಾಸಿ ಚಂದನಪ್. ಶಿವನು ಪ್ರತ್ಯಕ್ಷನಾಗಿ ಕೈಲಾಸಕ್ಕೆ ಕರೆದೊಯ್ಯುವುದು ಈ ನಾಲ್ವರನ್ನು ಮಾತ್ರ; ಕಂಚಿಯ ಏಳು ಕೇರಿಗಳನ್ನೂ ಅಲ್ಲ. ರಾಜಾಸ್ಥಾನದಿಂದ ಈತ ತನ್ನ ಸ್ವಂತ ಊರಾದ ತಿರುಚ್ಚೆಂಗಟಾಂಗುಡಿಗೆ ಬಂದು ಗಣಪತೀಶ್ವರನನ್ನು ಆರಾಧಿಸುತ್ತ ಜಂಗಮರು ಏನು ಬೇಡಿದರೂ ಸಂತೋಷದಿಂದ ಕೊಟ್ಟು, ಅವರನ್ನು ಸಂತೋಷಪಡಿಸುತ್ತ ಇರುತ್ತಾನೆ. ಭೈರವ-ಜಂಗಮ ಪ್ರಸಂಗ ನಡೆದುದು ಇಲ್ಲಿ, ಕಂಚಿಯಲ್ಲಲ್ಲ.

'ಅಗಸ್ತ್ಯಭಕ್ತವಿಲಾಸ' ಎಂಬ ಸಂಸ್ಕೃತ ಗ್ರಂಥದಲ್ಲಿ ಹೇಳಿರುವ ಕಥೆಗೂ ಈ ಕಥೆಗೂ ತುಂಬ ಹೋಲಿಕೆಯಿದೆ. ಕೆಲವು ಸನ್ನಿವೇಶಗಳನ್ನು ಸಂಸ್ಕೃತ ಕವಿ ಇನ್ನಷ್ಟು ವಿಸ್ತರಿಸಿ ಹೆಚ್ಚು ರಸಭರಿತವಾಗುವಂತೆ ಮಾಡಿರುತ್ತಾನೆ. ಆದರೆ ಇಲ್ಲಿ ತಿರುಚೆಂಗಟಾಂಗುಡಿ ಇಲ್ಲಿ ಅರುಣಾರಣ್ಯಪುರವಾಗಿದೆ; ತಿರುವೆಣ್ ಕಾಟ್ಟು ಮಂಗೈ ಶ್ರೀ ಶ್ವೇತಾರಣ್ಯನಾಥಾ ಎಂದಾಗಿದೆ. ಪೆರಿಯ ಪುರಾಣದಲ್ಲಿ ದೊರೆಯ ಹೆಸರು ಗೊತ್ತಾಗುವಂತಿಲ್ಲ. ಭಕ್ತವಿಲಾಸದಲ್ಲಿ 'ಚೋಳಭೂಪತಿ' ಎಂದಿದೆ. ಪ್ರಾಯಶಃ ಉಪಮನ್ಯು ಭಕ್ತವಿಲಾಸವನ್ನು ಅನುಸರಿಸಿ ಸಂಗ್ರಹಿಸಿ ಕನ್ನಡ ಗದ್ಯದಲ್ಲಿ ಬರೆದಿರುವ ಅರುವತ್ತುಮೂವರ ಚರಿತ್ರೆಯಲ್ಲಿನ ಕಥೆಯೂ ಇದನ್ನೇ ಬಹುಮಟ್ಟಿಗೆ ಹೋಲುತ್ತದೆ.

ಕಳಲೆ ನಂಜರಾಜನು (ಸು. ಕ್ರಿ.ಶ. ೧೭೪೦) 'ಭಕ್ತವಿಲಾಸದರ್ಪಣ' ಎಂಬ ಗ್ರಂಥವನ್ನು ರಚಿಸಿದ್ದಾನೆ. "ಉಪಮನ್ಯು ಮುನೀಂದ್ರನು ಶಿಷ್ಯರಿಗೆ ಹೇಳಿದ ಅರ್ಥವನ್ನು ಅಗಸ್ತ್ಯಮುನೀಂದ್ರನು ಕಾಂಚೀ ಕ್ಷೇತ್ರ ನಿವಾಸಿಗಳಾದ ಋಷಿಗಳಿಗೆ ತಿಳುಹಿಸಿದನು"–ಎಂದು ಪ್ರತಿಪ್ರಕರಣದ ಅಂತ್ಯದಲ್ಲಿ ಹೇಳಲಾಗಿದೆ. ಇದೂ ಪೆರಿಯ ಪುರಾಣವನ್ನೇ ಹೋಲುತ್ತದೆ. ಆದರೆ ಸಣ್ಣ ಪುಟ್ಟ ವ್ಯತ್ಯಾಸಗಳುಂಟು. ಸಿರಿಯಾಳನು ಇಲ್ಲಿ ಶಿವದತ್ತ. ಚೆಂಗಳೆ ಶ್ವೇತನವನಾಯಕಿ. ಆತನ ತಂದೆಯ ಹೆಸರು ಪರಂಜ್ಯೋತಿ. ತಂದೆ ಮಗ–ಇಬ್ಬರೂ ಚೋಳರಾಜನಲ್ಲಿ ದಂಡನಾಯಕರಾಗಿದ್ದು ಅವನ ಶತ್ರುಗಳನ್ನು ಸದೆಬಡಿದು ಪ್ರಖ್ಯಾತರಾದವರು. ದಭ್ರಸಭಾಪತಿಯನ್ನು ಶಿವದತ್ತನು ಆರಾಧಿಸುತ್ತಿದ್ದುದರಿಂದ ಆತನಿಗೆ ದಭ್ರಭಕ್ತ ಎಂಬ ಹೆಸರು ಬಂದಿತು. ಈ ಭಕ್ತ ಕಂಚಿಯ ಏಳು ಕೇರಿಗಳನ್ನೂ ಕೈಲಾಸಕ್ಕೊಯ್ಯಲಿಲ್ಲ. ಇದಕ್ಕೂ ತಮಿಳು ಕಥೆಯೇ ಮೂಲ.

ಅಂತೂ ವೀರಶೈವರು ಹೇಳಿರುವ ಸಿರಿಯಾಳನ ಕಥೆಗೂ, ತಮಿಳು ಸೀಮೆಯ ಕಥೆಗೂ ವ್ಯತ್ಯಾಸವುಂಟು. ಸಿರಿಯಾಳನ ರಗಳೆಯೊಂದು ಈ ಹೇಳಿಕೆಗೆ ಹೊರತು. ರಗಳೆಯಲ್ಲಿ, ಬಸವೇಶ್ವರ ವಚನಗಳಲ್ಲಿ ಒಳಗೊಂಡಿರುವ ಕೆಲವು ಸನ್ನಿವೇಶಗಳು ವಿವರಿಸಲ್ಪಟ್ಟಿವೆ. ಕಥಾಸರಣಿ 'ಅಗಸ್ತ್ಯಭಕ್ತವಿಲಾಸ'ವೆಂಬ ಸಂಸ್ಕೃತ ಕಾವ್ಯದ ಕಥೆಯನ್ನೇ ಸಂಪೂರ್ಣವಾಗಿ ಹೋಲುತ್ತದೆ. ಈ ರಗಳೆಯನ್ನು ರಚಿಸಿರುವ ಕವಿ ವೀರಶೈವರ ಮತ್ತು ತಮಿಳು ಶೈವರ ಹೇಳಿಕೆಗಳನ್ನು ಒಂದುಗೂಡಿಸಿದ್ದಾನೆನ್ನಬಹುದು.

ಅತ್ಯಾಣ ಸೆಟ್ಟಿಯ ಸಮಾಚಾರ ಮಾತ್ರ ಇಲ್ಲಿ ಹೊಸತು. ಇದು ಶಿವಜಂಗಮನು ಅತ್ತಿಯಮರದ ನೆರಳಿನಲ್ಲಿ ಕಾಯುತ್ತ ನಿಂತಿದ್ದನೆಂಬ ಸಂಗತಿಯ ಆಧಾರದ ಮೇಲೆ ಕಟ್ಟಿದುದಾಗಿರಬೇಕು. ಆದುದರಿಂದಲೇ ಪೆರಿಯಪುರಾಣದ ಆಧಾರದ ಮೇಲೆ ಕಟ್ಟಿದುದಾಗಿರಬೇಕು. ಆದುದರಿಂದಲೇ ಪೆರಿಯಪುರಾಣದ ಅತ್ತಿಯ ಮರವಲ್ಲ, ಶಿವನಿಗೆ ಆಶ್ರಯ ಕೊಟ್ಟುದು; ಅಗಸ್ತ್ಯರು ಹೇಳಿರುವ ಅಗಸೆಯ ಮರವಲ್ಲ, ಉಪಮನ್ಯು ಹೇಳಿರುವ ವಟವೃಕ್ಷವಲ್ಲ; ಅದು ಆಚದ ಮರ. ಮುಖ್ಯಕಥೆಯಂತು 'ಭಕ್ತವಿಲಾಸ'ವನ್ನು ಹೋಲುತ್ತದೆ.

ಈ ಕಥೆಯ ಮೂಲವೆಲ್ಲಿ? ಶೈವ ಸಂಸ್ಕೃತಿಯಿಂದಲೇ ಒಡಮೂಡಿದುದೊ? ಬೇರೊಂದು ಸಾಹಿತ್ಯದಿಂದ ತಂದ ಸಸಿಯೋ ಇದು? ಇದು ಇಷ್ಟು ಜನಪ್ರಿಯತೆಯನ್ನು ಗಳಿಸುವುದಕ್ಕೆ ಕಾರಣ ಏನಿರಬಹುದು? ಈ ಕಥೆಯಲ್ಲಿ ಹುದುಗಿರುವ ಮಹತ್ತತ್ವ ಏನು?-ಎಂಬುದನ್ನೆಲ್ಲ ಕುರಿತು ಯೋಚಿಸುವುದು ಅನುಚಿತವಾಗಲಾರದು.

ಶೈವರ ಮತ್ತು ವೀರಶೈವರ ಸಿರಿಯಾಳ ಒಬ್ಬನೇ ಎಂಬುದು. ಎರಡು ಸಂಪ್ರದಾಯಗಳ ಕಥಾಸರಣಿಯೂ ಪರಸ್ಪರ ಭಿನ್ನವಾದವೆಂಬುದೂ ಮೇಲ್ಕಂಡ ಕೆಲವು ವಿಷಯಗಳನ್ನು ಗಮನಿಸಿದರೆ ಗೊತ್ತಾಗುತ್ತದೆ. ಅಂತೂ ಈ ರೀತಿಯ ಇಕ್ಕಟ್ಟಿಗೆ ಸಿಕ್ಕಿ ಪಾರಾದವನು ಒಬ್ಬನೆ. ಅವನ ಹೆಸರು ಸಿರಿತೊಂಡನೊ ಸಿರಿಯಾಳನೊ ದಭ್ರಭಕ್ತನೊ-ಎಲ್ಲ ಮಾತುಗಳ ಅರ್ಥವೂ ಒಂದೆ.

ತಿರುಜ್ಞಾನ ಸಂಬಂಧರೇ ಸಿರುತೊಂಡರನ್ನು ಶ್ಲಾಘಿಸಿ ಪದ್ಯರಚನೆ ಮಾಡಿರುವರೆಂದು ಗೊತ್ತಾಗುತ್ತದೆ. ತಿರುನೀಲಕಂಠರು, ಸಿರುತ್ತೊಂಡರು, ವಾಗೀಶರು, ಸಂಬಂಧರು ಮುರುಘನಾಯನಾರರ ಮಠದಲ್ಲಿ ಶೇಕ್ಕಿಳಾರರ ವಾಗೀಶಪುರಾಣದಿಂದ ಗೊತ್ತಾಗುತ್ತದೆ. ಈ ಸಂಗತಿ ಎಷ್ಟರಮಟ್ಟಿಗೆ ಐತಿಹಾಸಿಕವೋ ಹೇಳಲಾಗದು. ಶೇಕ್ಕಿಳಾರ ಕವಿಯು ಎರಡನೆಯ ಕುಲೋತ್ತುಂಗನ (ಕ್ರಿ.ಶ. ೧೧೩೩-೧೧೫೦) ಸಮಕಾಲೀನನು. ಬಸವಣ್ಣನವರೂ ಅದೇ ಕಾಲದವರು. ಅವರು ಶೇಕ್ಕಿಳಾರನ ಪೆರಿಯ ಪುರಾಣವನ್ನು ನೋಡಿರುವಂತೆ ಕಾಣುವುದಿಲ್ಲ. ಮೇಲೆಯೇ ತಿಳಿಸಿರುವಂತೆ ಈ ಎರಡು ಕಥಾಸರಣಿಗೂ ವ್ಯತ್ಯಾಸವಿದೆ. ಆದುದರಿಂದ ಬಸವಣ್ಣನವರು ಪುರಾತನ ಶೈವರ ಕಥೆಗಳನ್ನೊಳಗೊಂಡ ಇನ್ನಾವುದೋ ಪ್ರಾಚೀನ ಗ್ರಂಥವನ್ನು ನೋಡಿರಬೇಕು. ಅಥವಾ ಓದಿಸಿ ಕೇಳಿರಬೇಕು ಎಂದು ಊಹಿಸಬೇಕಾಗುತ್ತದೆ. ಹರಿಹರ ಮಹಾಕವಿಯು ಹೇಳಿರುವ ಪುರಾತನ ಕಥೆಗಳಿಗೂ ಪೆರಿಯ ಪುರಾಣ, ತಿರುತ್ತೊಂಡರ್ ತೊಹೈ, ತಿರುವಂದಾದಿಗಳ ಕಥೆಗಳಿಗೂ ಅನೇಕಕಡೆ ಸಂಪೂರ್ಣ ಹೋಲಿಕೆ ಇಲ್ಲವಾದುದರಿಂದ ಆ ಕವಿಯೂ ಪೆರಿಯ ಪುರಾಣವನ್ನಲ್ಲದೆ ಬೇರೊಂದು ಗ್ರಂಥದ ಪರಿಚಯ ಪಡೆದಿರಬೇಕು.

ಜನತೆಯ ಭಾವ ಭಾಷೆ ನಾಣ್ಣುಡಿಗಳನ್ನೂ ಜನತೆಯಲ್ಲಿ ರೂಢಮೂಲವಾಗಿದ್ದ ಜಾನಪದ ಕಥೆಗಳನ್ನೂ ಒಳಸಿಕೊಂಡು ಅವುಗಳ ಮೂಲಕವೇ ಬೇರೆ ಬೇರೆ ಪಂಥದವರು ತಮ್ಮ ತತ್ವಗಳನ್ನು ಪ್ರಸಾರ ಮಾಡಿದರೆಂದು ತೋರುತ್ತದೆ.

ಅಂಥ ಸಂದರ್ಭಗಳಲ್ಲಿ ಆ ಜಾನಪದ ಕಥೆಗಳು ಆಯಾ ಪಂಥದವರ ಮೂಗಿಗೆ ನೇರವಾಗಿ ಮಾರ್ಪುಗೊಂಡಿರುವುದೂ ಸಹಜವೆ. ಪಾರಿವಾಳವನ್ನು ಉಳಿಸಲೆಂದು ತನ್ನ ಮಾಂಸವನ್ನೇ ನೀಡಿದ; ಕಣ್ಣನ್ನು ಕೇಳಿದರೆ ಕಣ್ಣನ್ನೂ ಹೃದಯವನ್ನು ಕೇಳಿದರೆ ಹೃದಯವನ್ನು ಕೊಟ್ಟು ಮೆರೆದ ದಾನವೀರ ದಯಾಮೂರ್ತಿ ಶಿಬಿರಾಜನ ಕಥೆ (ಶಿಬಿಜಾತಕ), ಸಕಲ ಶಾಸ್ತ್ರ ಪ್ರವೀಣನಾಗಿದ್ದ ಸುತಸೋಮನು ನರ ಭಕ್ಷಕನೊಬ್ಬನ ಕೈಗೆ ಸಿಕ್ಕು ಕೊನೆಗೆ ಆ ನರಭಕ್ಷಕನಿಗೇ ಧರ್ಮೋಪದೇಶಮಾಡಿ ತಾನೂ ಬದುಕಿ ಆ ನರಭಕ್ಷಕನನ್ನೂ ಉದ್ಧಾರ ಮಾಡಿದ ಕಥೆ (ಸುತಸೋಮ ಜಾತಕ), ವಿಶ್ವಂತರನೆಂಬ ರಾಜಕುಮಾರನು ಯಾರು ಏನು ಕೇಳಿದರೂ ಕೊಡುವೆ ನೆಂದು ಪ್ರತಿಜ್ಞೆಮಾಡಿ ತನ್ನ ಮಡದಿಯನ್ನು ದಾನ ಮಾಡಲು ಹಿಂಜರಿಯದೆ ಮಹಾ ದಾನವೀರನಾಗಿ ಬೆಳಗಿದ ಕಥೆ (ವಿಶ್ವಂತರ ಜಾತಕ), ಜೈನ ಸಾಹಿತ್ಯದಲ್ಲಿನ ಉಪ ಸರ್ಗವನ್ನನುಭವಿಸಿದ ಮುನಿಗಳ ಕಥೆ–ಇಂಥವು ಇನ್ನೆಷ್ಟು ಉಂಟು. ಈ ಕಥೆಗಳಿಗೂ ತಮಿಳು ದೇಶದ ಪುರಾತನರ ಅಥವಾ ವೀರಶೈವರು ಹೇಳುವ ಪುರಾತನರ ಕಥೆಗಳಿಗೂ ಕೆಲಮಟ್ಟಿನ ಹೋಲಿಕೆಯಿರುವುದು ಕಂಡು ಬರುತ್ತಿದೆ. ಸಿರಿಯಾಳನ ಕಥೆಗೂ ಜನತೆ ಯಲ್ಲಿ ರೂಢ ಮೂಲವಾ ದ್ದ ಒಂದು ಆಧಾರವಾಗಿರುವುದು. ಆ ಕಥೆಗಳನ್ನು ಶೈವರು ಒಳಸಿಕೊಳ್ಳುವಾಗ ಅವುಗಳ ಹಿನ್ನೆಲೆಯಲ್ಲಿ ಒಂದು ತತ್ತ್ವಾರ್ಥವಿಟ್ಟು ರೂಪಾಂತರ ಪಡಿಸಿರಬಹುದು. ಆ ಮಹಾನುಭಾವರನ್ನು ಐತಿಹಾಸಿಕ ವ್ಯಕ್ತಿಗಳ ನ್ನಾಗಿ ಮಾಡಬೇಕೆಂದು ಅಥವಾ ಮಹಾನುಭಾವರಾದ ಐತಿಹಾಸಿಕ ವ್ಯಕ್ತಿಗಳನ್ನು ಪುರಾಣ ಪುರುಷರನ್ನಾಗಿ ಮಾಡಲು ಅದೇ ಕಥೆಯನ್ನು ಐತಿಹಾಸಿಕ ವ್ಯಕ್ತಿಯ ಸುತ್ತ ಅಥವಾ ಪೌರಾಣಿಕ ವ್ಯಕ್ತಿಯ ಸುತ್ತ ನೆಯ್ದಿರುವುದೂ ಸಾಧ್ಯ. ಈ ಅನುಮಾನ ಸಿರಿಯಾಳನ ಕಥೆಗೆ ಹೋಲಿಸಿದರೆ ಇನ್ನಷ್ಟು ಬಲಪಡುತ್ತದೆ. ವೀರಶೈವರು ಹೇಳುವ ಕಥೆಯಂತೆ ಸಿರಿಯಾಳ ಯಾವ ರಾಜನಲ್ಲಿಯೂ ದಂಡನಾಥನಾದುದಿಲ್ಲ, ಮಂತ್ರಿ ಯಾದುದಿಲ್ಲ. ಅವನೊಬ್ಬ ಶೆಟ್ಟಿ. ತಮಿಳು ಪುರಾಣ ಸಿರಿಯಾಳನಿಗೆ ಒಂದು ಕಾಲ ಮಿತಿಯನ್ನೆ ಗೊತ್ತು ಮಾಡಿತು. ಪರಂಜ್ಯೋತಿಯೆಂದು ಹೆಸರು ಪಡೆದ ಸಿರು ತೊಂಡನು ರಾಜನೊಬ್ಬನಲ್ಲಿ ಸೈನ್ಯಾಧಿಕಾರಿಯಾಗಿದ್ದನೆಂದು ಹೇಳಿ ಸಿರುತೊಂಡನು ಮಂತ್ರಿಯಾಗಿದ್ದಿರಬಹುದು; ಮಹಾ ಭಕ್ತನೂ ಆಗಿದ್ದಿರಬೇಕು. ಅವನ ತಲೆಗೆ ಹಳೆಯದೊಂದು ಕತೆಯ ರುಮಾಲನ್ನು ಸುತ್ತಿದರು. ಶಕ್ಕಿಳಾರರು–ಸಿಂಧು ಬಲ್ಲಾಳ (ಇಹಃ ಪಗೆಯಾಂಡರು) ಜೀವನಕ್ಕೆ ಸಂಬಂಧಿಸಿದ ಘಟನೆಯೇ ಹರಿಹರ ದೇವನ ಬಸವ ರಾಜ ದೇವರರಗಳೆ'ಯಲ್ಲಿ ಪುನರಾವರ್ತನೆಯಾಗಿಲ್ಲವೆ? ಹಾಗೆ. ಅದೇನೆ ಇರಲಿ, ಸಿರಿಯಾಳನು ಒಬ್ಬ ಪುರಾಣ ಪುರುಷ ಎಂದು ಹೇಳುವುದಕ್ಕೆ ಅಡ್ಡಿಯಿಲ್ಲವೆಂದು ತೋರುತ್ತದೆ ಈ ಕಥೆ ನರಭಕ್ಷಕರ ಹಾವಳಿ ವಿಪರೀತವಾಗಿದ್ದ ಕಾಲದಲ್ಲಿ ಅಂಕುರಿಸಿ ಪಲ್ಲವಿಸಿ ಬೆಳೆದು ರೂಪಾಂತರಗೊಂಡು ದಾಸೋಹ ಭಾವವನ್ನು ತುಂಬಿಕೊಂಡು

ತನ್ನ ಶಾಂತಿಕೆಯನ್ನು ಕಳೆದುಕೊಂಡು ಕರುಣಾರಸ ಪ್ರಧಾನವಾದ ಕಾವ್ಯವಾಗಿ ಕಂಗೊಳಿಸುತ್ತಿದೆ.

ಸಿರಿಯಾಳನ ಆ ಭೈರವರೂಪೀ ಜಂಗಮನ ವರ್ತನೆಯಲ್ಲಿ ಹಲಾಯುಧನೆಂಬ ಶಿವಶರಣನು ಖಂಡಿಸಿ ನುಡಿವನೆಂದು ಬಸವಪುರಾಣ (ಭೀಮಕವಿ)ದಲ್ಲಿಯೂ ಈಚಿನ ವೀರಶೈವ ಗ್ರಂಥಗಳಲ್ಲಿಯೂ ಉಕ್ತವಾಗಿದೆ. ಎಳೆಯ ಹುಡುಗನ ಮಾಂಸವಾಗ ಬೇಕೆಂದು ಕೇಳುವ ಆ ಜಂಗಮ ಎಂಥ ಜಂಗಮ? ತಾಯಿ ತಂದೆಗಳೇ ಮಗನನ್ನು ಕೊಂದು ಅವನ ಮಾಂಸವನ್ನು ತಾಯಿಯೇ ಬೇಯಿಸಿ ಜಂಗಮನಿಗೆ ನೀಡುವ ಸನ್ನಿವೇಶ ಎಷ್ಟು ಭೀಭತ್ಸವಾಗಿವೆ! ತಂದೆಯೂ ಜಂಗಮ ಭಕ್ತಿಯ ಪಿತ್ತ ನೆತ್ತಿಗೇರಿ ಮಗನ ಮಾಂಸವನ್ನೇ ಉಣ್ಣಲು ಕುಳಿತುಕೊಳ್ಳುವುದೆ? ಆ ಮಾಂಸವನ್ನು ತಾಯಿಯೇ ಕಯ್ಯಾರೆ ತಂದೆಯ ಗಂಗಾಳದಲ್ಲಿ ಬಡಿಸುವುದೆ?–ಲೌಕಿಕ ದೃಷ್ಟಿಯಿಂದ ಈ ಆಕ್ಷೇಪಣೆ ಸಹಜವೆ. ಆದರೆ ಬಸವಣ್ಣನವರಂಥ ಸರ್ವಜೀವ ದಯಾಪಾರಿಗಳೇ ಈ ಸಿರಿಯಾಳನನ್ನು ಹದಿನೆಂಟು ಸಲ ಉಚ್ಚರಿಸಿದ್ದಾರೆ. ಆ ಪರಮ ಭಕ್ತನ ಪರಮ ನಿಷ್ಠೆಯಲ್ಲಿ ಕೊಂಡಾಡಿದ್ದಾರೆ. ಭಕ್ತಿಯ ಮಹತ್ವವೂ ಸ್ವರೂಪವೂ ಜನಸಾಮಾನ್ಯರಿಗೆ ಮನದಟ್ಟುವಂತಿರಬೇಕೆಂದು ಇಂಥ ವೈಪರೀತ್ಯಗಳನ್ನೊಳಗೊಂಡ ಕಥೆಗಳನ್ನು ರಚಿಸಿದ್ದರೂ ರಚಿಸಿರಬಹುದು.

ಶಿವಶಂಕರನಿಗೆ ಬೇಕಾದುದು ನರಮಾಂಸವಲ್ಲ. ಮಾನವನಲ್ಲಿ ಮನೆ ಮಾಡಿಕೊಂಡಿರುವ ಪಶುತ್ವ; ಕಾರುಣ್ಯ ಮೂರ್ತಿಯಾದ ನೀಲಕಂಠನು ಮನುಷ್ಯನಲ್ಲಿ ನಾನಾ ದೌಷ್ಟ್ಯದೌರ್ಜನ್ಯ ದುರಾಚಾರಗಳ ರೂಪದಲ್ಲಿ ಸೇರಿಕೊಂಡಿರುವ ಹಾಲಾಹಲವನ್ನು ತಾನು ಹೀರಿ ತನ್ನ ಭಕ್ತನನ್ನು ಉದ್ಧಾರ ಮಾಡುವುದು. ಮನುಷ್ಯನು ಆಸುರೀ ವೃತ್ತಿಗಳನ್ನು ನೀಗಿಕೊಂಡು ದೈವೀಪ್ರವೃತ್ತಿಗಳನ್ನು ಬೆಳಗಿಸಿಕೊಳ್ಳಬೇಕೆಂಬುದರ ಸಂಕೇತಾರ್ಥ. ಈ ಬಲಿದಾನ ಬೇರೆಯ ಪಶುಗಳ ಬಲಿ ಅಲ್ಲ. ಅದು ತನ್ನಲ್ಲಿರುವ ಪಶುವಿನ ಬಲಿ ಆಗಿ ಅಲ್ಲಿ ಶಿವಶಿಶುವು ಅಂಕುರಿಸಿ ಬೆಳೆದು ಮಂಗಳಕರವೂ ಸತ್ಯಸ್ವರೂಪವೂ, ಸುಂದರವೂ ಆದ ಫಲವನ್ನು ಕೊಡಬೇಕು.

ಮಹಾನುಭಾವಿ ಬಸವಣ್ಣನವರು ಈ ಆಕ್ಷೇಪಣೆಗೆ ತಮ್ಮದೇ ಆದ ತಾವು ಮಾತ್ರ ಅಧಿಕಾರವಾಣಿಯಿಂದ ಹೇಳಬಹುದಾದ ಸಮಾಧಾನವನ್ನೊಳಗೊಂಡಿರುವ ಒಂದು ವಚನವನ್ನಿಲ್ಲಿ ಗಮನಿಸಿ :

ಮುನ್ನಿನವರು ಹೋದ ದಾರಿ ಭಯ, ಕಾಣಿರಣ್ಣಾ ;
ಬಲ್ಲಾಳನ ವಧುವಿನೊಡನೆ ಸರಸವಾಡಿದುದಿಂದ ಭಯ, ಕಾಣಿರಣ್ಣಾ ;
ಸಿರಿಯಾಳನ ಮಗನ ಬೇಡಿದುದಿಂದ ಭಯ, ಕಾಣಿರಣ್ಣಾ ;
ದಾಸನ ವಸ್ತ್ರವ ನೀಳ್ದುದುದಿಂದ ಭಯ, ಕಾಣಿರಣ್ಣಾ ;
ಅಘಟಿತ ಘಟಿತರು ವಿಪರೀತಚರಿತರು
ಕೂಡಲಸಂಗನ ಶರಣರು ನಡೆದ ದಾರಿ ಭಯ, ಕಾಣಿರಣ್ಣಾ; ವ. ಸಂ—೧೪೩೭.

# ನಿಜಗುಣರ ಗೀತೆಗಳು



## ಶ್ರೀ ಹೆಚ್. ತಿಪ್ಪೇರುದ್ರಸ್ವಾಮಿ

"ನಿಜಗುಣ ಶಿವಯೋಗಿ"-ಎನ್ನುವ ಹೆಸರು ಕನ್ನಡ ಸಾಹಿತ್ಯವಲ್ಲಿ ಬಹಳ ಮಹತ್ವ ಪೂರ್ಣವಾದುದು. ಶಕ್ತಿಯುತವಾದುದು ; ಆಧ್ಯಾತ್ಮಿಕ ಸಾಧನೆಯ ರಂಗದಲ್ಲಿ ಯಂತೂ ಅದ್ವಿತೀಯವಾದುದು. ಅನೇಕ ಬೃಹತ್ ಶಕ್ತಿಗಳ ಅಪೂರ್ವಸಂಗಮ ನಿಜಗುಣರು. ರಾಜರಾಗಿದ್ದ ಅವರು ತಮ್ಮ ರಾಜ್ಯವನ್ನೆಲ್ಲಾ ತೃಣವಾಗೆಣಿಸಿ ತಿರಸ್ಕರಿಸಿದ ವೀರ ವೈರಾಗ್ಯಮೂರ್ತಿ ; ಅವ್ಯಾಹತವಾದ ಶಿವಯೋಗ ಸಾಧನೆಯಿಂದ ಸಿದ್ಧಿಯನ್ನು ಪಡೆದ ಅನುಭಾವಿ ; ಅನುಭಾವ ಸಂಪತ್ತನ್ನು ತಮ್ಮ ಕೃತಿಗಳ ಮೂಲಕ ಉಜ್ವಲವಾಗಿ ಹೊರಹೊಮ್ಮಿಸಿದ ಋಷಿಕವಿ. ಅವರ 'ಕೈವಲ್ಯಪದ್ಧತಿ,' 'ಪರಮಾನುಭವ ಬೋಧೆ' 'ಪರಮಾರ್ಥಗೀತೆ' 'ಅನುಭವಸಾರ'-ಈ ಮೊದಲಾದ ಕೃತಿಗಳು ಅವರ ಸಾಧನೆಗೆ ಸಾಕ್ಷಿಗಳಾಗಿ ನಿಂತಿವೆ. ಇಂದಿಗೂ ಸಾಧಕರ ಜೀವಂತ ಕೈಪಿಡಿಗಳಾಗಿ ಉಳಿದಿವೆ.

ಇವುಗಳ ಜೊತೆಗೆ ಅವರು ಬರೆದಿರುವ "ವಿವೇಕ ಚಿಂತಾಮಣಿ"ಯು ವಿಶಿಷ್ಟವಾದ ಬೃಹದ್‌ಗ್ರಂಥ. ಅವರೇ ಹೇಳುವಂತೆ ಇದು "ಸರ್ವಶಾಸ್ತ್ರಸಂಗ್ರಹ ರೂಪ"ವಾದ ಗ್ರಂಥ ; ಕನ್ನಡದ ಮೊಟ್ಟಮೊದಲನೆಯ ವಿಶ್ವಕೋಶ. ತಮ್ಮ ಆಳವಾದ ಮತ್ತು ಬಹು ಮುಖವಾದ ಪಾಂಡಿತ್ಯವನ್ನು ಈ ವಿಶ್ವಕೋಶದಲ್ಲಿ ಸಾರ್ಥಕ ಪಡಿಸಿಕೊಂಡಿದ್ದಾರೆ ನಿಜಗುಣರು. ತಮ್ಮ ಕಾಲದವರೆಗೆ ಬೆಳೆದು ಬಂದ ಜ್ಞಾನದ ಎಲ್ಲ ಮುಖಗಳನ್ನು, ಈ ಒಬ್ಬ ವ್ಯಕ್ತಿ ಹಿಡಿದು, ಅರಗಿಸಿಕೊಂಡು ಅದನ್ನು ಕನ್ನಡ ಗದ್ಯ ಗ್ರಂಥದಲ್ಲಿ ಕೊಟ್ಟಿರುವುದು, ಕನ್ನಡಿಗರು ಹೆಮ್ಮೆ ಪಡಬೇಕಾದ ವಿಷಯ. ಇದಲ್ಲದೆ 'ಪಾರಮಾರ್ಥ ಪ್ರಕಾಶಿಕೆ'-ಎಂಬ ಇನ್ನೊಂದು ಗದ್ಯ ಗ್ರಂಥವನ್ನು ರಚಿಸಿದ್ದಾರೆ.

ನಿಜಗುಣರ ಈ ಗ್ರಂಥಗಳು ಷಟ್ ಶಾಸ್ತ್ರಗಳೆಂಬ ಹೆಸರಿನಿಂದ ಪ್ರಖ್ಯಾತವಾಗಿವೆ. ಅವುಗಳಲ್ಲಿ ಒಂದೊಂದರಲ್ಲಿಯೂ ಕಾಣುವ ನಿಜಗುಣರ ವ್ಯಕ್ತಿತ್ವ ಅಗಾಧವಾದುದು. ಯಾಜ್ಞವಲ್ಕ್ಯ ಮೈತ್ರೇಯಿಯರ ಸಂವಾದ ರೂಪವಾದ "ಪರಮಾನುಭವ ಬೋಧೆ"ಯ ತತ್ವನಿರೂಪಣೆಯಲ್ಲಿ ಕಾಣುವ ಕಾವ್ಯ ಸೌಂದರ್ಯವನ್ನಾಗಲೀ, 'ಪರಮಾರ್ಥ ಗೀತೆ' 'ಅನುಭವಸಾರ' ಇವುಗಳಲ್ಲಿ ಗುರು ಶಿಷ್ಯರ ಸಂವಾದ ರೂಪದಲ್ಲಿ ಕಾಣುವ ಲೋಕಾನುಭವವನ್ನಾಗಲೀ, ಒಂದು ಚಿಕ್ಕ ಲೇಖನದಲ್ಲಿ ವಿವೇಚಿಸುವುದು ಅಸಾಧ್ಯವಾದ ವಿಷಯ. ಇನ್ನು ಅವರ 'ಕೈವಲ್ಯಪದ್ಧತಿ' ಎಂಬುದು ಇವೆಲ್ಲವುಗಳಿಗಿಂತ ಒಂದು ರೀತಿಯಲ್ಲಿ ವಿಶಿಷ್ಟವಾದ ಗ್ರಂಥ. ಇದು ರಾಗಸಮನ್ವಿತವಾದ ಗೀತೆಗಳಿಂದ ಅಥವಾ 'ತತ್ವಪದ'ಗಳಿಂದ ಕೂಡಿದುದು. ಜೀವವು ಕೈಕೊಳ್ಳುವ ಮೋಕ್ಷಮಾರ್ಗದ ಯಾತ್ರೆಯನ್ನು ಇಲ್ಲಿ, ಶಿವಕಾರುಣ್ಯ ಸ್ಥಲ, ಜೀವಸಂಬೋಧನ ಸ್ಥಲ, ನೀತಿ ಕ್ರಿಯಾಚಾರ ಸ್ಥಲ, ಯೋಗಪ್ರತಿಪಾದನ ಸ್ಥಲ ಮತ್ತು ಜ್ಞಾನಪ್ರತಿಪಾದನ ಸ್ಥಲ ಎಂದು ಪಂಚ ಸ್ಥಲ ಪರಿವಿಡಿಯಿಂದ ವಿವರಿಸಿದ್ದಾರೆ. ಅನೇಕ ರಾಗಗಳಲ್ಲಿ ತಮ್ಮ ಗೀತೆಗಳನ್ನು ಅಳವಡಿಸಿ, ನಾದ ಮಾಧುರ್ಯದಿಂದ ಅಧ್ಯಾತ್ಮಿಕ ತತ್ತ್ವವನ್ನು ಗ್ರಾಹ್ಯವನ್ನಾಗಿ ಮಾಡುವ ಪ್ರಯತ್ನದಲ್ಲಿ ಸಫಲತೆಯನ್ನು ಪಡೆದಿರುವುದು ಇಲ್ಲಿ ಕಂಡು ಬರುತ್ತದೆ. ಕರ್ಣಾಟಕ ಸಂಗೀತದ ಬೆಳವಣಿಗೆಯಲ್ಲಿಯೂ ಇವರ ಹೆಸರು ಚಿರಸ್ಮರಣೀಯವೆಂಬುದು ವಿವಿಧ ರಾಗಗಳಲ್ಲಿ ಅವರು ಮಾಡಿರುವ ಪ್ರಯೋಗಗಳನ್ನು ಗಮನಿಸಿದಾಗ ಮನದಟ್ಟಾಗುತ್ತದೆ. ನಿಜಗುಣರ ಸಾಧನೆಯ ಮಾರ್ಗ, ಅವರ ಆಧ್ಯಾತ್ಮದ ಅನುಭವ, ಸಂಗೀತದಲ್ಲಿ ಅವರ ಪರಿಣತಿ, ಸಾಹಿತ್ಯದ ಸಹಜ ಸೌಂದರ್ಯ-ಇವುಗಳ ಪರಿಚಯವನ್ನು ಅವರ ಈ ಗ್ರಂಥದಿಂದ ಪಡೆಯಬಹುದು. ಅವುಗಳಲ್ಲಿ ಒಂದೊಂದೂ ವಿವರವಾಗಿ ವಿವೇಚಿಸುವಷ್ಟು ಅಗಾಧವಾಗಿವೆ. ಆದರೆ ಈ ಚಿಕ್ಕ ಲೇಖನ ಆ ಸಾಹಸಕ್ಕೆ ಕೈ ಹಾಕದೆ ಅವರ ಒಂದೆರಡು ಗೀತೆಗಳನ್ನು ತೆಗೆದುಕೊಂಡು ಅವುಗಳ ಪರಿಣಾಮ ಸೌಂದರ್ಯವನ್ನು ಪರಿಚಯ ಮಾಡಿಕೊಡುವುದನ್ನಷ್ಟೇ ಉದ್ದೇಶಿಸಿದೆ.

"ಶ್ರೀ ಗುರು ವಚನೋಪದೇಶವನಾಲಿಸಿ
ದಾಗಳಹುದು ನರರಿಗೆ ಮುಕುತಿ"

ಎಂಬ ಹಾಡಿನೊಡನೆ ಪ್ರಾರಂಭವಾಗುತ್ತದೆ ಗ್ರಂಥ. ಆಲಿಸಿದೊಡನೆಯೇ ಮುಕ್ತಿಯನ್ನು ಕೊಡುವ ಅಂತಹ ಉಪದೇಶವಾದರೂ ಏನು? ಅದನ್ನು ಐದು ಹಾಡಿನ ನುಡಿಗಳಲ್ಲಿ ಸುಂದರವಾಗಿ ನಿರೂಪಿಸಿದ್ದಾರೆ. ಸಾಧಕನು ಆಚರಿಸಬೇಕಾದ ಆಧ್ಯಾತ್ಮ ಸಾಧನೆಯ ತಿರುಳನ್ನೇ ಒಳಗೊಂಡಿವೆ ಆ ಪಂಚರತ್ನಗಳು. "ದುರಿತ ಕರ್ಮವನೊಲ್ಲದಿರು ಪುಣ್ಯವನೆ ಮಾಡು"-ಎಂದು ಸಾಧಕನ ಜೀವನದ ಹಿನ್ನೆಲೆಗೆ ಕಾರಣವಾದ ನೀತಿ ಕ್ರಿಯಾಚಾರದಿಂದ ಹಿಡಿದು :

"ಆರು ನಾನೆಂದು ವಿಚಾರಿಸು ವಿಷಮ ಸಂ-
ಸಾರವಿದನು ಕನಸೆಂದರಿ ।
ಮಾರ ಮರ್ದನ ಶಂಭುಲಿಂಗವನೊಲಿಸಿ ಗಂ-
ಭೀರ ಸುಖದೊಳಿರೆಂದರುಪುವ ॥"—

ಎಂದು ಜೀವನದ ಕೊನೆಯ ಗುರಿಯನ್ನು ನಿರೂಪಿಸಿ ಅದನ್ನು ಕೈಗೂಡಿಸಿಕೊಡುವ ಧನ್ಯತೆಯ ಉದ್ಗಾರದವರೆಗೂ ಗುರು ನಮ್ಮನ್ನು ಕರೆಯೊಯ್ಯುತ್ತಾನೆಂಬುದನ್ನು ಈ ಹಾಡಿನಲ್ಲಿ ಅರ್ಥವತ್ತಾಗಿ ಮತ್ತು ಪರಿಣಾಮಕಾರಿಯಾಗಿ ನಿರೂಪಿಸಿದ್ದಾರೆ.

ಮುಂದೆ ಶಿವನ ಕಾರುಣ್ಯವನ್ನು ಪಡೆಯುವ ಹಂಬಲಿಕೆಯಿಂದ ಕೂಡಿದ ಪ್ರಾರ್ಥನಾರೂಪವಾದ ಪದಗಳಲ್ಲಿ ಕೆಲವಂತೂ ಹೃದಯದಲ್ಲಿ ಅಚ್ಚೊತ್ತಿದಂತೆ ಉಳಿಯುತ್ತವೆ. ನಿಜಗುಣರ "ಭಕ್ತಿರಸ"ಪೂರ್ಣವಾದ ಹೃದಯದ ಮಿಡಿತವನ್ನು ಮನದಟ್ಟು ಮಾಡಿಕೊಡುತ್ತವೆ. ಉದಾಹರಣೆಗೆ:

"ನೋಡಲಾಗದೆ ದೇವ । ನೋಡಲಾಗದೆ ।
ಕೂಡೆ ನಿನ್ನ ದಿಟ್ಟ ಮೂರು । ನಾಡೆ ಲೇಸು ಮಾಡಲೆನ್ನ ॥"

ಎಂಬ ಗೀತೆಯನ್ನು ನೋಡಬಹುದು. ವಿರೂಪಾಕ್ಷನ ಅಗ್ನಿ, ಸೂರ್ಯ, ಚಂದ್ರ ಈ ಮೂರು ನೇತ್ರಗಳಿಂದಲೂ ಹೊರಹೊಮ್ಮಿದ ದೃಷ್ಟಿ ಸಾಧಕನಮೇಲೆ ಹರಿದಾಗ ಅದು ಆ ಭಕ್ತನನ್ನು "ನಾಡೆಲೇಸು" ಮಾಡಲಾರದೆ? ಅದನ್ನೇ ಮುಂದೆ ಮೂರು ನುಡಿಗಳಲ್ಲಿ ಹೀಗೆ ಹೇಳಿದ್ದಾರೆ:

"ಮಿಸುಕಲೀಯದೆನ್ನಮೋಹ । ವಿಸರವೆಂಬ ವನವನುರುಹಿ ।
ಭಸಿತವೆನಿಸಿ ರುದ್ರ ನಿನ್ನ । ನೊಸಲವಹ್ನಿ ನೇತ್ರದಿಂದೆ ॥
ನೋಡಲಾಗದೆ ॥

ನಿನ್ನ ಹಣೆಯ ಮೇಲಿರುವ ಅಗ್ನಿನೇತ್ರದಿಂದ ಒಮ್ಮೆ ನನ್ನನ್ನು ನೋಡು. ನನ್ನ ಮೋಹವಿಸರವೆಂಬ ವನ ಸುಟ್ಟು ಭಸ್ಮವಾಗುತ್ತದೆ.

"ಕಲುಷ ತಿಮಿರ ಮುಸುಕಿ ಮುಗಿದು । ನಲಿಯುದೆನ್ನಹೃದಯನಳಿನ-।
ವಲರೆ ದಿವ್ಯರೂಪ ನಿನ್ನ । ಬಲದ ಭಾನು ನಯನದಿಂದೆ ॥ ನೋಡಲಾಗದೆ ॥

ಕಳಂಕದ ಕತ್ತಲೆಯಿಂದ ನನ್ನ ಹೃದಯಕಮಲ ಮುಚ್ಚಿಕೊಂಡಿದೆ. ನಿನ್ನ ಬಲದ ಭಾನು ನಯನದ ದೃಷ್ಟಿಯಿಂದ, ಕತ್ತಲೆ ಅಳಿದು, ಹೊಂಬೆಳಗು ಮೂಡಿ ಹೃದಯ ನಳಿನ ಅರಳಿ ನಲಿದು ನರ್ತಿಸಲಿ.

"ಕರಣ ಕುಲ ಚಕೋರ ತಣಿಯೆ । ಹರುಷ ಶರಧಿ ಮೀರಲೆನ್ನ ।
ವರದ ಶಂಭುಲಿಂಗ ವಾಮ । ದುರು ಸುಧಾಕರಾಕ್ಷಿಯಿಂದೆ ॥ ನೋಡಲಾಗದೆ ॥

ನಿನ್ನ ವಾಮನೇತ್ರದ ಹಿಮಕರನ ಕಿರಣಗಳು ನನ್ನ ಇಂದ್ರಿಯ ಕುಲ ಚಕೋರವನ್ನು

ತಣಿಸಲಿ ; ಸಂತೋಷ ಸಾಗರ ಉಕ್ಕಿ ಹರಿಯುವಂತೆ ಮಾಡಲಿ ; ಹೀಗೆ ನಿನ್ನ ಮೂರು ದೃಷ್ಟಿಗಳಿಂದಲೂ ನನ್ನನ್ನು ನೋಡಲಾಗದೆ ದೇವಾ— ಎಂದು ಪ್ರಾರ್ಥಿಸುತ್ತಾರೆ. ಬೆಂಕಿ, ಸೂರ್ಯ, ಚಂದ್ರರು ಶಿವನ ಮೂರು ಕಣ್ಣುಗಳೆಂಬ ಕಲ್ಪನೆಯಿಂದ ಎಂತಹ ಪರಿಣಾಮವನ್ನು ಸಾಧಿಸಿದ್ದಾರೆ. ಈ ಹಾಡಿನಲ್ಲಿ! ಹಾಗೆಯೇ “ ಶಂಕರಾ! ನೋಡು ನೀನೆನ್ನ ಪರಿಭವದ ಬಾಧೆಯನು ಕೃಪೆಮಾಡು ಬೇಗದೊಳಭಯವಿತ್ತು” ಅಥವಾ “ ಕರುಣಿಸು ಕಾವದೆನ್ನವನು ಬಂದು | ಶರಣು ಹೊಕ್ಕೆನು ಶಂಕರ ನಿನ್ನ”— ಈ ಮೊದಲಾದ ಹಾಡುಗಳಲ್ಲಿ ಶಿವಕಾರುಣ್ಯದ ನಿರೀಕ್ಷಣೆಯ ಅಭೀಷ್ಟೆಯನ್ನು ಕಾಣ ಬಹುದು. “ ಕೋಗಿಲೆ ಚೆಲ್ವ ಕೋಗಿಲೆ ಮುದ್ದು | ಕೋಗಿಲೆ ಜಾಣ ಕೋಗಿಲೆ |” ಎಂಬ ಗೀತೆಯಲ್ಲಿಯಂತೂ ಮನಸ್ಸನ್ನು ಕೋಗಿಲೆಗೆ ಹೋಲಿಸಿ, ಅದಕ್ಕೆ “ ಘನಪದ ವನು ತನ್ನ ನೆನೆವರಿಗೊಲಿದೀವ ”— ಶಂಭುಲಿಂಗನ ಚರಣ ಪಲ್ಲವವನ್ನು ಪಿಡಿಯುವ ಕಲೆಯನ್ನು ಕಲಿಸಿದ್ದಾರೆ.

ಜೀವವನ್ನು ಸಂಬೋಧಿಸಿ ನುಡಿದು ಚಿರಂತನವಾದ ಸತ್ಯದ ಕಡೆಗೆ ಜಾಗ್ರತ ಗೊಳ್ಳುವಂತೆ ಮಾಡುವ ಅವರ ಎಚ್ಚರಿಕೆಯ ನುಡಿಗಳಂತೂ ಜಡತೆಯನ್ನು ಬಡಿ ದೆಬ್ಬಿಸಿ ಅಂತರಂಗದ ಕಣ್ಣನ್ನು ತೆರೆಯಿಸುವಂತೆ ಅಂತಃಕರಣದಿಂದ ಮೂಡಿ ಬಂದಿವೆ.

ಸಾಧಕನ ಎಲ್ಲ ಸಾಧನೆಗೆ ಅತ್ಯಾವಶ್ಯಕವಾದ ಅಡಿಪಾಯ, ನಿಯಮಬದ್ಧವಾದ ನೈತಿಕ ಜೀವನ. ಈ ತಳಹದಿಯಮೇಲೆ ಅವನ ಸಾಧನೆಯ ಕಟ್ಟಡ ರೂಪುಗೊಳ್ಳಬೇ ಕಾಗುತ್ತದೆ. ಇದನ್ನು ನಿಜಗುಣರು ನೀತಿಕ್ರಿಯಾಚಾರ ಸ್ಥಲದಲ್ಲಿ ಅನೇಕ ರೀತಿಯಲ್ಲಿ ಪ್ರತಿಪಾದಿಸಿದ್ದಾರೆ. “ ಶ್ರೀಗುರು ವಚನದಿಂದಧಿಕ ಸುಧೆಯುಂಟೆ? | ರಾಗದಿಂ ಬೇರಿನ್ನು ಭವಬೀಜಮುಂಟೆ ?”—ಎಂದು ಪ್ರಾರಂಭವಾಗುವ ಗೀತೆ ನೈತಿಕ ಜೀವನದ ಸಮಗ್ರ ಪರಿಚಯವನ್ನು ಒಂದು ರೀತಿಯಿಂದ ಮಾಡಿಕೊಡುತ್ತದೆ. “ ಕರಣವಿಜಯ ದಿಂದೆ ಕಲಿತನವುಂಟೇ ? ” “ ಕಡುಲೋಭದಿಂದೆ ದುರ್ಗುಣವನ್ಯವುಂಟೇ ? ” “ ಎಡೆವಿಡದಿಹ ಸತ್ಯದಿಂ ತಪವುಂಟೇ ? ” “ ಶಮೆಯಿಂದ ಮುಕುತಿ ಸಾಧನ ಪೆರ ತುಂಟೇ ? ” “ ವಿಮಲಮಾನಸದಿಂದೆ ಶುಭತೀರ್ಥವುಂಟೇ ? ” “ ಕರುಣದಿಂದತಿ ಶಯವಹ ಧರ್ಮವುಂಟೆ ? ” —ಎಂದು ಮುಂತಾದ ಅನೇಕ ಸೂತ್ರರೂಪವಾದ ಮಾತುಗಳು ಇಲ್ಲಿ ಬರುತ್ತವೆ. ಸರ್ವಮಾನವ ಧರ್ಮದ ಹಿನ್ನೆಲೆಯನ್ನು ಇಂತಹ ವ್ಯಾಪಕವಾದ ಮಾತುಗಳಲ್ಲಿ ನಿರೂಪಿಸಿದ್ದಾರೆ.

“ ಬೇಡುವೆನಭವ ” ಎಂಬ ಅವರ ಇನ್ನೊಂದು ಗೀತೆಯಂತೂ ನೈತಿಕ ಜೀವನದ ಜೀವಂತ ಕೈಪಿಡಿಯಂತಿವೆ. ಅದನ್ನು ಇಲ್ಲಿ ಅವರ ಮಾತುಗಳಿಂದಲೇ ನೋಡುವುದು ಯುಕ್ತ:

“ ಬೇಡುವೆನಭವ ನಿಮ್ಮನು ಭವಭವದೊಳು |
ಮಾಡೆನಗೊಲಿದು ಸುಗುಣ ಸಂತತಿಯನಿಂತು ‖ ‖ಪ‖

ಎಡರಡಸಿದ ವೇಳೆಯೊಳು ಧೈರ್ಯವನು, ಸಿರಿ ।
ಪಡೆದು ಜೀವಿಸುವೆಡೆಯೊಳು ವಿನಯುವನು ॥
ಕಡು ಜವ್ವನದೊಳು ವಿಕೃತಿದೋರದಿಹುದನು ।
ಪಿಡಿದ ನೇಮುವನೆಡೆವಿಡದತಿ ಛಲವನು ೧

ಅಸುವಳಿಯಲು ದೇಹಿ ಎನಲೊಲ್ಲದಧಟನು ।
ಪುಸಿಯನೆಲ್ಲಿಯು ನುಡಿಯದ ಸತ್ಯವಿದನು ॥
ಮಸುಳಿಸದಿಹ ಪುಣ್ಯಮಯ ಕೀರ್ತಿಯನು ಶಾಂತ ।
ರೊಸೆದಹುದೆಂದು ಬಣ್ಣಿಸುವ ವರ್ತನವನು ೨

ವಿತರಣದೊಡನೆ ಭೋಗಿಸುವರ್ಥದೊದವನು ।
ಹಿತವಚನವೆ ತೊಡವೆನಿಪ ದಾನವನು ॥
ಶ್ರುತಿ ಬೋಧನೆಯೊಳುಪರತಿಯಿಲ್ಲದಿಹುದನು ;
ನುತಿವೆತ್ತ ಕೈಸಾರುತಿಹ ಮನೋರಥವನು ॥ ೩

ಕೋಪವಂಟದ ತಪವನು, ಪರವಧುವಿನ ।
ರೂಪುಗಂಡೆಳಸದ ಕರಣ ವಿಜಯವನು ॥
ತಾಪವಡರಿ ಕೆಡಿಸದ ಸಾರ ಸುಖವನು ।
ಕಾಪಟ್ಯವಿಲ್ಲದಾಶ್ರಮ ಧರ್ಮ ರತಿಯನು ॥ ೪

ಧರೆಯೊಳಧಿಕವೆನಿಪ ಶಾಂತಿಮತವನು ।
ಕರುಣ ವಿದ್ಯೆಗಳುಳ್ಳ ಗುರು ಭಜನೆಯನು ॥
ಪರತರ ಮುಕುತಿದೋರುವ ಶಾಸ್ತ್ರವನು, ಕಂತು
ಹರ ಶಂಭುಲಿಂಗ ನಿಮ್ಮಡಿಯ ಭಕ್ತಿಯನು ॥ ೫

ಇದರ ವಿವರಣೆ ಅನಾವಶ್ಯಕ. ಈ ಮಾತುಗಳನ್ನೇ ಮತ್ತೆ ಮತ್ತೆ ಓದಿ ಮನನ ಮಾಡಬೇಕಾದುದು ಮಾತ್ರ ಆವಶ್ಯಕ. ಒಂದೊಂದು ಮಾತು ಜೀವನದ ಮಾರ್ಗದಲ್ಲಿ ಪ್ರಚೋದಕ ಶಕ್ತಿಯಾಗಿ ಪರಿಣಮಿಸುತ್ತವೆ. ಪ್ರಕ್ಷುಬ್ಧ ಸನ್ನಿವೇಶಗಳಿಂದ ಮನಸ್ಸು ತಳಮಳಗೊಂಡಾಗ, ಶಾಂತಿ ಕಲಕಿದಾಗ, ಮಾರ್ಗ ಕಾಣದೇ ಹೋದಾಗ ಇಲ್ಲಿರುವ ಯಾವುದೋ ಒಂದು ಮಾತು ಬೆಳಕಿನ ಕಿರಣವನ್ನು ಬೀರಬಹುದು. ಹೊಸದೊಂದು ನೆಚ್ಚನ್ನೂ, ಕೆಚ್ಚನ್ನೂ ಶ್ರದ್ಧೆಯನ್ನೂ ಜೀವನಕ್ಕೆ ಕೊಡಬಹುದು.

ಹಾಗೆಯೇ ಪರಿಶುದ್ಧವಾದ ಜೀವನವ ಮಾರ್ಗದಲ್ಲಿ ನಡೆಸಿ ಜೀವನವನ್ನು ಸಾರ್ಥಕ ಪಡಿಸುವಂತೆ ಶಿವನ ಕಾರುಣ್ಯವನ್ನು ಹಾರೈಸುವ ಈ ಗೀತೆ, ಸುಂದರವಾದ ಸಾದೃಶ್ಯಗಳಿಂದ ಕೂಡಿ ಅಪೂರ್ವವಾದ ಕಲಾಕೃತಿಯಾಗಿದೆ :

" ಕರುಣಿಸು ನೀನೆನ್ನ ಕರಣ ನಿಕರವೊಂದು |
ವರ ಪುಣ್ಯವಗಲದಂತೆಲೆ ದೇವ |
ಶರಣ ಸಹಜಭಾವ | ಗಿರಿಜೆಯ ಸುಖಜೀವ ||
ಬೇಗ ಕರುಣಿಸು ||ಪ||

" ಸತಿ ಮೊದಲಾದ ಸಂಪದವನೆಳಸಿ ಮುಂದ |
ಮತಿ ಕಂಡ ಕೆಲಸವ ನಲಸದೆ |
ಕ್ಷಿತಿಯೊಳೆಸಗುವಂತೆ ಗುರುಸೇವೆಯೊಳಗಭಿ—||
ರತಿಯನೆನ್ನೊಡಲಿಗೀಯುಖಿಳೇಶ |
ನುತಗುಣನಿಧಿಕೋಶ | ಜಿತ ಪಂಚವಿಧ ಪಾಶ |
ಬೇಗ ಕರುಣಿಸು ೧

ಲೌಕಿಕ ಸಂಪತ್ತನ್ನು ಬಯಸಿ, ಅದಕ್ಕೆ ಅಗತ್ಯವಾದ ಕೆಲಸವನ್ನು ಎಡೆಬಿಡದೆ ಮಾಡುವ ಸಂಸಾರಿಯಂತೆ ಗುರು ಸೇವೆಯೊಳಗೆ ನನಗೆ ಅಭಿರತಿಯನ್ನು ಕೊಡು— ಎಂದು ಪ್ರಾರ್ಥಿಸುತ್ತಾರೆ ಮತ್ತು:

" ಜನರೊಲಿವಭಿಮಾನದೊಳು ವಾದಿ ಬಹು ತರ್ಕ-|
ವನೆ ಬಿಡದೋದಿ ಬಳಲುವಂತೆ |
ಮನುಗಳ ಜಪವೆನ್ನ ಮೇಲ್ನುಡಿಯೊಳಗನು-||
ದಿನವಿರೆ ಮಾಡು ಪಾವನ ಶೀಲ |
ಮುನಿಕುಲ ನುತಿಲೋಲ | ವಿನಮಿತ ಸುರಜಾಲ |
ಬೇಗ ಕರುಣಿಸು ೨

ಜನರನ್ನು ಮೆಚ್ಚಿಸುವ ಹಂಬಲದಿಂದ, ಶುಷ್ಕಪಂಡಿತನು ಬಹುಗ್ರಂಥಗಳನ್ನು ಓದಿ ಬಳಲುತ್ತಾನೆ; ಅವೆಲ್ಲಾ ವ್ಯರ್ಥ. ಹೀಗಾದರೆ ವಿದ್ಯೆಯು ಸಾರ್ಥಕವಾಗುವ ಭಕ್ತಿಯನ್ನು ನನಗೆ ಕೊಡು. ಅಲ್ಲದೆ :

" ಸಲೆ ಸಮರತಿಯೊಳೊಲಿಸಿ ಮೆಚ್ಚಿಸಿದನೊಮ್ಮೆ |
ತೊಲಗಿದಿನಿಯಳು ಧ್ಯಾನಿಸುವಂತೆ |
ನೆಲಸಿ ತತ್ವಾನುಭಾವನೆಯೆನ್ನ ಮನವೊಳು ||
ಚಲಿಸದೊಲಿರಿಸು ಭಾವಜಭಂಗ |
ವಿಲಸಿತ ವಿಮಲಾಂಗ | ಸುಲಭನೆ ಶಂಭುಲಿಂಗ ||
ಬೇಗ ಕರುಣಿಸು ||೪||

ಸತಿ, ತನ್ನ ಪತಿಯನ್ನು ಧ್ಯಾನಿಸುವಂತೆ ತತ್ವಾನುಭಾವನೆ ನನ್ನ ಮನಸ್ಸಿನಲ್ಲಿ ಚಲಿಸದಂತೆ ಇರಿಸು— ಎಂದು ಪ್ರಾರ್ಥಿಸುತ್ತಾರೆ. ಈ ಗೀತೆ ಅರ್ಥಗಾಂಭೀರ್ಯದಿಂದ

ಶ್ರೀಮಂತವಾಗಿರುವುದಲ್ಲದೆ, ನಾದ ಮಾಧುರ್ಯದಿಂದ ರಮಣೀಯವೂ, ಪರಿಣಾಮಕಾರಿಯೂ ಆಗಿರುವುದನ್ನು ಕಾಣುತ್ತೇವೆ. ಹಾಗೆಯೇ ತನು, ಮನ, ವಚನಗಳ ಪರಿಶುದ್ಧಿಯೇ ನಿಜವಾದ ತಪಸ್ಸು- ಎಂದು ವ್ಯಾಪಕವಾದ ಅರ್ಥವನ್ನು ಸೂಚಿಸುವ "ಮಾಡಲಿಲ್ಲವೇ ತಪವನು ಮಾಡಲಿಲ್ಲವೇ"-ಎಂಬ ಗೀತೆಯಾಗಲೀ, 'ಶರಣಸತಿಯ ಮದುವೆಯ ಸಂಭ್ರಮವನು ನೋಡಿರಮ್ಮ" ಎಂಬ ಗೀತೆಯಲ್ಲಿ ವ್ಯಕ್ತಗೊಂಡ ಕಲ್ಪನೆಯಾಗಲೀ ಸೂಚಿಸುವ ನೈತಿಕ ಹಿನ್ನೆಲೆಯನ್ನು ನೋಡಿದಾಗ ನಿಜಗುಣರ 'ಜೀವನ ದರ್ಶನ' ಇನ್ನೂ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ.

ಇಂತಹ ಭದ್ರವಾದ ನೈತಿಕ ಸಾಧನೆಯ ತಳಹದಿಯ ಮೇಲೆ ನಿಜಗುಣರ ಯೋಗ ಸಾಧನೆಯ ಸೌಧ ಬೆಳೆದು ನಿಂತಿದೆ. ಯೋಗ 'ಪ್ರತಿಪಾದನಾಸ್ಥಲ'ದಲ್ಲಿ ಮಂತ್ರಯೋಗದಿಂದ ಹಿಡಿದು ಲಯಯೋಗ, ಹಠಯೋಗ, ರಾಜಯೋಗ ಮತ್ತು ಶಿವಯೋಗಗಳವರೆಗೆ ಅವರ ಯೋಗವಿಕಾಸದ ದೃಷ್ಟಿಯನ್ನು ಕಂಡುಕೊಳ್ಳುತ್ತೇವೆ. ಮನಸ್ಸನ್ನು ಒಮ್ಮೆ ಗಿಳಿಗೆ ಒಮ್ಮೆ ಕೋಗಿಲೆಗೆ, .ಒಮ್ಮೆ ವೀಣೆಗೆ ಹೀಗೆ ಅನೇಕ ರೀತಿಯಲ್ಲಿ ಹೋಲಿಸಿ ಅದಕ್ಕೆ ಸುನಾದವನ್ನು ಕಲಿಸುವ ಯೋಗಮಾರ್ಗದ ಚಿತ್ರವನ್ನು ಅನೇಕ ಗೀತೆಗಳಲ್ಲಿ ಚಿತ್ರಿಸಿದ್ದಾರೆ. "ಮನವೆಂಬ ಗಿಳಿಯು ನೊಯ್ಯಾರದೊಳೋವಿ ಮೆಲ್ಲನೆ ಮುದ್ದುನುಡಿಗಲಿಸೆಲೆ ಮಾನಿನಿ।"-ಎಂಬ ಗೀತೆಯಂತೂ ಓದುಗರ ಮನಸ್ಸನ್ನು ಆಕರ್ಷಿಸುತ್ತದೆ. ಯೋಗಾಭ್ಯಾಸವೆಂಬ ಶಿಕ್ಷಣದಿಂದ ಈ ಗಿಳಿಗೆ ಮೆಲ್ಲಮೆಲ್ಲನೆ ಮಾತನ್ನು ಕಲಿಸಿ "ಶಂಭುಲಿಂಗವೆನಿಸುವಾತ್ಮರಾಮನೆ ಶಿವಶಿವ" ಎಂದೋದಿಸಬೇಕಂತೆ! ಅಂತೆಯೇ "ಯೋಗಿಯೆಂಪೆನಿಸೆನ್ನನು। ವಿಷಯಸುಖ ಭೋಗಿಯೆನಿಸದೆ ಜಗದೊಳು ಶಿವನೇ।" ಎಂಬುದನ್ನಾಗಲೀ ಅಥವಾ :

"ಬಹು ಕೃತ್ಯವಳಿದಾತ್ಮಯೋಗ ನಿದ್ರೆಯೊ।
ಳಿಹ ಮುಕ್ತನಿರವ ನೋಡು ರಮಣಿ॥"
"ಪ್ರಾಣಲಿಂಗವಿದನು ಗುರವಿನಾಣತಿಯೊಳು ಕೇಳಿನೋಡಿ।
ಮಾಣದೇಕ ಚಿತ್ತದಿಂದೆ ಜಾನಿಪನೆ ಕೃತಾರ್ಥನು॥"

ಈ ಮೊದಲಾದ ಅನೇಕ ಗೀತೆಗಳು ನಿಜಗುಣರ ಪೂರ್ಣದೃಷ್ಟಿಯ ಯೌಗಿಕ ಸಂಪತ್ತನ್ನು ಪರಿಚಯ ಮಾಡಿಕೊಡುತ್ತವೆ.

ಅತಿಗಹನವಾದ ತತ್ವಜ್ಞಾನದ ಜಿಜ್ಞಾಸೆಯನ್ನೂ ಅತಿ ಸುಲಭವಾಗಿ ಸರಳವಾಗಿ, ಆಕರ್ಷಕವಾಗಿ ಹೇಳುವ ಕಲೆ ನಿಜಗುಣರಿಗೆ ಸಿದ್ಧಿಸಿದೆ. ಜ್ಞಾನ ಪ್ರತಿಪಾದನೆಯ ಅನೇಕ ಗೀತೆಗಳಲ್ಲಿ ಇದನ್ನು ಕಂಡುಕೊಳ್ಳುತ್ತೇವೆ. "ಅರಿವು ನೀನೆಂದು ಸದ್ಗುರು ಪೇಳೆ ತಿಳಿವನೆ, ಜಾಣರ ದೇವ॥" ಎಂಬ ಗೀತೆ, ಸದ್ಗುರುವಿನ ಮಾರ್ಗದಿಂದ ಜ್ಞಾನದ ಬೆಳಕನ್ನು ಕಂಡ ಸಾಧಕ ತನ್ನಲ್ಲಿಯೇ ತಾನು ಹಾಗೆ ಅರಿವನ್ನು ಕಂಡು ಅರಿವೇ ತಾನೆಂದರಿದು ಸಂದೇಹವಿಲ್ಲದವನಾಗುತ್ತಾನೆಂದು ಸುಂದರವಾಗಿ ಪ್ರತಿಪಾದಿಸುತ್ತದೆ.

" ಅರಿವೆ ತಾನೆಂದು ನಂಬಿ ನಿಂದೊಡೆ ಮುಕ್ತಿ ಪೆರತಿಲ್ಲವೆಂದುದು ನಿಗಮೋಕ್ತಿ " ಎಂಬ ಗೀತೆಯಲ್ಲಿಯೂ ಇದೇ ಅಭಿಪ್ರಾಯವನ್ನು ಇನ್ನೊಂದು ರೀತಿಯಲ್ಲಿ ಪ್ರತಿಪಾದಿಸಿದ್ದಾರೆ.

" ಆವ ಪುಣ್ಯದ ಫಲವಿದೆಂದು ಕುರುಹಿಡಲಹುದು ।
ಜೀವ ಭಾವವನುಳಿದ ನಿಜ ನಿಷ್ಠೆಯು ॥ "

ಜೀವ ಭಾವವನ್ನುಳಿವ ನಿಜನಿಷ್ಠೆ ಅಳವಡುವುದು ಪುಣ್ಯದ ಫಲ. ಆ ಫಲದಿಂದ ಲಭಿಸುವ ಸುಖವಾದರೂ ಎಂಥದು ?

" ಅರಸು ನರ್ತಕಿ ತಾಳಧಾರಿ ಸೂರಿಗಳನಾ ।
ವರಿಸಿ ಬೆಳಗುವ ರಂಗದೆಡೆಯ ಸೊಡರಂತೆ ॥
ನೆರೆವಹಮು ಬುದ್ಧೀಂದ್ರಿಯಾದಿ ವಿಷಯಂಗಳಾ ।
ಚರಣ ಸಾಕ್ಷಿಕ ಚಿತ್ತು ತಾನೆಂಬ ಸುಖವ ॥

ಅಹಂಕಾರ, ಬುದ್ಧಿ, ಇಂದ್ರಿಯ ವಿಷಯಗಳೆಲ್ಲಕ್ಕೂ ಮೀರಿದ, ಇವೆಲ್ಲಕ್ಕೂ ಸಾಕ್ಷೀಭೂತವಾದ ಚಿತ್‌ಸ್ವರೂಪನು ತಾನೆಂಬುದನ್ನು ಸಾಧಕ ಕಂಡುಕೊಳ್ಳಬೇಕು. ಆ ಚಿತ್‌ಶಕ್ತಿ ಈ ಎಲ್ಲವನ್ನೂ ಬೆಳಗುತ್ತದೆ. ಹೇಗೆಂದರೆ 'ಅರಸು ನರ್ತಕಿ, ತಾಳಧಾರಿಗಳು ಮತ್ತು ನೋಡುವ ವಿದ್ವಾಂಸರು–ಎಲ್ಲರನ್ನೂ ರಂಗಸ್ಥಳದ ದೀಪವು ಬೆಳಗುವಂತೆ' ಎಂಬ ಉದಾಹರಣೆಯಿಂದ ಅದನ್ನು ಸಮರ್ಥಿಸುತ್ತಾರೆ. ಹಾಗೆಯೇ :

" ಮನೆಯ ಕಂಡಿಯೊಳ್ಬಿದ್ದ ದಿನನ ಕಿರಣದಲ್ಲಿ, ಕರ ।
ವನು ಚಲಿಸೆ ನೇಸರು ಚಲಿಸಿತೆಂಬಂತೆ !
ಜನನಾದಿ ವಿಕೃತಿ ಜೀವಂಗೆ ತೋರಿದೊಡದನು
ತನಗೆ ನಿಜವಲ್ಲವೆಂದರಿದ ಪರಿಣಾಮವ " ॥ ೨ ॥

ಮನೆಯ ಕಂಡಿಯಲ್ಲಿ ಬಿದ್ದ ಸೂರ್ಯನ ಕಿರಣದಲ್ಲಿ ಕೈಯ್ಯನ್ನು ಚಲಿಸಿದರೆ ಸೂರ್ಯನೇ ಚಲಿಸಿದಂತೆ ಕಾಣುವಂತೆ ಜನನಾದಿ ವಿಕಾರಗಳು ಜೀವಗೆ ತೋರುವುದು ಭ್ರಾಂತಿಜನ್ಯವಾದುದು.

" ಬೆಳಗು ಕತ್ತಲೆಗಳಂ ತಳೆದೊಡಾಗಸದ ನಿ ।
ರ್ಮಳವಳಿಯದಂತೊಪ್ಪುವರಿವು ಮರವೆಗಳ ॥
ಬಳಕೆಗಾಶ್ರಯವೆನಿಸುತವರೊಡನೆ ಬೆರಸದವಿ ।
ರಳ ಶಂಭುಲಿಂಗ ತಾನಾದ ಸಂಪದವ " ॥ ೩ ॥

ಆಕಾಶವು ಬೆಳಕು ಕತ್ತಲೆಗಳೆರಡನ್ನೂ ತಳೆದರೂ ಅವೆರಡರಿಂದಲೂ ನಿರ್ಲಿಪ್ತವಾಗಿರುತ್ತದೆ. ಹಾಗೆಯೇ ಜೀವನು ಅರಿವು ಮರವೆಗಳೆರಡಕ್ಕೂ ಆಶ್ರಯ ಸ್ಥಾನನಾಗಿದ್ದರೂ ಅವೆರಡನ್ನೂ ಬೆರಸದೆ ಅವುಗಳಿಗೆ ಅತೀತನಾಗಿ ಶಂಭುಲಿಂಗವೇ ತಾನಾದ ಸಂಪದ

ವನ್ನು ಪಡೆಯಬೇಕೆನ್ನುತ್ತಾರೆ. ಹೀಗೆ ಸುಂದರವಾದ ಸಾದೃಶ್ಯಗಳಿಂದ ಹೇಳ ಬೇಕಾದ ಗಹನವಾದ ತತ್ವ ಮನದಟ್ಟಾಗುವಂತೆ ಮಾಡುತ್ತಾರೆ. ತಮ್ಮ ಆಳವಾದ ಲೋಕಾನುಭವವನ್ನು ಹಾಡುಗಳಲ್ಲಿ ತುಂಬಿ ಅವು ಗ್ರಾಹ್ಯವಾಗುವಂತೆ ಮಾಡುತ್ತಾರೆ.

"ಆವ ಬಾಧೆಯನುಂಟುಮಾಡಬಹುದಖಿಳ ಭೋ!
ಗಾವಲಂಬನದೊಳಿರೆ ಶಿವಯೋಗಿಗೆ॥

ಲೌಕಿಕ ಭೋಗಾವಲಂಬನದಲ್ಲಿದ್ದರೂ ನಿರ್ಲಿಪ್ತನಾಗಿ ಅವುಗಳ ಬಾಧೆಯನ್ನು ಮೀರಿ ನಿಲ್ಲುವ ಶಿವಯೋಗ ಆತನಿಗೆ ಸಿದ್ಧಿಸುತ್ತದೆ. ಶಿವಯೋಗದ ಈ ಕೊನೆಯ ನಿಲ ವನ್ನು ಸುಂದರವಾಗಿ ಸೂಚಿಸಿ ಮಂಗಳವನ್ನು ಹಾಡುತ್ತಾರೆ.

ಕೈವಲ್ಯಪದ್ಧತಿಯ ಕೊನೆಯಲ್ಲಿ ಬರುವ ಮಂಗಳಪದ್ಯವೂ ಅವರ ಆ ಗ್ರಂಥಕ್ಕೆ ಕಳಶಪ್ರಾಯವಾಗಿದೆ:

"ಜ್ಯೋತಿ ಬೆಳಗುತಿದೆ ವಿಮಲ ಪರಂಜ್ಯೋತಿ ಬೆಳಗುತಿದೆ
ಮಾತು ಮನಂಗಳಿಂದತ್ತತ್ತ ಮೀರಿದ।
ಸಾತಿಶಯದ ನಿರುಪಾಧಿಕ ನಿರ್ಮಲ ॥ ಪ ॥

ಶಿವಧರ್ಮನಾಳವೆಂತೆಂಬ ಕಂಬದಮೇಲೆ!
ಸುವಿವೇಕ ಹೃದಯಾಬ್ಜ ಪಣತೆಯೊಳು॥
ಸವೆಯದ ಸದ್ಭಕ್ತಿ ರಸ ತೈಲ ತೀವಿದ।
ಪ್ರವಿಮಲ ಕಳೆಯೆಂಬ ವತ್ತಿವಿಡಿದು ದಿವ್ಯ ॥ ೧ ॥

ಮುಸುಕಿದ ವಿಷಯ ಪತಂಗ ಬಿದ್ದುರುಳೆ ತಾ- ।
ಮಸ ಬುದ್ಧಿಯೆಂಬ ಕತ್ತಲೆಯಳಿಯೆ ॥
ಮಸಗಿ ಸುಜ್ಞಾನವೆಂತೆಂಬ ಮಹಾಪ್ರಭೆ।
ಪಸರಿಸಿ ಮಾಯಾಕಾಳಿಕೆ ಪೊರ್ದದನುಪಮ ॥ ೨ ॥

ಪ್ರಣವಾಕಾರದ ಗುಣ ಮೂರು ಮುಟ್ಟದ।
ಗಣನೆಗತೀತಾರ್ಥವನೆ ತೋರುವ॥
ಅಣುಮಾತ್ರ ಚಲಸೆಯಿಲ್ಲದ ಮೋಕ್ಷ ಚಿಂತಾ।
ಮಣಿಯೆನಿಸುವ ಶಂಭುಲಿಂಗನೆ ತಾನಾದ ॥ ೩ ॥

ವಿವೇಕವೆಂಬ ಪಣತೆಯಲ್ಲಿ ಭಕ್ತಿರಸತೈಲವನ್ನುಂಡು ಬೆಳಗುವ ಪರಂಜ್ಯೋತಿ ವಿಷಯ ಪತಂಗಗಳನ್ನು ಉರುಳಿಸಿ ತಾಮಸ ಬುದ್ಧಿಯೆಂಬ ಕತ್ತಲೆಯನ್ನು ಅಳಿಸುತ್ತದೆ. ಸುಜ್ಞಾನದ ಮಹಾಪ್ರಭೆ ಬೆಳಗಿ ಶಂಭುಲಿಂಗವೇ ತಾನಾಗಿ ಪರಿಣಮಿಸುತ್ತದೆ. ಸಾಧಕ ಮತ್ತೆ ಮತ್ತೆ ಮನನ ಮಾಡಬೇಕಾದ ಮಹತ್ತರವಾದ ಅರ್ಥದಿಂದ ಗರ್ಭಿತ ವಾಗಿ, ಮಂಗಳಕರವಾದ ಧ್ವನಿ ಸಂಪತ್ತಿನಿಂದ ಕೂಡಿದೆ. ಈ ಮಂಗಳ ಪದ್ಯ!

ಹೀಗೆ ನಿಜಗುಣರ ಗೀತೆಗಳಲ್ಲಿ ಆಧ್ಯಾತ್ಮಿಕ ಜೀವನದ ದರ್ಶನವಿದೆ. ಗಹನವಾದ ತತ್ವಚಿಂತನೆಯಿದೆ; ಇದರ ಜೊತೆಗೆ ಸಾಹಿತ್ಯದ ಸೊಗಸೂ ಮೂಡಿಬಂದಿದೆ ಚಿನ್ನಕ್ಕೆ ಸುವಾಸನೆ ಬಂದಂತೆ. "ಮಾತುಮನಂಗಳಿಂದತ್ತತ್ತ ಮೀರಿದ" ಅನುಭವವನ್ನು ಮಾತಿನಲ್ಲಿ ಹಿಡಿದಿಡುವ ಮಂಗಳಕರವಾದ ಸಾಹಸ ಅವರ ಗೀತೆಗಳಲ್ಲಿ ಕಂಡುಬರುತ್ತದೆ. ಅಂತಹ ಗೀತೆಗಳಲ್ಲಿ ಕೆಲವನ್ನು ಮಾತ್ರ ಸ್ಥೂಲವಾಗಿ ಇದುವರೆಗೂ ನೋಡಲಾಗಿದೆ. ನಿಜಗುಣರ ಗೀತೆಗಳ ಪೂರ್ಣಪರಿಚಯ ಇದಲ್ಲ. ಆದರ ಕಡೆಗೆ ಇದೊಂದು ತೋರ್‌ಬೆರಳು ಮಾತ್ರ. ಇದರಿಂದ ಕುತೂಹಲಗೊಂಡ ಓದುಗರ ದೃಷ್ಟಿ ಮುಂದುವರಿದು ಮೂಲವನ್ನೇ ಸವಿದು ಸಂತೋಷಿಸುವಂತಾಗಲೆಂದು ಹಾರೈಸುವುದು ಮಾತ್ರ ಇದರ ಉದ್ದೇಶವಾಗಿದೆ.

———

(ಯಳಂದೂರು)

# ಮಹಾಕವಿ ಷಡಕ್ಷರದೇವನ ಶಬರ ಶಂಕರ ವಿಳಾಸ



ಶ್ರೀ ಬಿ. ಸಿ. ಜವಳಿ, ಎಂ.ಎ.,
ಪ್ರಾಧ್ಯಾಪಕರು, ಕರ್ನಾಟಕ ಕಾಲೇಜ್, ಧಾರವಾಡ.

ಷಡಕ್ಷರದೇವನು 'ಎಳಂದೂರ ಷಡಕ್ಷರದೇವ'ನೆಂದು ಜನಪ್ರಿಯತೆಯನ್ನು ಪಡೆದ ಕನ್ನಡದ ಪ್ರಥಮ ಶ್ರೇಣಿಯ ಮಹಾ ಕವಿಗಳಾದ ಪಂಪ, ಹರಿಹರರ ಸಾಲಿನಲ್ಲಿ ಕೊನೆಯವನು. ಹಳಗನ್ನಡಶೈಲಿ, ಬಿಗುವಿನಬಂಧ, ಪುರಾಣದ ಲೀಲೆ, ಗಂಭೀರವಾದ ಗುಣ, ನವರಸಾಲಂಕಾರಯುಕ್ತ ಚಂಪೂಶೈಲಿಗೆ ಮುಕ್ತಾಯದ ಸಮಾರಂಭವನ್ನು ಮಹೋಜ್ವಲವಾಗಿ, ಮಾಡಿದ ಕವಿಪುಂಗವ. ಸರಸಕವಿ ಸಾರ್ವಭೌಮ. ಹದಿನೇಳನೆಯ ಶತಮಾನದ ಅತ್ಯುನ್ನತ ದಿಶೆಯ ತಾರೆಯಂತಿದ್ದ ಮಹೋಜ್ವಲ ಶಕ್ತಿವಂತನಾಗಿ 'ಉಭಯಭಾಷಾವಿಶಾರದ'ನೆಂದೂ, 'ಪಂಡಿತೋತ್ತಮ'ನೆಂದೂ ಹೊಗಳಿಸಿಕೊಂಡು ಮೆರೆದುಹೋದ ಕವಿ. ಬೆಂಗಳೂರು ಜಿಲ್ಲೆಯ ಮಳವಳ್ಳೀ ತಾಲ್ಲೂಕಿನವನು. ಪಂಚಾಚಾರ್ಯರ ಪರಂಪರೆಯ ಮಠಕ್ಕೆ ಅಧಿಪತಿಯಾಗಿದ್ದವನು. ಕನ್ನಡ ಸಾಹಿತ್ಯ ವನಿತೆ ಮಹಾಕವಿ ಷಡಕ್ಷರದೇವನಿಗೆ ಚಿರಋಣಿ. ವೀರಶೈವ ಸುಪ್ರಸಿದ್ಧ ಚಂಪೂಕಾರರಲ್ಲಿ, ಕನ್ನಡದ ಚಂಪೂಕವಿಗಳ ಮಾಲಿಕೆಯಲ್ಲಿ ಷಡಕ್ಷರದೇವನಿಗೆ ಮಿಗಿಲಾದ ಸ್ಥಾನವಿದೆ. 'ರೇವಣಸಿದ್ಧ'ನ ಮಗನಾದ 'ರುದ್ರಮುನಿ'ಯ ವಂಶೀಯನಾದ ಉದ್ದಾನ; ಆತನ ಶಿಷ್ಯ 'ಅನ್ನದಾನೀಶ;' ಆತನ ಶಿಷ್ಯ 'ಚಿಕ್ಕವೀರದೇಶಿಕ'; ಆತನ ಶಿಷ್ಯನೇ ನಮ್ಮ ಮಹಾಕವಿ 'ಷಡಕ್ಷರದೇವ'.

ಈತನು ಕನ್ನಡ ಮತ್ತು ಸಂಸ್ಕೃತದಲ್ಲಿಯೂ ಖಂಡಕಾವ್ಯ ಮತ್ತು ಮಹಾಕಾವ್ಯಗಳನ್ನು ವಿರಚಿಸಿದ್ದಾನೆ. ಆದುದರಿಂದ ಪಂಪರನ್ನರಿಗಿದ್ದ ಕೊರತೆ ಷಡಕ್ಷರ

ದೇವನಿಗಿಲ್ಲ. ಕನ್ನಡದಲ್ಲಿ ‘ರಾಜಶೇಖರವಿಳಾಸ’ ‘ವೃಷಭೇಂದ್ರವಿಜಯ’ ಇಲ್ಲವೆ ‘ಬಸವರಾಜ ವಿಜಯ’ ‘ವೀರಭದ್ರ ದಂಡಕ’ ಮತ್ತು ‘ಶಬರಶಂಕರ ವಿಳಾಸ’ಗಳೆಂಬ ಕಾವ್ಯಗಳನ್ನೂ ಸಂಸ್ಕೃತದಲ್ಲಿ ‘ಕವಿಕರ್ಣರಸಾಯನ’ ‘ಭಕ್ತಾಧಿಕ್ಯ’ ‘ಶಿವಾಧಿಕ್ಯ’ ಎಂಬ ಕೃತಿಗಳನ್ನೂ ರಚಿಸಿದ್ದಾನೆ. ಈತನ ಬಗೆಗೆ ಡಾ. ಎಸ್. ಸಿ. ನಂದೀಮಠ, ಎಂ.ಎ., ಪಿ.ಎಚ್.ಡಿ., (ಲಂಡನ್) ಅವರು ‘ಷಡಕ್ಷರದೇವನು ಮಹಾಕವಿಗಳಲ್ಲೊಬ್ಬ; ಸಂಸ್ಕೃತದಲ್ಲಿ ಸ್ತೋತ್ರಗಳನ್ನು ರಚಿಸಿದಂತಿದೆ. ಅವನ ಕೃತಿಗಳು ಕಾವ್ಯಗಳಾಗಿದ್ದರೂ ಅದರಲ್ಲಿ ವೀರಶೈವ ತತ್ವಗಳು ಅಡಕವಾಗಿವೆ’ಯೆಂದು ಹೇಳಿದ್ದಾರೆ.[1] ಇದೇರೀತಿ ಪ್ರೊ. ಶಿ. ಶಿ. ಬಸವನಾಳರು, ಮತ್ತು ಪಿ. ಆರ್. ಕರಿಬಸವಶಾಸ್ತ್ರಿಗಳೂ ಹೇಳಿದ್ದಾರೆ.[2]

ಅಪ್ರತಿಮವಾದ ಪ್ರತಿಭೆ, ಕಲ್ಪನಾಚಾತುರ್ಯ, ದೈವದತ್ತವಾಕ್‌ಶಕ್ತಿ ಕರ್ತೃತ್ವಶಕ್ತಿ. ಕನ್ನಡ ಮತ್ತು ಸಕ್ಕದದ ಮಹಾಕವಿಗಳ ಗಾಢವಾದ ಪರಿಚಯ, ಪಾಂಡಿತ್ಯದ ಪ್ರತಿಭೆ, ಅರಮನೆ ಗುರುಮನೆಗಳ ಅರಿವು, ಸತತಾಭ್ಯಾಸ, ಅಸಾಧಾರಣವಾದ ಲೋಕಾನುಭವ, ಕನ್ನಡದ ಮಹಾಕವಿಗಳು ಬಳಸಿದ ಕಥಾವಸ್ತುವನ್ನೇ ‘ಅಪೂರ್ವ’ವಾಗುವಂತೆ ಬಣ್ಣಿಸುವ ರೀತಿ, ಆತ್ಮಪ್ರಶಂಸೆ, ಕಾವ್ಯದಲ್ಲಿ ಬರುವ ಹಲವಾರು ಭಾವನೆಗಳನ್ನು ಅರಿತು ಬಂಧುರವಾದ ‘ದೇಸಿ’ಯ ಮತ್ತು ‘ಮಾರ್ಗ’ದ ಹಿತದ ಬೆರಕೆಯಲ್ಲಿ ಬರೆಯುವ ಕಲಾಕಾರಿಕೆ, ಭಾವನೆಗಳನ್ನು ಅರಿಯುವ ಸೂಕ್ಷ್ಮಗ್ರಹಣಶಕ್ತಿ, ಭಕ್ತಿಯ ಆವೇಶ, ಅಲಂಕಾರಗಳ ಜೋಡಣೆ, ಹಲವಾರು ಚಿತ್ರಗಳಿಂದ ಕಾವ್ಯವನ್ನು ಪ್ರದರ್ಶಿಸುವ ಕಲೆ ಸೃಷ್ಟಿಯ ವರ್ಣನೆಯನ್ನು ಮಾಡುವಲ್ಲಿ ತೋರುವ ನಾವೀನ್ಯತೆ, ನೀರಸವಾಗದಂತೆ, ಕಣ್ಣಿಗೆ ಕಾಣದ ರೀತಿಯಲ್ಲಿ ಕಾವ್ಯಾಂಶಗಳನ್ನೇ ಮೇಲು ಮಾಡಿ ಧರ್ಮವನ್ನುಪದೇಶಿಸುವ ರೀತಿ, ಶೃಂಗಾರ, ವೀರ, ಭಕ್ತಿರಸಗಳ ಎಲ್ಲೆಯನ್ನರಿತು ಹಿತಮಿತವಾಗಿ ವರ್ಣಿಸುವ ಜಾಣ್ಮೆ, ಕಾಲಕ್ಕೆ ತಕ್ಕಂತೆ ಬರೆವ ಕಲೆ, ಈ ಮೊದಲಾದ ಗುಣಗಳು ‘ಷಡಕ್ಷರದೇವ’ನನ್ನು ಕನ್ನಡದ ಮಹಾಕವಿಗಳಲ್ಲೊಬ್ಬನನ್ನಾಗಿ ಮಾಡಿವೆ. ಎಂತಹ ಪಂಡಿತೋತ್ತಮರೂ ಮೆಚ್ಚಬೇಕಾದ ಈ ಕವಿಯು ಮಹಾಕವಿ ‘ಹರಿಹರದೇವ’ನ ಉದಿತಮಾರ್ಗದಲ್ಲಿ ನಡೆದೂ ಸ್ವತಂತ್ರತೆಯನ್ನು ಮೆರೆದವನು.

ಧರ್ಮಲಕ್ಷಣ, ಕಾವ್ಯಲಕ್ಷಣಗಳು ಆತನ ಕಾವ್ಯಾಂತರ್ಗತ ‘ರಸವತ್ಕವಿತೆಗೆ’ ಮಾರುಹೋಗಿ ದುಷ್ಟವಿಮರ್ಶೆಯನ್ನು ಖಂಡಿಸಿ, ಸಹಜಕವಿತ್ವವನ್ನು ಬಣ್ಣಿಸಿ,

---

1 ‘ಹ್ಯಾಂಡ್ ಬುಕ್ ಆಫ್ ವೀರಶೈವಿಸಂ’ ಪುಟ ೪೮, (೧೯೪೨)

2 ‘ಶಬರ ಶಂಕರ ವಿಳಾಸ’ ಸಂ: ಶಿ.ಶಿ. ಬಸವನಾಳ, ಎಂ. ಎ., ಪೀಠಿಕೆ ಪುಟ ೧–೪೯ (೧೯೩೯) ‘ಶಬರಶಂಕರವಿಲಾಸ’ದಲ್ಲಿ ಕರ್ನಾಟಕ ಚರಿತ್ರಾ ಪ್ರಬಂಧದ ೧. ಡಿ॥ ಪಿ. ಆರ್. ಕರಿಬಸವಶಾಸ್ತ್ರಿಗಳು, ಉಪೋದ್ಘಾತ (೧೯೧೪) ನೋಡಿರಿ.

ಸುಭಗ ಕಾವ್ಯವನ್ನು ಬರೆದವನು. ಈಶ್ವರ ಭಕ್ತಿಯಿಂದ ಎಲ್ಲವೂ ಸಿದ್ಧಿಯಾಗುತ್ತ ದೆಂದು ನಂಬಿದವನು. ಶಿವಪಾರಮ್ಯವನ್ನು ಕಾವ್ಯಗಳ ತುಂಬೆಲ್ಲಾ ವಿಸ್ತರಿಸಿದವನು. ಮಾನವಹೃದಯಗಳ ಮಿಡಿತಗಳನ್ನು ಅರಿತು, ಸತ್ಯ, ನ್ಯಾಯನಿಷ್ಠುರತೆ, ಭಕ್ತಿಯನ್ನು ಪ್ರಮುಖ ತತ್ವಗಳನ್ನಾಗಿ ಕಾವ್ಯದ ತುಂಬೆಲ್ಲಾ ಪ್ರವಹಿಸುವಂತೆ ಮಾಡಿದವನು. ಶಬ್ದ ಗಳ ಗಾಂಭೀರ್ಯ, ಅರ್ಥಗಳ ಮಾಧುರ್ಯ, ಚಮತ್ಕಾರಿಕೆ, ಸರಸತ್ವ, ಶಬ್ದಾಲಂಕಾರ ಮತ್ತು ಅರ್ಥಾಲಂಕಾರಗಳ ಹೆಚ್ಚಳ, ಈ ಮೊದಲಾದ ಗುಣಗಳಿಂದ 'ಶಬರಶಂಕರ ವಿಳಾಸ' ಮತ್ತು ಇತರ ಗ್ರಂಥಗಳು ರಸಿಕರನ್ನು ಆಕರ್ಷಿಸುವಂತೆ ಮಾಡಿವೆ. 'ರಸಿಕ ಚಕ್ರಿ' ಹರಿಹರನ ಮಾರ್ಗಾನುಯಾಯಿಯಾದುದರಿಂದ ಆತನ ರಸಿಕತನವೇ ಕಾವ್ಯದ ಸುಳಿಯಾಗಿದೆ. ಭಾಷೆಯ ಜ್ಞಾನ, ಸಾಹಿತ್ಯದ ಸೊಬಗು, ಓಜೆ, ಮೊದ ಲಾದವುಗಳನ್ನು ಅರಿಯುವವರಿಗೆ ಷಡಕ್ಷರದೇವನ ಕಾವ್ಯಗಳು ಹಬ್ಬದುಣಿಸಿನಂತೆ. ಆದರಿಂದ ಅವನ ಕಾವ್ಯಗಳು ಬಹುಮಾನ್ಯವಾಗಿವೆ.

ರಾಜಶೇಖರವಿಳಾಸ ಮತ್ತು ವೃಷಭೇಂದ್ರ ವಿಜಯಗಳಲ್ಲಿ ವರ್ಣನೆಗಿಂತ ಕಥಾ ವಸ್ತುವಿಗೆ ಮಹತ್ವ ಕೊಟ್ಟು ಅವೆರಡನ್ನೂ ಮಹಾ ಕಾವ್ಯಗಳನ್ನಾಗಿ ನಿರ್ಮಿಸಿದ್ದಾನೆ. 'ಶಬರಶಂಕರವಿಳಾಸ'ದ ವಸ್ತುವು ಕಥಾವಸ್ತು ಮತ್ತು ವರ್ಣನೆ ಈ ಎರಡರಿಂದಲೂ ಕಾವ್ಯವು ಸಾಗುತ್ತಿದೆ. ಕಥೆ ಇಲ್ಲದ ಭಾಗದಲ್ಲಿ ಕವಿಯು ವರ್ಣಿಸುತ್ತ ಹೋಗುತ್ತಾನೆ. ಕಥೆ ಆರಂಭವಾದೊಡನೆಯೇ ವರ್ಣನೆ ಹಿಂದೆ ಬಿದ್ದು ಕಥೆಯು ತಾನುತಾನಾಗಿಯೇ ನಿರರ್ಗಳವಾಗಿ ಸಾಗುತ್ತಿದೆ. 'ಶಬರ ಶಂಕರ ವಿಳಾಸ'ವು ಷಡಕ್ಷರ ದೇವನ ಕೊನೆಯ ಕೃತಿಯಾದುದರಿಂದ ಜೀವನದ ಅನುಭವಗಳು ಮಾಗಿದಾಗ ಬಂದ ಅನುಭವಗಳು ಇಲ್ಲಿ ಹೆಚ್ಚಾಗಿವೆ. ಆಧುನಿಕ ಕವಿಯಾದರೂ ಶೈಲಿಯ ನಿರರ್ಗಳತೆ, ವರ್ಣನೆಗಳ ಮನೋ ಹರತೆ, ಕಂದಪದ್ಯಗಳ ರಮಣೀಯತೆ, ಕಲ್ಪನೆಗಳ ಚಮತ್ಕಾರಿಕತೆ, ಹಳಗನ್ನಡ ಭಾಷೆಯ ಬಿಗುವು ಈತನನ್ನು ಪ್ರಾಚೀನಕಾಲದವನನ್ನೆನ್ನುವಂತೆ ಮಾಡುತ್ತಿವೆ. ಕುಂಠಿತವಾದ ಕನ್ನಡಕ್ಕೆ ರಸಗಾನವನ್ನು ಬೆರೆಸಿ ಹಾಡಿದ ಪ್ರೌಢ ಕವಿ ಷಡಕ್ಷರದೇವ. 'ಗಿಡಕ್ಕೆ ಎಲೆಗಳು ಹೂಗಳು ಬರುವಂತೆ, ಕವಿಗೆ ಕವಿತೆ ಬರಬೇಕೆಂಬ ಕೀಟ್ಸ್ ಕವಿಯ ಉಕ್ತಿಯು ಅವನಿಗೆ ಬಹಳ ಚನ್ನಾಗಿ ಅನ್ವಯಿಸುತ್ತದೆ. ಸ್ವಭಾವ ಚಿತ್ರಗಳನ್ನು ಚಿತ್ರಿಸುವಲ್ಲಿಯಂತೂ ಅವನೊಬ್ಬ ಮೇಲಾದ ಚಿತ್ರಗಾರ. ಆತನ ಭಾಷೆಯನ್ನೇ ಎತ್ತಿಕೊಂಡು ಯಾರಾದರೂ ಅವನ ಕಾಲ ನಿರ್ಣಯ ಮಾಡುವಂತಿದ್ದರೆ ಅವನನ್ನು ಸುಲಭವಾಗಿ ಪಂಪರನ್ನರ ಕಾಲದ ಕವಿಯೆಂದು ಪರಿಗಣಿಸಬಹುದು.

ಈ ಕಥೆಯ ವಸ್ತುವನ್ನು ಕುರಿತು ವಿಮರ್ಶಕರು ಹೇಳುವಾಗ ಈ ಕಥೆ 'ಹಳೆಯ'ದೆಂದು ಹೇಳುತ್ತಾರೆ ಆದರೆ ಸ್ವತಃ ಷಡಕ್ಷರದೇವನೇ :

'ಇದು ಪೊಸರೀತಿ ನೋಡಿದು, ನವಿನಮಲಂಕೃತಿ, ನವ್ಯಭಾವಮಿಂ
ತಿದು, ನವವೃತ್ತಿ ಲೇಸಿದು, ರಸಸ್ಥಿತಿ ನೂತ್ನಮಿದಲ್ತೆ, ನೂತನಂ

ಪದರಚನಾವಿಲಾಸವಿದು, ಕಬ್ಬವಪೂರ್ವಮಿದೆಂದು ಕಬ್ಬಿಗರ್
ಪದೆದೊಲವಿಂದೆ ಕೀರ್ತಿಸೆ ನಿಮಿರ್ಚುವೆನೀ ಸುಭಗಪ್ರಬಂಧಮಂ*

ಎಂದು ಹೇಳಿ ತನ್ನ ಕಾವ್ಯವು 'ಅಪೂರ್ವ'ವೆಂದು ಕರೆದುದರ ಔಚಿತ್ಯವೇನೆಂದು ಕೆಲವರು ಶಂಕಿಸುವಂತಿದೆ. ಹಾಗೆ ನೋಡಿದರೆ ಯಾರ ಕಾವ್ಯಗಳೂ ಹೊಸವಾಗವು. ಪಂಪ, ರನ್ನ, ಕುಮಾರವ್ಯಾಸರ ಸಾಮಗ್ರಿಗೆ ಹಲವಾರು ಸಂಸ್ಕೃತ ಮಹಾಕವಿಗಳೇ ಹೊಣೆ. ಕಲ್ಪನಾಚಾತುರ್ಯದಲ್ಲಿ ಕಥೆಯ ನಿರೂಪಣೆಯಲ್ಲಿ ಷಡಕ್ಷರದೇವನು ಇನ್ನೊಬ್ಬರ ಅಂಧಾನುಕರಣೆ ಮಾಡಿದವನಲ್ಲವೆಂದು ತಿಳಿಸುವದೇ ಕವಿಯ ಉದ್ದೇಶ ವಿರಬೇಕು. ಈ ಕಥೆ 'ಭಾರವಿ'ಯ 'ಕಿರಾತಾರ್ಜುನೀಯ'ದಲ್ಲಿ 'ವ್ಯಾಸ'ರ 'ಭಾರತ' ದಲ್ಲಿ 'ಪಂಪ'ಕವಿಯ 'ಭಾರತ,ದಲ್ಲಿ 'ಕುಮಾರವ್ಯಾಸನ' 'ಭಾರತ'ದಲ್ಲಿ 'ವಿರೂಪಾಕ್ಷ ಪಂಡಿತನ 'ಚೆನ್ನಬಸವ ಪುರಾಣ'ದಲ್ಲಿ ದೊರೆಯಬಹುದು. ಕವಿಯು ತನಗೆ ಆಕರ ವೆಂದು ಯಾವುದನ್ನು ಇಟ್ಟುಕೊಂಡಿದ್ದನೆಂಬುವದನ್ನು ಹೇಳಿಲ್ಲ. ಹೀಗಿದ್ದರೂ ಅವನ ಕಥಾ ಸರಣಿಯನ್ನು ನೋಡಿ ಕೆಲಮಟ್ಟಿಗಾದರೂ ಷಡಕ್ಷರದೇವನು 'ಕುಮಾರವ್ಯಾಸನ ಕೃತಿಯನ್ನು' ಬಳಸಿಕೊಂಡಿರಬಹುದೆಂಬ ಅಭಿಪ್ರಾಯಗಳೂ ತಲೆದೋರುವಂತಿವೆ. ನಿಜವಾಗಿಯೂ ಷಡಕ್ಷರದೇವನು ಶಿವಕವಿಗಳಲ್ಲದವರನ್ನು ಅನುಸರಿಸಿರಲಾರ. ಯಾಕೆಂದರೆ ತನ್ನ ಕಾವ್ಯವನ್ನು ತಿದ್ದಬೇಕಾದರೂ 'ಲಾಕ್ಷಣಿಕನೂ, ಬುಧನೂ ವೃಡ ಭಕ್ತಿ ಭಾವಿತನೂ' ಆಗಿರಬೇಕೆಂದು ಕವಿಯೇ ತಿಳಿಸಿದ್ದಾನೆ. (I–೨೪) ಅಲ್ಲದೆ ತನ್ನ ಕೃತಿಯು 'ಶಂಕರನು ಶಬರನಾಗಿ ಮೆರೆದವನ ಲೀಲೆ; 'ಕಿರಾತ–ರುದ್ರಲೀಲಾ ಕಥನ'ವೆಂದು ಕವಿಯೇ ಹೆಸರು ಕೊಟ್ಟಿದ್ದಾನೆ. ಆದರಿಂದ ಈ ಕಾವ್ಯದಲ್ಲಿ ಅರ್ಜುನ ನಿಗೆ ಹಿರಿಮೆ ಇರದೇ ಶಿವನ ಲೀಲೆಗೆ ಹೆಚ್ಚು ಬೆಲೆ ಇದೆ. ಭಕ್ತಿಗೆ ಪ್ರಥಮಸ್ಥಾನ. ಇತರತ್ರ ಅರ್ಜುನನಿಗೂ ಆತನ ವೀರಕ್ಕೂ ಹೆಚ್ಚು ಮಹತ್ವವಿದೆ ಈ ಕಾರಣ ದಿಂದಲೇ ಕವಿಯು ಪರಮೇಶ್ವರ ಪಾರ್ವತಿಯರ ವರ್ಣನೆಗೆ, ಸ್ತುತಿಗೆ, ಕಾವ್ಯದ ಬಹು ಭಾಗವನ್ನು ವ್ಯಯಿಸಿದ್ದಾನೆ. ಪರಮೇಶನ ಸ್ತುತಿಯನ್ನೇ ಕಾವ್ಯದಲ್ಲಿ ಕವಿಮಾಡುವ ದಲ್ಲದೆ ಇಂದ್ರ, ದೇವತೆಗಳು ಮತ್ತು ಅರ್ಜುನರು, ಹೀಗೆ ಬೇರೆ ಬೇರೆ ಭಾಗದಲ್ಲಿ ಬಿಡಿ ಬಿಡಿಯಾಗಿ ಪ್ರಾರ್ಥನೆ ಮಾಡುತ್ತಾರೆ. ಕವಿಯೇ ಮಾಡಿದ್ದರೆ ಅಷ್ಟೊಂದು ಕಲೆಯು ಎದ್ದು ಕಾಣುತ್ತಿದ್ದಿಲ್ಲ. ಕಾವ್ಯದ ನಾಯಕನು ಶಿವನಾದುದರಿಂದ ಅರ್ಜುನನಿಲ್ಲಿ ಗೌಣ ಪಾತ್ರವಾಗುತ್ತಾನೆ. ಅರ್ಜುನನ ತಪಸ್ಸಿನ ಪ್ರಸಂಗವು ಶಿವನಿಗೆ ಲೀಲೆ ಮಾಡಲು ಒಂದು ಪ್ರಸಂಗ. ವೃಡಭಕ್ತರಿಗಾಗಿ 'ಪದಿನಯ್ದು ನೆಯಬೆನಿಸುವ ಮದನಾರಿಯ

---

* 'ಶಬರಶಂಕರ ವಿಲಾಸ' ಪ್ರ. ಸಂ : ಜಿ. ಶಿ. ಶಿ. ಬಸವನಾಳ, ಎಂ.ಎ., (೧೯೩೯)

1 ,, ,, ,, ೨೪ ಪೀಠಿಕೆ ,, ,,

1 ಮತ್ತು ಕನ್ನಡಸಾಹಿತ್ಯ ಚರಿತ್ರೆ ರಂ. ಶ್ರೀ ಮುಗಳಿ (ಪುಟ ೩೫೧) ೧೯೫೩)

ಶಬರಲೀಲೆಯುಂ ವಸ್ತುಕವಾರ್ಗದೊಳೊರೆನೆಂ' (ಪಂಚಮಾಶ್ವಾಸ ೫೫ನೆಯ ಪದ್ಯ) ಎಂದು ಹೇಳಿದಾನೆ.

**ಕಥಾಸರಣಿ ಮತ್ತು ವರ್ಣನಾಕ್ರಮ:**

ಕನಕಾಚಲ, ಶಿವನ ರಾಜಧಾನಿ, ಶಿವನ ಪದ್ಮಪೀಠ, ಓಲಗಶಾಲೆ, ದೇವತೆಗಳು, ಅಷ್ಟಭೈರವರು, ಇವರ ವರ್ಣನೆಯಿಂದ ಆರಂಭವಾಗಿ ಅರ್ಜುನನು ಇಂದ್ರ ಕೀಲಕ್ಕೆ ಹೋಗುವದು, ದೇವತೆಗಳು ಆತನ ತಪಸ್ಸಿಗೆ ಹೆದರಿ ಶಿವನ ಹತ್ತಿರ ಹೋಗಿ ತಮ್ಮ ಕಾರ್ಯಸಾಧನೆಗಾಗಿ ಸ್ತುತಿಮಾಡಿ ತಮ್ಮ ಕಾರ್ಯದ ವಿವರ ಹೇಳುವದು, ಓರ್ವ 'ಪ್ರಗಲ್ಭತಾಪಸಂ' ವಿವರವನ್ನು ಹೇಳುವದು, ಮೊದಲಾದವುಗಳಿಂದ ಮುಂದುವರೆದು ಶಬರ ರೂಪದಲ್ಲಿ ಬಂದ ಶಿವ, ಕಿರಾತೆಯರ ರೂಪದಲ್ಲಿಳಿದ ಪಾರ್ವತಿ ಮತ್ತು ಪರಿವಾರದವರು, ಅರ್ಜುನ ಶಿವರ ಯುದ್ಧ, ಇತ್ಯಾದಿಯಾಗಿ ನಡೆದಿವೆ. ಈ ರೀತಿಯ ವರ್ಣನಾಕ್ರಮವು 'ಭಾರವಿ'ಯಲ್ಲಾಗಲೀ 'ಭಾರತ'ದಲ್ಲಾಗಲೀ ಕಾಣಬಾರದಿರುವುದರಿಂದ ಅವರನ್ನು ಅನುಸರಿಸಿರುವುದು ಅಸಂಭವನೀಯವೆಂದೇ ತೋರುತ್ತದೆ. ಕವಿಯು ಒಂದುವೇಳೆ ಯಾರನ್ನಾದರೂ ಅನುಸರಿಸಿದ್ದರೆ 'ಶಿವಪುರಾಣ' 'ಶಿವಾಗಮ'ಗಳಿಂದ ಎತ್ತಿಕೊಂಡಿರಬಹುದು ಇಲ್ಲವೆ ಶಿವಪುರಾಣಗಳನ್ನೇ ಆಧರಿಸಿ ಬರೆದ 'ಶಿವತತ್ವ ಚಿಂತಾಮಣಿ'ಯನ್ನು ಅನುಸರಿಸಿರಬಹುದು* ಏನೇ ಇದ್ದರೂ ಷಡಕ್ಷರದೇವನು ಶಿವಭಕ್ತಿ, ಶಿವನ ಲೀಲೆಯ ಕಡೆಗೆ ಹೆಚ್ಚು ಗಮನವಿತ್ತು ತನ್ನ ಕಾವ್ಯವನ್ನು 'ಅಪೂರ್ವ'ವಾಗಿ ಮಾಡಿದಂತಿದೆ.

ಷಡಕ್ಷರದೇವನು ಬಾಳಿದ್ದು ಹದಿನೇಳನೆಯ ಶತಮಾನ. ಕವಿಯು ತನ್ನನ್ನು ತಾನು 'ಕವಿತಾವಿಚಕ್ಷಣ'ನೆಂದು ಕರೆದು ಕೊಂಡಿದ್ದರೂ, ಆತನ ಪ್ರೌಢಿಮೆಯನ್ನು ಕಂಡು ಆ ಕಾಲದವರು ಅವನನ್ನು 'ಕವಿಶೇಖರ'ನೆಂದು ಕರದು ಕವಿಗಳಲ್ಲಿ ಅಗ್ರಗಣ್ಯನನ್ನಾಗಿ ಮಾಡಿದ್ದರೆಂದು ತಿಳಿದು ಬರುತ್ತದೆ. ಚಂಪೂಶೈಲಿಯ ವಿದಗ್ಧತೆ, ಪ್ರೌಢಿಮೆ ಕಾವ್ಯದಲ್ಲಿ ಇದ್ದರೂ ಕಾವ್ಯದ 'ಪ್ರಾಸಾದ' ಗುಣಕ್ಕೆ ಕೊರತೆ ಇಲ್ಲ. ಚಮತ್ಕೃತಿ ಪ್ರಧಾನವಾದ ಸ್ವತಂತ್ರ ಕಲ್ಪನೆಗಳ ಸನ್ನಾಹದಲ್ಲಿ ಷಡಕ್ಷರದೇವನದು ಎತ್ತಿದ ಕೈ. ಈ ಕಾವ್ಯದ ತುಂಬೆಲ್ಲಾ ಅವನ ಕಲ್ಪನಾಶಕ್ತಿ, ರಚನಾಶಕ್ತಿ ಮತ್ತು ಶಬ್ದಶಕ್ತಿಗಳೇ ಮೇಲಾದುವಿರುವದರಿಂದ ಅವನ 'ಭಾರವಾದ ಪಾಂಡಿತ್ಯ'ವು ಗಮನಕ್ಕೆ ಬಾರದೇ ಹೋಗುವಂತೆನಿಸುತ್ತದೆ. ಕವಿತಾಶಕ್ತಿ ಪೂರ್ವಜನ್ಮದ ಸುಕೃತದ ಫಲ ; ಅದನ್ನು ಮಾರಾರಿಯ ಸ್ತುತಿಗೆ ಉಪಯೋಗಿಸಬೇಕು. ಅಂತಹ ಶಿವಭಕ್ತಿಯಿಂದಲೇ ಅರ್ಜುನನಿಗೆ ಪಾಶುಪತಾಸ್ತ್ರವು ದೊರೆಯಿತು. ಅಂದಮೇಲೆ ಶಿವಭಕ್ತಿ ಲೋಕದಲ್ಲಿ ಏನನ್ನು

---

* 'ಕವಿ ಕಥೆಯ ಪರೀಕ್ಷೆ'–ಲೇ: ಎಚ್. ದೇವೀರಪ್ಪ, ಎಂ.ಎ., ಪ್ರಬುದ್ಧ ಕರ್ನಾಟಕ ಸಂಪುಟ ೪..–ಸಂಚಿಕೆ ೩, ಪುಟ. ೧೨೩–೧೫೪.

ಕೊಡದು ಎಂಬುದೇ ಕವಿಯ ಪ್ರಶ್ನೆ. ಲೌಕಿಕ ಆಸೆ ಆಕಾಂಕ್ಷೆಗಳಿಗಾಗಿ ತನ್ನ ಕವಿತಾ ಶಕ್ತಿಯನ್ನು ಹುಂಗಿನ ಜೀವನಕ್ಕೆ ಬಳಸಿಕೊಂಡವನಲ್ಲ. ಧನಕನಕ ಕೀರ್ತಿಗಳಿಗಾಗಿ ಆಶಿಸಿದವನಲ್ಲ; ಶಿವನು ಲೀಲಾಮೂರ್ತಿಯೆಂದೂ, ದೇವಾಧಿದೇವನೆಂದೂ, ಅವನ ಭಕ್ತರು ಶ್ರೇಷ್ಠರೆಂದೂ ನಂಬಿ ಕಾವ್ಯರಚಿಸಿದವ ಷಡಕ್ಷರದೇವ.

ಷಡಕ್ಷರದೇವನ ಕವಿತ್ವಪರೀಕ್ಷೆಗೆ, ಪಾಂಡಿತ್ಯ ಪರೀಕ್ಷೆಗೆ 'ಶಬರಶಂಕರ ವಿಳಾಸ' ವೊಂದೇ ಸಾಕು. ಕಾವ್ಯವು 'ರಸಭರಿತವಾಗಿಯೂ, ನಾದಮಾಧುರ್ಯದಿಂದ ಕೂಡಿರಬೇಕೆಂದೂ ಷಡಕ್ಷರದೇವನ ಮತ. ಷಡಕ್ಷರದೇವನು ಕಾವ್ಯದ ಹೃದಯ 'ರಸ' ವೆಂದು ಅರಿದ ಪ್ರಾಜ್ಞ. ಕಾವ್ಯವು :

ಕಿವಿಗಮರ್ದಾಗೆ, ನಲ್ನುಡಿಯೊಡಂಬಡೆ, ಬಂಧದಳುರ್ಕೆ, ದೇಸಿಯು
ತ್ಸವಮನೊಡರ್ಚೆ, ಸೊಂಪುಸುಳಿದಾಡೆ, ರಸಂ ಪೊಸತಾಗಿ ಕಾಲ್ಪುರಂ
ಕವಿಯೆ ಪೊವಟ್ಟು, ಭಾವಮುದುನಾಂಟಿ ರಸಜ್ಞರ ಚಿತ್ತಮಂ ಮನೋ
ಭವನಲರಂಬಿನಂತೆ ಕೃತಿವೇಟ್ಟುದು ಕಬ್ಬಿಗನುರ್ಬಿ ಧಾತ್ರಿಯೊಳ್ (I-೧೦)

ಎಂದು ಹೇಳಿ, ದುಷ್ಟಕೃತಿಯು ರಸಿಕರಮನವನ್ನು ತಣಿಸನೆಂದೂ, ಅಜ್ಞನು ಜ್ವರ ಬಂದವನಂತೆ, ಕಪ್ಪೆಯಂತೆ, ಘೂಕನಂತೆ ಒಳ್ಳೆಯ ವಸ್ತು(ಕಾವ್ಯ)ವನ್ನು ಮೆಚ್ಚ ನೆಂದೂ ಹೇಳಿ, ಕಾವ್ಯವನ್ನು ಮೆಚ್ಚದ ಖಳರು ರಚಿಸದೇ ತೆಗಳುವದನ್ನು ಮಾತ್ರ ಬಲ್ಲ ರೆಂದೂ ತಿಳಿಸುವದನ್ನೂ ನೋಡಿದರೆ 'ಸಹಜ ಕವಿಯು ಯಾವ ರೀತಿ ಇರಬೇಕೆಂಬು ದನ್ನು ಕವಿಯು ವಿಮರ್ಶಕ ಬುದ್ಧಿಯುಳ್ಳವನಾಗಿರಬೇಕೆಂಬುದನ್ನೂ ಹೇಳಿದುದನ್ನು ಕಂಡು ಕೊಳ್ಳಬಹುದಾಗಿದೆ. ಷಡಕ್ಷರದೇವನ ಇಂತಹ ಕಾವ್ಯವನ್ನು ಓದಬೇಕಾದ ವರು ಸಹೃದಯರೂ, ಪ್ರೌಢಿಮೆಯನ್ನು ಪಡೆದವರೂ ಇರಬೇಕಾಗುತ್ತಿದೆ. ಪಾಂಡಿತ್ಯ ಮತ್ತು ಕಾವ್ಯಮಯತೆ ಅವನ ಕಾವ್ಯದ ಗುಣ.

ಷಡಕ್ಷರದೇವನ ಈ ಕೃತಿ ಒಂದು ಉತ್ತಮ ಕಲಾಕೃತಿ. ಯಾಕಂದರೆ ಕವಿಯು ತಾನು ಸಾಧಿಸಬೇಕೆಂದಿರುವ ತತ್ವವನ್ನು ಪೂರ್ತಿಯಾಗಿ ಕಾವ್ಯದಲ್ಲಿ ಸಿದ್ಧಿಮಾಡಿ ಕೊಂಡಿದ್ದಾನೆ. ಕಥೆಯ ಓಟಕ್ಕೆ ಅನುಗುಣವಾದ ವರ್ಣನೆಗಳನ್ನು ಮಾಡುತ್ತಾನೆ. ಇಲ್ಲಿಯ ಕೈಲಾಸ, ಮಂದರ ಪರ್ವತ ಇಂದ್ರಕೀಲಪರ್ವತ, ಅಲ್ಲಿಯ ಕಾಂತಾರಗಳ ವರ್ಣನೆಗಳು ಕೈಲಾಸ ಪತಿಯಾದ ಶಂಕರನಿಗೂ ಭೂಲೋಕ ಪತಿಯಾದ ಅರ್ಜುನನ ತಪೋ ಭೂಮಿಯೂ ಆದುದರಿಂದ ಆ ವರ್ಣನೆಗಳಿಗೆ ಈ ಕಾವ್ಯದಲ್ಲಿ ಔಚಿತ್ಯ ವಿದೆ. ಪ್ರಕೃತಿ ವರ್ಣನೆಯಲ್ಲಂತೂ ಷಡಕ್ಷರದೇವನದು ಎತ್ತಿದ ಕೈ.

ಕಾವ್ಯದ ರಸಗಳಲ್ಲಿ ಈ ಕಾವ್ಯದಲ್ಲಿ 'ವೀರಶೃಂಗಾರ'ಗಳು ಗೌಣವಾಗಿ 'ಭಕ್ತಿ'ಯೇ ಪ್ರಧಾನ ರಸವಾಗುತ್ತದೆ. ಅರ್ಜುನನು ಎಷ್ಟೊಂದು ಅವಟಿನಿಂದ ಹೋರಾಡಿದರೂ ಕೊನೆಗೆ ಆ ದೇವಾಧಿದೇವನ ಸಾಕ್ಷಾತ್ಕಾರದ ಅರಿವಾದೊಡನೆ, ಅರ್ಜುನನ ಮಾಯೆ ಹರಿದೊಡನೆ, ಅವನಿಗೆ ಅಪಾರ ಅನುಮವಾಗಿ, ತನ್ನ ಅಜ್ಞಾನದ

ಅರಿವಾಗಿ, ಭವರೋಗಮೂರ್ತಿಯ ಚರಣಗಳಲ್ಲಿ ಎರಗಿದಾಗ ಆನಂದವೇ ಮೈವೆತ್ತು ನಿಲ್ಲುತ್ತಿದೆ. 'ಉಮಾನಾಥ, ಸರ್ವಾಪರಾಧಂಗಳನೀಗಳ್ ತಪ್ಪದೆ ಮರೆ; ಪೊರೆ ಪುರಾರೀ; ಎಂದು ಬೇಡಿಕೊಂಡಾಗ ಅಲ್ಲದೆ:

"ಪುಟ್ಟಿಂದು ಸಫಲಮಾದುದು;
ನೆಟ್ಟನೆ ಮದ್ವಂಶ ಕುಸುಮಮುಲಿರ್ದುದು; ಪೆಜತೇಂ ?
ಮುಟ್ಟಿದೆನತಿಶಯ ಪದವಿಯ
ಬಟ್ಟೆಯನ್, ಎಲೆ ದೇವ ನೀನೊಲ್ದುದಜಿಂ." (೫-೫೯)

ಎಂದು ಹಾಡಿ ಭಕ್ತರ ಜೀವನವು ಸಾರ್ಥಕವಾಗಬೇಕಾದರೆ ಸರ್ವೇಶನ ಚರಣ ಕಮಲಗಗಳಲ್ಲಿ ಭೃಂಗನಾಗಿರಬೇಕೆಂಬ ಭಾವನೆಯನ್ನು ಕವಿಯು ಎತ್ತಿ ತೋರಿಸಿದ್ದಾನೆ. ಅಲ್ಲದೆ ಭಕ್ತಿಗೆ ಬೀಜವಾವುದೆಂಬುದನ್ನು ಹರನು ಅರ್ಜುನನಿಗೆ ಈ ರೀತಿ ತಿಳಿಸುತ್ತಾನೆ:

"ನಿನ್ನ ಕಟೂಕ್ತಿಮಂತ್ರ; ಎನಗೆಚ್ಚ ಶರಾವಳಿ ಪುಷ್ಪಸಂಚಯಂ;
ನಿನ್ನ ಸರೋಷವೀಕ್ಷಣದ ದೀಧಿತಿ ದೀಪಿಕೆಯರ್ಚನೋಚಿತಂ;
ನಿನ್ನ ಧನುರ್ಲತಾಹತಿಯ ಬಾಸುಟಿ ಪೂಗಳ ಮಾಲೆಯೊಚ್ಚತಂ;
ನಿನ್ನಯ ಮುಷ್ಟಿಯುದ್ಧಮದು ಮತ್ಪದ ಪೂಜೆ ನಿಜಂ ಧನಂಜಯಾ."

ಈ ನಿರಾಡಂಬರದ ಭಕ್ತಿಯ ರೀತಿಯನ್ನು ಯಾವ ಭಕ್ತನು ಮೆಚ್ಚಿಕೊಳ್ಳಲಿಕ್ಕಿಲ್ಲ?

ಈ ಕಾವ್ಯದ ಪ್ರಮುಖ ಪಾತ್ರಗಳಲ್ಲಿ 'ಶಿವ' ಮತ್ತು 'ಅರ್ಜುನ' ಈರ್ವರೇ ಪ್ರಧಾನರು. ಶಿವನನ್ನು ಕವಿಯು ೧ನೆಯ ಪದ್ಯದಲ್ಲಿ 'ಸ್ವಸ್ತಿಲೋಕಸ್ತ್ರೋಮಂ, ವಿತತ ಭಾಸ್ವತ್ ಪ್ರಕಾಶಂ, ಅಷ್ಟಭೈರವರ ಪಡೆಯನ್ನು ಪಡೆದವ, ದೇವಾಧಿದೇವ ಸೇವಿತ, ಪೂಜಿತ, ಅಭವ, 'ಅನುಪಮ ವಿಭವ' ಎಂದೂ ತಾಪಸರು 'ಭುವನೇಶ್ವರ, ನಿರ್ಮದ, ಮಿಹಿರಪ್ರಭ, ಅರ್ಧೇಂದುಚೂಡ, ಪಾರ್ವತೀಶ,ನೀಲಕಂಠ, ಸರ್ವಜ್ಞಎಂದೂ ಹಲವಾರು ವಿಶೇಷಣಗಳಿಂದ ಹೊಗಳಿದ್ದಾರೆ. ಅವೇ ರೀತಿ ಅರ್ಜುನನ ತಂದೆ ಇಂದ್ರನು 'ಮಹೇಶ, ಅಭವ' ಎಂದೂ ಅರ್ಜುನನೂ ಹಲವಾರು ರೀತಿಯಲ್ಲೂ ಹೊಗಳುತ್ತಾರೆ.

ಅರ್ಜುನನು ಇಲ್ಲಿ ವೀರಮೂರ್ತಿಯೂ ತಪೋಮೂರ್ತಿಯೂ ಅಹುದು. ಇಲ್ಲಿಯ ಅರ್ಜುನನು (ಕವಿಯಿಂದ) 'ಇಂದ್ರತನುಜ' 'ಹರಿಯಂಶೋದ್ಭೂತ'ನೆಂದೂ ಕರೆಯಿಸಿಕೊಳ್ಳಲ್ಪಟ್ಟಿದ್ದಾನೆ. ಅಂತಹನೂ ಶಿವಭಕ್ತಿಯನ್ನು ಮಾಡಬೇಕಾಗಿ ಬಂದಿತೆಂಬುದನ್ನು ತೋರಿಸುವದೇ ಕವಿಯ ಆಶಯ. ಅರ್ಜುನನು ಇತರ ತಪಸ್ವಿಗಳಂತೆ ಸಂಸಾರಕ್ಕೆ ಹೆದರಿ ಅಡವಿಯನ್ನು ಸೇರಿ ತಪಸ್ಸುಮಾಡಿ ಮುಕ್ತಿಪಡೆಯಲು ಹೊರಟವನಲ್ಲ; ಮಹಾಭಾರತದ ಸಮರಕ್ಕೆ ಬೇಕಾದ ಪಾಶುಪತಾಸ್ತ್ರವನ್ನು ಪಡೆಯಲು ಬಂದ ವೀರ.

ಕವಿಯು ಆತನನ್ನು 'ಜವ್ವನಂ ಮಿಸುಪ ಸೌಂದರಂ,' 'ಶಿವಪದ ಸದ್ಭಕ್ತಿ ಸಂಪತ್ ಪ್ರಯುಕ್ತ,' 'ಪ್ರೊಸವೇಷದ ತಾಪಸ' 'ಆನಂದನಿಧಿ' 'ಶಿವಧ್ಯಾನಿ' 'ಉಗ್ರತಪಸ್ವಿ' 'ತಾನೇತಾನು ಶಿವನಾದವ' ಎಂದು ಕರೆದು ಅವನು ಯವ್ವನವನ್ನೇ ಶಿವಪೂಜೆಗೆ, ಶಿವಧ್ಯಾನಕ್ಕೆ ಅರ್ಪಿಸಿದ ಯುವಕನೆಂದು ಕರೆದಿದ್ದಾನೆ.

ಇಂತಹ ವೀರನು ಅಜ್ಞಾನದಿಂದ ಶಿವನೊಡನೆ ಯುದ್ಧಮಾಡಿ ಸೆಣಸಾಡಿ, ಅರಿದ ನಂತರ ಪಶ್ಚಾತ್ತಾಪ ಪಡುವರೀತಿಯೂ ಅತಿ-ಮನೋಹರವಾಗಿದೆ. ಇಲ್ಲಿಯು ಅರ್ಜುನನು 'ಅತುಳಭಯಂಕರ, ಕಡುಗಲಿ, ಪರೋಪಕಾರಿ, ಕರ್ತವ್ಯಪಾಲಕ, ಈಶ್ವರ ಭಕ್ತ, ಪಶ್ಚಾತ್ತಾಪ ಮತಿ' ಎಂದು ಹೇಳಬಹುದು.

ಅರ್ಜುನನು ಶಿವನ ಮೇಲೆ ಬಾಣ ಪ್ರಯೋಗಮಾಡಲು ಬಾಣಗಳೆಲ್ಲವೂ ತೀರಿದಾಗ 'ನರ'ನು 'ಕೋಡಿರದುದಿರ್ದ ಇಭದವೊಲಿರ್ದಂ' ಎಂದು ಹೇಳುವ ಕವಿಯ ಉಪಮೆ ಅತಿ ಸೊಗಸಾಗಿದೆ. ಅರ್ಜುನನು ತಾನು 'ಜಗದೇಕವೀರ'ನೆಂಬ ಹೆಮ್ಮೆಯಿಂದ ಬೇಡವೇಷದ ಶಂಕರನಿಗೆ ತನ್ನನ್ನು ತಡವಲಾಗದೆಂದು ಹೇಳುವ ಪದ್ಯವಿದು :

"ಕರಿ ಕೇಸರಿಯಂ ಕೆಣಕಿದ
ಪರಿಯಂ ಪರುಟವಿಸದಿರ್ ಮದಾಂಧತೆಯಿಂದಾಂ
ತರಿಬಲ ಬಲಾಹಕ ಪ್ರ-

"ಸ್ಫುರಿತ ಮಹಾನಿಲನೊಳತುಳಬಳ ಗಾಂಡಿವಿಯೊಳ್" ಎಂದು ತನ್ನ ಪೌರುಷವನ್ನು ಕೊಂಡಾಡಿಕೊಂಡು 'ಸಿಂಹ'ನೆಂದೂ 'ಪ್ರಚಂಡ ಮಾರುತ'ನೆಂದೂ ಕರೆದು ಕೊಳ್ಳುವಲ್ಲಿ ತೋರಿದ ತನ್ನ ಸಾಮರ್ಥ್ಯ ಸರಿಯಾಗಿದೆ. ಆದರೆ ಹೀಗಿದ್ದರೂ ವೈರಿ ಬಲವನ್ನೂ 'ಕರಿ'ಗೆ 'ಮೇಘ' ಸಮುದಾಯಕ್ಕೆ ಹೋಲಿಸಿದ್ದುದು ಅತ್ಯಂತ ಉಚಿತವೂ ರಸಪೋಷಕವೂ ಆಗಿದೆ.

ಷಡಕ್ಷರನು ಪ್ರತಿಭಾನ್ವಿತ ಕವಿಯೂ ಮೇಲಾದ ಕಲಾಕಾರನೂ ಆದುದರಿಂದ ಯಾವ ಭಾವಕ್ಕೆ ಯಾವ ಪದ್ಯವನ್ನು ಬಳಸಬೇಕೆಂಬುದನ್ನು ಅರಿತ ಜಾಣ. 'ವೀರರಸ'ವನ್ನು ಪ್ರಕಟಪಡಿಸುವದಕ್ಕೆ 'ಓಜೋ' ಗುಣಪ್ರಧಾನವಾದ ಈ ಪದ್ಯ ಅವಲೋಕಿಸ ಬಹುದು :

* 'ಕುಡಿವಾಲಂ ನೆತ್ತಿಯೊಳ್ ಮಿಳ್ಳಿಱಿಯೆ, ಪೊಳೆಯೆ ಕೂದಾಡೆ,
ಕೆಂಗಣ್ಗಳಿಂ ಕೆಂ
ಗಿಡಿಸುತ್ತಂ ಸೂಸೆ, ಪೆರ್ಮೊಗಲರೆ, ತೆರೆವಬಾಯ್ ಭೀತಿಯಂ ಬೀಱಿ ಕಾಯ್ವ
ಪಡೆದಾರ್ಪಿಂಗರ್ಜಿಸುತ್ತಂ ಕೆಳರ್ದು ಕೆದಱುತುಂ ಕೇಸರವ್ರಾತಮಂ, ಮುಂ
ಗಡೆಯೊಳ್ ಪಾಯ್ತುಂದುದುದ್ಯತ್ಪವ ನಖವಿದಳತ್ಕುಂಜರೇಂದ್ರಂ ಮೃಗೇಂದ್ರಂ'
"ಅತಿ ರೌದ್ರಾಕಾರದಿಂದುತ್ಕಟಿಸಿ, ಮುಳಿದು ತಿಂಬುವದಿಂ ನೋಡಿ ಶೌರ್ಯೋ

ನ್ಕತಿಯಿಂ ಮುಂಗಾಲ್ಗಳಂ ಮುನ್ನೆಗೆವುತುಗುರ್ಗಳಿಂ ಪೊಯ್ದು
ಮೇಲ್ವಾಯ್ದು ಗರ್ವೋ
ದ್ಧತಗರ್ಜತ್ಸಿಂಹಮಂ ಬೀಟಿಸಿನುತೊಗೆದದಟಂ ಖಡ್ಗದಿಂ ಪೊಯ್ದನತ್ಯ
ದ್ಭುತಸತ್ತ್ವಂ ಧಾತ್ರಿಯೊಳ್ ತಚ್ಛಿರಮುರುಳೆ ಕನಲ್ದೊರ್ವನುದ್ಯತ್ಕಿರಾತಂ”
* ‘ಪಟುಕೋಪಾಟೋಪಬದ್ಧ ಭ್ರುಕುಟಿ, ವಿಚಲಿತಸ್ಮಶ್ರು, ಘರ್ಮಾಂಬು ಭಾಸ್ವ
ನ್ನಿಟಿಲಂ, ಶೋಣಾಕ್ಷಿಕೋಣಂ, ಪೆದೆಯನೆಬಿಸಿದು, ಗಾಂಡೀವದೊಳ್
ತೊಟ್ಟು, ರೌದ್ರೋ
ತ್ಕಟವೃತ್ತಂ ಜ್ಯಾರವಂಗೆಯ್ದಡಸಿ ಪಿಡಿದು, ನಿಂದಾರ್ದು, ಶಾತಾಸ್ತ್ರಮಂ ಸಂ
ಘಟಿಸುತ್ತುಂ ಮಾಣದೆಚ್ಚಂ ಕಪಟಶಬರನಂ ಕೊಳ್ಳೆನುತ್ತಣ್ಮಿ ಪಾರ್ಥಂ’

ಎನ್ನುವಲ್ಲಿ ಇಲ್ಲಿಯ ಅದ್ಭುತ ಆವೇಶದ ಚಿತ್ರ, ಮಹಾಸ್ರಗ್ಧರಾವೃತ್ತದ ಓಟ, ಪದಗಳ ಜೋಡಣೆ ಅತಿ ಕಲಾತ್ಮಕವಾಗಿವೆ.

ದೇಶಿಯ ಶೈಲಿಯು ಷಡಕ್ಷರ ದೇವನಿಗೆ ಕೈವೊಕ್ಕ ನಿಧಾನ. ‘ಎಲೆ ಎಲೆ ಪಂದಿ ಪಂದಿ’ ‘ತೊಲಗದಿರು ಅಟ್ಟು, ಕುಟ್ಟು, ತಿವಿ, ಕೊಲ್’; ‘ಮಡುಗಿಡು, ಸರುದರಿ,’ ಎಂಬ ಮಾತಿನ ಶೈಲಿಯನ್ನು ಅವಲೋಕಿಸಬಹುದು. ನಾಟಕೀಯತೆ ಇಲ್ಲವೆ ಸಂಭಾಷಣೆಗಳೂ ಅತ್ಯಂತ ಮನೋಹರ. ಅಂತೆಯೇ ಕಾವ್ಯದ ಸೊಬಗ ಹೆಚ್ಚಿಸಿವೆ. ಕಪರ್ದಿಯ ಕಟೂಕ್ತಿಗೆ ಅರ್ಜುನನು ಕೊಡುವ ಉತ್ತರದ ರೀತಿಯಿದು :

“ವಿಪಿನಚರ, ನಿನಗೆ ತಕ್ಕುದು
ಚಪಲಮೃಗವ್ರಜದ ಬೇಂಟೆಯುಜ್ಜುಗಮೆಮ್ಮ
ತಪದ ವಿಚಾರಂ ತಕ್ಕುದೇ ?
ವಿಪರೀತಂ ನಿನ್ನ ನುಡಿಯನೊಲ್ವರೆ ಬಲ್ಲರ್”

ಹೀಗೆ ಅರ್ಜುನನು (‘ಶಬರ’ನೊಡನೆ) ಶಿವನೊಡನೆ ಮಾಡಿದ ಸಂಭಾಷಣೆಯಲ್ಲಿ ಅವರವರ ವ್ಯಕ್ತಿತ್ವದ ಘನತೆ ಸಹಜವಾಗಿ ಹೊರಹೊಮ್ಮುತ್ತಿದೆ. ‘ಬೇಡ ನಿನಗೇಕೆ ಸಾಹಸದಾಡಂಬರಮೆನ್ನೊಳ್’ ಎನ್ನುವ ಅರ್ಜುನನ ಮಾತಿನಲ್ಲಿ ‘ಬೇಡ’ ಶಬ್ದದಿಂದ ಸಹಜವಾಗಿ ಹೊರಹೊಮ್ಮುವ ದ್ವಂದ್ವಾರ್ಥವೂ (ಶ್ಲೇಷೆಯೂ) ಅತಿ ರಮಣೀಯ ವಾಗಿದೆ. ಅದಟನಿಂದ ಹೋರಾಡಿ ಗರ್ಜಿಸಿ, ಶಂಭುವೆಂದು ತಿಳಿಯದೆ ಎಲ್ಲ ಬಾಣ ಗಳನ್ನೂ ಪ್ರಯೋಗಿಸಿ ‘ಎಲೆ ಗೊರವ’ ಎಂದು ಮೂದಲಿಸಿ, ಮಾತನಾಡಿದ ಅರ್ಜುನನು ಸೋತ ಕಾಲದಲ್ಲಿ ಅವನ ಸೋಲಿನ ಭಾವವನ್ನು ವ್ಯಕ್ತಪಡಿಸುವ ಈ ಕಂದಪದ್ಯದ ಮಹತಿಯನ್ನು ನೋಡುವಾ :

“ಎತ್ತಣ ಬನಂ, ಎತ್ತಣ ಕಿಟಿ, ।
ಎತ್ತಣ ಕಾಳ್ಬುಯುದನಾಗಮಂ, ಶಿವಶಿವ ! ಮೇ–

ಚೆತ್ತಣಕಾಳೆಗದುಜ್ಜುಗ
ಮೆತ್ತಣ ಪರಿಭವಮಿದೆಸಗೆ ಸಾರ್ದುದು ಚಿತ್ರಂ!"

ಈ ಪದ್ಯವು ನಿಸ್ಸತ್ವನಾದ ಅರ್ಜುನನ ಮನೋವಿಶ್ಲೇಷಣೆಯನ್ನು, ಮಾತಿನ ರೀತಿಯನ್ನು ಸೊಗಸಾಗಿ ಎತ್ತಿ ತೋರಿಸುತ್ತದೆ. 'ಈತಂ ನರನಕ್ಕುಮೊ' ಎಂದಾಗ 'ನರ' ಎಂಬ ಪದವು ತನ್ನನ್ನು ಬಿಟ್ಟು ಶಬರನೇ 'ನರ'ನಾದನೆಂದು ಸಂದೇಹ ಸೂಚಿಸು ವದೂ ಮತ್ತು 'ಈತನು ಸಾಮಾನ್ಯ ಮಾನವನಾಗಬಲ್ಲನೇ?' ಅಲ್ಲ, ಶಿವನೇ ಇರ ಬಹುದೆಂಬ ಧ್ವನಿತಾರ್ಥವೂ ಆತನ ಮಾತಿನ ರೀತಿಯಲ್ಲಿ ಉದ್ಭವಿಸುವವನ್ನು ನೋಡಿ ದರೆ ಷಡಕ್ಷರ ದೇವನ ಕವಿತಾಶಕ್ತಿಯ ಅಗ್ಗಳಿಕೆ ಕಂಡುಬಾರದಿರದು.

ಷಡಕ್ಷರ ದೇವನ ಚಿತ್ರಗಳಂತೂ ಅತೀವ ಮನೋಹರ. ಋಷಿಗಳು, ಇಂದ್ರನು ಅರ್ಜುನನ್ನು ಪರೀಕ್ಷಿಸಿದನೆಂದು ದೇವಾಧಿದೇವನಿಗೆ ಹೇಳುವ ಚಿತ್ರ, ಅದರಲ್ಲಿ ಇಂದ್ರನು ಅರ್ಜುನನನ್ನು ಪರೀಕ್ಷೆಮಾಡಿದ ಚಿತ್ರ, ಅರ್ಜುನನ ತಪಸ್ಸಿನ ಚಿತ್ರ, ಪಾರ್ವತಿ ಪರಮೇಶ್ವರರು ಶಬರ ವೇಷ ತಾಳಿದ ಚಿತ್ರ, ವರಾಹದ ಆಟೋಪದ ಚಿತ್ರ, ಬೇಡರ ಚಿತ್ರ, ಅರ್ಜುನ ಶಬರರ ಹೋರಾಟದ ಚಿತ್ರ, ಅರ್ಜುನನು ಮಳಲಲಿಂಗ ಪೂಜೆ ಮಾಡಿದ ಚಿತ್ರ, ಹೀಗೆ ಹಲವು ರಮಣೀಯ ಚಿತ್ರಗಳನ್ನೊಳಗೊಂಡಿದೆ ಈ ಕಾವ್ಯ. ಈ ಎಲ್ಲ ಚಿತ್ರಗಳಲ್ಲಿ ಷಡಕ್ಷರ ದೇವನ ಶಕ್ತಿ ಮೇಲಾದುದಾಗಿದೆ.

'ಶಬರ ಶಂಕರ ವಿಳಾಸವು ಮಧ್ಯಮಗುಣದ ವಿದಗ್ಧಕಾವ್ಯ. ಅದರಲ್ಲಿ ಷಡಕ್ಷರಿಯ ಕಲ್ಪನಾಶಕ್ತಿ, ರಚನಾಶಕ್ತಿ ಮತ್ತು ಶಬ್ದಶಕ್ತಿಗಳು ತಮ್ಮ ಮೇಲ್ಮೆಯನ್ನು ಸಾರಿ ಬೆರಗುಗೊಳಿಸುತ್ತವೆ; ಆದರೆ ಕೃತಿಯ ಸಮಗ್ರ ಸೌಂದರ್ಯವನ್ನು ಹೆಚ್ಚಿಸು ವಷ್ಟು ಅವು ಪ್ರಭಾವಿಯಾಗಿಲ್ಲ;' 'ಇದನ್ನು ಲಘುಕಾವ್ಯ ಇಲ್ಲವೆ ಖಂಡಕಾವ್ಯ ಎಂದು ಕರೆಯುವುದಕ್ಕಿಂತ ಮಧ್ಯಮಕಾವ್ಯ ಎನ್ನುವದು ಲೇಸು* ಎಂದು ಪ್ರೊ. ರಂ. ಶ್ರೀ ಮುಗುಳಿಯವರು ಮಾಡಿದ ವಿಮರ್ಶೆ ವಿದ್ವಾಂಸರಿಗೆ ಪೂರ್ಣವಾಗಿ ಸಂಮತವಾಗ ಲಾರದು. 'ಮಧ್ಯಮ ಕಾವ್ಯ' ಅಂದರೆ ಯಾವ ಅರ್ಥ ಎಂಬುದೂ ಸ್ಪಷ್ಟವಿಲ್ಲ. ಒಟ್ಟಿನಲ್ಲಿ ಷಡಕ್ಷರಿಯ ಎನ್ನುವದಕ್ಕಿಂತ 'ಷಡಕ್ಷರ ದೇವ'ನ ಶಬರಶಂಕರ ವಿಳಾಸವು ಕನ್ನಡದ ಮಹಾಕವಿಯ ಶ್ರೇಷ್ಠ ಕಾವ್ಯಗಳಲ್ಲೊಂದೆಂದು ಪರಿಗಣಿಸಬಹುದಾಗಿದೆ.

---

*ಕನ್ನಡ ಸಾಹಿತ್ಯ ಚರಿತ್ರೆ : ಪುಟ ೪೫೧, ೭೫೩,

—::—

# ಸಪ್ತಕಾವ್ಯಕರ್ತೃ ಗುರುಬಸವೇಶ್ವರನ
# ಸದ್ಗುರು ರಹಸ್ಯ



**ಶ್ರೀ ಚ. ಸುಂದರೇಶನ್,** ಬಿ.ಎ. (ಆನರ್ಸ್)

**ಭಾ**ವಪೂರ್ಣವಾದ ತತ್ತ್ವಕಾವ್ಯಗಳಿಂದ ಕನ್ನಡ ಸಾಹಿತ್ಯವನ್ನು ಸಮೃದ್ಧಗೊಳಿಸಿರುವವರಲ್ಲಿ ಮಗ್ಗೆಯ ಮಾಯಿದೇವ, ಗುರುಬಸವ, ನಿಜಗುಣ ಶಿವಯೋಗಿ ಮೊದಲಾದ ಶರಣಕವಿಗಳು ಪ್ರಮುಖರು. ಗುರುಬಸವನು ೨ನೆಯ ಪ್ರೌಢದೇವರಾಯನ ಕಾಲದಲ್ಲಿದ್ದ ವೀರಶೈವ ಕವಿ. ಯೋಗದ ಗುರು ಬಸವಸ್ವಾಮಿ ಎಂದೂ ಈ ಕವಿಗೆ ಹೆಸರುಂಟು. 'ವೀರಶೈವ ಮತಸ್ಥಾಪನಾಚಾರ್ಯ' ಎಂಬ ಬಿರುದುಳ್ಳವ. ಈತನ ಕಾಲ ೧೪೩೦. ಸಪ್ತಕಾವ್ಯಗಳ ಕರ್ತೃ. ಮನೋವಿಜಯ, ಶಿವಯೋಗಾಂಗ ವಿಭೂಷಣ, ಕಲ್ಯಾಣೇಶ್ವರ, ಸ್ವರೂಪಾಮೃತ, ವೃಷಭಗೀತೆ, ಅವಧೂತಗೀತೆ, ಸದ್ಗುರು ರಹಸ್ಯ—ಇವು ಕವಿ ಗುರುಬಸವನ ಸಪ್ತಕಾವ್ಯಗಳು. ವಿವಿಧ ಷಟ್ಪದಿಗಳಲ್ಲಿ ಹಾಡಿನ ರೂಪದಲ್ಲಿ ಕೃತಿಗಳ ರಚನೆ ಮಾಡಿದ್ದಾನೆ.

'ಮನೋವಿಜಯ' ಗುರುಬಸವ ಕವಿಯ ಉತ್ಕೃಷ್ಟ ಗ್ರಂಥ; ಅಷ್ಟೇ ಅಲ್ಲ ಕನ್ನಡ ತಾತ್ವಿಕ ಕಾವ್ಯಗಳ ಮುಂಚೂಣಿಯಲ್ಲಿ ಶೋಭಿಸತಕ್ಕ ಕೃತಿ. ಈ ಕವಿಯು ವೇದಾಂತದಲ್ಲಿ ಬಲ್ಲಿದಾತ. ಶುಷ್ಕವಾದ ಶಾಸ್ತ್ರವನ್ನು ಕಾವ್ಯರೂಪದಲ್ಲಿ ನಡುಗನ್ನಡ ಭಾಷೆಯಲ್ಲಿ ಚಿತ್ತಾಕರ್ಷವಾಗಿ ರಚಿಸಿರುವ ಕೀರ್ತಿವಂತ ಸತ್ವಶಾಲಿ ಕವಿ ಈತ. 'ಮನೋವಿಜಯದ' ವಿಚಾರ ಸರಣಿಯನ್ನೂ ಕವಿಯ ಸುವಿಶಾಲ ದೃಷ್ಟಿಯನ್ನೂ 'ಸದ್ಗುರು ರಹಸ್ಯ'ದಲ್ಲೂ ಕಾಣಬಹುದಾಗಿದೆ. ಮನಸ್ಸನ್ನು ಜಯಿಸಲು, ಮನದ ರಹಸ್ಯವನ್ನು ಕಾಣಲು ಸುವಿವೇಕನೆಂಬ ಶಿಷ್ಯ ಗುರುಕೃಪೆಗೆ ಒಳಗಾಗಿ ಸ್ವಸ್ವರೂಪ ಜ್ಞಾನ ಪಡೆದ ಹೊಲಬನ್ನು 'ಮನೋವಿಜಯ'ದಲ್ಲಿ ಕಾಣಿಸಿದ್ದರೆ, 'ಸದ್ಗುರು ರಹಸ್ಯ'

ವಕ್ಷಿ ಸ್ವಾನುಭವಸಿದ್ಧಾಂತವನ್ನು ಗುರುಶಿಷ್ಯ ಸಂವಾದ ರೂಪದಲ್ಲಿ ಕವಿ ನೀಡಿದ್ದಾನೆ. ಪ್ರಶ್ನೋತ್ತರ ವಿಧಾನದಿಂದ ತತ್ತ್ವಾನ್ವೇಷಣೆ ಮಾಡುವ ಈ ಕ್ರಮ ಉಪನಿಷತ್ ಸಾಹಿತ್ಯವನ್ನೂ, ಸಾಕ್ರಟೀಸ್ ಹಾಗೂ ಆತನ ಶಿಷ್ಯರ ಜ್ಞಾನಾನ್ವೇಷಣೆಯ ಮಾರ್ಗವನ್ನೂ ನೆನಪಿಗೆ ತಂದುಕೊಡುತ್ತಿದೆ.

ರಸ ಭಾವಲಂಕಾರ ।
ದೆಸಕವಿಲ್ಲೆಂದು ಭಾ ।
ವಿಸಬೇಡ ಭಾವುಕರ್ಭಾವಿಸುವಡೆ ॥
ರಸವೆ ಚಿದ್ರಸ ಭಾವ ।
ದೆಸೆ ಪೂರ್ಣನಿಜಭಾವ ।
ವೆಸೆವಲಂಕಾರವಾನಂದದಿರವು ॥

ಗುರುಬಸವನ ಯಾವುದೇ ತಾತ್ತ್ವಿಕ ಗ್ರಂಥವನ್ನು ಅಭ್ಯಾಸಮಾಡುವ ಮುನ್ನ ‘ಮನೋವಿಜಯ’ದ ನವಮ ಪ್ರಕರಣದಲ್ಲಿರುವ ಈ ಪದ್ಯವನ್ನು ಸಹೃದಯರು ಗಮನಿಸುವುದು ಒಳ್ಳೆಯದು. ಈತನ ಕಾವ್ಯದಲ್ಲಿ ಚಿದ್ರಸವೆ ನವರಸ; ಪೂರ್ಣ ನಿಜಭಾವವೆ ಭಾವ; ಆನಂದದ ವಿನ್ಯಾಸವೆ ಅಲಂಕಾರ. ಕವಿಯ ಈ ಮಾತುಗಳು ಭಾವುಕನಲ್ಲಿ ನಿಜದ ಅರಿವನ್ನು ಮೂಡಿಸಿ ಕಾವ್ಯಾಭ್ಯಾಸಕ್ಕೆ ಹೊಸ ಬೆಳಕನ್ನು ಬೀರುತ್ತಿವೆ.

## ‘ಸದ್ಗುರು ರಹಸ್ಯ’ ಕಾವ್ಯಸಮೀಕ್ಷೆ

### ೧. ನಿತ್ಯಾನಿತ್ಯ :

ಸಂಸಾರವನ್ನು ಕಂಡು ಹೆದರಿ ಶರಣುಹೊಕ್ಕ ಶಿಷ್ಯೋತ್ತಮನಿಗೆ ದೇಶಿಕೋತ್ತಮರಾದ ಶ್ರೀ ಗುರುಬಸವೇಶ್ವರರು ಸಂತೋಷದಿಂದ ಹೇಳಿದ ನಿಜತತ್ತ್ವಬೋಧೆಯೇ ‘ಸದ್ಗುರು ರಹಸ್ಯ’. ಈ ಕಾವ್ಯದಲ್ಲಿರುವ ಒಂಬತ್ತು ಉಪದೇಶಗಳಲ್ಲಿ ನಿರೂಪಿತವಾಗಿರುವ ವಿಷಯಗಳು ಇಂತಿವೆ.

೧ ನಿತ್ಯಾನಿತ್ಯ ೨ ಹಿತಾಹಿತ ೩ ನಿರಸನ ೪ ಜೀವತ್ರಯಭೇದ ೫ ವಾಸನೋದ್ರೇಕ ನಿರಸನ ೬ ಮನೋ ನಿರೂಪಣ ೭ ವಸ್ತು ನಿರ್ದೇಶ ೮ ಸ್ವಾತ್ಮ ನಿರೂಪಣ ೯ ಅನನ್ಯಬೋಧೆ.

“ಮೊದಲಿನ ಐದು ಪದಗಳಲ್ಲಿ ಬಸವೇಶ್ವರನ ವಿವಿಧ ಗುಣಾವಳಿಗಳನ್ನು ಸ್ಮರಿಸಿ ಸ್ತುತಿಸಲಾಗಿದೆ”—ಎಂದು ‘ಸದ್ಗುರು ರಹಸ್ಯ’ ಸಂಪಾದಕರಾದ ಎಂ. ಮರಿಯಪ್ಪಭಟ್ಟ ಅವರು ಬರೆದಿದ್ದಾರೆ. ಆದರೆ ಗುರುಬಸವ ಕವಿಯ ಗುರು, ಭದ್ರಗುರುಬಸವಲಿಂಗಸ್ವಾಮಿ—ಎಂತಲೂ, ಈತನಿಗೆ ‘ಷಟ್‌ಸ್ಥಲ ಚಕ್ರವರ್ತಿ’—ಎಂಬ ಬಿರುದಿತ್ತು ಎಂತಲೂ ತಿಳಿದುಬರುವ ಕಾರಣ ‘ಸದ್ಗುರು ರಹಸ್ಯ’ದ ಪ್ರಥಮೋಪದೇಶದ ಮೊದಲಿನ

ಐಸು ಪದ್ಯಗಳು ಭದ್ರಗುರುಬಸವಲಿಂಗಸ್ವಾಮಿಯನ್ನು ಕುರಿತು ಸ್ತುತಿಪದ್ಯಗಳಾಗಿರಬಹುದು. ಪರಬ್ರಹ್ಮನೊಡನೆ ಗುರುವನ್ನು ಸಮಗೊಳಿಸಿರುವ ಕವಿಯ ಕಲ್ಪನೆ ಸತ್ಯವೂ ಸಾರ್ಥಕವೂ ಆಗಿದೆ.

ಸಕಲವೂ ಭಗವಂತನ ಲೀಲಾವಿಭೂತಿ. ತಾನೆ ಪುರುಷ–ಪ್ರಕೃತಿರೂಪ; ತಾನೆ ಶಿಷ್ಯ–ಆಚಾರ್ಯ; ತಾನೆ ಪಿತೃ—ಪುತ್ರಸ್ವರೂಪ; ತಾನೆ ದೃಕ್–ದೃಶ್ಯ; ತಾನೆ ಜಾಗ್ರತ್–ಸುಷುಪ್ತಿರೂಪ; ತಾನೆ ಮಾಯೆ–ಅಮಾಯೆ. ಎಲ್ಲವೂ ತಾನೆಯಾಗಿರುವ ಪರಿಪೂರ್ಣನಾದ ಆ ಗುರುಬಸವನಿಗೆ ಶರಣೆಂದಿದ್ದಾನೆ ಕವಿ. ಸತ್‌ಚಿತ್‌ರೂಪನಾಗಿರುವ ಪರವಸ್ತುವನ್ನು ಮುಚ್ಚಿ ಮರೆಯಾಗುವ ಹಾಗೆ ವ್ಯಾಪಿಸಿಕೊಂಡಂಥ ಮಾಯೆಯನ್ನು, ಕುಲಭ್ರಮೆ, ಛಲಭ್ರಮೆಗಳನ್ನು ಇಲ್ಲಗೈದು ಜ್ಞಾನದ ಚಮತ್ಕಾರದಲ್ಲಿ ನಿಜವಲ್ಲಿ ಕೂಡುತ್ತಾ ಸತ್ಯವಿಚಾರಗಳನ್ನು ಸ್ಪಷ್ಟವಾಗಿ ಮುಕ್ತಿಕಾಮಿಗಳಿಗೆ ಹೇಳುವೆನೆಂದು ಕವಿ ಆಶ್ವಾಸನೆ ಕೊಟ್ಟಿದ್ದಾನೆ.

ತನ್ನ ಕಾವ್ಯವೈಶಿಷ್ಟ್ಯವನ್ನು ಕುರಿತು ಕವಿಯೇ ತಿಳಿಸಿರುವ ಈ ಪದ್ಯ ಗಮನಾರ್ಹ !

ವೇದದಂತುಟೆದಲ್ಲ ಶಾಸ್ತ್ರದ
ಹೋದ ಹೊಲಬಲ್ಲಲೆ ಪುರಾಣದ
ಗಾದೆಗಳ ಜಂಜಡದ ಜಾಡ್ಯದ ಜಿನುಗು ತಾನಲ್ಲ ||
ಆದರಿಸಿ ಕೇಳುವಗೆ ಪರಮ ಸ |
ಮಾಧಿ ಶಾಂಭವ ಸತ್ಯ ಸನ್ಮ |
ಗ್ಬೋಧ ಲೀಲಾಲೋಲ ಶೀಲಾನ್ವಯ ರಹಸ್ಯವಿದು ||

ಹುಟ್ಟುಸಾವುಗಳಲ್ಲಿ ಸಿಕ್ಕಿ ಪಡುತ್ತಿರುವ ಕಷ್ಟವೃತ್ತಿಯನ್ನು ಈ ಕಾವ್ಯವು ಬೋಧಿಸುವುದಿಲ್ಲವೆಂದೂ ;

ಕರ್ಪುರದ ಹೆಣ್ಣಾಗ್ನಿ ಪುರುಷನ |
ನಪ್ಪಿದಾಕ್ಷಣ ನೋಡಲೊಡಲುಂ |
ಸೊಪ್ಪಡಗಿ ಸಂದಳಿದು ನಿರ್ವಯಲಪ್ಪ ತೆಜನಂತೆ ||
ತಪ್ಪದೀ ಸದ್ಗುರು ರಹಸ್ಯದೊ |
ಳಿಪ್ಪ ಸುಕೃತಾರ್ಥವನು ವೇದಿಸು |
ತಿಪ್ಪವರ ತನುವಳಿದು ಮನ ಮಹದೊಳಗೆ ಲಯವಹುದು ||

ಎಂದೂ ಮೋಹಕವಾದ ದೃಷ್ಟಾಂತ ಸಹಿತ, ತಿಳಿಸಿದ್ದಾನೆ.

ತೋರುವ ತೋರಿಕೆ ಹುಸಿ ಎಂಬುದನ್ನು ಮನ, ಮನನ, ಮನನೀಯ—ಎಂಬ ತ್ರಿಪುಟಿ ಜ್ಞಾನಾನುಭವದಿಂದ ಕಲಿತವನು 'ಮೋಕ್ಷಾಂಗನೆಯ ಪಾಣಿಗ್ರಹಣಕನು–

ವಾದನು ಕಣಾ ದಿಟ ನಂಬು ನೀಡಿಸೆ ಕೈಯ ಜಗವಜಾಯೆ' ಎಂದಿದ್ದಾನೆ. ಬಹು ಜನ್ಮಕ್ಕೆ ಸಾಧನವಾದ ಭವಗಳನ್ನು ನಾಶಮಾಡುವ ಬಗೆಗೆ ಶಿಷ್ಯನು ಬಿನ್ನವಿಸಲು ಮನಸ್ಸನ್ನು ಸಂಚಾರಕ್ಕೆ ಅವಕಾಶ ಕೊಡದೆ, ವೀರ್ಯವನ್ನು ಯೋನಿಮುಖದಲ್ಲಿ ಬಿಡದೆ, ಮೂಗಿನ ಮುಖದಲ್ಲಿ ಗಾಳಿ ಸಂಚರಿಸದಂತೆ ವಾಯುವನ್ನು ಸಂಯೋಗ ಮಾಡಿ, ಬ್ರಹ್ಮನಾಡಿಯನ್ನು ಭೇದಿಸಿ, ವೇಧಾಚಕ್ರವನ್ನು ದಾಟಿ ನೀನು ಸುಖಿಯಾಗು ಎಂಬ ಗುರುಬೋಧೆಯನ್ನು ಶಿಷ್ಯನು ಕೇಳಿ 'ಸಟೆ ದಿಟದ ಪ್ರಪಂಚಗಳ ಮಧ್ಯದಲ್ಲಿ ಮಾಯೆ ಹುಟ್ಟಿದೆ. ನಿಜವಲ್ಲದ್ದನ್ನು ನಿಜವೆಂದು ತಿಳಿವುದೇ ಮಾಯೆ; ಭ್ರಾಂತಿ. ಈ ಮಾಯೆ ಯನ್ನು ಗೆಲ್ಲುವುದು ಬಸುಜ ಕಿಚ್ಚಿಗೆ ತುಷವ ಮೆಲಿದಂತೆಲೆಲೆ ಸದ್ಗುರುವೆ' ಎಂದೆನ್ನಲು ಗುರುವು ನಸುನಕ್ಕು ಕಂದನನ್ನು ಬೋಳೈಸಿ ತಲೆದಡವುತ್ತಾನೆ.

ಕುಟಿಲವಿಲ್ಲದ ಎರಡಿಲ್ಲದ ಪಾಪವಿಲ್ಲದ ಪರಶಿವನು ತಾನೇ ಲೀಲೆಗಾಗಿ ಈ ರೀತಿ ಸಕಳ ನಿಷ್ಕಳನಾದನು. ಸಕಲ ನಿಷ್ಕಲರೂಪಾದ ಸದಾಶಿವನ ಉಪಾಸನೆ ನಿನಗೆ ಅಗತ್ಯ ಎಂದು ಶ್ರೀಗುರು ನಿಜದರಿವಿನ ದಾರಿ ತೋರಿಸುವನು. ಆಗ ಶಿಷ್ಯನು 'ಕರ್ಮ ಸಮೂಹದ ಕಡುಗಡಲ ಬಿರುವೊನಲಿಗೆ ನನ್ನನ್ನು ಮತ್ತೆ ಸಿಕ್ಕುವಂತೆ ಮಾಡುವಿರಾ' ಎಂದು ಚಿಂತಿಸುತ್ತಾನೆ. ಅಗ್ಗದ ಸಮಗ್ರ ವಿಶಿಷ್ಟ ಬೋಧಾಭ್ಯುದಯಮಂ ಪೇಳೆನಲು ಹಿತಾಹಿತ ಚಿಂತನೆ ಸಾಧಕನಿಗೆ ಅವಶ್ಯವೆಂದೂ; ನಿನಗೆ ತೋರುವವೆಲ್ಲವೂ ಅಹಿತ. ನಿನಗೆ ತೋರದ ನೀನೆ ಹಿತ. 'ಆತ್ಮವಿತ್ ಶೋಕಂ ತರತಿ' ಎಂದು ಶ್ರುತಿ ಹೇಳಿದೆ. ಆತ್ಮವನ್ನು ತಿಳಿದವನು ಶೋಕವನ್ನು ದಾಟುತ್ತಾನೆ. ಆ ಕಾರಣ ಆತ್ಮವನ್ನು ತಿಳಿ; ಕರ್ಮವನ್ನು ತಿರಸ್ಕರಿಸಿ, ಬ್ರಹ್ಮವನ್ನು ತಿಳಿದುಬಿಟ್ಟರೆ ಅದರಿಂದಾಗುವ ದೊಡ್ಡ ಪ್ರಯೋಜನವೇನು? 'ವಿಜ್ಞಾನಂ ಬ್ರಹ್ಮ' 'ಆನಂದಂ ಬ್ರಹ್ಮ' —ಎಂದು ಶ್ರುತಿ ಹೇಳಿದೆ. ಈ ಶ್ರುತಿಯು ಅಭಿಮತದಂತೆ ಯಾರು ಬ್ರಹ್ಮವನ್ನು ತಿಳಿಯುತ್ತಾರೋ ಅವರೇ ಬ್ರಹ್ಮರಾಗುತ್ತಾರೆ—ಎಂದು ಇಷ್ಟೆಲ್ಲ ಬೋಧಿಸಿ :

"ತರಳ ಕೇಳೀ ಗುರುರಹಸ್ಯವ
ಹರಹದಿರು ಸರ್ವತ್ರಲಥವಾ
ಹರಹಿದಡೆ ನರಪಶುಗಳೀಂ ಶಿವಶರಣರಂದದಲಿ
ಅಜೀವರೇ...."

ಲಲಿತವಾದ ರತ್ನಮಂಟಪಕ್ಕೆ ಹೊಂಗಳಶವಿಟ್ಟರೆ ಸೊಗಸುವುದಲ್ಲದೆ ಹುಲು ಕುಟೀರ ಕ್ಕಿಟ್ಟರೆ ಯೋಗ್ಯವಾಗುವುದೇ ? ವಿಷಯ, ಸಂಬಂಧ, ಅಧಿಕಾರಿ, ಪ್ರಯೋಜನ —ಈ ಅನುಬಂಧ ಚತುಷ್ಟಯದ ಹೊಲಬಿಗನಿಗೆ ಹೇಳಿದರೇನೋ ಸಾರ್ಥಕ. ಅದನ್ನು ಬಿಟ್ಟು ಸಂಸಾರದ ಸೊಕ್ಕಿನಿಂದ ಉಲಿವ ಪಾತಕನಿಗೆ ಈ ಬೋಧೆ ಕೂಡದು. "ಶುಂಠ ರಿಗೆ, ಮನೆ ಘಾಟುಕನಿಗೆ, ವಿಶ್ವಾಸಘಾತನಿಗೆ, ಕಂಟಕನಿಗೆ, ಕಪಟಿಗೆ, ವೃಥಾ ಶ್ರಮ ಗೊಂಡು ಪರಸತಿಗೆ ಬೇಂಟಗೊಂಬಗೆ, ಗುರುಹಿರಿಯರೊಳು ಟೆಂಠಣಿಸ ಕಡುಪಾತ

ಕಂಗೆ ಇದಸಂಟಿಸದಿರಲಿ ಮಗನೆ ಮುಚ್ಚಿದೀ ಗುರುರಹಸ್ಯವನು" ಎಂದಿದ್ದಾನೆ ಕವಿ. ಸತ್ಯರಿಗೆ ಸದ್ಭಕ್ತರಿಗೆ ಸವಿರಕ್ತರಿಗೆ ಸಮಚಿತ್ತರಿಗೆ........ಮಾತ್ರ ಈ ರಹಸ್ಯ ಅಳವಡುವು ದೆಂದು ಪ್ರಥಮೋಪದೇಶದಲ್ಲಿ ಕವಿ ಗುರುಬಸವನು ತಿಳಿಸಿದ್ದಾನೆ.

**೨ ಹಿತ-ಅಹಿತ:**

ಶಿಷ್ಯನ ಕೋರಿಕೆಯಂತೆ ನೆನಹನ್ನು ನಿಜಲಕ್ಷ್ಯದಲ್ಲಿ ವೇಧಿಸುವ ಲಕ್ಷಣವನ್ನು ಕವಿ ಗುರುಬಸವನು ಇಲ್ಲಿ ವಿವರಿಸಿದ್ದಾನೆ. ನನ್ನ ದೇಹ ಎಂಬ ಭಾವನೆ ಬೇಡ. ಅನನ್ಯವಾದ ಲಕ್ಷ್ಯವಸ್ತುವನ್ನು ನೆನಹಿನಿಂದ ಶೋಧನೆ ಮಾಡು. ಸಮರಸಭಾವ ನೆಲೆ ಗೊಂಡಾಗ ಸಹಸ್ರ ಸೂರ್ಯರ ಕಿರಣ ಪ್ರವಾಹದೊಡನೆ ಕೂಡಿಕೊಂಡು ನಿಜಸುಖ ಪಡೆಯುತ್ತೀಯೆ.

ಕಾಯಸುಖ ಬಯಸಬೇಡ. ನಿಜತತ್ತ್ವ ತಿಳಿಯದೆ ಸಾಯಬೇಡ. ಶರೀರ ವೆಂಬುದು ಗಗನಚ್ಛಾಯೆ. ಕಾಯದ ಅವಿವೇಕವೆ ಮಾಯೆ. ಹೆಣ್ಣಿಗೆ, ಹೊನ್ನಿಗೆ ಮರುಳಾಗದಿರು. ಕಾಮನ ಪುಷ್ಪಬಾಣದ ಹರಿತವಾದ ಕತ್ತಿಗೆ ಸಿಲುಕಿ ಮೋಹವು ಅಧಿಕವಾಗದಿರಲಿ.

ಕಿವಿಯ ಸುಖ ನೇತ್ರಸುಖಕ್ಕೆ ದಾರಿ. ನೇತ್ರಸುಖವನ್ನು ಕಂಡ ಬಳಿಕ ಸ್ಪರ್ಶ ಸುಖಾಪೇಕ್ಷೆಯ ತವಕ ಬರುತ್ತದೆ. ವೀಣಾ ಸೂತ್ರವಿಧಿಯಂತೆ ನಿನ್ನ ಸ್ಥಿತಿಯಾಗ ದಿರಲಿ.

ಆಶೆ ನಾಶವಾಗದ ಹೊರತು ಮೋಸ ದೂರವಾಗದು. ಶರೀರದಲ್ಲಿರುವ ಪರ ವಸ್ತುವನ್ನು ಮೆಲ್ಲನೆ ನೋಡಿ ತಿಳಿಯಲರಿಯದೆ ಶ್ರಮದಿಂದ ಲೋಕವನ್ನೆಲ್ಲ ತಿರುಗಿ ಬಳಲುವುದು 'ಕಯ್ಯಲಿಹ ಪಿಂಡವನು ಬಿಟ್ಟೊಣಗಯ್ಯ ನೆಕ್ಕು'ವಂತೆ !

ನಿಜಸುಖದ ಕಡೆಗೆ ಹಿಮ್ಮುಖ ಮಾಡಿದ ಬುದ್ಧಿಯಿಂದ ಸಮಹಿತಾನಂದದಲ್ಲಿ ಬೆರೆಯಲರಿಯದೆ ಕೆಡಬೇಡ. ಒಡನೆ ಬರುವ ಸುಕೃತ ದುಷ್ಕೃತಗಳನ್ನು ತಿಳಿಯದೆ, ಸತಿ ಸುತ ನೆಲ ಒಡವೆ; ಗೃಹಚರಿಗೆ ನಾನು; ನನಗೆ ಅವರು ಗತಿಯೆಂದು ನಂಬಿ ಯಮನ ಬೆತ್ತದ ಗಾಯವನ್ನು ಮರೆತು ಜೀವ ಬಿಡಬೇಡ.

ಮೋಸದ ಕರ್ಮ ಈ ಪ್ರಾಪಂಚಿಕದ್ದು. ಇದನ್ನು ನಂಬಿ ಪರವಸ್ತುವಿನ ರಹಸ್ಯ ತಿಳಿಯದೆ ಮಾತಿನ ವೈಭವದಿಂದ 'ಅಹಂ ಬ್ರಹ್ಮಾಸ್ಮಿ' ಎಂದೆಲ್ಲಾ ಮಾತನಾಡಿ ಹೊಟ್ಟೆ ಹೊರೆಯುವವರ ಲೌಕಿಕ ಧರ್ಮದಲ್ಲಿ ನೀನು ನಡೆದು ಅಹಂಕಾರದ ಭಾರ ತಲೆಗೇರಿ ಬೇಗನೆ ನರಕದಲ್ಲಿ ಹೋಗುವಂತಾಗಬೇಡ. —ಹೀಗೆ ಶ್ರೀಗುರುವು ಸದಾಚಾ ರದ ನಿಜಸುಖದ ಬಾಳ್ವೆಗೆ ಅತ್ಯವಶ್ಯವಾದ ಅಂಶಗಳನ್ನು ಹಲವಾರು ದೃಷ್ಟಾಂತ ಗಳಿಂದ ಶಿಷ್ಯನ ಮನ ನಾಟುವಂತೆ ಈ ಉಪದೇಶದಲ್ಲಿ ನೀಡಿದ್ದಾನೆ.

**೩ ನಿರಸನ:**

ಆಧ್ಯಾತ್ಮಿಕ ಸಾಧಕನಿಗೆ ಬೇಕಾದದ್ದು ಸ್ವಾನುಭವ ಸಿದ್ಧಾಂತದ ಅನುಸಂಧಾನ. ಶಾಸ್ತ್ರಜಾಲ ವಿಧಾನ ಮಾನವಲ್ಲ.

ಪೊರೆದಹಂಕೃತಿಯಿಂದ ಭರದೊಳ್
ತಿರುಗುತಿಹನೇ ಜೀವಯಿದರೊಳ್
ಜಿರಪದಿಹ ನೀನೇ ಪರಾತ್ಮಕನೆಂದ ದೇಶಿಕನು

ಇದರ ವಿವರಕ್ಕಾಗಿ ಶರಣಾದ ಶಿಷ್ಯನಿಗೆ ಪಂಚಭೂತಗಳು ದೇಹದಲ್ಲಿ ಎಲ್ಲಿವೆ ಎಂಬುದನ್ನು ತಿಳಿಸಿದ್ದಾನೆ. ಎಲ್ಲಿ ಕಠಿನವಿದೆ ಅಲ್ಲಿ ಭೂಮಿ. ಎಲ್ಲಿ ಜಲವಿದೆ ಅಲ್ಲಿ ರಸ. ಎಲ್ಲಿ ಪಾವಕವಿದೆ ಅಲ್ಲಿ ಉಷ್ಣ. ಎಲ್ಲಿ ಮಾರುತವಿದೆ ಅಲ್ಲಿ ಸಂಚಲ. ಎಲ್ಲಿ ನಭವಿದೆ ಅಲ್ಲಿ ಶೂನ್ಯ. [ದಹರಾಕಾಶ] ಧರಣಿಯೆನಲು ಅಸ್ಥ್ಯಾದಿಗಳು; ಪುಷ್ಕರವೆಂದರೆ ನೀರು; ವೈಶ್ವಾನರ ಎಂದರೆ ಕ್ಷುಧಾ, ತೃಷೆ ಮೊದಲಾದವು; ಮಾರುತ ಎಂದರೆ ಚಲನಾದಿಗಳು; ಸುರಸರಣಿ ಎಂದರೆ ಕಾಮಾದಿಗಳು— ಹೀಗೆ ದೇಹವು ಜಡಮಯ.

ಗುರುವಾಣಿಯಿಂದ ಎಚ್ಚತ್ತ ಶಿಷ್ಯನು, ದೇಹ ಜಡವಾದರೆ ಜಡವಾದಮೇಲೂ ಸುಖದುಃಖವನ್ನು ಈ ದೇಹ ಹೇಗೆ ಗ್ರಹಿಸುತ್ತದೆ? ಪಂಚಭೂತಗಳು ಒಂದಾಗಿ ಚೇತನಾತ್ಮಕವೆಂದಿರಿ. ಅಂತಾದರೆ ಗಾಳಿ, ಇಂದ್ರಿಯ, ಅಂತಃಕರಣ ಇವೆಲ್ಲ ಜಡವೇ?–ಎಂದೆಲ್ಲ ಪ್ರಶ್ನಿಸುತ್ತಾನೆ. ಪ್ರಾಣವಾಯುವು ಚೇತನವಾದರೆ 'ಮೂಗಿನ ಮೂಕುತಿಯ ಕದ್ದೊಯ್ವ ಕಳ್ಳನನೇಕೆ ತಿಳಿಯದು ಮಗನೆ ಪೇಳು' ಎಂಬ ಗುರುವಿನ ಉತ್ತರ ಸಮುಚಿತವಾಗಿದೆ. ಸೂತ್ರಾನುರೂಪಿನ ಬೊಂಬೆಯಂತೆ ಪ್ರಾಣಾದಿಗಳು ನಿಜಲಕ್ಷ್ಯವನ್ನು ಲಕ್ಷಿಸುವ ದೆಸೆಯಿಂದ ಆತ್ಮನಲ್ಲ. ಬೆಕ್ಕು ಬೇಟೆ ಆಡುತ್ತಿರಲು ಅದನ್ನು ನೋಡುವವ ಹೇಗೆ ಬೆಕ್ಕಾಗದೆ ಸಾಕ್ಷಿಯಾಗುತ್ತಾನೋ ಹಾಗೆ ಅಂತಃಕರಣಗಳ ವ್ಯವಹಾರವಿದೆ.

—ಗುರುಬೋಧೆಯಿಂದ ಶಿಷ್ಯನಲ್ಲಿ ದೇಹೋಹಂಭಾವ ಕೊನೆಗೊಳ್ಳುತ್ತದೆ. ನಾಪ ಕುಮರಿಗೆ ಹುಲ್ಲುನಡಕಿದಂತೆ ದೇಹೋಹಂ ಭಾವನೆ. ಮಳಲಿನಲ್ಲಿ ಎಣ್ಣೆಯನ್ನು ಪಡೆವೆನೆಂಬವನ ಬಳಲಿಕೆಯಂತೆ ಅವಿದ್ಯೆಯು ಹೊಳಹಾದ ಈ ದೇಹದಲ್ಲಿ ಹಲವನ್ನು ಅರಸುವುದು. ದೇಹ ನಾನಲ್ಲ ಎಂದು ಅರುಹಿ ಎಚ್ಚರಿಸಿದಿರಿ; ಹಾಗಾದರೆ ಕೇವಲದಲ್ಲಿ ಎಂದರೆ ಮೂಲದಲ್ಲಿ ನಾನು ಯಾರು—ಎಂದು ಶಿಷ್ಯನು ಪ್ರಶ್ನಿಸುತ್ತಾನೆ.

ಶಿಷ್ಯನ ಜ್ಞಾನದ ಕುತೂಹಲಕ್ಕಾಗಿ ಗುರು ಸಂತಸಪಟ್ಟು 'ಸೋಹಂ' ಎಂಬುದು ಸತ್ಯ; 'ದೇಹೋಹಂ' ಎಂಬುದು ಅಸತ್ಯ ಎಂದು ತಿಳಿಸಿ, ಶಿಷ್ಯನ ಮರು ಪ್ರಶ್ನೆಯ ಮೇರೆಗೆ ದಾಸೋಹಂ ಕೋಹಂ ಸೋಹಂ —ಜೀವತ್ರಯಗಳ ಅನುಬಂಧವನ್ನು ಮುಂದಿನ ಪ್ರಕರಣದಲ್ಲಿ ತಿಳಿಸುವವನಾಗುತ್ತಾನೆ. 'ನಗುರೋರಧಿಕ'ವೆಂಬ ಶ್ರುತಿಮತ ಶಿಷ್ಯನಿಗೆ ಮನದಟ್ಟಾಗುತ್ತದೆ.

**೪. ಜೀವತ್ರಯಭೇದ:**

ಅದ್ವೈತದ ಪಾರಿಭಾಷಿಕ ಪದಗಳು ಹೆಚ್ಚಾಗಿ ಈ ಪ್ರಕರಣದಲ್ಲಿ ಬಂದಿವೆ. ತತ್ತ್ವದೃಷ್ಟಿಯಿಂದ ಈ ಉಪದೇಶವು ಇಡೀ ಕೃತಿಯ ವಿಚಾರದ ಕೇಂದ್ರದಂತಿದೆ. ಜೀವತ್ರಯಭೇದವನ್ನು ಸಾರದಿಂದ ಸ್ಫುಟವಾಗಿ ಬೋಧಿಸಿದ್ದಾನೆ.

**೫. ವಾಸನೋದ್ರೇಕ ನಿರಸನ :**

ಸಂಸ್ಕಾರ ರೂಪಿಯಾಗಿ ಸೂಕ್ಷ್ಮವಾಗಿರುವ ಭಾವವನ್ನು ವಾಸನೆ ಎಂದೆನ್ನ ಬಹುದು. ರೂಪು ನಾಮುಗಳಿಂದ ವಾಸನೆ ಲೇಪಿಸಿದೆ. ವಾಸನೋದ್ರೇಕದಿಂದಲೆ ಸಂಸಾರ ಸಂಭ್ರಮುದುದಯ. ಜನನ ಮರಣ ಸ್ಥಿತಿಗಳು. ಈ ವಾಸನೆಯ ಮೂಲ ವನ್ನು ಕೆದರಿ ಕೆಡಿಸುವವನೆ ಜಾಣನು. ಸತ್, ಜಿತ್, ಸುಖವು ವಾಸನೆಯಿಂದ ಸನಸತ್, ಚಿದಚಿತ್, ಸುಖಾಸುಖ ಎಂದಾಯ್ತು. ಯುಕ್ತಿಯಿಂದ ಈ ವಾಸನೆಯನ್ನು ಕಿತ್ತಿತ್ತಿ ಬಿಸುಟಿದರೆ ಜಗವೆಲ್ಲ ಸಚ್ಚಿದಾನಂದವಲ್ಲವೆ!

ವಾಸನೆಯೇ ಮಾಯೆ. ಆ ಮಾಯೆಯ ಸ್ಫುರಣೆಯೇ ಅಹಂಕಾರ. ಆ ಅಹಂಕಾರಕ್ಕೆ ಹುಟ್ಟೆ ವಿಸ್ತಾರವಾದ ತನ್ಮಾತ್ರಗಳು (ಶಬ್ದಸ್ಪರ್ಶರೂಪರಸಗಂಧ) ಈ ವಾಸನೆಯಿಂದ ಭೂತಂಗಳಿಗೆ ಭಯಂಕರಭೂತವಾಗಿ ಪರಿಣಮಿಸುತ್ತದೆ. ಜಗತ್ತು ಅಸ್ತಿ ಭಾತಿ ಪ್ರಿಯ – ಇವು ಬ್ರಹ್ಮಾಂಶ. ನಾಮ ಮತ್ತು ರೂಪ–ಇವು ಮಾಯಾಂಶ. ತನ್ನೊಳಗಿನ ಅನುಭವದಿಂದ ಕಡೆಯ ನಾಮರೂಪಗಳನ್ನು ಅಳಿದರೆ ಪೂರ್ವತ್ರಯ ಉಳಿಯುವುದು. ನಾಮರೂಪಿನ ಬೆಡಗಿನಲ್ಲಿ ಜಡಮತಿಗಳು ಬೆರಗಾಗಿ ಬ್ರಹ್ಮವನ್ನು ಎಡಹಿಯೂ ಕಾಣದವರಾಗಿದ್ದಾರೆ. ಈ ಅಸತ್ಯದ ಸಂಭ್ರಮನನ್ನು ಅದೇನೆಂದು ಹೇಳುವುದು?

ತೋರುವ ಈ ಶರೀರ ತಾನಲ್ಲವೆಂದು ತಿಳಿ. ತನುವಿಗೆ ಮೂಲಕಾರಣ ತಾನು (Self). ಸಾಯುವಾಗ ಎಣಿಕೆಗೆ ಒಬ್ಬನೆ ಆಗುವುದು ದಿಟ. ಮಕ್ಕಳು ಹೆಂಡಿರು ಆಗ ಬರುವರೇ? ತಾನು ಬೇರೆ ಶರೀರವೆ ಬೇರೆ ಎಂಬುದು ನಿಜವಿರುವಾಗ 'ಕರ ಕಂಕಣಕೆ ಕನ್ನಡಿ ಏತಕ್ಕೆ?' ಎಂದಿದ್ದಾನೆ ಶ್ರೀಗುರು.

**೬. ಮನೋನಿರೂಪಣ :**

ಆತ್ಮನನ್ನು ಅರಿಯುವ ರೀತಿಯನ್ನೂ, ಮನ ಎಲ್ಲಿದೆ? ಅದರ ಆಚರಣೆ ಹೇಗೆ? ಅದರ ಕುರುಹು ಯಾವುದು? ಎಂಬುದನ್ನು ಇಲ್ಲಿ ಬಿತ್ತರಿಸಲಾಗಿದೆ.

**೭. ವಸ್ತುನಿರ್ದೇಶ :**

ಚಿತ್ತ, ವೃತ್ತಿಗಳ ವಿಚಾರವನ್ನು ಇಲ್ಲಿ ವಿವರಿಸಿದೆ. ಶರೀರವಿಡಿದ ಕಾರಣ ಜನನ ಮರಣಗಳಾದುವು. ತನುಗೆಡಲು ಎಂದರೆ ತನುವಿನ ಗುಣಗಳು ಕೆಡಲು

ಜನನಾದಿಗಳು ಇರುವುದಿಲ್ಲ. ದೇಹವೆ ನಾನೆಂದು ಮೋಹಿಸಲು ಶರೀರವಿದೆ. ದೇಹ ನಾನಲ್ಲ. ಶುದ್ಧಜ್ಞಪ್ತಿ ನಾನು – ಎಂಬ ಸತ್ಯಜ್ಞಾನ * ಬರಲು ಆ ಲಕ್ಷಣ ಬಿಟ್ಟ ಸತಿಯಂತೆ ಈ ದೇಹ ಹೋಗುವುದು.

ಸ್ಥೂಲದೇಹದಲ್ಲಿ ಅಹಂಕಾರ ದೊಡ್ಡದಾಗಿರಲು ಜಾಗ್ರದವಸ್ಥೆ. ಆ ಸ್ಥೂಲದ ವಾಸನೆಯನ್ನು ಹಿಡಿದುಕೊಂಡು ಅಹಂಕಾರವು ಸಂಕೋಚವಾದರೆ ಸ್ವಪ್ನಾವಸ್ಥೆ. ಆ ಅಹಂಕಾರ ಮರವೆಯಲ್ಲಿ ಮುಳುಗಿಹೋದರೆ ಸುಷುಪ್ತಿ. ಸಾಕ್ಷಿರೂಪವಾದ ಚಿತ್ತು ನೀನು. ಚಿಜ್ಜ್ಯೋತಿ ನೀನು. ಆ ಕಾರಣ ಜಾಗ್ರಾದಿ ಅವಸ್ಥೆಗಳು ನಿನ್ನಲ್ಲಿ ಪ್ರವೇಶಿಸುವುದಿಲ್ಲ – ಇದಿಷ್ಟು ಪರಮಾರ್ಥ.

ಮನುಷ್ಯನಲ್ಲಿ ವೃತ್ತಿ – ಚಿತ್ತು ಎಂದು ಎರಡು ತೆರ. ವೃತ್ತಿ ಎಂದರೆ ಉಪಾಧಿ: ಚಿತ್ತು ಎಂದರೆ ಪರಬ್ರಹ್ಮ. ವೃತ್ತಿ ನಿಮಿಷಕ್ಕೆ ಹುಟ್ಟುತ್ತದೆ ಚಿತ್ತು ನಿಶ್ಚಲ; ಕೇಡಿಲ್ಲದ್ದಾಗಿದೆ.

ಆತ್ಮನಿಗೆ ಹುಟ್ಟುಸಾವುಗಳಿಲ್ಲ. ರಹಸ್ಯವರಿಯದ ಮೂಢರು ಬ್ರಹ್ಮ ಹುಟ್ಟಿತು; ಬ್ರಹ್ಮ ಸತ್ತಿತು ಎನ್ನುತ್ತಾರೆ. ದೇಹದ ಅಂಕೆ ಪರವಸ್ತುವಾದ ನಿಜಸ್ವರೂಪ ಹೊಂದಿದ ಆತ್ಮನಿಗಿಲ್ಲ. ಉಚ್ಚ – ನೀಚಭಾವ ಈ ಪ್ರಾಪಂಚಿಕದ್ದು.

**೮. ಸ್ವಾತ್ಮನಿರೂಪಣ:**

ಲೋಕದೊಳಗೆ ಎಷ್ಟು ಸುಖ ದೊರಕಿದರೂ ಅದು ಪರಮಾರ್ಥ ಸುಖಕ್ಕೆ ಸಮನಾಗುವುದಿಲ್ಲ. ನಿಜಸುಖ ಅಳವಡುವ ಬಗೆ ಇಲ್ಲಿ ನಿರೂಪಿತವಾಗಿದೆ.

ಅರಿವು ಬಿಡಬೇಕು; ಮರೆವು ಬಿಡಬೇಕು. ಅರಿವು – ಮರೆವು ಎರಡರಲ್ಲಿಯೂ ಇದ್ದದ್ದು ಏನಿದೆ ಅದನ್ನು ಹಿಡಿಯಬೇಕು. ಅರಿವನ್ನೂ ಮರೆವನ್ನೂ ಮರೆತು ಶ್ರೇಷ್ಠನಾದ ತನ್ನನ್ನು ನೋಡಿದವನು ಪರಿಪೂರ್ಣ. ನಿಜದರಿವಿನ ವ್ಯಾಪಿಸಿದ ಪ್ರಕಾಶದ ಬೆರಗಿನಲ್ಲಿ ಬೆರಗಾದವನಾತ.

ಭಿನ್ನಭಾವದಿಂದ ಭ್ರಮೆ. ಭ್ರಮೆಯಿಂದ ಬಳಲಿಕೆ. ಭಿನ್ನಭಾವ ಇಲ್ಲದೆ ಇದ್ದಲ್ಲಿ ಅನನ್ಯತಾಮೂರ್ತಿ ನೀನಾಗುವೆ. ಅರಿವು ಒಳಗಿನದು. ಮರೆವು ಹೊರಗಿನದು. ಅರಿವು – ಮರೆವು ಎರಡೂ ಅಳಿಯಬೇಕು. ಆಗ ತನ್ನ ನಿಲುವು ಗೋಚರವಾಗುತ್ತದೆ. ಉಪಮೆಗೆ ನಿಲುಕದ ಅಖಂಡೈಕರಸ ದರ್ಶನವಾಗುತ್ತದೆ.

ದ್ರಷ್ಟೃ ದೃಶ್ಯ ದರ್ಶನ ಎಲ್ಲವೂ ತಾನೇ. ತನ್ನ ಭಾವದ ನಟನೆಯೇ ಈ ತೆರನಾಗಿ ಮೂರಾಯ್ತು. ದ್ರಷ್ಟೃವೆಂದರೆ ಪರಮ. ದೃಶ್ಯವೆಂದರೆ ಜೀವ. ದರ್ಶನ

---

* "...ನಿನ್ನ ಕೂಡಿದ ಬಳಿಕ ಈ ದೇಹವನಾರು ಕೂಡಿದರೇನು"
—ಮಹದೇವಿಯಕ್ಕ.

ವೆಂದರೆ ಉಭಯ. ಜೀವ ತನ್ನ ವಿಷಯವನ್ನು ಕುರಿತು ಆ ಪರಮನ ಪ್ರೇರಣೆಯ ಮೇರೆ ನಡೆಯುವುದು – ಇದೇ ದರ್ಶನ. ಉಭಯವೂ ಕೂಡಿದ ವಿಸ್ತಾರಬುದ್ಧಿ ದರ್ಶನದಲ್ಲಿದೆ.

೯. **ಅನನ್ಯಬೋಧೆ :**

ನೀನ ಅನ್ಯನಲ್ಲ, ಅನನ್ಯ ಎಂಬ ಜ್ಞಾನವನ್ನು ಗುರುವು ಇಲ್ಲಿ ಶಿಷ್ಯನಿಗೆ ಕರುಣಿಸಿದ್ದಾನೆ. ನಾನು ನೀನು ಎನ್ನುವ ಹೆಸರನ್ನು ನಿರ್ಮೂಲನಗೊಳಿಸಿ ನೇರವಾದ ಜ್ಞಾನದಿಂದ ನೋಡಲು ಜಗತ್ತು ಬ್ರಹ್ಮೈಕ್ಯವಾಗಿದೆ. ನೋಡಿದಂತೆ ಜಗತ್ತು ಕಾಣಿಸುತ್ತದೆ.

ಉರುತರ ಸ್ವಾತ್ಮಪ್ರಭಾ ಚಿ ।
ದ್ಭರಿತವಲ್ಲೆನಲೇಕೆ ಜಗವಂ ।
ಪರಮ ಶುದ್ಧ ಜ್ಞಾನಿಯಾದರೆ ಸಾಲದೇ ತಾನು॥
ಧರೆಯ ವಿಸ್ತೀರ್ಣಕ್ಕೆ ಚರ್ಮವ ।
ಹರಹಲೇತಕೆ ಮರುಳೆ ಪೇಳ್ನಿಜ
ಚರಣಮಾತ್ರಕೆ ಚರ್ಮವಿರುತಿರಲೆಂದ ದೇಶಿಕನು

ಎಂದು ಹೇಳಿ ಜಲವನ್ನು ಬಿಟ್ಟು ಅಲೆ; ಚಿನ್ನವಿಲ್ಲದೆ ಆಭರಣ, ಕಿರೀಟ; ಮಣ್ಣಿನ ಮೂಲವನ್ನು ಬಿಟ್ಟು ಘಟ ಹೇಗೆ ಆಗುವುದಿಲ್ಲವೋ ಹಾಗೆ ಮಾಯಾರಹಿತ ಪರಬ್ರಹ್ಮ ನಿಲ್ಲದೆ ಜಗವಾಗುವುದೆಂತು? ಚಿತ್ಕಡಲಿನಿಂದ ತೆರೆನೊರೆ ಉಕ್ಕಿಬಂದರೂ ಅದರ ಸಂಬಂಧ ಚಿತ್ಕಡಲಿನದೇ ಅಲ್ಲವೇ? ಹಾಗೆ ತನ್ನ ವಿನೋದಕ್ಕೆ ಸೃಷ್ಟಿಸಿದ ಪರಬ್ರಹ್ಮನ ಈ ಜಗತ್ತಿನಲ್ಲಿ ನಾಮ–ರೂಪಗಳು ಚಿತ್ಕಡಲಿನ ತೆರೆನೊರೆಗಳಂತಿವೆ ಪರವಸ್ತು ನಿನ್ನಿಂದ ಅನ್ಯನಲ್ಲ. ಏಕೋದೇವನೆಂದು ಶ್ರುತಿತತಿ ಸಾರಿದೆ. ಶರಣನ ಮಹತ್ವವು ಗಗನಕ್ಕಿಂತ ವಿಸ್ತೀರ್ಣ–ಎಂದು ಶಿಷ್ಯನಿಗೆ ಅನ್ಯಬೋಧೆ ನೀಡಿದ್ದಾನೆ.

## ರೂಪರಚನೆಯನ್ನು ಕುರಿತು.

'ಸದ್ಗುರು ರಹಸ್ಯ'ವು 'ಮನೋವಿಜಯ'ದಂತೆ ಗುರು – ಶಿಷ್ಯ ಸಂವಾದ ರೂಪದಲ್ಲಿರುವ ತತ್ತ್ವಕಾವ್ಯ. ಇಲ್ಲಿ ಪ್ರತಿಪಾದಿಸಿರುವ ತತ್ತ್ವ ಅದ್ವೈತ. ಕವಿ ಬಳಸಿರುವ ಭಾಷೆ ನಡುಗನ್ನಡ. ಶೈಲಿ ಸಮತೂಕದ ಶೈಲಿ. ಛಂದೋರೂಪ ಭಾಮಿನಿ ಆದಿ – ಅಂತ್ಯ ಪ್ರಾಸಗಳನ್ನು ಷಟ್ಪದಿ ರಚನೆಯಲ್ಲಿ ಕವಿ ವೈಶಿಷ್ಟ್ಯಪೂರ್ಣವಾಗಿ ತಂದಿದ್ದಾನೆ. ಸಮುಚಿತವಾದ ಉಪಮೆ ದೃಷ್ಟಾಂತ ನಾಣ್ಣುಡಿಗಳನ್ನು ಕವಿ ನೀಡಿರುವುದು ಹೆಮ್ಮೆಯ ಸಂಗತಿ.

ಲಿಂಗೈಕ್ಯರೂಪನೂ, ಶಕ್ತಿ ಶಿವಾನುಬಂಧನೂ, ಪಂಚಾರ್ಥ ಪ್ರಯುಕ್ತನೂ ಆದ ಶ್ರೀಗುರು ಬಸವೇಶ್ವರ ಕವಿಯೆ ಇಲ್ಲಿ ಪ್ರಮುಖ ಪಾತ್ರವಹಿಸಿದ್ದಾನೆ. ಮುಮುಕ್ಷುಗಳು

ಮಾತ್ರ ಈ ರಹಸ್ಯ ತಿಳಿಯಬೇಕೆಂದು ಪ್ರತಿ ಉಪದೇಶದಲ್ಲಿ ಹೇಳಿದ್ದಾನೆ. ಗುರುವಿನ ಬೋಧೆ ಶಿಷ್ಯನನ್ನು ಬಡಿದೆಚ್ಚರಿಸಿದೆ. ಜ್ಞಾನ ಕುತೂಹಲವನ್ನು ಹೆಚ್ಚಿಸಿದೆ. ಇಲ್ಲಿ ಕಾಣುತ್ತಿರುವ ಗುರು–ಶಿಷ್ಯ ಸಂಬಂಧದ ನಿಲವು ಅಪೂರ್ವವಾದುದು. '**ಮಂದಮತಿ ಕೇಳೆಲವೊ**' ಎಂದು ಶಿಷ್ಯನನ್ನು ಸಂಬೋಧಿಸುವ ಶ್ರೀಗುರುವೇ ಶಿಷ್ಯನಲ್ಲಿ ಗುಣವನ್ನು ವಿಚಾರಶಕ್ತಿಯನ್ನು ಕಂಡಾಗ ಹರುಷಿಸಿದ್ದಾನೆ. ಶಿಷ್ಯನ ಸಂವಾದದಲ್ಲಿ ಜ್ಞಾನದ ಕುತೂಹಲವಿದೆ. '**ಮದಡನಿವನೆಂದೆನ್ನದಿರಿ**' – ಎಂದು ಕೆಲವು ವೇಳೆ ಅರಿಯಲಾರದ ಅಸಾಮರ್ಥ್ಯದ ವಿಜ್ಞಾಪನೆ; ಗುರುಕೃಪೆಗಾಗಿ ನಿರಂತರ ಹಾರೈಕೆ; ಮತ್ತೊಮ್ಮೆ ವಿಮರ್ಶನ ದೃಷ್ಟಿ, ಸವಿನಯಭಾವ – ಮುಂತಾದ ಅಪೂರ್ವ ಗುಣಗಳು ಶಿಷ್ಯನಲ್ಲಿ ಮಿನುಗುತ್ತಿವೆ.

## ಕಾವ್ಯದ ನಿಲವು – ಮೌಲ್ಯ.

ಮನವನ್ನು ಜಯಿಸಿದರೆ ಮುಕ್ತಿ ಎಂಬ ತತ್ತ್ವಪ್ರತಿಪಾದನೆ 'ಮನೋವಿಜಯ' ಗ್ರಂಥದ ಉದ್ದೇಶ. ಮನಸ್ಸು ಎಂದರೆ ಏನು? ಹೇಗೆ ಮೂಡಿತು? ಅದನ್ನು ಒಂದೆಡೆ ನಿಲ್ಲಿಸುವ ಬಗೆ ಹೇಗೆ? – ಎಂಬಿವೇ ಸಂಗತಿಗಳು ಅಲ್ಲಿ ಬಂದಿವೆ. ಆಧುನಿಕ ಕಾಲದ ವೈಜ್ಞಾನಿಕ ದೃಷ್ಟಿಯನ್ನು ೧೫ನೆಯ ಶತಮಾನದ ಪೂರ್ವಾರ್ಧದಲ್ಲಿ ಇದ್ದು, ಬಹು ಒಪ್ಪಿಗೆಯಾಗುವ ರೀತಿಯಲ್ಲಿ ಸಾಸ್ತ್ರಸಮ್ಮತವಾಗಿ ಅತಿ ಜಟಿಲ ವಿಷಯಗಳನ್ನು ಸರಳ ಕನ್ನಡದಲ್ಲಿ ನಿರೂಪಿಸಿದ್ದಾನೆ. ಶಾಸ್ತ್ರ ವಿಷಯವಾದರೂ ರಮ್ಯವಾಗಿ ರಸಪೂರ್ಣವಾಗಿ ವಿಜ್ಞಾನ – ಕಾವ್ಯವೋ ಎಂಬಂತೆ ಜ್ಞಾನಾನಂದಗಳ ರಸವಾಹಿನಿ ಪ್ರವಹಿಸಿದೆ. 'ಮನೋವಿಜಯ'ದಲ್ಲಿ ಕವಿ ಕಾಣಿಸಿರುವ ಭಾವಕಾಂತಿಯನ್ನೂ, ತತ್ತ್ವದ ಗಾಢತೆಯನ್ನೂ ಸಾಕಷ್ಟು ಸದ್ಗುರುರಹಸ್ಯದಲ್ಲಿ – ಅದರಲ್ಲೂ ಆರನೆಯ ಉಪದೇಶದಲ್ಲಿ ಕಾಣಬಹುದು. 'ಮನೋವಿಜಯ'ದಂತೆ ಸದ್ಗುರುರಹಸ್ಯದ ಕೃತಿಯ ಬೆಳವಣಿಗೆ ಆಗಿರುವುದು ವಿಷಯಗ್ರಹಣಕ್ಕೆ ಉಪಯುಕ್ತವಾಗಿದೆ; ಕಾವ್ಯದ ನಿಲವು–ಮೌಲ್ಯ ಅರ್ಥಪೂರ್ಣವಾಗಿ ಕಂಡಿದೆ.

ಒಟ್ಟಿನಲ್ಲಿ ಗುರುಬಸವನು ಉನ್ನತ ಶಿವಾನುಭವಿ. ಹಿರಿಯ ತತ್ತ್ವವೇತ್ತ; ಯೋಗಾಭ್ಯಾಸದಲ್ಲಿ ನೈಪುಣ್ಯವನ್ನು ಪಡೆದವ. ಸಾಮಾನ್ಯ ಮಾನವರೂ ಶಾಶ್ವತ ಸಾಹಿತ್ಯದತ್ತ ಒಲಿದು ಒಳಗಾಗಿ ಭಾವಶೀಲರಾಗಿ ನಿಜದ ಅರಿವು – ಆಚರಣೆಯನ್ನು ಪಡೆಯುವಂತೆ ಪ್ರೇರಿಸುವ ಕಾವ್ಯಗಳನ್ನು ರಚಿಸಿ ಯಶಸ್ವಿಯಾದವ. 'ಸದ್ಗುರು ರಹಸ್ಯ'ದಲ್ಲಿ ನೀಡಿರುವ ಆತನ ಒಂಬತ್ತು ಉಪದೇಶಗಳನ್ನು ಸ್ವಾನುಭವ ಸಿದ್ಧಾಂತದ ಸೋಪಾನಸರಣಿಯೆಂದು ಧಾರಾಳವಾಗಿ ಹೇಳಬಹುದು.

——:——

# ಋಷಿಕವಿ ಮುಪ್ಪಿನ ಷಡಕ್ಷರಿ



**ಶ್ರೀ ವ್ಹಿ. ಎಂ. ಯಕ್ಕುಂಡಿಮಠ**
ಆರ್. ಎಲ್. ಎಸ್. ಹೈಸ್ಕೂಲ್, ಧಾರವಾಡ.

"ವಿಭೂತಿ" ಸ್ಮಾರಕ ಗ್ರಂಥ ಬಹು ವೈಶಿಷ್ಟ್ಯಪೂರ್ಣವಾದುದು. ವಿಭೂತಿ ಶಬ್ದದ ಅರ್ಥವನ್ನೊಳಗೊಂಡು ಅದರ ಮೂರ್ತಿಮಂತ ಸ್ವರೂಪರಾದ, ಪರಮ ಯೋಗಾನಿಷ್ಠರಾದ ಪೂಜ್ಯ ಷ. ಬ್ರ. ಶ್ರೀ ಸದಾಶಿವ ಶಿವಾಚಾರ್ಯ ಮಹಾಸ್ವಾಮಿಗಳವರ ಅರವತ್ತರ ತುಂಬು ಜೀವನದ ಮಹಾ ಪರ್ವಕಾಲದಲ್ಲಿ ಅವರ ಮಹಾ ಪಾದಂಗಳಲ್ಲಿ ಅರ್ಪಿಸುವ ನಮ್ಮೆಲ್ಲರ ಭಕ್ತಿಕುಸುಮಂಗಳ ಒಂದು ಮಹಾಮಾಲೆ. ಮಾಲೆ ಪೋಣಿಸುವ ಕೆಲಸದಲ್ಲಿ ಸಾಮಾನ್ಯರಾದ ನಮ್ಮಂಥವರಿಗೂ ಅವಕಾಶ ಕಲ್ಪಿಸಿ ಕೊಟ್ಟುದುದು ಗ್ರಂಥ ಸಮಿತಿಯ ಅಧ್ಯಕ್ಷರ ವಾತ್ಸಲ್ಯ ಹಾಗೂ ಸಂಪಾದಕ ಮಂಡಳಿಯ ಉದಾರಭಾವವನ್ನು ಸೂಚಿಸುವಂತಿದೆ.

ಹಂಪೆಯ ಹರಿಹರದೇವ ವಿಭೂತಿಯ ವಿಷಯದಲ್ಲಿ ತನ್ನ ರಗಳೆಯ ಕೊನೆಯ ಪದ್ಯದಲ್ಲಿ

ಚೆಲುವ ವಿಭೂತಿ ಶಾಂತತೆ ವಿಭೂತಿ ಸುನೀತಿ ವಿಭೂತಿ ಸರ್ವರೊಳ್ ।
ಸಲುವುದು ಭೂತಿ ಸೌಖ್ಯತೆ ವಿಭೂತಿ ಶಿವಾಗಮ ವೀಧಿಗಗ್ಗಳಂ ॥
ನಿಲುವುದು ಭೂತಿ ಸದ್ಗತಿ ವಿಭೂತಿ ಸದರ್ಥ ವಿಭೂತಿ ಕರ್ಮವಂ ।
ಗೆಲುವುದು ಭೂತಿ ಹಂಪೆಯರಸಂಗೆ ವಿಭೂತಿ ವಿಭೂತಿ ಹಂಪೆಯೊಳ್ ॥

ಎಂದು ನುಡಿದ ವಿಭೂತಿ ವ್ಯಾಖ್ಯೆಯು ಪರಮ ಪೂಜ್ಯ ಮಹಾಸ್ವಾಮಿಗಳಿಗೆ ಹೊಂದಿಕೆಯಾಗುವಂತಿದೆ. ಶಾಂತತೆ, ಸುನೀತಿ, ಸೌಖ್ಯತೆಗಳನ್ನೊಳಗೊಂಡು ಆಗಮ ಜ್ಞಾನವನ್ನು ಅಳವಡಿಸಿಕೊಂಡು ಭಾಷಾಚಾರ್ಯರೆನಿಸಿಕೊಂಡು, ದರ್ಶನ ಮಾತ್ರದಿಂದ

ಸನ್ನುತಿಸುತ್ತಿರುವ ಮಹಾ ತಪಸ್ವಿಗಳಾದ ಇವರು ನಿಜವಾಗಿಯೂ ಮಹಾ ವಿಭೂತಿಗಳು. ವೀರಶೈವ ಸಾಂಪ್ರದಾಯದಲ್ಲಿ ಇಂಥವರ ಪರಂಪರೆಯೊಂದು ಸಾಗಿ ಬಂದಿದೆ. ಈ ಪರಂಪರೆಗೆ ಸೇರಿದ ಮುಪ್ಪಿನ ಷಡಕ್ಷರ ಶಿವಯೋಗಿಗಳ ವಿಷಯವಾಗಿ ಇಲ್ಲಿ ವಿವೇಚಿಸಲಾಗಿದೆ :

ವೀರಶೈವ ಸಾಹಿತ್ಯೇತಿಹಾಸದಲ್ಲಿ ಅನುಭಾವ ಹಾಗೂ ಆಧ್ಯಾತ್ಮಿಕ ಸಾಹಿತ್ಯ ಕ್ಕೊಂದು ಪರಂಪರೆಯಿದೆ. ಆ ಸಾಹಿತ್ಯವನ್ನು ಬೆಳೆಯಿಸಿಕೊಂಡು ಬಂದ ಅನುಭಾವಿ ಗಳ ಹಾಗೂ ಮಹಾ ವಿಭೂತಿಗಳ ಪರಂಪರೆಯೂ ಸಾಗಿ ಬಂದಿದೆ. ಅಂಥ ಅನುಭಾವಿ ಗಳ ಉಜ್ವಲ ಪರಂಪರೆಯೇ ವೀರಶೈವ ಸಂಸ್ಕೃತಿಯನ್ನು ರಕ್ಷಿಸಿಕೊಂಡು ಬಂದಿದೆ. ಆ ಅನುಭಾವದ ಬಳ್ಳಿಗೆ ನಿಜಗುಣ ಶಿವಯೋಗಿಗಳೇ ಮೊದಲಿಗರೆಂದು ಹೇಳಬಹುದು. ಆಧ್ಯಾತ್ಮದ ತಿರುಳನ್ನು ಕನ್ನಡದಲ್ಲಿ ತಿಳಿಯಪಡಿಸಿದ ಮೊದಲ ಶ್ರೇಯಸ್ಸು ಅವರ ಪಾಲಿನದು. ತರುವಾಯದ ಶಿವಯೋಗಿ ವೃಂದದಲ್ಲಿ ಮುಪ್ಪಿನ ಷಡಕ್ಷರಿ ದೇವರ ವ್ಯಕ್ತಿತ್ವ ಹೆಚ್ಚು ಒಡೆದು ಕಾಣುವಂತಿದೆ. ನಿಜಗುಣರಂತೆ ವಿವಿಧ ರಾಗಗಳನ್ನು ಬಳೆಯಿಸಿಕೊಂಡು ತಮ್ಮ ಅಂತರಂಗದ ಅನುಭಾವದ ಬುಗ್ಗೆಯನ್ನು ಹೊರಚಲ್ಲಿದ್ದಾರೆ. ಮುಪ್ಪಿನ ಷಡಕ್ಷರಿ ಶಿವಯೋಗಿಗಳು ಜೀವಿಸಿರುವ ಕಾಲದ ಬಗ್ಗೆ ನಿರ್ದಿಷ್ಟವಾದ ಅಭಿ ಪ್ರಾಯಗಳಿಲ್ಲ. ಇವರ ವ್ಯಕ್ತಿತ್ವವನ್ನು ತಿಳಿಪಡಿಸುವ ಯಾವ ಚರಿತ್ರೆ ಆಧಾರಗಳೂ ಇದ್ದಂತಿಲ್ಲ. ಆದರೆ ಇವರು ಭಾವ ತುಂಬಿ ಹಾಡಿಕೊಂಡ ಹಾಡುಗಳಲ್ಲಿಯೇ ಇವರ ವ್ಯಕ್ತಿವೈಶಾಲ್ಯ, ಮನೋವೈಶಾಲ್ಯಗಳನ್ನೂ, ವಿಶ್ವಕಲ್ಯಾಣದ ಬಗೆಗಿರುವ ಇವರ ಅಂತಃ ಕರಣವನ್ನು ಕಂಡುಕೊಳ್ಳಬಹುದು. ವಿಶ್ವದ ಹೋರಾಟಕ್ಕೆ ಮೂಲಕಾರಣವಾವು ದೆಂಬುದನ್ನು "ಹೋರಾಟವಿಕ್ಕಿಸಲು ಬೇರಾವೆಯಲ್ಲದೆ ಬೇರುಂಟೆ ಜಗದೊಳಗೆ ಎಲೆ ದೇವನೇ" ಎಂಬುದಾಗಿ ಹೇಳಿದ್ದಾರೆ. ದೇವರ ಹೆಸರಿನಲ್ಲಿ ಧರ್ಮದ ಹೆಸರಿನಲ್ಲಿ ನಾ ಹೆಚ್ಚು ನೀ ಹೆಚ್ಚು ಎಂಬ ಕೃತಕ ತಾರತಮ್ಯವನ್ನು ಕಲ್ಪಿಸಿಕೊಂಡಿರುವ ಜನಗಳನ್ನು ಉದ್ದೇಶಿಸಿಯೋ ಏನೋ ಎನ್ನುವಂತೆ "ಅವರವರ ದರುಶನಕೆ ಅವರವರ ವೇಷದಲಿ ಆವರವರಿಗೆಲ್ಲ ಗುರು ನೀನೊಬ್ಬನೇ" ಎಂಬುದಾಗಿ ಉಪದೇಶಿಸಿ ಸರ್ವಧರ್ಮಗಳೂ ಸಮಾನವೆಂಬ ಉದಾತ್ತ ತತ್ವವನ್ನು ತಿಳಿಯಪಡಿಸಿದ್ದಾರೆ. ವಿಶೇಷ ಕ್ಲಿಷ್ಟ ಭಾಷೆ ಯನ್ನುಪಯೋಗಿಸದೆ ಜನಸಾಮಾನ್ಯರಾಡುವ ಮಾತಿನಲ್ಲಿಯೇ ಮುಪ್ಪಿನ ಷಡಕ್ಷರಿ ಶಿವಯೋಗಿಗಳು ತಮ್ಮ ಹಾಡು ಗಬ್ಬಗಳನ್ನು ಹೆಣೆದಿದ್ದಾರೆ. ಶರಣರ ವಚನಗಳ ಪ್ರಭಾವ ಇವರ ಕೃತಿಯುದ್ದಕ್ಕೂ ಕಂಡುಬರುತ್ತಿದೆ. ಮೊದಲು ಆಚರಿಸಿ, ಆ ಆಚರಣೆಯ ಅನುಭಾವದಿಂದಲೇ ಜಗತ್ತಿಗೆ ತಮ್ಮ ಸಂದೇಶ ಬೀರಿದ ಬಸವಣ್ಣನವರ ನ್ನೊಳಗೊಂಡ ಎಲ್ಲ ಶರಣರ ಪ್ರಭಾವದ ತರುವಾಯ ಮಹಾಪುರುಷರ, ಶಿವಯೋಗಿ ಗಳ ಮೇಲಾಗಿರುವದು ಕಂಡು ಬರುವದು "ಎನ್ನ ಕಾಯವು ನಿನಗೆ ಉನ್ನತಾಲಯ ವಾಯಿತೆನ್ನೆನಗೆ ಭಯವುಂಟೆ ಎಲೆ ಲಿಂಗವೇ। ಎನ್ನ ಕಾಲುಗಳೆರಡು ಉನ್ನತದ

ಕಂಭವೈ ಎನ್ನ ಒಡಲೇ ನಿಮಗೆ ದೇವಾಲಯ। ಎನ್ನ ತೋಳುಗಳೆರಡು ಉನ್ನತದ ಮದನ ಕೈ ಎನ್ನ ಶಿರ ಸೌವರ್ಣ ಕಲಶವಯ್ಯ" ಎಂಬ ಮುಪ್ಪಿನ ಷಡಕ್ಷರಿ ದೇವರ ಮಾತುಗಳು "ಎನ್ನ ಕಾಲೇ ಕಂಭ, ದೇಹವೇ ದೇಗುಲ ಶಿರವೇ ಹೊನ್ನ ಕಳಸವಯ್ಯ ಕೂಡಲ ಸಂಗಮದೇವ ಕೇಳಯ್ಯ ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲವಾಗಿ" ಎಂಬ ಬಸವಣ್ಣನವರ ವಚನದ ಪಡಿನೆಳಲಿನಂತಿವೆ.

ದೇವರನ್ನು ನೆನೆವ ಬಗೆ ಅನೇಕ ತೆರನಾಗಿರುವದು. ದೇವನನ್ನು ತಂದೆಯೆಂದು ನಂಬಿಕೊಂಡಿದ್ದವರನೇಕರು; ಕಂದನೆಂದು ತಿಳಿದುಕೊಂಡವರೂ ಇದ್ದಾರೆ. ಪತಿಯೆಂದು ಪೂಜ್ಯಭಾವವನ್ನಿಟ್ಟುಕೊಂಡವರಿಗೂ ಕಡಿಮೆಯಿಲ್ಲ. ಆದರೆ ಮುಪ್ಪಿನಾರ್ಯರು ತಮ್ಮಿಷ್ಟವಾದ ಷಡಕ್ಷರಿ ಲಿಂಗವನ್ನು ಎಲ್ಲ ವಿಧದಿಂದಲೂ ಕಂಡಿದ್ದಾರೆ. ಲಿಂಗವೇ ಅವರ ಸರ್ವಸಂಪತ್ತು. ಅದನ್ನೊಂದನ್ನು ಬಿಟ್ಟು ಮತ್ತಾವುದನ್ನೂ ಅವರು ನಂಬಿರಲಿಲ್ಲ, ಕಂಡಿರಲಿಲ್ಲ. ಲಿಂಗವೇ ತಂದೆ, ತಾಯಿ, ಪತಿ, ಗುರು, ಸಖ, ಮುಕ್ತಿದಾಯಕನಾಗಿದ್ದಾನೆ. "ಎನ್ನ ಮಾತೆಯು ನೀ ಎನ್ನ ತಾತನು ನೀನೆ, ಎನ್ನ ಬಂಧುವು ಬಳಗ ಸಖನು ನೀನೆ। ಎನ್ನ ಪತಿಯೂ ನೀನೆ, ಎನ್ನ ಹಿತನೂ ನೀನೆ, ಎನ್ನ ಕರದೊಳಗಿರ್ದು ಏಕೆ ನುಡಿಯೆ?" ಎಂಬುದಾಗಿ ಷಡಕ್ಷರಿ ಲಿಂಗವನ್ನು ಕುರಿತು ಪರಿಪರಿಯಾಗಿ ಹಾಡಿದ್ದಾರೆ. ಹಾಡುವಲ್ಲಿ ಲಿಂಗದ ಬೆನ್ನು ಬಿಡೆನೆಂಬ ಛಲವೂ ಅವರಲ್ಲಿ ಬಲವಾಗಿದ್ದಿತು.

ಲಿಂಗರೂಪಿಗಳಾಗಿ ಸರ್ವಾಂಗವೂ ಲಿಂಗಮಯರಾಗಿ ಅವತರಿಸಿದ ಇವರು ಜಗದ ಹಗರಣ ನೋಡಿ ಬಹಳ ವಿಷಾದಪಟ್ಟುಕೊಂಡಿದ್ದಾರೆ. ಜಗದ ಈ ವಿಷಮ ರೀತಿ ಎಂದಿನಿಂದಲೂ ಸಾಗಿಬಂದುದು. ಅದರ ಉಚ್ಚಾಟನೆಯನ್ನು ಕಡಿಮೆಮಾಡಲು, ಸಾತ್ವಿಕ ಕಳೆಯನ್ನು ತುಂಬಲು ಮಹಾ ವಿಭೂತಿಗಳ ಅವತಾರ ಮೇಲಿಂದ ಮೇಲೆಯಾಗುತ್ತಿದ್ದರೂ ಆ ವಿಷಮತೆ ತನ್ನ ಕರಾಳತೆಯನ್ನು ಹಾಗೆಯೇ ಸಾಗಿಸಿಕೊಂಡು ಬಂದುದನ್ನು ನೋಡಿದಾಗ ಇದೂ ಒಂದು ಒಡೆಯಲಾರದ ಒಗಟಾಗಿಯೇ ನಿಲ್ಲುವದು. ಪ್ರಪಂಚದ ಈ ವಿಷಮ ಸ್ಥಿತಿ ಎಲ್ಲರಿಗೂ ನಿರಾಶೆಯನ್ನುಂಟುಮಾಡುವದು. ಅಂಥ ನಿರಾಶೆಯ ಸೋಂಕು ಮುಪ್ಪಿನಾರ್ಯರನ್ನೂ ಆವರಿಸಿದಂತೆ ಕಾಣುತ್ತದೆ. ಪ್ರಪಂಚದಲ್ಲಿಯ ಹುಸಿ, ಕಳವು, ಡಂಭಾಚಾರ, ನಿರ್ದಯ ನಿಷ್ಠುರತೆಗಳನ್ನು ನೋಡಿ ಬಹಳ ನೊಂದುಕೊಂಡಿದ್ದಾರೆ. "ಪತಿವ್ರತೆಯರಿಲ್ಲ, ಪರಸತಿ ಮುಖಿಯರಿರುತಿಹರು। ಜಿತಕಾಮರಿಲ್ಲ ಅತಿಕಾಮರಿಹರು. ವ್ರತನೇಮಗಳು ಇಲ್ಲ ಕೃತಕಿಗಳು ಘನವಯ್ಯ ಕ್ಷಿತಿಯು ಅವಗುಣಗಳಿಗೆ ತವರುಮನೆಯು" ಎಂದು ಜಗತ್ತು ಅವಗುಣಗಳ ಆಗರವೆಂಬುದೆಂದು ಬೇಜಾರು ಪಟ್ಟುಕೊಂಡಿದ್ದಾರೆ. ಮರುಕ್ಷಣದಲ್ಲಿಯೇ ಶಿವಶರಣರ ಮನೆಯ ತೊತ್ತಾಗಿ, ಅವರ ಸೇವೆಗೈದು ಅವರಲ್ಲಿ ಭಕ್ತಿ ಭಿಕ್ಷೆಯಬೇಡಿ ಕಲ್ಲೊಳಡಗಿದ ಪರುಷವನ್ನು ಗೊತ್ತುಹಚ್ಚುವಂತೆ, ಜಗದ ವಿಷಮತೆಯಿಂದ ಅಲಿಪ್ತನಾದ ಷಡಕ್ಷರಿ

ಲಿಂಗದ ನಿಲುವನ್ನು ಕಾಣುವ ರೀತಿಯನ್ನು ಸೂಚಿಸಿದ್ದಾರೆ. ಶಿವಸ್ವರೂಪರಾದ ಆ ಶಿವಯೋಗಿಗಳು ಹೂಡಿದ ಈ ನಾಟಕ, ಅಲ್ಲಿ ವಹಿಸಿದ ಪಾತ್ರ ಜಗದೋದ್ಧಾರಕ್ಕಾಗಿ ಯಿಂದೆಯೇ ಹೊರತು ಮತ್ತಾವುದಕ್ಕೂ ಅಲ್ಲ. ಅವರ ಪಾತ್ರ ನಿರ್ವಹಣೆ ರೀತಿಯನ್ನು ಕಂಡು, ಜಗದ ಜನ ಅವರ ಇಂಗಿತ ತಿಳಿದುಕೊಂಡಿತು, ತಿಳಿದುಕೊಂಡು ಅದರಿಂದ ಉದ್ಧಾರವಾದರೆ ಅವೊಂದು ಸಾರ್ಥಕ್ಯವೆಂಬ ಜಗತ್ಕಲ್ಯಾಣದ ಹೆಬ್ಬಯಕೆ ಅವರ ನುಡಿಯಿಂದ ಸ್ಪಷ್ಟವಾಗುತ್ತಿದೆ.

ಶಿವಶರಣರಲ್ಲಿ ಅವರ ನಂಬುಕೆ ಅಪಾರವಾದುದು. ದೇವರನ್ನು ಕುರಿತು ಕೇಳುವ ವರವೆಂದರೆ ಶಿವಶರಣರ ಸೇವೆಯ ಭಾಗ್ಯವನ್ನು ಒದಗಿಸಿಕೊಡೆಂಬುದನ್ನು ಅವರ ಸೇವೆಯನ್ನು ನಾನಾ ಬಗೆಯಿಂದ ಮಾಡಬೇಕೆಂದು ಮುಪ್ಪಿನಾರ್ಯರ ಹೆಬ್ಬಯಕೆ. ಶಿವನ ವಾಸಸ್ಥಾನ ಶರಣರ ಹೃದಯ, ಅವರ ಮನೆಯ ಅಂಗಳವೇ ಕೈಲಾಸ ಎಂಬ ಭಾವನೆ ಅವರಲ್ಲಿ ಘಟ್ಟಗೊಂಡಿದೆ. "ಶಿವನಿಮ್ಮ ಘನದಿಂದ ಅವರ ಘನವತ್ಯಧಿಕ. ಅವರಂಗಳ ದ್ವಿತೀಯ ಕೈಲಾಸವು । ಅವರನಾ ಭವಭವದಿ ತವೆ ಬಿಡದೆ ಇರ್ಪುದನು ಶಿವಷಡಕ್ಷರಿ ವರನೆ ಪಾಲಿಸೆನಗೆ" ಎಂದು ಅಪೇಕ್ಷೆ ಪಟ್ಟಿದ್ದಾರೆ. ಶಿವಶರಣರ ಕಿಂಕರತ್ವವನ್ನು ವಹಿಸಿಕೊಂಡಿರುವ ರೀತಿ ಅವರಿಗೇ ಸಾಧ್ಯ. ಶರಣರನುಡಿಗೆ ಪ್ರತಿನುಡಿಯನ್ನು ಆಡುವ ಧೈರ್ಯ ಅವರಲ್ಲಿ ಎಂದಿಗೂ ಬರಲಾರದು. ಭೋಗಭಾಗ್ಯಗಳಿಗಾಗಿ ಹಾತೊರೆಯುವ ಮನ ಅವುವನ್ನೂ ಸಾಧಿಸಲಾರದೆಂಬುದನ್ನು ತಿಳಿದು ಇವಕ್ಕೆಲ್ಲ ಎರವಾಗುವಂತೆ ಮಾಡೆಂದು ದೇವನಲ್ಲಿ ಬೇಡಿಕೊಂಡಿದ್ದಾರೆ. ಮುಪ್ಪಿನಾರ್ಯರ ಬೇಡಿಕೆಯೋ ವಿಚಿತ್ರವಾದುದು. ಅಷ್ಟೈಶ್ವರ್ಯಾದಿ ಭೋಗಗಳನ್ನೋ, ಚತುರ್ವಿಧ ಪುರುಷಾರ್ಥಗಳನ್ನೋ ಬೇಡಿಕೊಳ್ಳುವದು ಸಾಮಾನ್ಯವಾಗಿದ್ದರೆ, ಇದ್ದ ಭೋಗ ಸುಖಾದಿಗಳು ಹರಿದುಹೋಗುವಂತೆ ಮಾಡೆಂದು ತ್ರಿಕರಣ ಪೂರ್ವಕವಾಗಿ ಕೇಳಿಕೊಳ್ಳುವ ಇವರ ಮನಸ್ಸಿನ ಘಟ್ಟಿತನ ಅಷ್ಟಿಷ್ಟಲ್ಲ. ಭಿಕ್ಷಾನ್ನದಿಂದಲಾದರೂ ಜೀವಿಸುವಂತಹ ಅನುಕೂಲ ಪರಿಸ್ಥಿತಿಯೂ ಸಹ ಇವರಿಗೆ ಬೇಕಾಗಿಲ್ಲ. ಸಹಜವಾಗಿ ಭಿಕ್ಷಾನ್ನ ದೊರೆತಾಗ ಅದನುಂಡು ಶಿವನನ್ನು ಮರೆಯುವ ಪ್ರಸಂಗ ಬರಬಹುದಲ್ಲಾ ಎಂಬ ಹೆದರಿಕೆ ಅವರದು. ಅಂತೆಯೇ "ಊರನೆಲ್ಲ ತಿರಿದು ಒಡಲ ಪೂರನುಂಬೆನೆನಲು ಮಧ್ಯ ದಾರಿಯಲ್ಲಿ ತಿರಿದುದೆಲ್ಲ ಚೆಲ್ಲಿ ಹೋಗಲಿ" ಎಂದು ಹಾರೈಸಿಕೊಂಡಿದ್ದಾರೆ. ಇಂಥ ಸ್ಥಿತಿ ಸಹಜವಾಗಿ ಬರಲೆಂಬ ಉದ್ದೇಶದಿಂದಲೋ ಏನೋ ಭಿಕ್ಷಾನ್ನಕ್ಕಾಗಿ ಹೊರಟಾಗ ಹರಿದ ಜೋಳಿಗೆಯನ್ನೂ ಒಡೆದ ಗಡಿಗೆಯನ್ನೂ ತಮ್ಮ ಸೊತ್ತನ್ನಾಗಿ ಆರಿಸಿಕೊಂಡಿದ್ದಾರೆ. ಧರೆಯ ಮೇಲಣ ಭೋಗ ಹರಿದು ಹೋಗಲೆಂಬ ಇವರ ಮಾತು ಕೇವಲ ಔಪಚಾರಿಕವಾದುದಲ್ಲ. ಅದು ಅವರ ಅಂತಃಕರಣದಿಂದ ಬಂದ ಅಮೃತವಾಣಿ. ಧರೆಯ ಮೇಲಣ ಭೋಗಗಳ ಆಸೆ ಹೆಚ್ಚಾದಂತೆ ಬೇಡಿಕೆಗಳೂ ಅದರ ಬೆನ್ನು ಹತ್ತಿ ಮಾನವನನ್ನು ಘಾಸಿ ಮಾಡುತ್ತವೆಂಬ ಮಾತನ್ನು ಜಗತ್ತಿಗೆ ತಿಳಿಪಡಿಸಬೇಕೆಂಬ ಉದ್ದೇಶ ಈ ಅಮೃತವಾಣಿಗೆ ಹಿನ್ನೆಲೆಯಾಗಿದೆ.

ಈ ಭೋಗ ವೈಭವಾದಿಗಳು ನಿಜವಲ್ಲ; ಕನಸಿನಂತೆ ಭ್ರಮೆಯಿಂದ ಕೂಡಿದಂತಹವೆಂಬ ಮಾತನ್ನು ತಿರುಕ ಸ್ವಪ್ನದಲ್ಲಿ ಅರಸನಾದ ಒಂದು ದೃಷ್ಟಾಂತವನ್ನು ಕೊಟ್ಟು ಹಾಡಿದ್ದಾರೆ. ಕನಸಿನಲ್ಲಿ ಅಷ್ಟೈಶ್ವರ್ಯಾದಿ ಭೋಗಗಳಿಂದ ಕೂಡಿದಂತವನು ನಿಜವಾಗಿಯೂ ಅಷ್ಟದರಿದ್ರನಾದ ತಿರುಕ. ಕನಸಿನಲ್ಲಿಯ ಅವನ ಭ್ರಾಂತಿ ಅರಸನನ್ನಾಗಿ ಮಾಡಿತು. ಸಕಲ ಐಶ್ವರ್ಯಾದಿಗಳನ್ನೂ ಕೊಟ್ಟನು. ಮದಗಳೆಲ್ಲವೂ ಅವನನ್ನು ಆವರಿಸಿದವು. ಆದರೆ ಭ್ರಾಂತಿ ಹರಿದು ಎಚ್ಚತ್ತಾಗ ಇದೆಲ್ಲ ಸುಳ್ಳು ಎಂದು ಮನದಲ್ಲಿ ನಾಚಿಕೆ ಪಟ್ಟುಕೊಳ್ಳುತ್ತಾನೆ. ಧರೆಯ ಭೋಗ ನಂಬಿದವರ ಸ್ಥಿತಿಗೂ ತಿರುಕನ ಕನಸಿನ ಸ್ಥಿತಿಗೂ ವ್ಯತ್ಯಾಸವಿಲ್ಲ. ನಾವಾದರೂ ಭಕ್ತಿ ಭಿಕ್ಷೆಯನ್ನು ಬೇಡುವ ನಿಜವಾದ ತಿರುಕರಾಗಬೇಕಲ್ಲದೇ ಕನಸಿನ ಸಾಮ್ರಾಜ್ಯವನ್ನಾಳುವ ತಲೆತಿರುಕ ಸಾಮ್ರಾಟರಾಗಬಾರದೆಂಬುದನ್ನು ಸೂಚ್ಯವಾಗಿ ಅಪ್ಪಣೆ ಕೊಡಿಸಿದ್ದಾರೆ ಮುಪ್ಪಿನ ಷಡಕ್ಷರಿಗಳು.

ಮುಪ್ಪಿನ ಷಡಕ್ಷರಿದೇವರ ಮನೋ ವೈಶಾಲ್ಯ ಅನುಪಮವಾದುದು. ವಿಶ್ವಬಂಧುತ್ವವೇ ಒಬ್ಬುಳಿಯಾಗಿ ಅವರಲ್ಲಿ ಕಲೆತಂತಿದೆ. ಮಾನವ ಕಲ್ಯಾಣ ಚಿಂತನೆಯೇ ಅವರ ಜೀವನದ ಉಸಿರು. ಎಂಥವನಿಗೂ ಅಕಲ್ಯಾಣವಾಗಬಾರದೆಂಬುದೇ ಅವರ ಹೆಬ್ಬಯಕೆ. "ಎನ್ನ ಕಂದಿಸುತ್ತ ಬಹಳ ಎನ್ನ ಬಾಧಿಸುತ್ತ ಬಿಡದೆ ಎನ್ನನೊಂದು ನೆವಗಳಿಂದ ಕಾಡಿದವರಿಗೆ ಎನ್ನ ಕೊಂದೊಡವರಿಗೆಲ್ಲ ಎನ್ನ ಪೂಜೆ ಫಲಗಳೆಲ್ಲ ಉನ್ನತದೊಳವರಿಗಾಗಿ ಸುಖದಿ ಬಾಳಲಿ" ಎಂಬ ಮಾತುಗಳಿಂದ ಮಾನವ ಕಲ್ಯಾಣ ಚಿಂತನೆಯಲ್ಲಿ ಅದೆಷ್ಟು ತ್ಯಾಗಕ್ಕೆ ಸಿದ್ಧರಿದ್ದರೆಂಬುದು ಸ್ಪಷ್ಟವಾಗುತ್ತಿದೆ.

ಇದೇ ಪ್ರಕಾರ ವಿರತಿಯ ಲಕ್ಷಣ, ಲಿಂಗದ ಇರವು, ಕಾಯನೇಹ, ದೇವತ್ವದ ಲಕ್ಷಣ ಇತ್ಯಾದಿಯಾಗಿ ಸುಬೋಧ ಸಾರದ ೭೬ ಪದಗಳಲ್ಲಿ ಮುಪ್ಪನಾರ್ಯರು ತಮ್ಮ ಆಧ್ಯಾತ್ಮರಾಶಿಯನ್ನು ಸೂರೆಮಾಡಿದ್ದಾರೆ. ಸಾಹಿತ್ಯ ದೃಷ್ಟಿಯಿಂದ ವಿಚಾರಿಸಿದಾಗ ಇವರ ಶೈಲಿ ಸರಳ ಹಾಗೂ ಮಧುರವಾದುದೆಂಬುದು ಕಂಡು ಬರುವದು. ಚಾಮರಸನಂತೆ ನಿರಾಡಂಬರ ರೀತಿಯಲ್ಲಿ ಕಿರಿಯದರೊಳ್ ಹಿರಿದರ್ಥವನ್ನು ತುಂಬುವ ಹದ ಇವರಿಗೆ ಸಾಧಿಸಿತ್ತು. ಪದಗಳ ಅರ್ಥ ಸರಳ, ಆದರೆ ಅವುಗಳ ಹಿಂದೆ ಅಡಗಿಕೊಂಡಿರುವ ಭಾವ ಮಾತ್ರ ಹಿರಿದು. ಅಂತರಂಗದ ಭಾವಪಕ್ಷಿ ಆಧ್ಯಾತ್ಮಾಕಾಶದಲ್ಲಿ ನಿರಾಯಾಸವಾಗಿ ಹಾರಬಲ್ಲುದು. ಅಲ್ಲಿ ಆವ ಅಡೆತಡೆಗಳೂ ಅದನ್ನು ಅಡಗಟ್ಟಲಾರವು. ಇಂಥ ಋಷಿ ಕವಿಯನ್ನು ಪಡೆದ ನಾಡು ಪಾವನ. ಅವರ ಕೃತಿಗಳನ್ನು ಕಂಡು ಅಳವಡಿಸಿಕೊಳ್ಳುವದೊಂದು ಮಹಾಭಾಗ್ಯ. ಈ ಮಹಾ ವಿಭೂತಿಯ ವಿಷಯವಾಗಿ ನಾಲ್ಕು ಮಾತುಗಳನ್ನು ಬರೆಯಲು ಅವಕಾಶ ಸಿಕ್ಕುದುವೊಂದು ಪುಣ್ಯ ವಿಶೇಷವೆಂದೇ ಹೇಳಬಹುದು.

---

# ರಾಬರ್ಟ್ ಬರ್ನ್ಸ್



**ಶ್ರೀ ಚೆನ್ನವೀರ ಕಣವಿ, ಎಂ.ಎ.,**
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ರಾಬರ್ಟ್ ಬರ್ನ್ಸ್ ಜೀವಿಸಿದುದು ಸ್ಕಾಟ್ಲೆಂಡಿನ ಸಾಹಿತ್ಯಿಕ ಪುನರ್ಜನ್ಮದ ಕಾಲವೆನಿಸಿದ ೧೮ನೆಯ ಶತಮಾನದಲ್ಲಿ. ಇಂದಿಗೆ ಎರಡುನೂರು ವರುಷಗಳ ಹಿಂದೆ ೧೭೫೯ನೆಯ ಜನವರಿ ೨೫ರಂದು, ಸ್ಕಾಟ್ಲೆಂಡಿನ ಅಲೋವೆ ಎಂಬ ಹಳ್ಳಿಯ ಬಡ ಕುಟುಂಬವೊಂದರಲ್ಲಿ ಬರ್ನ್ಸ್ ಕವಿ ಜನಿಸಿದನು. ಉದಾರಿಯಾದ ಒಡೆಯನೊಬ್ಬನಲ್ಲಿ ಇವನ ತಂದೆ ತೋಟದ ಕೆಲಸ ಮಾಡಿಕೊಂಡಿದ್ದನು. ಬರ್ನ್ಸ್ ಶಾಲೆಯಲ್ಲಿ ಮಾಸ್ತರರಿಂದ ಸಾಕಷ್ಟು ಹೊಡೆತ ತಿನ್ನಬೇಕಾಯಿತಾದರೂ, ಇಂಗ್ಲಿಷಿನಲ್ಲಿ ತುಂಬ ಜಾಣನೆನಿಸಿಕೊಂಡನು. ಹತ್ತು ಹನ್ನೊಂದು ವರ್ಷದವನಿರುವಾಗಲೆ ಅವನು ತನ್ನ ಪ್ರತಿಭೆಯ ಮಿಂಚನ್ನು ತೋರಿಸಿದ್ದನು. ಎಳೆಯತನದಿಂದ ಯುವಕನಾಗಿ ಬೆಳೆಯುವವರೆಗೂ ಅವರ ಮನೆಯಲ್ಲಿದ್ದ ಮುದುಕಿಯೊಬ್ಬಳಿಂದ ಅವನಿಗೆ ತುಂಬ ಉಪಕಾರವಾಯಿತು. ದೆವ್ವ-ಭೂತಗಳ ಮಂತ್ರಗಾರರ, ಮಾಟಗಾರರ, ಯಕ್ಷ-ಯಕ್ಷಣಿಯರ ಸಹಸ್ರಾರು ಜಾನಪದ ಕಥೆ, ಹಾಡುಗಳ ಭಾಂಡಾರವಾಗಿದ್ದಳು ಆಕೆ. ಆ ಮುದುಕಿಯ ಪ್ರೇರಣೆಯೇ ರಾಬರ್ಟ ಬರ್ನ್ಸನಲ್ಲಿ ಹುದುಗಿದ್ದ ಕಾವ್ಯದ ಬೀಜ ಮೊಳಕೆಯೊಡೆಯಲು ಕಾರಣವಾಯಿತು.

ಇವನ ತಂದೆಗೆ ಹೊಲವನ್ನು ಲಾವಣಿಯಿಂದ ಕೊಟ್ಟು ಔದಾರ್ಯದಿಂದ ನೋಡಿಕೊಂಡಿದ್ದ ಯಜಮಾನನು ತೀರಿಕೊಂಡಮೇಲೆ, ಇವರ ಸಂಸಾರಕ್ಕೇ ದೊಡ್ಡ ಪೆಟ್ಟು ಬಿದ್ದಿತು. ನಡುವೆ ದಲ್ಲಾಳಿಯ ಕೈಯಲ್ಲಿ ಸಿಕ್ಕು ಇನ್ನೂ ಹೆಚ್ಚಿನ ನಷ್ಟಕ್ಕೆ ಗುರಿಯಾಗಬೇಕಾಯಿತು. ಮುಂದೆ 'Tale of Two Dogs' ಎಂಬ ಕವಿತೆ

ಯಲ್ಲಿ ಈ ದಲ್ಲಾಳಿಯನ್ನು ಕವಿ ಚಿತ್ರಿಸಿದ್ದಾನೆ. ಒಕ್ಕಲುತನದ ಉದ್ಯೋಗವನ್ನು ದಕ್ಷತೆಯಿಂದ ಮಾಡುತ್ತಿರುವಾಗಲೇ ಅವನು ಹದಿನಾರು ವರ್ಷದವನಾದನು. ಆಗಲೇ ಪದ್ಯವನ್ನು ಬರೆಯಲು ಪ್ರಾರಂಭಿಸಿದ್ದನು. ಸುಗ್ಗಿಯಲ್ಲಿ ಅವನ ಜೊತೆಗೆ ಕೆಲಸ ಮಾಡುತ್ತಿದ್ದ ಚೆಂದುಳ್ಳ ಹುಡುಗಿಯೊಬ್ಬಳು ಅವನನ್ನು ಮರುಳುಗೊಳಿಸಿದ್ದಳು. ಆಕೆಯ ಇಂಪಾದ ಹಾಡಿಗೂ, ಕುಣಿತಕ್ಕೂ ಇವನು ಪ್ರಾಸದಲ್ಲಿ ನುಡಿಗೊಟ್ಟನು. 'Thus with me began love and Poetry' ಎಂದು ಕವಿ ಹೇಳಿದ್ದಾನೆ.

ತನ್ನ ವಯಸ್ಸಿನ ೨೩ನೆಯ ವರ್ಷದಲ್ಲಿ ಕವಿ ಅನೇಕ ದುರ್ಘಟನೆಗಳನ್ನು ಎದುರಿಸಬೇಕಾಯಿತು. ನೆರೆಯ ಪಟ್ಟಣವೊಂದರಲ್ಲಿ ಅವನು ಕೆಲಸಕ್ಕಿದ್ದ ಅಂಗಡಿಯು ಉರಿಹತ್ತಿ ನಾಶವಾಗಿ, ನಿಜವಾದ ಕವಿಯ ಹಾಗೆ ಅವನ ಕೈಯಲ್ಲಿ ಬಿಡಿಗಾಸೂ ಉಳಿಯದಂತೆ ಮಾಡಿತು. ಇದರಿಂದ ನಗರದ ಜೀವನದ ಅಲ್ಪಸ್ವಲ್ಪ ಅನುಭವವೂ ಅವನಿಗಾಯಿತು. ಇವನಂತೆಯೇ ಒಲಪಿನ ಬೇಗೆಯಲ್ಲಿ ಬೇಯುತ್ತಿದ್ದ ಯುವಕನೊಬ್ಬನ ಗೆಳೆತನ ಇವನ ಜೀವನಕ್ಕೆ ಬೇರೊಂದು ತಿರುಪನ್ನು ಕೊಟ್ಟಿತಲ್ಲದೆ, ಅವನ ಕೇಡಿಗೂ ಕೆಲಮಟ್ಟಿಗೆ ಕಾರಣವಾಯಿತು.

ತಂದೆಯ ಮರಣದ ನಂತರ ಬರ್ನ್ಸ್ ತನ್ನ ಪಾಲಿನ ಹೊಲವನ್ನು ತನ್ನ ಅಣ್ಣನಿಗೆ ಕೊಟ್ಟು, ದೇಶವನ್ನೇ ಬಿಟ್ಟುಹೋಗುವ ಸಿದ್ಧತೆ ಮಾಡಿದನು. ಹೋಗುವ ಮೊದಲು ತನ್ನ ಕವಿತೆಗಳ ಪುಸ್ತಕವನ್ನು ಪ್ರಕಟಿಸಲು ನಿಶ್ಚಯಿಸಿದನು. ಅವನ ಕವಿತೆಗಳಿಗೆ ಸಾರ್ವಜನಿಕರಿಂದ ದೊರೆತ ಪ್ರೋತ್ಸಾಹ ಅವನ ಅಭಿಮಾನವನ್ನು ತೃಪ್ತಿಗೊಳಿಸಿತು. ಕಾರಣಾಂತರದಿಂದ ಅವನು ತನ್ನ ಮೊದಲಿನ ಯೋಜನೆಯನ್ನು ಬಿಟ್ಟುಕೊಟ್ಟು, ಎಡಿನ್‌ಬರೋದಲ್ಲಿ ಬಂದು ಇರಬೇಕಾಯಿತು. ಅವನ ಕವನಗಳ ಎಡಿನ್‌ಬರೋ ಆವೃತ್ತಿಯಿಂದ ಇನ್ನೂರು-ಮುನ್ನೂರು ಪೌಂಡುಗಳಷ್ಟು ಹಣ ದೊರೆಯಿತು. ಆ ಹಣದಿಂದ ತಿರುಗಿ ಊರಿಗೆ ಹೋಗಿ ನೇಗಿಲು ಹೂಡಬೇಕೆಂದು ಮನಸ್ಸು ಮಾಡಿದನು. ಹೊರಟು ಬರುವಾಗ ಬೆಟ್ಟದ ನಾಡಿನಲ್ಲಿ ಹಾಯ್ದುಬಂದ ಅವನ ಪ್ರಯಾಣ ಅತ್ಯಂತ ಸ್ಫೂರ್ತಿದಾಯಕವಾಗಿದ್ದಿತು. ಅದರಿಂದ ಅವನ ಮನಸ್ಸಿನಲ್ಲಿ ಕಾವ್ಯಾಲೋಚನೆಯ ಹೊಸ ಸಂಗ್ರಹವೇ ಸಿದ್ಧಗೊಂಡಿತು.

ಅದೇ ಕಾಲಕ್ಕೆ, ಸ್ಕಾಟ್ಲಂಡಿನ ಬೇರೆ ಬೇರೆ ಕಡೆಗಳಲ್ಲಿ ದೊರೆಯುತ್ತಿದ್ದ ಹಳ್ಳಿಯ ಹಾಡುಗಳನ್ನು ಸಂಗ್ರಹಿಸುವುದರಲ್ಲಿ ಮುನಮುಟ್ಟಿ ಕೆಲಸ ಮಾಡತೊಡಗಿದ್ದ ಜೇಮ್ಸ್ ಜಾನ್ಸನ್‌ನು ಇವನ ಮನಸ್ಸನ್ನು ಆಕರ್ಷಿಸಿದನು. 'The Scots Musical Museum' ಎಂಬ ಸಂಗ್ರಹಗಳಿಗೆ ಅವನು ಕೆಲವು ಹಾಡುಗಳನ್ನು ಸಂಗ್ರಹಿಸಿ ಕೊಟ್ಟನು. ೧೭೮೮ರಲ್ಲಿ ಜೀನ್ ಆರ್ಮರ್‌ಳೊಡನೆ ಮದುವೆಯಾಯಿತು. ಮರುವರ್ಷವೇ ಸುಂಕದ ಕಟ್ಟೆಯ ಅಧಿಕಾರಿ (Excise man)ಯ ಕೆಲಸ ಇವನಿಗೆ

ದೊರೆಯಿತು. "Exciseman ಎಂಬ ಶಬ್ದವನ್ನು ಕೇಳಿ ನಿಮಗೇನೆನಿಸುತ್ತದೆಯೋ ಏನೋ; ನನಗೂ ಇದು ಬಹು ಸೂಕ್ಷ್ಮವಾದ ನೋವನ್ನುಂಟುಮಾಡಿದ್ದುಂಟು. But a wife and children are things which have a wonderful power in blunting these kind of sensations" ಎಂಬುದಾಗಿ ಕವಿ ಬರೆದುಕೊಂಡಿದ್ದಾನೆ.

ಜಾರ್ಜ ಥಾಮ್ಸನ್‌ನ 'A select collection of Original Scotish Airs' ಸಂಗ್ರಹದಲ್ಲಿಯೂ ಇವನ ಹಲವಾರು ಹಾಡುಗಳು ಪ್ರಕಟಗೊಂಡವು. ೧೭೯೩ರಲ್ಲಿ ಇವನ ಕವಿತೆಗಳು (Poems) ಎರಡು ದೊಡ್ಡ ಸಂಪುಟಗಳಲ್ಲಿ ದ್ವಿತೀಯ ಮುದ್ರಣವನ್ನು ಕಂಡವು. ಪ್ರಸಂಗ ಬಂದಾಗ ಅತಿಯಾಗಿ ಕುಡಿಯುವದು ಇವನ ಪ್ರಕೃತಿಯ ಮೇಲೆ ಅನಿಷ್ಟ ಪರಿಣಾಮ ಮಾಡಿತು. ಬರುಬರುತ್ತ ಆರೋಗ್ಯ ಕೆಟ್ಟು ಎಂಟು-ಹತ್ತು ತಿಂಗಳು ಹಾಸಿಗೆ ಹಿಡಿಯಬೇಕಾಯಿತು. ಸಂಧಿವಾತದ ಯಾತನೆಯಿಂದ ಕೆಲವು ದಿವಸ ನರಳಿ ೧೭೯೬ರ ಜುಲೈ ೨೧ರಂದು ಡಮ್‌ಫ್ರಾಯ್ಜ್ ಎಂಬಲ್ಲಿ ರಾಬರ್ಟ ಬರ್ನ್ಸ ಕವಿ ಕೊನೆಯ ಉಸಿರೆಳೆದನು.

೨

ರಾಬರ್ಟ ಬರ್ನ್ಸನ ಕಾವ್ಯ, ಸ್ಕಾಟಿಷ್ ಮತ್ತು ಇಂಗ್ಲಿಷ್ ಭಾಷೆಗಳ ನಡುವೆ ೧೫ನೆಯ ಶತಮಾನದಿಂದಲೂ ಬೆಳೆದುಬಂದ ಸಂಕೀರ್ಣ ಸಂಬಂಧಕ್ಕೆ ಉಜ್ವಲ ಉದಾಹರಣೆಯಾಗಿದೆ. ಸ್ಕಾಟಿಶ್ ಭಾಷೆ ಇಂಗ್ಲಿಷಿನ ಒಂದು ವಿಶಿಷ್ಟ ಬಗೆಯಾಗಿದ್ದು ಅದಕ್ಕೆ ತನ್ನದೇ ಆದ ಇತಿಹಾಸವುಂಟು. ೧೯ನೆಯ ಶತಮಾನದ ಪ್ರಾರಂಭದವರೆಗೂ ಅದು ಅಲ್ಲಿ ಬಳಕೆಯಲ್ಲಿದ್ದಿತು. ಇಂಗ್ಲಿಷ್ ಭಾಷೆಯಲ್ಲಿ ಸಾಕಷ್ಟು ಪ್ರಭುತ್ವವನ್ನು ಪಡೆದ ಬರ್ನ್ಸನ ಕಾವ್ಯರಚನೆಗೆ ಸ್ಕಾಟಿಷ್ ಭಾಷೆಯಲ್ಲಿಯೇ ಸಹಜಸ್ಫೂರ್ತಿ ದೊರೆಯಿತು. ಅವನ ಕಾವ್ಯಭಾಷೆ ಅಲ್ಲಲ್ಲಿ ಇಂಗ್ಲಿಷ್ ನುಡಿಗಳೂ, ಸಾಲುಗಳೂ, ಶಬ್ದಗಳೂ ಸೇರಿಹೋಗಿರುವ ಎಡಿನ್‌ಬರೋ ಕವಿಗಳ ಸ್ಕಾಟ್ಸ ಭಾಷೆಯಾಗಿದೆ. ಧಾರ್ಮಿಕ ಭಾವನೆಯ ಕವಿತೆಗಳು ಮಾತ್ರ ಸಾಮಾನ್ಯವಾಗಿ ಪ್ರಾರಂಭದಿಂದ ಕೊನೆಯವರೆಗೂ ಇಂಗ್ಲಿಷಿನಲ್ಲಿಯೇ ಇವೆ.

ಬರ್ನ್ಸನನ್ನು ರೋಮ್ಯಾಂಟಿಕ್ ಕವಿಗಳ ಸಾಲಿನಲ್ಲಿಯೇ ಸೇರಿಸುತ್ತಬಂದಿದ್ದರೂ, ಆ ಕಾವ್ಯಮಾರ್ಗದ ಎಲ್ಲ ಗುಣಗಳೂ ಅವನಲ್ಲಿವೆಯೆಂದು ಹೇಳಲಾಗದು. ವಿಲಿಯಮ್ ಬ್ಲೇಕನ ಭಕ್ತಿಪರ ಭಾವನೆಯಲ್ಲಿ ನೆನೆದ ಸೂಕ್ಷ್ಮ ಹಾಗೂ ದಿಟ್ಟ ಕಲ್ಪನಾಶಕ್ತಿಯಾಗಲಿ, ವರ್ಡ್ಸ್‌ವರ್ತನ ಪ್ರಕೃತಿಗೀತಗಳಲ್ಲಿ ಹೊಂದಿಕೊಂಡಿರುವ ಸೌಂದರ್ಯಬೋಧೆ ಹಾಗೂ ಆಧ್ಯಾತ್ಮಿಕತೆಯಾಗಲಿ ಬರ್ನ್ಸನ ಕಾವ್ಯದಲ್ಲಿ ಕಂಡುಬರುವದಿಲ್ಲ. ಬರ್ನ್ಸ ತನ್ನ ಜೀವಮಾನದಲ್ಲಿ ಯಾವ ಕಾಲಕ್ಕೂ ಕನಸುಗಾರನಾಗಿರಲಿಲ್ಲ.

ಏಕಾಂತಪ್ರಿಯತೆಗೆ ಮನಸೋತಿರಲಿಲ್ಲ. ಗಾಳಿಗೋಪುರ ರಚಿಸುತ್ತ ಪ್ರೈಮರೆತಿರಲಿಲ್ಲ. ಅವನು ಸ್ವತಃ ಜನರನ್ನು ಹಚ್ಚಿಕೊಳ್ಳುವ ಸ್ನೇಹಪರ ಸ್ವಭಾವದವನಾಗಿದ್ದುದರಿಂದ ಅವನ ಕಾವ್ಯವೂ 'ಸಾಮಾಜಿಕ'ವಾಗಿದೆ. ಜನತೆಯ ಕಾವ್ಯವೆಂದು ಕರೆಯಿಸಿಕೊಳ್ಳುವ ಯಾವುದೇ ಕಾವ್ಯದಲ್ಲಾದರೂ ಈ ಸಾಮಾಜಿಕ ಗುಣ-ಲಾವಣಿಗಳು, ಹಾಡುಗಳು, ಕಥೆಗಳು, ವಿಡಂಬನೆ, ಶೋಕಗೀತೆ-ಇದ್ದೇ ಇರುತ್ತವೆ.

ಬರ್ನ್ಸ್ ತನ್ನ ಹಿಂದಿನ ಕವಿಗಳು ಆರಿಸಿಕೊಂಡ ವಿಷಯಗಳನ್ನೇ, ಮಾದರಿಗಳನ್ನೇ ಕೈಗೆತ್ತಿಕೊಂಡರೂ, ಅವುಗಳಿಗೆ ಹೊಸಬಗೆಯ ತೀವ್ರತೆಯನ್ನೂ, ತೀಕ್ಷ್ಣತೆಯನ್ನೂ ತಂದುಕೊಟ್ಟನು. ಅವನಲ್ಲಿದ್ದ ಆವೇಶಗುಣ ಅವನ ಸ್ವಭಾವಕ್ಕೆ ಕುಂದೆಸಿಸಿದ್ದರೂ, ಕಾವ್ಯ ಅದರಿಂದ ಘನತೆಗೇರಿತು. ಜೀವನ ಚಿತ್ರಗಳು, ವಿಲಾಸ-ಸಂಭ್ರಮ, ಉದಾರ ಮನೋಭಾವನೆಯ ಉತ್ಸುಕತೆ, ಗೇಲಿ ವಿನೋದಗಳನ್ನೊಳಗೊಂಡ ವಿಡಂಬನೆ, ಹಾಗೂ ಸಹಜವಾದ ಪ್ರೇಮಗೀತೆಗಳು ಅವನ ಕಾವ್ಯದ ಅತ್ಯುತ್ತಮ ಭಾಗವಾಗಿವೆ. ಕಾವ್ಯವಸ್ತು ಹಾಗೂ ಕಾವ್ಯಮಾದರಿಯಲ್ಲಿ ಬರ್ನ್ಸ್ ತಮ್ಮ ಹಿಂದಿನ ಫರ್ಗ್‌ಸಾನ್ ಕವಿಗೆ ವಿಶೇಷ ಋಣಿಯಾಗಿದ್ದಾನೆ. ಶೆಕ್ಸಪಿಯರನಿಗೆ ಮರ್ಲೋ ಇದ್ದಂತೆ ಬರ್ನ್ಸ್ ಕವಿಗೆ ಫರ್ಗ್‌ಸಾನ್ ಎಂದು ಹೇಳುವದುಂಟು.

ಬರ್ನ್ಸ್‌ನ ಕವಿತೆ ವೈಯಕ್ತಿಕವೂ, ಅಂತರ್ಮುಖಿಯಾದುದೂ ಅಲ್ಲ ಎಂದು ಹೇಳಿದ ಮಾತ್ರಕ್ಕೆ. ಅವನು ಕವಿತೆಯಲ್ಲಿ ತನ್ನನ್ನು ಕಾಣಿಸಿಕೊಳ್ಳುವದೇ ಇಲ್ಲ ಎಂದು ಹೇಳದಂತಾಗಲಿಲ್ಲ. ಅವನು ಸ್ವತಃ ಒಕ್ಕಲಿಗನಾಗಿದ್ದಾಗಿನ ಸ್ವಂತ ಜೀವನದ ಘಟನೆಗಳನ್ನು ಚಿತ್ರಿಸಿರುವ ಕವಿತೆಗಳೂ ಇವೆ. 'The Death and Dying Words of poor Maile', 'Maggie' 'To a Mouse'—ಇವೇ ಮೊದಲಾದ ಕವಿತೆಗಳು ಅವಕ್ಕೆ ಉದಾಹರಣೆಗಳಾಗಿವೆ ಹೊಲದಲ್ಲಿ ರಂಟಿ ಹೊಡೆಯುವಾಗ ಕಿತ್ತುಬಿದ್ದ ಒಂದು ಸಣ್ಣ ಜಾತಿಯ ಹೂವನ್ನು ಕುರಿತು 'To oMuntain Daisy' ಕವಿತೆ ಒಡಮೂಡಿದೆ. ಆ ಕವಿತೆಯ ಪ್ರಾರಂಭದ ಪದ್ಯ ಹೀಗಿದೆ:

"ಕುಂಕುಮದಂಚಿನ ಸಂಕೋಚದ ಕಿರಿ ಸಿರಿಹೂವೆ,  
ಎಂಥ ಕೆಡುಗಾಲದಲಿ ನೀನು ಕಣ್ಣಿಗೆ ಬಿದ್ದೆ !  
ನಿನ್ನ ಕೋಮಲದೇಟು ಕಿತ್ತು ಮಣ್ಣೊಳು ಬಿತ್ತು—  
ಆಯ್ಯೋ ನಾನೆಂಥ ಮರುಳು.  
ನಿನ್ನನುಳಿಸುವುದೀಗ ನನ್ನ ಕೈಯೊಳಗಿಲ್ಲ-ನೀನೆಂಥ ಚೆಲುವ ಹರಳು !"

ಮತ್ತೊಂದು ಬಗೆಯ ಕವಿತೆಗಳು ಶ್ರಮಜೀವಿಗಳ ಬೇಸರವನ್ನು ನೀಗಿಸುವ ಸಾಮಾಜಿಕ ನಲಿವು-ಗೆಲವುಗಳನ್ನೂ, ಧರ್ಮಶ್ರದ್ಧೆ ಬ್ಯಾಕಸ್ ದೇವತೆಯ ಉಪಾಸನೆಗಳನ್ನು ಕುರಿತಿವೆ. 'Halloween' ಮತ್ತು 'The Holy Fair' ಕವಿತೆ

ಗಳಲ್ಲಿ ವರ್ಣಿತವಾದ ಮುಗ್ಧ ವಿನೋದಗಳಲ್ಲಿ ಅವನ ಉಜ್ವಲ ಮನೋಧರ್ಮವೇ ಪ್ರತಿಬಿಂಬಿಸಿದ್ದರೆ, ದೈವಭಕ್ತಿ, ಉಲ್ಲಾಸ, ಭೋಗಲಾಲಸೆಗಳು ಬೆರೆತ ವಿಡಂಬನಾತ್ಮಕ ಸುಖಾನುಭವವನ್ನು 'Jolly Beggars' ಕವನದಲ್ಲಿ ಕಾಣುತ್ತೇವೆ. 'Holy Willie's Prayer' ದಂಥ ವಿನೋದಾತ್ಮಕ ವಿಡಂಬನಗೀತ ಇಂಗ್ಲೀಷ್ ಸಾಹಿತ್ಯ ದಲ್ಲಿಯೇ ಅನರೂಪವೆಂದುವಿಮರ್ಶಕರು ಅಭಿಪ್ರಾಯಪಟ್ಟಿದ್ದಾರೆ. ಸ್ಕಾಟಿಶ್ ಕಾವ್ಯಕ್ಕೆ– ಅಷ್ಟೇಕೆ ಒಟ್ಟು ಕಾವ್ಯಪ್ರಪಂಚಕ್ಕೇ ಅವನು ನೀಡಿದ ಕಾಣಿಕೆಯೆಂದರೆ ಅವನ ಅಚ್ಚರಿ ಗೊಳಿಸುವಂಥ ಮನೋಧರ್ಮ. ಅದಕ್ಕೆ ಸರಿಯಾದ ಅಭಿವ್ಯಕ್ತಿ ದೊರೆತಾಗ, ಅದರ ಸೂಚ್ಯವಾದದೂ ಎಂಥದು! 'Bottle and Friend' ಎಂಬ ಈ ಚಿಕ್ಕ ಕವಿತೆ ಯನ್ನು ನೋಡಿ :

ಮದಿರೆ ಪಾತ್ರೆಯಿದೆ; ಸನ್ಮಿತ್ರ ಸಹವಾಸವಿದೆ;
    ಇನ್ನೇನು ಬೇಕಯ್ಯ ನಿನಗೆ ಮನುಜ?
ಯಾರು ಬಲ್ಲರು ತನ್ನ ಬದುಕು ಮುಗಿವುದರೊಳಗೆ
    ಚಿಂತೆಯಲಿ ತನ್ನ ಪಾಲೆಷ್ಟೊ ಮನುಜ!
ಸರಿ; ಹಾರಿಹೋಗುವೀ ನಿಮಿಷಗಳ ಬಿಗಿಹಿಡಿದು
    ಹೂಡಿಕೋ ಬೇಗ ಹದವರಿತು, ಮನುಜ!
ನಂಬಿದನು: ಸುಖದ ಕನ್ನಿಕೆ ನಾಚಿ ಓಡುವಳು
    ಕರೆದಾಗ ಬಂದುಬಿಡುವಳೆ? ಇಲ್ಲ ಮನುಜ!

[ಅನು : ಕೆ. ಎಸ್. ನ.]

ಬರ್ನ್ಸ್ ಕವಿಯ ಮನೋಧರ್ಮವನ್ನು ಬಿಂಬಿಸುವ ಈ ಮುಂದಿನ ಪದ್ಯಭಾಗ ಗಳನ್ನು ಅವಲೋಕಿಸಬಹುದು.

"ಖರ್ಚಿಗಿಹುದು ಒಂದಾಣೆ ನನ್ನ ಬಳಿ
    ಯಾರುಪಕಾರವು ಬೇಕಿಲ್ಲ;
ಕೈಗಡ ಕೊಡುವುದಕೇನೂ ಇಲ್ಲ,
    ಮುಂದಿಗೆ ಸಾಲವ ಕೇಳಿಲ್ಲ."

[I Have a Wife of My Own']

"ಇರುವ ಅಲ್ಪದರಲ್ಲಿ ತೃಪ್ತಿಯು; ಅಧಿಕವಿದ್ದರೆ ಮೋದವು"

*    *    *    *

"ನನ್ನ ಉಲ್ಲಸ ನಡೆ, ವಿನೋದವೆ, ನನ್ನ ಜೇಲದ ನಾಣ್ಯವು
ನನ್ನ ಬಿಡುಗಡೆಯು ಒಡೆತನ;—ಮುಚ್ಚಲಾರಿಗೆ ಧೈರ್ಯವು?"

*    *    *    *

ಒಮ್ಮೆ ಯಾತ್ರೆಯು ಮುಗಿದು ಹೋಗುವ ಸಂತಸದಿ ನಾವಿರುತಿರೆ
ಯಾವನಾದರು ಚಿಂತೆಪಡುವನೆ ಗತಿಸಿಹೋಗಿಹ ದಾರಿಗೆ?"

* * * *

"ಕುರುಡು ದೈವವು ಬರಲಿ ಎಡವುತ ಹಾದಿಯಲಿ ತನ್ನಿಷ್ಟಕೆ;
ಒಳಿತು ಮಾಡಲಿ, ಕೇಡು ಬಗೆಯಲಿ,—ಅದರು ಸಾಬರಿ ಯಾರಿಗೆ?"

['Contented with Littee']

ವಾಲ್ಟರ್ ಸ್ಕಾಟ್ ಕವಿಯಂತೆ ರಾಬರ್ಟ್ ಬರ್ನ್ಸ್ ಪ್ರಕೃತಿ ದೃಶ್ಯಗಳನ್ನು ಬರಿಯ ದೃಶ್ಯಮಾತ್ರವಾಗಿ ಬಣ್ಣಿಸಿದ್ದು ಕಂಡುಬರುವುದಿಲ್ಲ; ಬರ್ನ್ಸ್ ಚಿತ್ರಿಸಿದುದು ಅದಕ್ಕೂ ಮಿಗಿಲಾದ ಅದರ ಜೀವಶಕ್ತಿಯನ್ನು; ದಿನ ದಿನವೂ ಅವನ ಸುತ್ತುಮುತ್ತೂ, ಒಳಗೂ ಹೊರಗೂ ಹರಿದಾಡುತ್ತಿರುವಂತೆ ಅನುಭವಿಸಿದ ಪ್ರಕೃತಿಯ ಜೀವನಕ್ಕೆ ಅವನು ನೀಡಿದ ಭಾವೋದ್ದೀಪ್ತ ಪ್ರತಿಕ್ರಿಯೆಯನ್ನು, 'To William Simpson, Ochiltree' ಎಂಬ ಕವಿತೆಯ ಒಂದೆರಡು ನುಡಿಗಳನ್ನು ಇಲ್ಲಿ ನೋಡಬಹುದು.

"ಕೋಯಲಾ ಕಣಿವೆ ಕಾಡುಗಳ ಸೊಬಗೇ ಸೊಬಗು:
ಹೂವು ಮೊಗ್ಗುಗಳಲ್ಲಿ ಆ ಲಿನೆಟ್ ಪಕ್ಷಿಗಳು ಹಾಡುವಾಗ,
ಕ್ರೀಡೆಯಲಿ, ಬೇಟೆ–ಕುಣಿದಾಟದಲಿ ಮೊಲದ ಹಿಂಡೊಲವಿನಲಿ
ನಲಿಯುವಾಗ—
ಜೆಟ್ಟದಿಳುಕಲಿನಲ್ಲಿ ಪಾರಿವಾಳದ ಮೇಳ ಗೋಳಿಟ್ಟು ಮೊರೆಯುವಾಗ!
ಚಳಿಗಾಲದುತ್ಸಾಹ ಶೂನ್ಯತೆಗು ಸೊಗಸುಂಟು:
ಬೋಳಾದ ಮರಗಳಲಿ ಗಾಳಿ ಸುಯ್ಯುಡುವಾಗ;
ಅಥವ ಓಚಿಲ್ ಗಿಡದ ಗುಡ್ಡ ಕೊಡ್ಡಿದ ಹಿಮದ ನರೆತ ತಲೆ ಕಾಣುವಾಗ
ಹಗಲು ಕತ್ತಲೆಗವಿಸಿ ಗಾಳಿ ಹೊಡೆತಕೆ ಮರಳು ದಿಕ್ಕೆಟ್ಟು ಹಾರುವಾಗ!"

ಬರ್ನ್ಸ್ ಕವಿ ಎಡಿನ್‌ಬರೋ ನಗರದಲ್ಲಿ ಬಂದು ನೆಲಸಿದ ಮೇಲೆ, ಅಲ್ಲಿಯ ಜೀವನಕ್ರಮ ಅವನ ಮೊದಲಿನ ಹಳ್ಳಿಯ ಜೀವನದ ಸತ್ತ್ವವನ್ನೇ ನಿರ್ನಾಮಗೊಳಿಸಿತೆಂದು ಹೇಳಬಹುದು. ಆದರೆ ಅಷ್ಟರಲ್ಲಿ ಜೇಮ್ಸ್ ಜಾನ್ಸನ್ 'The Scots Musical Museum' ಸಂಕಲನಕ್ಕೆ ಹಾಡುಗಳನ್ನು ಬರೆಯ ಹಚ್ಚಿ ಅವನನ್ನು ತಕ್ಕ ಹೊತ್ತಿನಲ್ಲಿ ಉಳಿಸಿದರು. ಜಾನಪದ ಗೀತೆಗಳ ಈ ಪುನರುಜ್ಜೀವನ ಕಾರ್ಯದಲ್ಲಿ ಕವಿ ಹೊಸ ಜೀವನವನ್ನು ಮತ್ತೆ ಕಂಡುಕೊಂಡನು. ಅವನು ಮಾರ್ಪಡಿಸಿ ಬರೆದ ಹೊಸ ಹಾಡುಗಳ ಉಪ್ಪಕ್ಕೂ, ಅದರ ಹಿಂದಿನ ನಾಡಹಾಡುಗಳ ಸರಳತೆ, ಮಧುರ ಹಾಸ್ಯ, ಕರುಣಾರಸ ಪೋಷಣೆ, ದಾಟಿ ನಿಚ್ಚಳವಾಗಿ ಕಂಡುಬರುತ್ತವೆ. ಇಂಥಲ್ಲಿ ಕವಿ ಹೊರಗಿನ ಬಣ್ಣನೆ, ಚಮತ್ಕಾರಗಳನ್ನು ಬಿಟ್ಟು, ಮೂಲವಸ್ತುವಿನ ಹೃದಯವನ್ನೇ ನೇರವಾಗಿ ಸೆರೆಹಿಡಿಯುತ್ತಾನೆ. ಅವನೊಬ್ಬ ದೊಡ್ಡ ಭಾವಗೀತಕಾರನಾದುದರಿಂದ,

ಮೂಲಹಾಡಿಗೆ ತೀವ್ರತೆಯನ್ನು, ರಾಗರಸ ವೈವಿಧ್ಯವನ್ನು ನೀಡಿ ತುಂಬಿ ತುಳುಕಿಸುವ ಶಕ್ತಿ ಅವನಿಗಿದ್ದಿತು. ಇದಲ್ಲದೆ, ನಾಲ್ಕು ನೂರು ವರ್ಷಗಳ ಅಚ್ಚಳಿಯದ ಕಾವ್ಯ ಪರಂಪರೆಯು ಅವನಿಗಿದ್ದಿತು. ಆ ಪರಂಪರೆಯ ಕೊನೆಯ ಹಾಗೂ ಶ್ರೇಷ್ಠ ಕವಿಯಾಗಿದ್ದಾನೆ ಬರ್ನ್ಸ್.

ಬರ್ನ್ಸ್ ಕವಿತೆಗಳಲ್ಲಿ ಒಲವಿನ ವಿವಿಧ ಭಂಗಿಗಳು ಇದ್ದೇ ಇರುತ್ತವೆ. ಸಂವೇದನೆಯ ಆಳವನ್ನು ತುಂಬಿ ತೋರಿಸುವುದರಲ್ಲಿ ಅವನು ಎಲ್ಲಿಡೆಗೂ ಯಶಸ್ವಿಯಾಗಿದ್ದಾನೆಂದು ಹೇಳಬಾರದು. ಆದರೂ, ದುಃಖಾಂತ ಪ್ರೇಮಗೀತಗಳ ಕೆಲವೊಂದು ನುಡಿಗಳಲ್ಲಿ, ಸಾಲುಗಳಲ್ಲಿ ವ್ಯಕ್ತಗೊಂಡ ಅನುರಾಗದ ಅನುರಣನೆಯನ್ನು ಓದುಗರು ಅನುಭವಿಸದಿರರು :

ಈ ಸಾಲುಗಳು :

"ಬಿಳಿಯ ತೆರೆಗಳ ಹಿಂದೆ ಮುಳುಗಿ ಮರೆಯಾಗುತಿದೆ ಚಂದಿರನ ಬಾಡಿದ ಮೊಗ,
ಓ ! ಮುಳುಗುತಿದೆ ನನ್ನೊಡನೆ ಕಾಲವೀಗ."

ಈ ಪದ್ಯ ಭಾಗ :

"ಇನಿತೊಂದು ಪ್ರೀತಿ, ಓ ! ಇನಿತೊಂದು ಪ್ರೇಮಾನುಭೂತಿ
ನಮ್ಮೊಳಗೆ ಮೊಳೆಯದೇ ಬೆಳೆಯದೇ ಇರಲು
ಕೂಡುತಿರಲಿಲ್ಲ–ನಾವೆಂದಿಗೂ ಅಗಲುತಿರಲಿಲ್ಲ–
ಎಂದೆಂದಿಗೂ ಇಂತು ಎದೆಯೊಡೆದು ಕುಳಿತು
ಬಾಳದೂಡುತಿರಲಿಲ್ಲ."

'Thou Lingering Star,' Highland Mary' ಈ ಕವಿತೆಗಳು ಮೇಲಿನ ಭಾವವನ್ನು ಯಶಸ್ವಿಯಾಗಿ ಚಿತ್ರಿಸುತ್ತವೆ. Highland Mary' ('ಬೆಟ್ಟದ ಗೌರಿ') ಕವಿತೆಯ ಕೊನೆಯ ಮೂರು ಪದ್ಯಗಳಿವು :

"ಅಯ್ಯೋ ! ಆ ಕಡುಪಾಪಿ ಮಿತ್ತೆಂಬ ಹಿಮ ಸುರಿದು
ನನ್ನ ಮುದ್ದಿನ ಹೂವ ಕತ್ತ ಮುರಿದು
ಹಸುರು ಬಳ್ಳಿಯ ಪದಕವಿಟ್ಟ ಕಲ್ಲಿನ ಕೆಳಗೆ
ನನ್ನ ಬೆಟ್ಟದ ಗೌರಿ ಮಲಗಿರುವಳು.

ಮೆಲ್ಲ ಮೆಲ್ಲನೆ ನನ್ನ ತುಟಿಗಳನು ಬಂಪದುವು
ಜೇನುಮಳೆ ಸುರಿಸಿದಾ ಚೆಂದುಟಿಗಳು,
ಬಿಳಿ ಮಿಂಚಿನಂಬುಗಳನೆಸೆವ ತಿಳಿಗಣ್ಣುಗಳು
ಬಳ್ಳಿ ಬಿಲ್ಲಿಗೆ ಸಾಟಿಯಾದ ಹುಬ್ಬು,

ಮೌನಧೂಲಿಯ ನಡುವೆ ಮಣ್ಣಾಗುತಿಹವಿಂದು
ನನ್ನ ಬಾಳಿನ ಬನದ ಸುರಮಯೂರಿ,
ನನ್ನ ಹೃದಯದ ಜೀವ ಕಮಲದಲಿ ನೆಲಸಿಹಳು–
ಪ್ರಣಯರೂಪವ ಧರಿಸಿ, ನನ್ನ ಗೌರಿ."
[ಅನು : ಕೆ. ಎಸ್. ನ.]

ಹಾಗೆಯೇ Bonnie Doon ಎಂಬ ಕವಿತೆಯ ಕೊನೆಯ ನುಡಿಯಿದು :

"ಒಲಿದು, ನಲಿದು, ಗುಲಾಬಿಯೊಂದನು
ಮುಳ್ಳುಗಿಡದಲಿ ಕೊಯ್ದೆನೇ ;
ಕಳ್ಳ, ಕುಸುಮನ ಕದ್ದು, ಕುಟುಕುವ
ಮುಳ್ಳನೆನ್ನಲಿ ಬಿಟ್ಟನೇ !"
[ಅನು : ಬಿ. ಎಂ. ಶ್ರೀ.)

ಭಗ್ನ ಪ್ರೇಮದ ಇಲ್ಲವೆ ವಿರಹಭಾವದ ಕವಿತೆಗಳನ್ನು ಇವನಿಗಿಂತಲೂ ಚೆನ್ನಾಗಿ ಬರೆದವರಿದ್ದಾರೆ. ಆದರೆ, ಪರಸ್ಪರ ಪ್ರೇಮಸುತೃಪ್ತಿಯ, ನವುರಾದ ಹಾಸ್ಯವನ್ನೊಳಗೊಂಡ ಪ್ರೇಮಗೀತಗಳನ್ನು ಬರೆದವರಲ್ಲಿ ಬರ್ನ್ಸನನ್ನು ಮೀರಿಸಿದವರು ಕಡಮೆಯೆಂದರೆ ಅತಿಶಯೋಕ್ತಿಯೆನಿಸದು. O 'my lovs's like a red, red rose' ಎಂಬ ಒಂದು ಕವಿತೆಯನ್ನಿಲ್ಲಿ ಉದಾಹರಿಸಿ ತೃಪ್ತಿಪಟ್ಟುಕೊಳ್ಳಬಹುದು :

"ನನ್ನ ಪ್ರೇಮದ ಹುಡುಗಿ ತಾವರೆಯ ಹೊಸಕೆಂಪು,
ತಾವರೆಯ ಹೊಸ ಅರಳ ಹೊಳೆವ ಕೆಂಪು.
ನನ್ನ ಪ್ರೇಮದ ಹುಡುಗಿ ಕೊಳಲ ಮೆಲು ನುಡಿಯಿಂಪು,
ಕೊಳಲು ಮೋಹಿಸಿ ನುಡಿವ ಗಾನದಿಂಪು.

ಬೆಳೆಬೆಳೆಯುತೆಷ್ಟೆಷ್ಟು ಬಿನ್ನಾಣ, ಎಲೆ ಚೆಲುವೆ,
ಮುಳುಗಿದೆನು ಅಷ್ಟಷ್ಟು ಪ್ರೇಮದೊಳಗೆ.
ಬತ್ತುವವು ಕಡಲುಗಳು ಮುಂದಾಗಿ, ಎಲೆ ಚೆಲುವೆ,
ಬತ್ತಲಾರದು ತೊಟ್ಟು ಪ್ರೇಮದೊಳಗೆ.

ಬತ್ತುವವು ಮುಂದಾಗಿ ಕಡಲುಗಳು, ಎಲೆ ಚೆಲುವೆ.
ಕರಗುವವು ಬಂಡೆಗಳು ಬಿಸಿಲಿನೊಳಗೆ,
ಕರಗಲಾರದು ಚೂರು ಪ್ರೇಮದೊಳಗೆಲೆ ಚೆಲುವೆ,
ಬೆರೆದಿರಲು ಜೀವಕಳೆ ದೇಹದೊಳಗೆ.

ಹೋಗಿ ಬರುವೆನೆ ಹೆಣ್ಣೆ, ಪ್ರೇಮದೊಂದೇ ಹೆಣ್ಣೆ,
ಹೋಗಿ ಬರುವೆನು ಸಹಿಸು, ಎರಡು ಗಳಿಗೆ.
ಕೋಟಿ ಯೋಜನವಿರಲಿ, ದಾಟಿ ಬರುವೆನು ಹೆಣ್ಣೆ,
ಬೇಗ ಬರುವೆನು ಹಾರಿ ನಿನ್ನ ಬಳಿಗೆ."

[ಅನು : ಬಿ. ಎಂ. ಶ್ರೀ—'ಇಂಗ್ಲಿಷ್ ಗೀತಗಳು']

೩

ನೆಲ ಮತ್ತು ನೇಗಿಲಿಗೆ ಬರ್ನ್ಸನಷ್ಟು ನಿಕಟವರ್ತಿಯಾಗಿ ಬಾಳಿದ ಕವಿಗಳು ಇಂಗ್ಲಿಷ್ ಸಾಹಿತ್ಯದಲ್ಲಿ ಬೇರೆಯಿಲ್ಲ. ಅಂತೆಯೇ ಅವನ ಕಾವ್ಯದಲ್ಲಿ ಮಣ್ಣಿನ ವಾಸನೆ ಹೊಡೆಯುತ್ತಿದೆ. ತಾನು ಕಂಡು ನೋಡದಿದ್ದ ಬೆಟ್ಟಗಳನ್ನಾಗಲಿ, ನಿಸರ್ಗ ರಮ್ಯ ಏಕಾಂತ ಸ್ಥಳಗಳನ್ನಾಗಲಿ ಅವನು ಬಣ್ಣಿಸಹೋಗುವದಿಲ್ಲ. ಪರ್ವತಾರಣ್ಯದ ಝರಿಯಂತೆ ಅವನ ಪದ್ಯಗಳಲ್ಲಿ ಓಟ ಧಾರಾಳವಾಗಿದೆ. ಅವನ ಕಾವ್ಯದಲ್ಲಿ ಪ್ರಾಣಿ ಗಳಿಗಿರುವ ಪ್ರಾತಿನಿಧ್ಯವನ್ನು ಗಮನಿಸಬಹುದು. ಅವನು ಚಿತ್ರಿಸಿರುವ ಪ್ರಾಣಿ ಗಳನ್ನು ಅವನು ಚೆನ್ನಾಗಿ ಬಲ್ಲ; ಅವುಗಳ ಮುಖ ಪರಿಚಯವೂ ಅವನಿಗೆ ಸಾಕಷ್ಟಿದೆ. ಸ್ವತಃ ಒಕ್ಕಲಿಗನಾಗಿ ದುಡಿದದ್ದರಿಂದ. "ಬರ್ನ್ಸನ ರಕ್ತದಲ್ಲಿಯೂ ಅವನ ಪದ್ಯಗಳ ಲ್ಲಿಯೂ 'ಆಡಿನ ನಡಿಗೆಯ ಗತಿ'ಯನ್ನು ಕುದುರೆಯ ಖುರಪುಟದ ಧ್ವನಿಯನ್ನೂ ಕೇಳಬಹುದು" ಎಂದು ಆಲಿವರ್ ಎಲ್ಟನ್ ಸತ್ಯವನ್ನೇ ನುಡಿದಿದ್ದಾರೆ. ಅವನ ಕಾವ್ಯದಲ್ಲಿ ಎದ್ದು ಕಾಣುವ ಬಣ್ಣದ ಚಿತ್ರಣ, ನಿಸರ್ಗಪ್ರೀತಿ, ಸಾಮಾನ್ಯ ಮಾನ ವೀಯತೆಯ ಕಡೆಗಿರುವ ಲಕ್ಷ್ಯ, ಅಧಿಕಾರ ವಿರೋಧಿ ಸ್ವಾತಂತ್ರ್ಯ, ಛಂದೋಗತಿಯ ನವೀನತೆ–ಈ ವಿಶೇಷ ಲಕ್ಷಣಗಳು ಇಂಗ್ಲಿಷ್ ರೋಮ್ಯಾಂಟಿಕ್ ಕವಿಗಳ ಸ್ವಭಾವ ಲಕ್ಷಣಗಳೂ ಆಗಿವೆ. ಆದರೆ ಈ ಗುಣಗಳನ್ನು ಅವನು ಮೈಗೂಡಿಸಿಕೊಂಡದ್ದು ಸ್ಕಾಟ್ಲಂಡಿನಲ್ಲಿಯೇ. ತನ್ನ ದೇಶದ ಜೀವನದಲ್ಲಿಯೂ, ಮನೋಧರ್ಮದಲ್ಲಿಯೂ ಬರ್ನ್ಸ್ ಪ್ರತಿನಿಧಿಸಿದ್ದು ಸಹಜವಾದ ಆತ್ಮಸ್ವಾತಂತ್ರ್ಯವನ್ನೇ. [The freedom of natural Soul] ಆ ಸ್ವಾಯತ್ತತೆಯ ಪೂರ್ಣತೆ ಹಾಗೂ ಅದನ್ನು ಅಭಿ ವ್ಯಕ್ತಿಗೊಳಿಸುವಲ್ಲಿಯ ಸಮಗ್ರತೆ–ಇವು ಸಂಪೂರ್ಣ ಅವನವೇ. ಪ್ರತಿಯೊಂದು ಅನುಭವವನ್ನು, ಮಾತನ್ನು ಅದು ಬಂದ ಹಾಗೆ, ಅದು ಇರುವ ಹಾಗೆಯೇ ನಿರೂ ಪಿಸುವದು ಅವನಲ್ಲಿರುವ ಶಕ್ತಿ ವಿಶೇಷ.

"ಪ್ರೇರಣೆ, ಪ್ರಚೋದನೆಗಳಿಲ್ಲದೆ ಬರೀ ಬರೆಯುವ ಹಟದಿಂದ ನಾನು ಕಾವ್ಯ ರಚಿಸಿದ್ದು ನನ್ನ ಜೀವನದಲ್ಲಿ ಎರಡು ಸಲ ಮಾತ್ರ; ಹಾಗೆ ಮಾಡಿದಾಗ ನನಗೆ ಯಶವೂ ದೊರೆಯಲಿಲ್ಲ. ನನ್ನ ಕಾವ್ಯವೆಲ್ಲವೂ ನಿರಾಯಾಸವಾಗಿ ಹೊರ ಹೊಮ್ಮಿದ ರಚನೆ ಯಾದರೂ ಅಷ್ಟೇ ಪರಿಶ್ರಮವಹಿಸಿ ನಾನವನ್ನು ತಿದ್ದಿದ್ದೇನೆ. ಉತ್ಕೃಷ್ಟವಾದ ಬರ

ವಣಿಗೆಯ ಕಚ್ಚಾಸಾಮಗ್ರಿಯೂ ಪ್ರತಿಭೆಯ ವರದಾನವೇ. ಆದರೆ ರಚನಾಕೌಶಲ್ಯ (workmanslip) ವೆಂಬುದು ಕೂಡ ಕಷ್ಟಪಟ್ಟು, ಲಕ್ಷ್ಯಪೂರ್ವಕವಾಗಿ ತಿರುತಿರುಗಿ ಪ್ರಯೋಗಮಾಡಿ ನೋಡುವುದೇ ಆಗಿದೆಯೆನ್ನುವುದನ್ನು ನಾನು ದೃಢವಾಗಿ ನಂಬಿದ್ದೇನೆ." ಇವೇ ಮೊದಲಾದ ಅವನ ಮಾತುಗಳಲ್ಲಿ ಕಲಾವಿದ ಬರ್ನ್ಸ್‌ನ ರೀತಿಯನ್ನು ಗಮನಿಸಬಹುದು. ಅವನ ತರುವಾಯದ ಇಂಗ್ಲಿಷ್ ಕವಿಗಳ ಮೇಲೆ ಬರ್ನ್ಸ್‌ನ ಪ್ರಭಾವ ತೀರ ಅತ್ಯಲ್ಪವೆಂದೇ ಹೇಳಬಹುದು: "The fountain has been there to sparkle eternally before them hardly to drink from" ಎಂದು ಇಂಗ್ಲೀಷ್ ಸಾಹಿತ್ಯ ಚರಿತ್ರೆಕಾರರು ಕಂಡುಕೊಂಡಿದ್ದಾರೆ. ಕನ್ನಡದ ಮಟ್ಟಿಗೆ ಹೇಳುವದಾದರೆ ಶ್ರೀ ಕೆ. ಎಸ್. ನರಸಿಂಹಸ್ವಾಮಿಯವರ ಪ್ರೇಮಗೀತೆಗಳ ರೀತಿಯಲ್ಲಿ ಸ್ಫೂರ್ತಿಯಲ್ಲಿ ರಾಬರ್ಟಬರ್ನ್ಸ ಕವಿಯ ಪ್ರಭಾವವನ್ನು ಗುರುತಿಸಬಹುದು. ಬರ್ನ್ಸನ ಕೆಲವು ಕವಿತೆಗಳ ಭಾವಾನುವಾದವನ್ನು ಅವರು ಮಾಡಿದ್ದಾರೆ. ದಿ. ಬಿ. ಎಂ. ಶ್ರೀಯವರ 'ಇಂಗ್ಲಿಷ್ ಗೀತಗಳು' ಸಂಗ್ರಹದಲ್ಲಿ ಬರ್ನ್ಸ ಕವಿಯ ಏಳು ಕವಿತೆಗಳು ಸುಂದರವಾಗಿ ಅನುವಾದಗೊಂಡಿವೆ. ಷೆಲ್ಲಿಯ ತರುವಾಯ ಬರ್ನ್ಸನ ಕವಿತೆಗಳೇ ಅದರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿವೆ.



ಓಂ

# ಶ್ರೀ ಸಿದ್ಧರಾಮನ ಜನನ



### ಶ್ರೀ ಜಯದೇವಿ ತಾಯಿ ಲಿಗಾಡೆ.

ಜಗವೆಲ್ಲ ಮಲಗಿತ್ತು ಯೋಗಿ ತಾ ಎಚ್ಚತ್ತು
ಬಗೆದು ತಾಯ್ತನ ಹೊರಬಂದ–ಸಿದ್ಧರಾಮ
ಮುಗಿಲು ಚಂದಿರನ ಬೆಳಗಿನಲಿ ೧.

ಬೇನಿಲ್ಲ ಬೆವರಿಲ್ಲ ತನುಮನಕ ದಣುವಿಲ್ಲ
ಕನಿಕರದಿ ತಾಯಿ ಮಿಡುಕಿಲ್ಲ ಪರಮ ಅ–
ಯೋನಿಜಗ ಜನುಮ ಕೊಟ್ಟ್ಯಾಳ ೨.

ಥರಥರ ನಡುಗಿಲ್ಲ ನಾರಿಯರ ನೆರವಿಲ್ಲ
ಮೋರೆ ಕೆಡಸಿ ಬೇನೆ ತಿನಲಿಲ್ಲ–ಸುಗ್ಗವ್ವೆ
ಪರಮನ ತಾಯಾಗಿ ಮಲಗ್ಯಾಳ ೩.

ಮುಟ್ಟು ಮೈಲಿಗೆ ಇಲ್ಲ ಬಟ್ಟಲಗಂಣೀನ
ದಿಟಯೋಗಿ ತಾ ಮಲಗ್ಯಾನ–ಸಿದ್ಧರಾಮ
ದಿಟ್ಟ ಶಿವನಲ್ಲಿ ಇಟ್ಟ್ಯಾನ ೪.

ಹಸಸೀಲಿಯ ಕಂಣು ಸಸುಗೆಂಪಿನಲಿ ನಿಂತು
ಅಸುಬೆಳಗಿನಲಿ ಕೂಡಿತ್ತು ಸಿದ್ಧೇಶ
ಶಿಶು ಶಿವತೇಜ ಹೊಂದ್ಯಾನ ೫.

ತೊಳೆದ ಮುತ್ತಿನ್ಹಂಗ ಹೊಳೆವ ಮಾಣಿಕದ್ಹಂಗ
ಒಳಹೊರಗು ಬೆಳಗುಬೀರಿತ ಮೈಬಂಣ
ಥಳಥಳಿಪ ಕಾಂತಿ ಹೊಳದೀತ ೬.

ಕರಗಳೆ ತೊಟ್ಟೀಲ ಹರಸೂತ ತೂಗ್ಯಾಳ
ಹರ ಸಿದ್ಧರಾಮನೆ ಜಯಜಯ ಎನುತಲಿ
ಸಿರದಡವಿ ಮಾದೇವಿ ತೆರಳಿದಳು ೭.

ಹೆತ್ತವ್ವ ಎಚ್ಚತ್ತು ಅತ್ತಿತ್ತ ನೋಡ್ಯಾಳ
ಅತ್ತತ್ತು ಭೂಮಿಗೆ ಬಿದ್ದಿಲ್ಲ–ಕೂಸಿನ
ಸುತ್ತಮುತ್ತ ಬೆಳಕ ಬೀರಿತ್ತ ೮.

ನಂಜುಂಡ ಜೀವದ ಬಂಜೆತನವಳಿಯಿತು
ಕೆಂಜೆಡೆಯುವನ ದಯದಿಂದ ಬದುಕೇನ
ಸಂಜೆ ಹರಿದು ಮುಂಜಾವ ತಾನಾಯ್ತು ೯.

ಒಳಹೊರಗ ಶಿವತೇಜ ತೊಳಗಿ ಬೆಳಗೀತ
ಎಳೆಯ ಮುಖಕಾಂತಿ ತೇಲಿತ–ಸಿದ್ಧನ
ಕಳೆಯು ಶಿವನಂತೆ ಹೊಳೆದೀತ ೧೦.

ಸುಗ್ಗಲವ್ವೆಯು ಹಡೆದ ಹಿಗ್ಗೀನ ಸುಗ್ಗೀಯು
ಸಾಗಿ ಬಂದಿತ್ತ ನಮ್ಮನಿಗೆ–ಸತ್ಯಕ್ಕ
ಹೋಗಿ ನೋಡೋಣ ಕೂಸೀಗ ೧೧.

ಹೆಚ್ಚಿತ ಶಿವಭಕ್ತಿ ಮೆಚ್ಚಿದರು ಲೀಲೆಯು
ಅಚ್ಚರಿಗೊಂಡಾರ ಕಂದನ ಕಂಡವರು
ಸಚ್ಚಿದಾನಂದನ ನುತಿಸಿದರು ೧೨.

ಒಂಭತ್ತು ತಿಂಗಳ ತುಂಬಿಲ್ಲ ತಾಯೀಗ
ಗೊಂಬೀಯುಂಥ ಕೂಸು ಬದುಕುವದು ಹೆಂಗೆಂದು
ಕಂಬನಿ ಸುರಿಸ್ಯಾರ ನಾರಿಯರು ೧೩.

ಎವೆಯಿಕ್ಕದ ಕಂದನ ಹೌಹಾರಿ ನೋಡೂತ
ಸಾವ ಬಂತೇನ ಕೂಸಿಗ ಈ ಪರಿ
ದೇವನ ಕೋಪೇನ ತಾಯೀಗ ೧೪.

ಮುತ್ತಿನಂಥಾ ಕೂಸು ಅತ್ತದ್ದು ಕೇಳಿಲ್ಲ
ಎತ್ತಿಕೊಂಡರ ನಗಲಿಲ್ಲ–ಕಂದನು
ಅತ್ತಿಲ್ಲ ಕೆಳಗ ಇಳುಹಿದರು ೧೫.

ಅರವತ್ತು ವರುಷಕ್ಕ ಅರುಹಲು ಹುಟ್ಯಾನ
ಅರವು ಮರವೀನ ತೊಡಕವ ಬಿಡಿಸಲ್ಕೆ
ಕುರುಹು ಆಗಿ ಬಂದಾನ ಭೂಮಿಗೆ ೧೬.

ಆಕಳಿಕೆ ಅವಗಿಲ್ಲ ಬಿಕ್ಕಿಬಿಕ್ಕಿ ಅತ್ತಿಲ್ಲ
ಮಕ್ಕಳ ಹಾಂಗ ಕೈಕಾಲ ಬಡದಿಲ್ಲ
ನಕ್ಕು ತಾ ತಾಯೀಗ ನಗಿಸಿಲ್ಲ ೧೭.

ಹಸಿದು ಹಾಲು ಕುಡಿದಿಲ್ಲ ತುಸು ನಿದ್ದೆ ಮಾಡಿಲ್ಲ
ಉಸಿರ್ಹಾಡಿ ಕಣ್ಣು ಮುಚ್ಚಿಲ್ಲ–ಯೋಗಿ ತಾ
ಕೂಸಾಗಿ ಚಿಟಿಚಿಟಿ ಚೀರಿಲ್ಲ ೧೮.

ಅಮರತ್ವ ಅರಿತವರು ವಿಮಲತ್ವ ತಿಳಿದವರು
ಸುಮತಿಯರು ಮಾತನಾಡ್ಯಾರ ಈ ಕೂಸು
ಅಮಮ ದೇವನ ಲೀಲೆಯದು ೧೯.

ಅವರವರ ಕಣ್ಣೀಗೆ ಬಗೆದಂತೆ ಕಾಣೂತ
ಸಾವು ಹುಟ್ಟೀನ ಹೊರೆಯನು ಹರಿದು ಮಾ
ನವರೊಳು ಬೆಳೆದಾನ ಬೆಳಗುತ್ತ ೨೦.

ಪರಮ ಹರುಷದಿಂದ ಪುರದವರೆಲ್ಲರು
ನೆರೆದಾರ ತೊಟ್ಟೀಲ ಕಾರ್ಯಕ್ಕ–ಸೊನ್ನಲ
ಪುರವೆಲ್ಲ ಶೃಂಗಾರ ಮಾಡ್ಯಾರ ೨೧.

ಬಂಧುಬಳಗಕ್ಕೆ ಎಂದಾಳ ಸುಗ್ಗಲವ್ವೆ
ಕಂದಗ ಹೆಸರೇನು ಇಡಬೇಕ–ನೀವೆಲ್ಲ
ಒಂದೆ ಮನಸೀಲಿ ಹೇಳಬೇಕ ೨೨.

ಮನಿಯದೇವ ಕೊಟ್ಟಾನ ಅನ್ಯರ ಹೆಸರ್ಹ್ಯಾಂಗ
ಮನ್ನಿಸಿ ಹೆಸರೀಡ ತಾಯವ್ವ–ಕಂದಗ
ಮನೆದೇವ ಧೂಳಿ ಮಾಂತಾಳ ೨೩.

ಸಿಟ್ಟೀನ ದೇವರು ಕೊಟ್ಟೆರಲಿಲ್ಲ ಮಗನ
ಕಟ್ಟಕಡೆಗೆ ಕೊಟ್ಟಾನ ಸುಗ್ಗಲವ್ವೆ
ಮೊಟ್ಟಮೊದಲಿವನ ನೆನೆಯವ್ವ ೨೪.

ದೇವರ ಸಿಟ್ಟೆ ಅದು; ಭಾವಕ್ಕೆ ಬಡಿಯಿತು
ಯಾವ ಮಾತಾಡದೆ ಸತಿ-ಪತಿ ಒಪ್ಪೂತ
ದೇವ ಮಾಂಕಾಳನೆಂದು ಕರೆದಾರ ೨೫.

ಬಾಗಿಣಕ ಬಂದವರು ಜೋಗುಳ ಪಾಡಿರೆ
ಯೋಗಿಯ ವರದಿಂದ ಹುಟ್ಟೇದ–ಚಲುವಗ
ಬಾಗಿ ಹೆಸರಿಡಿರಿ ಮುದದಿಂದ ೨೬.

ರೂಢಿಯ ಕೈಯಾಗ ಆರೂಢ ಸಿಕ್ಕ್ಯಾನ
ಜೋಡಾಗಿ ಒಪ್ಪುಣ ಆಡಿಸುತ ಕಂದನ
ಸಡಗರದಿ ತೊಟ್ಟೇಲ ತೂಗ್ಯಾರ ೨೭.

ಬಿಂದು ತಾ ರೂಪಾಗಿ ಸಂದಳಿದ ಶಿವಯೋಗಿ
ಇಂದುಧರನ ಅವತಾರಿ ತಾಬಂದ
ಸಂದೇಶ ಸಾರಲು ಜೋಜೋಜೊ ೨೮.

ಉಸುರೆಂಬ ಬಸುರಿನ ಶಿಶು ಶಿವಯೋಗಿಯ
ಅಸು ಎಂಬ ಹಾಲು ಕುಡಿ ಏಳು–ಪಡಕೊಳೊ
ನೊಸಲೀನ ಕಂಣು ಜೋಜೋಜೊ ೨೯.

ಆಕಾಶ ತೊಟ್ಟಿಲ ದಿಕ್ಕಗಳೆ ಕಟ್ಯಾಗಿ
ಚುಕ್ಕಿಗಳೆಲ್ಲ ಚಟ್ಯಾಗಿ–ತೂಗ್ಯಾವ
ಅಕ್ಕರದ ಶಿಶುವೆ ಜೋಜೋಜೊ ೩೦.

ಬಟ್ಟಬಯಲಾಗ, ಕಟ್ಯಾದ ತೊಟ್ಟೇಲ
ಗಟ್ಟೇಗ ಚೆನ್ನನ ಮಲಗಿಸಿ–ತೂಗಿರೆ
ತುಟ್ಟ ತುದಿಯಲಿ ಜೋಜೋಜೊ ೩೧

ಸತ್ಯಸದಾಚಾರದ ಕುತನೀಯ ಹಾಸೀಗಿ
ನಿತ್ಯಪರಿಪೂರ್ಣತೆ ಹಚ್ಚಡ ಹೊದ್ದೀದ
ಉತ್ತಮಾಂಗ ಮಗನೆ ಜೋಜೋಜೊ ೩೨.

ಧರೆಯು ತಾಡೋಲೆಯು ಮರಗಳೆ ಲೆಕ್ಕಣಿಕೆ
ಹರಿಯೂವ ನೀರು ಮಸಿಮಾಡಿ ಕಂದಯ್ಯ
ಹರಮಹಿಮೆ ಅರುಹು ಜೋಜೋಜೊ ೩೩.

ಅಷ್ಟಾವರ್ಣದೊಳು ಶ್ರೇಷ್ಠನೆಂದೆನಿಸೀ ನೀ
ಸೃಷ್ಟಿಕರ್ತನ ನೆಚ್ಚೀನ ಸುತನಾಗಿ
ನಿಷ್ಟೆವಂತರ ಸಲಹು ಜೋಜೋಜೊ ೩೪.

———:—————

# ಭಕ್ತವತ್ಸಲ ಶ್ರೀರಾಮಕೃಷ್ಣ



ಶ್ರೀ ಕೋ. ಚನ್ನಬಸವಪ್ಪನವರು, ಬಳ್ಳಾರಿ.

"ಪರಮಹಂಸರು ಚೈತ್ರಯಾತ್ರೆಯಲ್ಲಿ ಜಯಶೀಲರಾದರು. ಮುಕ್ತರಾದರು; ಭಕ್ತರಾದರು; ಪರಿಪಕ್ವವಾದರು; ಸಿದ್ಧರಾದರು. ಸರ್ವಮತ ಸಾಧನೆಯಲ್ಲಿ ಸಿದ್ಧಿ ಹೊಂದಿ ಸರ್ವಧರ್ಮ ಸಮನ್ವಯಾಚಾರ್ಯರಾದರು; ನವಯುಗಾವತಾರ ರಾದರು........ನೂತನ ವಸಂತ ಚೇತನವು ಭೂಮಿಯಲ್ಲಿ ಸಂಚರಿಸಿತು........ಗಂಭೀರ ಮಾನಸ ಸರಸ್ಸಿನಲ್ಲಿ ತರುಣ ಅರುಣ ರಾಗರಂಜಿತ ಮಹಾಪದ್ಮವು ಸಹಸ್ರದಲ ಸೌಂದರ್ಯದಿಂದ ವಿಕಸಿತವಾಯಿತು. ದುಂಬಿಗಳೆಲ್ಲಿ ? ಮಕರಂದ ಪಾನಮಾಡುವ ಮತ್ತು ಮಧುಕರಗಳೆಲ್ಲಿ" [1]

ಶ್ರೀ ರಾಮಕೃಷ್ಣ ಪರಮಹಂಸರು ತಮ್ಮ ಅಂತರಂಗ ಶಿಷ್ಯರ ಆಗಮನಕ್ಕಾಗಿ ಹಸು ತನ್ನ ಕರುವಿನ ಬರುವಿಕೆಗಾಗಿ ಹಾರೈಸುವಂತೆ ಹಾರೈಸುತ್ತಿದ್ದರು. ಪ್ರತಿ ದಿನವೂ ದಕ್ಷಿಣೇಶ್ವರದ ನೇಮಮಂದಿರದ ಉಪ್ಪರಿಗೆಯನ್ನು ಹತ್ತಿ ನಿಂತು ಎದೆ ಬಿರಿಯುವಂತೆ ಮೊರೆಯಿಡುತ್ತಿದ್ದರು. 'ಓ ನನ್ನ ವತ್ಸರಿರಾ ! ಎಲ್ಲಿದ್ದೀರಿ ? ಬನ್ನಿ.' ಎಂದು ಕೂಗಿ ಕರೆಯುತಿದ್ದರು.

ಒಂದು ದಿನ ಓರ್ವ ಯುವಕ ದಕ್ಷಿಣೇಶ್ವರಕ್ಕೆ ಧಾವಿಸಿ ಬಂದ. 'ಪ್ರಾಚ್ಯ-ಪಾಶ್ಚಾತ್ಯ ತತ್ವಜ್ಞಾನ ಖನಿಗಳಲಿ ಬಹು ವಜ್ರಗಳನಾಯ್ದು ಶ್ರೀಮಂತನಾಗಿದ್ದ.' ಆದರೂ ಅವನಿಗೆ ಭಗವಂತನ ಇರುವಿಕೆಯಲ್ಲೇ ಗಾಢವಾದ ಸಂಶಯ. ದೇವ ರಿದ್ದಾನೆಯೆ ? ಇದ್ದರೆ ಅವನನ್ನು ನೋಡಿದವರು ಯಾರಾದರೂ ಇದ್ದಾರೆಯೆ ? ಎಂಬ ಪ್ರಶ್ನೆಗಳನ್ನು ಕಂಡ ಕಂಡ ಸನ್ಯಾಸಿಗಳಿಗೆ ಕೇಳಿದ. ಗಿರಿ-ಗುಹೆ, ವನ-ಕಾನನ

---

1. ಶ್ರೀ ರಾಮಕೃಷ್ಣ ಪರಮಹಂಸ ಪುಟ : 103—ಶ್ರೀ ಕುವೆಂಪು.

ಗಳಲ್ಲಿ ತಪಸ್ಸು ಮಾಡುತ್ತಿದ್ದ ತಪಸ್ವಿಗಳನ್ನು ಕೇಳಿ ನೋಡಿದ. ಮಹಾ ಮೇಧಾವಿಗಳನ್ನು, ಪಂಡಿತರನ್ನು, ಶಾಸ್ತ್ರಕೋವಿದರನ್ನು ಕೇಳಿದ. ಆದರೆ ಯಾರನ್ನು ಕೇಳಿದರೂ, 'ದೇವರನ್ನು ನೋಡಿದ್ದೇನೆ' ಎಂದು ಉತ್ತರಿಸುವಂಥವರೊಬ್ಬರನ್ನೂ ಕಾಣಲಿಲ್ಲ.

ಅವನೇ ನರೇಂದ್ರನಾಥ ದತ್ತ! ಮುಂದೆ ಲೋಕವಿಖ್ಯಾತನಾದ ವಿವೇಕಾನಂದ! ಒಂದು ದಿನ ನರೇಂದ್ರ ಬಿರುಗಾಳಿಯಂತೆ ನುಗ್ಗಿಬಂದು

'ಮಹಾಶಯ ದೇವರಿದ್ದಾನೆಯೆ?' ಎಂದು ಶ್ರೀ ರಾಮಕೃಷ್ಣರನ್ನು ಕೇಳಿದ.

'ಇದ್ದಾನೆ ವತ್ಸಾ! ಇದ್ದಾನೆ!' ಎಂದು ಉತ್ತರ ಕೊಟ್ಟರು.

'ಹಾಗಾದರೆ ನೀವು ಅವನನ್ನು ನೋಡಿದ್ದೀರಾ?'

'ನೋಡಿದ್ದೇನೆ ವತ್ಸಾ! ನಿನ್ನನ್ನು ಈಗ ಇಲ್ಲಿ ನೋಡುವುದಕ್ಕಿಂತ ವಾಸ್ತವವಾಗಿ ನೋಡುತ್ತಿದ್ದೇನೆ'

'ಹಾಗಾದರೆ ಅವನನ್ನು ನನಗೆ ತೋರಿಸುವಿರಾ?'

'ಕಾಣುವ ಆಸೆಯಿದ್ದರೆ ತೋರಿಸುತ್ತೇನೆ! ಆದರೆ ದೇವರನ್ನು ಕಾಣುವಾಸೆ ಯಾರಿಗಿದೆ? ಹೆಂಡತಿ, ಮಕ್ಕಳು, ಕಾಮಿನಿ, ಕಾಂಚನಗಳಿಗಾಗಿ ಜನ ಕೊಡಗಟ್ಟಲೆ ಕಣ್ಣೀರು ಸುರಿಸುತ್ತಾರೆ. ಆದರೆ ದೇವರಿಗಾಗಿ ಯಾರು ಕಣ್ಣೀರು ಸುರಿಸುತ್ತಾರೆ?' ಎಂದು ಶ್ರೀ ರಾಮಕೃಷ್ಣರು ನುಡಿದಾಗ, ನರೇಂದ್ರನಿಗೆ ಈ ಅರೆಮರುಳನಂತೆ ತೋರುತ್ತಿದ್ದ ಸಾಧುವನ್ನು ನೋಡಿ ಏನೋ ನೆಮ್ಮದಿಯಾಯಿತು. ರಾಮಕೃಷ್ಣರು ನರೇಂದ್ರನನ್ನು ಹತ್ತಿರಕ್ಕೆ ಕರೆದು:

'ನೀನು ಬರಲು ಇಷ್ಟೊಂದು ತಡ ಮಾಡುವುದೇ? ನಿನಗಾಗಿ ನಾನೆಷ್ಟು ಸಂಕಟಪಟ್ಟೆ? ಎಂಥ ಯಾತನೆಯನ್ನು ಅನುಭವಿಸಿದೆ. ಬಾ ಈ ತಿಂಡಿಯನ್ನು ತಿನ್ನು' ಎಂದು ತಮ್ಮ ಕೈಯಿಂದಲೇ ಸಿಹಿತಿಂಡಿಯನ್ನು ತಿನ್ನಿಸಲು ಮುಂದಾದರು. ಅವರ ಅವ್ಯಾಜ ಪ್ರೇಮವನ್ನು ಕಂಡು ನರೇಂದ್ರ ಮಾರುಹೋದ. ಆದರೂ ಅವನಿಗೆ ಅನುಮಾನ. ತನ್ನನ್ನು ಎಂದೂ ಕಂಡಿಲ್ಲದಿದ್ದರೂ, ತನ್ನ ಹೆಸರನ್ನು ಕೇಳಿಲ್ಲದಿದ್ದರೂ, ಇಷ್ಟು ಪ್ರೀತಿ, ವಿಶ್ವಾಸ, ಆದರದಿಂದ ತನ್ನನ್ನು ತಾಯಿಗಿಂತ ಅಧಿಕವಾಗಿ ಪ್ರೇಮಿಸುವ ಈ ವ್ಯಕ್ತಿ ಹುಚ್ಚನಿರಬಹುದೇ? ತನ್ನ ತೀಕ್ಷ್ಣಜ್ಞಾನದಿಂದ, ಎಲ್ಲದನ್ನೂ ಒರೆಗೆ ಹಚ್ಚಿ ನೋಡಿದರೆ ಏನನ್ನೂ ಸ್ವೀಕರಿಸುವವನಲ್ಲ. ಅಂತೆಯೇ ರಾಮಕೃಷ್ಣರನ್ನು, ರಾಮಕೃಷ್ಣರ ಉಪದೇಶವನ್ನು ಪರೀಕ್ಷಿಸದೆ ಎಂದೂ ಸ್ವೀಕರಿಸಲಿಲ್ಲ. ತನಗೆ ಒಪ್ಪಿಗೆಯಾಗದ ಮಾತನ್ನು ಅಲ್ಲಗಳೆಯುವುದರಲ್ಲಿ ಅವನು ಎಂದೂ ಹಿಂದು ಮುಂದು ನೋಡಲಿಲ್ಲ. ಮುಖದ ಮುಲಾಜಿಗಾಗಿ ತನ್ನ ತರ್ಕಬುದ್ಧಿಗೆ ಒಪ್ಪಿಯಾಗದ ಮಾತನ್ನು ಎಂದಿಗೂ ಒಪ್ಪಲಿಲ್ಲ.

ಸ್ವತಃ ಶ್ರೀ ರಾಮಕೃಷ್ಣರನ್ನೇ ಪರೀಕ್ಷೆ ಮಾಡಿ, ಅವರು ಕಪಟಿಗಳಲ್ಲವೆಂಬುದನ್ನು ಮನದಟ್ಟು ಮಾಡಿಕೊಂಡ. ಕಾಂಚನವನ್ನು ಮುಟ್ಟುವುದಿಲ್ಲವೆಂದು ಹೇಳುತ್ತಿದ್ದ ಪರಮಹಂಸರ ವೈರಾಗ್ಯದ ಉದ್ದ - ಅಗಲ - ಆಳವನ್ನು ಅಳೆಯಲೆಂದು ಒಂದು ದಿನ ಅವರ ಹಾಸಿಗೆಯ ಅಡಿಯಲ್ಲಿ ಒಂದು ರೂಪಾಯಿಯನ್ನು ಇಟ್ಟು ಪರೀಕ್ಷೆ ಮಾಡಿದ. ಪರಮಹಂಸರು ಎತ್ತಲಿಂದಲೋ ಬಂದು, ಹಾಸಿಗೆಯ ಮೇಲೆ ಕುಳಿತರು. ಕುಳಿತ ಕೂಡಲೇ ವಿದ್ಯುಚ್ಛಕ್ತಿಯ ಪ್ರಚಂಡ 'ಷಾಕ್' ಹೊಡೆದಂತೆ ಕುಪ್ಪಳಿಸಿ ನಿಂತರು. 'ನೋಡಿ, ಹಾಸಿಗೆಯ ಅಡಿಯಲ್ಲಿ ಏನಾದರೂ ಇದೆಯೋ?' ಎಂದು ಜಮಖಾನ ಕೊಡವಿದರು. ನರೇಂದ್ರನಿಟ್ಟಿದ್ದ ರೂಪಾಯಿ ನಾಣ್ಯ ಠಣ್‌ನೆ ಉದುರಿಬಿತ್ತು! ಆಗ ಶ್ರೀ ರಾಮಕೃಷ್ಣರು ನರೇಂದ್ರನ ಕಡೆ ನೋಡಿದರು. ನರೇಂದ್ರನೂ ಅವರನ್ನು ನೋಡಿದ. ಇಬ್ಬರ ಇಂಗಿತವೂ ಇಬ್ಬರಿಗೂ ಅರ್ಥವಾಯಿತು.

ಶ್ರೀ ರಾಮಕೃಷ್ಣರು ಒಂದು ದಿನ ನೆರೆದ ಭಕ್ತರಿಗೆ ಎಲ್ಲರೂ ಬ್ರಹ್ಮಮಯವೇ ಆಗಿದೆ. 'ಈಶಾವಾಸ್ಯಮಿದಂ ಸರ್ವಂ' ಎಂದು ಬೋಧಿಸುತ್ತಿದ್ದರು. ನರೇಂದ್ರ ಇದನ್ನು ಕೇಳಿ ಹೊರಗೆ ಬಂದು :

'ಈ ಹೂಜಿಯೂ ಬ್ರಹ್ಮ. ಈ ನೀರೂ ಬ್ರಹ್ಮ. ಈ ಸಿಗರೇಟೂ ಬ್ರಹ್ಮ. ಇದರ ಹೊಗೆಯೂ ಬ್ರಹ್ಮ. ನಾನೂ ಬ್ರಹ್ಮ–ನೀನೂ ಬ್ರಹ್ಮ!' ಎಂದು ಕುಚೋದ್ಯ ಮಾಡಿಬಿಟ್ಟ. ಪರಮಹಂಸರು ಹೊರಗೆ ಬಂದು :

'ಏನು ಮಾತನಾಡುತ್ತಿದ್ದುದು' ಎಂದು ಕೇಳಿದರು.

'ಹೋಗಿ ! ಹೋಗಿ ! ಇದೆಲ್ಲ ನಿಮಗೆ ಅರ್ಥವಾಗುವ ಮಾತಲ್ಲ. ಇದು ಬಹು ದೊಡ್ಡ ವಿಚಾರ!' ಎಂದು ಅಸಡ್ಡೆಯಿಂದ ಉತ್ತರಿಸಿದ.

ಶ್ರೀ ರಾಮಕೃಷ್ಣರು ಈ ಎಲ್ಲ ಪರೀಕ್ಷೆಗಳನ್ನೂ, ಎಲ್ಲ ಅಸಡ್ಡೆ, ಅಲಕ್ಷೆ, 'ಅವಮಾನ'ಗಳನ್ನೂ ನುಂಗಿಕೊಂಡು, ನರೇಂದ್ರನನ್ನು ತಮ್ಮ ಮಾರ್ಗಕ್ಕೆ ತಿರುಗಿಸಿದರು. ನರೇಂದ್ರನ ಪ್ರಚಂಡ ಜ್ಞಾನ ಪಕ್ಷಪಾತಿಯನ್ನು ಖಂಡಿಸದೆ, ಅವನ ಭಾವ ನಷ್ಟಮಾಡದೆ, ಅವನು ನಂಬಿದ್ದೂ ಸತ್ಯ, ಅದರ ಜೊತೆಗೆ ಇನ್ನೂ ಎಷ್ಟೋ ಸತ್ಯಗಳವೆ—ಎಂಬುದನ್ನು ಅವನಿಗೆ ಮನದಟ್ಟು ಮಾಡಿದರು. ಎಷ್ಟೋ ಸಾರಿ ತಾಯಿಯ ಮುಂದೆ ಕಣ್ಣೀರು ಸುರಿಸಿ 'ನರೇಂದ್ರನಿಗೆ ಒಳ್ಳೆಯ ಬುದ್ಧಿಯನ್ನು ಕೊಡೆಂದು ಪ್ರಾರ್ಥಿಸಿದರು. ಯಾವ ನರೇಂದ್ರ ತಮ್ಮ ಬಳಿಗೆ ಬಂದಾಗ 'ಹಿಂಡನಗಲಿದ ಗಜದಂತೆ' ಜ್ಞಾನವೆಂಬ ಮದವೇರಿ, ಯಾವುದನ್ನೂ ಯಾರನ್ನೂ, ಲಕ್ಷಿಸದೆ ಉರಿವ ಬೆಂಕಿಯಾಗಿದ್ದನೋ, ಅಂಥವನನ್ನು ಶ್ರೀ ರಾಮಕೃಷ್ಣರು ಪಳಗಿಸಿ, ತಮ್ಮ ಪ್ರೇಮ ಕರುಣೆ ವಾತ್ಸಲ್ಯವೆಂಬ ತನಿಜಲದಿಂದ ಅವನನ್ನು ಬೆಣ್ಣೆಯಂತೆ ಮಾಡಿದರು !

ಇನ್ನೊಬ್ಬ ಶಿಷ್ಯ–ಯೋಗೇಂದ್ರ—ಅವನು ಚಿಕ್ಕಂದಿನಲ್ಲಿ ಮದುವೆಯಾಗುವುದೇ ಇಲ್ಲವೆಂದು ಹಟ ಹಿಡಿದು ಕುಳಿತಿದ್ದ. ಆಗ ಅವನ ತಾಯಿ ಅತ್ತು, ಕರೆದು, ಗೋಳಾಡಿ, ಏನೇನೋ ಸಬೂಬು ಹೇಳಿ ಅವನನ್ನು ಮದುವೆಗೆ ಒಪ್ಪಿಸಿದರು. ಮದುವೆಯಾದ ಮೇಲೆ ಅವನ ತಾಯಿ ಅವನನ್ನು ತರಾಟೆ ತೆಗೆದುಕೊಂಡಳು. 'ಮದುವೆ ಬೇರೆ ಮಾಡಿಕೊಂಡೆ. ಈಗ ಹೆಂಡತಿಗೆ ಯಾರು ತಂದು ಹಾಕುತ್ತಾರೆ.' ಎಂದಳು. ಯೋಗೇಂದ್ರ: 'ನೀನು ನನಗಾಗಿ ಮಾಡಿಕೋ ಎಂದು ತಾನೆ ಹೇಳಿದ್ದು.' ಎಂದ. ತಾಯಿ: ಓಹೋ! ನನಗಾಗಿ ಮದುವೆಯಾದೆಯಾ? ನಿನಗೆ ಆಸೆಯಿರದಿದ್ದರೆ ಮದುವೆ ಮಾಡಿಕೊಳ್ಳುತ್ತಿದ್ದೆಯಾ? ಎಂದುಬಿಟ್ಟರು." ಹೀಗೆ ತಾಯಿಯೇ ಆಡಿದ ಮಾತಿಗೆ ತಪ್ಪಿದುದನ್ನು ನೋಡಿ ತುಂಬ ವ್ಯಥೆಯಾಯಿತು. ಆಮೇಲೆ ಯೋಗೇಂದ್ರ ಹೇಳುತ್ತಿದ್ದ: ನುಡಿದಂತೆ ನಡೆಯುವವರನ್ನು ಒಬ್ಬರನ್ನೇ ನೋಡಿರುವುದು! ಅವರ ಪ್ರೇಮವೋ! ಹಡೆದ ತಾಯಿ, ಅವರು ಪ್ರೀತಿಸುವುದರಲ್ಲಿ ನೂರರಲ್ಲಿ ಒಂದುಪಾಲು ಕೂಡ ಪ್ರೀತಿಸುವುದಿಲ್ಲ.' ಎಂದು ಹೇಳುತ್ತಿದ್ದರು.

ನರೇಂದ್ರನಂತಹ ಮಹಾ ಜ್ಞಾನಿಯನ್ನು ಹತ್ತಿರಕ್ಕೆ ಕರೆದು ಉಪದೇಶ ಕೊಟ್ಟಂತೆ, ಅತ್ಯಂತ ನಿರಕ್ಷರಕುಕ್ಷಿಯಾಗಿದ್ದ 'ಲಾಟು' ಎಂಬ ಒಬ್ಬ ಬೀಹಾರಿ ಸೇವಕನನ್ನು ಅಷ್ಟೇ ಪ್ರೀತಿಯಿಂದ, ಕರುಣೆಯಿಂದ, ವಾತ್ಸಲ್ಯದಿಂದ ಮೈದಡವಿ ಮುದ್ದಿಸಿ ತಮ್ಮ ಅಂತರಂಗದ ಶಿಷ್ಯರನ್ನಾಗಿ ಮಾಡಿಕೊಂಡರು. ಅವನೇ ಮುಂದೆ ಸ್ವಾಮಿ ಅದ್ಭುತಾನಂದರಾದರು. ಶ್ರೀ ರಾಮಕೃಷ್ಣರು ತಮ್ಮ ಶಿಷ್ಯರಲ್ಲಿ ಬ್ರಾಹ್ಮಣ–ಬ್ರಾಹ್ಮಣೇತರ, ಬಡವ, ಬಲ್ಲಿದ, ಕಲಿತವನು ಕಲಿಯದವನು ಎಂಬ ಯಾವ ಭೇದವನ್ನೂ ಎಣಿಸದೆ ಎಲ್ಲರಮೇಲೂ ಸಮಾನ ಕರುಣೆಯನ್ನು ತೋರಿ ಉದ್ಧಾರ ಮಾಡಿದರು. ತಮ್ಮನ್ನು ನಂಬಿ ಈ ಲೋಕವನ್ನೇ ತ್ಯಜಿಸಿ, ಈ ಲೋಕದಿಂದ ದೊರೆಯಬಹುದಾದ ಧನಕನಕ, ವಸ್ತುವಾಹನ, ಕೀರ್ತಿ ಮುಂತಾದವುಗಳನ್ನೆಲ್ಲ ಧಾರೆ ಎರೆದು ತಮ್ಮ ಆಶ್ರಯಕ್ಕೆ ಬಂದ ಈ ಯುವಕ ಸನ್ಯಾಸಿಗಳನ್ನು ತಾಯಿಗಿಂತಲೂ ಅಧಿಕ ಪ್ರೇಮದಿಂದ ನೋಡಿಕೊಂಡರು. ಅವರು ಬಂದು ಹೋಗುವ ಗಾಡಿ ಬಾಡಿಗೆಯಿಂದ ಹಿಡಿದು, ಅವರು ಉಣ್ಣುವ ಆಹಾರ, ತೊಡುವ ಬಟ್ಟೆ, ಮಾಡುವ ನಿದ್ರೆ—ಎಲ್ಲವನ್ನೂ ನೋಡಿಕೊಳ್ಳುತ್ತಿದ್ದರು. ಅವರು ನಿಜವಾಗಿಯೂ ಭಗವಂತನಿಗೆ ಅರ್ಪಿಸಲು ಯೋಗ್ಯರಾದ ವಿಕಸಿತ ಜೀವನವನ್ನಾಗಿ ಪರಿವರ್ತಿಸಿದರು.

ಹೀಗೆ ಒಳ್ಳೆಯವರನ್ನು ಕರೆದು, ಆಶ್ರಯ ಕೊಟ್ಟು ಸಾಧುಗಳನ್ನು ಕಾಪಾಡುವುದಲ್ಲದೆ, ದುಷ್ಟರನ್ನೂ ಕರೆದು ಪರಿವರ್ತನೆ ಮಾಡಿ ಅವರ ಒಗರನ್ನು ಮಾಯಿಸಿ, ಅವರ ಆತ್ಮ ಈಶ್ವರನಿಗೆ ಅರ್ಪಿತವಾಗುವ ಸುಮಧುರ ಫಲವನ್ನಾಗಿ ಪರಿವರ್ತಿಸಿದರು.

---

11 ಶ್ರೀ ರಾಮಕೃಷ್ಣ ಶಿಷ್ಯಕೂಟ ಪು. 50.

ಹಿಂದೆ ಆಗಿ ಹೋದ ಅವತಾರಗಳಲ್ಲಿ ದುಷ್ಟನಿಗ್ರಹ ಶಿಷ್ಟ ಪರಿಪಾಲನೆಯ ಕಾರ್ಯವನ್ನು ನೆರವೇರಿಸಿದರೆ ಈ ಅವತಾರದಲ್ಲಿ ಭಗವಂತ, ಶಿಷ್ಟರ ಪರಿಪಾಲನೆಯ ಜೊತೆಗೆ, ಅದಕ್ಕಿಂತಲೂ ಕಷ್ಟತರವಾದ ದುಷ್ಟರ ಪರಿವರ್ತನೆಯ ಮಹಾ ಕಾರ್ಯವನ್ನು ಕೈಕೊಂಡನು! ಪೆಟ್ಟು ಗುದ್ದಿದರೆ ಮನಸ್ಸು ತಿದ್ದುವುದಿಲ್ಲ. ಕೆನ್ನೆಗೆ ಹೊಡೆದರೆ ಮೆದುಳು ಚುರುಕಾಗುವುದಿಲ್ಲ. ಆದ್ದರಿಂದ ಮನಸ್ಸು ಪರಿವರ್ತಿತವಾಗಬೇಕು. ಆ ಕಾರ್ಯವನ್ನು ಶ್ರೀ ರಾಮಕೃಷ್ಣರು ಈ ಅವತಾರದಲ್ಲಿ ಕೈಕೊಂಡು, ಅದನ್ನು ಯಶಸ್ವಿಯಾಗಿ ನೆರವೇರಿಸಿದರು.

ಶ್ರೀ ಗಿರೀಶಚಂದ್ರ! ಅವನಂಥ ಮಹಾ ಪಾಪಿಯನ್ನು ನಮ್ಮಂಥವರೂ ಸಹಾ ಮುಖ ಕೂಡ ನೋಡಲು ಹಿಂಜರಿಯುತ್ತೇವೆ! ಅಂಥ ಪರಮ ಪಾಪಿಯನ್ನು ಕ್ರಮೇಣ ಕ್ರಮೇಣ ತಿದ್ದಿ ಪರಿಪೂರ್ಣ ಮಾನವನನ್ನಾಗಿ ಪರಿವರ್ತಿಸಿದರು. ಇದೇನೂ ಸಾಮಾನ್ಯವಾದ ಕೆಲಸವಲ್ಲ. ಈ ಗಿರೀಶ, ಶಿಸ್ತಿಗೆ (Discipline) ಬಗ್ಗುವವನಲ್ಲ. ದೇವರನ್ನು ನೋಡಬೇಕೆಂದು ಹಾತೊರೆಯುತ್ತಾನೆ. ಆದರೆ ಶ್ರೀ ರಾಮಕೃಷ್ಣರು ಹೇಳಿದಂತೆ :

'ದಿನಕ್ಕೆ ಎರಡು ಬಾರಿ ದೇವರನ್ನು ನೆನೆಯುವೆಯಾ?' ಎಂದರೆ

'ಸಾಧ್ಯವಿಲ್ಲ. ನಾನು ನಟ. ಯಾವಾಗ ಏಳುತ್ತೇನೋ, ಯಾವಾಗ ಮಲಗುತ್ತೇನೋ ಅದೇ ನನಗೆ ತಿಳಿಯುವುದಿಲ್ಲ. ನಾನು ದಿನಕ್ಕೆರಡು ಸಾರಿ ದೇವರನ್ನು ನೆನೆಯಲಾರೆ!" ಎಂದುಬಿಟ್ಟ.

'ಹಾಗಾದರೆ ಮಲಗುವ ಮುನ್ನ ಒಮ್ಮೆ ದೇವರನ್ನು ನೆನೆ' ಎಂದು ಚೌಕಾಸಿ ಮಾಡಿ ನೋಡಿದರು.

'ನಾನು ಮಾತು ಕೊಡಲಾರೆ' ಎಂದು ಹೇಳಿಬಿಟ್ಟ. 'ನನ್ನ ಆತ್ಮೋದ್ಧಾರದಿಂದ ನನಗೇನಾಗಬೇಕಾಗಿದೆ? ಇಂಥ ಭಂಡನನ್ನೂ ಪರಿವರ್ತಿಸಿದರೆಂಬ ಪವಾಡ ತೋರಿಸುವುದು ನಿಮಗೆ ಹೇರುಬಿದ್ದ ಕೆಲಸ" ಎಂಬಂತೆ ಮಾತನಾಡಿಬಿಟ್ಟ. ಅಂಥ ಸಂದರ್ಭದಲ್ಲಿ ಶ್ರೀ ರಾಮಕೃಷ್ಣರು :

'ಹಾಗಾದರೆ ಎಲ್ಲವನ್ನೂ ನನಗೆ ವಹಿಸಿಬಿಡು. ನಾನು ನಿನ್ನ ವಕಾಲತ್ತು ವಹಿಸುತ್ತೇನೆ.' ಎಂದು ಅವನ ಆತ್ಮೋದ್ಧಾರದ ಸಕಲ ಜವಾಬ್ದಾರಿಯನ್ನೂ ಹೊತ್ತುಕೊಂಡರು! ಆದ್ದರಿಂದಲೇ ಕಾರುಣ್ಯನಿಧಿ ಶ್ರೀ ರಾಮಕೃಷ್ಣ ಎಂದು ಅವರನ್ನು ಕರೆಯುವುದು. ಆದ್ದರಿಂದಲೇ ಅವರನ್ನು ಭಕ್ತವತ್ಸಲ, ಕರುಣಾಸಿಂಧು, ಅನಾಥ ರಕ್ಷಕ ಎಂದು ಭಜಿಸಿ ಪೂಜಿಸುವುದು.

———:: ———

# ದೇವರ ದಾಸಮಯ್ಯ



**ಶ್ರೀ ಆರ್. ಮೃತ್ಯುಂಜಯ,** ಬೆಂಗಳೂರು.

**ದೇ**ವ ಮತ್ತೆ ದಾಸಪದ ಸುಮುಚ್ಚಯದಿಂದೆಸೆವ, ದೇವದಾಸ ಪದಗಳು ದ್ವೈತವ ನಿರೂಪಿಸುವಂತೆ ಛಾಯೆಯ ಪ್ರತಿರೂಪಿಸುತೆ, ಮೃಗ ಮರೀಚಿಯ ಬರಿ ಭ್ರಮೆಯ ಬವಣಿಯೊತ್ತರಿಸಿ, ಅದ್ವೈತನ ದಾಸ ತಾನಾಗೆ ತಾನೇ ಈಶನಹನೆಂಬ ದಾಸನ ಶಕ್ತಿ ವಿಶಿಷ್ಟತೆಯ, ದೇವದಾಸರ ದ್ವಂಧ್ವವಳಿದ ನಿಕಟವ ಪ್ರಕಟಿಸುವ ದೇವ ದಾಸಮಯ್ಯನೆಂಬ ಪೆಸರದೇಸು ಸೊಗಸು.

"ದ್ವೈತಾದ್ವೈತಮತೇ ಶುದ್ಧೇವಿಶೇಷಾದ್ವೈತ ಸಂಜ್ಞಕೇ
ವೀರಶೈವ ಸಿದ್ಧಾಂತೇ ಸರ್ವಶ್ರುತಿ ಸಮನ್ವಯಃ"

ಇಂತೆಂದ ಶ್ರೀಕರಭಾಷ್ಯದುಕ್ತಿಯಂತೆ ಶಕ್ತಿವಿಶಿಷ್ಠಾದ್ವೈತ ಸಿದ್ಧಾಂತದ ಸಾರ ಸ್ವತ ಸತ್ವವ ಬೆಳಸುವ ಬಿಂಬವೇ ತಾನಾದ ದೇವದಾಸಮಯ್ಯಗಳ ನಿಲವೂ ಅಷ್ಟೇ ಸೊಬಗು. ದೇವಪದವು ತನಗರಿಯದಂತೆ ಮೊತ್ತಮೊದಲಿಗೆ ಆ ದೇವದೇವ ನಿರಾ ಮಯ ಅನಂತತೆಯತ್ತ ಸೆಳೆದೊಯ್ದು ಮಾನವನ ಮನವನ್ನು ಒಯಲು ನಿರ್ಭಯ ಲೊಲವಿನೊಳು ಒಂದು ಚಣ ಮೌನದೊಳದ್ದಿ ತೇಲಿ ಬಿಡಲೊಡನೆ ಕಂಗೊಳಿಪ ದಾಸ ಪದ, ಮುಂದೆಂದೂ ಮಾನವನ ಮೌನವಡರುವವರೆಗೆ ಇರಬೇಕಾದ ಇರುವಿನ, ಅರು ವಿನ, ನೆರವಿನ, ಪರಿವೆಯ, ದಾಸೋಹಂ ಭಾವ ನಿಲುಮೆಯ ನೆಲೆಯಾದ ನಲ್ಮೆಯ ನಿಲವು ತಾನಾಗಿಪುದು. ಪಂಡಿತ ಪಾಮರರಿಗೆ ಭಾವಪೂರಿತ ಅರಿವನಾಗಿಸಿಕೊಡುವ ಮಂತ್ರಪದ. ಈ ಮಹಾದಾಸ ಪಂಥವನ್ನೆ ನಂಬಿ ಆಗಿಹೋದ ಹಲವಾರು ಶ್ರೇಷ್ಠ ಮಹಿಮರು, ಜಗದ ಜನತೆಯಮೇಲೆ ಅಚ್ಚಳಿಯದ ಪ್ರಭಾವ ಬೀರಿಹರಾದರೂ ಅವ

ರೆಲ್ಲರ ಬುನಾದಿಯಾಗಿ, ಆ ದಾಸತ್ವವನೇ ಶಿರವಾಂತು ನಾವುದೊಳಿರಿಸಿ, ಅದರ ಸಾರ್ಥಕ ಸಮರ್ಥನೆಯ ಬಾಳಿನೊಳಳವಡಿಸಿ, ಕಾಯಕದೊಳು ಬಳಸಿ ಇಳೆಗೆಲ್ಲ ಸಾರಿ, ಪಸರಿಸಿ, ದಾಸನೇ ಈಶನಾಗುವ ಪೊಸಪರಿಯ ಚೈತನ್ಯತೆಯ ಅಂಕುರಿಸಿದ. ಸತ್ಯಶುದ್ಧ ಕಾಯಕದ ಕರೆಯಿತ್ತ ಮದಕರಿ, ಚಾರಿತ್ರಿಕ, ಐತಿಹಾಸಿಕ ಹಾಗೂ ಆಧ್ಯಾತ್ಮಿಕ, ಆದ್ಯ ವಚನ ವಾಂಗ್ಮಯ ಪ್ರವರ್ತಕ, ತವನಿಧಿಯ ದೇವರ ದಾಸಮಯ್ಯ ವಿಶ್ವದ ಮಹಾ ವಿಭೂತಿ ಪುರುಷರಲ್ಲೊಬ್ಬ.

ಮುಂದಿನ ೧೧ನೇಯ ಶತಮಾನದಾದಿಯ ಕಾರಣಿಕನ ಅಂತಿಮ ಅವತಾರವೇ ದೇವದಾಸಿಮಯ್ಯನವರು. ದಾಸಿಮಯ್ಯಗಳಿಗೆ ಅರಿವಿನ ಕಿಡಿಗೆದರಿದ ಗುರುಪರಂಪರೆಯವರ ಹಾಗೂ ಅಣ್ಣ ಬಸವಣ್ಣನ ಬಣ್ಣದ ಬಲ್ಪಿನ ಕ್ರಾಂತಿಗೆ ಹಿನ್ನೆಲೆಯ ಇಮ್ಮೇಳವ ನಾಡಿದ ಮಹಿಮರ, ಪರುಷ ಸೋಂಕಿನಿಂದ ಪ್ರಸಿದ್ಧವೆನಿಸಿಹ ಗೋಸಿದ್ಧಗಿರಿಯ (ಶ್ರೀಶೈಲ) ಐತಿಹಾಸಿಕ ಪೂಜ್ಯರ, ಧಾರ್ಮಿಕರ ಹಿರಿಮೆಗರಿಮೆಗಳ ಹಾಗೂ ಸಹಾಯಕ ಚಾರಿತ್ರಿಕ ವ್ಯಕ್ತಿಗಳಾದ ಜಯಸಿಂಹ, ಸುಗ್ಗಲೆಯರ ಪರಿಚಯಾತ್ಮಕ ಪಕ್ಷಿನೋಟವನಪೇಕ್ಷಿಸುವ.

ದ್ವಾದಶ ಜ್ಯೋತಿರ್ಲಿಂಗಗಳೊಲ್ಲೊಂದಾದರೂ ಮಲ್ಲಿಕಾರ್ಜುನ ನಡಿದಾವರೆಯ ದರ್ಶನ ಸ್ಪರ್ಶನ ಅರ್ಚನಾಕಾಂಕ್ಷಿತರಹ ಶ್ರೀಶೈಲ ಪರ್ವತಾರೋಹಿಗಳ ಕಣ್ಮನಗಳ ಮೊತ್ತಮೊದಲಿಗೆ "ನಗುರೋರಧಿಕಂ" ಎಂಬ ಹಿರಿಯರ್ನುಡಿಯ ಸಾದೃಷ್ಟತೆಯ ನಿರೂಪಮನೆ ಸುತ್ತಿನೆಲ್ಲ ಮಠಗಳ ದೇವಾಲಯಗಳ ನೆತ್ತಿಯಲಿ ನಿಂದಿಹ ಪಂಡಿತಾರಾಧ್ಯ ಪರಂಪರಾಗತ ಸೂರ್ಯಸಿಂಹಾಸನಾಧೀಶ್ವರರಾದ ಜಗದ್ಗುರು ಶ್ರೀ ಚಂದ್ರಗುಂಡರ ಮಠದ ಶಿಖರದ ಪುಣ್ಯದರ್ಶನ ಒಮ್ಮಿಂದೊಮ್ಮೆಗೇ ೯-೧೦ನೆಯ ಶತಮಾನಗಳ ಶರಣಯುಗದ ಗತವೈಭವದತ್ತ ಗತ್ಯಂತರವಿಲ್ಲದೆ ದೂಡಿ ಚಿತ್ಕಳಾಪ್ರಭೆಯ ಹೊಳವಿನ ಸುಳಹನರಿಯೆ ನೆರವಾದವರ ಭವ್ಯ ನೆಲೆಕಲೆಗಳ ಅವಿಚ್ಛಿನ್ನವಾದ ಅವಶೇಷಗಳ ಕುರುಹುಗಳತ್ತ ಹೊರಳಿ, ಕದಳಿಯ ಕಲಿಗಳ ಕರುಳ ಕರುಣೆಯ ಕರೆಯತ್ತ ನೆನೆನೆನೆದು ನಿಟ್ಟುಸಿರುಡುವಂತಾಗಿಸುವುದು.

ಶ್ರೀಶೈಲ ಸೂರ್ಯಸಿಂಹಾಸನಧೀಶರೂ ಕೀರ್ತಿಯಶೋವಂತರೂ ಸಮ್ಯಕ್ ಜ್ಞಾನಿಗಳೂ ಆದ ಶ್ರೀ ವಿರೂಪಾಕ್ಷ ದೇಶಿಕೇಂದ್ರರು ೯ನೆಯ ಶತಮಾನದಾದಿಯಲ್ಲಿಯೇ "ಸರ್ವವೇದೇಷುಯದ್ದೃಷ್ಟಂ ತತ್ಸರ್ವಂತು ಶಿವಾಗಮೇ" ಎಂಬ ವೀರಾಗಮ ಪ್ರಮಾಣದಂತೆ ಸರ್ವವೇದ ಸಮ್ಮತವಹ ಶೈವಸಿದ್ಧಾಂತವನುಕರಣೀಯತೆಯೊಳು, ಶಕ್ತಿ ವಿಶಿಷ್ಟಾದ್ವೈತವಹ ಲಿಂಗಾಂಗ ಸಾಮರಸ್ಯರೂಪ ಶಿವಜೀವೈಕ್ಯ ಪರಬ್ರಹ್ಮಸ್ವರೂಪ ವಿದ್ಯೆಯೊಳು ಅನನ್ಯರಮಣೀಯತೆಯ ನಿರ್ದಿಷ್ಟರೂಹಾದ ವೀರಶೈವದ ಕಮನೀಯತೆಯ ಜಗಕೆಲ್ಲ ಪಸರಿಸ ಸದಿಚ್ಛೆಯ ನಿಚ್ಚತದೆ ಕಾಶಿ, ಕೇದಾರ, ಕಾಶ್ಮೀರ, ನೇಪಾಳ, ಸೌರಾಷ್ಟ್ರ, ಮಹಾರಾಷ್ಟ್ರ ವಿಧರ್ಬಾಂಗ, ಕೋಸಲ, ಕಳಿಂಗ,

ಕೊಂಕಣ, ಚೋಳ, ಕರ್ಣಾಟಕಾಂಧ್ರಾದಿ ದೇಶವಿದೇಶಗಳ ಸಂಚರಿಸಿ, ಪರಶಿವ ಬ್ರಹ್ಮವೇ ಸ್ಥಳಾಂತರ್ಗತನೆನಿಸಿ ಚಿಚ್ಛಕ್ತಿ ವಿಶಿಷ್ಟ ಜೀವನಾದ ಅಂಗವು ಚಿಚ್ಛಕ್ತಿ ವಿಶಿಷ್ಟ ಪರಶಿವರೂಪಾದ ಲಿಂಗದೊಳು, ಶಿವಜೀವೈಕ್ಯರೆನಿಸುವ ಲಿಂಗಾಂಗ ಸಾಮರಸ್ಯವ, ಶಿವ ಜೀವರ ವಿನಾಭಾವದಿರವಿನ, ಷಟ್‌ಸ್ಥಲ ನಿರೂಪಣೆಯ ಕರುಣೆಯ ಕರುಣಿಸಿ, ಆ ನಿಲುವಿನ ನಲುವಿನೊಳು ಮಿಂದುನಿಂದ ಭಕ್ತರಪರಸಿ, ಯೋಗ್ಯ ಪ್ರತಿಭಾನ್ವಿತರ ನೇತೃತ್ವದೊಳಲ್ಲಲ್ಲಿ ಶಾಖೆಗಳ ಸ್ಥಾಪಿಸಿ, ಲಿಂಗದ ನೆಲೆಕಲೆಗಳ ಆಯತವನಾಗಿಸಿ ಕೊಳ್ಳುದರೊಳೆಲ್ಲರ ನಿರತರನ್ನಾಗಿಸಿ, ಜ್ಞಾನದಾಸೋಹವದು ಅವ್ಯಾಹತವಾಗಿ ನಡೆದೈತರುವಂತೆ ಸುವ್ಯವಸ್ಥಿತಗೊಳಿಸಿ, ನಿಷ್ಫಲ ಜ್ಯೋತಿಯ ಬೆಳಗಿಸಿ ವೀರಶೈವವ ಜನಾದರಣೀಯವನ್ನಾಗಿಸಿದರು. ಜಗ ಜಾಗೃತಿಯಾಗೆ ಚಾರ್ವಕರು, ಕಾಪಾಲಿಕರು ಪಾಶುಪತರು, ಬೌದ್ಧರು, ಜಿನಸಮಯಿಗಳು ವೈದಿಕರೆನ್ನದೆ ದೀಪ ಕೊಡುವ ಕ್ರಿಮಿ ಯಾಳಿಯಂತೆ ವೀರಶೈವದ ಪೂರ್ಣಯೋಗವಾದ ಶಿವಯೋಗದರುವ ನೀಡಾಡುವ ನೆಲೆಗಳನರಸಿ, ಧಾವಿಸಿ, ಉರಿಕಪ್ಪುರದೊಲು ಬೆರೆದು ಬೆರೆಗಾಗುವದರೊಳು ತತ್ಪರ ರಾದರು.

ಇಂತು ಶಕ್ತಿವಿಶಿಷ್ಟಾದ್ವೈತದ ವೈಶಿಷ್ಟ್ಯದ ಶ್ವೇತ ಪತಾಕೆಯ ಭಾರತಾದ್ಯಂತ ನಭಕ್ಕೆತ್ತಿ ಹಿಡಿದು ಹಿಂದಿರುಗಿದ ಶ್ರೀ ವಿರೂಪಾಕ್ಷದೇಶಿಕೇಂದ್ರರು (ನಿಜ ಚಂದ್ರ ಗುಂಡರು) ಚಂದ್ರನನ್ನು ಗುಂಡನನ್ನಾಗಿಸಿ ಆಹ್ವಾನಿಸಿದವರು. “ನರಲೋಕ ಸೂರಿಯರ್” ಎನೆ ಕೀರ್ತಿವೇತ್ತರೂ, ದಿವ್ಯದೃಷ್ಠಿಯೊಳು ಉತ್ತರಾಧಿಕಾರಿಯನರಿದು, ಸೂರ್ಯಸಾವ ರ್ಣಿಕಮನ್ವಾದಿಸುಧೀಪ್ರಣೀತ ಲಗ್ನದೊಳು ಸೂರ್ಯಸಿಂಹಾಸನವನೇರಿಸಿ, ಚಂದ್ರ ಗುಂಡನೆಂಬಭಿದಾನದಿಂದೆ ಹರಸಿ ಅವರ ದಿವ್ಯ ನೇತೃತ್ವದೊಳು ಶ್ರೀ ಶೈಲದೊಳು ಶಿವ ಯೋಗದ ಪ್ರಧಾನಕೇಂದ್ರವ ಪ್ರಥಮದೊಳು ಸ್ಥಿರಗೊಳಿಸಿ ಮಾರ್ಗದರ್ಶಕರಾಗಿ, ಕೆಲ ಕಾಲ ನಿಜಾನಂದದೊಳಿರ್ದು ನಿಜೈಕ್ಯರಾದರು.

ಅಪ್ರಾಕೃತ ಸದಾಚಾರಿ ಶಿವೋದಿತ ಶೈವ ಸಿದ್ಧಾಂತವರ್ಣಕ್ರಮಧರ್ಮಿ ವಿಶ್ವ ಸೂತ್ರಾಧಿಕಾರಿ, ಪರಮನ ಸೇವಿತನೂ ಹಾಗೂ ಬ್ರಹ್ಮಸೃಷ್ಟಿಗೆ ಪೂರ್ವದೊಳು ಪ್ರಣವಾತ್ಮಕನಿಂ ಪ್ರಣವಸ್ವರೂಪಿತನಾಗಿ ಪ್ರತಿಬಿಂಬಿಸಿದ ಶಂಕರನ ಸಮಾನ ಪ್ರತಿ ಭಾನ್ವಿತ, ಸರ್ವಜ್ಞ, ಸರ್ವಶಕ್ತಿಸಮನ್ವಿತ, ಜ್ಞಾನಾನಂದಮಯಮನಸ್ಕ, ಜಗತ್‌ಸೃಷ್ಠಿ ಸ್ಥಿತಿ, ಲಯಾದಿ ಸಮರ್ಥ ನಿರಂಕುಶಾ ಸತ್ವಶಾಲಿ ಮಹಾಪರಾಕ್ರಮಿ, ವೀರಭದ್ರ ಪ್ರಮಥನೇ ಪೀಠದ ಪೂಜ್ಯದೈವವಾಗಿ ಸೇವಿಸಿಕೊಂಡು, ಆ ಶಕ್ತಿ ವಿಶಿಷ್ಟಾ ದ್ವೈತ ಮಯಿಗಳಾದೀಶೈವರ ದಿಟ್ಟತನದ ಪರಾಶಕ್ತಿಯ ಒಲವಿಗೆ ನಲಿನಲಿದು, ತನ್ನ ವೀರ ತನದ ವೀರಪದವ ಧಾರೆಯೆರೆದು ವೀರಶೈವರೆಂದೆನಿಸಿ, ಭದ್ರಪದ ಭದ್ರತೆಯ ಒಲು ಹಿನ ಭದ್ರಕವಚವ ತನ್ನೊಳಿರಿಸಿ ಕಾದುಕುಳಿತಿಹ ವೀರಶೈವಕ್ಕದೆಂದಿಗೂ ಧಕ್ಕೆ ಸೋಂಕದಿರಲೆಂದು ವೀರಭದ್ರನಂಶವೇ ಬಸವಾದಿಪ್ರಮಥರ ಕಾಲದೊಳು ಮಡಿ

ವಾಳ ಮಾಚಿದೇವನ ರೂಪಾಗಿ ಅನೀತಿ ದುರಾಚಾರಿಗಳ ಖಂಡ ತುಂಡವಾಗಿ ಖಂಡಿಸಿ ಖಂಡಿತವಾದಿಯಾಗಿ ನುಡಿದು ನುಡಿದಂತೆ ನಡೆದು ಲೀಲೆಯಾಗಿಸಿದ ಕಲಿವೀರ ವೀರ ಮಡಿವಳ ಮಾಚಿತಂದೆ

೧. ನೇಪಾಳದ ರಾಜ ಇಂದೂ "ಕರ್ಣಾಟಕ ರತ್ನಸಿಂಹಾಸನಾಧೀಶ್ವರ"ನೆಂಬ ಪೆಸರ್ಯಿಂ ಮೆರೆದು ಪಶುಪತಿ ದೇವಾಲಯದರ್ಚನೆಯದು ವೀರಶೈವರಿಂದಲೇ ಪರಂಪರಾನುಗತವಾಗಿ ನಡೆದೈತಂದಿಹುದು ನಿದರ್ಶನವಾಗಿದೆ.

ನೈವೇದ್ಯಕೆ ತೆಂಗಿನಮರದ ಬಿಕ್ಷೆ ಬೇಡೆ ತಾ ಶಿರಬಾಗಿ ಫಲವನರ್ಪಿಸಿದ ಪವಾಡ ಕೇಳ್ದು ಚೋಳ ಭೂಪಾಲಂ (೧೧೧೨-೪೫) ಚಂದ್ರಗುಂಡದನಾಶ್ರಯಿಸಿ, ತನ್ನನುದಿನದ ಸೇವೆಯಿಂ ಸುಪ್ರೀತರನ್ನಾಗಿಸೆ. ಕೃಪೆಯಾಂತವರು, ಅವನ ಪ್ರಾಕೃತ ಬ್ರಹ್ಮಹತ್ಯಾ ದೋಷದ ವಿಷ್ಯ ದಿಟ್ಟಿಯೊಳ್ ತಿಳಿದಪನೆ ಪೊರಹೊಮ್ಮಿಸಿದರ್ ಗುರುವೆನೆ ರಾಜನಕರ್ಣದಿಂದೆ ದೋಷಮುಕ್ತನಾದವನ ಭಕ್ತಿ ನೂರ್ಮಡಿಸಿಸೆ ತತ್‌ಸ್ಥಳದಲೊಂದು ಭವ್ಯಮಂದಿರವ ನಿರ್ಮಿಸಿ ಸವಿನಯದಿಂ ಪ್ರಾರ್ಥಿಸಿದ ಗುರುಗಳ್, ಅವರ ನಿತ್ಯಲಿಂಗಾನಂದದಿಂ ಆ ನೆಲೆಯನಾವಗುಂ ಪವಿತ್ರಗೊಳಿಸಬೇಕೆನುತ. ಆನೆಲೆ ಗುಯ್ಯಲೂರೆನುತ (ಗೂಳೂರು) ಇಂದಿಂಗೂ ಪಂಡಿತಾರಾಧ್ಯ ಪೀಠ ಪರಂಪರಾನುಗತ ಕನಕ ಸೂರ್ಯ ಸಿಂಹಾಸನಾಧೀಶರುಗಳ ಜ್ಞಾನದಾಸೋಹದಿಂ ಶ್ರೀಗಿರಿಯ ಶ್ರೀಯ ಶ್ರೀಯು ಪ್ರಜ್ವಲಿಸುತ್ತಿದೆ. ಪೀಠದ ಕರಿಬಸವರಾಜೇಂದ್ರರೊಮ್ಮೆ ಒಣಗಿದ ಮಾಮರದ ಚಿಗುರಿಸಿದ ಪವಾಡದಿಂ ಆ ನೆಲೆಯದು "ನೀಡುಮಾಮಿಡಿ" ಎಂದ ಪರುಷ ನುಡಿಗಳನೇ ಪೆಸರ್ಯಿಂ ಪೈಯಾಂತು ಗಿರಿಯ ಕೆಲದಿ ತೊರೆಯ ದಡದಿ, ಬನದಬಸಿರ ರಮ್ಯದಿ ನಿಡುಮಾಮಿಡಿ ಎನಿಸುತೆ, ಅಲ್ಲಿಹ ವೀರಭದ್ರ ವೀರಶ್ರೀಯ ಭವ್ಯಮಯ ಭಾವ ಭಂಗಿಯ ನೀಕ್ಷಿಸೆ ಸನ್ನೆಗೈಯುತಿದೆ. ಇಂತು ಶ್ರೀಶೈಲ ಪೀಠವುದು ನಡೆತಂದು ನೆಲೆಗೊಂಡುದೀನಾಡಿನಲಿ ಕರುನಾಡ ಗಡಿಯಲಿ.

ಪೀಠದ ನಿರ್ದೇಶದ ಸಾರೂಪ್ಯವೆನೆ ಜಗದ್ಗುರು ಶ್ರೀ ಚನ್ನಬಸವರಾಜ ದೇಶಿಕೇಂದ್ರರು ಹಿನ್ನೆಲೆಯವರ ಧ್ಯೇಯಗಳ ಹಿಂದುಳಿಸದೆ ಅವಕ್ಕೆಲ್ಲ ಒಪ್ಪವಿಡುತಲೇ ನಡೆದಿಹರು. ಶರಣ ಸಾಹಿತ್ಯದೇಳಿಗೆಯ ದುಡಿಮೆಯ ಕಾಯಕವನಾಗಿಸಿಕೊಂಡಿರುವ ಇವರು ಶಿವಸುಂದರ ಷಟ್‌ಸ್ಥಲಾತ್ಮಕವಹ ಶಿವಯೋಗದ ನೂರೊಂದರರವಿನಾಧಾರದ ಶಿವಯೋಗಿ ಶಿವಾಚಾರ್ಯ, ದೇವರದಾಸಮಾರ್ಯರ, ಬಸವಾದಿ ಪ್ರಮಥರ ಸದುಕ್ತಿಗಳ ಸಜೀವಗೊಳಿಸಿ ತಮ್ಮದೇ ಶೈಲಿಯೊಳು ಸಹಸ್ರವರ್ಷ ಸ್ಮಾರಕವೆನೆ ಮಣಿಕಾಂತಿ, ವಚನಮುಕುರ, ದಾಸಮಾರ್ಯ ಪ್ರಶಸ್ತಿಯಾದಿ ಕೃತಿಗಳಲ್ಲಿ. "ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ : ಸಹಸ್ರಪಾತ್, ಸಭೂಮಿಂ, ವಿಶ್ವತೋವೃತ್ವಾ, ಅತ್ಯತಿಷ್ಠದ್ದಶಾಂಗುಲಂ" ಇಂತಿಹ ವಿರಾಟನ ಕರಸ್ಥಲದ ಜ್ಯೋತಿರ್ಮಯಿಸಿಸಿದವರ ವಚನವಾಗ್ಮಯದಿಂ ಜನತೆಯ ನವ್ಯಾರುಣೋದಯಕೆ ಕಾಣಿಕರು ನಮ್ಮೊಳಿಹುದೆಮ್ಮ

ಭಾಗ್ಯೋದಯಮೇ ಸರಿ. ಜಯಸಿಂಹ (೧೦೧೫-೧೦೪೨) ರಾಜ ಜಿನ ಸಮಯಿಯಾದರೂ "ಮಲ್ಲಿಕಾಮೋದ" ಬಿರುದಾಂಕಿತ ಪ್ರೌಢ ಶೈವಸಂಸ್ಕೃತಿಯ ಹಿನ್ನೆಲೆಯ ಹಿಂಗಿಸದಂತಾಗಿಸಿದೆ. "ಜಯಸಿಂಹಕ್ಷಿತಿಪಾಲಂಗೆ ಜಗಮೆಲ್ಲ ಬಣ್ಣಿಸಲ್ ಪೊಣ್ದು ಭಾಷೆಯ ಸುಗ್ಗಲದೇವಿಗೆ ಕೊಟ್ಟ ತೆರದಿಂ" ಎಂಬ ಶಾಸನವ ಪರಿಕಿಸಿದು ಸಿರಿಜೌವನದ ಶಿವಸಂತಸದ ಸೊಬಗಿಗೆ ಶಿವರತಿಯೊಸಪ್ಪವಿಟ್ಟಂತಿರ್ದ ಸುಗ್ಗಲೆಯ ಕಂಡು ಸುಪ್ತವಾಗಿರ್ದ ಸಂಸ್ಕೃತಿಗೆ ಚೈತನ್ಯವಂಕುರಿಸೆ, ಅವಳೊಳನುರಕ್ತನಾಗಿ ಆಕೆಯ ಪೂಜಾ ಸ್ವೇಚ್ಛೆಯ ಭಾಷೆಗೆ ತಲೆದೂಗಿ ಕೈಹಿಡಿದುದರೊಳು ಸಂಸ್ಕಾರದ ಹಿನ್ನೆಲೆಯ ಸ್ಫುರಣದ ಸಮಾವೇಶನದ ಸ್ವೈಪ ಪೆಂಪಾಗಿಸಿದೆ. ಅನ್ಯಮತ ಸಹಿಷ್ಣುತೆಯು ಸ್ಫೂರ್ತಿಗೊಡುತಿದೆ. ಆ ಹಿನ್ನೆಲೆಗೆ ಕಾರಣವಾಗೆ ದಾಸಮಯ್ಯಗಳು ಸಂಪರ್ಕದಿಂದ ಅವರ ನಿಜ ನಡೆನುಡಿಗಳ ಅನುಭವದ ಸಹಜತೆಗೆ ಮನವೊಲಿದು ಶಕ್ತಿವಿಶಿಷ್ಟಾದ್ವೈತದ ನಿಚ್ಚೈರಗ ನಿಜಾನಂದದೊಲವಿನೊಳು ಮಿಂದು ಬಯಲನಿರ್ಭಯಲೊಳಗಿನ ಬಟ್ಟಬರಿಯ ಜೆಳಗಿನೋಲಾಡಿ ಕಂಕಣಕಟ್ಟಿ ದಾಸೋಹದೊಳು ನಿರತನಾಗಿ ಶಿವೋಹಂ ಭಾವದೊಳು ಬೆರೆದು ಬೇರಾಗುವುದನರಿಯೆ ಶರಣಿಕ್ಕಿ ವೀರಶೈವಧರ್ಮವ ಗ್ರಹಿಸಿದುದೊಳೇನು ಆಶ್ಚರ್ಯ? ಉತ್ತರಾಧಿಕಾರಿಯಹ ಕುವರಂಗೆ ಸೋಮೇಶ್ವರನೆಂಬ (ತ್ರೈಲೋಕ್ಯಮಲ್ಲ ೧ನೇ ಸೋಮೇಶ್ವರ) ಪೆಸರಿಟ್ಟದ್ದು ನಿದರ್ಶನಮಲ್ತೆ ಅನನ್ಯಭಕ್ತಿಗೆ.

**ಬ್ರಹ್ಮಶಿವ** :— ಅಣ್ಣ ಬಸವಣ್ಣನವರಿಗಿಂತ ೩೦ ವರ್ಷ ಈಚಿನವ. ೪ನೇ ಸೋಮೇಶ್ವರನ (ಚಾಲುಕ್ಯ ಅರಸು ೧೧೮೪-೧೨೦೨) ಸೋದರ ಕೀರ್ತಿವರ್ಮನ ಕೆಳೆಯ, ಆಸ್ಥಾನ ಜೈನಕವಿ, ತನ್ನ ಸಮಯ ಪರೀಕ್ಷೆಯಲ್ಲಿ ೬೩ ಮಂದಿ ಪುರಾತನರ ಸಿರಿಯಾಳನೊಂದಿಗೆ ಸೇರಿಸಿ ಬ್ರಹ್ಮಶಿವನಿಗೆ ಶರಣರ "ಸೂಳ್ನುಡಿಯುರಘಳಿಗೆ ನಿಮ್ಮನಿತ್ತೆ" ಎಂದಿಹ ದೇವದಾಸಮಯ್ಯನು ದ್ವಿತೀಯ ಶಂಭು ತಾನಾದ. ಅಣ್ಣ ಬಸವಣ್ಣನ ನೆನೆಯದಂತಹ ಲೋಭಿಯವನಲ್ಲವೆಂಬುದು ಸ್ಥಿರವಾಗಿರಬೇಕು. **ದೇವರ ದಾಸಮಯ್ಯ**—ಪಂಡಿತಾರಾಧ್ಯರ ಪಾಂಡಿತ್ಯವ ಪ್ರೈಯುಣಿಸಿಕೊಂಡ ತನ್ನನುಭವದ ಹಿರಿಯರ ಅನುಭವಗಳ ಒರೆಗಲ್ಲಿನೊಳು ಒರೆಯಿಡುತಿರ್ದವನು. ಹಿನ್ನೆಲೆಯ ಜನ್ಮಗಳು ಸಾಹಿತ್ಯ ಸಂಗ್ರಾಮದೊಳು ತನ್ನಳವಿಗೆ ನಿಲುಕಿದ ನಿಲುಕಡೆಯ ಸಾಧ್ಯವೆನಿಸಿದಷ್ಟು ಗ್ರಂಥಗಳಿಂದ ಚಿರಸ್ಮರಣೀಯರಾದಂತೆ ತಾವೂ ಗುರುಸ್ತೋತ್ರ, ಅಂಬಾಸ್ತುತಿ ಪಂಡಿತಾರಾಧ್ಯಚರಿತಂ ಏಕೋವಿಂಶತಿ ಸದ್ದೀಕ್ಷಾವಿಧಿರ್ಲಕ್ಷಣ ನಿರ್ಣಯ, ಶೃಂಗಾರ, ನಿರ್ಣಯ ತಂತುಸೂತ್ರ, ಶೈವಸಿದ್ಧಾಂತ ವಿಭುಶಿಖಾರತ್ನಂ, ಮೂಲಸ್ತಂಭನ ಭಾಷ್ಯ, ವೀರಾಗಮವ್ಯಾಖ್ಯೆ, ಶೈವಾಗಮಾದಿ ಈರೇಳು ಗ್ರಂಥಗಳ ರಚಿಸಿ ಜಗದ್ವಂದ್ಯರಾಗಿಹರು. ಇವೆಲ್ಲ ಪ್ರಕಾಶವಾದಂದು ನಾವೇ ಧನ್ಯರು. ಇಂತು ಉಭಯ ಕವಿತಾವಿಶಾರದರಹ ಇವರಿಗೆ ಶಿವಯೋಗಿ ಶಿವಾಚಾರ್ಯರ ಸಿದ್ಧಾಂತ ಶಿಖಾಮಣಿಯ ಪರಿಚಯ

ಸಾಕಷ್ಟಿದ್ದುದಕೆ ಅವರ ವಚನಗಳೇ ಸಾಕ್ಷಿ. ಇದರಾಳದಭ್ಯಾಸ ಅವರ ಮುಂದಿನ ಕ್ರಾಂತಿಗೆ ಸ್ಫೂರ್ತಿ ಕೊಟ್ಟಿರಲೇನು ಸಂದೇಹವಿಲ್ಲ. ಸಿದ್ಧಾಂತ ಶಿಖಾಮಣಿಯ ಸಾರವನೇ ವಚನಮಾಲೆಯಾಗಿಸಿ ವಚನ ಸಾಹಿತ್ಯದ ವೈಶಿಷ್ಟತೆಗೆ ನವ್ಯತೆಯ ರೂಪಿಟ್ಟು ಮುಂಬಹ ಶರಣ ಸಂಕುಳಕೆಲ್ಲ ಅವರವರ ಅನುಭವಗಳ ಜನ ಸಾಮಾನ್ಯರ ನಿಲುಕಿಗೂ ನಿಲುಕುವ ಸರಸ ಶೈಲಿಯೊಳಿರಿಸುವಂತೆ ಅಡಿಗಲ್ಲ ಸೇವೆಯೆಸಗಿದ ಕಾರಣಿಕ, ಶರಣ ಶಿರೋಮಣಿ, ಕಾಯಕಯೋಗಿ, ಕ್ರಾಂತಿಕಾಂತಿ, ಅಸ್ಪೃಶ್ಯೋದ್ಧಾರಕ, ತರತಮ ತಿಮಿರನಾಶಿನಿ, ಸ್ತ್ರೀ ಸ್ವಾತಂತ್ರ್ಯೋದ್ಧಾರಕ, ಷಟ್‌ಸ್ಥಲ ವಾಙ್ಮಯನಿರ್ಮಾತೃ, ಷಟ್‌ಸ್ಥಲ ಬ್ರಹ್ಮ ಗೃಹಸ್ಥಾಶ್ರಮಿ, ತಪನಿಧಿಯ ದಾಸಮಯ್ಯಗಳು ನಿಜಕ್ಕೂ ವಚನ ವಾಙ್ಮಯಕ್ಷೇತ್ರವಸಿಧಿಯಾಗಿ ಬಾಳಿ ಬೆಳಗಿದ ಚಿಜ್ಯೋತಿಯೆನೆ ಅದೊಂದು ಹೆಮ್ಮೆ. ಘನಕ್ಕೆ ಘನವಾಗಿಪನ ಅಘಟಿತಘಟನ ಅನುಭವದ ಮೂಸೆಯೊಳು ಪುಟವಾಗಿಸಿ ಎರಕಹೊಯಿಸಿ, ಅವನ ಸಚ್ಛಂದ ಸಹಜತೆಯ ಸಾಗರದಷ್ಟು ನಿರ್ಮಿಸಿ, ಸಾಗರದೊಳು ತಳ್ಳಿ, ಸಾಗರದಳಲಿನಿಂದಾ ಸ್ವಾತಿ ಮುತ್ತುಗಳ ಕಂಗೊಳಿಸದೇ, ಸ್ವಾನುಭವ ಸ್ವಾತಿ ಕಾಂತಿಯ ಕೈಗಿತ್ತಿಹ ೧೫೩ ವಚನಮಣಿಗಳವು ಸಾಲವೇ ಅರಿಯಲ್ಕೆ ? ಹಿನ್ನೆಲೆಯ ಸಂಸ್ಕಾರ ವಿಶೇಷದಿಂದೆ ಹುಟ್ಟು ಸಾವಿನೊಡನೆ ಎಳದೈತರುವಂತೆ, ಹುಟ್ಟಿಗಂಟಿಹ ಸಾವಿನ ಸಮಸ್ಯೆಯ ಭೇದಿಪ ಭಕ್ತಿಯ ಬಿರಿದು ಜನ್ಮತಾಳಿದರು. ಮೇಲಾಗೆ ಶರ್ವನಾಶೀರ್ವಚನ ಮಂಗಳವೂ ಪೈಗಾವಲಾಗಿರ್ದುದು. ಇಂತಪ್ಪ ಈಶನ ಮೀಸಲ ಭಕ್ತ ಭಕ್ತಿಯ ಭರದಾವೇಶದೊಳು ಸೃಷ್ಟಿಕರ್ತನ- ನಿರವ ಅನಂತತೆಯ ಅನುಸೂತಶೀಯುತೆಯ ಕಾಂಬ ದೃಷ್ಟಿಕೋನ ಅವಂಗೇ ಸಲ್ವುದು. ಆ ಸೊಬಗು ಆ ಸೊಗಸು. ಆ ನುಡಿ ಬೆಡಗಿಗೆ ಅವರ ವಚನವೇ ಸಾಕ್ಷಿ.

“ಸೂತ್ರೇ ಮಣಿಗಣಾ ಇವ” ಎಂಬ ಶೃತಿ ಪ್ರಮಾಣ್ಯವ ಅರಿತವರ ಅರಿವಿನೊಳಿ ಮರೆಯಾಗಿ ಕಣ್ಮರೆಯಾಗುವ ಬೊಮ್ಮಯ್ಯ ಸೂತ್ರಾಗಿರ್ದ ಗೀರ್ವಾಣೋಕ್ತಿಯ ಕಬ್ಬಿಣದ ಕಡಲೆಯ, ಮೆಲಲಿತ್ತಾಗ ಅದೇಸು ಜನ ಮುಂಬಹರು ಅಗಿದು ಅರಗಿಸಿ ಕೊಳ್ಳೆ ಆ ಭಾವವನ್ನೀ,

“ಮಣಿಗಳ ಸೂತ್ರದಂತೆ ತ್ರಿಣಯನೇ ನೀನಿಪ್ಪೆಯಯ್ಯಾ
ಎಣಿಸುವೊಡೆ ತನು ಭಿನ್ನ; ಆತ್ಮನೊಬ್ಬನೇ
ಅಣುರೇಣು ಮಧ್ಯದಲಿ ಗುಣಭರಿತ ನೀನೆಂದು
ಮಣಿವೃತಿಷ್ಠೆಸೈಯಾ ರಾಮನಾಥ”

ಇಂತೆಂದು ಈಶ್ವರ, ಜಗತ್ತು, ಜೀವರ, ನಿಕಟತೆಯ ಅವಿನಾಭಾವ ಸಿಗೂಢತೆಯ, ನಿರ್ಧರದೆ ಅರಿದವರು ತಲೆದೂಗುವಂತೆ, ಅರಿಯದವರ ಮನಮುಟ್ಟುವಂತೆ, ಸಲ್ಲಲಿತ ಪದ ಸಲಿಲೋದಕದಂತಿಹ ಬೆಣ್ಣೆಯ ಕನ್ನಡದ ಕನ್ನಡಿಯೊಳು, ವಚನ ವೈಖರಿಯ ಚಲುವ ಚಿಮ್ಮ, ಬಿಂಬವ ಮಾಡಿಸಿದ ಚೆಲ್ವಡಿಯ ಚನ್ನಿಗ ವಚನದಾಸೋಹಿ

ದಾಸಮಯ್ಯಗಳ ಅಮೃತಮಯ ವಾಣಿಯ ಒಲುವಿಗೆ ಮಣಿಯದೇ, ಒಲುಹಿಗೆ ನಿಲುಕದೇ ಆ ನಿಬ್ಬಾಣ ನಿಃಕ್ರಿಯೆಯ ನಿರವಯಲಿನೊಳು ನಲಿಯುಲಾಸಿಸದಿಹರೂ ಇಹರೇ ಲೋಕದೊಳು.

ಭಕ್ತಿಯದೆನಿತು ಬಿಮ್ಮನೇ ಬೀಸಿ ಬಿಗಿದಿದ್ದರೂ, ಭಕ್ತಿಯ ಕೊರಡಿಂಗೆ ಗುರು ಕಾರುಣ್ಯದ ಕಿಚ್ಚು ತಾಗಿದಲ್ಲದೆ ಜ್ಯೋತಿಯದು ಪ್ರಕಟವಾಗದೆಂಬುದಕ್ಕೆ "ಘಟದೊಳಗೆ ತೋರುವ ಸೂರ್ಯನಂತೆ ಸರ್ಪರಲಿ ಅವನ ಚೈತನ್ಯವಿಪ್ಪುದು. ಇದ್ದರೇನು ಸರ್ಪರಿಗೆ ಸಾಧ್ಯವಿಲ್ಲ. ಮುಟ್ಟೀ ಮುಟ್ಟದು. ಅದ ಕೂಡವರೆ ಗುರುವಿನಿಂದಲ್ಲದಾಗದು ಕಾಣಾ ರಾಮನಾಥ" ಎಂಬ ಅನುಭವದ ವಚನ ಸಾಕ್ಷ್ಯವೀವುದು.

ಪ್ರಾಕೃತಾತ್ಮ ಗುರೂಪದೇಶ ದಿಶೆಯೊಳ್ ಧಾವಿಸಿ, ಸಾತ್ವಿಕದ ತೌರೆನಿಸಿ ನೀರಡಿಸಿದವನಂತೆ ಚಿದಾನಂದದೊಳ್ ಚಿತ್ತ ಸ್ಥಿರೀಕರಣ ಶೀಲವಂತನಾಗಿ, ಲಿಂಗಪತಿಯ ಅನನ್ಯ ಚಿಂತನೆಯೋಳಿಹ ಯಾ ಶರಣ ಸತಿಯ ನಿಲವ "ಬಯಲ ಬಣ್ಣವ ಮಾಡಿ, ಸ್ವಯವ ನಿಲವ ಮಾಡಿ ಸುಳಿವಾತನ ಬೆಡಗ ಬಲ್ಲವರಾರೈ ರಾಮನಾಥ" ಎಂದು ಸ್ವಸರೂಪ ದಾರ್ಶನಿಕನ ಬೆಡಗನಾರೈಯೆ ಪರಿಣಾಮಿಗಳಿಗಲ್ಲದೆ ಸಲ್ಲದೆಂದು ಭಾವಗರ್ಭಿತವಾಗುಸುರಿಹರು.

ಶರಣಸತಿ—ಲಿಂಗಪತಿಯ ಅವಿನಾಭಾವ ಸಂಪತ್ತಿಯ "ತನ್ನನಳಿದು ಘನವ ನೋಡಲದೇಕೆ. ತಾನೇ ಘನವೆಂದರಿದಡೆ ಸಾಲದೇ" ಎನ್ನುವಲ್ಲಿ ವೀರಶೈವಸಿದ್ಧಾಂತವನೆಲ್ಲ ಅಡಗಿಸಿ ವಾದ ವಿವಾದಗಳಿಗೆಡೆಯಿಲ್ಲದಂತಾಗಿಸಿ" ಬಿಂದುವಿನೊಳಗೆ ನಾದ ಹೊಂದಿರ್ದ ಭೇದವನು, ಹೊಂದಿಯೂ ಹೊಂದದಿರ್ದ ಭೇದವನು ಲಿಂಗದೊಳಗೆ ಶರಣ ಸಂದಿರ್ದ ಭೇದವನು, ಲೋಕದ ಸಂದೇಹಿಗಳೆತ್ತ ಬಲ್ಲರೈ ರಾಮನಾಥ" ಎಂದು ಸತಿಪತಿ ಭಾವನೆಯ ಭೇದಾಭೇದಗಳ ಭೇದಿಸಿಹ ಭಂದುರತೆಯನಾದದಷ್ಟೇ ನಾವೀನ್ಯತೆಯೊಳು ನಿರೂಪಿಸಿ, ಯಾ ಶರಣನ ನೆಲೆ " ಅಡವಿಯುಂಗಡಿಯಕ್ಕು ನಡುಗಡಲು ನೆಲೆಯಕ್ಕು ತೊಡಕುವ ಮಾರಿ ಮೃತ್ಯುಗಳು ಶಿವಭಕ್ತರ ಒಡಲು ನಿನ್ನೊಡಲೆಂದು ಮುಟ್ಟಲಮ್ಮವು ಕಾಣಾ ರಾಮನಾಥ"ನೆನುತ ಮೃತ್ಯುವನಾಚಿಸಿ ದೂರದೊಳಿರಿಸಿಹ ಧೀರ ಶರಣ.

ಪ್ರಾಣಲಿಂಗಾನುಸಂಧಾನಿ ಶರಣಸತಿ, ಲಿಂಗಪತಿಯ ಸುಖಾತಿಶಯದೊಳು ತನ್ನ ತಾ ಮರೆದು ಕ್ರಿಯಾಕ್ರಿಯ ಬಾಹಿರನಾಗಿ ಶಿವೋಹಂ ಭಾವದೊಳು ಶೂನ್ಯ ತಾನಾಗಿ ಬೆರೆಯುತಿಹ, ನಿರತಿಶಯ, ನಿರವಯಲ ನಿಜಸ್ಥಿತಿಯ ಐಕ್ಯನಿರವ "ನಿಡಿದೊಂದು ಕೋಲನು ಕಡಿದು ಎರಡು ಮಾಡಿ ಅಡಿಯ ಹೆಣ್ಣುಮಾಡಿ, ಒಡೆತನವ ಗಂಡುಮಾಡಿ ನಡುವೆ ಹೊಸೆದಡೆ ಹುಟ್ಟುವ ಕಿಚ್ಚು ಹೆಣ್ಣೊ ಗಂಡೋ ರಾಮನಾಥ ? ಎಂದು ಅಂಗ ಲಿಂಗಗಳು ಲಿಂಗಾಂಗವಾಗಿ ಕ್ರಿಯಾಜ್ಞಾನಗಳ ಮೈಥುನದಿಂದ ಕಿಚ್ಚು ತಾ ಪ್ರಾದುರ್ಭವಿಸಿ ಏನೊಂದಿಲ್ಲತಂತಾಗಿ ಉರಿಕಪ್ಪುರದ ತೆರದಿ ಶೂನ್ಯ, ನಿಶೂನ್ಯ

ದೊಳು ಬೆರೆವ ಬೆರಗಿನ ಪರಿಯು ಆಡಬಾರದ ಬಯಲು ನೋಡಬಾರದ ಬಯಲನು ನುಡಿಯಬಾರದ ಬಯಲು ಹಿಡಿಯಬಾರದ ಬಯಲು ಈ ಒಡಲಿಲ್ಲದ ಬಯಲೊಡಗಿಪ್ಪ ಭೇದವ ಈ ಲೋಕದ ಜಡರೆತ್ತ ಬಲ್ಲರೈ ರಾಮನಾಥ" ಎಂಬ ಐಕ್ಯಸ್ಥಲ ನಿರೂಪಣೆಯ ಪೂರ್ಣಯೋಗ ತುಂಬು ನೋಟದ, ಕೂಟ ಬೇಟವ ತುಂಬಿಹೆನು.

ಗರ್ಭದ ಪಿಂಡ ಮೊದಲಾಗಿ ಸಂಸ್ಕಾರ ಬೆಳಸಿಕೊಂಡು ಎಳೆಯೊಳೆ ಕ್ರಿಯೆಯೊಳಿರಿಸಿ, ಸಮಯವರಿತು ಕ್ರಿಯೆಯ ಜ್ಞಾನದೊಳು ಜನ್ಯಮಾಗಿಸಿ ಕ್ರಿಯಾಪ್ರಾಧಾನ್ಯವಹ ಭಕ್ತ, ಮಹೇಶ, ಪ್ರಸಾದಿ ಸ್ಥಲಗಳ ದೀಕ್ಷೆಯಿಂ ಯೌವನ ವೈಕರಿಸಿ, ಜ್ಞಾನಪ್ರಾಧಾನ್ಯವಹ ಪ್ರಾಣಲಿಂಗಿ, ಶರಣ ಐಕ್ಯಸ್ಥಲಗಳ, ಸಾಧಿಸಿ ಕ್ರಿಯಾಜ್ಞಾನ ಸಮುಚ್ಚಯದಿಂದೆ ಮುಪ್ಪುರದಾದ್ಯಂತ ಮುಪ್ಪುರಿಗೊಳ್ಳುವದರೊಳೆ ಮೀಸಲಾಗಿಸುವಂತೆ, ಪರಿಣಮಿಸುವ ವೀರಶೈವ ಸಿದ್ಧಾಂತವ ಕನ್ನಡದಿ ಕನ್ನಡದ ಜನಮನಕಿತ್ತ ವಚನಪಿತ ದಾಸಮಯ್ಯ ನಿಜ ದಾಸೋಹಿ ತಾನಲ್ತೆ. ಷಟ್‌ಸ್ಥಲದ ಮಹದರಿವ ಕನ್ನಡಿಗರ ಸುಸ್ಥಿರದ ಆಸ್ತಿಯ ಸಂಪಾದಿಸಿಕೊಟ್ಟವರಲ್ಲಿ ಅಗ್ರಸ್ಥ ಗದ್ದುಗೆಯೊಡೆಯನಾಗಿ ಮೆರೆದವನೆಂದರೆ ದಾಸಮಯ್ಯಂಗೇ ಮೀಸಲಾದುದು.

---::---

# ಭಗವದ್ಗೀತಾ



**ಶ್ರೀ ಎಸ್. ಕೃಷ್ಣಮೂರ್ತಿಶಾಸ್ತ್ರಿ**, ಸಂಸ್ಕೃತ ಪಂಡಿತ,
ಸರ್ಕಾರಿ ಹೆಣ್ಣುಮಕ್ಕಳ ಶಾಲೆ, ಬೆಂಗಳೂರು.

ಯಂ ಬ್ರಹ್ಮಾವರುಣೇಂದ್ರ ರುದ್ರಮಾರುತಃ ಸ್ತುನ್ವಂತಿ ದಿವ್ಯೈಃಸ್ತವೈಃ |
ವೇದೈಸ್ಸಾಂಗಪದಕ್ರಮೋಪನಿಷದೈಃ ಗಾಯಂತಿ ಯಂ ಸಾಮಗಾಃ |
ಧ್ಯಾನಾವಸ್ಥಿತ ತದ್ಗತೇನ ಮನಸಾ ಪಶ್ಯಂತಿ ಯಂ ಯೋಗಿನಃ |
ಯಸ್ಯಾಂತಂ ನ ವಿದುಃ ಸುರಾಸುರಗಣಾಃ ದೇವಾಯ ತಸ್ಮೈನಮಃ ||

ಗೀತಾ = ಎಂದರೆ ಹಾಡು. ಭಗವತಃ + ಗೀತಾ = ಭಗವದ್ಗೀತಾ. ಭಗವಂತನ ಹಾಡು. ಗೈ + ಶಬ್ದೇ ಎಂಬ ಧಾತುವಿನಿಂದ ಆದ ರೂಪ 'ಗೀತಾ' ಎಂಬುದು. ಗೀತಾ ಪುರಾಣಾಂತರ್ಗತ ಗ್ರಂಥವಾದರೂ ಪೂರ್ಣ ಪುರಾಣವಲ್ಲ. ಪುರಾಣಗಳಿಗಿರಬೇಕಾದ ಪಂಚಲಕ್ಷಣಗಳಿದಕಿಲ್ಲ. ಮೊದಲಿನಲ್ಲಿ ಪುರಾಣ ವಿಚಾರವಾಗಿ ನಾಲ್ಕು ಮಾತುಗಳು. ಪುರಾ + ಅಣತೀತಿ = ಪುರಾಣಂ.

"ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ |
ವಂಶಾನುಚರಿತಂ ಚೇತಿ ಪುರಾಣಂ ಪಂಚಲಕ್ಷಣಂ "

ಎಂದು ಪುರಾಣಲಕ್ಷಣ. ಹದಿನೆಂಟು ಪುರಾಣಗಳಿವೆ. ಇವುಗಳನ್ನೆಲ್ಲಾ ವ್ಯಾಸರೇ ಬರೆದರೆಂದು ಪ್ರತೀತಿಯಿದೆ. ಈ ಪುರಾಣಗಳಲ್ಲಿ ಸೃಷ್ಟಿಕ್ರಮ, ಹಿಂದಿನ ಕಥೆ ಭಗವಂತನ ಅವತಾರ ಕಥೆಗಳೂ ಉಕ್ತವಾಗಿವೆ ಈ ಲಕ್ಷಣವು ಗೀತೆಯಲ್ಲಿಲ್ಲ. ಇವುಗಳಲ್ಲದೆ ಶ್ರೀ ರಾಮಾಯಣ, ಶ್ರೀ ಮಹಾಭಾರತ ಮುಂತಾದ ಇತಿಹಾಸಗಳೂ ಇವೆ. ಇವುಗಳೆಲ್ಲಾ ನಡೆದ ಕಥೆಗಳು. ಪುರಾಣ ಪದಕ್ಕೆ ಪ್ರಾಚೀನವೆಂತಲೂ ಅರ್ಥವಿದೆ. ಪ್ರಾಚೀನವಾದುದೆಲ್ಲ ಪ್ರಶಸ್ತವಾದುದೆಂಬ ಪ್ರವಾದವೂ ಇದೆ. ಈ ಪ್ರವಾದವಲ್ಲಿ

ಹುದಿಲ್ಲ. ಒಳಿತು ಕೇಡುಗಳ ತೀರ್ಮಾನಕ್ಕೆ ಕೇವಲ ಕಾಲವೊಂದೇ ಕಾರಣವಲ್ಲ. ಗುಣಾಗುಣಗಳೂ ಕಾರಣ :

ಪುರಾಣ ಮಿತ್ಯೇವ ನ ಸಾಧು ಸರ್ವಂ ನಚಾಪಿ ಕಾವ್ಯಂ ನವಮಿತ್ಯವದ್ಯಂ ।
ಸಂತಃ ಪರೀಕ್ಷ್ಯಾನ್ಯತರದ್ಭಜಂತೇ ಮೂಢಃ ಪರಪ್ರತ್ಯಯನೇಯ ಬುದ್ಧಿಃ ॥

ಎಂಬ ಕಾಳಿದಾಸನ ವಾಣಿಯಂತೆ ಪುರಾಣವೆಂದ ಮಾತ್ರಕ್ಕೆ ಎಲ್ಲವೂ ಸಾಧುವಲ್ಲ. 'ನವೀನ' ಎಂದ ಮಾತ್ರಕ್ಕೆ ದೋಷ ದೂಷಿತವಾದುದಲ್ಲ. ಸಂತರು ಪರೀಕ್ಷಿಸಿ ಶುದ್ಧವಾದುವನ್ನು ಸ್ವೀಕರಿಸುತ್ತಾರೆ. ಮೂಢನು ಪರರ ಮಾತನ್ನೇ ಅಂಗೀಕರಿಸತಕ್ಕವನು.

ಆದುದರಿಂದ ಗೀತೆಯು ಪುರಾಣವಲ್ಲ ಎಂದಮಾತ್ರಕ್ಕೆ ದೋಷಪೂರಿತವಲ್ಲ. ಇದರಷ್ಟು ಉತ್ತಮವಾದ ಗ್ರಂಥವೇ ಮತ್ತೊಂದಿಲ್ಲ.

## ಮಹಾಭಾರತ

"ಮಹತ್ವಾತ್ ಭಾರವತ್ತ್ವಾಚ್ಚ ಮಹಾಭಾರತಮಿಷ್ಯತೇ" ಎಂಬ ಉಕ್ತಿಯಿಂದ ಮಹಾಭಾರತವು ಗುರುತರವಾದದ್ದು ಮತ್ತು ಐದನೆಯ ವೇದಕ್ಕೆ ಸಮಾನವಾದುದು. ಇದನ್ನು ರಚಿಸಿದವರು ವ್ಯಾಸರು. ಬರೆದವನು ಗಣಪತಿ ಎಂದು ಹೇಳುತ್ತಾರೆ. ಭಾರತವೆಂದರೆ ಭರತವಂಶದ ರಾಜರ ಕಥೆ. ಗಣೇಶನು ಭಾರತವನ್ನೆಲ್ಲಾ ಬರೆದ ಮೇಲೆ ಭೂದೇವಿಯು ಅವನನ್ನು ಕುರಿತು, ಇದು ಮಹಾಭಾರ-**ತ-ಕೊಡು,** ಎಂದು ಹೇಳಿದ್ದರಿಂದ ಇದಕ್ಕೆ ಮಹಾಭಾರತವೆಂದು ಹೆಸರಾಯಿತು. ಈ ಮಹಾಭಾರತದಲ್ಲೇ ಭಗವದ್ಗೀತೆಯು ಅಡಗಿದೆ. ಭಗವಂತನ ವಾಣಿಯನ್ನು ವ್ಯಾಸರು ಕೃತಿರೂಪದಲ್ಲಿ ರಚಿಸಿದ್ದಾರೆ. ಶ್ರೀ ಕೃಷ್ಣಪರಮಾತ್ಮನ ಮಧುರ ಗೀತಾ ವಾಣಿಯಿಂದ ಮುಗ್ಧರಾಗದವರಾರು? ಇದರ ಬೆಳಕು ನಮ್ಮ ಭರತ ಭೂಮಿಯೊಂದರಲ್ಲೇ ಅಲ್ಲ. ಪಾಶ್ಚಾತ್ಯ ದೇಶಗಳಲ್ಲೆಲ್ಲಾ ತುಂಬಿಹೋಗಿದೆ ವಿಜ್ಞಾನ ವಿಚಕ್ಷಣರಾದ ಜರ್ಮನಿ-ಅಮೇರಿಕಾ ಮುಂತಾದ ದೇಶಗಳ ವಿದ್ವಾಂಸರೆಲ್ಲಾ ಇದಕ್ಕೆ ತಲೆದೂಗುವರು. ವೇದಾಂತಿಗಳು ಇದನ್ನು ಮೋಕ್ಷದ ಪ್ರಥಮ ಸೋಪಾನವೆನ್ನುವರು. ನೀತಿಶಾಸ್ತ್ರಜ್ಞರು ಇದನ್ನು ನೀತಿಯ ನಿಧಿಯೆನ್ನುವರು. ನ್ಯಾಯ ಧರ್ಮಶಾಸ್ತ್ರಜ್ಞರು ಧರ್ಮದ ಅಸ್ತಿಭಾರವೆನ್ನುವರು. ಇದು ಭಕ್ತಿಜ್ಞಾನ ವೈರಾಗ್ಯ ರಹಸ್ಯಗಳಿಂದ ತುಂಬಿ ತುಳುಕುತ್ತಿರುವುದು. ಪ್ರಸ್ಥಾನತ್ರಯಿಯಲ್ಲಿ ಇದಕ್ಕೊಂದು ಸ್ಥಾನವಿರುವುದು. ಹಿಂದೂ ಧರ್ಮಗ್ರಂಥಗಳಲ್ಲೊಂದಾದ ಈ ಗೀತಾಮೃತವು ಜಾತಿ, ಮತ, ಕುಲ, ಗೋತ್ರಗಳ ಲಕ್ಷ್ಯವಿಲ್ಲದೆ ಜಗತ್ತಿನ ಜನಾಂಗವನ್ನೆಲ್ಲಾ ತನ್ನೆಡೆಗೆ ಎಳೆದುಕೊಳ್ಳುತ್ತಾ, ಎಲ್ಲರ ದಾಹವನ್ನು ಇಂಗಿಸಿ, ಲೋಕಪಾವನವಾಗಿ ಮೆರೆಯುತ್ತಿರುವುದು. ಇದೊಂದು ಪುಟ್ಟಗ್ರಂಥ. ಶ್ರೀ ಕೃಷ್ಣಪರಮಾತ್ಮನಿಗೂ, ಅರ್ಜುನನಿಗೂ ನಡೆದ ಸಂವಾದವನ್ನು

ವ್ಯಾಸ ಮಹರ್ಷಿಗಳು ಪದ್ಯರೂಪದಲ್ಲಿ ಸಂಗ್ರಹಿಸಿರುವರು. ಇದರಲ್ಲಿರುವುದು ಹದಿ ನೆಂಟು ಅಧ್ಯಾಯ. ಏಳನೂರು ಶ್ಲೋಕಗಳು. ನೋಡುವುದಕ್ಕೆ ಸುಲಭವಾಗಿಯೇ ಇವೆ. ಅರ್ಥವು ಮಾತ್ರ ಎಲ್ಲರನ್ನೂ ಬೆರಗು ಗೊಳಿಸುತ್ತಿದೆ. ಇದಕ್ಕೆ ಎಲ್ಲಾ ಆಚಾರ್ಯರೂ ಭಾಷ್ಯ ಬರೆದಿದ್ದಾರೆ. ಇದು ಭಾಷಾಂತರವಾಗದ ಭಾಷೆಯೇ ಇಲ್ಲ. ಯಾರು ಇದನ್ನು ಹೇಗೆ ಸೇವಿಸಿದರೂ ಇದರ ರುಚಿಯೇನೂ ಕಡಿಮೆಯಾಗಿಲ್ಲ. "ಪರಮಾತ್ಮನು ಉಪನಿಷತ್ತುಗಳನ್ನೆಲ್ಲಾ ಸೇರಿಸಿ ವಿಲಕ್ಷಣವಾದ, ಹಸುವಿನಂತೆಮಾಡಿ, ಅರ್ಜುನನೆಂಬ ಕರುವನ್ನು ನೆಪಮಾಡಿಕೊಂಡು, ಕೆಚ್ಚಲಿನಿಂದ ಹಾಲು ಬರುತ್ತಲೇ, ಆ ಕರುವನ್ನು ಕಟ್ಟಿಹಾಕಿ ಹಾಲು ಕರೆಯಲು ಆರಂಭಿಸಿ ಜಗತ್ತಿಗೆಲ್ಲಾ ಹಂಚು ತ್ತಿದ್ದಾನೆ." ಎಂದು ಮಹಾತ್ಮರೊಬ್ಬರು ಬರೆದಿರುವರು. ಈ ಮಾತು ಅಕ್ಷರಶಃ ನಿಜವಾದದ್ದು.

ಶ್ಲೋ ॥ ಸರ್ವೋಪನಿಷದೋ ಗಾವಹೋ, ಧೋಗ್ಧಾ ಗೋಪಾಲನಂದನಃ ।
ಪಾರ್ಥೋ ವತ್ಸಃ, ಸುಧೀಃ ಭೋಕ್ತಾ, ದುಗ್ಧಂ ಗೀತಾಮೃತಂ ಮಹತ್ ॥

ಗೀತೆಯೇ ಹಾಲು; ಅದಕಿಲ್ಲ ಮಿಗಿಲು. ಇಂತಹ ಗೀತೆಯು ಹುಟ್ಟಲು ಕಾರಣ:—

ಇದು ದ್ವಾಪರಯುಗದಲ್ಲಿ ಹುಟ್ಟಿದ್ದು. ಚಂದ್ರವಂಶದ ರಾಜರುಗಳೇ ಆ ಯುಗದಲ್ಲಿ ಪ್ರಸಿದ್ಧರು. ಅವರ ಮುಖ್ಯಪಟ್ಟಣ ಹಸ್ತಿನಾವತಿ. ಇದು ಈಗಿನ ಡೆಲ್ಲಿಯ ಹತ್ತಿರವಿದೆ. ಹಸ್ತಿನಾವತಿಯ ರಾಜನಾದ ಶಂಕನುವಿಗೆ ಭೀಷ್ಮ, ಚಿತ್ರವೀರ್ಯ, ವಿಚಿತ್ರವೀರ್ಯ ಎಂಬ ಮೂವರು ಮಕ್ಕಳು ಅವರಲ್ಲಿ ಭೀಷ್ಮನು ಬ್ರಹ್ಮಚಾರಿ. ಪಿತೃಭಕ್ತಿ ಪರಾಯಣ. ಚಿತ್ರವೀರ್ಯ, ವಿಚಿತ್ರವೀರ್ಯರ ಪತ್ನಿಯರಾದ ಅಂಬಿಕೆ, ಅಂಬಾಲಿಕೆ ಯರ ಉದರದಲ್ಲಿ ವ್ಯಾಸರ ವರಪ್ರಸಾದದಿಂದ, ಧೃತರಾಷ್ಟ್ರ, ಪಾಂಡು ಎಂಬ ಇಬ್ಬರು ಮಕ್ಕಳು ಜನಿಸಿದರು. ವಿದುರನು ದಾದಿಯಮಗ, ಧೃತರಾಷ್ಟ್ರನು ಹುಟ್ಟುಕುರುಡ. ಪಾಂಡುವೇ ರಾಜ್ಯಭಾರ ಮಾಡುತ್ತಿದ್ದನು. ಈತನಿಗೆ ಶಾಪದಿಂದ ಮಧ್ಯವಯಸ್ಸಿನಲ್ಲಿಯೇ ಮರಣವುಂಟಾಯಿತು. ಈತನಿಗೆ ಧರ್ಮರಾಯ, ಭೀಮ, ಅರ್ಜುನ, ನಕುಲ, ಸಹದೇವರೆಂಬ ಐವರು ದೇವತಾನುಗ್ರಹಜನಿತರಾದ ಮಕ್ಕ ಳಿದ್ದರು. ಧೃತರಾಷ್ಟ್ರನಿಗೆ ಒಬ್ಬಳು ಮಗಳೂ, ದುರ್ಯೋಧನನೇ ಮೊದಲಾದ ನೂರು ಜನ ಗಂಡುಮಕ್ಕಳೂ, ಇದ್ದರು. ಇವರನ್ನೆಲ್ಲಾ ಭೀಷ್ಮನೇ ಸಲಹಿ, ಸಮಸ್ತ ವಿದ್ಯಾ ಪರಿಣತರನ್ನಾಗಿ ಮಾಡಿದನು. ದುರ್ಯೋಧನಾದಿಗಳಲ್ಲಿ ದಾಯಾದಿ ಮಾತ್ಸರ್ಯವು ಹೆಚ್ಚುತ್ತಾ ಬಂತು. ಇವರು ಪಾಂಡವರಿಗೆ ಕೊಡಬಾರದ ಕಷ್ಟಗಳನ್ನೆಲ್ಲಾ ಕೊಟ್ಟು, ಕೊಟ್ಟಕೊನೆಗೆ ಪತ್ನಿಯಾದ ರಜಸ್ವಲೆಯಾಗಿದ್ದ ದ್ರೌಪದಿಯ ವಸ್ತ್ರಾಪಹಾರವನ್ನೂ ರಾಜಸಭೆಯಲ್ಲಿ ಮಾಡಿ, ಅಪಮಾನಪಡಿಸಿದರು. ಆಗ ಶೂರರಾದ ಭೀಮಾರ್ಜು ನರೂ ಧರ್ಮಕ್ಕೋಸ್ಕರ ಧರ್ಮಜನ ಮಾತಿನಂತೆ ಸುಮ್ಮನಿದ್ದರು. ಕೊನೆಗೆ ಹನ್ನೆ

ಹನ್ನೆರಡುವರ್ಷ ವನವಾಸವನ್ನೂ ಒಂದುವರ್ಷ ಅಜ್ಞಾತವಾಸವನ್ನೂ ಮಾಡಿ, ಪಾಂಡವರು ಸಮಸ್ತ ಕಷ್ಟಗಳನ್ನು ಸಹಿಸಿ ಶ್ರೀ ಕೃಷ್ಣನನ್ನು ಸಂಧಿಗೋಸ್ಕರ ಕಳುಹಿಸಿದರು. ದುರ್ಜನನಾದ ದುರ್ಯೋಧನನು ಸಂಧಿಗೆ ಒಪ್ಪದಿರಲು, ಯುದ್ಧವು ಕೈಗಟ್ಟಿತು. ಪಾಂಡವರ ಪಕ್ಷದಲ್ಲಿ ಏಳು ಅಕ್ಷೌಹಿಣೀ ಸೈನ್ಯವೂ, ಕೌರವರ ಪಕ್ಷದಲ್ಲಿ ಹನ್ನೊಂದು ಅಕ್ಷೌಹಿಣೀ ಸೈನ್ಯವೂ ಕುರುಕ್ಷೇತ್ರದಲ್ಲಿ ಸೇರಿತು. ಯುದ್ಧಾರಂಭದಲ್ಲಿ ನೆಂಟರನ್ನೂ ಗುರುಗಳನ್ನೂ, ಕಂಡು ಕೊಲ್ಲಲಾರದ ಅರ್ಜುನನಿಗೆ ಶೋಕ ಮೋಹಗಳು ಹೆಚ್ಚಾಗಲು ಆತನ ಸಾರಥಿಯಾದ ಶ್ರೀಕೃಷ್ಣನು ಆ ಸಮಯದಲ್ಲಿ ಮೋಹಕ್ಕೂ, ದುಃಖಕ್ಕೂ ಭ್ರಾಂತಿಯೇ ಮೂಲಕಾರಣವೆಂದು ತಿಳಿಸಿ, ಆತನ ಶೋಕ ಮೋಹಗಳನ್ನು ಬಿಡಿಸಿ, ಯುದ್ಧ ಮಾಡಿಸಿದನು. ಇದಕ್ಕೋಸ್ಕರವೇ ಗೀತೆಯು ಹುಟ್ಟಿದ್ದು.

ಭೂಮಿಯಲ್ಲಿ ಎಲ್ಲರಂತೆ ತಾನೂ ಒಬ್ಬ ರಾಜಪುತ್ರನಾಗಿ ಜನ್ಮತಾಳಿ, ದುಷ್ಟರನ್ನು ಶಿಕ್ಷಿಸಿ, ಸತ್ಪುರುಷರನ್ನು ಉದ್ಧಾರಮಾಡಿದ ಮಹಾಪುರುಷನೇ ಶ್ರೀ ಕೃಷ್ಣನು. ಆತನು ತನ್ನಲ್ಲಿ ಅತ್ಯಂತ ಭಕ್ತಿಯನ್ನಿಟ್ಟು, ಪಾಂಡವರನ್ನು ಸಲಹುವುದಕ್ಕಾಗಿ, ಅರ್ಜುನನು ಸಾರಥಿಯಾದನು. ಆ ಮಹಾಪುರುಷನ ಅಸಾಧಾರಣ ದಿವ್ಯವಾಣಿಯು ಪ್ರತಿಭೆಯಿಂದಲೇ ಈ ಗ್ರಂಥವು ಬೆಳಗುತ್ತಿರುವುದು. 'ಶ್ರೀ ಕೃಷ್ಣನು ಯಾರು' ಎಂಬುದನ್ನು ಹತ್ತು, ಹನ್ನೊಂದನೆಯ ಅಧ್ಯಾಯಗಳಲ್ಲಿ ಸ್ಪಷ್ಟವಾಗಿ ತಿಳಿಯಬಹುದು. ಯಾವ ಫಲಕ್ಕೂ ಆಸೆಪಡದೆ ನಿಯತವಾದ ಕರ್ಮವನ್ನು ಮಾಡಬೇಕೆಂಬುದೇ ಗೀತೆಯ ಸಾರಾಂಶ.

೧ ನೆಯ ಅಧ್ಯಾಯ :-ಅರ್ಜುನ ವಿಷಾದಯೋಗ, ೨ ಅಧ್ಯಾಯ :-ಸಾಂಖ್ಯಯೋಗ, ಅಪರೋಕ್ಷ ಜ್ಞಾನಿಯ ಲಕ್ಷಣ. ೩ ಕರ್ಮಯೋಗ, ೪ ಜ್ಞಾನಕರ್ಮಸನ್ಯಾಸಯೋಗ, ೫ ಕರ್ಮಸನ್ಯಾಸಯೋಗ, ೬ ಆತ್ಮಸಂಯಮ ಯೋಗ, ೭ ಜ್ಞಾನವಿಜ್ಞಾನಯೋಗ, ೮ ಅಕ್ಷರ ಬ್ರಹ್ಮಯೋಗ, ೯ ರಾಜವಿದ್ಯಾರಾಜಗುಹ್ಯಯೋಗ, ೧೦ ವಿಭೂತಿಯೋಗ, ೧೧ ವಿಶ್ವರೂಪ ದರ್ಶನಯೋಗ, ೧೨ ಭಕ್ತಿಯೋಗ, ೧೩ ಕ್ಷೇತ್ರಕ್ಷೇತ್ರಜ್ಞ ವಿಭಾಗಯೋಗ, ೧೪ ಗುಣತ್ರಯ ವಿಭಾಗಯೋಗ, ೧೫ ಪುರುಷೋತ್ತಮಯೋಗ, ೧೬ ದೈವಾಸುರ ಸಂಪದ್ವಿಭಾಗಯೋಗ, ೧೭ ಶ್ರದ್ಧಾತ್ರಯ ವಿಭಾಗಯೋಗ, ೧೮ ಮೋಕ್ಷ ಸನ್ಯಾಸಯೋಗ.

ಗೀತೆಯ ಗುರಿಯಿದು ; ವ್ಯಕ್ತಿಯ ವಿಶ್ವದ ವಿಷಾದವಳಿಯಬೇಕು. ಭೋಗಮಾರ್ಗದಿಂದ ಯೋಗಮಾರ್ಗಕ್ಕೆ ಮಾನವನು ಬಂದು ನಿಲ್ಲಬೇಕು. ಯೋಗವೆಂದರೆ ಬರೀ ಅಷ್ಟಾಂಗ ಯೋಗವೇ ಅಲ್ಲ. ನ್ಯಾಯಮಾರ್ಗದಲ್ಲಿ ಆಚರಿಸುವುದೆಲ್ಲವೂ ಅರಿವುದೆಲ್ಲವೂ ಅನುರಾಗ ತೋರುವುದೆಲ್ಲವೂ ವಿರಾಗದಲ್ಲಿರುವುದೂ ಯೋಗ. ವಿಭೂತಿಪೂಜೆಯೂ ಸಹ ಒಂದು ಯೋಗ. ವಿಶ್ವರೂಪದರ್ಶನವೂ ಯೋಗ. ಆಸುರೀಗುಣಗಳನ್ನಳಿಸಿ ದೈವೀಗುಣಗಳಿಂದ ದುಃಖ ನಿವೃತ್ತಿ ಮಾಡಿಕೊಳ್ಳುವುದೇ

ಮಾನವನ ಮುಖ್ಯಗುರಿಯೆಂದೂ ಹಾಡಿ ಹೇಳುವುದು ಭಗವದ್ಗೀತೆ. ಇದಕ್ಕಾಗಿಯೆ ವಿಭೂತಿ ಪುರುಷರ ಅವತಾರ.

ಶ್ಲೋ॥ "ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್।
ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥"

ಎಂದು ಭಗವಂತನೇ ಹೇಳಿರುವುದರಿಂದ ಪ್ರತಿಯುಗದಲ್ಲಿಯೂ ಭಗವಂತನು ಅವತರಿಸುವನು. ಕೊನೆಗೆ ಅರ್ಜುನನು ಶ್ರೀಕೃಷ್ಣನ ಆಜ್ಞೆಯಂತೆ ಯುದ್ಧ ಮಾಡಿದನು.

"ಯತೋ ಧರ್ಮಃ ತತೋ ಜಯಃ" "ಧರ್ಮಃ ಏವ ಜಯತಿ" ಎಂಬಂತೆ ಧರ್ಮ ಪಕ್ಷಪಾತಿಗಳಾದ ಪಾಂಡವರು ಗೆದ್ದರು. ಕೃಷ್ಣಾವತಾರ ಕಾರ್ಯವು ನೆರವೇರಿತು. ಧರ್ಮಧ್ವಜ ಜಗತ್ತಿನಲ್ಲಿ ಮೆರೆಯಲಾರಂಭಿಸಿತು. ಜಗದೀಶ್ವರನು ಎಲ್ಲರನ್ನೂ ಅನುಗ್ರಹಿಸಲಿ. ಗೀತಾಮೃತಪಾನದಿಂದ ಎಲ್ಲರೂ ತೃಪ್ತಿಹೊಂದಲಿ. ಸರ್ವರಿಗೂ ಸರ್ವಮಂಗಳೆಯು ಸರ್ವಮಂಗಳವನ್ನೂ ಕೊಡಲಿ.

ಶಾಂತಿರಸ್ತು.

———::———

# ಹಿರೇಸಲ್ಲೂರು ಮತ್ತು ಕೇದಗೆಗೆರೆಯ ಶಾಸನಗಳು



ಶ್ರೀ ಗೌ.ಮ. ಉಮಾಪತಿಶಾಸ್ತ್ರಿ, ಎಂ.ಎ.,

ಪ್ರಾಚೀನಕಾಲದ ಗುಡಿಗಳನ್ನು ಕೋಟೆಗಳನ್ನು ನೋಡುವದೆಂದರೆ ನನಗೊಂದು ಕುತೂಹಲ. ಅವುಗಳಲ್ಲಿ ನನಗೆ ವಿಚಿತ್ರ ಆಕರ್ಷಣೆ ಕಂಡು ಬರುತ್ತದೆ. ಗುಡಿಗಳ ಸುತ್ತಲೂ ಬಿದ್ದಿರುವ ಶಾಸನಗಳು, ವೀರಗಲ್ಲುಗಳು ಮತ್ತು ಮಾಸತಿಗಲ್ಲುಗಳು ಗತಕಾಲದ ರೋಮಾಂಚಕಾರಿ ಕತೆಗಳನ್ನು ಚಿತ್ರಿಸಿ ಹೇಳುವ ಇತಿಹಾಸದ ಪುಟಗಳಂತಿವೆ. ಗುಡಿಗಳಲ್ಲಿ ಕೆತ್ತಿರುವ ಅಂದವಾದ ಕುಸುರಿನ ಮೂರ್ತಿಗಳು ನಾಡಿನ ಕಳೆದಳಿದ ಐಸಿರಿಯ ಜೀವಂತ ಕುರುಹಾಗಿವೆ. ವಿಜಾಪುರ, ಬದಾಮಿ, ಪಟ್ಟದಕಲ್ಲು ಮಹಾಕೂಟ, ಐಹೊಳೆ ಮೊದಲಾದ ಐತಿಹಾಸಿಕ ಸ್ಥಾನಗಳ ಅವಶೇಷಗಳು ನನ್ನಲ್ಲಿ ಕಲಾಪ್ರೇಮವನ್ನು ಜಿಜ್ಞಾಸು ಭಾವವನ್ನು ಕುದುರಿಸಿವೆ. ಹತ್ತಾರು ಸಲ ನೋಡಿದರೂ ಅವು ನನಗೆ ಚಿರನವೀನವಾಗಿಯೇ ಕಾಣುತ್ತವೆ. ಪ್ರತಿಸಲವೂ ಅವುಗಳಲ್ಲಿ ಒಂದೊಂದು ಹೊಸ ರೂಪವನ್ನು ಹೊಸ ಸೌಂದರ್ಯವನ್ನು ಕಂಡು ಮುಗ್ಧನಾಗುತ್ತೇನೆ. ಅವನ್ನು ನೋಡಿದಷ್ಟೂ ಕಣ್ಮನಗಳಿಗೊಂದು ತೃಪ್ತಿ.

ನಾನಿನ್ನೂ ಚಿಕ್ಕವನಾಗಿದ್ದಾಗ ನನ್ನನ್ನು ನನ್ನ ತಂದೆಯವರು (ಗೌರಾಪುರದ ಮಹಾಲಮಠದ ಮಲ್ಲಯ್ಯನವರು, ಈಗಿನ ಸಖರಾಯ ಪಟ್ಟಣದ ಪೂಜ್ಯ ಹಾಲುಸ್ವಾಮಿಗಳವರಿಗೆ ಅರ್ಪಿಸಿದರು. ಆಗ ಪೂಜ್ಯರು ಗಿರಿಯಾಪುರದಲ್ಲಿ ಮಲ್ಲಮ್ಮನವರ ದೇವಸ್ಥಾನದ ಆವಾರದಲ್ಲಿ ವಾಸವಾಗಿದ್ದರು. ಅವರು ನನ್ನನ್ನು ಶಿವಯೋಗಮಂದಿರಕ್ಕೆ ಕರೆದೊಯ್ಯಲು ಹೊರಟಿದ್ದರು. ಕಡೂರ ಹತ್ತಿರದ ಎಳ್ಳಂಬಳಸೆಗ್ರಾಮದ ಶ್ರೀ ಮರುಳಪ್ಪನವರ ಭಕ್ತಿಯನ್ನು ಕೈಕೊಂಡು ಮುಂದೆ ಪ್ರಯಾಣ ಮಾಡುವ

ಯೋಜನೆಯಾಗಿತ್ತು. ಅಂದೇ ನನಗೆ ಪಟ್ಟದೀಕ್ಷೆಯಾಗಿತ್ತು. ಪೂಜ್ಯರು ಕೊಟ್ಟ ಬಿಳಿಯ ಕಪನಿ-ಕಿಪಿಟೊಪ್ಪಿಗೆಗಳನ್ನು ನನ್ನ ತಂದೆಯವರು ಶ್ರೀ ಕೆ. ನಂಜೇಗೌಡರ ಮನೆಯಲ್ಲಿ ತೊಡಿಸಿದ್ದರು. ಅವುಗಳನ್ನು ತೊಟ್ಟು ನಾನೊಬ್ಬ ಹೊಸ ವ್ಯಕ್ತಿಯಾಗಿದ್ದೆ. ಬೆಳಗಿನ ಪೂಜೆ ಮುಗಿದಿತ್ತು. ಪೂಜ್ಯರ ಕಮಾನುಗಾಡಿ ಮಲ್ಲಮಾಂಬೆಯವರ ದೇವಸ್ಥಾನದಿಂದ ಹೊರಟಿತು. ಅರ್ಧ ಮೈಲು ದೂರದಲ್ಲಿ ಒಂದು ಗ್ರಾಮ. ಅಲ್ಲಿಯ ದೇವಸ್ಥಾನದ ಹತ್ತಿರ ನಮ್ಮ ಗಾಡಿ ನಿಂತಿತು. ಊರ ಭಕ್ತರು ಪೂಜ್ಯರ ದರ್ಶನಕ್ಕೆ ಕೂಡಿದ್ದರು. ಸುಗ್ಗಿಯ ಕಾಲ. ರೈತರು ಕಣಗಳಲ್ಲಿ ಎಳ್ಳಿನ ಗೂಡುಗಳನ್ನು ಒಟ್ಟಿದ್ದರು. ಅವುಗಳ ಹಿಂದೆ ಎತ್ತರದ ಗೋಪುರವೊಂದು ನನ್ನನ್ನು ಆಕರ್ಷಿಸಿತು. ಶಿಖರದ ಕೆಳಗಿದ್ದ ಹುಲಿಯ ಮೂರ್ತಿ ಮತ್ತು ಅದನ್ನು ಇರಿಯುವ ಭಾವಭಂಗಿಯಲ್ಲಿ ಕತ್ತಿ ಹಿಡಿದು ಮಂಡಿಯೂರಿದ ವೀರನ ಪ್ರತಿಮೆಯಲ್ಲಿ ನನ್ನ ದೃಷ್ಟಿ ನಟ್ಟಿತ್ತು. ಎವೆಯಿಕ್ಕದೆ ನೋಡುತ್ತಿದ್ದೆ. ಊರ ಹೆಣ್ಣು ಮಕ್ಕಳಿಗೆ ನನ್ನ ವೇಷ ವಿಚಿತ್ರವಾಗಿ ಕಂಡಿರಬೇಕು. ನಾನು ಗುಡಿಯನ್ನು ನೋಡುತ್ತಿದ್ದಂತೆ ಅವರೂ ನನ್ನನ್ನು ದಿಟ್ಟಿಸಿ ನೋಡುತ್ತಿದ್ದರು. ಕೆಲವರು “ಅಯ್ಯೋ ಪಾಪ! ಇಷ್ಟು ಎಳೆಯ ವಯಸ್ಸಿನಲ್ಲಿ ಈ ಮಗು ತಾಯಿಯನ್ನು ಬಿಟ್ಟಿರುವುದೆ?” ಎಂದು ಮುಂತಾಗಿ ಏನೋನೋ ಮಾತನಾಡುತ್ತಿದ್ದರು ಅವು ಒಂದೂ ನನಗೆ ಅರ್ಥವಾಗುವಂತಿರಲಿಲ್ಲ. ಗಾಡಿ ಮುಂದೆ ಸಾಗಿತು. ಸನಿಹದಲ್ಲಿಯೇ ಒಂದು ವಿಶಾಲ ಕೆರೆ. ಅದರ ಏರಿಯ ಕೆಳಗಡೆ ಕೆಲವು ಪಾಳುಗುಡಿಗಳು. ಮಾಗಿಗೆ ಬಂದ ಹೊಂಬಣ್ಣದ ಬತ್ತದ ಗದ್ದೆಗಳು. ದೂರದಲ್ಲಿ ಬಾಳೆ-ಅಡಕೆ ತೋಟಗಳು-ಎಲ್ಲವೂ ಬಟ್ಟಬಯಲು ಸೀಮೆಯವನಾದ, ಬರಿಯ ರಾಗಿ-ಜೋಳ-ಕೊತ್ತಂಬರಿ ಪೈರುಗಳನ್ನು ಕಂಡಿದ್ದ ನನಗೆ ಬಹಳ ಸುಂದರವಾಗಿ ಕಾಣುತ್ತಿದ್ದವು. ಹಿರಿಯನಲ್ಲೂರು ಗ್ರಾಮದ ಈ ದೃಶ್ಯವಿನ್ನೂ ನನ್ನ ಸ್ಮೃತಿಪಟಲದಲ್ಲಿ ಅಚ್ಚಳಿಯದೆ ಉಳಿದಿದೆ.

ಈ ಮಧ್ಯೆ ನನ್ನ ಜೀವನದಲ್ಲಿ ಹಲವಾರು ಅನಿರೀಕ್ಷಿತ ಮಾರ್ಪಾಟುಗಳಾಗಿವೆ. ಈಗ ಕಾಲೇಜಿನ ಪ್ರಾಧ್ಯಾಪಕವೃತ್ತಿಯನ್ನು ಕೈಕೊಂಡು ಸಂಸಾರದ ಸವಿಗಂಡಿದ್ದೇನೆ. ಆದರೂ ನಿವೃತ್ತಿಯ ಮಾರ್ಗದಲ್ಲಿ ನನಗೆ ನಂಬುಗೆಯಿದೆ. ನಾನು ಜೀವನದಲ್ಲಿ ಬೆಳಕನ್ನು ಕಂಡುದು ಪೂಜ್ಯ ಶ್ರೀ ಹಾಲುಸ್ವಾಮಿಗಳವರ ಕೃಪೆಯಿಂದ. ಅವರೇ ನನ್ನ ದೀಕ್ಷಾಗುರುಗಳು. ಅವರ ಪುಸ್ತಕ ಭಂಡಾರವನ್ನು ತೋರಿಸಿ ನನ್ನ ತಂದೆಯವರು “ನೀನೂ ಇಷ್ಟೆಲ್ಲ ಹೊತ್ತಿಗೆಗಳನ್ನು ಓದಬೇಕು.” ಎಂದು ಹೇಳಿದ್ದು ನನಗಿನ್ನೂ ಚೆನ್ನಾಗಿ ನೆನಪಿದೆ. ಕಾಶಿಯಲ್ಲಿ ಕಲಿಯಲು ಅನುಕೂಲವಾಗಲೆಂದೇ ಪೂಜ್ಯರು ನನ್ನನ್ನು ಆನಂದಪುರದ ಮುರುಘಾಮಠಕ್ಕೆ ಒಪ್ಪಿಸಿದ್ದರು. ಅವರ ಕರುಣೆಯ ನೆರಳಲ್ಲಿ ಬೆಳೆದು ಬಂದಿರುವೆ.

ಪೂಜ್ಯರ ಅರವತ್ತನೆಯ ವರ್ಷದ ಉತ್ಸವದ ಯೋಜನಾಕಾರ್ಯದಲ್ಲಿ ಭಾಗವಹಿಸುವಂತೆ ಸೆಪ್ಟೆಂಬರ್ ತಿಂಗಳಲ್ಲಿ ಶ್ರೀ ನಿಡುಮಾಮಿಡಿ ಸನ್ನಿಧಿಯವರಿಂದ ನಿರೂಪ ಬಂದಿತು. ಗಿರಿಯಾಪುರಕ್ಕೆ ಹೊರಟೆ. ಮಧ್ಯದಾರಿಯಲ್ಲಿ ಗೆಳೆಯ ಶ್ರೀ ಪಂಚಾಕ್ಷರಿ ಹಿರೇಮಠ ಅವರೂ ಜೊತೆಯಾದರು. ಗಿರಿಯಾಪುರ (ಶ್ರೀ ಗಿರಿಯಪುರ)ದ ಸುತ್ತಣ ಐತಿಹಾಸಿಕ ಸ್ಥಾನಗಳ ಬಗೆಗೆ ಲೇಖ ಬರೆಯುವಂತೆ ನನಗೆ ಸನ್ನಿಧಿಯವರು ಅಪ್ಪಣೆ ಮಾಡಿದರು. ಹಿರೇನಲ್ಲೂರ ಗ್ರಾಮ ಬಹಳ ಪುರಾತನವಾದುದು. ಅಲ್ಲಿ ಹೊಯ್ಸಳರ ಕಾಲದ ಅವಶೇಷಗಳೂ ಇವೆ-ಎಂದು ಅರಿಕೆ ಮಾಡಿಕೊಂಡೆ. ಶ್ರೀ ಸನ್ನಿಧಿಯವರು ಬಹು ಆನಂದಪಟ್ಟರು. ಆ ಗ್ರಾಮದ ಅವಶೇಷಗಳನ್ನು ನೋಡುವದಕ್ಕಾಗಿ ಪೂಜೆ ಮುಗಿಸಿಕೊಂಡು ಕಾರಿನಲ್ಲಿ ಹೊರಟೆವು. ಹಿರೇನಲ್ಲೂರು ಹೋಬಳಿಯ ಕೇಂದ್ರ ಸ್ಥಾನ, ಊರ ಹೊರಗೆ ಅನೇಕ ಅವಶೇಷಗಳು ಬಿದ್ದಿವೆ. ಒಂದು ವಿಶಾಲವಾದ ವೀರಗಲ್ಲು, ಹಲವಾರು ಒಳ್ಳೆಯ ಮಾಸತಿಗಲ್ಲುಗಳು ಅಲ್ಲಲ್ಲಿ ನೆಲದಲ್ಲಿ ಹೂತು ಹೋಗಿವೆ. ಜನರು ಅಲ್ಲಿಯೇ ತಿಪ್ಪೆಯ ಗುಂಡಿಗಳನ್ನು ತೆಗೆದು ಅವನ್ನು ಅಲಕ್ಷಿಸಿರುವ ರೀತಿಯನ್ನು ಕಂಡು ನನಗೆ ವ್ಯಥೆಯೆನಿಸಿತು. ಅಲ್ಲಿಯ ಮಲ್ಲೇಶ್ವರ ದೇವಾಲಯ ಬಹು ಸುಂದರವಾಗಿದೆ. ಬೇಲೂರು-ಹಳೇಬೀಡು ಮಾದರಿಯ ಗುಡಿ. ಇಲ್ಲಿ ಮೊದಲು ತ್ರಿಮೂರ್ತಿಗಳ ಸ್ಥಾಪನೆಯಾಗಿದ್ದಂತೆ ಕುರುಹುಗಳಿವೆ. ಈಗ ಮಲ್ಲೇಶ್ವರ ಶಿವಲಿಂಗದೇವರಿಗೆ ಮಾತ್ರ ಪ್ರತಿನಿತ್ಯ ಪೂಜೆ ನಡೆಯುತ್ತಿದೆ. ಈ ಗುಡಿಯೊಳಗೆ ಕುಸುರಿನ ಮಾಟದ ಕಂಬಗಳು, ಸಪ್ತಮಾತೃಕೆ, ಗಣಪತಿ ಮತ್ತು ನಂದಿಯ ಮೂರ್ತಿಗಳು ಬಹಳ ಕಲಾಪೂರ್ಣವಾಗಿವೆ. ದೇವಾಲಯದ ಮುಂಭಾಗದ ಮಂಟಪದಲ್ಲಿ ಮೇಲೆ ಬೋದಿಗೆಗಲ್ಲುಗಳಲ್ಲಿ ಶಾಸನವಿರುವದು ಕಂಡುಬಂದಿತು. ಅದಕ್ಕೆ ಈಗ ಸುಣ್ಣ ಬಳಿದಿದ್ದಾರೆ. ಸ್ಪಷ್ಟವಾಗಿ ಓದಲು ಸಾಧ್ಯವಾಗಲಿಲ್ಲ. ಗುಡಿಯ ಸುತ್ತಲೂ ತಿರುಗಿ ನೋಡಿದೆವು. ಶಿವಪುರಾಣದ ಲೀಲೆಗಳು ಮತ್ತು ಮಹಾಭಾರತದ ಪ್ರಸಂಗಗಳಿಗೆ ರೂವಾರಿಗಳು ಕರಿಯ ಕಲ್ಲಿನ ಕಲಾಕುಸುರಿನಲ್ಲಿ ಜೀವಕಳೆ ಕೊಟ್ಟಿದ್ದಾರೆ. ನರ್ತಕಿಯ ಕೇಶವಿನ್ಯಾಸ, ನಟರ ಹಾವಭಾವಗಳು ನಮ್ಮನ್ನು ಹೊಯ್ಸಳರ ಆಸ್ಥಾನಕ್ಕೆ ಒಯ್ದು ಮೈಮರೆಯಿಸಿದವು. ಅಂತಹ ಅಂದವಾದ ಮೂರ್ತಿಗಳನ್ನು ಹಳ್ಳಿಯ ದನಗಾಹಿಗಳು ಕಲ್ಲುಕುಕ್ಕಿ ವಿದ್ರೂಪಗೊಳಿಸುತ್ತಿದ್ದಾರೆ. ಗುಡಿಯೂ ಖಿಲವಾಗುತ್ತಿದೆ.

ಈ ಹಿರೇನಲ್ಲೂರ ಐತಿಹ್ಯದ ಬಗೆಗೆ ಒಂದು ಲೇಖನ ಬರೆಯುವ ಹೊಣೆ ಹೊತ್ತು ಬಂದೆ. ನಮ್ಮ ಕಾಲೇಜಿನ ಪುಸ್ತಕ ಭಂಡಾರದಲ್ಲಿ ರೈಸರು ಸಂಶೋಧಿಸಿ ಸಂಗ್ರಹಿಸಿದ ಶಾಸನಗಳ ಸಂಪುಟಗಳನ್ನು ತಿರುವಿ ಹಾಕಿದೆ. ಕಡೂರು ಮತ್ತು ತರಿಕೆರೆ ತಾಲೂಕುಗಳಲ್ಲಿ ವಿಪುಲವಾದ ಅಮೌಲ್ಯವಾದ ಶಾಸನ ಸಂಪತ್ತಿರುವದನ್ನು ತಿಳಿದು ಹೆಮ್ಮೆಪಟ್ಟುಕೊಂಡೆ.

ಕಡೂರು ಮೊದಲು ಜಿಲ್ಲೆಯ ಕೇಂದ್ರವಾಗಿತ್ತು. ಈಗ ಚಿಕ್ಕಮಗಳೂರ ಜಿಲ್ಲೆಯಲ್ಲಿ ಒಂದು ತಾಲೂಕಾಗಿದೆ. ಆದರೂ ಕಡೂರಿನ ಐತಿಹಾಸಿಕ ಮಹತ್ವಕ್ಕೇನೂ ಕೊರತೆಯಿಲ್ಲ. ಇದು ಹೊಯ್ಸಳರ ಜನ್ಮಭೂಮಿ. ಕಡೂರಿನ ಹತ್ತಿರದ ಶಶಕಪುರದಲ್ಲಿಯೇ ಹೊಯ್ಸಳರ ಮೂಲಪುರುಷರಿದ್ದುದು. ಹೊಯ್ಸಳರು ೧೧ನೆಯ ಶತಮಾನದಿಂದ ೧೪ನೆಯ ಶತಮಾನದವರೆಗೂ ಆಳಿದರು. ದ್ವಾರಸಮುದ್ರ, ಬೇಲೂರು, ಹಳೆಬೀಡು ಅವರ ರಾಜಧಾನಿಗಳಾಗಿದ್ದವು. ಅವರು ಹೆದ್ದೊರೆ (ಕೃಷ್ಣಾನದಿ)ಯವರೆಗಿನ ನಾಡನ್ನು ಗೆದ್ದು ರಾಜ್ಯವಾಳುತ್ತಿದ್ದರು. ಇವರ ಶಾಸನಗಳು ಅಮೃತಾಪುರ, ಬಗ್ಗವಳ್ಳಿ, ಅಜ್ಜಂಪುರ, ಎಳ್ಳಂಬಳಸೆ, ಯುಗಟಿಪುರ, ಸಿಂಗಟಗೆರೆ, ಬಿದರೆ, ಕಂಚುಗಲ್ಲು, ಆಸಂದಿ ಮೊದಲಾದ ಗ್ರಾಮಗಳಲ್ಲಿ ಸಾಕಷ್ಟು ದೊರೆಯುತ್ತಿವೆ. ಹೊಯ್ಸಳರಿಗಿಂತಲೂ ಪೂರ್ವದಲ್ಲಿ ಈ ನಾಡನ್ನು ಕದಂಬರು (ಕ್ರಿ. ಶ. ೪೫೦-೯೦೦) ಮತ್ತು ಗಂಗರು (ಕ್ರಿ. ಶ. ೪೮೦-೧೦೪೦) ಆಳುತ್ತಿದ್ದರು. ತರಿಕೆರೆ ತಾಲ್ಲೂಕಿನಲ್ಲಿರುವ ಆಸಂದಿಗ್ರಾಮದ ಶಾಸನಗಳು ಗಂಗರ ಕೊನೆಯ ಆಳಿಕೆಯನ್ನು ಕುರಿತು ಹೊಸ ಬೆಳಕು ಚೆಲ್ಲುತ್ತವೆ ಮತ್ತು ಅವು ಇತಿಹಾಸ ಸಂಶೋಧಕರಿಗೆ ಬಹಳ ಲವಲವಿಕೆಯನ್ನು ಹುಟ್ಟಿಸುತ್ತವೆ. ಚಿಕ್ಕಮಗಳೂರ ತಾಲೂಕಿನ ಸಿರಗುಂದ ಶಾಸನವು ಗಂಗರ ಇತಿಹಾಸದ ದೃಷ್ಟಿಯಿಂದ ಬಹಳ ಮಹತ್ವದ್ದು.[1]

ಪ್ರಸ್ತುತದ ಹಿರೇನಲ್ಲೂರು ಮತ್ತು ಕೇದಗೆಗೆರೆಯ ಶಾಸನಗಳು ಹೊಯ್ಸಳರ ವಂಶಾವಳಿ, ಶಾಸನ ಪದ್ಧತಿ, ಧಾರ್ಮಿಕವೃತ್ತಿ ಮೊದಲಾದ ವಿಷಯಗಳನ್ನು ಕುರಿತು ಕೊರೆದವುಗಳು. ಮೊದಲು ಹಿರೇನಲ್ಲೂರ ಶಾಸನವನ್ನು ಅವಲೋಕಿಸುವ. ಹಿರೇನಲ್ಲೂರು ಕಡೂರ ತಾಲ್ಲೂಕಿನಲ್ಲಿ ಹೋಬಳಿಯ ಗ್ರಾಮ. ಕಡೂರಿನಿಂದ ಪೂರ್ವಕ್ಕೆ ಏಳು ಮೈಲು ದೂರದಲ್ಲಿದೆ. ಇಲ್ಲಿ ಹೆಚ್ಚಾಗಿ ಲಿಂಗಾಯತ ರೆಡ್ಡಿಯ ಜನಾಂಗದವರು ವಾಸವಾಗಿದ್ದಾರೆ. ಇಲ್ಲಿಯ ಮಲ್ಲೇಶ್ವರ ದೇವಾಲಯದ ಮುಖಮಂಟಪದ ಪಶ್ಚಿಮ, ಪೂರ್ವ, ಉತ್ತರ ದಿಕ್ಕುಗಳ ಬೋದಿಗೆ ಕಲ್ಲುಗಳ ಮೇಲೆ ಶಾಸನಗಳಿವೆ.

**ಮುಖಮಂಟಪದ ಪಶ್ಚಿಮದಿಕ್ಕಿನ ಬೋದಿಗೆ ಮೇಲಿರುವ ಶಾಸನ :**[2] **ನಂ. 132 :**

ಮೇಲ್ಭಾಗದಲ್ಲಿ ಸಾಲು (೧) "ಶ್ರೀ ಗಣಾಧಿಪತಯೇ ನಮಃ ಸರಸ್ವತ್ಯೈ ನಮಃ ಸ್ವಸ್ತಿ ಶ್ರೀಮತು ಸಕ ವರ್ಷ ೧೧೩೮ನೆಯ ಯುವ ಸಂವತ್ಸರದ ಅಶ್ವಯುಜ ಶು. ೧೩

---

1 'ಎಪಿಗ್ರಾಫಿಯ ಕರ್ನಾಟಕ' (Epigraphia Carnatica, Val. VI, see Preface)

2 'ಎಪಿಗ್ರಾಫಿಯ ಕರ್ನಾಟಕ'—೬ನೆಯ ಸಂಪುಟ (ಕಡೂರ ಜಿಲ್ಲೆಯ ಶಾಸನಗಳು)

ಬ್ರಿಹವಾರನಂದು ಶ್ರೀಮದನಾದಿಯಗ್ರಹಾರ ಪಿರಿಯನಲ್ಲೂರಶೇಷ ಮಹಾಜನಂಗಳು ತುಯ್ಯಲರ ಕೆಱೆಯ ಬಟ್ಟಿಯೂರ ಪರಿವರ್ತನೆಯ ಕಾಲದಲ್ಲಿ

(೨) ಮಾಡಿದ ಶಿಲಾಶಾಸನದ ಕ್ರಮವಂತೆಂದಡೆ ಹೆಗ್ಗಡೆಯ ಕೆಱೆಯೊಳಗಣ ನೀರುಮಣ್ಣೊಳಗಾಗಿ ತುಯ್ಯಲರ ಕೆಱೆಯ ಮೂವತ್ತು ವೃತ್ತಿಯ ಮಹಾಜನಂಗಳಿಗೆ ಅಲ್ಲಿಯ ಸುವರ್ಣ್ಣಾಯ ಭತ್ತಾಯ ತೇಜೋಪಾರ್ಜ್ಜನೆಯಾ ಸಕಲವುಂ ಆ ಮೂವತ್ತು ವೃತ್ತಿಯ ಮಹಾ........

(೩) ಬಟ್ಟಿಯೂರಲು ಹುಟ್ಟಿದ ಸಮಸ್ತ ಸುವರ್ಣಾಯ ಭತ್ತಾಯ ತೇಜೋ ಪಾರ್ಜ್ಜನೆಯಾ ಸಕಲವುಂ ಬಟ್ಟಿಯೂರ ಮೂವತ್ತು ವೃತ್ತಿಯ ಮಹಾಜನಂಗಳಿಗೆ ಸಲುವುದು ಅರಮನೆಯಿಂ ಬಂದಯೆರಡೂರ ಸಿದ್ಧಾಯವನು ಕೂಡಿಯಱುವತ್ತು ವ್ರಿತ್ತಿಯ....

(೪) ಸರಿಯಾಗಿ ತೆಱುವರು ಚಕ್ರವರ್ತ್ತಿಯುಂ ನೆಲ್ಲೂರ ಅಧಿಕಾರಿಯುಂ ಯೂರರ ವರಿಗೇನ ಕೊಟ್ಟಡಂ ಅಱುವತ್ತು ಮಹಾಜನಂಗಳಿಗಂ ಸರಿಯೀಕ್ರಮದಿಂ ಪರಿವರ್ತ್ತನ ಧಾರೆಯಾಗಿ ಧೃವವುಂಡಿಗೆಯಾಗಿ ತೋಟಂಗಳನಿಕ್ಕುವಂತಾಗಿಯಾ ಚಂದ್ರಾರ್ಕತಾ........

(೫) ಪ್ರತಿಪಾಳಿಸುವರು ಬಟ್ಟಿಯೂರಿಂಗಂ ತುಯ್ಯಲರ ಕೆಱೆಗಂ ಹೊಲವಾರ ಕವಿಲ ಪಾಲವ ಮೆಯಿಸಲಾಗದು ಶ್ರೀ ಕೇಸವೇಶ್ವರಃ" (ತಳಭಾಗದಲ್ಲಿ ಸಾಲು ೬) "ಸ್ವಸ್ತಿ ಶ್ರೀಮತು ಪ್ಲವಂಗ ಸಂವತ್ಸರದ ವೈಶಾಖ ಶುದ್ಧ ಪಾಡಿಮಿ ವಡ್ಡವಾರದಂದು ನೆಲ್ಲೂರಶೇಷ ಮಹಾಜನಂಗಳು ಭೂಮಿಯನಳವಲ್ಲಿ ಮಾಡಿದ ಆಜ್ಞಾಪತ್ರ

(೭) ವದೆಂತೆಂದಡೆ ಇಪ್ಪತ್ತುನಾಲ್ಕು ಸಂವತ್ಸರ ೨೪ ಪರ್ಯ್ಯಂತರವು ಬಂದಂತಹ ವುಂಡಿಗೆಯನು ಹನ್ನೆರಡು ಪಂಚಕದವರೊಳಗೆ ಆರುಂ [ಅ]

(೮) ಅಳಿಹಲಾಗ(ದು) ಅಳಿಹಿದವರು ಅಗ್ರಹಾರವನಳಿದವರು ದೇವಾಲ್ಯವನಳಿದವರು ಮಂಗಳ ಮಹಾ ಶ್ರೀ ಶ್ರೀ"

**ಅದೇ ಮುಖಮಂಟಪದ ಪೂರ್ವದಿಕ್ಕಿನ ತೊಲೆಯ ಮೇಲೆ: ಶಾಸನ ನಂ. 133 :**

(೧) ....ದಾಳದಗ್ರಹಾರನಿಕರಂ ಭೂಪಾಳವಿದ್ವಜ್ಜನ। ಪ್ರಸವಂ ನೋಳ್ಪಡೆ ನೀತಿ ಯುಕ್ತಿ ದಯೆ ದಾನ ಜ್ಞಾನ ಸನ್ಮಾನ ಸ। ತ್ಯಸದರ್ಥ್ಥ ಸ್ಮೃತಿಕಾವ್ಯನಾಟಕ ಕವಿತ್ವ ತರ್ಕ್ಕ ಮಾರ್ಗಂ ವಿಚಾ। ರಿಸೆ....ಗ ಮಹಾಜನಂಗಳ

---

3 'ಎಪಿಗ್ರಾಫಿಯ ಕರ್ನಾಟಕ'—೬ನೆಯ ಸಂಪುಟ.

(೨) ಮುಖ ಜಿಹ್ವಾಗ್ರದೊಳು,ಕಂ....॥ ಪೊಂನಂ ನಲ್ಲೂರಶೇಷದ್ವಿಜ ಜನತಾ ಶ್ರೇಣಿಗಿಂತುಂ ಕ್ರಯಂ ಗೊಂ। ಡಿನ್ನೂಱಪ್ಪತ್ತು ಕಂಬಂ ಕೆಱಗೆ ನಡೆವಿನಂ ಭಂಡಿ ಯೊಂದಕ್ಕೆ ಕೆಯ್ಯಂ....। ತಂನ ಸ್ತ್ರೀಗೌರಿಯಕ್ಕಂ ಮತನತಿ....।

(೩) ವಂನಂ ಶ್ರೀ ಮಾದಿರಾಜಂ ಜಗವಜಿವಿನೆಗಂ ಶಾಶ್ವತಂ ಮಾಡಿ ಕೊಟ್ಟಂ ॥ ಭರದಿಂ ಮಾಹಣ್ಣಂ ಕುಡೆ। ನಿರುತಂ ನೆಲ್ಲೂರಕೆಱಗೆ ಭಂಡಿಯ ನಡಸು। ಬ್ಬರೆ ಪೊಗಳೆ ಸರ್ಬ್ಬಬಾಧಾ। ಪರಿಹಾರಂ ಮಾಡಿ ನಡೆಯಿಪ ಮಹಾಜಾನ ಶ್ರೀ ಶ್ರೀ ಶ್ರೀ ॥"

(೪) "ಸ್ವಸ್ತಿ ಶ್ರೀಮತು ಸಕವರ್ಷ ೧೧೩೦ನೆಯ ಪ್ರಭವ ಸಂವತ್ಸರದ ಚೈತ್ರ ಶು ॥ ಬ್ರಿ. ಸ್ವಸ್ತಿಸಮಸ್ತ ಭುವನಾಶ್ರಯಂ ಹೊಯ್ಸಣ ವೀರಬಲ್ಲಾಳದೇವರು ಹೆದ್ದೊಱ ಮರ್ಯಾದೆಯಾಗಿ ದಿಗ್ವಿಜಯಂ ಗೆಯ್ದು ರಾಜ್ಯಂಗೆಯ್ಯುತ್ತಿರೆ ತತ್ಪಾದ ಪದ್ಮೋಪಜೀವಿ ಶ್ರೀಮನ್ಮಹಾ

(೫) ಪ್ರಧಾನ....ನೂ....ಣರಳು ನಲ್ಲೂರ ಹಿರಿಯ ಕೆಱಗೆ ಉತ್ತಮದಱ ಕಂಬ ೧೧೦ ಬಳಹರಟ್ಟ ಕಂಬ ೧೧೦ ಅನ್ತು ೨೨೦ ಕ್ಕಂಬ ಎರೆಯ ಕಯ್ಯ ಒಂದು ಭಂಡಿಯಾ ಚಂದ್ರಾರ್ಕತಾರಂ ಸಲುವಂತಾಗಿ ಧಾರಾಪೂರ್ಬ್ಬಕಂ ಮಾಡಿ ಬಿಟ್ಟ ದತ್ತಿ ಮಂಗಳ ಮಹಾ ಶ್ರೀ"

**4 ಶಾಸನ ನಂ. 134 : ಅದೇ ಮಂಟಪದ ಉತ್ತರಕಡೆಯ ತೊಲೆಯ ಮೇಲೆ:**

(೧) ಶ್ರೀ ಗಣಾಧಿಪತಯೇನಮಃ। ಶ್ರೀ ಸರಸ್ವತ್ಯೈನಮಃ। ಸ್ವಸ್ತಿ ಶ್ರೀಮತ್ ಶಕ ವರುಷ ೧೧೬೫ ಶುಭಕೃತು ಸಂವತ್ಸರದ ಶ್ರಾವಣದ ಪೌರ್ಣ್ನಮೀ ಆದಿವಾರದಂದು ಶ್ರೀ ಮದನಾದಿಯಗ್ರಹಾರ ಶ್ರೀ ಕೇಶವೇಶ್ವರಪುರವಾದ ಹಿರಿಯನಲ್ಲೂರಶೇಷ ಮಹಾ ಜನಂಗಳ ಸನ್ನಿಧಿಯಲ್ಲಿ ಶ್ರೀ ಕೇಶವದೇವರ

(೨) ನಂದಾದೀವಿಗೆ ಎಣ್ಣೆಗೆವೂ ಚಾತುರ್ಮಾಸೆಯೇಕಾದಶಿಯ ಅಧಿಕಪಾಡಿ ಯೆಣ್ಣೆಗೆಯೂ ತುಯ್ಯಲರ ಕಱಯನೂಳಿ ಶೆಟ್ಟಿ ಕೇದಗೆಕೆಱಯ ಬೊಮ್ಮಗವುಂಡನ ಮಗ ಜೋಗವುಂಡನ ಗೌಡಿಕೆಯೊಳಗಣ........

(೩) ಮಾಳಗವುಂಡನ ಕಯ್ಯಲು ಕ್ರಯವಾಗಿಕೊಂಡು ಕೇಶವೇಶ್ವರ ದೇವರಿಗೆ ನಂದಾದೀವಿಗೆಗೆ........

(೪) ....ಜವೊಂನ್ನ ಗದ್ಯಾಣವೆರಡು ಆ ಬಡ್ಡಿಯಲು ವರಿಸಂಪ್ರತಿ.... ಉವಲುಂಬಳಿವಾಗಿ...."

---

4 'ಎಪಿಗ್ರಾಫಿಯ ಕರ್ನಾಟಕ' –6ನೆಯ ಸಂಪುಟ.

ಈ ಶಾಸನದ ಕಾಲ ಶಾ. ಶಕ ೧೧೩೮ (ಕ್ರಿ. ಶ. ೧೨೧೬) ಆಗ ದ್ವಾರಸಮುದ್ರದಲ್ಲಿ 'ಜಗದೇವಮಲ್ಲ'ನೆಂಬ ಬಿರುದಾಂಕಿತನಾದ ಹೊಯ್ಸಳ ಚಕ್ರವರ್ತಿ ೧ನೆಯ ನರಸಿಂಹ (ಕ್ರಿ. ಶ ೧೧೫೨–೧೧೭೩)ನ ಮಗ ಎರಡನೆಯ ಬಲ್ಲಾಳ (ಕ್ರಿ. ಶ. ೧೧೭೩–೧೨೨೦)ನು ರಾಜ್ಯವಾಳುತ್ತಿದ್ದನು. ಇವನು ಬಹು ಪರಾಕ್ರಮಿಯು. 'ವೀರಬಲ್ಲಾಳ' ನೆಂದು ಹೆಸರಾಗಿದ್ದನು.

ಹೊಯ್ಸಳರ ರಾಜ್ಯದಲ್ಲಿ ಪ್ರಜೆಗಳಿಗೆ ಪೂರ್ಣ ಸ್ವಾತಂತ್ರ್ಯವಿದ್ದಿತು. ಸ್ವಾಯತ್ತ ಗ್ರಾಮರಾಜ್ಯ ಇಲ್ಲವೆ ಪಂಚಾಯತ ರಾಜ್ಯದ ಕಲ್ಪನೆಯು ಈ ಶಾಸನದಿಂದ ನಮ್ಮ ನಿದರ್ಶನಕ್ಕೆ ಬರುವಂತಿದೆ. ರಾಜನು ತನ್ನ ರಾಜ್ಯದ ಸಂರಕ್ಷಣೆಗಾಗಿ ಗಡಿಪ್ರದೇಶಗಳಲ್ಲಿ ಹೆಗ್ಗಡೆಗಳನ್ನು ದಂಡನಾಯಕರನ್ನೂ ನೇಮಿಸಿರುತ್ತಿದ್ದನು. ಯುದ್ಧಕಾಲ ಮತ್ತು ರಾಜ್ಯಾಭಿಷೇಕ ಮೊದಲಾದ ಪ್ರಸಂಗಗಳಲ್ಲಿ ಪ್ರಜೆಗಳು ರಾಜನಿಗೆ ಕೆಲವು ಹೆಚ್ಚಿನ ಕರ (ತೆರಿಗೆ)ಗಳನ್ನೂ ಕೊಡಬೇಕಾಗುತ್ತಿತ್ತಷ್ಟೆ. ಉಳಿದ ಕಾಲದಲ್ಲಿ ಗ್ರಾಮದವರೇ ತಮ್ಮ ಗ್ರಾಮದಲ್ಲಿ ತೆರಿಗೆಗಳನ್ನು ಗೊತ್ತುಮಾಡಲು ಅವನ್ನು ವಸೂಲು ಮಾಡಿ ವಿನಿಯೋಗಿಸಿ ಗ್ರಾಮದ ಅಭಿವೃದ್ಧಿಕಾರ್ಯಗಳನ್ನು ಮಾಡಲು ಪೂರ್ಣ ಸ್ವತಂತ್ರರಾಗಿದ್ದರು. ಗ್ರಾಮದ ಆಡಳಿತಕ್ಕಾಗಿ 'ಮಹಾಜನ'ಗಳ ಒಂದು ಸಂಘವು ಪಂಚಾಯತಿಯ ರೂಪದಲ್ಲಿ ಇರುತ್ತಿದ್ದಿತು. ಈ ಸಂಘಕ್ಕೆ ಗ್ರಾಮದ ಪ್ರತಿಯೊಂದು ಉದ್ಯೋಗಸ್ಥ ಜನಾಂಗವೂ ತನ್ನ ಪ್ರತಿನಿಧಿಯನ್ನು ಆರಿಸುತ್ತಿತ್ತು. ಹೀಗೆ ಹಿರೇನಲ್ಲೂರ ನೆರೆಯ ತುಯ್ಯಲರ ಕೆರೆ ಮತ್ತು ಬಟ್ಟಿಯೂರ ಗ್ರಾಮಗಳ ಆಡಳಿತವು ಮೂವತ್ತು ವೃತ್ತಿಯ ಅರವತ್ತು ಮಹಾಜನರ ಅಧಿಕಾರದಲ್ಲಿತ್ತು. ಅವರು ಅನ್ನದಾತನಾದ ರೈತನ ಅಭಿವೃದ್ಧಿಗೆ ಹೆಚ್ಚಿನ ಮಹತ್ವ ಕೊಡುತ್ತಿದ್ದರು. ಬೆಳೆಗಳನ್ನು ಬೆಳೆಯಲು ನೀರಾವರಿಯ ಯೋಜನೆಗಳನ್ನು ಕೆರೆಕಟ್ಟೆಗಳ ರೂಪದಲ್ಲಿ ಮಾಡುತ್ತಿದ್ದರು. ಅದಕಾಗಿ ಪ್ರತಿವರ್ಷ ರೈತರು ಕೆರೆಗಳಿಂದ ನೀರು ಹಾಯಿಸಿಕೊಳ್ಳುವ (ಪರಿವರ್ತನೆಯ) ಕಾಲದಲ್ಲಿ ಗ್ರಾಮದ ಮಹಾ ಜನಗಳು ಕೆಲವು ತೆರಿಗೆಗಳನ್ನು ಸುವರ್ಣ (ಹಣ), ಭತ್ತ ಮೊದಲಾದ ಧಾನ್ಯರೂಪದಲ್ಲಿಯೂ ನಿಗದಿ ಮಾಡುತ್ತಿದ್ದರು. ಅವನ್ನು ಪಡೆದು ವಿನಿಯೋಗಿಸುವ ಅಧಿಕಾರ ಊರ ಮಹಾಜನರಿಗಿದ್ದಿತು. ಇದಕ್ಕೆ 'ತೇಜೋಪಾರ್ಜನೆ' ಇಲ್ಲವೆ ತೇಜಃಸ್ವಾಮ್ಯವೆಂದು ಹೆಸರು. ಇದನ್ನೇ ಅಷ್ಟೈಶ್ವರ್ಯವೆಂತಲೂ ಕರೆಯುವದುಂಟು. ಈ ಸ್ವಾಮ್ಯ ಎಂಟು ಪ್ರಕಾರವಾಗಿದೆ:

ಆಜ್ಞಾ ಶುಲ್ಕಂ ಚ ದಂಡಶ್ಚ ಮುದ್ರಾಕರಣಮೇವ ಚ ।
ನಿವಾಸಿನೀಯು ಕರ್ತೃತ್ವಂ ಪ್ರಜಾಭ್ಯೋ ಭಯರಕ್ಷಣಂ ॥
ಸುಘೋಷ್ಟಂ ಚ ಕರಾದಾನಂ ಕಾರುಸಂಸ್ಥಾಪನಂ ತಥಾ ।

(೧) ಬೇಕಾದ ಆಜ್ಞೆಗಳನ್ನು ಮಾಡುವದು; (೨) ಸುಂಕವನ್ನು ಗೊತ್ತು ಮಾಡುವದು; (೩) ದಂಡಗಳನ್ನು ವಿಧಿಸುವದು: (೪) ನಾಣ್ಯಗಳನ್ನು ಮಾಡಿಸಿ

ಚಲಾವಣೆಯಲ್ಲಿ ತರುವದು ; (೫) ಗಡಿಗಳನ್ನು ನಿರ್ಣಯಿಸುವದು ; (೬) ಪ್ರಜೆಗಳನ್ನು ನಿರ್ಭಯವಾಗಿ ಕಾಪಾಡುವದು ; (೭) ಬೇಕಾದಷ್ಟು ಕಂದಾಯವನ್ನು ತೆಗೆದುಕೊಳ್ಳುವದು ; (೮) ಬೇಕಾದ ಶಿಲ್ಪಕಾರ್ಯವನ್ನು ಮಾಡಿಸಿಕೊಳ್ಳುವದು. ['ಎಪಿಗ್ರಾಫಿಯ ಕರ್ನಾಟಿಕ' 12ನೆಯ ಸಂಪುಟ, ಶಿರಾ ತಾಲ್ಲೋಕ 95ನೆಯ ನಂಬರಿನ ತಾಮ್ರ ಶಾಸನ, ಶೀಬೀ ಅಗ್ರಹಾರದ ಶಾಸನ, ಕಾಲ ಶಕ 1324 ಅಥವಾ ಕ್ರಿಸ್ತಾಬ್ದ 1403] [5]

ಹೊಯ್ಸಳರ ಕಾಲದಲ್ಲಿ ನಲ್ಲೂರು ಗ್ರಾಮ ಪ್ರಸಿದ್ಧ ಅಗ್ರಹಾರವಾಗಿದ್ದಿತು. ಇಲ್ಲಿಯ ಕೆರೆ ಬಹಳ ದೊಡ್ಡದು. ಈ ಕೆರೆಯಿಂದ ನೀರಾವರಿಯಾಗಿ ಸಾಕಷ್ಟು ಭತ್ತವ (ನೆಲ್ಲ)ನ್ನು ರೈತರು ಬೆಳೆಯುತ್ತಿದ್ದರು. ಅಂತೆಯೆ ಈ ಊರಿಗೆ 'ಹಿರಿಯ ಕೆರೆಯ ನೆಲ್ಲೂರು' ಎಂಬ ಹೆಸರು ಅನ್ವರ್ಥಕವಾಗಿದ್ದಿರಬಹುದಾಗಿದೆ. ಅದೇ ಈಗ ಹಿರೇನಲ್ಲೂರಾಗಿ ಉಳಿದಿದೆ. ಈ ಅಗ್ರಹಾರವನ್ನು 'ಶ್ರೀ ಮದನಾದಿ' ಎಂದು ಹೇಳಲಾಗಿದೆ. ಇಲ್ಲಿ ಪಂಡಿತರೂ ಸದಾಚಾರಿಗಳೂ ಆದ ವಿಪ್ರರು ವಾಸವಾಗಿದ್ದರು. ಅವರು ಈ ಎರಡು ಗ್ರಾಮಗಳ ಮಧ್ಯಸ್ಥಿಕೆಯನ್ನು ವಹಿಸಿ ಈ ಶಾಸನವನ್ನು ಧೃವಉಂಡಿಗೆ[6] ಯಾಗಿ ಶಾಶ್ವತವಾಗಿ ನಡೆಯುವಂತೆ ಮಾಡಿದರು.

ಈ ಶಾಸನಕ್ರಮದಲ್ಲಿ ಬಂದಿರುವ 'ಅರಮನೆಯ ಸಿದ್ಧಾಯ' ಬಹುಮಹತ್ವದ್ದು. ಹೊಯ್ಸಳ ಅರಸರು ರಘುರಾಜರಂತೆ ಪ್ರಜೆಗಳಿಂದ ಕರಗಳನ್ನು 'ಸಹಸ್ರಗುಣಮುತ್ಸ್ರಷ್ಟುಂ' ತೆಗೆದುಕೊಳ್ಳುತ್ತಿದ್ದರು. ಕೆಲವು ಶಾಸನಬದ್ಧವಾದ ರಾಜನ ಅಧಿಕಾರದ ಮೂಲಕರಗಳು ಬಳಕೆಯಲ್ಲಿದ್ದವು. ಅವಕ್ಕೆ '**ಕುಳ**'ವೆಂದು ಹೆಸರು. ರಾಜನಿಂದ ವಿಧಿಸಲ್ಪಟ್ಟ ಮೂಲಕರಗಳ ಸಮುದಾಯಕ್ಕೆ '**ಸಿದ್ಧಾಯ**'ವೆನ್ನುತ್ತಿದ್ದರು. ಈ ಸಿದ್ಧಾಯವು (Permanent revenue) [ಸಿದ್ಧ–ನೇರವಾಗಿ ರಾಜನ ಅಧಿಕಾರಕ್ಕೊಳಪಟ್ಟ, ಆದಾಯ–ತೆರಿಗೆ (ಕರ)] ಈ ಆದಾಯಕರದ ಬೇರೆ ಬೇರೆ ವಿಭಾಗಗಳು ಶಾಸನೋಕ್ತವಾಗಿವೆ :

ಮೊದಲನೆಯ ವಿಭಾಗದಲ್ಲಿ (೧) **ಕುಳ** : ಇದು ಮೊದಲಕರ, ಎಲ್ಲ ತೆರಿಗೆಗಳಿಗೂ ಮೂಲವಾದುದು. ಇದಕ್ಕೆ ಸಮಾನುಪಾತವಾಗಿ ಉಳಿದ ಉಪಕರಗಳ ಆಕರಣೆಯನ್ನು ಮಾಡಲಾಗುತ್ತಿತ್ತು. (೨) **ವತ್ತ** : ಕುಳದ ಮೇಲೆ ನೂರಕ್ಕೆ ಎರಡೂವರೆಯಂತೆ ಸಾವುಕಾರ (Banker)ನು ರಾಜಭಂಡಾರಕ್ಕಾಗಿ ತೆಗೆದುಕೊಳ್ಳುವ ಕಮೀಷನ್ ರೂಪದಲ್ಲಿಯ ಕರ. (೩) ಸಾದ : ಸವೆದ ಇಲ್ಲವೆ ಖಂಡಿತ (ಕಚ್ಚಾದ) ನಾಣ್ಯಗಳ ವಿನಿಮಯಕ್ಕಾಗಿ ತೆಗೆದುಕೊಂಡ ದಳ್ಳಾಳಿ (ಕಮೀಷನ್) ;

---

5 'ಸಂಭಾವನೆ' (ಬಿ.ಎಂ., ಶ್ರೀಯವರ ಸ್ಮಾರಕ) ಗ್ರಂಥದಲ್ಲಿ ಶ್ರೀ ಆರ್. ರಾಮರಾವ್ ಅವರ ಲೇಖನ 'ಶಾಸನಗಳಲ್ಲಿ ಪರಿಭಾಷೆ' ನೋಡಿ.

6 ಧೃವ ಉಂಡಿಗೆ—ರಾಜಶಾಸನ, ಮುದ್ರೆ.

ಎರಡನೆಯ ವಿಭಾಗದಲ್ಲಿ (೧) **ವಲ್ಲಭ**: ರಾಷ್ಟ್ರಕೂಟರು ತಮ್ಮ ಮಾಂಡಲಿಕರು ತೆಗೆದುಕೊಳ್ಳುತ್ತಿದ್ದ ಕರ. ಇದನ್ನೇ ಹೊಯ್ಸಳರು ಜಾರಿಯಲ್ಲಿ ತಂದಿದ್ದರು. (೨) **ಕುಮಾರ**: ರಾಜಕುಮಾರ (ಯುವರಾಜ)ನಿಗಾಗಿ ಜಮೀನಿನ ಹುಟ್ಟುವಳಿಯಲ್ಲಿ ತೆಗೆದುಕೊಳ್ಳುತ್ತಿದ್ದ ಕರ. (೩) **ನಿಬಂಧ**: ಸತ್ಪಾತ್ರರಾದ ಪಂಡಿತರು, ವೀರರು ಮೊದಲಾದವರ ಪಾಂಡಿತ್ಯ-ಶೌರ್ಯಗಳ ಸೇವೆಗಾಗಿ ಜಮೀನಿನ ಹುಟ್ಟುವಳಿಯ ಮೇಲೆ ತೆಗೆದುಕೊಂಡ 'ರಾಜಸಹಾಯ' ಕರ.

ಮೂರನೆಯ ವಿಭಾಗದಲ್ಲಿ (೧) **ಶ್ರೀಕರಣ**: ಲಂಚಗುಳಿಯನ್ನು ತಪ್ಪಿಸಲು ನಾಡ ಭಾಂಡಾರದ ಕರಣಿಕ (ಕುಳಕರಣಿಕ) ಮೊದಲಾದ ಅಧಿಕಾರಿಗಳಿಗಾಗಿ ಕುಳವನ್ನು ಅನುಸರಿಸಿ ಆಕರಿಸಿದ ಕರ; (೨) **ಸುಂಕ (ಸಂ. ಶುಲ್ಕ)**: ಪರನಾಡುಗಳಿಂದ ಬಂದ ವಸ್ತುಗಳ ಮೇಲೆ ಹೇರಿದ ಕರ. ಇದನ್ನು ಸುಂಕಾಧಿಕಾರಿಗಳಾದ ಹೆಗ್ಗಡೆಗಳಿಗಾಗಿ ತೆರಲಾಗುತ್ತಿತ್ತು. (೩) **ಪಣ್ಣಾಯ**: ವಸ್ತುಗಳ ಹುಟ್ಟುವಳಿಯ ಮೇಲೆ ಉದ್ಯೋಗಸ್ಥರ ನೆರವಿಗಾಗಿ ಆಕರಣೆ ಮಾಡಿದ ಕರ; (೪) **ಅಡಕೆ ಲೆಕ್ಕ**: ತೋಟ ಪಟ್ಟಿಗಳ ವ್ಯವಸಾಯಕ್ಕೆ ಉತ್ತೇಜನ ಕೊಡಲು ಪ್ರತಿಯೊಂದು ಲಕ್ಷ ಅಡಕೆಗಳ ಮೇಲೆ ಹೇರಿದ ಕರ;

ಇವಿಷ್ಟು ಕರಗಳನ್ನು ಹೊಯ್ಸಳರ ರಾಜ್ಯದಲ್ಲಿ ಸಾಮಾನ್ಯವಾಗಿ 'ಸಿದ್ಧಾಯ' (Permanent Settlement)ವೆಂದು ಕರೆಯುತ್ತಿದ್ದರು. ಕೆಲವೆಡೆ ಶಾಸನಗಳಲ್ಲಿ 'ಕುಳ'ವನ್ನೇ ಸಿದ್ಧಾಯವೆಂದು ಹೇಳಲಾಗಿದೆ.[7] ಈ ಮೂಲ ತೆರಿಗೆಗಳಲ್ಲದೆ ಕಂಡಿಗೆ (ಸೂಲು) ಪಣ, ಕಣ (ಮೇವು-ಕಣಿಕೆ) ನಿಬಂಧ, ಆನೆಯ ಸೇಸೆ, ಕುದುರೆಯ ಸೇಸೆ, ವಿಜಯವೀರ ವಣ (ಪಣ), ಮೊದಲಾದ ಹಲವು ಸಾಮಯಿಕ (ಯುದ್ಧ ಮೊದಲಾದ ಕಾಲದಲ್ಲಿಯ) ತೆರಿಗೆಗಳನ್ನು ತೆರಬೇಕಾಗುತ್ತಿತ್ತು. ಈ ತೆರಿಗೆಗಳ ಸಮುದಾಯಕ್ಕೆ ಕಿರುಕುಳ (ಕಿಱುಕುಳ)ವೆಂದು ಹೆಸರು. ಇವನ್ನು ವಸೂಲು ಮಾಡಲು ರಾಜಾಧಿಕಾರಿಗಳು ಮೇಲಿಂದ ಮೇಲೆ ಪ್ರಜೆಗಳಿಗೆ ಒತ್ತಾಯಮಾಡುತ್ತಿದ್ದರಿಂದ 'ಕಿರುಕುಳ'ವೆಂದರೆ ಪದೇಪದೇ ತೊಂದರೆಕೊಡುವುದೆಂಬ ಅರ್ಥ ಈಗ ರೂಢಿಯಲ್ಲುಳಿದಿದೆ.

ಪಶ್ಚಿಮ ಬೋದಿಗೆಯ ಕೆಳಭಾಗದಲ್ಲಿರುವ (೧೩ನೆಯ) ಶಾಸನದಲ್ಲಿ ನಲ್ಲೂರ ಎಲ್ಲ ಮಹಾಜನಗಳು ಭೂಮಿಯನ್ನು ಅಳೆಯುವ ಬಗೆಗೆ ಮಾಡಿದ ಆಜ್ಞಾಪತ್ರದ ಉಲ್ಲೇಖವಿದೆ. ಭೂಮಿಯ ಅಳತೆಯ ಈ ಶಾಸನಕ್ಕೆ ಇಪ್ಪತ್ತು ನಾಲ್ಕು ವರ್ಷ (ಸಂವತ್ಸರ)ಗಳವರೆಗೆ ಎರಡು ಊರುಗಳ ಅರವತ್ತು ವೃತ್ತಿಯ ಮಹಾಜನರಲ್ಲಿ (ಪನ್ನೆರಡು ಪಂಚಕದವರೊಳಗೆ) ಯಾರೂ ತಪ್ಪಬಾರದೆಂದು ಹೇಳಿದೆ. ಈ ಶಾಸನ

7 The Hoysalas: J. Duncan M. Derrett, PP. 197-200

ವನ್ನು ಪಾಲಿಸದಿದ್ದರೆ ಪವಿತ್ರ ಅಗ್ರಹಾರವನ್ನು ದೇವಾಲಯವನ್ನೂ ಅಳಿದ ಪಾಪಕ್ಕೆ ಗುರಿಯಾಗುವರೆಂಬುದನ್ನು ಗೂಢವಾಗಿ ಸಂಕೇತಿಸಿದೆ.

ಪೂರ್ವದಿಕ್ಕಿನ ತೊಲೆಯ ಮೇಲಿರುವ (೧೩೪ ನೆಯ) ಶಾಸನದಲ್ಲಿ ಮೂರು ಕಂದಪದ್ಯಗಳಿವೆ. ಮೊದಲನೆಯ ಕಂದದಲ್ಲಿ ನಲ್ಲೂರ ಅಗ್ರಹಾರದಲ್ಲಿರುವ ರಾಜಾಶ್ರಯ ವನ್ನು ಪಡೆದ ವಿದ್ವಜ್ಜನರ ಪ್ರಶಂಸೆಯಿದೆ. ಈ ವಿದ್ವಜ್ಜನರು ನೀತಿ–ಯುಕ್ತಿ–ದಯಾ–ದಾನ–ಜ್ಞಾನ–ಸನ್ಮಾನ–ಸತ್ಯ–ಸತ್‌ಪ್ರಯೋಜನವುಳ್ಳವರು, ರಸವತ್ತಾದ ಅರ್ಥ ಯುಕ್ತವಾದ ಸ್ಮೃತಿ–ಕಾವ್ಯ–ನಾಟಕಗಳನ್ನು ಹೇಳುವಲ್ಲಿ ರಚಿಸುವಲ್ಲಿ ನಿಷ್ಣಾತರು, ನ್ಯಾಯ–ಅಲಂಕಾರ ಮೊದಲಾದ ಶಾಸ್ತ್ರಗಳನ್ನು ಕಂಠೋಕ್ತವಾಗಿ ಹೇಳಬಲ್ಲವರು. ಈ 'ವಿದ್ವಜ್ಜನತಾಶ್ರೇಣಿ'ಗಾಗಿ ಪೊನ್ನನೆಂಬ (?) ಮಾದಿರಾಜನು ತನ್ನ ಸತಿ ಗೌರಿ ಯಕ್ಕನೂ ಕೂಡಿ ೨೨೦ ಕಂಬ (ಭೂಮಿಯಳತೆ) ಭೂಮಿಯನ್ನು ಕ್ರಯ ತೆಗೆದು ಕೊಂಡಂತೆಯೂ 'ಕೆಱೆಯಭಂಡಿ'ಗಾಗಿಯೂ ಜಮೀನನ್ನು ಬಿಟ್ಟಂತೆ ಉಲ್ಲೇಖವಿದೆ. 'ಕೆಱೆಯಭಂಡಿ' ಎಂದರೆ ಕೆರೆಯ ಒಡ್ಡು (ಏರಿ)ಗಾಗಿ ಇಲ್ಲವೆ ಹೂತ (ಮಣ್ಣು ತುಂಬಿದ) ಕೆರೆಯಿಂದ ಮಣ್ಣನ್ನು ತೆಗೆಯಲು ಉಪಯೋಗಿಸುತ್ತಿದ್ದ ಗಾಡಿಗಳಿಗೆ ಹೆಸರು. ಕೆರೆಯನ್ನು ಸರಿಯಾದ ಸ್ಥಿತಿಯಲ್ಲಿ ಇಡುವದಕ್ಕಾಗಿ ಗಾಡಿಗಳು, ಎತ್ತುಗಳು, ಹೆರೆಯ ಎಣ್ಣೆ, ಹಾರಿ, ಗುದ್ದಲಿ, ಕೂಲಿಯ ಆಳು ಮೊದಲಾದವುಗಳ ವ್ಯವಸ್ಥೆಯನ್ನು ಗ್ರಾಮ ಸ್ಥರೇ ನೋಡಿಕೊಳ್ಳುತ್ತಿದ್ದರು. ಅದಕ್ಕಾಗಿ ಅವರು ರಾಜಭಾಂಡಾರದ ನೆರವನ್ನು ಬೇಡುತ್ತಿರಲಿಲ್ಲ. ಈ 'ಭಂಡಿ ನಡು'ವದನ್ನು ಪುಣ್ಯಕಾರ್ಯವೆಂದು ಗಣಿಸಲಾಗು ತ್ತಿತ್ತು. ಲೋಕೋಪಕಾರ ರೂಪವಾದ ಈ ಪುಣ್ಯಕಾರ್ಯಕ್ಕಾಗಿ ದತ್ತಿಯನ್ನು ಬಿಡುವದು ಗ್ರಾಮಸ್ಥರ ಧರ್ಮವಾಗಿತ್ತು. ಅದಕ್ಕೆ ಸುಂಕ, ಪಣ್ಣಾಯ ಮೊದಲಾದ ತೆರಿಗೆ ರೂಪ ಸರ್ವಬಾಧೆಗಳ ಪರಿಹಾರವಾಗುವಂತೆ ಮಾಡಿದರೆ ಪುಣ್ಯ ಬರುವದೆಂಬ ನಂಬುಗೆ ಜನರಲ್ಲಿ ಬೇರೂರಿತ್ತು. ಹೆಜ್ಜೆ ಹೆಜ್ಜೆಗೂ ಸರಕಾರವನ್ನೇ ನೆಚ್ಚಿರುವ ಇಂದಿನ ನಮ್ಮ ಗ್ರಾಮಸ್ಥರು ಇದರಿಂದ ಪಾಠ ಕಲಿಯಬಹುದಾಗಿದೆ.

ಇದರ ಕೆಳಗಣ ಶಾಸನದಲ್ಲಿಯೂ ಶಾ, ಶ. ೧೧೩೦ ರಲ್ಲಿ ಹೊಯ್ಸಳರಾಜ ವೀರ ಬಲ್ಲಾಳದೇವನ ಮಹಾಪ್ರಧಾನನು (?) ನಲ್ಲೂರ ಹಿರಿಯ ಕೆರೆಗೆ ೨೨೦ ಕಂಬ ಜಮೀನನ್ನು ಭಂಡಿ ನಡುವದಕ್ಕಾಗಿ ದತ್ತಿ ಬಿಟ್ಟಂತೆ ಉಲ್ಲೇಖವಿದೆ. ಈ ಶಾಸನವು ಐತಿಹಾಸಿಕ ದೃಷ್ಟಿಯಿಂದ ಬಹಳ ಮಹತ್ವದ್ದು. ಈ ಶಾಸನದ ಕಾಲ ಶಕವರ್ಷ ೧೧೩೦. ಇದು ಕ್ರಿ. ಶ. ೧೨೦೮ ನೆಯ ವರ್ಷಕ್ಕೆ ಸರಿಬೀಳುತ್ತದೆ. ಈ ಕಾಲದಲ್ಲಿ ಹೊಯ್ಸಳ ರಾಜ್ಯವನ್ನು ಕ್ರಿ ಶ. ೨ನೆಯ ಬಲ್ಲಾಳನು (ಕ್ರಿ. ಶ. ೧೧೭೩–೧೨೨೦) ಆಳುತ್ತಿದ್ದನು. ಇವನು ವೀರಬಲ್ಲಾಳನೆಂದು ಬಿರುದಾಂಕಿತನಾಗಿದ್ದನು. ಬಹು ಪರಾಕ್ರಮಿಯಾದ ಇವನು ಉಚ್ಚಂಗಿದುರ್ಗವನ್ನು ಹಿಡಿದು ಸಂಕಮದೇವನ ಕೈಕೆಳಗಿನ ಕಳಚುರಿ ಸೈನ್ಯವನ್ನು ಸೋಲಿಸಿದನು. ದಕ್ಷಿಣ ಕೊಡಗಿನಲ್ಲಿದ್ದ ಚಂಗಾಳ್ವರ ಪಾಳುಪರೆ

ಕೋಟೆಯನ್ನು ನಾಶಮಾಡಿ ಭಿಲ್ಲಮ ದೇವನ ದೊಡ್ಡ ಸೇಉಣ ಸೈನ್ಯವನ್ನು ಸೊರಟೂರಿನಲ್ಲಿ ಹಿಮ್ಮೆಟ್ಟಿ ವಿಜಯಶಾಲಿಯಾದನು.[೮] ಹೀಗೆ ಇವನು ಉತ್ತರದಲ್ಲಿ ಕಲಚುರಿ, ಚಾಲುಕ್ಯ ಮತ್ತು ಯಾದವರನ್ನೂ ದಕ್ಷಿಣದಲ್ಲಿ ಪಾಂಡ್ಯರನ್ನೂ ಗೆದ್ದು ತನ್ನ ಸಾಮ್ರಾಜ್ಯವನ್ನು ವಿಸ್ತರಿಸಿದನು. ಉತ್ತರ ಕರ್ನಾಟಕ ರಾಜ್ಯವನ್ನು ತನ್ನ ಅಧಿಪತ್ಯಕ್ಕೆ ತಂದನು. ಯಾದವರನ್ನು ಸೋಲಿಸಿ ಕೃಷ್ಣೆಯವರೆಗಿನ ಬೆಳವಲನಾಡನ್ನು ಗೆದ್ದುಕೊಂಡನು. ಲಕ್ಕುಂಡಿಯು ಅವನ ಈ ಉತ್ತರ ರಾಜ್ಯದ ರಾಜಧಾನಿಯಾಯಿತು. ತಿರುಪೊಳಲ ನಾಡನ್ನು ಗೆಲೆಯುವಾಗ ಕೃಷ್ಣಾನದಿಯ ಹತ್ತಿರದ ಹಳ್ಳವೂರ (ವಿಜಾಪುರ ಜಿಲ್ಲೆಯ ಬಾಗಲಕೋಟೆ ತಾಲೂಕಿನಲ್ಲಿರುವ ಹಳ್ಳೂರ)ಲ್ಲಿ ಸೈನ್ಯದ ಬಿಡಾರವನ್ನು ಮಾಡಿಕೊಂಡಿದ್ದನು. ಕೃಷ್ಣಾನದಿಗೆ ಪೆರ್ದೊಱೆ (ಹಿರಿಯ ತೊರೆ)ಯೆಂದು ಶಾಸನಗಳಲ್ಲಿ ಅನ್ವರ್ಥಕವಾದ ಹೆಸರು ಬಂದಿದೆ. ಈ ದಿಗ್ವಿಜಯವು ಸು. ಕ್ರಿ. ಶ. ೧೨೦೬ ರಲ್ಲಿ ನಡೆದಿರಬೇಕು. ಇವನು ಚೋಳರನ್ನು ಗೆದ್ದು ಚೋಳರಾಜನ ಕುಮಾರಿ ಮಹಾದೇವಿಯನ್ನು ಮದುವೆಯಾಗಿದ್ದನು.[9] ಈ ವಿಜಯದ ಸ್ಮಾರಕವಾಗಿ ಹೊಯ್ಸಳ ನಾಡಿನಲ್ಲಿ ಅನೇಕ ದಾನಧರ್ಮಗಳೂ ನಡೆದವು. 'ದಕ್ಷಿಣೇಶ್ವರ'ನಾದ ವೀರಬಲ್ಲಾಳದೇವನ ದಿಗ್ವಿಜಯವನ್ನು ಈ ಶಾಸನವು ಸಂಕೇತಿಸುತ್ತದೆ.

ಉತ್ತರದ ಕಡೆಯ ತೊಲೆಯ ಮೇಲಿರುವ (೧೩೫ ನೆಯ) ಶಾಸನದ ಕಾಲ ಶಕ ವರ್ಷ ೧೧೬೫ (ಕ್ರಿ. ಶ. ೧೨೪೩) ಆಗ ವೀರಬಲ್ಲಾಳನ ಮೊಮ್ಮಗ, ಎರಡನೆಯ ನರಸಿಂಹ (ಕ್ರಿ.ಶ. ೧೨೨೦-೧೨೩೫) ನ ಮಗನಾದ ವೀರಸೋಮೇಶ್ವರನು (ಕ್ರಿ.ಶ. ೧೨೩೫-೧೨೬೦) ಹೊಯ್ಸಳ ಸಾಮ್ರಾಜ್ಯದ ಚಕ್ರವರ್ತಿಯಾಗಿದ್ದನು. ಅವನು ದಕ್ಷಿಣದಲ್ಲಿ ಕಣ್ಣನೂರ (ವಿಕ್ರಮಪುರ)ದಲ್ಲಿಯೇ ಸ್ಥಿರವಾಗಿರುತ್ತಿದ್ದನು. ತನ್ನ ಸಾಮ್ರಾಜ್ಯವನ್ನು ತನ್ನ ಕುಮಾರರಾದ ರಾಮನಾಥ ಮತ್ತು ಮೂರನೆಯ ನರಸಿಂಹನಿಗೆ ವಿಭಾಗಿಸಿಕೊಟ್ಟನು. ರಾಮನಾಥನು ದಕ್ಷಿಣದ ರಾಜ್ಯಕ್ಕೆ ಅಧಿಪತಿಯಾದನು. ಮೂರನೆಯ ನರಸಿಂಹನು ದೋರಸಮುದ್ರದಲ್ಲಿದ್ದು ಉತ್ತರ ಸಾಮ್ರಾಜ್ಯದ ಆಡಳಿತವನ್ನು ನೋಡಿಕೊಳ್ಳುತ್ತಿದ್ದನು. ಅವನು ವೈಷ್ಣವನಾಗಿದ್ದನು. ಶ್ರೀ ಚೆನ್ನಕೇಶವ ಅವನ ಕುಲದೇವತೆ. ಈ ಶಾಸನದಲ್ಲಿ ಹಿರಿಯ ನಲ್ಲೂರನ್ನು 'ಶ್ರೀ ಮದನಾದಿಯಗ್ರಹಾರ ಶ್ರೀ ಕೇಶವೇಶ್ವರಪುರ'ವೆಂದು ವಿಶೇಷಿಸಲಾಗಿದೆ. ಇಲ್ಲಿಯ ಮಹಾಜನರ ಸಮಕ್ಷಮದಲ್ಲಿ ಶ್ರೀ ಕೇಶವದೇವರ ನಂದಾದೀವಿಗೆ ಮತ್ತು ವಿಶೇಷ ಪರ್ವಕಾಲದ ದೀಪಾರಾಧನೆಯ ಎಣ್ಣೆಯ ವೆಚ್ಚಕ್ಕಾಗಿ ತುಯ್ಯಲರ ಕೆರೆಯ ಶೆಟ್ಟಿಯೊಬ್ಬನು ಕೇದಗೆಕೆರೆಯ ಬೊಮ್ಮಗೌಡನ ಮಗ ಜೋಡಗೌಡನ ಗೌಡಿಕೆಯೊಳಗಿನ ಜಮೀನನ್ನು (?) ಮಾಳ

---

೮ ಕನ್ನಡ ನಾಡ ಚರಿತ್ರೆ (ಮೊದಲನೆಯ ಭಾಗ)—ಡಾ. ಬಿ. ಎ. ಸಾಲೆತೊರೆ, ಎಂ. ಎ. ಪಿ. ಹೆಚ್. ಡಿ.

9 Karnatak Handbook—D. K. Bharadvaj.

ಗೌಡನಿಂದ ಕ್ರಯವಾಗಿ ತೆಗೆದುಕೊಂಡು ದಾನ ಕೊಟ್ಟನಲ್ಲದೆ ಪೊಂನು (?) ಮತ್ತು ಎರಡು ಗದ್ಯಾಣ [10] ಗಳ ಬಡ್ಡಿಯಲ್ಲಿ ಪ್ರತಿವರ್ಷವೂ ಉಂಬಳಿ (?) ನಡೆಯುವಂತೆ ಮಾಡಿದನಾಗಿ ಈ ಶಾಸನದಿಂದ ತಿಳಿದುಬರುತ್ತದೆ.

ಈ ಶಾಸನಗಳಲ್ಲಿ ಬಂದಿರುವ ಬಟ್ಟೆಯೂರು ಮತ್ತು ತುಯ್ಯಲರಕೆರೆ ಗ್ರಾಮಗಳು ಈಗ ನಾಮಶೇಷವಾಗಿರುವಂತೆ ಕಾಣುತ್ತದೆ. (ಅವುಗಳ ಬಗೆಗೆ ಸಂಶೋಧನೆ ಮಾಡಲು ನನಗೆ ಅವಕಾಶವಾಗಲಿಲ್ಲ.) ಹಿರೇನಲ್ಲೂರು ಹೋಬಳಿಯಲ್ಲಿರುವ ಕೇದಗಿಗೆರೆಯು ಐತಿಹಾಸಿಕ ಮಹತ್ವದ ಗ್ರಾಮ. ಈ ಊರ ಶಾಸನಗಳು ಹಿರೇನಲ್ಲೂರಲ್ಲಿಯ ಶಾಸನಗಳಿಗಿಂತಲೂ ಪ್ರಾಚೀನವಾದವು. ಅವುಗಳಲ್ಲಿ ಉಕ್ತವಾಗಿರುವ ದೇವಾಲಯ ಪ್ರತಿಷ್ಠಾಪನೆ, ದತ್ತಿ, ಹೊಯ್ಸಳರ ವಂಶಾವಳಿ–ಪ್ರಶಸ್ತಿಗಳು ಹಾಗೂ ಆಸಂದಿನಾಡಿನ ಉಲ್ಲೇಖ ಬಹಳ ಸ್ವಾರಸ್ಯವಾದ ವಿಷಯಗಳು.

[11] ಹಿರೇನಲ್ಲೂರ ಹೋಬಳಿ ಕೇದಗಿಗೆರೆ ಗ್ರಾಮದ ಈಶ್ವರನ ಪಾಳು ದೇವಸ್ಥಾನ ನಿವೇಶನದಲ್ಲಿ ಬಿದ್ದಿರುವ ಕಲ್ಲಿನಲ್ಲಿರುವ ಶಾಸನ ನಂ. 142, ಪ್ರಮಾಣ $3' \times 2'$—

1. ಶ್ರೀನಮಸ್ತುಂಗ ಸಿರಸ್ಚುಂಬಿ ಚಂದ್ರಚಾಮರಚಾರವೇ ತ್ರೈಲೋಕ್ಯನಗ
2. ರಾರಂಭ ಮೂಳಸ್ತಂಭಾಯ ಸಂಭವೇ ||
3. ಸ್ವಸ್ತಿಸಮಧಿ ಗತಪಂಚ ಮಹಾಸಬ್ದ ಮಹಾಮಣ್ಡಳೇ
4. ಶ್ವರಂ ದ್ವಾರಾವತೀಪುರವರಾಧೀಶ್ವರಂ ಯಾದವಕುಳಾಂಬರದ್ಯುಮಣಿಸಂ
5. ಮ್ಯಕ್ತಚೂಡಾಮಣಿ ಮಲಪರೊಳ್ಗಣ್ಡ ಶ್ರೀಮನ್ಮಹಾಮಣ್ಡಳೇಶ್ವರಂತ್ರಿ
6. ಭುವನ ಮಲ್ಲಪೊಯ್ಸಳದೇವರು ಬೆಲ್ಲೂರ ಬೀಡಿನೊಳ್ಸುಖಸಂಕಥಾವಿ
7. ನೋದದಿಂ ರಾಜ್ಯಂಗೆಯ್ಯುತ್ತಿರೆ ಎಱೆಯಂಗದೇವರುಂ ಯುವರಾಜ್ಯಪ
8. ದವಿಯೊಳಿರೆ । ಸ್ವಸ್ತಿ ವಿಕ್ರಮಕಾಳದ ೧೯ನೆಯ ಯುವಸಂವತ್ಸ
9. ರದ ಮಾರ್ಗ್ಗಸಿರ ಕ್ರಿಷ್ಣಪಕ್ಷ ೧೧ ಸುಕ್ರವಾರದಂದು ಶ್ರೀಮನ್ಮಹಾಸ
10. ನ್ಧಿವಿಗ್ರಹಿ ನಾಗದೇವಯ್ಯ ನಾಯಕಂಗಳ ಮಾಪಂ ಪೆರ್ಗ್ಗಡೆ ಸೋಮನಾಥಯ್ಯ
11. ಭಾವಂ ಮಧುರಾಂತಕ ಶೆಟ್ಟಿಯು ಮಿರ್ವ್ವರುಮಿರ್ದ್ದು ಕೇದಗೆಗೆಱೆಯೊಳು ಆ

---

10 ಗದ್ಯಾಣವು ಒಂದು ಪ್ರಕಾರದ ಚಿನ್ನದ ನಾಣ್ಯ (ನಿಷ್ಕ), ಗದ್ಯಾಣ ಒಂದಕ್ಕೆ ೧೦ ಪಣಗಳು (೧ ಪಣ=೪ ಹಾಗ)

11 ಎಪಿಗ್ರಾಫಿಯ ಕರ್ನಾಟಕ 6ನೆಯ ಸಂಪುಟ, ಕಡೂರ ತಾಲ್ಲೋಕಿನ ಶಾಸನಗಳು ಪುಟ 125–28.

12. ಸೋಮನಾಥಯ್ಯನೊನ್ದು ದೇಗುಲಮುಂ ಭಾವಿಯುಮ ಮಂದಿಸಿದಂ ಸೆಟ್ಟಿಯೊ
13. ನ್ದು ದೇಗುಲವಂ ಮಾಡಿಸಿದರವಕ್ಕೆ ॥ ಜನಕಂ ಶ್ರೀ ಪುರ್ಷೋತ್ತಮಂ ನಡಪಿದಾ
14. ಸ್ದಂ ಪೊಯ್ಸಳಾಧೀಶ್ವರಂ ಜಿನನಾಥಂ ತನಗಾಪ್ತನಿಂಬಿನೆ ಪೆತ್ತಂಬಿಕೆ ಪೋಚಿಕಬ್ಬೆ ಅ
15. ನುಜರ್ಕೋರಯ್ಯನುಂ ನಾಗವೇವನುಮೆಂದಂದೆಲೆ ಚಾವರಾಜನೆ ವಲಂ ಧನ್ಯಂಪೆಜಿರ್ದ್ಧರನ್ನ
16. ರೇ ॥ ಉತ್ತರಾಯಣ ಸಂಕ್ರಮಣದನ್ದೂ ಸನ್ಧಿವಿಗ್ರಹಿ ನಾಗದೇವಯ್ಯಂ ....ಮೂಲ
17. ಸ್ಥಾನವೇವರ್ಗ್ಗಂ ಮಲ್ಲಿಕಾರ್ಜುನದೇವರ್ಗ್ಗಂ ಪೂಜೆಪುನಸ್ಕಾರನಿವೇದ್ಯ ಕ್ಕಮಿವು ಬಿಟ್ಟದತ್ತಿ
18. ಎರೆಮತ್ತರಾಜೀಂತೆಂಗಾಡು ಮತ್ತರಾಜುಗರ್ದ್ದೆ ಮತ್ತರೊನ್ದುಗಾಣ ಮೊಂದುಮ....
19. ಕೃಯಾಸಕ್ತಿ ಪಣ್ಡಿತರ್ಗ್ಗೆ ಧಾರಾಪೂರ್ವಕಂಮಾಡಿ ಕೊಟ್ಟ ಸ್ಥಾನ ಮಿಂನ್ತೀಧ
20. ರ್ಮ್ಮವಂ ಪ್ರತಿಪಾಳಿಸಿಂದನನ್ತಪುಣ್ಯಂಯಿಾದರ್ಮ್ಮವಂ ಕೆಡಿಸಿದಾತಂ
21. ಕವಿಲೆಯುಮುದಜಿಕಜಿುವುಮನೀತಪೋಧನನುಮನೀ ಕತ್ತಿಗೆಯೊಳಿಕುರು
22. ಕ್ಷೇತ್ರ ಬಾಣರಾಸಿಯೊಳಳಿದ ಪಾತಕಂ ॥ ಸ್ವದತ್ತಂ ಪರದತ್ತಂ ವಾ
23. ಯೋಹರೇತಿ ವಸುಂಧರಾಷಷ್ಟಿರ್ವರ್ಷ ಸಹಸ್ರಾಣಿ ವಿಷ್ಟಾಯಾಂ
24. ಜಾಯತೇ ಕ್ರಿಮಿ ॥

ಈ ಶಾಸನವಲ್ಲಿ ಕೆಲವು ವಿಶೇಷ ಚಾರಿತ್ರಿಕ ಅಂಶಗಳು ಕಂಡುಬರುತ್ತವೆ. ವಿಕ್ರಮ ಕಾಲವನ್ನಿಲ್ಲಿ ಗಣಿಸಿರುವದು ಹೊಯ್ಸಳರು ಮೊದಲು ಚಾಳುಕ್ಯರ ಮಾಂಡಲಿಕರಾಗಿದ್ದರೆಂಬುವಕ್ಕೆ ಸಾಕ್ಷಿ ನುಡಿಯುವಂತಿದೆ. ಕಲ್ಯಾಣದ ಪಶ್ಚಿಮ ಚಾಲುಕ್ಯರಲ್ಲಿ ಪ್ರಸಿದ್ಧನಾದ ೬ನೆಯ ವಿಕ್ರಮಾದಿತ್ಯನು (ಕ್ರಿ.ಶ. ೧೦೭೬–೧೧೨೬)[11] ತಾನು ಪಟ್ಟಕ್ಕೆ ಬಂದ ವರ್ಷದ ಸ್ಮಾರಕವಾಗಿ ಹೊಸ ಶಕವನ್ನು ಪ್ರಾರಂಭಿಸಿದನು. ಈ 'ಚಾಳುಕ್ಯ ವಿಕ್ರಮ ಶಕ'ವನ್ನು ಹೊಯ್ಸಳರು ಸ್ವತಂತ್ರ ಚಕ್ರಾಧಿಪತ್ಯವನ್ನು ಸ್ಥಾಪಿಸುವವರೆಗೂ ಬಳಕೆಯಲ್ಲಿ ತಂದಿದ್ದರು. ಈ ಶಾಸನವಲ್ಲಿ ಹೇಳಿರುವ ವಿಕ್ರಮ ಕಾಲದ ಈ ೯೯ನೆಯ ವರ್ಷವು ಕ್ರಿ.ಶ. ೧೧೪೪ (ಶಕ ೧೦೧೬) ಕ್ಕೆ ಸರಿಹೊಂದುತ್ತದೆ. ಹೊಯ್ಸಳರ ಮೂಲ

11 The Early History of the Deccon —R. G. Bhandarkar.

ಪುರುಷನಾದ ವಿನಯಾದಿತ್ಯನು (ಕ್ರಿ.ಶ. ೧೦೪೭–೧೦೯೮) ತನ್ನ ಮಗಳನ್ನು ತ್ರೈಲೋಕ್ಯಮಲ್ಲ ಚಾಲುಕ್ಯನಿಗೆ ಕೊಟ್ಟಿದ್ದನು. ಹೀಗೆ ಕಲ್ಯಾಣದ ಚಾಳುಕ್ಯರು ಮತ್ತು ಹೊಯ್ಸಳರಲ್ಲಿ ಶರೀರ ಸಂಬಂಧವೂ ಬೆಳೆದಿತ್ತು. ತುಂಗಭದ್ರೆಯ ಕೆಳಗಣ ದಕ್ಷಿಣ ಚಾಲುಕ್ಯ ಸಾಮ್ರಾಜ್ಯವು ಹೊಯ್ಸಳರ ಮಾಂಡಲಿಕತ್ವದಲ್ಲಿದ್ದಿತು. ಆಮೇಲೆ ವಿಷ್ಣುವರ್ಧನನ ಕಾಲದಿಂದ ಹೊಯ್ಸಳರು ಬಹಳ ಪ್ರಬಲರಾಗುತ್ತ ನಡೆದರು, ರಾಜ್ಯವನ್ನು ವಿಸ್ತರಿಸಿದರು. ವೀರಬಲ್ಲಾಳನ ಪರಾಕ್ರಮದಿಂದಾಗಿ ಹೊಯ್ಸಳ ರಾಜ್ಯವು ಸಾಮ್ರಾಜ್ಯವಾಗಿ ಬೆಳೆಯಿತು. ಮುಂದಿನ ಹೊಯ್ಸಳ ರಾಜರೆಲ್ಲ ಚಾಳುಕ್ಯರ ಆಧಿಪತ್ಯವನ್ನು ಕಿತ್ತೊಗೆದು ಸ್ವತಂತ್ರ ಚಕ್ರಾಧಿಪತ್ಯವನ್ನು ಪ್ರಸ್ಥಾಪಿಸಿದರು. ಅಂತೆಯೇ ಹೊಯ್ಸಳ ರಾಜರು 'ಸಮಸ್ತ ಭುವನಾಶ್ರಯ', 'ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ' ಎಂಬ ಚಾಳುಕ್ಯ ಚಕ್ರವರ್ತಿಗಳ ಬಿರುದುಗಳನ್ನು ಧರಿಸಿರುವದನ್ನು ಮುಂದಿನ ಶಾಸನದಲ್ಲಿ (ನಂ. 143) ಕಾಣುತ್ತೇವೆ.

ಪ್ರಸ್ತುತ ದಾನಶಾಸನದಲ್ಲಿ ಹೊಯ್ಸಳರಾಜ ತ್ರಿಭುವನಮಲ್ಲ ವಿನಯಾದಿತ್ಯನ ಮಹಾಸಂಧಿವಿಗ್ರಹಿಯಾದ ನಾಗದೇವಯ್ಯನಾಯಕನ ಮಾವ ಪೆರ್ಗಡೆ ಸೋಮನಾಥಯ್ಯನು ಕೇದಗೆಗೆರೆಯಲ್ಲಿ ಒಂದು ದೇವಾಲಯವನ್ನೂ, ಒಂದು ಬಾವಿಯನ್ನೂ ಕಟ್ಟಿಸಿದನು ಮತ್ತು ಅವನ ಭಾವನಾದ ಮಧುರಾಂತಕಶೆಟ್ಟಿಯೂ ಒಂದು ಗುಡಿಯನ್ನು ನಿರ್ಮಿಸಿದನು. ಉತ್ತರಾಯಣ ಸಂಕ್ರಮಣಕಾಲದ ಪುಣ್ಯ ಪರ್ವದಲ್ಲಿ ಸಂಧಿವಿಗ್ರಹಿ ನಾಗದೇವಯ್ಯನು ಕೇದಗೆಗೆರೆಯ ಮೂಲಸ್ಥಾನ ದೇವರಾದ ಮಲ್ಲಿಕಾರ್ಜುನದೇವರ ಪೂಜೆ, ಪುನಸ್ಕಾರ, ನೈವೇದ್ಯಕ್ಕೆಂದು ಆರು ಮತ್ತ (ಭೂಮಿಯಳತೆ) ಎರೆ, ಆರು ಮತ್ತ ಕೆಂಗಾಡು, ಒಂದು ಮತ್ತ ಗದ್ದೆ ಹಾಗೂ ಒಂದು ಎಣ್ಣೆಯ ಗಾಣ ಹೀಗೆ ದತ್ತಿಯನ್ನು ಸ್ಥಾನಾಧಿಪತಿ ಗುರುಗಳಾದ ಕ್ರಿಯಾಶಕ್ತಿ ಪಂಡಿತರಿಗೆ ಧಾರಾಪೂರ್ವಕವಾಗಿ ಬಿಟ್ಟಂತೆ ಉಲ್ಲೇಖವಿದೆ. ಈ ಧರ್ಮವನ್ನು ನಡೆಸಿಕೊಂಡು ಬಂದವರಿಗೆ ಅನಂತ ಪುಣ್ಯ ಲಭಿಸುವದು. ಇದನ್ನು ಕೆಡಿಸಿದವರು ಕುರುಕ್ಷೇತ್ರ–ಕಾಶಿಯಂತಹ ಪರಮ ಪವಿತ್ರ ಕ್ಷೇತ್ರಗಳಲ್ಲಿ ಕರುಸಹಿತ ಗೋವನ್ನು, ಕ್ರಿಯಾಶಕ್ತಿ ಪಂಡಿತರಂತಹ ತಪೋಧನರನ್ನೂ ಕೊಂದ ಪಾತಕಕ್ಕೆ ಗುರಿಯಾಗುವರೆಂಬುದಾಗಿ ಹೇಳಿದೆ. ತಾನು ಕೊಟ್ಟುದೇ ಆಗಲಿ, ಉಳಿದವರು ಕೊಟ್ಟುದೇ ಆಗಲಿ, ದತ್ತಿಯನ್ನು ಅಪಹರಿಸಿದವನು ಅರವತ್ತು ಸಾವಿರ ವರ್ಷಗಳವರೆಗೆ ಮಲದಲ್ಲಿ (ನರಕದಲ್ಲಿ) ಹುಳುವಾಗಿ ಹುಟ್ಟುವನೆಂಬ ಶ್ಲೋಕವು ಸಾಮಾನ್ಯವಾಗಿ ಎಲ್ಲ ದಾನಶಾಸನಗಳ ಕೊನೆಯಲ್ಲಿ ಇರುತ್ತದೆ.

ಈ ಶಾಸನದಲ್ಲಿರುವ ಇನ್ನೊಂದು ವಿಷಯ ಗಮನೀಯವಾದುದು. ಪೋಚಿಕಬ್ಬೆಯ ಮಗ(?) ನಾಗದೇವಯ್ಯನು ಜೈನನಾಗಿದ್ದರೂ ಶಿವಾಲಯಕ್ಕೆ ದತ್ತಿಯನ್ನು ಬಿಟ್ಟಿರುವದು. ಹೊಯ್ಸಳನಾಡ ಪ್ರಜೆಗಳ ಉತ್ಕೃಷ್ಟವಾದ ಸಮತ್ವದೃಷ್ಟಿಯನ್ನು

ಸಾಕ್ಷೀಭೂತವಾಗಿವೆ. ರಾಜನಂತೆ ಪ್ರಜೆಯೆಂಬ ನಾಣ್ಣುಡಿ ಇಲ್ಲಿ ಸತ್ಯವಾಗಿದೆ. ಹೊಯ್ಸಳರು ಮೊದಲು ಜೈನರಾಗಿದ್ದರು. ವಿಷ್ಣುವರ್ಧನ (ಬಿಟ್ಟದೇವ)ನು ಶ್ರೀರಾಮಾನುಜಾಚಾರ್ಯರ ಪರಮ ಶಿಷ್ಯನಾಗಿ ವೈಷ್ಣವ ಧರ್ಮವನ್ನು ಸ್ವೀಕರಿಸಿದರೂ ಎಲ್ಲ ಧರ್ಮಗಳನ್ನೂ ಸಮಾನ ದೃಷ್ಟಿಯಿಂದ ಕಾಣುತ್ತಿದ್ದನು. ಈ ಹೊಯ್ಸಳ ರಾಜರೂ, ಪ್ರಜೆಗಳೂ ಅನೇಕ ಶಿವಾಲಯಗಳನ್ನೂ, ಜಿನಬಸದಿಗಳನ್ನೂ, ವೈಷ್ಣವ ಗುಡಿಗಳನ್ನೂ ಕಟ್ಟಿಸಿ ಅನೇಕ ದತ್ತಿಗಳನ್ನು ಬಿಟ್ಟಿರುವದಕ್ಕೆ ನೂರಾರು ಶಾಸನಗಳು ಪ್ರಮಾಣವಾಗಿವೆ. ವೀರಬಲ್ಲಾಳನ (೧೧೭೩-೧೨೨೦) ದಂಡನಾಯಕನಾಗಿದ್ದ 'ಮಂತ್ರಿಮುಖ್ಯ' ಅಮೃತದಂಡನಾಯಕನು ತನ್ನ ಒಡಹುಟ್ಟಿದವರಾದ 'ಶಿವಪಾದಶೇಖರ' ಮಸಣಯ್ಯನಾಯಕ, ಕಲ್ಲಯ್ಯದಂಡನಾಯಕ, ಬಸವದಂಡನಾಯಕ ಇವರೊಂದಿಗೆ ಅಮೃತೇಶ್ವರ ದೇವಾಲಯವನ್ನು ಹುಣಸಘಟ್ಟ (ತಾ. ತರಿಕೆರೆ)ದ ಹತ್ತಿರವಿರುವ ಅಮೃತಾಪುರದಲ್ಲಿ ಕಟ್ಟಿಸಿದನು. ಇದು ಕಲಾಪೂರ್ಣವಾದ ಹೊಯ್ಸಳಶಿಲ್ಪದ ಉತ್ತಮ ಮಾದರಿಯಾಗಿದೆ. ಇವರೇ ಒಕ್ಕಲಗೆರೆಯಲ್ಲಿ ಮೆಕ್ಕೋಟಿ ಜಿನಾಲಯವನ್ನು ಕಟ್ಟಿಸಿದರು. ಇದೇ ಕಾಲದಲ್ಲಿ ಆದಿಗವುಂಡನೆಂಬುವನು ಆದಿ ಮಲ್ಲಿಕಾರ್ಜುನ ದೇವಾಲಯವನ್ನೂ, ಜಿನಬಸದಿಯನ್ನೂ ಕಟ್ಟಿಸಿ ದತ್ತಿಯನ್ನು ಬಿಟ್ಟಂತೆ ಉಲ್ಲೇಖಗಳಿವೆ. ಹೊಯ್ಸಳ ರಾಜರ ಅನೇಕ ಬಿರುದುಗಳಲ್ಲಿ 'ಚತುಸ್ಸಮಯ ಸಮುದ್ಧರಣ' ಎಂಬುದು ವಿಶಿಷ್ಟವಾದುದು.[12] ಮಾಹೇಶ್ವರ (ಶೈವ ಮತ್ತು ವೀರಶೈವ), ಬೌದ್ಧ, ವೈಷ್ಣವ ಮತ್ತು ಅರುಹತ (ಜೈನ) ಈ ನಾಲ್ಕು ಮತ (ಸಮಯ)ಗಳನ್ನೂ ಅವರು ರಾಜಧರ್ಮಗಳೆಂದು ಗಣಿಸಿ ಮನ್ನಣೆ ಕೊಡುತ್ತಿದ್ದರು. ಬೇಲೂರಿನ ಶಾಸನವೊಂದರಲ್ಲಿರುವ 'ಯಂ ಶೈವಾಃ ಸಮುಪಾಸತೇ' ಎಂಬ ಸಂಸ್ಕೃತ ಪದ್ಯದಲ್ಲಿ ಹೊಯ್ಸಳರ ಧಾರ್ಮಿಕ ಸಮತಾ ಭಾವನೆಯು ಒಡೆದು ಕಾಣುತ್ತಿದೆ. 'ಅತಿ ಪ್ರಾಚೀನ ಕಾಲದಿಂದಲೂ ಕರ್ನಾಟಕದಲ್ಲಿ ಸರ್ವಧರ್ಮ ಸಮನ್ವಯ ದೃಷ್ಟಿಯೂ ವಿಶ್ವಬಾಂಧವ್ಯವೂ ಒಡೆದು ಕಾಣುವವು. ಪರಧರ್ಮದಲ್ಲಿ ಮತ್ಸರವಿಲ್ಲದಿರುವುದೂ, ಪರಧರ್ಮದವರನ್ನು ಪ್ರೇಮವಿಶ್ವಾಸಗಳಿಂದ ಕಾಣುವುದೂ ಇಲ್ಲಿಯ ಜನರ ಹುಟ್ಟುಗುಣವಾಗಿದೆ. ಈ ಉದಾರವಾದ ಭಾವನೆ ಇಲ್ಲಿ ನೂರಾರು ವರ್ಷಗಳಿಂದ ಬಾಳಿ ಬೆಳಗುತ್ತ ಬಂದಿರುವುದು. ಇದು ಕರ್ನಾಟಕ ಧರ್ಮವೈಶಿಷ್ಟ್ಯ.'[13] ಎಂದು ಡಾ|| ಶಿ. ಚೆ. ನಂದೀಮಠ ಅವರು ಹೇಳಿರುವ ಕನ್ನಡನಾಡ ಘನವಾದ ವಿಶಿಷ್ಟ ಸಂಸ್ಕೃತಿಯು ಹೊಯ್ಸಳರ ಆಳಿಕೆಯಲ್ಲಿ ರೂಪುಗೊಂಡಂತಿದೆ.

**ಅದೇ ಗ್ರಾಮದ ಮುಂದೆ ಅರಳೀಮರದ ಕಟ್ಟೆಯ ಬುಡದಲ್ಲಿಯ ಶಾಸನ ನಂ. 143, ಪ್ರಮಾಣ 4′2″ × 1′5″—**

---

12. ಎ.ಕ. (ಬೇಲೂರ ಶಾ. ನಂ. 124, ಶಕ ೧೦೫೫).

13. ಕನ್ನಡನಾಡಿನ ಚರಿತ್ರೆ–ಎರಡನೆಯ ಭಾಗ (ಕರ್ನಾಟಕ ಧರ್ಮಗಳು), ಪು. ೩೮೧.

1. ಶ್ರೀನಮಸ್ತುಂಗಶಿರಶ್ಚುಂಬಿ ಚಂದ್ರಚಾಮರಚಾರವೇತ್ರೈಳೋಕ್ಯನಗರಾ ರಂಭಮೂಲ

2. ಸ್ತಂಭಾಯ ಶಂಭವೇ ॥ ಸ್ವಸ್ತಿಸಮಧಿಗತ ಪಂಚಮಹಾಶಬ್ದ ಶಾಸ ನಾಳಂಕ್ರಿತಮ

3. ಪ್ಪಹೊಯ್ಸಳಾನ್ವಯದ ರಾಜಾವಳಿಯೆಂತೆಂದಡೆ ॥ ಮುನಿಹೊಯ್ಕೆಂದಡೆ ಹೊಯ್ದು ಹೆ

4. ಬ್ಬುಲಿಯನಾದಂ ತತ್ಸಳಂ ಹೊಯ್ಸಳಂ ವಿನಯಾದಿತ್ಯನೆ ತತ್ಕುಲಾದ್ಯನೆಱೆ

5. ಯಂಗಂ ತತ್ಸುತಂ ಬಿಟ್ಟಿತತ್ತನಯಂತತ್ತನಯಂ ನೃಸಿಂಹನವಸಿಂ ... ಬ

6. ಲ್ಲಾಳನಾತನ ಪುತ್ರಂ ನರಸಿಂಹನಾತನ ಸುತಂ ಸೋವೇಶ್ವರೋರ್ವ್ವಿಸ್ವರಂ ॥ ಕಂಬದೊ

7. ಳೊಗೆದ ನೃಸಿಂಹನಡಂಬರಮಂ ಮೆಚ್ಚದೊಸೆದು ಸೋವೇಶ ದಯಾಳಂಬನ ಬಿಜ್ಜಲದೇ

8. ವಿಯನುಂಬಸುಱೊಳು ಬಂದನದಟಕಲಿ ನರಸಿಂಹಂ॥ಆ ನರಸಿಂಹರಾಜಯ

9 ನಬಿರುದಾವಳಿಯ ಪ್ರಶಸ್ತಿಯೆಂತೆಂದಡೆ ॥ ಸ್ವಸ್ತಿ ಸಮಸ್ತ ಭುವನಾಶ್ರಯಂ ಶ್ರೀ

10. ಪ್ರಿಥ್ವೀವಲ್ಲಭಂ ಮಹಾರಾಜಾಧಿರಾಜ ಪರಮೇಸ್ವರಂ ದ್ವಾರವತೀಪುರವ ರಾಧೀಶ್ವರಂಯಾ

11. ದವಕುಳಾಂಬರದ್ವಿಮಣಿ ಸರ್ವಜ್ಞ ಚೂಡಾಮಣಿ ಮಲೆ ರಾಜ ರಾಜ ಮಲಪರೊಳು ಗಂ

12. ಡಗಣ್ಡಭೇರುಂಡ ಕದನ ಪ್ರಚಂಡನ ಸಹಾಯಸೂರನೇಕಾಂಗ ವೀರ ಶನಿವಾರ ಸಿದ್ಧಿಗಿರಿದು

13. ರ್ಗ್ಗಮಲ್ಲ ಚಲದಂತ ರಾಮ ವೈರೀಭ ಕಂಠೀರವಂ ಮಗರಾಜ್ಯ ನಿಮೂರ್ಳನಂ ಚೋಳ ರಾಜ್ಯ ಪ್ರ

14. ತಿಷ್ಠಾಚಾರ್ಯ್ಯಪಾಂಡ್ಯ ಕುಲ ಸಮುದ್ಧರಣ ನಿಶ್ಶಂಕ ಪ್ರತಾಪ ಚಕ್ರವರ್ತಿ,

15. ಹೊಯ್ಸಣ ಭುಜಬಳ ಶ್ರೀ ವೀರನರಸಿಂಹದೇವರಸರು ಶ್ರೀಮದ್ರಾಜಧಾನಿ

16. ದೋರಸಮುದ್ರದ ನೆಲವೀಡಿನೊಳು ದುಷ್ಟ ನಿಗ್ರಹ ಶಿಷ್ಟಪ್ರತಿಪಾಳನಂ ಮಾಡಿ ಸುಖಸಂಕ

17. ಥಾವಿನೋದದಿಂ ಪೃಥ್ವೀ ರಾಜ್ಯಂಗೆಯುತ್ತಮಿರೆ ಇರೆ ॥ ಶ್ರೀಮದು **ಹೊಯ್ಸಣ**

18. **ನಾಡಶಿರೋಮಣಿ ಆಸಂದಿನಾಡ** ಕಂಪಣಾಚಾರ್ಯನ್ನಾನಾವಳಿ ಎಂ

19. ತೇವಡೆ ನೇಮದತಪನಿಯತಸಿಯತ ಗುರುಪುತ್ರಕರೋಳು । ಬೋವಲಿನಿಪ
20. ನಾದಿ ಗುರುಗಳಿಗುದಯಿಸಿದಾ ಬ್ರಹ್ಮಯಾಚೈಕೈಯನು ಸಮುಗಣಿ ದೊಂದುರ
21. ಕಲ್ಲಮುಸಧಿಕಂ ಜೈಕೈಯನಾತ್ಮಜಂ ಕಲಿದೇವಂ ॥ ವಾಮಿದೇವರ ಕಲ್ಲಯ್ಯನ
22. ವಾಮಯ್ಯಂಸಾರಸಿಂಹ ಸುತಕಲ್ಲಯ್ಯಂಗ್ರಾಮುಕ್ಕಧಿಕರಸಿಯ
23. ಕೆಜೆ ವಾಮಯ್ಯಂಗೂಡಿ ಪಂಚಮಠಪಾಚಾರ್ಯರು ॥ ಯಿಂತಿನಿಬರುಂ
24. ತಂಮೊಳಗೆ ಸರ್ವೈಕಮತ್ಯವಾಗಿ ॥ ಕ ॥ ನೆರದಿಪರು ವಾಮದಿಪದೇವರ ಸತಿಹೊ
25. ಳ್ಳಿವ್ವೆಯಾತ್ಮಸುತೆ ಮಹದೇವಿಪುರ ವರಪುತ್ರನು ವಾಮಯ್ಯ ಗೆಧರೆ
26. ಸಸಿಯುಳ್ಳಂ ನವಿತ್ತರುಸ್ಥಾನಮುಮಂ ॥ ವ ॥ ಅದೆಂತೆಂದಡೆ ॥
27. ಸ್ವಸ್ತಿಶ್ರೀ ವಿಜಯಾಭ್ಯುದಯ ಶ್ಯ ಶಕವರ್ಷದ ೧೫೭೭ನೆಯ ಯುವ
28. ಸಂವತ್ಸರದ ದ್ವಿತೀಯ ಜೇಷ್ಟ ಬ ೨ ಸೋ । ದಂದು ಅವರು ಕೊಟ್ಟ ಸ್ಥಾನಂಗ
29. ಳಾವುವೆಂದಡೆ ಕೇವಗೆಯ ಕೆಱೆಯ ಕಲಿದೇವರ ಸ್ಥಾನವೊಂದು ಗೀಳ
30. ನೊಲುವಿನವೈಜೇಶ್ವರ ದೇವಸ್ಥಾನವೊಂದು ಮುದುಗುಂಡಿಯವೂರೊಳ
31. ಗಣ ಮಾರೇಶ್ವರ ದೇವಸ್ಥಾನವೊಂದು । ದುರುವಗೆಱೆಯ ರಾಮನಾಥದೇ
32. ವರಸ್ಥಾನವೊಂದಱೊಳಗೆ ಕಣಬಗಟ್ಟದ ಸೋಮಜೀಯನ ಅರ್ಧಭಾಗೆಯ
33. ಕಳದು ಮುದ್ದಮಾಣಿಯ ಭಾಗೆ ಸಹಿತಯಿಂತೀಮೂಱುವರೆಯ
34. ಸ್ಥಾನಂಗಳ ಗದ್ದೆ ಬೆದ್ದಲು ಕಳಮನೆ ಅಷ್ಟಭೋಗತೇಜ ಸಾಂಮ್ಯವನು ಸಮಸ್ತಬಳಿ
35. ಸಹಿತವಾಗಿ ಆ ಹೊಲ್ಲವ್ವೆಯ ಮೊಂಮಹಡಿ ಹಾಱೆದಾಮಯ್ಯಂ
36. ಗೆ ಆಸಂದಿಯ ಬ್ರಹ್ಮರಾಸಿಗುರುಗಳೊಳಗಾದ ಏಳು ಮನುಷ್ಯ ಸ್ಥಾನಾಧಿ
27. ಪತಿಗಳು ಧಾರಾಪೂರ್ವಕಂ ಮಾಡಿಕೊಟ್ಟರು । ಈ ಸ್ಥಾನಂಗಳಿಗೆ ರಿಣ
38. ಧನಮುಂಟೆಂದು ಆಱುಬಂದಡಂ ಪರಿಹರಿಸಿ ಆಸ್ಥಾನಂಗಳನು ಸರ್ವಮಾಂ
39. ನ್ಯವಾಗಿ ಸಲಿಸಿಕೊಡುವರು ॥ ಯಿಂತಪ್ಪುದಕ್ಕೆ ಸಾಕ್ಷಿಗಳು ಶ್ರೀಮ
40. ದ್ರಾಜಗುರು ರುದ್ರಶಕ್ತಿ ದೇವರು । ನಿಗಳಂಕದೇವರ ಗುಂಮಣ್ಣಂ
41. ಗಳು । ಅರಸಿಯ ಕೆಱೆಯ ಪಂಚಮಠಾಚಾರ್ಯ ಭೂತಗುರುಗ
42. ಳು ! ಅಡಕೆಯ ಬೊಂಮಸೆಟ್ಟಿಯರ ಮಗ ಬಲ್ಲಣ್ಣನು । ಪಟ್ಟದಸ್ವಾಮಿ ಪಾರು

43. ಸದೇವನ ಮಗ ಸಾಂಬಣ್ಣನು । ವಿನಾಯಕಪೇವರ ಗಣಪಗು
44. ರುಗಳು । ಮಾವಂತಸಲಖ್ಖಿಜೀಯನು । ಮಲಯಾಳಪ
45. ಣ್ಡಿತರ ಸಂಗಜೀಯನು । ಸೀಗೆಯ ಹೊಂಚಜೀಯನು । ಕಾತೂರಕಂಪ
46. ಣಾಚಾರ್ಯ ನಾಗಗುರುಗಳು । ಮಾಳಬಿಗೆಜೀಯ ಸೋಮಜೀಯನು । ಆಸಂ
47. ದಿಯ ಪಟ್ಟಣಸ್ವಾಮಿಸಂತಯ್ಯನು । ಬೊಂಮುಸೆಟ್ಟಿಯರ ಮಗ ಲಿಂಗಯ್ಯ
48. ನು । ಯಿಂತಿವರು ಭಯಾನುಮತದಿಂ ಬರದಂ ಸೇನಬೋವಚ
49. ಪುಡಂಣನು ॥ ಇವನೀಸ್ಥಾನ ಭೂಮಿಯ ಸವೆಯದೆ ಸುಖವುಂಗೈ
50. ಸಂತತಂ ವಾಮಯ್ಯಂ ಶಿವವರವಾಚಂದ್ರಾರ್ಕ್ಕಂ
51. ಕಲಿಕಂದನ ನಂದಲಿಖಿತವಿದು ಶಿಲಲಿಖಿತಂ ॥ ದಾನಂ ವಾ
52. ಪಾಲನಂವ್ವಾದಾನಾತ್ಸ್ರೇಯೋತ್ಪಾಲನಂದಾನಾತು ಸ್ವರ್ಗ್ಗಮ
53. ವಾಪ್ನೋತಿ ಪಾಲನಾದಚ್ಯುತಪದಂ ॥ ಸ್ವದತ್ತಂ
54. ಪರದತ್ತಂವ್ವಾಯೋ ಹರೇತಿ ವಸುಂಧರಾಷಷ್ಟಿರ್ವ್ವ
55. ರ್ಷಸಹಸ್ರಾಣಿ ವಿಷ್ಟಾಯಾಂ ಜಾಯತೇಕ್ರಿಮಿ ॥
56. ಪ್ರಿಯದಿಂದಿಂತಿದನೆಯ್ದೆ ಕಾಯ್ದು ಮನುಜಂಗಾಯುಂಜಯ
57. ಶ್ರೀಯುಮಕ್ಕೆಯಿದಂ ಕಾಯದೆ ಕಾಯ್ದ ಪಾಪಿಗೆ ಕುರುಕ್ಷೇ
58. ಕ್ಷಂಗಳೊಳು ವಾರಣಾಸಿಯೊಳೆಕ್ಕೋಟಿ ಮುನೀಂದ್ರರಂ ಕವಿಲೆ
59. ಯಂ ವೇದಾಢ್ಯರಂ ಕೊಂದುದೊಂದಯಸಂ ಪೊರ್ದ್ದುಗುಮೆಂ
60. ದು ಸಾರಿದಪುವೀ ಶೈಲಾಕ್ಷರಂ ಧಾತ್ರಿಯೊಳೂ । ಇದ
61. ನಜಿಸಿದೀ ಧರ್ಮವನೆಲ್ಲಾ ಅರಸುಗಳುಂ ಪ್ರತಿಪಾಲಿಸುತಿರ್ಕ್ಕ ॥
62. ಮಂಗಳ ಮಹಾ ಶ್ರೀ ಶ್ರೀ ಶ್ರೀ ॥

ಈ ಶಾಸನದಲ್ಲಿ ಮೊದಲು ಹೊಯ್ಸಳರ ವಂಶಾವಳಿಯನ್ನು ಹೋಳಿದೆ. ಜಿನಮುನಿಯು ಸಳನಿಗೆ ಹೆಬ್ಬುಲಿಯನ್ನು ಹೊಯ್ಯೆಂದು ಹೇಳಿದನು. ಅದರಂತೆ ಅವನು ಅದನ್ನು ಹೊಯ್ದು ಕೊಂದನು. ಅಂದಿನಿಂದ ಸಳನಿಗೆ ಹೊಯ್ಸಳನೆಂದು ಹೆಸರು ಅನ್ವರ್ಥಕವಾಯಿತು. ಈ ಸಳನೇ ಈ ವಂಶದ ಮೂಲಪುರುಷನು. ಅವನ ನಂತರ **ವಿನಯಾಧಿತ್ಯ** (ಕ್ರಿ. ಶ. ೧೦೪೭–೧೦೯೮)ನು ಪಟ್ಟಕ್ಕೆ ಬಂದವರಲ್ಲಿ ಮೊದಲಿಗನೆಂದು ಕಾಣುತ್ತದೆ. ಅವನಿಗೆ ತ್ರಿಭುವನಮಲ್ಲನೆಂದು ಅಂಕಿತ. ಅವನ ಮಗ **ಎರೆಯಂಗ** (ಕ್ರಿ. ಶ. ೧೦೯೮–೧೧೦೨) [14] ಅವನ ಮಗ ಬಿಟ್ಟದೇವನೆಂದು ಪ್ರಸಿದ್ಧ

14 ಎರೆಯಂಗನ ತರುವಾಯ ಅವನ ಹಿರಿಯ ಮಗನಾದ ೧ ನೆಯ ಬಲ್ಲಾಳನು ಕ್ರಿ. ಶ. ೧೧೦೨ ರಿಂದ ೧೧೦೮ ರವರೆಗೆ ಆರು ವರ್ಷ ಮಾತ್ರ ಆಳಿ, ಪಟ್ಟವನ್ನು ತನ್ನ ತಮ್ಮ ಬಿಟ್ಟದೇವನಿಗೆ ಬಿಟ್ಟು ಕೊಟ್ಟುದರಿಂದ ಇಲ್ಲಿ ಅವನ ಉಲ್ಲೇಖವಾಗಿಲ್ಲವೆಂದು ಕಾಣುತ್ತದೆ.

ನಾದ **ವಿಷ್ಣುವರ್ಧನ** (ಕ್ರಿ. ಶ. ೧೧೦೮-೧೧೫೨). ಅವನ ಮಗ **ಒಂದನೆಯ** **ನರಸಿಂಹ** (ಕ್ರಿ. ಶ. ೧೧೫೨-೧೧೭೩), ಅವನ ಮಗ **ಎರಡನೆಯ ಬಲ್ಲಾಳ** (ಕ್ರಿ. ಶ. ೧೧೭೩-೧೨೨೦), ಅವನ ಮಗ **ಎರಡನೆಯ ನರಸಿಂಹ** (ಕ್ರಿ. ಶ. ೧೨೨೦-೧೨೩೪), ಅವನ ಮಗ **ಸೋಮೇಶ್ವರ** (ಕ್ರಿ. ಶ. ೧೨೩೪-೧೨೬೦); ಇವನ ಮಗ **ಮೂರನೆಯ ನರಸಿಂಹ** (ಕ್ರಿ. ಶ. ೧೨೫೪-೧೨೯೨). ಈ 'ಅಘಟಕಲಿ' ನರಸಿಂಹನು ಕಂಬವ ನೊಡೆದು ಅವತರಿಸಿದ ವಿಷ್ಣುವಿನ 'ಅಡಂಬರಮಂ ಮೆಚ್ಚದೊಸೆದು' ತಾಯಿ ಬಿಜ್ಜಳ ದೇವಿಯ ಬಸುರಿನಲ್ಲಿ ಬಂದನೆಂದು ಕವಿಯು ವಿಶೇಷಿಸಿ ಹೇಳಿದ್ದಾನೆ. ಈ ವೀರ ನರಸಿಂಹನ ಬಿರುದಾವಳಿಗಳಲ್ಲಿ 'ಮಗದರಾಜ್ಯ ನಿರ್ಮೂಳನಂ, ಚೋಳರಾಜ್ಯ ಪ್ರತಿಷ್ಠಾಚಾರ್ಯ, ಪಾಂಡ್ಯಕುಲ ಸಮುದ್ಧರಣ' ಎಂಬುವು ವಿಶಿಷ್ಟವಾಗಿವೆ. ದಾನವ ಚಕ್ರವರ್ತಿಯಾಗಿದ್ದ ಬಲಿಯ ವಂಶದವರಿಗೆ ಬಾಣರು ಅಥವಾ ಮಹಾವಲಿಗಳೆಂದು ಹೆಸರು. ಇವರೇ ಮಗರರು. ಬಾಣರು ತಮಿಳು ನಾಡಿನಲ್ಲಿ ಆಳುತ್ತಿದ್ದರು. ಮಹಾ ಬಲಿಪುರಂ ಇವರ ರಾಜಧಾನಿಯಾಗಿತ್ತು. ಇವರು ಮೈಸೂರ ರಾಜ್ಯದ ಪೂರ್ವ ಪ್ರಾಂತ ಗಳನ್ನು ಆಕ್ರಮಿಸಿದ್ದರು. ವೀರನರಸಿಂಹನ ತಂದೆ ಸೋಮೇಶ್ವರನು ಇವರನ್ನು ಸೋಲಿಸಿ ಚೋಳರಾಜ್ಯವನ್ನು ಪ್ರತಿಷ್ಠಾಪಿಸಿ ಪಾಂಡ್ಯಕುಲವನ್ನು ಎತ್ತಿಹಿಡಿದನು. ಈ ದಿಗ್ವಿಜಯ ಸೂಚಕವಾಗಿ ಹೊಯ್ಸಳರು ಈ ಬಿರುದುಗಳನ್ನು ಧರಿಸಿದಂತೆ ಕಾಣುತ್ತದೆ. ಹೊಯ್ಸಳರಸರು 'ದುಷ್ಟನಿಗ್ರಹ ಶಿಷ್ಟಪ್ರತಿಪಾಲನ'ದೊಂದಿಗೆ ರಾಜ್ಯವಾಳುತ್ತಿದ್ದರು.

ಆಸಂದಿನಾಡನ್ನು ಇಲ್ಲಿ 'ಹೊಯ್ಸಳನಾಡ ಶಿರೋಮಣಿ' ಎಂದು ವಿಶೇಷಿಸಿ ಹೇಳ ಲಾಗಿದೆ. ಈ ಆಸಂದಿನಾಡು ಗಂಗರ ರಾಜ್ಯದ ಒಂದು ಭಾಗವಾಗಿತ್ತು. ಹೊಯ್ಸಳರು ಗಂಗರನ್ನು ಸೋಲಿಸಿ ಈ ನಾಡಿನ ಅಧಿಪತಿಗಳಾದರು. ವಿನಯಾದಿತ್ಯನ ಮೊದಲ ನೆಯ ರಾಜಧಾನಿಯಾದ ಸೊಸೆವೂರು (ಶಶಕಪುರ) ಈ ನಾಡಿನಲ್ಲಿ ಕಡೂರಿನ ಹತ್ತಿರ ಇದ್ದಿತು. ಕ್ರಿ. ಶ. ೧೧೮೮ ಶಾಸನವೊಂದರಲ್ಲಿ ವಿನಯಾದಿತ್ಯನು ಎರೆಯಂಗನ ತಾಯಿ ಯಾದ ಕಳೆಯಬ್ಬೆಯೊಡನೆ ಸೊಸೆವೂರಿನಲ್ಲಿ ಕ್ರಿ. ಶ. ೧೦೪೭-೮ ರಲ್ಲಿ ಆಳುತ್ತಿದ್ದನು. ಆಗ ಅವನು ಆಸಂದಿನಾಡಿನ ಒಂದು ಗ್ರಾಮದ ಗೌಡಿಕೆಯನ್ನು ಒಬ್ಬನಿಗೆ ಕೊಟ್ಟಂತೆ ಉಲ್ಲೇಖವಿದೆ. ಆದುದರಿಂದ ಸೊಸೆವೂರು ಈ ನಾಡಿನಲ್ಲಿ ಇದ್ದಿತಲ್ಲದೆ ಡಾ. ಬಿ. ಎ. ಸಾಲೆತೊರೆ ಅವರು ಹೇಳುವಂತೆ[15] ಶಿಕಾರಿಪುರ ತಾಲೂಕಿನಲ್ಲಿ ಇರಲಿಲ್ಲವೆಂದು ಕಾಣುತ್ತದೆ.

ಆಸಂದಿನಾಡ ರಾಜಧಾನಿಯು ಆಸಂದಿಯು. (ಈಗ ಅದು ಒಂದು ಸಣ್ಣ ಗ್ರಾಮವಾಗಿ ಉಳಿದಿದೆ.) ಇಲ್ಲಿಯ ಸ್ಥಾನಾಚಾರ್ಯ (ಕಂಪಣ)ಚಾರ್ಯರ ವಂಶದ ವಾಮಶಿವ ದೇವರ ಸತಿ ಹೊಲ್ಲವ್ವೆಯು ತನ್ನ ಮೊಮ್ಮಗ (ಮಗಳ ಮಗ) ವಾಮಯ್ಯ

---

15 ಕನ್ನಡ ನಾಡಿನ ಚರಿತ್ರೆ—ಮೊದಲನೆಯ ಭಾಗ

ನಿಗೆ ಸಂಬಂಧಿಗಳ ಅನುಮತಿಯನ್ನು ಪಡೆದು ಐಕ್ಯಮತ್ಯದಿಂದ ಶಕ ೧೧೯೭ (ಕ್ರಿ. ಶ. ೧೨೭೫)ರಲ್ಲಿ ಕೇದಗೆಗೆರೆಯ ಕಲಿದೇವರ ಸ್ಥಾನ, ನೊಳವಿನಕೆರೆಯ ವೈಜೇಶ್ವರ ದೇವ ಸ್ಥಾನ, ಮುಮುಗುಂಡಿಯ ಊರ ಮಾರೇಶ್ವರ ದೇವಸ್ಥಾನ ಮತ್ತು ದುರುವಗೆರೆಯ ರಾಮನಾಥ ದೇವಸ್ಥಾನದಲ್ಲಿ ಕಣಬಗಟ್ಟದ ಸೋಮಜೀಯನ ಅರ್ಧ ಪಾಲನ್ನು ಬಿಟ್ಟು ಬಿಟ್ಟು ಮೂರುವರೆ ಸ್ಥಾನಗಳ ಗೆದ್ದಬೆದ್ದಲು ಮೊದಲಾದ ಸ್ವಾಮ್ಯವನು ಎಲ್ಲ ಬಳುವಳಿ ಸಹಿತವಾಗಿ ದಾನವಾಗಿ ಕೊಟ್ಟರುವಂತೆ ಉಲ್ಲೇಖವಿದೆ. ಇದಕ್ಕೆ ಸಾಕ್ಷೀಭೂತರಾಗಿ ರಾಜಗುರು ರುದ್ರಶಕ್ತಿದೇವರು, ಅರಸಿಕೆರೆಯ ಪಂಚಮಠದಾಚಾರ್ಯರು, ಆಸಂದಿ ಪಟ್ಟಣದ ಸ್ವಾಮಿ ಸಂಕಯ್ಯ ಮೊದಲಾದವರು ಮುಖ್ಯರಾಗಿದ್ದಾರೆ.

ಕರ್ನಾಟಕದಲ್ಲಿ ಪ್ರಾಚೀನಕಾಲದಿಂದಲೂ ಶೈವಸಂಪ್ರದಾಯವು ಪಾಶುಪತ-ಕಾಳಾಮುಖ-ಲಾಕುಳ ಪಂಥಗಳ ರೂಪದಲ್ಲಿ ಬಳಕೆಯಲ್ಲಿತ್ತು. ಈ ಶೈವಾಚಾರ್ಯರು ಕರ್ನಾಟಕದ ಚಾಳುಕ್ಯ, ಕಳಚುರಿ, ಕಾಕತೀಯ, ಹೊಯ್ಸಳ, ವಿಜಯನಗರ ಮೊದ ಲಾದ ರಾಜರಿಂದ ಮನ್ನಣೆಯನ್ನು ಪಡೆದು ಅನೇಕ ಮಠಗಳನ್ನು ಸ್ಥಾಪಿಸಿ ವಿದ್ಯಾ-ಧರ್ಮಗಳ ಪ್ರಸಾರವನ್ನೂ ಮಾಡುತ್ತಿದ್ದರು. ಇವರನ್ನು 'ಶಿವಾಗಮನಿರತರ್' 'ಲಾಕುಳಾಗಮ ಸಮಯ ಸಮುದ್ಧರಣರ್' 'ಅಸಂಖ್ಯಾತ ಮಹಾಗಣಂಗಳ್' 'ಪರಮ ಮಾಹೇಶ್ವರರ್' ಎಂದು ಮುಂತಾಗಿ ಶಾಸನಗಳಲ್ಲಿ ವಿಶೇಷಿಸಿ ಹೇಳಿದೆ. 'ಶಿವಶರಣ ಕಮಳಭೃಂಗ' 'ಶಿವಧರ್ಮದೀಪಕ' 'ಶಿವಪದಶೇಖರ' ಎಂದು ಹೆಸರು ಪಡೆದ ಅನೇಕ ಅರಸರು, ಸಾಮಂತರು, ದಂಡನಾಯಕರು, ಸೆಟ್ಟರು, ಗೌಡರು, ಈ ಮಾಹೇಶ್ವರ ಶೈವಾಚಾರ್ಯರ ಅನುಯಾಯಿಗಳಾಗಿ ಅವರ 'ಕಾಲಕರ್ಚಿ' ಅನೇಕ ದಾನಗಳನ್ನು ಕೊಟ್ಟರುವಂತೆ ಶಾಸನಗಳಲ್ಲಿ ಉಲ್ಲೇಖವಿದೆ. ಈ ಸ್ಥಾನಾಧಿಪತಿಗಳಿಗೆ ಅಯ್ಯ, ಜೀಯ, ಶಕ್ತಿ, ಪಂಡಿತ, ಆಚಾರ್ಯ, ಕಂಪಣಾಚಾರ್ಯ, ಒಡೆಯ, ಆರಾಧ್ಯ ಎಂದು ಮುಂತಾಗಿ ಉಪನಾಮಗಳಿವೆ. ಈ ಸ್ಥಾನಾಧಿಪತಿಗಳ ಪರಂಪರೆಯು ಪುತ್ರಸಂತತಿ ಮತ್ತು ಶಿಷ್ಯಸಂತತಿಯ ರೂಪದಲ್ಲಿ ಬೆಳೆದುಬಂದಿದೆ. ಇವರಲ್ಲಿ ಕೆಲವು ಗುರುಗಳು ನೈಷ್ಠಿಕ ಬ್ರಹ್ಮಚಾರಿಗಳಾಗಿರುತ್ತಿದ್ದರು. ಇವರು ತಪೋಧನರಾಗಿ ಮಹಿಮಾಶಾಲಿ ಗಳಾಗಿರುತ್ತಿದ್ದರು. ಹೊಂಬಳದ ಒಂದು ಶಾಸನದಲ್ಲಿ ರುದ್ರಶಕ್ತಿ ಆಚಾರ್ಯ ಮಹಾನು ಭಾವನ ತಪಃಪ್ರಭಾವವನ್ನು—

'ಪರಮಜ್ಞಾನಧನಂ ತಪೋಧನನ ಭಿಕ್ಷಾರ್ಥಪ್ರಧಾನಂ ಧನಂ
.... .... .... ....
ಹುಗಳ ಪಾಶಮಂ ಪರಿದು ಚಿತ್ತದೊಳೀಶನನೊಲ್ದು ತಾಳಿದ್ದರ್ ।
ಜಂಗಮ ರುದ್ರನುರ್ವರೆಯೊಳೆಂದನೆ ಬೊಂತೆಯ ರುದ್ರಶಕ್ತಿಗಳ್ ॥

ಎಂದು ಬಹುವಾಗಿ ವರ್ಣಿಸಲಾಗಿದೆ.[16] ಅರಸಿಕೆರೆ, ಬಳ್ಳಿಗಾವೆ, ಹೊಂಬಳ,

---

16 ಕರ್ನಾಟಕ ಲಾಕುಳ ಶೈವರ ಇತಿಹಾಸ—ಶ್ರೀ ಕಪಟರಾಳ ಕೃಷ್ಣರಾಯರು.

ಹೂಲಿಪಟ್ಟದಕಲ್ಲು, ಐಹೊಳೆ ಮೊದಲಾದ ಸ್ಥಾನಗಳಲ್ಲಿ ಈ ಶೈವಾಚಾರ್ಯರ ಪ್ರಸಿದ್ಧ ಮಠಗಳು ರಾಜವೈಭವವನ್ನು ಪಡೆದಿದ್ದವು.

ಆಲಯಂ ಚ ಮಹೇಶಸ್ಯ ಶಿವಸ್ಯ ಪರಮಾತ್ಮನಃ ।
ರಾಜಾವಸಥವತ್ ಕಲ್ಪ್ಯಂ ಶಿಲ್ಪಶಾಸ್ತ್ರೋಪಲಕ್ಷಣಂ ॥

ಎಂಬ ಶಿವಪುರಾಣದ (ವಾಯವೀಯ ಸಂಹಿತೆ, ಅ. ೨೦. ಶ್ಲೋ. ೧೦ಲ) ಉಕ್ತಿಯಂತೆ ಅರಮನೆಯಂತೆಯೇ ಗುರುಮನೆಯನ್ನು ಕಾಣ ಬಯಸಿದ ವೈಭವದ ಕಾಲವದು. ಇಂತಹ ರಾಜವೈಭವವನ್ನು ಪಡೆದರೂ ನೈಷ್ಠಿಕಯತಿಗಳಾದ ಈ ಶೈವಾಚಾರ್ಯರು ನಿರ್ಲಿಪ್ತರಾಗಿ ತಮ್ಮ 'ಶಿವಯೋಗ'ವ್ರತಾನುಷ್ಠಾನದಲ್ಲಿ ತೊಡಗಿರುತ್ತಿದ್ದರು. ಈ ಶೈವಾಚಾರ್ಯ ಪೀಠಗಳೆಲ್ಲ ಕಾಲಾಂತರದಲ್ಲಿ ವೀರಶೈವ ಮಠಗಳಾಗಿ ಪರಿವರ್ತನೆ ಹೊಂದಿರಬೇಕೆಂದು ಕೆಲವರು ಹೇಳುವದು ಅಸಂಭಾವ್ಯವೇನೂ ಅಲ್ಲ.

ಹೊಯ್ಸಳರ ಕಾಲದಲ್ಲಿಯೇ ಕೆರೆಯ ಪದ್ಮರಸ, ಹರಿಹರ ಮೊದಲಾದ ವೀರಶೈವ ಮಹಾಕವಿಗಳು ಸನ್ಮಾನಿತರಾಗಿದ್ದರು. ಹೊಯ್ಸಳರು ಅನೇಕ ವೀರಶೈವ ಮಠಗಳಿಗೂ ದತ್ತಿಯನ್ನು ಬಿಟ್ಟಿರುವ ಶಾಸನಗಳು ವಿಪುಲವಾಗಿವೆ. ಅವುಗಳನ್ನೆಲ್ಲ ಶೋಧಿಸಿ ಪ್ರಕಟಿಸಿದರೆ ಇನ್ನೂ ಅನೇಕ ಹೊಸ ವಿಷಯಗಳು ಬೆಳಕಿಗೆ ಬರಬಹುದಾಗಿವೆ.

———:———

# "ಭರತೇಶ ವೈಭವ"ದ ಯೋಗದೃಷ್ಟಿ



**ಶ್ರೀ ಮಿರ್ಜಿ ಅಣ್ಣಾರಾಯರು,** ಶಾಂತಿಸೇವಾಸದನ, ಸೇಡಬಾಳ.

**ಭ**ರತೇಶ ಆದಿ ತೀರ್ಥಂಕರನಾದ ಶ್ರೀ ಋಷಭದೇವನ ಹಿರಿಯ ಮಗನು. ವೈಭವದಿಂದ ಭೂತಳವನ್ನು ಆಳಿದ ಮೊದಲ ಚಕ್ರಿಯು. ಇವನ ಚರಿತ್ರೆಯು ವೈದಿಕ ಹಾಗೂ ಜೈನ ವಾಙ್ಮಯಗಳಲ್ಲಿ ಅಲ್ಲಲ್ಲಿ ಮೈವೆತ್ತು ನಿಂತಿದೆ. ಆಯಾ ಪರಂಪರೆಯ ಋಷಿ ಮುನಿಗಳು ಭರತೇಶನ ಪಾತ್ರವನ್ನು ತಮ್ಮ ತಮ್ಮ ಪರಂಪರೆಯ ದೃಷ್ಟಿಯಿಂದ ಚಿತ್ರಿಸಿದ್ದಾರೆ. ಅದರಿಂದ 'ಭಾಗವತ'ದ ಭರತನು ಜಡಭರತನೆನಿಸಿದರೆ 'ಆದಿಪುರಾಣ'ದ ಭರತೇಶನು ರಸ ಋಷಿಯಾಗಿದ್ದಾನೆ. ಆದರೂ ಅವನ ಅಧ್ಯಾತ್ಮಿಕ ವ್ಯಕ್ತಿತ್ವದಲ್ಲಿ ಮಾತ್ರ ಭಾರತೀಯ ಅಧ್ಯಾತ್ಮಿಕ ಸತ್ವವನ್ನು ಸಮಾನ ರೂಪದಲ್ಲಿ ಎರಡೂ ಪರಂಪರೆಗಳು ವ್ಯಕ್ತಿಗೊಳಿಸಿವೆ. ವಿವರದಲ್ಲಿ ಅಲ್ಲಿ ಇಲ್ಲಿ ಮತ ದೃಷ್ಟಿಯು ಹಣಿಕಿಕ್ಕಿರಬಹುದು. ಆದರೆ ಭರತೇಶನ ವ್ಯಕ್ತಿತ್ವದ ತಿರುಳಿನಲ್ಲಿ ಭಿನ್ನಾಭಿಪ್ರಾಯವು ಕಂಡು ಬರುವದಿಲ್ಲ. ಭಾರತೀಯ ಪ್ರಾಚೀನ ಧರ್ಮ ಪರಂಪರೆಗಳಲ್ಲಿ ಒಂದಾದ ಶ್ರಮಣ ಧರ್ಮದ ಮಹಾ ಪುರುಷರಾದ ಋಷಭ ಹಾಗೂ ಅವನ ಪುತ್ರನಾದ ಭರತೇಶ ಇವರನ್ನು ವೈದಿಕಧರ್ಮದ ವ್ಯಾಸದೃಷ್ಟಿಯು ತಮ್ಮ ದಶಾವತಾರಗಳ ವಿಚಾರ ಕ್ರಮದಲ್ಲಿ ಅಳವಡಿಸಿಕೊಳ್ಳುವಾಗ ಭರತೇಶನು 'ಜಡಭರತ'ನಾಗಿ ರೂಪುಗೊಂಡಿದ್ದಾನೆ. ಆದರೆ ಅವನ ಮೂಲ ಯೌಗಿಕ ದೃಷ್ಟಿಯು ಆನುಷಂಗಿಕವಾಗಿ ಭಾಗವತದಲ್ಲಿ ಹರಿದು ಬಂದಿದೆ. ಆದರೆ ಅದರ ಪೂರ್ಣ ರೂಪವನ್ನು ಕಾಯ್ದುಕೊಂಡು ಬಂದ ಶ್ರೇಯವು ಮಾತ್ರ ಜೈನ ಪರಂಪರೆಗೆ ಇದೆ.

ಜೈನ ಎಂದರೆ ಪ್ರಾಚೀನ ಶ್ರಮಣ ಪರಂಪರೆಯ ಅನೇಕ ಆಗಮಿಕ ಗ್ರಂಥಗಳಲ್ಲಿ ಋಷಭ ಹಾಗೂ ಭರತೇಶನ ಪಾತ್ರಗಳು ರೂಪುಗೊಂಡು ನಿಂತಿವೆ. ಈ ತಂದೆ

ಮಕ್ಕಳ ನಿರೂಪಣೆಯು ಬಹುತರ ಜೈನ ಮುನಿಗಳಿಂದ ಸಮಗ್ರ ದೃಷ್ಟಿಯಿಂದ ಆಗಿದೆ. ಅಲ್ಲದೆ ಋಷಭನ ಕಥೆಯು ಬರುವಲ್ಲಿ ಭರತೇಶನ ಕಥೆಯೂ ಬಂದೇ ತೀರುತ್ತದೆ. ಇದಕ್ಕೆ ಒಂದು ಕಾರಣವೂ ಇಲ್ಲದೆ ಇಲ್ಲ. ಋಷಭನ ಜೀವನದೃಷ್ಟಿಯು ಒಂದು ಮುಖವಾದರೆ ಭರತೇಶನ ಬಾಳ ಬಟ್ಟೆಯು ಇನ್ನೊಂದು ಮುಖವಾಗಿದೆ. ಪೂರ್ಣ ಜೀವನಕ್ಕೆ ಇವೆರಡೂ ದೃಷ್ಟಿಗಳ ಅವಶ್ಯಕತೆಯು ತೀರ ಅಗತ್ಯ. ಅದರಿಂದ ಒಂದೊಂದು ದೃಷ್ಟಿಯ ಆದರ್ಶ ವ್ಯಕ್ತಿಗಳೆಂದು ಇವರಿಬ್ಬರನ್ನು ಒತ್ತಿಟ್ಟಿಗಿಟ್ಟು ಭಾರತೀಯರಿಗೆ ತೋರಿಸಲು ಜೈನ ಮುನಿಗಳು ಯತ್ನಿಸಿದ್ದಾರೆ. ಈ ಯತ್ನವು ಬಹು ಪುರಾತನ ಕಾಲದಿಂದಲೂ ನಡೆಯುತ್ತ ಬಂದಿದೆ. ಭಾರತದ ವಿವಿಧ ಭಾಷೆಗಳಲ್ಲಿಯೂ ಮೂಡಿ ನಿಂತಿವೆ. ಆ ಪ್ರವಾಹದ ಒಂದು ತೆರೆಯು ರೂಪದಲ್ಲಿ ಕನ್ನಡ ಭಾಷೆಯಲ್ಲಿಯೂ ವ್ಯಕ್ತವಾಗಿವೆ. ಅದು ಪಂಪ ಮಹಾ ಕವಿಯ 'ಆದಿಪುರಾಣ'ದಲ್ಲಿ ಆಗಮಿಕ ದೃಷ್ಟಿಯಿಂದ ವ್ಯಕ್ತಗೊಂಡಿದೆ. ಮುಂದೆ ರತ್ನಾಕರ ವರ್ಣಿಯು ಭರತೇಶನ ಪಾತ್ರವೊಂದನ್ನೇ ಎತ್ತಿಕೊಂಡು ತನ್ನ "ಭರತೇಶ ವೈಭವ" ಮಹಾ ಕಾವ್ಯದಲ್ಲಿ ಬಹು ಸುಂದರವಾಗಿ ಚಿತ್ರಿಸಿದ್ದಾನೆ. ಭಾರತೀಯರ ಭೋಗ ಯೋಗ ದೃಷ್ಟಿಗಳೆರಡನ್ನೂ ಸಮನ್ವಯಿಸಿ ತೋರಿಸಿದ್ದಾನೆ.

ರತ್ನಾಕರನು ಕನ್ನಡನಾಡಿನ ಮಹಾಕವಿ. ಅಲ್ಲದೆ ಯೋಗಿ, ಸಿದ್ಧ. ಅವನು ಭರತೇಶನ ಪಾತ್ರ ಸೃಷ್ಟಿಯಲ್ಲಿ ತನ್ನ ಅಲೌಕಿಕ ವ್ಯಕ್ತಿತ್ವವನ್ನು ಎರಕ ಹೊಯ್ದಿದ್ದಾನೆ. ಅದರಿಂದ ಭರತೇಶನ ಯೋಗ ಭೋಗಗಳೆರಡನ್ನೂ ಸಮತೂಕದಲ್ಲಿ ಚಿತ್ರಿಸಲಿಕ್ಕೆ ಅವನಿಗೆ ಸಾಧ್ಯವಾಗಿದೆ. 'ಅಧ್ಯಾತ್ಮವೆ ನಿಚಿತ ಪ್ರಯೋಜನವೆನಗೆಂ'ದು ಕಾವ್ಯವನ್ನು ಬರೆಯಲು ತೊಡಗಿದ್ದಾನೆ. 'ಆಗಮ ವಧ್ಯಾತ್ಮವಳಪಟ್ಟು ಶೃಂಗಾರ ತ್ಯಾಗ ಭೋಗದ ಮೋಡಿ ಮೆರೆಯೆ, ಭೋಗಿ ಯೋಗಿಗಳದೆ ಜುಮ್ಮ ಜುಮ್ಮೆನೆ' ಕಾವ್ಯವನ್ನು ರಚಿಸಿದ್ದಾನೆ. ಅದರಿಂದ ಭರತೇಶನ ಭೋಗದಲ್ಲಿರುವ ಯೋಗಿಕ ದೃಷ್ಟಿಯನ್ನು ನಿರೂಪಿಸಲಿಕ್ಕೆ ಇವನಿಗೆ ಸಾಧ್ಯವಾಗಿದೆ. ಕವಿಯು ಸ್ವತಃ ರಸಿಕ, ಭೋಗಿ. ಮುಂದಿನ ಜೀವನದಲ್ಲಿ ಶ್ರೇಷ್ಠ ಸಾಧಕನಾಗಿ ಯೋಗಿಯಾಗಿ ಬಾಳಿ, ಸಿದ್ಧಿಯನ್ನು ಪಡೆದ ಮಹಾಜೀವಿ; ಅದರಿಂದ ಭೋಗ ಯೋಗಗಳನ್ನು ಅರ್ಥಮಾಡಿಕೊಂಡು ಚಿತ್ರಿಸಲಿಕ್ಕೆ ಶಕ್ತನಾಗಿದ್ದಾನೆ.

'ಭರತೇಶ ವೈಭವ'ವು ಕನ್ನಡ ಮಹಾ ಕಾವ್ಯಗಳಲ್ಲಿ ಒಂದಾಗಿದೆ. ಸಾಂಗತ್ಯದೊಳಗಿನ ಶ್ರೇಷ್ಠ ಕೃತಿಯಿದು. ಇದರ ನಾಯಕನು ಭರತೇಶ. ಅವನು

"ಗಣನೆಯಿಲ್ಲದ ರಾಜ್ಯ ಸುಖದೊಳೋಲಾಡಿ ।
ಧಾರಿಣಿ ಮೆಚ್ಚೆ ಜಿನಯೋಗಿಯಾಗಿ ॥
ಕ್ಷಣಕೆ ಕರ್ಮವ ಸುಟ್ಟು ಜಿನನಾದ ಭೂಭುಜಾ– !
ಗ್ರಣಿ......."

ಯಾಗಿದ್ದಾನೆ. ಇವನು ಭೋಗಿಯಾಗಿದ್ದು ಯೋಗಿಯು. ಹೊರಗೆ ಭೋಗಿಯಾಗಿ ಕಂಡರೂ ಅಂತರಂಗದಲ್ಲಿ ಯೋಗಿಯು. ಈ ಅಂತರಂಗದ ಚಿತ್ರಣವೇ ಭರತೇಶನ ಯೋಗ ಜೀವನದ ಚಿತ್ರಣವಾಗಿದೆ.

ಕವಿಯು ಭರತೇಶನ ಜೀವನವನ್ನು ಭೋಗವಿಜಯ, ದಿಗ್ವಿಜಯ, ಯೋಗ ವಿಜಯ, ಮೋಕ್ಷವಿಜಯ, ಅರ್ಕಕೀರ್ತಿ ವಿಜಯಗಳೆಂದು ಐದು ಭಾಗಗಳಲ್ಲಿ ವಿಭಾಗಿಸಿಕೊಂಡು ವರ್ಣಿಸಿದ್ದಾನೆ. ಆದರೆ ಈ ಕಾವ್ಯದುದ್ದಕ್ಕೂ ಕವಿಯ ಯೋಗಾನುಭವವು ಹಾಸುಹೊಕ್ಕಾಗಿ ಮೂಡಿ ನಿಂತಿದೆ. ರತ್ನಾಕರನ ಯೋಗದ ಪರಿಯನ್ನು ಹೇಳಬೇಕಾದರೆ ಅವನೇ ಹೇಳಿದಂತೆ 'ಗೂಳಿ ನಡೆದ ಹೆಜ್ಜೆ ತೋರುವದಲ್ಲದೆ ಗಾಳಿಯ ಹೆಜ್ಜೆ ತೋರುವುದೆ?' ಎಂದು ಕೇಳಬೇಕಾಗುವುದು. ಯಾಕೆಂದರೆ 'ಭರತೇಶ ವೈಭವ'ದ ವಿವಿಧ ಪದ್ಯಗಳಲ್ಲೆಲ್ಲ ಯೋಗಗಳ ಸಂಭವವು ತುಂಬಿ ಹೊರಸೂಸುತ್ತಿದೆ. ರತ್ನಾಕರನಿಗೆ ಗೊತ್ತು, ಆತ್ಮನ ದರ್ಶನಕ್ಕೆ ಬಹುದಿನಗಳ ಸಾಧನೆಯು ಅವಶ್ಯಕವೆಂದು. ಅದರಿಂದ :ಅವನು 'ಭೊಗ್ಗನೊಂದೇ ದಿನಮೊಳು ತೋರನಾತ್ಮನು. ಬಗ್ಗಿದಾಗಳೆ ಬಾಗಿಲಹುದೆ?' ಎಂದು ಕೇಳುವನು, ಅಂಥ ದೀರ್ಘ ಸಾಧನೆಯನ್ನು ಭರತೇಶನ ಜೀವನದಲ್ಲಿ ವ್ಯಕ್ತಪಡಿಸಿ ತೋರಿಸಿರುವನು. ಅರೂಪವಾದುದನ್ನು ರೂಪಿಸಿ ತೋರಿಸಲು ಯತ್ನಿಸುವಾಗ ಕವಿಯು ಭರತೇಶನ ಜೀವನವನ್ನೇ ಯೋಗಕ್ಕೆ ರೂಪಕವೆಂದು ಭಾವಿಸಿ ವರ್ಣಿಸಿದ್ದಾನೆ. ಭರತೇಶನ ದಿಗ್ವಿಜಯವು ಭೂಮಂಡಲದ ವಿವಿಧ ಭಾಗಗಳ ದಿಗ್ವಿಜಯು ಮಾತ್ರವಲ್ಲ. ಹಾಗೆ ತಿಳಿದುಕೊಂಡರೆ ಕಾವ್ಯದ ಧ್ವನಿಯನ್ನು ಪೂರ್ಣ ಅರ್ಥಮಾಡಿಕೊಂಡಂತೆ ಆಗುವದಿಲ್ಲ. ಭರತೇಶನ ದಿಗ್ವಿಜಯವು ಅವನ ಅಧೋಮುಖ ಪ್ರವೃತ್ತಿಗಳ ವಿಜಯದ ಪ್ರಯತ್ನವಾಗಿದೆ. 'ಪೂರ್ವಸಾಗರ ದರ್ಶನ'ದಿಂದ ಆರಂಭವಾದ ಅವನ ದಿಗ್ವಿಜಯದ ಸಾಧನೆಯು 'ಕವಾಟ ವಿಸ್ಫೋಟನ'ದಲ್ಲಿ ಒಂದು ಘಟ್ಟಕ್ಕೆ ಬಂದು ನಿಂತುದನ್ನು ನಾವು ಕಾಣುತ್ತೇವೆ. ಆಗ 'ವಿಜಯಾರ್ಧ' ಗಿರಿಯ ತಪ್ಪಲಲ್ಲಿ ಭರತೇಶನ ಸೈನ್ಯವು ಬೀಡು ಬಿಟ್ಟಿದೆ. ಆ ಪರ್ವತವನ್ನು ಸೈನ್ಯ ಸಹಿತ ದಾಟಬೇಕಾಗಿದೆ. ಅದೊಂದು ಅವನ ದಿಗ್ವಿಜಯದಲ್ಲಿ ಸಾಹಸದ ಕಾರ್ಯವು. ಪರ್ವತವು ಒಂದು ಅಡ್ಡಿಯಾದರೆ ಅದರಲ್ಲಿ ಗುಹಾದ್ವಾರದ ಕವಾಟವನ್ನು ಭರತೇಶನು ಒಡೆಯಬೇಕು. ಸಾಧಕನು 'ಶ್ರೀ ಹಂಸನಾಥನ ನೆನೆವುತ ನಡೆವಾಗುತ್ಸಾಹವಲ್ಲದೆ ಚಿಂತೆಯಿಲ್ಲ....ಅದರಿಂದ 'ಹಂಸನಾಥನ ನೋಡಿ ಕರ್ಮವನೊಡೆವುದು ಪ್ರಾಂಶು ವಜ್ರದ ಕವಾಟವನು ಧ್ವಂಸಗೈವುದು. ಸಾಧಕನ ಜೀವನದಲ್ಲಿ ಇಂಥ ಒಂದು ಘಟ್ಟವು ಸಿದ್ಧಿಯ ಪೂರ್ವದಲ್ಲಿ ಒದಗುವದುಂಟು. ಆಗ ನಿಶ್ಚಲಮತಿಯಾಗಿ ಮುಂದರಿದರೆ ಅವನಿಗೆ ಸಿದ್ಧಿಯು ಸಾರ್ವುದು. ಅದಕ್ಕಾಗಿ ಸಾಹಸಬೇಕೆಂದು ಕವಿಯು ಇಲ್ಲಿ ಸಾರಿದ್ದಾನೆ.

ಈ 'ಕವಾಟ ವಿಸ್ಫೋಟ'ನಕ್ಕೆ ನಡೆದ ಭರತೇಶನು ಏರಿದ ಕುದುರೆಯು ಮನ

ಷ್ಟಿನ ಪ್ರತೀಕವಾಗಿದೆ. ಅವನು ಆ ವೈಹಾಳಿಯ ಸಪ್ತ ರಂಗಗಳನ್ನು ಅರಿತ ಸವಾರನು. ಇದನ್ನು ರತ್ನಾಕರನ ಮಾತಿನಲ್ಲಿಯೇ ನಾವು ಕೇಳಿ ತಿಳಿವುದುತ್ತಮ.

ಲಯಧಾರೆಗತಿ ಜವ ಭ್ರಾಮಕವೆಂದೆಂಬ
ಹಯದೈದು ಪದ್ಧತಿಯಂದು ||
ದ್ವಯವಿಲಂಘನಗೂಡಿ ಸಪ್ತವೈಹಾಳಿ ಸಂಚಯವ ಕಾಣಿಸಿದನೇನೆಂಬೆ ||

ಈ ಮಾನವ ವಿವಿಧ ಅವಸ್ಥೆಗಳಲ್ಲಿಯ ಹರಿದಾಟವನ್ನೆಲ್ಲ ರತ್ನಾಕರನು ಬಹು ವಿವರವಾಗಿ ಈ ಸಂದರ್ಭದಲ್ಲಿ ರೂಪಿಸಿದ್ದಾನೆ. ಯೋಗ ಸಾಧನೆಯ ವಿವಿಧ ಅವಸ್ಥೆಗಳೆಲ್ಲ ಇಲ್ಲಿ ಒಡಮೂಡಿವೆ. ಭರತೇಶನು "ಷಟ್ಪದ್ಮದಕ್ಷರಗಳ ನೋಡಿ.... ಮುಸ್ಪರಿಹೃತ ಚಿತ್ತದೊಳು ಹಂಸನಾಥನ ತ್ರಿಷ್ಟಿರಂಪರೆಯ ಭಾವಿಸಿದ. ಎಂದು ಕವಿಯು ಭರತೇಶನ ಧ್ಯಾನಪರಂಪರೆಯನ್ನು ಚಿತ್ರಿಸಿದ್ದಾನೆ.

ಭೋಗ ವಿಜಯದೊಳಗಿನ ಪರ್ವಯೋಗ, ತತ್ತ್ವೋಪದೇಶ, ಪರ್ವಾಭಿಷೇಕವೇ ಮೊದಲಾದ ಸಂಧಿಗಳು ಭರತೇಶನ ಆಧ್ಯಾತ್ಮಿಕ ಪ್ರವೃತ್ತಿಯ ಅಸ್ತಿವಾರದಂತಿವೆ. ಆ ಮೇಲೆ ದಿಗ್ವಿಜಯದೊಳಗಿನ ಆವನ ಸಾಧನೆಯು ಸಾಧಕನ ವಿವಿಧ ಸ್ತರಗಳನ್ನು ವಿವರಿಸುತ್ತದೆ. ಮುಂದೆ ಯೋಗವಿಜಯವಂತೂ ರತ್ನಾಕರನ ಯೋಗ ದರ್ಶನದ ಸೂತ್ರದಂತಿದೆ. ಇಲ್ಲಿ ಧ್ಯಾನದ ವಿವಿಧ ಹಂತಗಳನ್ನೆಲ್ಲ ಕವಿಯು ವರ್ಣಿಸಿದ್ದಾನೆ. ಇಲ್ಲಿ ಒಂದನ್ನು ಮಾತ್ರ ಎತ್ತಿ ತೋರಬಹುದಾಗಿದೆ:

"ಕಿರುವೆಳಗಿಂದ ಧರ್ಮಧ್ಯಾನ ರೂಪ ಪೊಚ್ಚರಿಪ ಮಹಾ ಪ್ರಭೆಯಿಂದ ||
ಮಿರುಪ ಶುಕ್ಲಧ್ಯಾನರೂಪ ನನ್ನೆದೆಯೊಳಿರೆಲೆಯ ಚಿದಂಬರ ಪುರುಷಾ ||

ಇಲ್ಲಿ ಧರ್ಮ, ಶುಕ್ಲಧ್ಯಾನಗಳನ್ನು ರತ್ನಾಕರನು ಸೂಚಿಸಿದ್ದಾನೆ. ಆಗ ಒಡಮೂಡುವ ಆತ್ಮಪ್ರಭೆಯನ್ನು ವರ್ಣಿಸಿದ್ದಾನೆ.

ಭರತೇಶ ವೈಭವದಲ್ಲಿ ಹೀಗೆ ರೂಪುಗೊಂಡ ಯೋಗ ಸಾಧನೆಯ ಪರಿಯನ್ನು ನಿರೀಕ್ಷಿಸಿದಲ್ಲಿ ಇದು ರತ್ನಾಕರ ಕವಿಯಿಂದ ಮಾತ್ರ ಪ್ರವೃತ್ತಿಸಿತೆಂದಲ್ಲ, ಈ ಯೋಗಕ್ಕೂ ಒಂದು ಆಗಮಿಕ ಪರಂಪರೆಯು ಇರಬೇಕೆಂದು ಹೊಳೆಯುತ್ತದೆ. ಇದು ಭಾರತದಲ್ಲಿ ಬಹಳ ಪ್ರಚಾರದಲ್ಲಿರುವ ಪಾತಂಜಲಿ ಮುನಿಯ ಯೋಗಸೂತ್ರಕ್ಕಿಂತ ಒಂದು ಭಿನ್ನವಾದ ಕ್ರಮವನ್ನು ಸೂಚಿಸುತ್ತಿದೆ. ಈ ಕ್ರಮದ ಅಭ್ಯಾಸ ಹಾಗೂ ಅದರ ಮೂಲ ಪ್ರವೃತ್ತಿಗಳ ಬಗ್ಗೆ ವಿದ್ವಾಂಸರು ಅಭ್ಯಾಸವನ್ನು ಕೈಕೊಳ್ಳುವ ಅವಶ್ಯಕತೆಯು ಈಗ ತಲೆದೋರಿದೆ. ಈ ಯೋಗದ ಸ್ವರೂಪವನ್ನು ಕಂಡು ಹಿಡಿಯುವದರಿಂದ ಭಾರತೀಯ ದಾರ್ಶನಿಕ ಪರಂಪರೆಗೆ ಒಂದು ಹೊಸ ಕಾಣಿಕೆಯನ್ನು ನೀಡಿದಂತೆ ಆಗುತ್ತದೆ. ಈ ಪರಂಪರೆಯ ಯೋಗದ ಒಂದು ಪೂರ್ಣಚಿತ್ರಕ್ಕೆ 'ಭರತೇಶ ವೈಭವ'ವು ಒಂದು ಭಿತ್ತಿಯಂತಿದೆ. ಈ ವಿಷಯದತ್ತ ಅಭ್ಯಾಸಿಗಳ ಮನಸ್ಸನ್ನು ಸೆಳೆಯುವಷ್ಟು

ಕಾರ್ಯವು ಈ ಚಿಕ್ಕ ಲೇಖನದಿಂದ ಆದರೂ ಸಾಕು. ಅದರಿಂದ 'ಭರತೇಶ ವೈಭವ'ದ ಅಭ್ಯಾಸದಲ್ಲಿ ಒಂದು ಹೊಸ ದೃಷ್ಟಿಯು ಮೂಡುವುದು. ಈ ಯೋಗ ಮಾರ್ಗದ ಸಂಶೋಧನೆಯು ಒತ್ತಟ್ಟಿಗೆ ಉಳಿದರೂ ಭರತೇಶ ವೈಭವದಲ್ಲಿಯ ಕವಿಯ ಹೃದಯದ ವಾಣಿಯನ್ನು ಅರ್ಥಮಾಡಿಕೊಂಡಂತಾಗುವುದು ; ಒಂದು ಕಾವ್ಯವನ್ನು ಅರ್ಥಮಾಡಿಕೊಂಡಂತಾಗುವುದು. ಇಷ್ಟಕ್ಕೆ ಪ್ರಚೋದನೆಯನ್ನು ನೀಡಿದರೂ ಈ ಸಂದರ್ಭದಲ್ಲಿ ಸಾಕಷ್ಟೆ ? 'ವಿಭೂತಿ' ದರ್ಶನಕ್ಕೆ ಮಾರ್ಗದರ್ಶನದ ಕೈಗಂಬದ ಕಾಣ್ಕೆಯನ್ನು ಆರ್ಪಿಸಿದಂತಾದರೆ ನನಗಷ್ಟೆ ಸಮಾಧಾನ.

———:———

# ಗ್ರಾಮಜೀವನದ ಉಸಿರು



ಶ್ರೀ ಗೊ. ರು. ಚನ್ನಬಸವಪ್ಪ

**ಜೀ**ವಿತದ ನಿತ್ಯ ದಂದುಗದಲ್ಲಿ ದುಡಿದು ದಣಿದ ಮಾನವನ ಮಾನಸೋಲ್ಲಾಸಕ್ಕೆ ಸಾಹಿತ್ಯವೊಂದು ಸಾಧನ. ಉಲ್ಲಾಸವಷ್ಟೇ ಅಲ್ಲ, ಉದ್ಧಾರಕ್ಕೂ ಅದು ಕಾರಣ. ಎಂತಲೇ ಮಾನವನು ಆದಿಯಿಂದಲೂ ಸಾಹಿತ್ಯಕ್ಕೆ ಅಷ್ಟೊಂದು ಶ್ರೇಷ್ಠತೆಯನ್ನು ಕೊಡುತ್ತ ಬಂದಿದ್ದಾನೆ; ಅದರ ಆರಾಧಕನಾಗಿದ್ದಾನೆ. ಅವನ ಬಾಳಿನಲ್ಲಿ ಸಾಹಿತ್ಯ ಮಾಡಿರುವ ಸಹಾಯ ಅಲ್ಪವಲ್ಲ. ಅವನು ದುಃಖದ ದುಳ್ಳುರಿಯಲ್ಲಿ ಬಿದ್ದು ಕಮರಿ ಹೋಗುತ್ತಿದ್ದ ಕಷ್ಟಕಾಲದಲ್ಲಿ ಅವನನ್ನು ಎತ್ತಿ ಹಿಡಿದು ಧೈರ್ಯದ ಊರುಗೋಲು ಕೊಟ್ಟು ಕಾಪಾಡಿದೆ; ಅಹಂಕಾರದ ಅಮಲಿನಲ್ಲಿ ದುರ್ಮಾರ್ಗ ಪ್ರವೃತ್ತನಾದಾಗ ಅಮಲಿಳಿಸಿ ಸನ್ಮಾರ್ಗಕ್ಕೊಯ್ದಿದೆ; ಸ್ವಾರ್ಥಿಯನ್ನು ನಿಸ್ವಾರ್ಥಿಯನ್ನಾಗಿಸಿದೆ; ನಾಸ್ತಿಕನನ್ನು ಆಸ್ತಿಕನನ್ನಾಗಿಸಿದೆ; ಆತ್ಮೋನ್ನತಿಯತ್ತ ಸಾಗಿಸಿದೆ. ನಿರಾಸೆಯಿಂದ ನರಳುತ್ತಿದ್ದ ನರನನ್ನು ಸ್ಫೂರ್ತಿಯ ಶಿಖರಕ್ಕೇರಿಸಿದೆ; ಸತ್ಯದರ್ಶನ ಮಾಡಿಸಿದೆ.

ಇಂತು ಸತ್ಯಮಾರ್ಗ ಸಂದರ್ಶನಕ್ಕಾಗಿಯೇ ಸೃಷ್ಟಿಯಾದ ಸಾಹಿತ್ಯಕ್ಕೆ ನಾವು ಚಿರಋಣಿಗಳಾಗಿರಬೇಕೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಇಂತಹ ಸಾಹಿತ್ಯವನ್ನು ಸದುಪಯೋಗಪಡಿಸಿಕೊಳ್ಳದೆ ಅಧಃಪತನದತ್ತ ಸಾಗುತ್ತಿರುವ ಯಾವುದಾದರೂ ಸಮಾಜ ಅಥವಾ ರಾಷ್ಟ್ರವಿದ್ದರೆ ಅದು ವಿಷಾದದ ಸಂಗತಿ. ಸಮಾಜದ ಸರ್ವ ಸೌಂದರ್ಯಕ್ಕೆ ಮೂಲ ಹೇತುವಾದ ಸಾಹಿತ್ಯದ ನೆಲೆ–ಜೆಲೆಗಳನ್ನು ಅರಿತುಕೊಳ್ಳುವುದು ಎಲ್ಲರ ಆದ್ಯ ಕರ್ತವ್ಯ. ಕೇವಲ ಆರಾಧಕರಾದರೆ ಸಾಲದು, ಅದರ ಅರಿವುಳ್ಳವರಾಗಬೇಕು. ಅರಿತು ಆಚರಿಸುವವರಾಗಬೇಕು.

ಜನಜೀವನದ ಪ್ರತಿಬಿಂಬವಾದರೂ ಸಾಹಿತ್ಯದ ಸೊಬಗು ಜೀವನಕ್ಕಿಂತಲೂ ಹಿರಿದು. ಅದನ್ನು ದಾರ್ಶನಿಕ ದೃಷ್ಟಿಯುಳ್ಳವರು ಕಂಡುಕೊಳ್ಳಬಹುದು. ಅತ್ಯಂತ

ಪುರಾತನವಾದ ನಮ್ಮ ಕನ್ನಡ ಸಾಹಿತ್ಯವನ್ನು ಸಮೀಕ್ಷಿಸಿದರೆ ಈ ಮಾತಿನ ಅರ್ಥ ಸ್ಪಷ್ಟವಾಗುತ್ತದೆ.

ಕನ್ನಡ ನಾಡಿನ ಸಾಹಿತ್ಯಕ್ಷೇತ್ರ ವಿಶಾಲವಾದುದು. ಆ ಕ್ಷೇತ್ರದಲ್ಲಿ ಅಸಂಖ್ಯಾತ ಸಾಹಿತಿಗಳು ಅನಂತಸೇವೆ ಸಲ್ಲಿಸಿದ್ದಾರೆ; ಸಾರ್ಥಕ ಹೊಂದಿದ್ದಾರೆ; ನಾಡನುಡಿ ದೇವಿಗೆ ವಿಧವಿಧವಾದ ಹೂಮಾಲೆ ಅರ್ಪಿಸಿ ದೇವಿಯ ಕೃಪೆಗೂ, ಕನ್ನಡಿಗರ ಕೃತಜ್ಞತೆಗೂ ಪಾತ್ರರಾಗಿದ್ದಾರೆ.

ಕನ್ನಡ ಸಾಹಿತ್ಯೇತಿಹಾಸದಲ್ಲಿ ಸಾಹಿತ್ಯ ಸೃಷ್ಟಿ ಅನೇಕ ಕಾರಣಗಳಿಂದಾಗಿದೆ ಯೆಂಬುದು ನಮಗೆ ತಿಳಿಯುತ್ತದೆ. ತಿಳಿದವನ ತರ್ಕದಿಂದ, ಪಂಡಿತರ ಪಾಂಡಿತ್ಯ ಪ್ರದರ್ಶನದ ಪ್ರಬಲೇಚ್ಛೆಯಿಂದ, ರಾಜಮನ್ನಣೆಯ ದಾಹದಿಂದ, ದೈವದೊಲುಮೆಯ ದೃಷ್ಟಿಯಿಂದ, ಕರ್ಮ ಕಳೆದುಕೊಳ್ಳಲೆಂಬ ಕಾತುರದಿಂದ, 'ಜನ ಬದುಕಲೆಂಬ' ಹಿರಿಯಾಸೆಯಿಂದ, ಆತ್ಮಾನಂದ ಆಕಾಂಕ್ಷೆಯಿಂದ—ಹೀಗೆ ಅದೆಷ್ಟೋ ಕಾರಣಗಳಿಂದ ಸಾಹಿತ್ಯ ನಿರ್ಮಾಣವಾಗಿದೆ. ಕಾರಣವೇನಾದರೂ ಇರಲಿ. ಸಾಹಿತ್ಯಸೇವೆ ನಡೆಯಿತು. ಸರಸ್ವತಿಯ ಸಿಂಗಾರಕ್ಕೇನೂ ಕುಂದು ಬರಲಿಲ್ಲ. ಪರಿಣಾಮವಾಗಿ ಜನತೆಯ ನೈತಿಕ ಮಟ್ಟ ವಿಕಾಸವಾಯಿತು; ವಿಚಾರಶಕ್ತಿ ವೃದ್ಧಿಗೊಂಡಿತು ಬಾಳಿನ ಆಳ ಆಶಯಗಳ ಅರಿವುಂಟಾಯಿತು. ಕಠೋರತೆಯಲ್ಲಿ ಕರುಣೆಯನ್ನು ಕಾಣುವಷ್ಟು ಉದಾರವಾಯಿತು ಜನ. ಇದನ್ನು ಕಾಣಲಿಕ್ಕೆ ದಾರ್ಶನಿಕ ದೃಷ್ಟಿ ಬೇಕೆಂದುದು.

ಕನ್ನಡ ಸಾಹಿತ್ಯದಲ್ಲಿ ವಿವಿಧ ಪ್ರಾಕಾರಗಳಿವೆ. ಮುಖ್ಯವಾಗಿ ಎರಡು ಭಾಗ ವಾಗಿ ಅದನ್ನು ವಿಂಗಡಿಸಬಹುದು. ಒಂದು ಪ್ರೌಢ ಸಾಹಿತ್ಯ, ಮತ್ತೊಂದು ಸಾಮಾನ್ಯ ಸಾಹಿತ್ಯ. ಪ್ರೌಢ ಸಾಹಿತ್ಯದ ರಸಾನುಭವ ಎಲ್ಲರಿಗೂ ಸಿಕ್ಕುವುದು ಕಷ್ಟ. ಅದು ಪಂಡಿತರಿಗೇ ಮೀಸಲೆಂದು ಹೇಳಬೇಕು. ಸಾಮಾನ್ಯ ಸಾಹಿತ್ಯವಾದರೋ ಸರ್ವ ರಿಗೂ ಸರ್ವಕಾಲದಲ್ಲೂ ರಸದೌತಣವನ್ನು ನೀಡುತ್ತದೆ. ದೃಷ್ಟಿಗೆ ಅದು ಸಾಮಾನ್ಯ ವಾಗಿ ಗೋಚರಿಸಿದರೂ ಸೃಷ್ಟಿಯಲ್ಲಿ ಸತ್ಯದ ಅಂತಃಸತ್ವವನ್ನು ಪುಷ್ಕಳವಾಗಿ ಪಡೆದಿದೆ. ಪಂಡಿತ ಸಾಹಿತ್ಯಕ್ಕೆ ಇಂದು ಇರುವ ಸ್ಥಾನ ಮಹೋನ್ನತವಾದುದು. ಅದರ ಜೊತೆ ಯಲ್ಲೇ ಬೆಳೆದುಕೊಂಡು ಬಂದಿರುವ ಸಾಮಾನ್ಯ ಸಾಹಿತ್ಯಕ್ಕೆ ಆ ಸ್ಥಾನವಿಲ್ಲದಿದ್ದರೂ ತನ್ನದೇ ಆದ ಸ್ಥಾನವನ್ನು ಅದು ಗಳಿಸಿಕೊಂಡು, ಉಳಿಸಿಕೊಂಡು ಬಂದಿದೆ.

ಪಂಡಿತ ಸಾಹಿತ್ಯದ ರಸಾನುಭವಕ್ಕೆ ಸ್ವತಃ ಪಂಡಿತನೇ ಆಗಿರಬೇಕು, ಇಲ್ಲವೇ ಪಂಡಿತನ ಸಹಾಯವಾದರೂ ಬೇಕು. ಆದರೆ ಸಾಮಾನ್ಯ ಸಾಹಿತ್ಯಕ್ಕೆ ಯಾರ ಮಧ್ಯಸ್ಥಿಕೆಯೂ ಬೇಕಿಲ್ಲ. ಅದು ಎಲ್ಲರ ಸೊತ್ತು. ಪಂಡಿತಸಾಹಿತ್ಯ ಪಟ್ಟಣದ ವಿದ್ಯುಚ್ಛಕ್ತಿಯಾದರೆ ಸಾಮಾನ್ಯ ಸಾಹಿತ್ಯ ಹಳ್ಳಿಹಳ್ಳಿಯ ಮನೆಮನೆಯ ಪ್ರಣತಿ. ಈ ಸಾಮಾನ್ಯ ಸಾಹಿತ್ಯವನ್ನೇ ಸಮಂಜಸ ಹೆಸರಿನಲ್ಲಿ ಕರೆಯುವುದಾದರೆ 'ಜಾನಪದ ಸಾಹಿತ್ಯ'ವೆಂದಾಗುತ್ತದೆ. ಅಷ್ಟಕ್ಕೆ ಅದರ ಸೊಬಗು ಮತ್ತಷ್ಟು ವರ್ಧಿಸುತ್ತದೆ.

ಪಂಡಿತಸಾಹಿತ್ಯ ಪುರಾತನ ಕಾಲದಿಂದಲೂ ರಾಜ-ಮಹಾರಾಜರುಗಳ ಆಸ್ಥಾನದಲ್ಲಿ ಆಶ್ರಯಪಡೆದು ಬೆಳೆಯಿತು. ಆದರೆ ಜಾನಪದ ಸಾಹಿತ್ಯ ರೈತನ ಗುಡಿಸಲಿನಲ್ಲೇ ಬೆಳೆಯಿತು. ಆದರೂ ಚಿಂತೆಯಿಲ್ಲ. ನಾಡಿಗೊಂದು ರಾಜಮಂದಿರವಿದ್ದೀತು. ನಾಡ ತುಂಬಿವೆ ರೈತ ಕುಟೀರಗಳು! ಒಂದು ದೃಷ್ಟಿಯಿಂದ ಇವಕ್ಕೆ ಹರ್ಷಪಡಲೇ ಬೇಕು.

ಜಾನಪದ ಸಾಹಿತ್ಯದ ಉಗಮಸ್ಥಾನ ನಾಡಿನ ಜೀವನಾಡಿಯಂತಿರುವ ಹಳ್ಳಿಗಳು. ಈ ಸಾಹಿತ್ಯ ಗ್ರಾಮ ಜೀವನದ ಉಸಿರು! ಹಳ್ಳಿಯ ಜನಕ್ಕೆ ಹಾಡುವುದೊಂದು ನಿಸರ್ಗದ ದೇಣಿಗೆ. ಅವರು ದೇವರು ಮೇಲೆ ಇಟ್ಟಿದ್ದ ಅಚಲವಾದ ನಂಬುಗೆಯಿಂದ ಅವರ ಬಾಳು ಬಂಧುರವಾಗಿತ್ತು; ಕಾವ್ಯಮಯವಾಗಿತ್ತು. ಅವರು ಕವನ ಕಟ್ಟಿ ಹಾಡಿ ಬಾಳಿನ ಕಹಿ ಮರೆತ ಜನ. ಜೀವನದ ಕೊಂಕು ಡೊಂಕುಗಳನ್ನು ಸರಿಪಡಿಸಿಕೊಂಡು ಧರ್ಮಬದ್ಧವಾಗಿ ನಡೆಯಬೇಕೆಂದ ಆದರ್ಶಜೀವಿಗಳಾದ ಅವರು ತಮ್ಮ ನಿತ್ಯಜೀವನದ ನಡೆ-ನುಡಿಗಳನ್ನೇ ನುಡಿಗಟ್ಟಿ ಹಾಡಿದ್ದಾರೆ. ಅವರ ಹಾಡಿನಲ್ಲಿ ಅಮೃತವಿದೆ; ಅನುಭವವಿದೆ. ಅನುಭವಸಿದ್ಧವಾದ ಸಾಹಿತ್ಯವೇ ಬಾಳಿನ ಕೈದೀವಿಗೆಯಷ್ಟೆ. ಎಂತಲೇ ಜಾನಪದ ಸಾಹಿತ್ಯಬ್ರಹ್ಮರಾದ ನಮ್ಮ ಹಳ್ಳಿಯ ರೈತರು, ಹೆಣ್ಣು ಮಕ್ಕಳು ನಮ್ಮ ಕೃತಜ್ಞತೆಗೆ ಪಾತ್ರರು.

'ಅಂಬಲಿ ಉಂಡು, ಕಂಬಳಿ ಹೊದೆದು, ಅಂಬುಜಾಕ್ಷನ ನಂಬಿ' ಸಂಸಾರ ಸಾಗಿಸಿದ ಈ ಜನ ತಮ್ಮ ಹಾಡುಗಳಿಂದ ಕನ್ನಡ ಸಾಹಿತ್ಯ ಭಂಡಾರವನ್ನು ತುಂಬಿದ್ದಾರೆ; ನುಡಿತಾಯ ಸೇವೆಸೈದ ಪುಣ್ಯದಲ್ಲಿ ಗಣ್ಯಭಾಗ ಗಳಿಸಿದ್ದಾರೆ.

ಜಾನಪದ ಸಾಹಿತ್ಯದಲ್ಲಿ ವಿವಿಧ ಗುಂಪುಗಳಿವೆ. ಅವುಗಳಲ್ಲಿ ದೊರಕುವ ಐತಿಹಾಸಿಕ ಕಥನಗಳು, ಶರಣರ ಹಾಡುಗಳು, ಸುದೀರ್ಘ ಕಾವ್ಯಗಳಂತೆ ರಂಜಿಸುತ್ತವೆ. ಬಿಡಿನುಡಿಗಳಂತೂ ನಮ್ಮನ್ನು ಬೆರಗುಗೊಳಿಸುತ್ತವೆ. ಮೊದಲೆ ಹೇಳಿದಂತೆ ಇವುಗಳ ಕರ್ತೃಗಳು ವಿಶ್ವವಿದ್ಯಾನಿಲಯದ ಪದವಿಯನ್ನೇನೂ ಪಡೆದಿರಲಿಲ್ಲ. ಅಕ್ಷರ ಪರಿಚಯವಿಲ್ಲದ ನಮ್ಮ ಈ ಸಾಹಿತ್ಯಬ್ರಹ್ಮರಿಗೆ ಅನುಭವವೇ ಅಭ್ಯಾಸವಾಗಿತ್ತು; ಪ್ರಕೃತಿಯೇ ಪದವಿಯಾಗಿತ್ತು. ಆದುದರಿಂದಲೇ ಅವರಿಂದ ಸತ್ಯಸುಂದರವಾದ, ಸರಳವಾದ ಸಾಹಿತ್ಯ ಸೃಷ್ಟಿಯಾಯಿತು. ಜಾನಪದ ಸಾಹಿತ್ಯವೆಂದರೆ ಮತ್ತೇನೂ ಅಲ್ಲ. ನಿಸರ್ಗಮೊಲವಿನಿಂದ ನಿಷ್ಕಲ್ಮಷ ಹಳ್ಳಿಗರ ಇನಿದನಿಯಲ್ಲಿ ಹೃದಯದಿಂದ ಹರಿದು ಬಂದ ಕಾವ್ಯ ಗಂಗೆ! ಅಲ್ಲಿ ಬರುವ ಉಪಮೆಗಳು, ನೀತಿಗಳು, ಸಿದ್ಧಾಂತಗಳು, ತತ್ತ್ವಗಳು, ನಗೆಬುಗ್ಗೆಗಳು, ಸರಸಸನ್ನಿವೇಶಗಳು, ವಿಸಕೃತಿಗಳು ನಮ್ಮನ್ನು ಅಚ್ಚರಿಗೊಳಿಸುತ್ತವೆ.

ಬರೆದಿಡದೆ ಬಾಯಿಂದ ಬಾಯಿಗೆ ಬಂದ ಶೃತಿಗಳೇ ವೇದಗಳೆಂದು ಹೇಳುತ್ತಾರೆ. ಈ ಹಾಡುಗಳಾದರೂ ಬಾಯಿಂದ ಬಾಯಿಗೆ ಬಂದವುಗಳೇ ಆಗಿವೆ. ಇವಕ್ಕೆ ವೇದ

ಗಳಿಂದಾದರೂ ಎನ್ನಿ. ಗಾದೆಗಳಿಂದಾದರೂ ಎನ್ನಿ. ಇಷ್ಟಂತೂ ಸತ್ಯ. ವೇದಗಳು ಭಾರತದ ಆಧ್ಯಾತ್ಮಿಕ ಸಂಪತ್ತಾದರೆ ಗಾದೆಗಳು ಲೌಕಿಕ ಸಂಪತ್ತು. ಈ ಎರಡು ಸಂಪತ್ತುಗಳ ಸಮನ್ವಯದಿಂದಲೇ ಸಾಹಿತ್ಯಕ್ಕೆ ಶ್ರೇಯಸ್ಸು!

ಬುಟ್ಟಿಯಿಂದ ಹಾವು ತೆಗೆಯುವ ಮುನ್ನ ಹಾವಿನ ಬಗ್ಗೆ ಸಾವಿರ ನುಡಿದು ಹುಚ್ಚು ಹಿಡಿಸುವ ಹಾವಾಡಿಗನ ಹಾದಿ ಹಿಡಿದ ಲೇಖನಿಯನ್ನು ಬುಟ್ಟಿಯ ಮುಚ್ಚಳ ವನ್ನು ತೆಗೆಯಲು ಉಪಯೋಗಿಸುವುದು ಒಳಿತೆಂದು ಕಾಣುತ್ತದೆ. ಹಾವಾಡಿಗನ ಬುಟ್ಟಿಯಲ್ಲಿ ವಿವಿಧ ಜಾತಿಯ ಹಾವುಗಳಿವೆ. ಒಂದೊಂದೂ ಒಂದೊಂದು ಜಾತಿಗೆ ಸೇರಿದುದು. ಒಂದೊಂದಕ್ಕೂ ರಾಗ ಬೇರೆ, ನಾದ ಬೇರೆ! ಅವು ನೋಟಕ್ಕೆ ಭಯಂಕರ! ಆಟಕ್ಕೆ ಹಿತಕರ! ಹಲ್ಲಿಲ್ಲದ ಹಾವು. ವಿಷವಿಲ್ಲದ ಜೀವ! ಯಾರು ಬೇಕಾದರೂ ಮುಟ್ಟಬಹುದು!

ಇನ್ನು ಜಾನಪದ ಸಾಹಿತ್ಯದಲ್ಲಿ ನಮಗೆ ದೊರಕುವ ಕೊಟ್ಯಾಂತರ ಬಿಡಿನುಡಿ ಗಳಲ್ಲಿ ಕೆಲವನ್ನಿಲ್ಲಿ ಪ್ರಸ್ತಾಪಿಸಿದರೆ ಈ ಸಾಹಿತ್ಯ ಹೇಗೆ ಗ್ರಾಮಜೀವನದ ಉಸಿರಾಗಿದೆ ಯೆಂಬುದನ್ನು ನಾವು ಕಾಣಬಹುದು.

ಎದ್ದೊಂದು ಗಳಿಗೇಲಿ ಯಾರ್‍ಯಾರ ನೆನೆಯಾಲಿ
ಎಳ್ಳು ಜೀರೀಗೆ ಬೆಳೆಯೋಳ | ಭೂತಾಯ
ಎದ್ದೊಂದು ಗಳಿಗೇ ನೆನೆದೇನು ||

—ಬೆಳ್ಳಿಮೂಡುವ ಮುನ್ನವೇ ಹಳ್ಳಿಯ ಗುಡಿಸಲಿನಿಂದ ಕೇಳಿಬರುವ ದಿವ್ಯ ದನಿ! ಎಷ್ಟು ಇಂಪು! ಏನು ಅರ್ಥ! ಬೆಳಗಾಗುವುದಕ್ಕೆ ಅದೆಷ್ಟೊ ಮುಂಚೆ ಎದ್ದು ಪ್ರಾತಃಕರ್ಮಗಳನ್ನು ಮುಗಿಸಿ ಕೋಳಿ ಕೂಗುವುದರೊಳಗಾಗಿ ಸಾಕಷ್ಟು ಕಾಳು ಬೀಸುತ್ತಾಳೆ ಹಳ್ಳಿಯ ಹೆಣ್ಣು ಮಗಳು. ಮಾಡುತ್ತಿರುವುದು ಶ್ರಮದ ಕೆಲಸವಾದರೂ ಆ ತಾಯಿ ಹರ್ಷದಿಂದ ಹಾಡುತ್ತಾಳೆ. ಆ ಹಾಡಿನಲ್ಲೇ ತನ್ಮಯಳಾಗುತ್ತಾಳೆ. ಕಾಯಕದಲ್ಲಿ ಅದೆಷ್ಟು ನಿಷ್ಠೆ! ಹಾಡಿನ ಅರ್ಥವಾದರೂ ಎಷ್ಟು ಗಹನವಾಗಿದೆ! "ಎಳ್ಳು ಜೀರಿಗೆ ಬೆಳೆದು, ಸಕಲ ಜಗತ್ತನ್ನೂ ಸಮನ್ವಯ ದೃಷ್ಟಿಯಿಂದ ಸಾಕುತ್ತಿರುವ ಭೂ ಮಾತೇ, ನಿನಗೆ ನಮಸ್ಕಾರ!"—ಜಾತಿ ಮತಗಳ ಹುಚ್ಚು ಕಚ್ಚಾಟವಲ್ಲಿ ಕಲ್ಪಿತ ವಾದ ಕಲ್ಲುದೇವರುಗಳಿಗೆಲ್ಲ ಅವಳು ನಮಸ್ಕರಿಸುವುದಿಲ್ಲ. ಪವಿತ್ರ ಹೃದಯದಿಂದ ಭೂಮಿತಾಯಿಯನ್ನು ಪ್ರಾರ್ಥಿಸುತ್ತಾಳೆ.

ಪ್ರಾರ್ಥನೆಯಿಂದಲೇ ತನ್ನ ದೈನಂದಿನ ಕೆಲಸಗಳನ್ನು ಪ್ರಾರಂಭಿಸುತ್ತಾಳೆ. ಪ್ರಾರ್ಥನೆಯಲ್ಲೇ ಪಾವಿತ್ರತೆಯುಳ್ಳ ಅವಳಿಗೆ ತನ್ನ ಕೆಲಸಗಳಲ್ಲಿ ಸೋಲೆಲ್ಲಿ ಬಂತು! ಎಂತಹ ಕೆಲಸವಿದ್ದರೂ ಉತ್ಸಾಹದಿಂದ ಮಾಡುತ್ತಾಳೆ. ಆ ಉತ್ಸಾಹಕ್ಕೆ ಕಾರಣ ಆ ಒಂದು ಹಾಡು!

ಹೀಗೆ ಆ ಹಳ್ಳಿಯ ಹೆಣ್ಣುಮಗಳು ದಿನವಿಡಿ ನುಡಿಗಟ್ಟಿ ಹಾಡಿಕೊಂಡು ತನ್ನ ಬದುಕನ್ನು ನಡೆಸುತ್ತಾಳೆ. ಅವಳ ಸಿರಿನುಡಿಯ ರಸವೈಭವವನ್ನು ನಾವು ಮುಂದಿನ ಹಲವು ನುಡಿಗಳಲ್ಲಿ ಕಾಣುವ. ಮದುವೆಯಾಗಿ ಬಹಳ ದಿನಗಳಿಂದಲೂ ಮಕ್ಕಳಾಗಿರುವುದಿಲ್ಲ ಓರ್ವ ಗರತಿಗೆ. ಪಾಪ! ಎಲ್ಲರಂತೆ ತಾನು 'ತಾಯಿ'ಯಾಗಬೇಕೆಂಬ ಬಯಕೆ! ಅಂತೇ, ಆ ಸಾಧ್ವಿ ಮಕ್ಕಳಿಗಾಗಿ ಹಂಬಲಿಸುತ್ತಾಳೆ; ತನ್ನ ಬಂಜೆತನಕ್ಕಾಗಿ ಮಮ್ಮಲ ಮರುಗುತ್ತಾಳೆ—

ಕಂದನ ಕೊಡು ಶಿವನೆ ಬಂಧನ ಪಡಲಾರೆ
ಬಂಜೆಂಬ ಶಬುದ ಕೇಳಲಾರೆ! ಶಿವರಾಯ
ಹಂಗಿನ ಬಾನ ಉಣಲಾರೆ ||

—ಅವಳ ಆರ್ತನಾದವನ್ನು ಕೇಳಿ ಕಲ್ಲು ಕರಗಬೇಕು; ಬರಡು ಕರೆಯಬೇಕು. ಒಂದುಬಾರಿಗೇ ಪ್ರತ್ಯಕ್ಷನಾಗುವುದು ದೇವರ ಸ್ವಭಾವಕ್ಕೆ ಬಂದಿಲ್ಲ. ಮತ್ತೆ ಪರಶಿವನನ್ನು ಪ್ರಾರ್ಥಿಸುತ್ತಾಳೆ—

ಮಕ್ಕಳ ಕೊಡು ಶಿವನೆ ಮತ್ತೊಂದ ನಾವಲ್ಲೆ
ಹತ್ತು ಮಂದ್ಯಾಗೆ ಹರಿನೀರ | ತರುವಂಥ
ಮುತ್ತೈದೆ ತನವ ಕೊಡು ಶಿವನೆ ||

—ತೋಟ ತುಡಿಕೆಗಳನ್ನಾಗಲೀ, ವಸ್ತ್ರ ವಡವೆಗಳನ್ನಾಗಲೀ ಅವಳು ಕೇಳುವುದಿಲ್ಲ. 'ಮುತ್ತೈದೆ ಭಾಗ್ಯ'ವುಳಿವಂತೆ ಮಕ್ಕಳನ್ನು ಕೇಳುತ್ತಾಳೆ. ಆಸೆಯಿಲ್ಲದ ಈ ಆಶೆಯನ್ನು ಕೇಳಿ ಈಶ ಕನಿಕರಿಸುತ್ತಾನೆ; ಅವಳಿಗೆ ಮಕ್ಕಳ ಫಲ ಕೊಡುತ್ತಾನೆ. ಪರಮೇಶ್ವರನ ಕರುಣೆಯಿಂದ ಪ್ರಸವಿಸುವ ಆ ತಾಯಿಯ ಸ್ಥಿತಿಯನ್ನು ಬಹಳ ಸೊಗಸಾಗಿ ನಮ್ಮ ಜನ ವರ್ಣಿಸಿದ್ದಾರೆ. ಇದ್ದದ್ದನ್ನು ಇದ್ದಂತೆಯೇ ಹೇಳುವ ಸಿದ್ಧ ಪುರುಷರವರು. ಮುಚ್ಚುಮರೆಯಿಲ್ಲ—

ಕಂದಯ್ಯ ಹುಟ್ಟುವಾಗ ಕಂದ್ಯಾವಕ್ಕನ ಮಾರಿ
ಕಂದಯ್ಯ ಚಂಡಾಡಿ ಬರುವಾಗ | ಆ ಮಾರಿ
ಕುಂದಲ್ಹರಳಾಗಿ ಹೊಳೆದಾವೊ ||

—ಎಷ್ಟು ನೈಜ ಚಿತ್ರಣ! ಅದೆಷ್ಟು ಪ್ರಾಸಬದ್ಧ ವಾಸ್ತವ ನಿರೂಪಣ! ಪ್ರಸವ ವೇದನೆಯನ್ನು ಅನುಭವಿಸುವಾಗ ತಾನು ದೇವರಲ್ಲಿ ಮಕ್ಕಳಿಗಾಗಿ ಬೇಡಿದ್ದ ವರವನ್ನು ಶಿವನು ಹಿಂದಕ್ಕೆ ತೆಗೆದುಕೊಂಡರೆ ಸಾಕೆನ್ನುತ್ತಾಳಂತೆ!—

ಬ್ಯಾನಿಯನು ತಿನ್ನುವಾಗ ಬ್ಯಾಡವ್ವ ಮಕ್ಕಳು
ಬಾಗಿ ಬಚ್ಚಲ ಹೊಗುವಾಗ | ಬೇಡ್ಯಾಳ
ನೂರೊಂದು ಫಲವ ಕೊಡು ಶಿವನೆ ||

ಪ್ರಸವ ನಂತರ ಕೂಸಿಗೆ ಎಣ್ಣೆ ಹಚ್ಚಿ ಸ್ನಾನದ ಬಚ್ಚಲಿಗೆ ತೆಗೆದುಕೊಂಡು ಹೋಗುವಾಗ ಇನ್ನೂ ನೂರು ಮಕ್ಕಳಿರಲಿ ಎನ್ನುತ್ತಾಳೆ! ಹುಟ್ಟಿದ ಕೂಸನ್ನು ನೋಡಿ ಪಟ್ಟ ನೋವನ್ನು ಮರೆಯುತ್ತಾಳೆ.

'ನೂರೊಂದು ಫಲ' ಕೇಳುವಾಗ ತನ್ನ ಮನೆಯ ಬಡತನದ ಕಡೆಗೆ ಅವಳ ಲಕ್ಷ್ಯವೇ ಇಲ್ಲ. ಪಕ್ಕದ ಮನೆಯಾಕೆ ಈ ಮಾತನ್ನು ಕೇಳಿರಬೇಕು. "ಅಷ್ಟು ಮಕ್ಕಳನ್ನು ದೇವರು ಕೊಟ್ಟರೇನು ಗತಿ? ಮನೆಯಲ್ಲಿ ಬಡತನ" ಎಂದು ಪ್ರಶ್ನಿಸಿರಬೇಕು. ಆ ಪ್ರಶ್ನೆಗೆ ತಾಯಿಯ ಸಮಾಧಾನವಿದು—

ಬಡತನ ನನಗಿರಲಿ ಬಹಳ ಮಕ್ಕಳಿರಲಿ
ವ್ಯಾಗೆ ಗುರುವಿನ ದಯವಿರಲಿ | ಗೆಳತ್ಯಮ್ಮ
ಬಡತನದ ಚಿಂತೆ ಶಿವನಿಗಿರಲಿ ||

—ತನಗೊದಗಿರುವ ಬಡತನಕ್ಕಾಗಿ ಅವಳು ಭೀತಿಗೊಂಡಿಲ್ಲ. ದಾರಿದ್ರ್ಯದ ದಂದುಗದಲ್ಲೂ ಗುರುವಿನ ದಯೆ ಬೇಡುತ್ತಾಳೆ; ಬಡತನದ ಚಿಂತೆಯನ್ನು ಶಿವನಿಗೆ ಬಿಡುತ್ತಾಳೆ. ಎಂತಹ ಮಹೋನ್ನತ ಭಾವನೆ! ಎಷ್ಟು ಸಹನೆ! ಆಳವಾಗಿ ನೋಡಿದರೆ ಆಧ್ಯಾತ್ಮವಿಲ್ಲಿ ತುಂಬಿ ತುಳುಕುತ್ತಿದೆ. ಕರ್ಮ ತನ್ನದು. ಅದರ ಫಲಾಫಲಗಳು ಈಶ್ವರನಿಗೆ ಸೇರಿದುದು. ಬಡತನವನ್ನು ಅನುಭವಿಸುವುದು ಅವಳ ಕರ್ಮ. ಪರಿಣಾಮವಾದ ಸುಖ ದುಃಖಗಳು ಶಿವನದು. "ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ" ಎಂದು ಗೀತೆಯಲ್ಲಿ ಹೇಳಿರುವುದಾದರೂ ಇದನ್ನೇ. ಕಠಿಣವಾದ ಆಧ್ಯಾತ್ಮಜ್ಞಾನವನ್ನು ತಿಳಿನುಡಿಯಲ್ಲಿ ತಿಳಿಸಿ ಹೇಳಿರುವ ಹಳ್ಳಿಯ ಜನರೆಷ್ಟು ಜಾಣರು!

ತಾಯಿ ತಾನು ಹಡೆದ ಮಗುವನ್ನು ತೊಟ್ಟಿಲಲ್ಲಿಟ್ಟು ತೂಗುವಾಗ ಸಾವಿರ ಪದಗಳನ್ನು ಕಟ್ಟಿ ಹಾಡುತ್ತಾಳೆ. ಅಳುವ ಮಗುವೂ ಅವ್ವನ ಪದ ಕೇಳಿ ಸುಮ್ಮನೆ ಮಲಗುತ್ತದೆ.—

ಯಾತ ಯಾತರ ಗಾಳಿ ಎಲೆಯ ತೋಟದ ಗಾಳಿ
ಸುತ್ತಾಲು ಗಾಳಿ ಸುಳಿಗಾಳಿ | ಕಂದಯ್ಯ
ತೊಟ್ಟೀಲ ಗಾಳಿ ಮನೆತುಂಬ ||

—ವರ್ಣನೆಯ ಉನ್ನತ ಶಿಖರ। ಕರ್ಣಕ್ಕೆ ಮುಕುರ! ಅಳುವುದು ಮಗುವಿನ ಸ್ವಭಾವ. ಮತ್ತೆ ಅಳುತ್ತದೆ. ಮೂರು ತಿಂಗಳ ಆ ಮಗುವಿಗೆ ಮದುವೆಯ ಆಸೆ ಹುಟ್ಟಿಸಿ ಮಲಗಿಸಲೆತ್ನಿಸುತ್ತಾಳೆ—

ಅಳಬೇಡ ನನಕಂದ! ನಿನಗೆ ಜೋಗುಳ ಪಾಡಿ
ಕರತಂದು ಹಾಲ ಉಣಿಸೇನು। ಮಾವನ ಮಗಳ
ಎಳತಂದು ಧಾರಿ ಎರೆದೇನು!

—ಹಡೆದವ್ವನ ನುಡಿಗೇಳಿದ ಆ ಮುಗ್ಧ ಕೂಸಿಗೆ ಆವ ಭರವಸೆಯೋ ಸುಮ್ಮನೆ ಮಲಗಿ ನಿದ್ದೆಹೋಗುತ್ತದೆ. ನಿದ್ದೆಗಣ್ಣಿನಲ್ಲೇ ನಸುನಗುತ್ತದೆ. ಬಹುಶಃ, ಅಮ್ಮನ ನುಡಿಗೇಳಿ ಇರಬಹುದು! ತಾಯಿಗಂತೂ ಈ ದೃಶ್ಯ ನೋಡಿ ಮೋಹ ಉಕ್ಕಿ ಬರುತ್ತದೆ—

ತೊಟ್ಟಿಲಿನೊಳಗೆ ಪುಟ್ಟಕಂದ ಮಲಗ್ಯಾನೆ
ಸೃಷ್ಟಿಗೊಡೆಯಾನ ಮಡದೀ (ಯ) | ಪಾರ್ವತಿದೇವಿ
ದೃಷ್ಟಿತಗಲ್ಯಾವೋ ತೆರೆಹಾಕು !

—ಓ....ಈ ಲೋಕದವರ ದೃಷ್ಟಿಯಿರಲಿ, 'ಸೃಷ್ಟಿಗೊಡೆಯನ ಸತಿಯ ದೃಷ್ಟಿ ತಗಲುವುದೆಂಬ ಬಿಂಕದ ನುಡಿ! ತೊಟ್ಟಿಲಿಗೆ ತೆರೆ ಹಾಕುತ್ತಾಳೆ. ತನ್ನ ಮಗುವಿನ ಮೇಲಣ ಮೋಹದಿಂದ ಭರದಲ್ಲಿ ವರ ಕೊಟ್ಟ ಹರನ ಸತಿಯ ದೃಷ್ಟಿಯಲ್ಲಿ ಸಂಶಯ ತಾಳುತ್ತಾಳೆ! ಎಷ್ಟು ಅಭಿಮಾನ ಕಂದನ ಮೇಲೆ!

ಮೂರು ತಿಂಗಳ ಮಗು ಮೂರು ಉಗಾದಿಯನ್ನು ಕಂಡು ಊರ ಮುಂದೆ ಆಡಲಿಕ್ಕೆ ಹೋಗಿದೆ. ಅದರ ಜೊತೆಯಲ್ಲಿ ಊರಿನ ಇತರ ಮಕ್ಕಳೂ ಆಡುತ್ತಿವೆ. ತಾಯಿ ತನ್ನ ಮನೆ ಬಾಗಿಲಲ್ಲಿ ನಿಂತು ಆ ಮಕ್ಕಳಾಟಿಕೆ ನೋಡಿ ಒಂದು ಮನಮೋಹಕ ಮಾತನ್ನಾಡುತ್ತಾಳೆ—

ನನ್ನಯ್ಯನಂಥೋರು ಹನ್ನೆರಡು ಮಕ್ಕಳು
ಹೊನ್ನೇಯ ಮರದ ನೆರಳಲ್ಲಿ | ಆಡುವಾಗ
ಸನ್ಯಾಸಿ ಜಪವ ಮರೆತಾನು ||

—ಸರ್ವಸಂಗ ಪರಿತ್ಯಾಗಮಾಡಿದ ಸನ್ಯಾಸಿ ಮಕ್ಕಳನ್ನು ನೋಡಿ ಜಪವನ್ನು ಮರೆಯುತ್ತಾನಂತೆ. ಅಷ್ಟು ಸೊಗಸನ್ನು ತನ್ನ ಮಗನಲ್ಲಿ ಕಂಡಿದ್ದಾಳೆ. ಅಷ್ಟೇ ಅಲ್ಲ "ನನ್ನಯ್ಯನಂಥೋರು...." ಎಂಬ ವಿಶಾಲವಾದ ಮಾತನಾಡಿದ್ದಾಳೆ. ಸಂಕುಚಿತದ ಸುಳಿ ಅಲ್ಲಿಲ್ಲ.

ಹೀಗೆ ಆಡಿದ ಮಗು ಕೈಕಾಲು ಕೆಸರು ಮಾಡಿಕೊಂಡು ಮನೆಗೆ ಬರುತ್ತದೆ.

ಆಡಿ ಬಾ ನನ್ನ ಕಂದ ಅಂಗಾಲು ತೊಳೆದೇನು
ತೆಂಗೀನ ಕಾಯ ತಿಳಿನೀರ | ನಾ ತಂದು
ಬಂಗಾರದ ಪಾದ ತೊಳೆದೇನು ||

—ಸಾವಿರಗಟ್ಟಲೆ ಖರ್ಚುಮಾಡಿ ಸರ್ಕಾರದವರು ತೆಗೆಸಿದ ಭಾವಿಯ ನೀರೂ ಅವಳಿಗೆ ಬೇಡವಾಗಿದೆ. ತೆಂಗಿನ ಕಾಯ ತಿಳಿನೀರಿನಲ್ಲಿ ತನ್ನ ಕಂದನ ಬಂಗಾರದ ಪಾದವನ್ನು ತೊಳೆಯುತ್ತಾಳಂತೆ: ಇದಕ್ಕಿಂತ ಸುಂದರ ನುಡಿಗಳು ನಮಗೆಲ್ಲಿ ಸಿಕ್ಕಿಯಾವು?

ಇಂತಹ ಸಹಸ್ರ ಸಹಸ್ರ ಪದಗಳನ್ನು ಹಾಡಿದ ನಮ್ಮ ಹಳ್ಳಿಯ ಜನ ಕನ್ನಡ ನುಡಿ ಕಣಜಕ್ಕೆ ಅಪೂರ್ವ ಕಾಣಿಕೆ ಸಲ್ಲಿಸಿದ್ದಾರೆ. ಆ ದೃಷ್ಟಿಯಿಂದ ಹಳ್ಳಿಯ ಮಹಾ ಜನಕ್ಕೆ ನಾವೆಷ್ಟು ಋಣಿಗಳಾಗಿದ್ದರೂ ಅಲ್ಪವೇ.

ಇಷ್ಟೆಲ್ಲ ಬರೆದರೂ 'ಆದರೆ'....ಎಂಬೊಂದು ಪದ ಎದುರಿಗೆ ಬಂದು ನಿಲ್ಲತ್ತಿದೆ. ಊಹೆಗೂ ನಿಲುಕದಷ್ಟು ಪ್ರಮಾಣದಲ್ಲಿ ಸೃಷ್ಟಿಯಾಗಿರುವ ಈ ಜನಪದ ಸಾಹಿತ್ಯ ಸಂಗ್ರಹಣ ಇನ್ನೂ ಆಗಬೇಕಾಗಿದೆ. ಈ ದಿಸೆಯಲ್ಲಿ ನಾಡಿನ ಅನೇಕ ಮಹನೀಯರು ಪ್ರಯತ್ನ ನಡೆಸಿದ್ದಾರೆ. ಹತ್ತಾರು ಸಂಗ್ರಹಗಳೂ ಪ್ರಕಟವಾಗಿವೆ. ಆದರೂ ಸಾಲದು. ಸರ್ಕಾರ ಮತ್ತು ಸಾಹಿತ್ಯ ಪರಿಷತ್ತುಗಳು ಈ ಬಗ್ಗೆ ರಚನಾತ್ಮಕ ಯೋಜನೆಯೊಂದನ್ನು ಹಾಕಿಕೊಂಡು ಈ ಸಾಹಿತ್ಯ ಸಂಗ್ರಹಣ ಮತ್ತು ಪ್ರಕಾಶನಗಳ ಬಗ್ಗೆ ಗಮನ ಕೊಡಬೇಕು.

ಯಾವ ಜೀವಿಗಳ ಜೀವನ ಸುಂದರವಾದರೆ ಭಾರತ ಸುಂದರವಾಗುತ್ತದೆಂದು ಭಾವಿಸಿರುವೆವೋ ಅಂತಹ ಗ್ರಾಮಜೀವಿಗಳ ಬಸಿರಿನಿಂದ ಬಂದ ಈ ಉಸಿರು ಕಟ್ಟದಂತೆ ನೋಡಿಕೊಳ್ಳಬೇಕಾದುದು ಎಲ್ಲರ ಕರ್ತವ್ಯ.

——::——

# ವಿಶ್ವಕ್ಷೋಭೆ ಅದರ ಪರಿಹಾರ



**ಶ್ರೀ ಪಿ. ಸಿಂಗಾರವೇಲು,**
ನಿವೃತ್ತ ಹೈಕೋರ್ಟು ನ್ಯಾಯಾಧೀಶರು,
ಹಾಗೂ ಮೈಸೂರು ವಿಶ್ವವಿದ್ಯಾಲಯದ ಉಪಕುಲಪತಿಗಳು.

ಇಡಿ ವಿಶ್ವ, ಗ್ರಾಮ, ತಾಲ್ಲೂಕು, ಜಿಲ್ಲಾ ರಾಜ್ಯ ಕೇಂದ್ರಗಳು ದೇಶಗಳಾದಿಯಾಗಿ ತುತ್ತುದಿಯವರೆಗೆ, ಪ್ರತಿನಿಧಿಸಲ್ಪಟ್ಟ ಯುನೈಟೆಡ್ ಸಂಸ್ಥೆಯೂ ಸಹ ಕ್ಷೋಭೆಯಲ್ಲಿವೆ. ಗ್ರಾಮ ಪಂಚಾಯಿತಿ, ತಾಲ್ಲೂಕು ಜಿಲ್ಲಾ ಮತ್ತು ರಾಜ್ಯ ಕೇಂದ್ರಗಳು, ರಾಜ್ಯಾಂಗ ಸರ್ಕಾರಗಳೂ ಅವುಗಳ ವಿಧಾನ ಮಂಡಳಿ ಸದಸ್ಯರುಗಳಾದಿಯಾಗಿ ಆಯಾ ಸಂಸ್ಥೆಯ ಉನ್ನತಾಧಿಕಾರಿಗಳೆಲ್ಲ ತಂತಮ್ಮ ಆಶಾಪಾಶಗಳಿಂದ ಪ್ರೇರಿತರಾಗಿ, ಆ ವಿಶ್ವಸಂಸ್ಥೆಗಳ ಅಭ್ಯುದಯವನ್ನೇ ಮರೆಯುವರು. ಅದರಿಂದ ಸ್ವಾಭಾವಿಕವಾಗಿ ಪ್ರತಿಯೊಬ್ಬನೂ ಸಾಧ್ಯವಾದಷ್ಟು, ತನಗೆ ಬೇಕಾದುದ ಬೇಕಾದಷ್ಟು ತನ್ನ ತೋಡಿಕೊಳ್ಳುವುದರೊಳಗೆ ನಿರತನಾಗುವನು ಇದರ ಪರಿಣಾಮ ಅಸೂಯೆ, ವಿರೋಧಗಳಲ್ಲಿ ಪರಿಸಮಾಪ್ತಿಯಾಗುತ್ತದೆ. ಯುನೈಟೆಡ್ ನೇರ್ಷ ಅಂಥಹ ಉದಾತ್ತ ವಿಶ್ವಸಂಸ್ಥೆಯ ಸದಸ್ಯರುಗಳೂ ಸಹ ರಾಷ್ಟ್ರೀಯತಾ ಸಂಘರ್ಷಣೆಗಳಿಂದ ಹುರಿದುಂಬಿದ ಹುರಿಯಾಳುಗಳಾಗಿದ್ದಾರೆ. ಇತ್ತೀಚಿನ ಯುನೈಟೆಡ್ ನೇರ್ಷಸ್ ಸಂಸ್ಥೆಯ ನಡಾವಳಿಗಳ ಪರಿಕಿಸಿದಾಗ, ಕೆಲವು ರಾಷ್ಟ್ರಗಳ ಕಟುಗ್ರತರವಾದ ತೆಗಳಿಕೆಯ ಭಾಷಾಪ್ರಯೋಗಗಳಿಂದ, ಪ್ರತಿಯೊಂದು ರಾಷ್ಟ್ರವೂ ತನ್ನ ವಿಚಾರ ಲಹರಿಗಳೊಳಗೆ ನಿಮಗ್ನವಾಗಿ ಇದಿರ ಸಾಧು ವಿಚಾರಗಳಿಗೆಡೆಗೊಡದಿಹುದನ್ನು ಮನಗಾಣಬಹುದು. ಇತ್ತೀಚಿನ ಸಭೆಗಳು ಭಿನ್ನಾಭಿಪ್ರಾಯಗಳಿಂದ ಸಮಸ್ಯೆಗಳ ಬಗೆಹರಿಸಲಾರದೆ ಯಾವ ಒಡಂಬಡಿಕೆಗೂ ಬಾರದಿರುವುದು ಶೋಚನೀಯ.

ವಿಜ್ಞಾನದ ಮುನ್ನಡೆ ವಿನಾಶಕಾರಿ ಯಂತ್ರೋಪಕರಣಗಳನ್ನು ಕೆಲವೇ ರಾಷ್ಟ್ರಗಳ ಸ್ವೊತ್ತಾಗಿಸಿದೆ. ಮತ್ತೆ ಅವು ಆಕಸ್ಮಿಕವಾಗಿಯಾಗಲೀ ಅಥವಾ ಉದ್ದಿಶ್ಯಪೂರ್ವಕವಾಗಿಯಾಗಲಿ ಅಡ್ಡದಾರಿ ಹಿಡಿದಲ್ಲಿ ವಿಶ್ವ ವಿನಾಶವಾಗಿ ಜಯಿ ಅಪಜಯಿಗಳಿರ್ವರೂ ಉಳಿಯರು. ವಿಶ್ವಶಾಂತಿಯೊದಗಿಸೆ ಧರ್ಮದ ಆದರ್ಶ ವಿಚಾರಶಾಸ್ತ್ರವೊಂದೇ ಎಂದು ಆ ಶಾಂತಿ, ಸಮಾಧಾನಗಳ ಸಂಧಾನದ ಪರಿದರ್ಶನದ ಮೂರ್ತಿಯೆನಿಸಿದ, ನಮ್ಮ ಪ್ರಧಾನಮಂತ್ರಿ ಜವಹರ್‌ಲಾಲ್ ನೆಹರು ಅವರನ್ನು ವಿಶ್ವದಾದ್ಯಂತ ಗೌರವಿಸದವರಿಲ್ಲ. ಭಾರತದಲ್ಲಿ ಯುಗಾಂತರಗಳಲ್ಲಿ ಈ ವಿಶ್ವಧರ್ಮವನ್ನೇ ಶ್ರೀಕೃಷ್ಣ, ಭಗವಾನ್ ಬುದ್ಧಾದಿಗಳೂ, ನವಯುಗದಲ್ಲಿ ಮಹಾತ್ಮ ಗಾಂಧಿ ಮತ್ತು ಶ್ರೀ ಸಿ ರಾಜಗೋಪಾಲಾಚಾರಿ ಇವರುಗಳೂ ಸಾರಿಹರು. ಅನೇಕ ವಿಶ್ವ ಪ್ರಕರಣಗಳ ಕ್ಷೋಭೆಯ ನಿವಾರಣೋಪಾಯವೆಂದರೆ ಮುನ್ಸೂಚಿಸಿಹ ಧರ್ಮದಾಳದಭ್ಯಾಸದ ಉಪದೇಶಗಳ ಪರಿಪಾಲನೆಯೊಳು ಮನವನಂಕುರಿಸುವುದೊಂದೇ. ನಾವು ವಿಖ್ಯಾತ ತತ್ವಜ್ಞಾನಿಗಳ ಉದಾತ್ತ ತತ್ವದರ್ಶನಗಳ ಪ್ರಚಾರ ಕಂಡು ಕೇಳುವೆವಾದರೂ, ಆ ನಿಯಮಗಳನ್ನನುಸರಿಸುತ್ತಿಲ್ಲ. ಮಾನವರು ಋಷಿಗಳ ಬಗ್ಗೆ ನುಡಿವರೇ ವಿನಹ ಅವರಂತೆ ನಡೆಯುವದಿಲ್ಲ. ಮಾನವನ ಸಜ್ಜೀವನ ನಡೆಯೇ ಅತ್ಯುತ್ತಮ ತತ್ವೋಪದೇಶವಲ್ಲದೆ, ನಡೆಯಿಲ್ಲದವನ ನುಡಿಗಳಿಲ್ಲ. ಆದ್ದರಿಂದ **ಶ್ರೀ ಸದಾಶಿವ ಶಿವಾಚಾರ್ಯ ಸ್ವಾಮಿಗಳಂತಹ** ಉದಾತ್ತ ಆಧ್ಯಾತ್ಮ ಶರಣರು ಜನಮನಗಳನ್ನಾಕರ್ಷಿಸಿ ಪುರಾತನ ಮತ್ತು ಸನಾತನ ಧರ್ಮಗಳ ಪ್ರಚಾರ-ಪ್ರಯೋಗಗಳಿಂದವರನ್ನು ಎಚ್ಚರಿಸುವವರಾಗಬೇಕು. ಹಾಗೂ ಸ್ವಾಮಿ ವಿವೇಕಾನಂದರ ಹಾಗೆ ಪ್ರತಿಭಾನ್ವಿತರಾಗಿರುವವರನ್ನು ಹೊರದೇಶಗಳಿಗೆ ಕಳುಹಿಸಿ, ರಣೋನ್ಮುಖರಾಗಿಹ ಪ್ರಾಪಂಚಿಕರಿಗೆ, ಶಾಂತಿ, ಸಮಾಧಾನಗಳ ನೆಲೆ ಧರ್ಮಪಥದಲ್ಲಿಹುದೆಂಬುದನ್ನು ಮನಗಾಣಿಸಿ, ವಿನಾಶಕ ಆಯುಧಗಳಿಂದ ಇದಿರಾಗುವುದರಲ್ಲಿ ವಿಶ್ವ ವಿನಾಶವಲ್ಲದೆ ಶಾಂತಿಯೆಂದೆಂದಿಗೂ ಪಸರಿಸದೆಂಬ ತತ್ವವನ್ನು ಇಂದು ಮನಗಾಣಿಸಿಕೊಡಬೇಕಾಗಿದೆ. ಹಾಗಾಗದಿದ್ದರೆ ಜಗತ್ತು ನಾಶವಾಗುವದರಲ್ಲಿ ಸಂಶಯವಿಲ್ಲ.

---

# ಕಠೋಪನಿಷತ್



ವಿದ್ವಾನ್ ಹೆಚ್. ಪಿ. ಮಲ್ಲೇದೇವರು, ಎಂ.ಎ., ಡಿಪ್.ಇನ್.ಇಂಡ್.
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ವಿಶ್ವದಲ್ಲಿ ಅನೇಕ ಧರ್ಮ ಅಥವಾ ಪಂಥಗಳಿರುವುವು. ಆಯಾಯ ಮತೀಯರು ತಮ್ಮ ತಮ್ಮ ಮತಗ್ರಂಥಗಳಾದ ಬೈಬಲ್, ಕುರಾನ್, ತ್ರಿಪೀಟಕ, ವೇದಾನ್ತ, ಆಗಮ ಇತ್ಯಾದಿಗಳಿಗೆ ಪರಮಪ್ರಾಮಾಣ್ಯ ಹಾಗೂ ಮಹತ್ತ್ವವಿತ್ತಿರುವರು. ಯಾವ ಮತ ಅಥವಾ ಪಂಥಕ್ಕೇ ಸೇರಿದವರಾಗಲಿ, ವಿಶ್ವದ ವಿದ್ವಾಂಸರೆಲ್ಲರಿಂದಲೂ ಮನ್ನಣೆಯನ್ನು ಪಡೆದಿರುವ ಗ್ರಂಥಗಳಾವುವೆಂದರೆ ಸನಾತನ ಉಪನಿಷತ್ತುಗಳು.

ಯಾವ ವಿದ್ಯೆ ಅಥವಾ ಜ್ಞಾನ, ಬಂಧನ ಅಥವಾ ದುಃಖಪರಂಪರೆಗಳಿಂದ ಮಾನವನನ್ನು ಮುಕ್ತನನ್ನಾಗಿಮಾಡಿ, ಆತ್ಯಂತಿಕ ಕಲ್ಯಾಣದೆಡೆಗೊಯ್ಯುವುದೋ ಅದು 'ಸುಜ್ಞಾನ' ಅಥವಾ 'ಶ್ರೇಷ್ಠ ಜ್ಞಾನ' ಎಂದು ಕರೆಯಲು ಯೋಗ್ಯವಾದುದು. ಉಪನಿಷತ್ತುಗಳು ಇಂತಹ ಪ್ರಶಸ್ತವಾದ ಸುಜ್ಞಾನಕ್ಕೆ ಆಗರವಾಗಿವೆ. ಭಾರತೀಯ ದರ್ಶನಗಳೆಲ್ಲಕ್ಕೂ ಉಪನಿಷತ್ತುಗಳೇ ಬುನಾದಿಯಾಗಿವೆ.

ಸಂಸ್ಕೃತ ವಾಙ್ಮಯವನ್ನು, ವೈದಿಕ ಸಂಸ್ಕೃತ ಮತ್ತು ಲೌಕಿಕ ಸಂಸ್ಕೃತ ಎಂದು ಎರಡು ವಿಭಾಗ ಮಾಡಬಹುದು.

ವೈದಿಕ ಸಂಸ್ಕೃತ ಅಥವಾ ಸಾಹಿತ್ಯದ ಬೆಳವಣಿಗೆಯನ್ನು ಸೂಕ್ಷ್ಮವಾಗಿ ವಿಮರ್ಶಿಸಿದರೆ, ಸಂಹಿತಾ, ಬ್ರಾಹ್ಮಣ, ಆರಣ್ಯಕ, ಮತ್ತು ಉಪನಿಷತ್ ಈ ರೀತಿಯಾಗಿ ನಾಲ್ಕು ಹಂತಗಳಲ್ಲಿ ಬೆಳವಣಿಗೆಯಾಗಿರುವುದನ್ನು ಗಮನಿಸಬಹುದು.

ವೇದ ಸಂಹಿತೆಗಳಲ್ಲಿ ದೇವರನ್ನು ಸ್ತುತಿಸಿ, ತನ್ನ ಅಭೀಪ್ಸೆಗಾಗಿ ಬೇಡುವುದೇ

ಹೆಚ್ಚಾಗಿ ಕಂಡುಬರುತ್ತದೆ. ಅಲ್ಲಲ್ಲಿ ಆಧ್ಯಾತ್ಮಿಕ ಅಂಶಗಳು ಕಂಡುಬಂದರೂ ಅವು ಪೂರ್ಣವಾಗಿ ಪ್ರತಿಪಾದಿತವಾಗಿಲ್ಲ.

ಬ್ರಾಹ್ಮಣ ಗ್ರಂಥಗಳಲ್ಲಿ ಯಜ್ಞಯಾಗಾದಿಗಳನ್ನು ಮಾಡುವ ವಿಧಾನ, ಯಜ್ಞಗಳಿಂದ ದೊರೆಯಬಹುದಾದ ಫಲ ಇತ್ಯಾದಿ ವಿಷಯಗಳು ವಿಶದವಾಗಿ ವಿವರಿಸಲ್ಪಟ್ಟಿವೆ. ಹೋತೃ, ಅಧ್ವರ್ಯ, ಉದ್ಗಾತೃ, ಮತ್ತು ಬ್ರಹ್ಮ ಈ ಪುರೋಹಿತರುಗಳ ಚರ್ಚೆಯಲ್ಲಿ ಕೆಲವುಸಾರಿ ಆಧ್ಯಾತ್ಮಿಕ ಅಂಶಗಳು ಬೆಳಕಿಗೆ ಬಂದರೂ, ಅವುಗಳ ಮೇಲೆ ಬೆಳಕು ಸಾಕಷ್ಟು ಪ್ರಮಾಣದಲ್ಲಿ ಬಿದ್ದಿರುವುದಿಲ್ಲ.

ಆರಣ್ಯಕ ಗ್ರಂಥಗಳಲ್ಲಿ ಉಪಾಸನೆಗೆ ಪ್ರಾತಿನಿಧ್ಯವಿದ್ದು, ಮಹತ್ವದ ವಿಷಯಗಳು ಪ್ರತಿಪಾದಿತವಾಗಿದ್ದರೂ ವಿಷಯ ಸಾಕಷ್ಟು ಸುಸ್ಪಷ್ಟವಾಗಿಲ್ಲ.

ವೈದಿಕ ಸಾಹಿತ್ಯ ಬೆಳವಣಿಗೆಯಲ್ಲಿ ಅಂತಿಮ ಹಾಗೂ ಫಲರೂಪದಂತಿರುವ ಗ್ರಂಥರಾಶಿಯೇ ಉಪನಿಷತ್ತುಗಳು. ಹಿಂದೂದರ್ಶನಗಳೆಲ್ಲಕ್ಕೂ ಉಪನಿಷತ್ತುಗಳೇ ಆಧಾರ ಹಾಗೂ ಪ್ರಾಮಾಣ್ಯ ಗ್ರಂಥಗಳು. ವೇದದ ಸಾರಸರ್ವಸ್ವವೇ ಉಪನಿಷತ್ತುಗಳು.

ಉಪನಿಷತ್ತುಗಳಲ್ಲಿ ನಾನು ಯಾರು ? ಜೀವ, ಜಗತ್ತು, ಈಶ್ವರ ಇವರ ಸಂಬಂಧವೇನು ? ಆತ್ಮನ ಸ್ವರೂಪವೇನು ? ಆತ್ಯಂತಿಕ ಕಲ್ಯಾಣ ಅಥವಾ ಮೋಕ್ಷ ಸಾಧಿಸಬೇಕಾದರೆ ಸಾಧಕನು ಅನುಸರಿಸಬೇಕಾದ ಮಾರ್ಗವಾವುದು ? ಇತ್ಯಾದಿ ಗಹನವಾದ ವಿಷಯಗಳನ್ನು ಗಂಭೀರರೀತಿಯಿಂದ ಚರ್ಚಿಸಿ, ಸೂಕ್ತಮಾರ್ಗಗಳನ್ನು ಸೂಚಿಸುವುದೇ ಉಪನಿಷತ್ತುಗಳ ಮುಖ್ಯಧ್ಯೇಯ.

ಪ್ರಸ್ತುತ ಇನ್ನೂರೈವತ್ತಕ್ಕೆ ಸ್ವಲ್ಪ ಹೆಚ್ಚು ಉಪನಿಷತ್ತುಗಳು ಲಭ್ಯವಿವೆ. ಆದರೆ ಇಷ್ಟು ಉಪನಿಷತ್ತುಗಳು ಒಂದು ಶತಮಾನದಲ್ಲಿ ಅಥವಾ ಒಮ್ಮೆಯೇ ರಚಿತವಾದುವೆಂದು ಹೇಳಲಿಕ್ಕಾಗುವುದಿಲ್ಲ. ಕೆಲವು ಉಪನಿಷತ್ತುಗಳು ಬುದ್ಧನು ಜ್ಞಾನಿಯಾಗಿ ಪರಮ ಸಂದೇಶವನ್ನು ಸಾರುವ ಮುನ್ನವೇ ರಚಿತವಾದುವು. ಕೆಲವು ಕೊನೆಗೆ ಸ್ಮೃತಿ ಹಾಗೂ ಪುರಾಣಗಳ ಕಾಲಕ್ಕೆ ರಚಿತವಾಗಿರಬಹುದು. ಕೆಲವಂತೂ ಕೊನೆಕೊನೆಗೆ ವಿದ್ವಾಂಸರಿಂದ ಮತಪ್ರಚಾರವನ್ನೇ ಮುಖ್ಯವಾಗಿಟ್ಟುಕೊಂಡು ಬರೆದು, ಮಹತ್ತ್ವ ಪ್ರಾಪ್ತಿಗೋಸುಗ ಉಪನಿಷತ್ ಎಂಬ ಅಭಿಧಾನದಿಂದ ಉಪನಿಷತ್ ಸಮೂಹದಲ್ಲಿ ಸೇರಿಸಿದ್ದರೂ ಸೇರಿಸಿರಬಹುದು.

ವಿಶ್ವದಲ್ಲೇ ಅಲ್ಲಲ್ಲಿ ಮಹಾವಿಭೂತಿ ಪುರುಷರು ಅವತರಿಸಿ ಆಧ್ಯಾತ್ಮಿಕ ಕ್ರಾಂತಿ ಮಾಡಿದರು. ಭಾರತದಲ್ಲಿ ಬುದ್ಧ, ಗ್ರೀಸ್ ದೇಶದಲ್ಲಿ ಪೈಥಾಗೊರಸ್, ಪರ್ಷಿಯಾದಲ್ಲಿ ಝೊರಾಸ್ಟರ್, ಚೈನಾದಲ್ಲಿ ಕನ್ಫ್ಯೂಷಿಯಸ್ ಇತ್ಯಾದಿಯವರು. ಈ ಆಧ್ಯಾ

ತ್ಮಿಕ ಕ್ರಾಂತಿಗೆ ಅನೇಕ ಶತಮಾನಗಳ ಮುನ್ನವೇ, ಮುಖ್ಯ ಉಪನಿಷತ್ತುಗಳು ಅಸ್ತಿತ್ವ ಹೊಂದಿದ್ದುವೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

ಈಶ, ಕೇನ, ಕಠ, ಮುಂಡಕ, ಮಾಂಡೂಕ್ಯ, ಪ್ರಶ್ನ, ಛಾಂದೋಗ್ಯ, ಐತರೇಯ, ತೈತ್ತಿರೀಯ, ಬೃಹದಾರಣ್ಯಕ ಮತ್ತು ಶ್ವೇತಾಶ್ವತರ ಈ ಕೆಲವು ಉಪನಿಷತ್ತುಗಳು ಅತಿ ಮುಖ್ಯವಾದುವು ಮತ್ತು ಬಹಳ ಹಿಂದೆಯೇ ರಚಿತವಾದುವೆಂದು ವಿದ್ವಾಂಸರು ಅಂಗೀಕಾರ ಮಾಡಿದ್ದಾರೆ.

'ಉಪನಿಷತ್ತುಗಳು ಕೇವಲ ಕೆಲವು ಜನರಿಗೆ ಅಥವಾ ವರ್ಗಕ್ಕೆ ಮೀಸಲು. ಉಳಿದ ವರ್ಗದವರಿಗೆ ಇವುಗಳನ್ನು ಅಭ್ಯಾಸಮಾಡಲು ಅವಕಾಶವಿತ್ತಿರಲಿಲ್ಲ' ಎಂಬ ಭಾವನೆ ಇದೆ. ಈ ರೀತಿಯ ಭಾವನೆಗೆ ಸಂಕುಚಿತದೃಷ್ಟಿಯ ಸಂಪ್ರದಾಯವಾದಿಗಳ ಅಭಿಪ್ರಾಯವೇ ಕಾರಣವಾಗಿದ್ದರೂ ಆಗಿರಬಹುದು. ಆದರೆ ಸೂಕ್ಷ್ಮವಾಗಿ ಹಾಗೂ ಸರಿಯಾಗಿ ಪರಿಶೀಲಿಸಿದರೆ, ವೇದ ಅಥವಾ ಉಪನಿಷತ್ತುಗಳ ಕಾಲದಲ್ಲಿ ಈ ರೀತಿಯ ಸಂಕುಚಿತ ಭಾವನೆಗೆ ಲೇಶವೂ ಎಡೆಯಿರಲಿಲ್ಲವೆಂಬುದು ವ್ಯಕ್ತವಾಗುವುದು.

ಉಪನಿಷತ್ಕಾಲದಲ್ಲಿ ವ್ಯಕ್ತಿಯ ಗ್ರಹಣಶಕ್ತಿ ಹಾಗೂ ಯೋಗ್ಯತೆಗೆ ಪ್ರಾಧಾನ್ಯತೆ ಇದ್ದಿತೆಂದು ತಿಳಿದುಬರುವುದು. ಈಗಿನ ವಿದ್ಯಾಭ್ಯಾಸಕ್ರಮದಲ್ಲಿಯೂ ಸಹ ವಿಜ್ಞಾನವನ್ನು ತಮ್ಮ ಮುಖ್ಯ ವಿಷಯವನ್ನಾಗಿ ತೆಗೆದುಕೊಂಡು ಅಭ್ಯಾಸಮಾಡಿ ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ ತಾಂತ್ರಿಕ ಶಿಕ್ಷಣಕ್ಕೆ ಪ್ರವೇಶವೀಯುವ ಮುನ್ನ ವಿದ್ಯಾರ್ಥಿಗಳ ಯೋಗ್ಯತೆ ಹಾಗೂ ಪ್ರತಿಭೆಯನ್ನು, ವಿಶೇಷ ಪರಿಣತರ ಸಮಿತಿಯು ಪರಿಶೀಲಿಸಿ, ತಾಂತ್ರಿಕ ಶಿಕ್ಷಣಕ್ಕೆ ಆರಿಸಿಕೊಳ್ಳುವಂತೆಯೇ, ಪ್ರಾಕ್ತನ ವಿದ್ಯಾಭ್ಯಾಸ ಕಾಲದಲ್ಲಿಯೂ ಸಹ, ನಿಷ್ಪಕ್ಷಪಾತ ಮನೋಭಾವನೆಗೆ ಖ್ಯಾತಿವೆತ್ತ ಗುರು, ಉಪನಿಷತ್ ಅಭ್ಯಾಸ ಮಾಡಲು ಆಶಿಸುವ ವಿದ್ಯಾರ್ಥಿಯ ಗ್ರಹಣಶಕ್ತಿ ಹಾಗೂ ಸದ್ಗುಣಗಳನ್ನು ಪರಿಶೀಲಿಸಿ ಪ್ರತಿಭಾನ್ವಿತರಾದ ಹಾಗೂ ಯೋಗ್ಯರಾದ ವಿದ್ಯಾರ್ಥಿಗಳನ್ನೇ ಆರಿಸಿಕೊಳ್ಳುತ್ತಿದ್ದರು. ನಿದರ್ಶನಕ್ಕೆ ಜ್ಞಾನಾರ್ಥಿಯಾಗಿ ಬಂದ ಜಾರೆಯ ಪುತ್ರನಾದ ಜಾಬಾಲನನ್ನು, ಆತನ ಸತ್ಯನುಡಿಗಾಗಿ ಗುರು ಮನಮೆಚ್ಚಿಕೊಂಡಾಡಿ, ತನ್ನ ಶಿಷ್ಯನನ್ನಾಗಿ ಪರಿಗ್ರಹಿಸಿದನು. ಆತ್ಮಜ್ಞಾನಪರಿತವನು ಯಾವ ಕುಲ ಅಥವಾ ವರ್ಗದವನಾದರೂ, ಆ ಮಹಾ ವಿಭೂತಿಯನ್ನು ಪರಮಗುರುವೆಂದು ಜಿಜ್ಞಾಸುವು ಆಶ್ರಯಿಸುತ್ತಿದ್ದನು. ನಿದರ್ಶನಕ್ಕೆ ಬ್ರಾಹ್ಮಣನಾದ ಗಾರ್ಗ್ಯನು ಕ್ಷತ್ರಿಯನಾದ ಆತ್ಮಜ್ಞಾನಿ ಅಜಾತಶತ್ರುವನ್ನು ಆತ್ಮಜ್ಞಾನ ಅರುಹಬೇಕೆಂದು ಭಕ್ತಿಯಿಂದ ಬೇಡುವನು. ಈ ದೃಷ್ಟಾಂತಗಳಿಂದ ಉಪನಿಷತ್ಕಾಲದಲ್ಲಿ ವ್ಯಕ್ತಿಯ ಗ್ರಹಣಶಕ್ತಿ ಹಾಗೂ ಯೋಗ್ಯತೆಗೆ ಪ್ರಾಧಾನ್ಯತೆ ಇದ್ದಿತೇ ಹೊರತು ಕೇವಲ ಕುಲಗೋತ್ರಗಳಿಗಲ್ಲವೆಂಬುದು ಸ್ಪಷ್ಟವಾಗುವುದು.

ವಿದ್ವಾಂಸರು ಕಠೋಪನಿಷತ್ತನ್ನು ಪ್ರಧಾನ ಉಪನಿಷತ್‌ಗಣದಲ್ಲಿ ಸೇರಿಸಿದ್ದಾರೆ.

ಈ ಪ್ರಧಾನ ಉಪನಿಷತ್ತುಗಳ ಸಮೂಹದಲ್ಲಿಯೂ ಸಹ ಕಠೋಪನಿಷತ್ ಅನೇಕ ರೀತಿಯಿಂದ ಪ್ರಾಮುಖ್ಯತೆ ಪಡೆದಿದೆ.

ಯಮನು ಮರಣಶಾಖೆಯ ಮುಖ್ಯಾಧಿಕಾರಿ. ಹಾಗೂ ಧರ್ಮದರ್ಶಿ. ಕಠೋಪನಿಷತ್ತಿನಲ್ಲಿ, ಮರಣಾನಂತರ ಪ್ರಾಪ್ತವಾಗಬಹುದಾದ ಆತ್ಮನ ಅವಸ್ಥೆಯ ವಿಚಾರವಾಗಿ ಹಾಗೂ ಆತ್ಮಸ್ವರೂಪದ ಬಗ್ಗೆ ಜಿಜ್ಞಾಸು ನಚಿಕೇತನು ಕೇಳಿದ ಪ್ರಶ್ನೆಗಳಿಗೆ ಯಮನೇ ಉತ್ತರ ಹೇಳಿರುವುದರಿಂದ ಹೆಚ್ಚಿನ ಮಹತ್ತ್ವವಿದೆ.

ನಚಿಕೇತನ ತಂದೆಯಾದ ವಾಜಶ್ರವಸನು ಫಲಾಪೇಕ್ಷೆಯಿಂದ "ವಿಶ್ವಜಿತ್" ಯಜ್ಞಮಾಡುವನು. ಅಶ್ವಮೇಧ, ಸರ್ವಮೇಧ ಇತ್ಯಾದಿಯಜ್ಞಗಳಿಗೆ ಬೇರೆ ಬೇರೆ ವಿಧಾನಗಳಿವೆಯಷ್ಟೆ. ಅಂತೆಯೇ ವಿಶ್ವಜಿತ್ ಯಜ್ಞದ ನಿಯಮದಂತೆ ವಾಜಶ್ರವಸನು ತನ್ನಲ್ಲಿದ್ದ ಸರ್ವಸ್ವವನ್ನು ದಾನಮಾಡಬೇಕಾಗುವುದು. ಸಹಜವಾಗಿ ಬಡವನಾದ ವಾಜಶ್ರವಸನು ತನ್ನಲ್ಲಿದ್ದ ಉಪಯೋಗಕ್ಕೆ ಬಾರದ ಬಡ ಆಕಳು ಇತ್ಯಾದಿಗಳನ್ನು ದಾನಮಾಡುವನು. ಬಾಲಕನಾದರೂ ಶ್ರದ್ಧೆಯೇ ಮೂರ್ತಿಮತ್ತಾದ ಮುಗ್ಧ ನಚಿಕೇತನು, ನಿರುಪಯೋಗಿಯಾದ ಬಡ ಆಕಳುಗಳನ್ನು ದಾನಮಾಡುವುದಕ್ಕಿಂತ, ಉಪಯೋಗಿಯಾದ ತನ್ನನ್ನೇ ಯಾರಿಗಾದರೂ ದಾನವಾಗಿಕೊಟ್ಟರೆ ತನ್ನ ತಂದೆಗೆ ಉತ್ತಮ ಫಲ ಹಾಗೂ ಶ್ರೇಯಸ್ಸು ಬರುವುದೆಂದು ಯೋಚಿಸಿದನು. ಈ ಸದ್ಭಾವನೆಯಿಂದ ಪ್ರೇರಿತನಾದ ನಚಿಕೇತನು "ನನ್ನನ್ನು ಯಾರಿಗೆ ದಾನವಾಗಿ ಕೊಡುವೆ" ಎಂದು ತಂದೆಯನ್ನು ಕೇಳಿದನು. ಮೊದಲನೆ ಮತ್ತು ಎರಡನೆ ಬಾರಿ ಇದೇ ಪ್ರಶ್ನೆಯನ್ನು ಕೇಳಿದಾಗ ತಂದೆಯಾದ ವಾಜಶ್ರವಸನು ಮೌನವಾಗಿಯೇ ಇದ್ದನು. ಆದರೆ ನಚಿಕೇತನು ಮೂರನೆಯಬಾರಿಯೂ ಇದೇ ಪ್ರಶ್ನೆಯನ್ನು ಕೇಳಿದಾಗ ವಾಜಶ್ರವಸನಿಗೆ ಸಿಟ್ಟುಬಂದು, ಆ ಸಿಟ್ಟಿನ ಭರದಲ್ಲಿ "ನಿನ್ನನ್ನು ಯಮನಿಗೆ ಕೊಟ್ಟಿರುವೆ" ಎಂದು ನುಡಿಯುವನು. ತಂದೆಯು ಈ ರೀತಿ ಹೇಳಿದೊಡನೆಯೇ ನಚಿಕೇತನು ಯಮಲೋಕಕ್ಕೆ ಹೊರಡುವನು. ತಂದೆಯು ಸಿಟ್ಟಿನ ಭರದಲ್ಲಿ ಆ ರೀತಿ ನುಡಿದುದಕ್ಕೆ ಪಶ್ಚಾತ್ತಾಪಗೊಂಡು ಪುತ್ರನು ಯಮಲೋಕಕ್ಕೆ ಹೋಗುವುದನ್ನು ತಡೆದರೂ ಸಹ, ನಚಿಕೇತನು 'ಕ್ಷಣಿಕವಾದ ಪುತ್ರವಾತ್ಸಲ್ಯವೆಂಬ ಮಾಯೆಗೆ ಮರುಳಾಗಿ ಸತ್ಯವಚನದಿಂದ ದೂರಸರಿಯಬಾರದು' ಎಂದು ತಂದೆಯನ್ನು ಸಂತೈಸಿ ಯಮಲೋಕಕ್ಕೆ ಹೋಗುವನು. ಇದೇ ಕಾಲಕ್ಕೆ ಸರಿಯಾಗಿ ಯಮಲೋಕದಲ್ಲಿ ಯಮನಿಲ್ಲದಿರಲು, ಆತನ ಆಗಮನಕ್ಕಾಗಿ ನಿರೀಕ್ಷಿಸುತ್ತಾ ನಚಿಕೇತನು ಅಲ್ಲಿಯೇ ಇರುವನು. ಮೂರು ದಿವಸಗಳನಂತರ ಆಗಮಿಸಿದ ಯಮನು, ಸತ್ಕಾರವನ್ನು ಸ್ವೀಕರಿಸದೆ ತನಗಾಗಿಯೇ ನಿರೀಕ್ಷಣೆ ಮಾಡುತ್ತಿರುವ ನಚಿಕೇತನ ವಿಷಯ ತಿಳಿದು ವ್ಯಾಕುಲಗೊಳ್ಳುವನು. ಏಕೆಂದರೆ ಪಂಚಮಹಾಯಜ್ಞಗಳಲ್ಲಿ ಅತಿಥಿಯಜ್ಞವೂ ಸಹ ಒಂದು. ಆದುದರಿಂದ ಅತಿಥಿ ಸತ್ಕಾರಮಾಡದೆ ತಪ್ಪಾಯಿತೆಂಬ ಭಾವನೆ, ಧರ್ಮದರ್ಶಿಯಾದ

ಯಮನ ಮನದಲ್ಲಿ ಮೂಡುವುದು, ಆದುದರಿಂದ ಯಮನು ತನ್ನ ಶ್ರೇಯಸ್ಸಿಗೋಸ್ಕರ ಮೂರು ವರಗಳನ್ನು (ಮೂರುದಿವಸ ನಿರೀಕ್ಷಿಸಿದುದಕ್ಕೆ) ಬೇಡೆಂದು ತಿಳಿಸುವನು.

ನಚಿಕೇತನು ಮೊದಲನೆ ವರದಿಂದ ತನ್ನ ತಂದೆಯು ಸಿಟ್ಟು ತಿಳಿದು ಶಾಂತನಾಗಿ ಸುಪ್ರಸನ್ನತೆಯಿಂದ ತನ್ನನ್ನು ಪುನಃ ಸ್ವಾಗತಿಸಲೆಂದು ಐಹಿಕ ಸಂಬಂಧವಾದ ವರವನ್ನು ಬೇಡುವನು.

ಸ್ವರ್ಗನಿವಾಸಿಗಳು ಜರಾಮರಣಗಳಿಂದಲೂ, ಹಸಿವು ತೃಷೆಗಳಿಂದಲೂ ಮುಕ್ತರಾಗಿ ಸರ್ವದಾ ಸುಖಲೋಲುಪರಾಗಿರುವರು. ಇಂತಹ ಸ್ವರ್ಗಲೋಕಕ್ಕೊಯ್ಯುವ "ಸ್ವರ್ಗ್ಯಾಗ್ನಿ" ರಹಸ್ಯವರುಹಬೇಕೆಂದು ಆಮುಷ್ಮಿಕಕ್ಕೆ ಸಂಬಂಧಿಸಿದ ಎರಡನೆ ವರವನ್ನು ಬೇಡುವನು.

ಯಮನು, ಸ್ವರ್ಗ್ಯಾಗ್ನಿ ರಹಸ್ಯ, ಯಜ್ಞವೇದಿ ರಚನೆಗೆ ಉಪಯೋಗಿಸಬೇಕಾದ ಇಟ್ಟಿಗೆಗಳ ಪ್ರಮಾಣ, ಉಪಾಸನೆಯ ಫಲ ಇತ್ಯಾದಿಗಳನ್ನು ತಿಳಿಸಿ, ನಚಿಕೇತನ ಪ್ರತಿಭೆಗೆ ಮೆಚ್ಚಿ, ಸ್ವರ್ಗ್ಯಾಗ್ನಿಗೆ "ನಚಿಕೇತಾಗ್ನಿ" ಎಂಬ ಹೆಸರಿನಿಂದಲೇ ಕರೆಯಲ್ಪಡಲಿ ಎಂದು ಅನುಗ್ರಹಿಸಿದನು.

ಈ ಜಡಶರೀರ ನಷ್ಟವಾದ ಬಳಿಕ ಆತ್ಮನಿರುವನೆಂದು ಕೆಲವರೂ, ಆತ್ಮನುಳಿಯುವುದಿಲ್ಲವೆಂದು ಕೆಲವರೂ ಹೇಳುವರು. ಆದುದರಿಂದ ಮರಣಾನಂತರ ಪ್ರಾಪ್ತವಾಗಬಹುದಾದ ಆತ್ಮನ ಅವಸ್ಥೆಯ ಬಗ್ಗೆ ಸಂಶಯವಿರುವುದು. ಈ ವಿಷಯದ ಸತ್ಯಸಂಗತಿಯನ್ನರುಹಬೇಕಾಗಿ ನಚಿಕೇತನು ಮೂರನೆಯ ವರವನ್ನು ಬೇಡುವನು.

ಪೂರ್ವದಲ್ಲಿ ದೇವತೆಗಳಿಗೂ ಸಹ ಈ ವಿಷಯದ ಬಗ್ಗೆಯೇ ಸಂದೇಹವಿದ್ದಿತು. ಅಲ್ಲದೆ ಈ ವಿಷಯವು ಅಗಮ್ಯ ಮತ್ತು ಅತಿನಿಗೂಢ. ಈ ಆತ್ಮಜ್ಞಾನ ಸುಲಭಸಾಧ್ಯವಲ್ಲನಾದುದರಿಂದ ಬೇರೊಂದು ವರವನ್ನು ಬೇಡುವಂತೆ ಯಮನು ನಚಿಕೇತನಿಗೆ ಸೂಚಿಸುವನು.

ಶ್ರದ್ಧಾನ್ವಿತನಾದ ನಚಿಕೇತನು, ಪೂರ್ವದಲ್ಲಿ ದೇವತೆಗಳಿಗೂ ಸಹ ಈ ವಿಷಯದ ವಿಚಾರವಾಗಿ ಸಂದೇಹವಿದ್ದಿತೆಂಬುದರಿಂದಲೇ, ವಿಷಯಮಹತ್ತ್ವವು ಸ್ಪಷ್ಟವಾಗುವುದು. ಇಂತಹ ಮಹತ್ತ್ವವೂ ಹಾಗು ಗಹನವೂ ಆದ ವಿಷಯವನ್ನು ಸರಳವಾಗಿ ಹಾಗು ಸ್ಪಷ್ಟವಾಗಿ ತಿಳಿಸಿಕೊಡಲು ನಿನ್ನಂತಹ ಧರ್ಮದರ್ಶಿಯಾದ ಗುರುವನ್ನು ಬಿಟ್ಟು ಮತ್ತಾರ ಶರಣು ಹೋಗಲಿ. ಆದುದರಿಂದ ನೀನು ನನಗೆ ಈ ಸುಜ್ಞಾನವನ್ನು ಬೋಧಿಸಬೇಕೆಂದು ಮುಗ್ಧ ಬಾಲಕನು ಹಟಹಿಡಿದನು.

ಮಾನವನು ಸಹಜವಾಗಿ ಭೋಗಸುಖಕ್ಕೆ ತವಕಪಡುವನು. ಆದುದರಿಂದ ಯಮನು ನಚಿಕೇತನಿಗೆ ಈ ರೀತಿ ಹೇಳುವನು :

ಯೇ ಯೇ ಕಾಮಾ ದುರ್ಲಭಾ ಮರ್ತ್ಯ ಲೋಕೇ
ಸರ್ವಾನ್ ಕಾಮಾನ್ ಛಂದತಃ ಪ್ರಾರ್ಥಯಸ್ವ

................

ನಚಿಕೇತೋ ಮರಣಂ ಮಾನು ಪ್ರಾಕ್ಷೀ:

ಭೋಗಕ್ಕನುಕೂಲವಾದ ದಿವ್ಯವಸ್ತುಗಳನ್ನೂ, ಸುರ ಸುಂದರಿಯರನ್ನೂ, ಪುತ್ರಪೌತ್ರರನ್ನೂ, ಅಥವಾ ಮರ್ತ್ಯಲೋಕದಲ್ಲಿ ದುರ್ಲಭವಾದ ಸಮಸ್ತ ವಸ್ತುಗಳನ್ನೂ ನಿನ್ನ ಇಚ್ಛಾನುಸಾರವಾಗಿ ಬೇಡು. ಆದರೆ ಮರಣದ ವಿಷಯವಾಗಿ ಮಾತ್ರ ಕೇಳಬೇಡ.

ಯಮನು ಈ ರೀತಿ ಅಮಿತ ಹಾಗೂ ಅತುಳವಾದ ಆಶೆತೋರಿಸಿ, ಶಮದಮಾದಿಯುತನೂ, ಅಚಲ ಸಂಕಲ್ಪನೂ, ನಿಶ್ಚಲಮನಸ್ಕನೂ ಆದ ಈ ಬಾಲಕನನ್ನು ಮೊಸಗೊಳಿಸಲು ಸಾಧ್ಯವೆ?

'ಸಾಸಿವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ'
'ಭೋಗವು ನಂಜುವೆರಸಿದ ಸವಿಯೂಟ' ಇಂತಹ
ಸನ್ನುಡಿಗಳ ಮರ್ಮವರಿತಿದ್ದ ನಚಿಕೇತನು
"ನಾನ್ಯಂ ತಸ್ಮಾನ್ನಚಿಕೇತಾ ವೃಣೀತೆ"

ಮರಣಾನಂತರದ ಆತ್ಮನ ಅವಸ್ಥೆಯ ವಿಷಯವಾಗಿಯೇ ಅರುಹಬೇಕು. ಈ ವಿಷಯವನ್ನಲ್ಲದೆ ಬೇರಾವುದನ್ನೂ ಬೇಡುವುದಿಲ್ಲವೆಂದು ನಚಿಕೇತನು ಖಚಿತವಾಗಿ ಹಾಗೂ ಸ್ಪಷ್ಟವಾಗಿ ಹೇಳುವನು.

ಪ್ರತಿಭಾಶಾಲಿಯಾದ ಯೋಗ್ಯಶಿಷ್ಯ ಸಿಗುವುದು ದುರ್ಲಭ. ಯಮನು ಈ ರೀತಿಯ ಆಶೆಯ ಜಾಲವನ್ನೊಡ್ಡಿದರೂ ಸಹ, ಮನದ ಮುಂದಣಾಶೆಯೇ ಮಾಯೆಯೆಂದರಿತು, ವಿವಿಧರೀತಿಯ ಭೋಗವಸ್ತುಗಳನ್ನು ದಿಟ್ಟತನದಿಂದ ತಿರಸ್ಕರಿಸಿದ, ನಿತ್ಯ ಅನಿತ್ಯ ವಿವೇಕಿಯಾದ ಬಾಲಕನನ್ನು ಯಮನು ಸಂತುಷ್ಟನಾಗಿ ಅಭಿನಂದಿಸಿ, ಸಂಪ್ರೀತಿಯಿಂದ ಆತ್ಮತತ್ತ್ವ ರಹಸ್ಯವನ್ನರುಹುವನು.

ವಿಶ್ವದಲ್ಲಿ ಎರಡು ಮಾರ್ಗಗಳಿವೆ. ಒಂದು ಶ್ರೇಯ (ಜ್ಞಾನ ಅಥವಾ ವಿದ್ಯಾ) ಮಾರ್ಗ, ಮತ್ತೊಂದು ಪ್ರೇಯ (ಭೋಗ ಅಥವಾ ಅವಿದ್ಯಾ) ಮಾರ್ಗ.

ಶ್ರೇಯ ಮತ್ತು ಪ್ರೇಯಮಾರ್ಗಗಳೆರಡೂ ಮಾನವನಿಗೆ ಮೊದಲು ಬಂಧನಕಾರಿಯಾದಾಗ್ಯೂ ಸಹ, ಶ್ರೇಯ ಮಾರ್ಗವು ಮಾನವನಿಗೆ ಕೊನೆಯಲ್ಲಿ ಆತ್ಯಂತಿಕ ಕಲ್ಯಾಣವನ್ನುಂಟುಮಾಡುವುದು. ಅದುಪರಿಂದ ಶ್ರೇಯ ಮಾರ್ಗವನ್ನನುಸರಿಸುವುದು ವಿಹಿತ ಹಾಗೂ ಕಲ್ಯಾಣ ಪ್ರದ.

ಮೂಢನು ಅಥವಾ ಅಜ್ಞಾನಿಯು ಇಹಲೋಕದ ಭೋಗಕ್ಕೋಸುಗ ಪ್ರೇಯ ಮಾರ್ಗವನ್ನನುಸರಿಸಿ, ತಾನೇ ಜ್ಞಾನಿಯೆಂದು ಅಹಂಕಾರಪಡುತ್ತಾ, ಕ್ಷಣಿಕವಾದ

ಭೋಗಸುಖಕ್ಕೆ ಪರವಶನಾಗಿ, ದ್ರವ್ಯದ ಮೋಹದಿಂದ ಉನ್ಮತ್ತನಾಗಿ, ಪರಲೋಕವೆಂಬುದೇ ಇಲ್ಲ ಎಂದು ಉದ್ಘೋಷಿಸುತ್ತಾ ಐಹಿಕ ಸುಖದಲ್ಲಿಯೇ ಸರ್ವದಾ ಮಗ್ನನಾಗಿ, ಈ ಲೋಕದ ಜಂಜಾಟ ಚಕ್ರದೊಳಗೆ ಸಿಕ್ಕಿ, ಹುಟ್ಟು ಸಾವುಗಳಿಂದ ಮೃತ್ಯುವಿನೆಡೆಗೆ ಪದೇಪದೇ ಪಯಣ ಬೆಳಸುತ್ತಿರುತ್ತಾನೆ.

ಆತ್ಮಾನಂದವು ಆತ್ಮಜ್ಞಾನದಿಂದ ಆತ್ಮನಲ್ಲಿಯೇ ದೊರೆಯತಕ್ಕದು. ಜ್ಞಾನಿಯಾದವನು ಆತ್ಮದ ಬಗ್ಗೆಯೇ ಸತತಧ್ಯಾನಮಾಡುತ್ತಾ, ಆತ್ಮಸಾಕ್ಷಾತ್ಕಾರ ಹೊಂದಿ, ಹರ್ಷ, ಶೋಕ, ಮೋಹ ಇತ್ಯಾದಿಗಳಿಂದ ಬಿಡುಗಡೆ ಹೊಂದುತ್ತಾನೆ.

ಕಠೋಪನಿಷತ್ತಿನಲ್ಲಿ ಆತ್ಮಸ್ವರೂಪವು ವಿಶದವಾಗಿ ವಿವರಿಸಲ್ಪಟ್ಟಿದೆ.

ವಿಶ್ವದ ಆಧಾರಭೂತ ಮೂಲವಸ್ತುವಿಗೆ ಬ್ರಹ್ಮ ಅಥವಾ ಆತ್ಮನೆಂದು ಕರೆಯುತ್ತೇವೆ.

ಆತ್ಮವು ನಿತ್ಯ, ಪರಿಪೂರ್ಣ, ಶಾಶ್ವತ, ಆದಿ ಅಂತ್ಯಗಳಿಲ್ಲದ್ದು, ಸರ್ವವ್ಯಾಪಿ, ಸಚ್ಚಿದಾನಂದ ಸ್ವರೂಪಿ,

ಸೂರ್ಯ, ಚಂದ್ರ, ನಕ್ಷತ್ರ, ಅಗ್ನಿ ಇತ್ಯಾದಿಗಳೆಲ್ಲ ಸ್ವಯಂಪ್ರಕಾಶಿತವಾದವುಗಳಂತೆ ಭಾಸವಾದರೂ, ಅವು ಸ್ವಯಂ ಪ್ರಕಾಶಿತವಾದವುಗಳಲ್ಲ. ಸ್ವಯಂ ಪ್ರಕಾಶಿತನಾದ ಆ ಆತ್ಮನ ಅಣತಿಯಂತೆ ಪ್ರಕಾಶಿಸುವುವು.

ಸರ್ವಲೋಕದ ಕಣ್ಣೆನಿಸಿರುವ ಸೂರ್ಯನು, ಕಣ್ಣಿಗೆ ಕಾಣುವ ಬಾಹ್ಯದೋಷಗಳಿಂದ ನಿರ್ಲಿಪ್ತನಿರುವಂತೆ, ಆತ್ಮನು ಸರ್ವಭೂತಾಂತರಾತ್ಮನಾದಾಗ್ಯೂ ಸಹ ಲೋಕದುಃಖದಿಂದ ಅಲಿಪ್ತನಾಗಿರುವನು.

ದೃಷ್ಟಿಗಗೋಚರವಾದ ಆತ್ಮನ ಸರ್ವವ್ಯಾಪಿತ್ವವನ್ನು ಕುರಿತು ಛಾಂದೋಗ್ಯ ಉಪನಿಷತ್ತಿನಲ್ಲಿ ಸುಂದರವಾದ ದೃಷ್ಟಾಂತವಿದೆ :—

ಪಾತ್ರೆಯಲ್ಲಿ ಸ್ವಲ್ಪ ನೀರು ತೆಗೆದುಕೊಂಡು, ಆ ನೀರಿಗೆ ಕೆಲವು ಉಪ್ಪಿನ ಹರಳುಗಳನ್ನು ಹಾಕಿ, ಸ್ವಲ್ಪ ಹೊತ್ತಾದನಂತರ ಅದೇ ಪಾತ್ರೆಯಲ್ಲಿ ಉಪ್ಪಿನ ಹರಳುಗಳನ್ನು ನೋಡಿದರೆ ಅವು ಕಾಣಿಸುವುದಿಲ್ಲ. ಆದರೆ ಆ ನೀರಿನ ಮೇಲ್ಭಾಗ, ಮಧ್ಯಭಾಗ, ತಳಭಾಗ ಯಾವ ಭಾಗಗಳ ನೀರಿನ ಹನಿಯ ರುಚಿಯನ್ನು ನೋಡಿದರೂ ಸಹ ರುಚಿಯು ಉಪ್ಪೇ ಆಗಿರುತ್ತದೆ. ಉಪ್ಪಿನ ಹರಳು ದೃಷ್ಟಿಗಗೋಚರವಾಗಿದ್ದರೂ ಸಹ ಅದರ ರುಚಿಯು ಸರ್ವವ್ಯಾಪಿಯಾಗಿದೆ. ಅಂತೆಯೇ ಆತ್ಮನು ದೃಷ್ಟಿಗಗೋಚರವಾಗಿದ್ದರೂ ಸರ್ವವ್ಯಾಪಿಯಾಗಿರುವನೆಂದು ಉದ್ದಾಲಕ ಆರುಣಿಯು ಶಿಷ್ಯನಾದ ಶ್ವೇತಕೇತುವಿಗೆ ಈ ನಿದರ್ಶನದ ಮೂಲಕ ಉಪದೇಶಿಸುವನು.

ವನವೆಲ್ಲ ನೀವೇ, ವನದೊಳಗಣದೇವತರುವೆಲ್ಲ ನೀವೇ, ತರುವಿನೊಳಾಡುವ ಖಗಮೃಗವೆಲ್ಲ ನೀವೇ, ಚೆನ್ನಮಲ್ಲಿಕಾರ್ಜುನ ಸರ್ವಭರಿತನಾಗಿ ಮುಖದೋರಾ ಎಂದು ಅಕ್ಕಮಹಾದೇವಿಯೂ ಕೂಡ ಭಕ್ತಿಭಾವದಿಂದ ಹಾಡಿರುವಳು.

ಬೃಹದಾರಣ್ಯಕೋಪನಿಷತ್ತಿನಲ್ಲಿ ಯಾಜ್ಞವಲ್ಕ್ಯ ಮಹರ್ಷಿಗೂ ಶಾಕಲ್ಯನಿಗೂ ಸಂವಾದ ನಡೆದು 'ದೇವರೊಬ್ಬನೇ ಎಂದು ಒಪ್ಪುವರು.

'ಏಕಮೇವಾದ್ವಿತೀಯ'

'ದೇವನೊಬ್ಬ ನಾಮ ಹಲವು'

ಆತ್ಮನು ಅನಿತ್ಯವಾದ ಶರೀರದಲ್ಲಿದ್ದಾಗ್ಯೂ ನಿತ್ಯನಾಗಿರುವನು. ಅಂಗುಷ್ಠ ಪ್ರಮಾಣದಿಂದ ಹೃದಯಗುಹೆಯಲ್ಲಿದ್ದು ಸರ್ವವ್ಯಾಪಿಯಾಗಿರುವನು. ಶರೀರದಲ್ಲಿದ್ದು ಅಶರೀರಿಯಾಗಿರುವನು. ಅಣುವಿಗಿಂತ ಅಣುವಾಗಿದ್ದರೂ ಸಹ ಮಹತ್ತಿಗಿಂತ ಮಹತ್ತಾಗಿರುವನು.

ಇಂತಹ ಮಹತ್ತರವೂ, ನಿಗೂಢವೂ, ಪ್ರಶಸ್ತವೂ, ಗಂಭೀರವೂ ಮತ್ತು ಗಹನವೂ ಆದ ಆತ್ಮಸ್ವರೂಪವನ್ನು ಕೆಲವು ಜನರಾದರೂ ಶ್ರದ್ಧೆಯಿಂದ ಅರಿಯಲು ಉತ್ಸುಕರಾಗುವರೆಂಬುದು ಸರ್ವವಿದಿತ. ಋಷಿಗಳು ಸಾಮಾನ್ಯ ಜನತೆಗೂ ಸಹ ಸುಲಭವಾಗಿ ತಿಳಿಯಲೆಂಬ ಸದುದ್ದೇಶದಿಂದ ಆತ್ಮಸ್ವರೂಪದ ಸಾಧನ ಮಾರ್ಗವನ್ನು ಭಾರತೀಯರೆಲ್ಲರಿಗೂ ಚಿರಪರಿಚಿತವಾದ ರಥದ ನಿದರ್ಶನದ ಮೂಲಕ ತಿಳಿಸಿದ್ದಾರೆ.

ಉಪನಿಷತ್ಕಾಲದಲ್ಲಿ ಓರ್ವವ್ಯಕ್ತಿ ನಿರ್ದಿಷ್ಟ ಸ್ಥಳವನ್ನು ಗೊತ್ತಾದ ಕಾಲದಲ್ಲಿ ಸೇರಬೇಕೆಂದು ಅಪೇಕ್ಷೆ ಪಟ್ಟರೆ, ಈ ಗುರಿಸಾಧನೆಗಾಗಿ, ಉತ್ತಮವಾದ ರಥ, ಒಳ್ಳೆಯ ಕುದುರೆಗಳು, ಕುಶಲನಾದ ಸಾರಥಿ, ಮತ್ತು ಬಲಯುತವಾದ ಕಡಿವಾಣ ಇವುಗಳು ಅವಶ್ಯಹಾಗೂ ಅಗತ್ಯವಾಗಿದ್ದವಷ್ಟೆ, ಅಂತೆಯೇ ಮಾನವನು ಆಧ್ಯಾತ್ಮಮಾರ್ಗದಲ್ಲಿ ಮುನ್ನಡೆದು ಆತ್ಮಸಾಕ್ಷಾತ್ಕಾರವೆಂಬ ಗುರಿಮುಟ್ಟಬೇಕಾದರೆ ಆರೋಗ್ಯವಾದ ಶರೀರ, ಇಚ್ಛೆಯಲ್ಲಿರುವ ಇಂದ್ರಿಯಗಳು, ನಿರ್ಮಲವಾದ ಮನಸ್ಸು, ಸದಸದ್ವಿವೇಕ ಭರಿತ ಬುದ್ಧಿ ಇವುಗಳು ಅವಶ್ಯಕ.

ನಿರ್ದಿಷ್ಟ ಪ್ರದೇಶಕ್ಕೆ ನಿಶ್ಚಿತಕಾಲದಲ್ಲಿ ಹೋಗಬೇಕಾದರೆ ಉತ್ತಮವಾದ ರಥವು ಹೇಗೆ ಅವಶ್ಯಕವೋ ಅಂತೆಯೇ ಉತ್ತಮ ಪ್ರಕೃತಿಯ ನಿರೋಗಿ ಶರೀರವು ಆಧ್ಯಾತ್ಮಿಕ ಮಾರ್ಗದಲ್ಲಿ ಮುನ್ನಡೆಯಬೇಕಾದರೆ ಅಗತ್ಯ. ಆದುದರಿಂದಲೇ "ಶರೀರಮಾದ್ಯಂ ಖಲು ಧರ್ಮಸಾಧನಂ" "ಶರೀರವೆಂತೆಂಬುವ ಹೊಲನ ಹಸನಮಾಡಿ ಪರತತ್ತ್ವ ಬೆಳೆಯನೆ ಬೆಳೆದುಣ್ಣಿರೋ" ಎಂಬುದಾಗಿ ಸಂತರು ಹಾಗೂ ಶರಣರು, ನಿರೋಗಿ ಶರೀರದ ಪ್ರಾಮುಖ್ಯತೆಯನ್ನು ಒತ್ತಿ ಹೇಳಿದ್ದಾರೆ.

ಕಠೋಪನಿಷತ್ ಇಂದ್ರಿಯಗಳನ್ನು ಕುದುರೆಗಳಿಗೆ ಹೋಲಿಸಿದೆ. ಕುದುರೆಗಳನ್ನು ಚೆನ್ನಾಗಿ ಪಳಗಿಸಿ ಹತೋಟಿಯಲ್ಲಿಟ್ಟಷ್ಟು ಜಾಗ್ರತೆಯಿಂದ ನಾವು ನಿರ್ದಿಷ್ಟ ಪ್ರದೇಶಕ್ಕೆ ಸೇರಬಹುದು. ಅಂತೆಯೇ ಮಾನವನು ಪಂಚೇಂದ್ರಿಯ ಚಾಪಲ್ಯಕ್ಕೆ ತುತ್ತಾಗದೆ, ಅವುಗಳನ್ನು ತನ್ನ ಹತೋಟಿಯಲ್ಲಿಡಬೇಕು. ಪಂಚೇಂದ್ರಿಯಗಳಿಗೆ

ದಾಸನಾಗದೆ ಅವುಗಳನ್ನು ಯಾವನು ತನ್ನ ದಾಸನನ್ನಾಗಿ ಮಾಡಿಕೊಳ್ಳಬಲ್ಲನೋ ಆತನೇ ನಿಜವಾದ ಸಾಧಕನಾಗಿ ಗುರಿಮುಟ್ಟಲರ್ಹನು ಆದುದರಿಂದಲೇ ಸರ್ವಜ್ಞನು "ಇಂದ್ರಿಯವ ಕಾದಾತ ಯೋಗಿ" ಎಂದು ಹೇಳಿರುವನು. ಭಗವದ್ಗೀತೆಯಲ್ಲಿಯೂ ಸಹ ಆಹಾರ, ವಿಹಾರ, ಕರ್ಮ ಇತ್ಯಾದಿಗಳಲ್ಲಿ ಮಾನವನು ಹಿತಮಿತವಾಗಿರ ಬೇಕೆಂದು ಹೇಳಿದೆ. " ಕರಣ ವಿಜಯದಿಂದೆ ಕಲಿತನವುಂಟೆ " ಎಂದು ಶ್ರೀ ನಿಜ ಗುಣರು ಹಾಡಿದ್ದಾರೆ. ಒಟ್ಟಿನಲ್ಲಿ ಚಪಲವಾದ ಇಂದ್ರಿಯಗಳನ್ನು ಅಧೀನದಲ್ಲಿಡ ಬೇಕೆಂದು ಕಠೋಪನಿಷತ್ ಒತ್ತಿ ಹೇಳುತ್ತದೆ.

ಕಠೋಪನಿಷತ್ ಮನಸ್ಸನ್ನು ಕಡಿವಾಣ (ಲಗಾಮು)ಕ್ಕೆ ಹೋಲಿಸಿದೆ. ಕಡಿವಾಣ ಸಜ್ಜಾಗಿ ಭದ್ರವಾಗಿ ಬಲಯುತವಾಗಿದ್ದರೆ ಮಾತ್ರ ಇಚ್ಛೆಯಂತೆ ಕುದುರೆ ಗಳನ್ನು ಬೇಕಾದ ಕಡೆಗೆ ತಿರುಗಿಸಬಹುದು ಅಥವಾ ಅಪೇಕ್ಷೆಯಂತೆ ನಡೆಸಬಹುದು. ಅಂತೆಯೇ ಮಾನವನು ಮನಸ್ಸಿನ ಮೇಲೆ ತನ್ನ ಪ್ರಭುತ್ವವನ್ನು ಸ್ಥಾಪಿಸಿದಾಗ ಮಾತ್ರವೇ ಮನಸ್ಸನ್ನು ತನ್ನ ಹತೋಟಿಯಲ್ಲಿಡಬಹುದು. ಮನಸ್ಸಾದರೂ ಕೊಂಬೆಯ ಮೇಲಣ ಮರ್ಕಟನಂತೆ ಲಂಘಿಸುವುದು. ನಿಂದಲ್ಲಿ ನಿಲ್ಲಲೀಯದು. ಇಂತಹ ಸತತ ಲಂಘಿಸುವ, ನಿಂದಲ್ಲಿ ನಿಲ್ಲಲೀಯದ ಮನವನ್ನು ತನ್ನ ಅಧೀನಕ್ಕೆತರು ವುದೇ ಸಾಧಕನ ಆದ್ಯಕರ್ತವ್ಯ.

ಪತಂಜಲ ಮಹರ್ಷಿಯ ಯೋಗಶಾಸ್ತ್ರದ ಮೂಲ ಉದ್ದೇಶವಾದರೂ ಸಹ "ಯೋಗಶ್ಚಿತ್ತವೃತ್ತಿ ನಿರೋಧಃ" ಅತ್ತಿತ್ತ ಹರಿಯುವ ಮನಸ್ಸನ್ನು ಒಂದೆಡೆಗೆ ನಿಲ್ಲಿಸಿ, ಏಕಾಗ್ರತೆ ಸಾಧಿಸುವುದೇ ಯೋಗಶಾಸ್ತ್ರದ ಮೂಲಗುರಿ. ವೇದದ ಶಾಂತಿ ಮಂತ್ರ ಗಳ ಮೂಲಧ್ಯೇಯವಾದರೂ ಸಹ ಮನಸ್ಸಿನ ಏಕಾಗ್ರತೆಯನ್ನು ಸಾಧಿಸಿ ಅನು ಸಂಧಾನ ಮಾಡುವುದು. ಶಿಷ್ಯರೊಬ್ಬರು ಶ್ರೀ ಶಂಕರಾಚಾರ್ಯರನ್ನು ಕುರಿತು "ಜಿತಂ ಜಗತ್ ಕೇನ" ಅಂದರೆ ಈ ಜಗತ್ತು ಯಾರಿಂದ ಜಯಿಸಲ್ಪಟ್ಟಿತು ಎಂದು ಪ್ರಶ್ನಿಸಿದಾಗ, ಶ್ರೀ ಶಂಕರರು, "ಮನೋ ಹಿ ಯೇನ" ಎಂದುತ್ತರವಿತ್ತರು.

"ವಿಮಲಮಾನಸದಿಂದೆ ಶುಭತೀರ್ಥವುಂಟೆ"
"ಚಿತ್ತವಿಲ್ಲದೆ ಗುಡಿಯ ಸುತ್ತಿದಡೆ ಫಲವೇನು"
"ಮಾಡಿಮಾಡಿ ಕೆಟ್ಟರೂ ಮನವಿಲ್ಲದೆ"
"ಮನೋಹಿಹೇತು :........"

ಈ ಎಲ್ಲ ಉಕ್ತಿಗಳು ಮನಸ್ಸಿನ ಪಾತ್ರವನ್ನು ಹಾಗೂ ಮಹತಿಯನ್ನು ಒತ್ತಿಹೇಳು ವುವು. ಕಠೋಪನಿಷತ್ ಮನಸ್ಸನ್ನು ಕಡಿವಾಣಕ್ಕೆ ಹೋಲಿಸಿರುವುದು ಸೂಕ್ತ ವಾಗಿದೆ.

ಕಠೋಪನಿಷತ್ ಬುದ್ಧಿಯನ್ನು ಸಾರಥಿಗೆ ಹೊಲಿಸಿರುವುದು. ನಿತ್ಯ ಹಾಗೂ ಅನಿತ್ಯವರಿತ ಸದ್ಬುದ್ಧಿ ಇರಬೇಕು. ಈ ವಿಷಯಸುಖವೆಲ್ಲವೂ ಕ್ಷಣಿಕ. ಪರಾತ್ಪರ ಸತ್ಯವೊಂದೇ ನಿತ್ಯ ಎಂಬ ಭಾವನೆ ಬಲವಾಗಿರಬೇಕು. ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟ. ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು. ಈ ಕರ್ತಾರನ ಕಮ್ಮಟದಲ್ಲಿ ಮಾನವನು ತನ್ನ ಬಾಳ್ವೆಯನ್ನು ಹೇಗೆ ಮಾಡಬೇಕೆಂದರೆ ಇಹ ಮತ್ತು ಪರಗಳೆರಡರಲ್ಲಿಯೂ ಸಲ್ಲುವಂತೆ ಮಾಡಬೇಕು. ಇಂತಹ ಮಾರ್ಗವನ್ನು ಬುದ್ಧಿ ಹುಡುಕಿ ಆ ಸನ್ಮಾರ್ಗದಲ್ಲಿ ನಮ್ಮ ಜೀವನ ರಥವನ್ನು ಸರಿಯಾಗಿ ನಡೆಸಿಕೊಂಡು ಹೋಗಬೇಕು.

ಒಟ್ಟಿನಲ್ಲಿ ಆರೋಗ್ಯವಾದ ಶರೀರ, ಹತೋಟಿಯಲ್ಲಿರುವ ಇಂದ್ರಿಯಗಳು, ನಿರ್ಮಲವಾದ ಮನಸ್ಸು, ನಿತ್ಯ ಅನಿತ್ಯವರಿತ ವಿವೇಕಯುತವಾದ ಬುದ್ಧಿ ಇವುಗಳೆಲ್ಲವೂ ಸಹಾಯಕಗಳಾದಾಗ ಮಾನವನು ಅಧ್ಯಾತ್ಮಿಕ ಮಾರ್ಗದಲ್ಲಿ ಪ್ರಗತಿಪಡೆಯುತ್ತಾ ಪರಿಪೂರ್ಣದೆಡೆಯನ್ನು ಸರಳವಾಗಿ ಹಾಗೂ ಸುಲಭವಾಗಿ ಸೇರಬಹುದು.

ಪರಾಂ ಚಿ ಖಾನಿವ್ಯತೃಣತ್ ಸ್ವಯಂಭೂ

................

ಪರಮಾತ್ಮನು ಇಂದ್ರಿಯಗಳನ್ನು ಬಾಹ್ಯವಸ್ತುಗಳೆಡೆಗೆ ಹರಿಯುವಂತೆಯೇ ಸೃಜಿಸಿರುವನು ಆದುದರಿಂದ ಸರ್ವರೂ ಸಹಜವಾಗಿ ಇಂದ್ರಿಯಸುಖ ಅಥವಾ ಭೋಗಕ್ಕೆ ತವಕಪಡುವರು. ನಿತ್ಯ ಅನಿತ್ಯವರಿತ ಜ್ಞಾನಿಗಳು ಮಾತ್ರ ಭೋಗದಿಂದ ವಿರಾಗವೆಡೆಗೆ ಇಂದ್ರಿಯಗಳನ್ನೆಳೆದು ಆತ್ಯಂತಿಕ ಕಲ್ಯಾಣವೆಡೆಗೆ ಸಾಗುವರು. ಸದ್ಗುಣಗಳನ್ನು ಕ್ರಿಯೆಯಲ್ಲಿ ಅಳವಡಿಸಿಕೊಳ್ಳುವುದು ಅತಿ ಮುಖ್ಯ. ಬೃಹದಾರಣ್ಯಕೋಪನಿಷತ್ತಿನಂತೆಯೇ ಕಠೋಪನಿಷತ್ ಸಹ ಆತ್ಮಸಾಕ್ಷಾತ್ಕಾರವಾಗಬೇಕಾದರೆ ಸದ್ಗುಣಗಳು ಹೇಗೆ ಅವಶ್ಯ ಎಂಬುದನ್ನು ಒತ್ತಿಹೇಳುತ್ತದೆ.

ಸಂಕ್ಷೇಪವಾಗಿ ಹೇಳುವುದಾದರೆ, ಪ್ರಶಸ್ತ ಆತ್ಮಜ್ಞಾನವು, ಸದ್ಗುಣಶೂನ್ಯನಾದ, ಬರಡು ವಿದ್ವಾಂಸನಿಗೆ, ಅಥವಾ ಬುದ್ಧಿವಂತನಿಗೆ ಅಥವಾ ಆತ್ಮಸ್ವರೂಪದ ಬಗ್ಗೆ ಬಹುಬಾರಿ ಪ್ರವಚನ ಕೇಳಿದವನಿಗೆ ಲಭಿಸದು. ದುರ್ನಡತೆಯಿಂದ ದೂರಾಗದವನಿಗೆ, ಧ್ಯಾನಮಗ್ನನಾಗದವನಿಗೆ, ಪ್ರಶಾಂತ ಮನಸ್ಸಿಲ್ಲದವನಿಗೆ, ಇಂದ್ರಿಯ ವ್ಯಾಪಾರಗಳನ್ನು ತನ್ನ ಹತೋಟಿಗೆ ತರಲಾಗದವನಿಗೆ ಆತ್ಮಜ್ಞಾನವು ಸಿದ್ಧಿಸುವುದಿಲ್ಲ.

ಶರೀರ ಮತ್ತು ಆತ್ಮಗಳು ಭಿನ್ನ ಎಂಬ ವಿಷಯವನ್ನು ಕಠ–ಸ್ಪಷ್ಟವಾಗಿ ತಿಳಿಸುತ್ತದೆ. ಶರೀರವು ಆತ್ಮವಿರುವ ಪರ್ಯಂತರ ಮಾತ್ರವಿರುತ್ತದೆ. ಹರಿದ ಬಟ್ಟೆಯನ್ನು ತ್ಯಜಿಸಿ, ಹೊಸ ಬಟ್ಟೆಯನ್ನು ಧರಿಸುವಂತೆಯೇ ಆತ್ಮನು ಒಂದು ಶರೀರವನ್ನು ಬಿಟ್ಟು ಮತ್ತೊಂದು ಶರೀರಧಾರಣೆ ಮಾಡುತ್ತಾನೆ.

ಕಠೋಪನಿಷತ್ ಬೃಹದಾರಣ್ಯಕೋಪನಿಷತ್ತಿನಂತೆ ಕರ್ಮ ಮತ್ತು ಪುನರ್ಜನ್ಮ ವಿಚಾರವನ್ನು ತಿಳಿಸುತ್ತದೆ.

ಯಾವ ಸಾಧಕನು ಶ್ರದ್ಧೆ, ನಿಷ್ಠೆ, ಭಕ್ತಿ ಇತ್ಯಾದಿಗಳಿಂದ ಕಾಯಾ, ವಾಚಾ, ಮನಸಾ, ಆತ್ಮಸಾಕ್ಷಾತ್ಕಾರಕ್ಕೆ ಅತಿಯಾಗಿ ಹಂಬಲಿಸುವನೋ ಅಂತಹ ಶರಣನಿಗೆ ಮಾತ್ರ ಆತ್ಮಸಾಕ್ಷಾತ್ಕಾರ ಸಾಧ್ಯ. ಇದು ಭಾವಗಮ್ಯ ಅಥವಾ ಅನುಭಾವದಿಂದ ಮಾತ್ರ ಸಾಧ್ಯ.

ಯದಾ ಸರ್ವೇ ಪ್ರಮುಚ್ಯಂತೆ ಕಾಮಾ ಯೇಽಸ್ಯಹೃದಿಶ್ರಿತಾಃ ।
ಅಥ ಮರ್ತ್ಯಃ ಅಮೃತಃ ಭವತಿ ಅತ್ರಬ್ರಹ್ಮ ಸಮಶ್ನುತೆ ॥

ಮಾನವನ ಸರ್ವ ವಿಧವಾದ ಆಶೆ, ಆಕಾಂಕ್ಷೆಗಳು ಸಂಪೂರ್ಣ ಅಳಿದುಹೋದಾಗ ಅವನು ಅಮೃತತ್ತ್ವ ಹೊಂದುವನು ಮತ್ತು ಇಲ್ಲಿಯೇ ಬ್ರಹ್ಮಪದವನ್ನು ಪಡೆಯುವನು.

ಕಾವ್ಯದ ದೃಷ್ಟಿಯಿಂದ ಪರಿಶೀಲಿಸುವುದಾದರೆ ಉಪನಿಷತ್ ಗಣದಲ್ಲಿ ಕಠೋಪನಿಷತ್ತಿಗೆ ಅಗ್ರಸ್ಥಾನ ಸಲ್ಲಬೇಕೆಂಬುದು ನಿರ್ವಿವಾದವಾದುದು. ಅಧ್ಯಾತ್ಮ ತತ್ತ್ವಗಳ ನಿರೂಪಣೆಯಲ್ಲಿಯೂ ಸಹ ಇದು ಬಹಳ ಸುಂದರವಾಗಿ ಹಾಗೂ ಸರಳವಾಗಿ ಆತ್ಯಂತಿಕ ಸತ್ಯವನ್ನು ಹಾಗೂ ಆಧ್ಯಾತ್ಮ ಮಾರ್ಗವನ್ನು ಶ್ರೇಯ ಮತ್ತು ಪ್ರೇಯ ಮಾರ್ಗಗಳ ನಿರೂಪಣೆ, . ಶ್ರೇಯ ಮಾರ್ಗಾನುಸರಣೆಯಿಂದೊದಗುವ ಆತ್ಯಂತಿಕ ಕಲ್ಯಾಣ, ಆತ್ಮ ಮತ್ತು ಶರೀರಗಳ ಭಿನ್ನತೆ, ಓಂಕಾರದ ಮಹತ್ತ್ವ, ಪುನರ್ಜನ್ಮ ವಿಚಾರ, ಸದ್ಗುಣದ ಅವಶ್ಯಕತೆ ಇತ್ಯಾದಿ ವಿಷಯಗಳನ್ನೆಲ್ಲಾ ಹೃದಯಂಗಮವಾಗಿ ಸರ್ವರಿಗೂ ಸುಲಭವಾಗಿ ತಿಳಿಯುವಂತೆ ಸರಳವಾಗಿ ಹೇಳಿದೆ.

ಸಾಂಖ್ಯ, ಯೋಗ, ಅದ್ವೈತ ಇತ್ಯಾದಿ ದರ್ಶನಗಳ ಬೆಳವಣಿಗೆಗೆ ಬಹಳರೀತಿ ಸಹಾಯಕಾರಿಯಾಗಿದೆ. ಸನಾತನ ಉಪನಿಷತ್ತುಗಳಲ್ಲಿ ಕಠದ ಸ್ಥಾನವು ಅತ್ಯುನ್ನತ.

———:———

# ಶತಕತ್ರಯದ ಶ್ಲೋಕತ್ರಯ



## ಪೂಜ್ಯ ಲಿಂ. ಹಾನಗಲ್ ಶ್ರೀಗಳವರ ವ್ಯಾಖ್ಯಾನ.

ಶ್ರೀಗುರುವೇ ಮಹಾಗುರುವೇ ಶಾಂತಿಕಲಾ ಗುರುವೇ ಶೀವಾತ್ಮ
ವಿದ್ಯಾಗುರುವೇ ಪುರಾಗುರುವೆ ವಿಶ್ವ ಜಗದ್ಗುರುವೇ ವಿಶುದ್ಧ ಜೇಷ್ಟಾ ॥
ಗುರುವೇ ಸುಧೀಗುರುವೆ ಭಕ್ತಿಯಶೋಗುರುವೇ ಪ್ರಸಾದತೇಜೋಗುರುವೇ
ಕೃಪಾಗುರುವೆ ಮದ್ಗುರುವೇ ಗುರುವೇ ಶಿವಾಥವಾ ॥ ೧ ॥

ಶ್ರೀಗುರುವೇ = ಶ್ರೀ = ಸಂಪತ್ತಿನಿಂದ ಕೂಡಿದ (ವಿಚಾರ) ಸಂಪತ್ತಿನಲ್ಲಿ ಲೌಕಿಕವೆಂದೂ ಪಾರಮಾರ್ಥಿಕವೆಂದೂ ಎರಡು ವಿಧಗಳುಂಟು.

(೧) ಸತಿಪುತ್ರಧನಧಾನ್ಯ ಕರಿತುರಗಾದಿಗಳು ಲೌಕಿಕ ಸಂಪತ್ತಿಯೆನಿಸುವವು.

(೨) ಭಕ್ತಿಜ್ಞಾನ ವೈರಗ್ಯಾದಿಗಳು ಪಾರಮಾರ್ಥಿಕ ಸಂಪತ್ತಿಯೆನಿಸುವವು. (ಈ ಪಾರಮಾರ್ಥಿಕ ಸಂಪತ್ತಿಯೇ ಗುರು ಸಂಪತ್ತಿಯೆಂಬ ಭಾವವು.) ಗುರುವೇ = ಅಜ್ಞಾನ ನಾಶಕನೇ - (ಗು = ಅಜ್ಞಾನವನ್ನು—ರು = ನಾಶಮಾಡಿದಂಥ) ಪ್ರಮಾಣ ಶ್ಲೋ॥ ಗುಕಾರಸ್ತ್ವಂಧಕಾರಶ್ಚರುಕಾರಸ್ತದ್ವಿನಾಶಕೃತ್ । ಅಂಧಕಾರವಿನಾಶಿತ್ವಾದ್ಗುರುರಿತ್ಯಭಿಧೀಯತೇ ॥

ಮಹಾಗುರುವೇ = ಶ್ರೇಷ್ಠನಾದ ಗುರುವೇ (ವಿಚಾರ) ಸೃಷ್ಟಿ" ಸ್ಥಿತಿ ಲಯಗಳಿಗೆ ಕಾರಣರಾದ ಬ್ರಹ್ಮಾದಿಗಳು ಜಗತ್ತಿನಲ್ಲಿ ಶ್ರೇಷ್ಠರಾಗಿ ಜೀವಿಗಳನ್ನು ಭವಮಾಲೆಯಲ್ಲಿ ತಿರುಗಿಸಿ ದುಃಖದಲ್ಲಿ ಕೆಡುಹುತ್ತಿರುವರು. ಶ್ರೀಗುರುವು ತನ್ನನ್ನು ಮರೆಹೊಕ್ಕವರ ಅಜ್ಞಾನ ನಾಶಮಾಡಿ ಆ ಭವವನ್ನು ಕಳೆದು ಸಕಲದುಃಖ ನಿವೃತ್ತಿ ನಿತ್ಯಾನಂದ ಪದ ಪ್ರಾಪ್ತಿರೂಪಮುಕ್ತಿಯನ್ನು ಕೊಡುವನಾದ ಕಾರಣ ತ್ರಿಮೂರ್ತಿಗಳಿಗಿಂತಲೂ ಗುರುವು ಅಧಿಕನು. ಈ ಗುರುತತ್ವಕ್ಕೆ ಮೇಲಾದದ್ದು ಮತ್ತೊಂದಿಲ್ಲ. ಇದಕ್ಕಾಗಿಯೇ 'ನಗು

ರೋಽಧಿಕಃ' ಎಂದು ಶ್ರುತಿಯು ಕೂಗುತ್ತಿರುವದು. ಶಾಂತಿಕಲಾಗುರುವೇ = ಶಾಂತ ವೃತ್ತಿಯಿಂದ ಕೂಡಿದ ಗುರುವೇ (ವಿಚಾರ: "ಸತ್ವಗುಣದಿಂವೈರಾಗ್ಯಮುದುವಾದ ಶಾಂತವೃತ್ತಿ I" ಎಂಬ ಪುರಾತನೋಕ್ತಿಯಂತೆ ವಿರತಿಯಿಂದೊಡಗೂಡಿದ ಶಾಂತ ಮಯುವಾದ ವರ್ತನವುಳ್ಳ ಗುರುವೇ ಎಂಬ ತಾತ್ಪರ್ಯವು. ಶಿವಾತ್ಮವಿದ್ಯಾಗುರುವೇ = ಲಿಂಗಾಂಗ ಸಾಮರಸ್ಯ ಜ್ಞಾನರೂಪನಾದ ಗುರುವೇ—(ಶಿವ = ಲಿಂಗ. ಆತ್ಮ ಲಿಂಗ ವಿದ್ಯಾ = ಜ್ಞಾನ ಲಿಂಗಾಂಗೈಕ್ಯಜ್ಞಾನಾಕಾರನೆಂಬ ಭಾವವು).

ಪುರಾಗುರುವೇ = ಆದಿಯಿಂದತ್ತತ್ತಲಾದ ಗುರುವೇ (ಜಗತ್ಸೃಷ್ಟಿಗಿಂತಲೂ ಪೂರ್ವದಲ್ಲಿದ್ದವನೆಂಬಭಿಪ್ರಾಯವು) ವಿಶೇಷ ವಿಚಾರ (ಶಂಕಾ) ನೂರು ವರ್ಷದೊಳಗಿನ ಆಯುಷ್ಯವುಳ್ಳ ಮನುಷ್ಯರೂಪಿಯಾದ ಗುರುವು ಪೂರ್ವಿಕನೆಂಬುವುದು ಹೇಗೆ? (ಸಮಾಧಾನ) ಗುರುವ್ಯಕ್ತಿ, ಗುರುತತ್ವ ಈ ಎರಡು ಕೂಡಿಕೊಂಡು ಗುರುವೆನಿಸಿ ಕೊಳ್ಳುವನು. ಇವುಗಳಲ್ಲಿ ವ್ಯಕ್ತಿಗಿಂತಲೂ ತತ್ವವು ಮುಖ್ಯವಾದದ್ದು.

ವ್ಯಕ್ತಿಯು ನೂರು ವರ್ಷದೊಳಗಿನ ಆಯುಷ್ಯವುಳ್ಳದ್ದು. ಗುರುತತ್ವವು ಸೃಷ್ಟಿ ಗಿಂತಲೂ ಪೂರ್ವದಲ್ಲಿದ್ದದ್ದು. ಇಲ್ಲಿ ತತ್ತ್ವವನ್ನುದ್ದೇಶಿಸಿ ಪುರಾಗುರುವೆಂದು ಹೇಳಿದು ಸಂಶಯಕ್ಕೆ ಆಸ್ಪದವಾಗಲಾರದು. ಉದಾಹರಣಾರ್ಥವಾಗಿ, ಪೂರ್ವದ ರಾಜನ ರಾಯವನ್ನು (ಹುಕುಮನ್ನು) ತನ್ನ ಅಪ್ಪಣೆಯೆಂದು ತತ್ಕಾಲದ ರಾಜನು ರಾಜ ತತ್ವವನ್ನು ಲಕ್ಷಿಸಿ ಒಪ್ಪಿಕೊಳ್ಳುವಂತೆ ಗುರುತತ್ವದ ವಿಚಾರವಿರುವದು. ವಿಶ್ವ ಜಗ ದ್ಗುರುವೇ = ಎಲ್ಲ ಜಗತ್ತಿಗೂ ಗುರುವೇ—(ವಿಶೇಷ ವಿಚಾರ) ಶಂಕಾ :- ಜಗತ್ತಿನಲ್ಲಿ ಅನೇಕ ಮತಗಳಿರುವವು. ಒಂದು ಮತದ ಗುರುಗಳು ಎಲ್ಲ ಮತಗಳಿಗೆ ಗುರು ಗಳಾಗುವದು ಅಸಂಭವವಾದ್ದರಿಂದ ಈ ಮತದ ಗುರುಗಳಿಗೆ ಜಗದ್ಗುರುತ್ವವು ಹೇಗೆ ಸಲ್ಲುವದು? ಅಂದರೆ (ಸಮಾಧಾನ) ಸ್ಥೂಲಸೂಕ್ಷ್ಮ ಕಾರಣಗಳೆಂಬ ಮೂರು ರೂಪಿ ನಿಂದ ಜಗತ್ತು ಕಾಣಿಸುವದು. ಈ ಮೂರು ರೂಪಗಳು ಕ್ರಮದಿಂದ ಜಾಗರಣೆ ಸ್ವಪ್ನ ಸುಷುಪ್ತಿಗಳೆಂಬ ಮೂರವಸ್ಥೆಗಳಿಗೆ ಸಂಬಂಧಪಟ್ಟಿರುವದರಿಂದ "ಅವಸ್ಥಾತ್ರಯ ಮಂ ಗೆದ್ದಾತನೇ ಜಗದ್ಗುರುವಪ್ಪಂ" ಎಂಬ ಪುರಾತನೋಕ್ತಿಯುಂಟು. ಅವಸ್ಥಾ ತ್ರಯಂಗಳು ಪಿಂಡಾಂಡರೂಪೀಜೀವನಿಗೆ ಸಂಬಂಧಿಸಿದವುಗಳಾದ್ದರಿಂದ ಜೀವನ ನಿವೃತ್ತಿ ರೂಪ ಪ್ರಯತ್ನದಿಂದ ಗೆದಿಯಲಿಕ್ಕೆ ಅಭ್ಯಂತರವಿಲ್ಲ. ಜೀವನು "ಸರ್ವಾರ್ಥಸಾಧಕ ನಪ್ಪುದರಿಂ ಸರ್ವಸಂಬಂಧಿತ್ವವೇ ಪೂರ್ಣ ರೂಪು" ಎಂದು ಪೂರ್ವಿಕರ ವಚನ ವುಂಟು.

ಜಾಗರಣಾದಿ ಮೂರು ಅವಸ್ಥೆಗಳ ಸಂಬಂಧವಾದ ಸ್ಥೂಲ, ಸೂಕ್ಷ್ಮ ಕಾರಣ ನೆಂಬ ಮೂರು ತನುಗಳಲ್ಲಿ ಇಷ್ಟಪ್ರಾಣ ಭಾವವೆಂಬ ಮೂರು ಲಿಂಗಗಳನ್ನು ಸದ್ಗುರು [illegible] ವಿಸ್ತಾರೋಕ್ತಿ[illegible] [illegible] ಪ್ರಸಿದ್ಧಾರ್ಥ[illegible] ಒಲಿದಿಂ[illegible] ಶಿವಯೋಗ

ಸಂಪನ್ನನೆನಿಸಿ ತ್ರಿತತ್ವಾತ್ಮಕ ಜಗತ್ತನ್ನು ಜೈಸುವನು. ಈ ಕ್ರಮವು ಅಸಾಧಾರಣ ವಾದನ್ನು ಇದರಿಂದುಂಟಾದ ಜಗದ್ಗುರುತ್ವವು ಶ್ರೇಷ್ಠವೆನಿಸುವದು.

ಪಿಂಡಾಂಡಕ್ಕೂ ಬ್ರಹ್ಮಾಂಡಕ್ಕೂ ನಿಕಟ ಸಂಬಂಧವಿರುವದರಿಂದ ಅವಸ್ಥಾತ್ರಯ ರೂಪ ಪಿಂಡಾಂಡವನ್ನು ಗೆದ್ದ ಆತ್ಮನಿಗೆ ಬ್ರಹ್ಮಾಂಡರೂಪ ಜಗತ್ರಯವು ಸಹಜವಾಗಿ ಗೆಲ್ಲಲ್ಪಡುವದು, ಈ ಜಯುವನ್ನು ಹೊಂದಿದ ಮಹಾಗುರುವಿಗೆ ಜಗದ್ಗುರುತ್ವವು ಸಿದ್ಧಿಸುವಲ್ಲಿ ಸಂಶಯುವಿಲ್ಲವು. ಬ್ರಹ್ಮಾಂಡಸ್ಥೂಲ ಪಿಂಡಾಂಡವು ಸೂಕ್ಷ್ಮ ಸ್ಥೂಲವು ಕಾರ್ಯವೆನಿಸುವದು. ಸೂಕ್ಷ್ಮವು ಕಾರಣವೆನಿಸುವದು. ಸೂಕ್ಷ್ಮವನ್ನು ಜೈಸಿದರೆ ಸ್ಥೂಲವು ತಾನೇ ಸಾಧ್ಯವಾಗುವದು. ಉದಾಹರಣೆ :

ಸೂಕ್ಷ್ಮವಾದ ಮನಸ್ಸನ್ನು ಜೈಸಿದರೆ ಸ್ಥೂಲವಾದ ಶರೀರವೂ ಸಮಸ್ತ ಇಂದ್ರಿಯ ಗಳೂ ಸಹಜವಾಗಿ ಸ್ವಾಧೀನಕ್ಕೆ ಬರುವವು ಮತ್ತು ಉಗಿಯ ಯಂತ್ರದ ಇಂಜನ್ ಒಂದನ್ನು ಸಾಗಿಸಿದರೆ ಅದಕ್ಕೆ ಸಂಬಂಧಪಟ್ಟ ಅನೇಕ ಯಂತ್ರಗಳು ಸಹಜವಾಗಿ ಸಾಗುವಂತೆ ಪಿಂಡಾಂಡವನ್ನು ಜೈಸಿದರೆ ಬ್ರಹ್ಮಾಂಡವು ತಾನೇ ಸಾಧ್ಯವಾಗುವದು. (ಶಂಕಾ) ಅವಸ್ಥಾತ್ರಯುಗಳನ್ನು ಜೈಸಬೇಕೆಂಬುವಲ್ಲಿ ಇವನ ಇಚ್ಛಾಯತ್ನಾದಿಗಳಿಗೆ ಜಾಗ್ರದವಸ್ಥೆಯಲ್ಲಿ ಅನುಕೂಲವಿರುವದರಿಂದ ಶಿವನನ್ನು ಮರೆಹೊಕ್ಕು ಜಾಗ್ರದವಸ್ಥೆ ಯನ್ನು ಗೆದಿಯುಬಹುದು. ಸ್ವಪ್ನ ಮತ್ತು ಸುಷುಪ್ತಾವಸ್ಥೆಯಲ್ಲಿ ಇವನ ಅಧಿಕಾರಕ್ಕೆ ಅನುಕೂಲವಿಲ್ಲದ್ದರಿಂದ ಅಲ್ಲಿ ಪ್ರಯತ್ನ ಮಾಡಿಗೆದಿಯುವದು ಹೇಗೆ? ಇದು ಅಸಂಭವವು ಅಂದರೆ (ಸಮಾಧಾನ) ಜಾಗ್ರದವಸ್ಥೆಯೊಂದನ್ನು ಗೆದ್ದರೆ ಸ್ವಪ್ನಸುಷುಪ್ತಿಗಳನ್ನು ಗೆದ್ದಂತಾಯಿತು. ಹೇಗೆಂದರೆ ಸುಪ್ತಾವಸ್ಥೆಗೆ ಕಾರಣವಾದದ್ದು ಮಾಯಾಕರಣ (ಭಾವ) ಸ್ವಪ್ನಾವಸ್ಥೆಗೆ ಕಾರಣವಾದದ್ದು ಅಂತಃಕರಣ (ಮನಸ್ಸು) ಜಾಗ್ರದವಸ್ಥೆಗೆ ಕಾರಣ ವಾದದ್ದು ನೇತ್ರಾದಿ ಇಂದ್ರಿಯವರ್ಗವು (ಸ್ಥೂಲ ಶರೀರ) ಈ ಮೂರು ಕರಣಗಳು ಜಾಗ್ರದವಸ್ಥೆಯಲ್ಲಿರುವದರಿಂದ ಈ ಅವಸ್ಥೆಯಲ್ಲಿಯೇ ಜೈಸುವುದಕ್ಕೆ ಬರುತ್ತದೆ. ಅದು ಹೇಗಂದರೆ (ಸಾಧನಗಳು) ಅಥವಾ ಅನುಸಂಧಾನಗಳು. (೧) ನೇತ್ರಕರಣಾದಿ ಬಾಹ್ಯೇಂದ್ರಿಯಗಳಿಂದ ಇಷ್ಟಲಿಂಗವನ್ನು ನಿರೀಕ್ಷಣಾರ್ಚನಾದಿಗಳಿಂದ ಪೂಜಿಸುವದೇ ಜಾಗರಣದೊಳಗಿನ ಜಾಗ್ರದವಸ್ಥೆಯನ್ನು ಗೆದಿಯುವ ಸಾಧನವು. (೨) ಅಂತರಂಗದ ಶಿವಕಲಾ ಸ್ವರೂಪನಾದ ಬಿಂದುಕಲಾತ್ಮಕವಾದ ಪ್ರಾಣಲಿಂಗವೇ ಇಷ್ಟಲಿಂಗವೆಂದು ಮನಸ್ಸಿನಿಂದ ಧ್ಯಾನಿಸುವದೇ ಜಾಗರಣದೊಳಗಿನ ಸ್ವಪ್ನಾವಸ್ಥೆಯನ್ನು ಗೆದಿಯುವ ಸಾಧನವು. (೩) ಮೂರು ತನುಗಳಲ್ಲಿ ವ್ಯಾಪಿಸಿಕೊಂಡಿರುವ ಶಿವತೇಜಸ್ಸೇ ಅಂದರೆ ಭಾವಲಿಂಗವೇ ಇಷ್ಟಲಿಂಗವೆಂದು ಭಾವಿಸುವದು. ಜಾಗರದೊಳಗಿನ ಸುಪ್ತಾವಸ್ಥೆಯನ್ನು ಗೆದಿಯುವ ಸಾಧನವು. ಇದೊಂದು ಪ್ರಕಾರದ್ದು.

ಎರಡನೆಯ ಪ್ರಕಾರದ ಸಾಧನವೆಂದರೆ (೧) ಶ್ರವಣ, ಮನನ, ನಿದಿಧ್ಯಾಸನ ವೆಂದು ಮೂರು ವಿಧವಾಗಿರುವದರಲ್ಲಿ ಲಿಂಗಾಂಗ ಸಾಮರಸ್ಯ ರೂಪ ಮಹಾವಾಕ್ಯ

ವನ್ನು ಭಕ್ತಿಪೂರ್ವಕ ಕೇಳುವದೇ ಶ್ರವಣವು. (೨) ಆ ಲಿಂಗಮೂರ್ತಿಯನ್ನು ವಿಚಾರ ಪೂರ್ವಕವಾಗಿ ಸ್ಮರಣಕ್ಕೆ ತರುವದೇ ಮನನವು. (೩) ಆ ಲಿಂಗಸ್ವರೂಪವನ್ನು ಎಡ ಬಿಡದೆ ಭಾವಿಸುವದೇ ನಿದಿಧ್ಯಾಸವು. ಇದೊಂದು ಪ್ರಕಾರದ್ದು.

ಮೂರನೆಯ ಪ್ರಕಾರದ ಸಾಧನವೆಂದರೆ (೧) ವ್ಯಶ್ಯಾನುವಿದ್ಧರೂಪವಾದ ಇಷ್ಟ ಲಿಂಗಾನು ಸಂಧಾನವು. (೨) ಶಬ್ದಾನುವಿದ್ಧರೂಪವಾದ ಪ್ರಾಣಲಿಂಗಾನು ಸಂಧಾನವು. (೩) ನಿರ್ವಿಕಲ್ಪಕರೂಪ ಭಾವಲಿಂಗಾನುಸಂಧಾನವು. ಇದೊಂದು ಪ್ರಕಾರದ್ದು.

ನಾಲ್ಕನೆಯ ಪ್ರಕಾರದ ಸಾಧನವೆಂದರೆ ಶಿವನನ್ನುದ್ದೇಶಿಸಿ (ಶಿವನಿಗೋಸ್ಕರ) ಈ ಕಾರ್ಯವನ್ನು ಮಾಡುವೆನೆಂದು ಸಂಕಲ್ಪಿಸಿ ಕೃಷಿವಾಣಿಜ್ಯ ಸೇವಾಯಾಚನಾದಿ ಕಾರ್ಯಗಳನ್ನು ಮಾಡಿ ಅದರಿಂದ ಬಂದ ಪದಾರ್ಥಗಳನ್ನು ಗುರುಲಿಂಗ ಜಂಗಮ ಸೇವೆಗಾಗಿ ಅರ್ಪಿಸಿ ಆ ಗುರುಲಿಂಗ ಜಂಗಮದ ಕೃಪಾರೂಪ ಪ್ರಸಾದವನ್ನು ಉಪ ಭೋಗಿಸುವುದು. ಇದೊಂದು ಪ್ರಕಾರದ್ದು.

ಈ ನಾಲ್ಕು ಪ್ರಕಾರದ ಸಾಧನಗಳಲ್ಲದೆ ತನುಮನ ಭಾವಗಳಿಂದ ಮಾಡತಕ್ಕ ಶಿವಸಂಬಂಧಿ ಕಾರ್ಯಗಳೆಲ್ಲವೂ ಅವಸ್ಥಾತ್ರಯವನ್ನು ಗೆದಿಯುವ ಸಾಧನವೆಂದು ತಿಳಿಯುವದು. ಇದೇ ಶಿವಯೋಗವೆನಿಸುವದು. ಈ ಪ್ರಕಾರ ಸಾಧನಗಳಿಂದುಂಟಾ ದದ್ದು ವೃತ್ತಿರೂಪ ಜಗದ್ಗುರುತ್ವವು ಇದರೊಡನೆ ಆಶ್ರಮೋಚಿತ ಸಂಸ್ಕಾರರೂಪ ಜಗದ್ಗುರುತ್ವವು ಸಂಬಂಧವಾದಲ್ಲಿ ಬಂಗಾರಕ್ಕೆ ಕುಂದಣವನ್ನು ಹಾಕಿದಂತೆ ಅತ್ಯಂತ ಶ್ರೇಷ್ಠವೆನಿಸಿ ಸಹಜ ಜಗದ್ಗುರುತ್ವವೆನಿಸುವದು.

ಗುರುತ್ವದಲ್ಲಿ ಅಂಕುರಿತರೂಪ ಜಗದ್ಗುರುತ್ವ, ಫಲಾಯಿತರೂಪ ಜಗದ್ಗುರುತ್ವ, ಫಲಿತರೂಪ ಜಗದ್ಗುರುತ್ವವೆಂದು ಮೂರು ವಿಧವು. ಅಂಕುರಿತರೂಪ, ಫಲಾಯಿತ ರೂಪ ಜಗದ್ಗುರುತ್ವಗಳು ಸಂಬಂಧ ಅಥವಾ ಸಾಧಕ ಜಗದ್ಗುರುತ್ವವೆನ್ನಲ್ಪಡು ವವು. ಫಲಿತರೂಪ ಜಗದ್ಗುರುತ್ವವು ಜಹಜ ಅಥವಾ ಸಿದ್ಧ ಜಗದ್ಗುರುತ್ವವೆನಿಸುವ ದೆಂಬ ಭಾವವು

ವಿಶುದ್ಧಚೇಷ್ಟಾಗುರುವೇ ಅತಿ ನಿರ್ಮಲವಾದ ಚರಿತ್ರವುಳ್ಳ ಗುರುವೇ (ವಿಚಾರ) ಪದಾರ್ಥಗಳಲ್ಲಿ ಸ್ಥೂಲವೆಂದೂ ಸೂಕ್ಷ್ಮವೆಂದೂ ಎರಡು ಭೇದ ಗಳುಂಟು. ಲಿಂಗಾರ್ಪಿತಕ್ಕೆ ಅಯೋಗ್ಯವಾದ ಪದಾರ್ಥಗಳು ಸ್ಥೂಲವೆನಿಸುವವು. ಲಿಂಗಾರ್ಪಿತಕ್ಕೆ ಯೋಗ್ಯವಾದವುಗಳು ಸೂಕ್ಷ್ಮವೆನಿಸುವವು ಸೂಕ್ಷ್ಮದಲ್ಲಿ ಶುದ್ಧವೆಂದೂ ವಿಶುದ್ಧವೆಂದೂ ಎರಡು ಪ್ರಕಾರಗಳುಂಟು. ಹೇಗೆಂದರೆ (೧) ಅಷ್ಟಾವರಣಗಳಲ್ಲಿ ಮೊದ ಲನೆಯದಾದ ಭಸ್ಮವು ಪಂಚಗೋವುಗಳ ಗೋಮಯದಿಂದುಂಟಾದದ್ದು ಶುದ್ಧವು.

ಪಾದೋದಕ ಮಂತ್ರಭಾವನಾದಿಗಳಿಂದ ಸಂಸ್ಕರಿಸಿದ್ದು ವಿಶುದ್ಧ ಭಸ್ಮವೆನಿಸುವದು. (೨) ಎರಡನೆಯ ರುದ್ರಾಕ್ಷಿಯು ಶುದ್ಧಸ್ಥಲದಲ್ಲಿ ಬೆಳೆದ ರುದ್ರಾಕ್ಷಿಯ ಮರದಿಂದ ಶಾಸ್ತ್ರೋಕ್ತವಾಗಿ ತಂದ ದೋಷರಹಿತವಾದವುಗಳು ಶುದ್ಧವು. ಪಾದೋದಕ ಮಂತ್ರಾದಿಗಳಿಂದ ಸಂಸ್ಕರಿಸಲ್ಪಟ್ಟ ರುದ್ರಾಕ್ಷಿಗಳು ವಿಶುದ್ಧವೆನಿಸುವವು. (೩) ಮೂರನೆಯದಾದ ಮಂತ್ರವು ವೇದಾದಿಗಳಲ್ಲಿ ಸಪ್ತಕೋಟಿ ಮಂತ್ರಗಳಿಗಿಂತಲೂ ಶ್ರೇಷ್ಠವೆಂದು ಹೇಳಲ್ಪಟ್ಟು ತನ್ನಂತರಂಗದಲ್ಲಿ ಸಂಬಂಧವಾಗಿ ತೋರುವ ಮಹಾಮಂತ್ರವು ಶುದ್ಧವು. ವರ್ಣಾಶ್ರಮಕ್ಕೆ ತಕ್ಕ ಜ್ಞಾನಾಚಾರಗಳುಳ್ಳ ಗುರುವಿನಿಂದ ವಿಧಿವತ್ತಾಗಿ ಅನುಗ್ರಹಿಸಲ್ಪಟ್ಟದ್ದು ವಿಶುದ್ಧವೆನಿಸುವದು. (ಇಲ್ಲಿ ವಿಚಾರ)ಸಾಧಕ ಗುರುವಿನಿಂದ ಬಂದ ಮಂತ್ರವು, ಗುರುಶಿಷ್ಯರ ಅಧಿಕಾರಕ್ಕನುಗುಣವಾಗಿ ಕಾಲಾಂತರದಲ್ಲಿ ಫಲಿಸುವದು. ಸಿದ್ಧಗುರುವಿನಿಂದ ಬಂದ ಮಂತ್ರವು ಕಾಲವಿಲಂಬವಿಲ್ಲದೇ ಫಲಕಾರಿಯಾಗುವದು. ಸಿದ್ಧನಾದ ಶಿಷ್ಯನಿಂದ ಸಾಧಕನಾದ ಗುರುವು ಕೂಡಾ ಸಿದ್ಧಸ್ಥಿತಿಯನ್ನು ಹೊಂದಬಹುದು. ಈ ಮಾತಿಗೆ ಉರುಲಿಂಗಪೆದ್ದಿ ದೇವರ ಚರಿತ್ರೆಯೂ ದಾಶಾರ್ಹ ರಾಜನ ಚರಿತ್ರವೂ ಉದಾಹರಣೆಗಳಾಗಿವೆ.

**ದೃಷ್ಟಾಂತ**:—ಗಂಡನು ಬಲವಂತನಾದರೆ ಹೆಂಡತಿಯನ್ನೂ ಹೆಂಡತಿಯು ಬಲವಂತೆಯಾದರೆ ಗಂಡನನ್ನೂ ಸಂರಕ್ಷಿಸಿ ಸಂಸಾರಸಾಗರವನ್ನು ದಾಟಿ ಹೋಗುವ ಸತಿಪತಿ ನ್ಯಾಯದಂತೆ ಗುರುವು ಬಲವಂತನಾದರೆ ಶಿಷ್ಯನನ್ನೂ, ಶಿಷ್ಯನು ಬಲವಂತನಾದರೆ ಗುರುವನ್ನೂ ಉದ್ಧರಿಸಲಿಕ್ಕೆ ಸಮರ್ಥರಾಗುವರು. ಶಕ್ತಿಹೀನನಾದ ಪುರುಷನು ಸ್ತ್ರೀಯ ಹಾವಭಾವ ವಿಲಾಸವನ್ನು ನೋಡಿ ಸಶಕ್ತನಾಗುವಂತೆ!

೪ನೆಯದು ಗುರು :—ಶುದ್ಧವಂಶಜ ಗುರುಕುಲೋತ್ಪನ್ನರಾದ ವಟುಗಳು ಶುದ್ಧರು. ವಿಶೇಷದೀಕ್ಷಾಯುಕ್ತವಾದ ವಡೆತನದ (ಆರ್ಯಾಚಾರ ಅಥವಾ ಅಯ್ಯತನದ) ಸಂಸ್ಕಾರ ಮೊದಲುಗೊಂಡು ಗುರುಪಟ್ಟಾಭಿಷೇಕ ಕಡೆಯಾದ ಸಂಸ್ಕಾರ ವಿಶಿಷ್ಟವಾದಲ್ಲಿ ವಿಶುದ್ಧ ಗುರುಮೂರ್ತಿಯೆನಿಸುವನು.

೫ನೆಯದು ಲಿಂಗ :—ಶ್ರೀಗಿರಿ ಮೊದಲಾದ ಕ್ಷೇತ್ರಗಳಲ್ಲಿಯೂ ಲಿಂಗೋದ್ಭವಾದಿ ಪುಣ್ಯನದಿಗಳಲ್ಲಿಯೂ ದೊರೆತ ಶಿಲೆಗಳಿಂದ ರಚಿಸಿದ ಲಿಂಗವು ಶುದ್ಧ; ಜಲಾಧಿವಾಸ ಧಾನ್ಯಾಧಿವಾಸ ಮುಂತಾದ ಸಂಸ್ಕಾರವುಳ್ಳದ್ದನ್ನು ವೇಧಾಮನು ಕ್ರಿಯಾದೀಕ್ಷೆಗಳಿಂದ ಶಿಷ್ಯನಿಗೆ ಶ್ರೀಗುರುವು ಕೊಟ್ಟ ಶಿವಲಿಂಗವು ವಿಶುದ್ಧವು.

೬ನೆಯದು ಜಂಗಮವು:—ಗುರುಸಂಸ್ಕಾರವನ್ನು ಹೊಂದಿದ ವಟುವು ಜಂಗಮವಾಗಲಿಕ್ಕೆ ಶುದ್ಧ; ಈ ವಟುವಿಗೆ ನಿರಾಭಾರಿ ಪಟ್ಟಾಭಿಷೇಕ ಸಂಸ್ಕಾರ ಮಾಡಿದಲ್ಲಿ ವಿಶುದ್ಧ ಜಂಗಮಮೂರ್ತಿಯೆನಿಸುವನು.

೭ ನೆಯದು ಪಾದೋದಕ:—ನಿರ್ಮಲಪ್ರದೇಶದಲ್ಲಿರ್ದ ಜಲವು ಶುದ್ಧ. ಪೂಜ್ಯ ಪೂಜಕರ ಭಾವನಾ ಮತ್ತು ಮಂತ್ರ ತಂತ್ರಗಳ ವಿಶೇಷ ಸಂಸ್ಕಾರದಿಂದಾದ ಪಾದೋದಕವು ವಿಶುದ್ಧವು.

೮ನೆಯದು ಪ್ರಸಾದ:—ಸತ್ಕಾಯಕದಿಂದ ತಂದ ಪದಾರ್ಥವನ್ನು ಪಾಕಮಾಡಿದ ಅನ್ನವು ಶುದ್ಧ; ಹಸ್ತಸ್ಪರ್ಶ ಮಹಾಮಂತ್ರೋಚ್ಚಾರ ಶಿವಭಾವನಾದಿಗಳಿಂದ ಸಂಸ್ಕರಿಸಿ ಗುರುಲಿಂಗ ಜಂಗಮಕ್ಕೆ ಅರ್ಪಿಸಿದ್ದು ಲಿಂಗಭೋಗವು. ಆ ಗುರುಲಿಂಗ ಜಂಗಮ ಮುಖದಿಂದ ಕ್ರಮವಾಗಿ ಬಂದ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವನ್ನು ಭಕ್ತನು ಅನುಭವಿಸುವದೇ ಉಪಭೋಗವು. ಇದೇ ವಿಶುದ್ಧವೆನಿಸುವದು— ಈ ಅಷ್ಟಾವರಣಗಳಲ್ಲಿ

ಭಸ್ಮ, ರುದ್ರಾಕ್ಷಿ, ಮಂತ್ರ ಈ ಮೂರು ಸಾಧನಗಳು.
ಗುರು, ಲಿಂಗ, ಜಂಗಮ ಈ ಮೂರು ಅಧಿದೇವತೆಗಳು.
ಪಾದೋದಕ, ಪ್ರಸಾದ ಈ ಎರಡು ಫಲಗಳು.

ಈ ಪ್ರಕಾರ ವಿಶುದ್ಧರೂಪವಾದ ಅಷ್ಟಾವರಣದಲ್ಲಿ ಭಕ್ತರೂಪದಿಂದ ಗುರುವು ವಿನೋದಿಸುವನಾದ್ದರಿಂದ ವಿಶುದ್ಧ ಚೇಷ್ಟಾಗುರುವೆಂದು ಹೇಳಲ್ಪಟ್ಟಿರುವದೆಂಬ ಭಾವವು. ಸುಧೀಗುರುವೇ= ಉತ್ತಮ ಬುದ್ಧಿಯುಳ್ಳ ಗುರುವೇ (ವಿಚಾರ) ಆವುದಾದರೊಂದು ಪದಾರ್ಥವನ್ನು ವಿವೇಕದೃಷ್ಟಿಯಿಂದ ನಿಶ್ಚಯಿಸುವುದು ಬುದ್ಧಿಯು. ಅನಿಷ್ಟಗಳನ್ನು ಪರಿಹರಿಸಿ ಇಷ್ಟಾರ್ಥಗಳನ್ನು ಒದಗಿಸಿಕೊಡುವದಕ್ಕೆ ಅಷ್ಟಾವರಣವೇ ಮುಖ್ಯವೆಂದು ವಿಚಾರಮುಖದಿಂದ ನಿಶ್ಚಯಿಸಿಕೊಂಡಿರುವದನ್ನೇ ಶಿಷ್ಯರಿಗೆ ಬೋಧಿಸುವತನವು ಗುರುವಿನಲ್ಲಿರುವದರಿಂದ ಸುಧೀಗುರುವೆಂದು ಹೇಳಲ್ಪಟ್ಟಿರುವದೆಂಬಭಿಪ್ರಾಯವು.

ಭಕ್ತಿಯಶೋಗುರುವೇ=ಭಕ್ತಿಯ ಕೀರ್ತಿಯುಳ್ಳ ಗುರುವೇ (ವಿಚಾರ) ಶರೀರ ಇಂದ್ರಿಯ ಮನಸ್ಸು ಜೀವಾತ್ಮ ಇವುಗಳ ಸಮಷ್ಟಿರೂಪವಾದ ತನ್ನಲ್ಲಿ ಯಾವ ಪ್ರಕಾರ ಪ್ರೀತಿ ಇರುವದೋ ಹಾಗೆಯೇ ಪೂಜ್ಯವಸ್ತುಗಳಾದ ಗುರುಲಿಂಗ ಜಂಗಮಾದಿ ಅಷ್ಟಾವರ್ಣದಲ್ಲಿ ಇಡಲ್ಪಟ್ಟ ಪ್ರೀತಿಯೇ ಭಕ್ತಿಯು. ಇಂಥ ಸಿದ್ಧಭಕ್ತಿಯ ಕೀರ್ತಿಯುಳ್ಳ ಗುರುವೇ ಅಂದರೆ ಗುರುತ್ವಾಭಿಮಾನರಹಿತನಾಗಿ ಶಿಷ್ಯಾದಿಗಳಿಗೆ ಪೂಜ್ಯನಾಗಿಯೂ ಅಷ್ಟಾವರಣದಲ್ಲಿ ಪೂಜಕನಾಗಿಯೂ ಇರುವನೆಂಬ ತಾತ್ಪರ್ಯವು. ಪ್ರಸಾದತೇಜೋಗುರುವೇ=ಅನುಗ್ರಹ ರೂಪ ವರ್ಚಸ್ಸುಳ್ಳ ಗುರುವೇ. (ವಿಚಾರ) ಅನುಗ್ರಹವು ಶುದ್ಧ ಸಿದ್ಧ ಪ್ರಸಿದ್ಧವೆಂದು ಮೂರು ಪ್ರಕಾರವಿರುವದವುಗಳಲ್ಲಿ:

ಗುರುವಿನ ದೃಷ್ಟಿ (ಅಪೂರ್ವ ತೇಜೋಮಯವಾದ ಕೃಪಾದೃಷ್ಟಿ)ಯು ಶಿಷ್ಯನನ್ನು ಆಚ್ಛಾದಿಸಲು ಆ ಶಿಷ್ಯನು ಪವಿತ್ರನೆನಿಸುವನು. ಈ ಪ್ರಥಮ ಸ್ಪರ್ಶರೂಪ ಅನುಗ್ರಹವು ಶುದ್ಧಪ್ರಸಾದವೆಂದೆನಿಸುವದು. ಶಿಷ್ಯನಲ್ಲಿರುವ ದುರ್ಗುಣ ದುರಾಚಾರಾದಿಗಳನ್ನು ನಿಶ್ಶೇಷವಾಗಿ ಕಳೆದುಕೊಳ್ಳುವದಕ್ಕೆ ಉಪಾಯಗಳನ್ನು ತೋರಿಸುವದೇ ಸಿದ್ಧ

ಪ್ರಸಾದವೆನಿಸುವದು. ನಾಮರೂಪಾತ್ಮಕವಾದ ಜಡಮಾಯಾಂಶವನ್ನು ದೂರೀಕರಿಸಿ ಸಚ್ಚಿದಾನಂದ ರೂಪ ಶಿವಲಿಂಗವನ್ನು ಬೋಧಿಸುವದೇ ಪ್ರಸಿದ್ಧವೆನಿಸುವದು. ಅಥವಾ ದೀಕ್ಷಾಗುರುವು ದೀಕ್ಷಾತ್ರಯದಿಂದ ಪೂರ್ವಾಂಶವನ್ನು (ಮಲತ್ರಯಗಳನ್ನು) ನಾಶಗೊಳಿಸಿ ಅಂಗತ್ರಯದಲ್ಲಿ ಲಿಂಗತ್ರಯವನ್ನು ಸ್ಥಾಪಿಸಿ ಲಿಂಗಾಣತೆವಿಡಿದು ವರ್ತಿಸೆಂದು ಬೋಧಿಸುವದೇ ಶುದ್ಧಾನುಗ್ರಹವು. ಪುನಃ ಶಿಕ್ಷಾಗುರುರೂಪದಿಂದ ಶಿವಯೋಗಾಂಗಗಳನ್ನು ಬೋಧಿಸುವದೇ ಸಿದ್ಧಾನುಗ್ರಹವು.

ಬಳಿಕ ಮೋಕ್ಷಾಗುರುರೂಪದಿಂದ ಲಿಂಗಾಂಗ ಸಾಮರಸ್ಯಜ್ಞಾನ ಸಾಧನಗಳನ್ನು ಬೋಧಿಸುವದೇ ಪ್ರಸಿದ್ಧಾನುಗ್ರಹವೆನಿಸುವದು. ಇಂಥಾ ಕೀರ್ತಿಯಿಂದ ಜಗತ್ಪ್ರಸಿದ್ಧನೆಂಬ ಭಾವವು.

ಕೃಪಾಗುರುವೇ=ದಯಾಳುವಾದ ಗುರುವೇ (ವಿಚಾರ) ಭವಮಾಲೆಯ ಸಂಬಂಧದ ತಾಪತ್ರಯಾಗ್ನಿಯಿಂ ಬೆಂದಜೀವಿಯನ್ನು ಕೃಪಾದೃಷ್ಟಿಯಿಂದುದ್ಧರಿಸುವದರಿಂದ ಕರುಣಾನಿಧಿಯೆನಿಸುವನು. ದುಃಖಿಗಳನ್ನು ಕಂಡು ಉದಾಸೀನದಿಂದಿರುವವನು ಗುರುವಲ್ಲವು.

ಈ ದಯಾಶೀಲರಾದ ಗುರುಗಳಲ್ಲಿ ದೃಢಸಿದ್ಧರು ಅದೃಢಸಿದ್ಧರು ಎಂದು ಎರಡು ವಿಧಗಳುಂಟು. ಅದೃಢಸಿದ್ಧರು ತಮ್ಮ ಸ್ಥಿತಿಯನ್ನು ದೃಢೀಕರಿಸುವದಕ್ಕಾಗಿಯೂ ಲೋಕಾನುಗ್ರಹಾರ್ಥವಾಗಿಯೂ ಸಮ್ಯಜ್ಞಾನ ಸತ್ಕ್ರಿಯೆಗಳನ್ನು ಆಚರಿಸುತ್ತಿರುವರು. ದೃಢಸಿದ್ಧರು ಆ ಸಮ್ಯಜ್ಞಾನ ಸತ್ಕ್ರಿಯೆಗಳನ್ನು ಲೋಕಾನುಗ್ರಹಾರ್ಥವಾಗಿ ಆಚರಿಸುತ್ತಿರುವರು. ದೃಢಾದೃಢವುಳ್ಳ ಉಭಯರು ಸದ್ಗುರುಗಳೆನಿಸಿ ಜಗತ್ತಿನ ಮುಮುಕ್ಷುಗಳಿಗೆ ಮೋಕ್ಷಮಾರ್ಗವನ್ನು ಬೋಧಿಸುತ್ತಿರುವರು. ದೃಢಸಿದ್ಧರು ತಮ್ಮ ಶಿವಯೋಗಪ್ರಭಾವವನ್ನು ಜಗತ್ತಿನ ಮಾನವರಲ್ಲಿ ಅನಿರ್ವಾಹ ಸಂಬಂಧವೊದಗಿಬಂದರೆ ಶಿವಾಜ್ಞೆಯೆಂದು ತಿಳಿದು ವ್ರತನೇಮಗಳ ಕಟ್ಟುಮೀರಿ ವರ್ತಿಸಿದರೂ ಅಮಾನುಷಕೃತ್ಯವನ್ನು (ಈಶ್ವರ ಸೃಷ್ಟಿಯನ್ನೇ ಬದಲುಮಾಡಿ ತೋರಿಸುವ ಸ್ಥಿತಿಯನ್ನು) ಉಂಟುಮಾಡಿ ವೀರಶೈವ ಮತೇತರರೂ ಕೂಡಾ ಆಶ್ಚರ್ಯಚಕಿತರಾಗಿ ಅಸಾಧಾರಣ ಭಕ್ತಿಯನ್ನು ತೋರಿಸುವಂತೆ ಮಾಡುತ್ತಿರುವರು. ಉದಾಹರಣಾರ್ಥವಾಗಿ—

ಸಿರಹಟ್ಟಿ ಮಹಾಸ್ವಾಮಿಗಳೂ ಗವೀಸಿದ್ಧಪ್ಪನವರೂ ಆಚರಿಸಿದ ಚರಿತ್ರಗಳೂ ಇನ್ನೂ ಅನಂತಮಹಿಮರ ಚರಿತ್ರಗಳೂ ಉಂಟು.

ದೃಢಸಿದ್ಧರಾದ ಗುರುಗಳು ದೊರೆಯದೇ ಗುರುಸಾಂಪ್ರದಾಯವು ಚ್ಯುತಿಯಾಗುವ ಸಂದರ್ಭ ಕಂಡುಬಂದಲ್ಲಿ ಅಂಥ ಪರಿಪಕ್ವಾಂತಃಕರಣವುಳ್ಳ ಶಿಷ್ಯನ ಶಕ್ತಿಪಾತ ಚಿನ್ಹವನ್ನರಿತು ಅನಿರ್ವಾಹಪಕ್ಷದಲ್ಲಿ ಇದು ಲಿಂಗಾಣತೆಯೆಂದು ಭಾವಿಸಿ ಅದೃಢಸಿದ್ಧರು ಗುರುತ್ವವನ್ನು ವಹಿಸತಕ್ಕದ್ದು. ಶಿಷ್ಯನಾದರೂ ಈ ಮರ್ಮವನ್ನರಿತು ಗುರುಗಳನ್ನು ಮಾಡಿಕೊಳ್ಳತಕ್ಕದ್ದು. ಉದಾಹರಣೆ—

ಶಾಲೆಯಲ್ಲಿ ಕಲಿಯುತ್ತ ಕಲಿಸುವರು, ಕಲಿತು ಕಲಿಸುವರು ಈ ಉಭಯರೂ ಅಧ್ಯಾಪಕರೇ ಇರುವಂತೆ ಗುರುಗಳ ವಿಚಾರವಾದರೂ ಉಂಟು. ಮದ್ಗುರುವೇ=ನನ್ನ ಗುರುವೇ (ವಿಚಾರ) ನನ್ನ ಪುಣ್ಯೋದಯದಿಂದ ನನ್ನನ್ನು ಉದ್ಧರಿಸುವದಕ್ಕಾಗಿ ತನ್ನ ನಿರ್ಗುಣಲೀಲೆಯನ್ನು ಬಿಡು ನನ್ನಂತೇ ಸಗುಣಾಕಾರವನ್ನು ಧರಿಸಿ ಅವತರಿಸಿರುವದರಿಂದ ಆ ಸದ್ಗುರುವಿನ ಉಪಕಾರ ನಿವಾರಣಾರ್ಥ ಅಷ್ಟಾದಿ ಗುರುಸೇವಾನಿರತನಾಗಿ ಮುಮುಕ್ಷುವಾದ ಶಿಷ್ಯನು ಇರಬೇಕೆಂಬಭಿಪ್ರಾಯವು. ಶಿವಾಧವ ಗುರುವೇ=ಚಿಚ್ಛಕ್ತಿವಲ್ಲಭನಾದ ಗುರುವೇ (ವಿಚಾರ) ಶಕ್ತಿವಿಶಿಷ್ಟಾದ್ವೈತ ಶಿವಸ್ವರೂಪಿಯಾದ ಗುರು ಎಂಬ ಭಾವವುಳ್ಳ ಕವಿಯ ಮುದ್ರಿಕೆಯು.

ವೃತ್ತ =ಜಯಬಸವೇಶ ಭಕ್ತಜನಭಾಗ್ಯ ಶುಭೋದಯ ವೀರಶೈವನಿ।
ರ್ಣಯ ಪರಮಾವತಾರ ಶರಣಾಗತ ರಕ್ಷಕ ಚಿದ್ಘನಪ್ರಭಾ।
ಮಯ ಜಗದಾದಿವೇಶಿಕ ಪುರಾತನ ಪುಂಗವಶಾಂಭವೈಪುರಾ।
ಶ್ರಯ ಜಯ ಸೋಮನಾಥ ಜಯದೇವ ಜಯಾವಿರತಂ ಶಿವಾಧವಾ ॥೩॥

ಜಯಬಸವೇಶ=ಚಿನ್ನಾದ ಚಿದ್ಬಿಂದು ಚಿತ್ಕಲಾಸ್ವರೂಪನಾದ ಬಸವೇಶ್ವರನೇ ಸರ್ವೋತ್ಕೃಷ್ಟನಾಗು— (ಶಂಕಾ) ಶಿವನಪರಾವತಾರಿಯಾದ ದ್ವಿತೀಯ ಶಂಭುವೆಂದೆನಿಸಿ ಜಗದ್ಧಿತಾರ್ಥವಾದ ದಿವ್ಯಚೇಷ್ಟೆಯುಳ್ಳ ಮಹಾಮಹಿಮನೆನಿಸುವ ಬಸವೇಶ್ವರನಿಗೆ ಆಶೀರ್ವಾದರೂಪ ಮಂಗಲ ಮಾಡಿರುವದು ಅಸಂಭವವೆಂದರೆ (ಸಮಾಧಾನ) ಜೀವಿಗಳ ಕರ್ಮಾನುಸಾರವಾಗಿ ಸುಖದುಃಖರೂಪ ಸೃಷ್ಟ್ಯಾದಿ ಕಾರ್ಯಗಳನ್ನು ಮಾಡಿ ಅಜ್ಞರ ದೃಷ್ಟಿಗೆ ಶ್ರೇಷ್ಠತಮರೆಂದು ಕಾಣಿಸಿಕೊಳ್ಳುವ ಬ್ರಹ್ಮಾದಿದೇವತೆಗಳಿಗಿಂತಲೂ ಮೇಲಾದ ಎಲೈ ಬಸವೇಶ್ವರನೇ ನನ್ನ ಕರ್ಮಾನುಗುಣ್ಯವಾಗಿ ನನಗುಂಟಾಗಿರುವ ಭವಮಾಲೆಯ ದುಃಖವನ್ನು ನನ್ನಲ್ಲರ್ಧ ಘನವಾದ ಸಾಮರ್ಥ್ಯದಿಂದ ನಿವೃತ್ತಿಗೊಳಿಸಿ ತ್ರೈಮೂರ್ತಿಗಳಿಗೂ ಅಸಾಧ್ಯವಾದ ನಿನ್ನ ಸರ್ವೋತ್ಕರ್ಷವನ್ನು ನನ್ನಲ್ಲಿ ತೋರಿಸು ಎಂಬ ಅಭಿಪ್ರಾಯ ಉಳ್ಳದ್ದಾದುದರಿಂದ ಆಶೀರ್ವಾದರೂಪ ಮಂಗಲವು ಪೂಜ್ಯಪೂಜಕ ಭಾವಗಳಿಗೆ ಕೊರತೆಯನ್ನುಂಟುಮಾಡುವ ಅಸಂಬದ್ಧಾಲಾಪವೆಂದು ವಿವೇಕಿಗಳ ದೃಷ್ಟಿಗೆ ತೋರದೆಂಬ ಭಾವವು.

ಉದಾಹರಣೆ—ದರಿದ್ರನು ತನ್ನ ದೀನತೆಯನ್ನು ದೂರಮಾಡಿಕೊಳ್ಳುವದಕ್ಕೆ ಧನಿಕನ (ಸಾವುಕಾರನ) ಬಳಿಗೆ ಹೋಗಿ ನನಗೆ ನೀವು ಸಾವುಕಾರರಾಗಿರಿ ಎಂದು ಬೇಡಿಕೊಳ್ಳುವಂತೆ!

ಭಕ್ತಜನಭಾಗ್ಯ=ಸದ್ಭಕ್ತಿಶೀಲರ ಐಶ್ವರ್ಯಸ್ವರೂಪನೇ. (ವಿಚಾರ) ಸಚ್ಚಿದಾನಂದ ಸ್ವರೂಪಿಯಾದ ಬಸವೇಶ್ವರನಲ್ಲಿ ಯಾರ ಭಕ್ತಿಯು (ಅಸಾಧಾರಣ ಪ್ರೀತಿಯು) ನೆಲಸಿರುವದೋ ಅಂಥವರಿಗೆ ಅನಿಷ್ಟ ನಿವೃತ್ತಿ ಇಷ್ಟಾರ್ಥಪ್ರಾಪ್ತಿಯನ್ನುಂಟುಮಾಡುವ

ಸಂಪತ್ತಿಯನ್ನೂ (ಜನಸಂಪತ್ತಿ, ಧನಸಂಪತ್ತಿ, ಭೂಸಂಪತ್ತಿ, ರಾಜಸಂಪತ್ತಿ, ಯಜ್ಞಾದಿ ಸಕಾಮಕರ್ಮ ಫಲರೂಪ ಸಂಪತ್ತಿ ಮುಂತಾದ ಇಹಪರ ಲೌಕಿಕ ಸಂಪತ್ತಿಗಳನ್ನೂ ಸಕಲ ದುಃಖ ನಿವೃತ್ತಿ ಪರಮಾನಂದ ಪ್ರಾಪ್ತಿರೂಪವಾದ ಪಾರಮಾರ್ಥಿಕ ಸಂಪತ್ತಿಯನ್ನೂ) ಸಹಜವಾಗಿ ಕೊಡುವಲ್ಲಿ ಸಮರ್ಥನಾದ ಮೂರ್ತಿಯೆಂಬ ಅಭಿಪ್ರಾಯವು.

ಶುಭೋದಯ=ಮಂಗಲೋತ್ಪತ್ತಿಗೆ ಕಾರಣನೇ (ವಿಚಾರ) ಬಸವೇಶ್ವರನ ಉದಯವೇ ಮಂಗಲರೂಪಸಂಪತ್ತಿನ ಉದಯವು ಅಂದರೆ ಮನಸ್ಸಿನಲ್ಲಿ ಬಸವೇಶ್ವರನ ಮೂರ್ತಿ ಧ್ಯಾನ ಮಾತಿನಲ್ಲಿ ಬಸವೇಶ್ವರನ ನಾಮೋಚ್ಚರಣ ತನುವಿನಲ್ಲಿ ಬಸವರೂಪ ಗುರುಲಿಂಗ ಜಂಗಮದ ಆರ್ಚನವೆಂಬ ತ್ರಿವಿಧರೂಪ ಬಸವನ ಉದಯವು, ಸರ್ವ ಅಮಂಗಲಗಳನ್ನು ನಷ್ಟಮಾಡಿ ಸುಮಂಗಲಗಳನ್ನುಂಟುಮಾಡಿ ಕೊಡುವದು. ಈ ಉಕ್ತಿಯು ಸಂಪತ್ತಿನ ಸಾಧನವನ್ನು ಬೋಧಿಸುವದೆಂಬ ಭಾವವು. ಉದಾಹರಣೆ— ಸೂರ್ಯೋದಯವೇ ಪ್ರಕಾಶದ ಉದಯವೆನಿಸಿದಂತೆ ತನ್ನಲ್ಲಿ ಬಸವೇಶ್ವರನ ಉದಯವೇ ಮಂಗಲೋದಯವೆನಿಸುವದು.

ವೀರಶೈವ ನಿರ್ಣಯ ಪರಮಾವತಾರ=ವೀರಶೈವ ಮತ ಸಿದ್ಧಾಂತಸ್ವರೂಪನೇ (ವಿಚಾರ) ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತವೆಂತಲೂ ಷಟ್‌ಸ್ಥಲ ಸಿದ್ಧಾಂತವೆಂತಲೂ ಉಕ್ತವಾಗಿರುವದರಿಂದ ಸತ್ಕ್ರಿಯಾ ಸಮ್ಯಜ್ಞಾನಸಹಿತ ಷಟ್‌ಸ್ಥಲಾತ್ಮಕ ಸಿದ್ಧಾಂತ ಸ್ವರೂಪನೇ ಬಸವೇಶ್ವರನೆಂಬಭಿಪ್ರಾಯವು. ಪರಮಾವತಾರ=ಉತ್ಕೃಷ್ಟವಾದ ಅವತಾರ ಉಳ್ಳಾತನೇ, (ವಿಚಾರ) ದ್ವಿತೀಯ ಶಂಭುವೆನಿಸಿದ ನಂದೀಶ್ವರನು ಜಗತ್ತನ್ನು ಉದ್ಧರಿಸುವದಕ್ಕೋಸುಗ ಮನುಷ್ಯಾಕಾರವನ್ನು ಧರಿಸಿ ಮಲಮಾಯಾ ಕರ್ಮಗಳ ತೊಡಕಿಲ್ಲದೆ ಬಸವೇಶ್ವರನೆಂಬ ನಾಮವನ್ನಾಂತು ಭೂಮಿಗಿಳಿದನೆಂಬ ಭಾವವು. ಶರಣಾಗತರರಕ್ಷಕ=ಮರೆ ಹೊಕ್ಕವರನ್ನು ಕಾಪಾಡುವವನೇ, (ವಿಚಾರ) ಶುದ್ಧಾಂತಃಕರಣರಾಗಿ ಸದ್ಭಕ್ತಿಯಿಂದ ಮರೆಹೊಕ್ಕವರೆಲ್ಲರನ್ನೂ ಬಿಡದೇ ರಕ್ಷಿಸುವವನು. ಮನುಷ್ಯರಿಗೆ ತಮ್ಮನ್ನು ಮರೆ ಹೊಕ್ಕವರ ರಕ್ಷಿಸುವಲ್ಲಿ ಅಳತೆಯುಂಟು ಮತ್ತು ಉದಾಸೀನಶದಿ ದುರ್ಭಾವಗಳೂ ಬರುವದುಂಟು. ಹಾಗೆ ಬಸವೇಶ್ವರನಿಗೆ ಉದಾಸೀನವೂ ಇಷ್ಟೇ ಜನರನ್ನು ಕಾಪಾಡುವೆನೆಂಬ ನಿರ್ಬಂಧವೂ ಇಲ್ಲವೆಂಬ ಭಾವವು. ಚಿದ್ಘನ ಪ್ರಭಾಮಯ=ಜ್ಞಾನದ ಅಧಿಕವಾದ ಪ್ರಕಾಶದಿಂದ ವ್ಯಾಪಕನಾದಾತನೇ (ವಿಚಾರ) ಪರಮಾತ್ಮನು ಸಾಧಕರಲ್ಲಿ ಅಣುರೂಪನಾಗಿಯೂ ಸಿದ್ಧರಲ್ಲಿ ಘನರೂಪನಾಗಿಯೂ ವಾಸಿಸುವನು. ಆದ್ದರಿಂದ ಸಿದ್ಧನಾದ ಬಸವೇಶ್ವರ ದೇವರ ಹೃದಯದಲ್ಲಿ ವ್ಯಾಪಕ (ಘನ) ರೂಪದಿಂದ ವಾಸಿಸುವನೆಂಬಭಿಪ್ರಾಯವು.

ಜಗದಾದಿದೇಶಿಕ=ಜಗತ್ತಿಗೆ ಮೊದಲಿಗನಾದ ಗುರುವೇ (ವಿಚಾರ) “ಶಂಭುಲಿಂಗವಾದಿಯಾಗಿ ನಿರಾಭಾರಿ ದೇಶಿಕೋತ್ತಮಪರ್ಯಂತ ಮಹಾಗುರು ಪರಂ

ಪರೆಗೆ" ಎಂಬು ಶ್ರೀ ನಿಜಗುಣ ಶಿವಯೋಗಿಗಳ ಉಕ್ತಿಯಂತೆ*ಶಂಭುಲಿಂಗ ಸ್ವರೂಪಿಯಾದ ಬಸವೇಶ್ವರನೇ ಆದಿಗುರುವೆಂಬ ತಾತ್ಪರ್ಯವು.

ಪುರಾತನ ಪುಂಗವ = ಪ್ರಮಥರಲ್ಲಿ ಶ್ರೇಷ್ಠನೇ ಅಂದರೆ ಪ್ರಮಥಾಗ್ರಗಣ್ಯನಾದ ನಂದೀಶ್ವರರೂಪನೆಂಬುದರ್ಥವು. ಶಾಂಭವೈಪುರಾಶ್ರಯ = ಶಂಭುಸಂಬಂಧವಾದ ಜ್ಞಾನಾಕಾಶವೆಂಬ ಪಟ್ಟಣವೇ ಆಶ್ರಯವಾಗಿಯುಳ್ಳಾತನೇ, (ಶಂಕಾ):

ಅಂತರಂಗದ ಚಿದಾಕಾಶದಲ್ಲಿ ಆಶ್ರಯಿಸುವಾತನೆಂದು ಹೇಳಿದರೆ ಬಸವೇಶ್ವರನು ಮಂತ್ರಿಯ ಪದತ್ವವನ್ನೂ ಗುರುಲಿಂಗ ಜಂಗಮದಾಸೋಹವನ್ನೂ ಮಾಡುತ್ತ ಮನುಷ್ಯರಂತೆ ವರ್ತಿಸುತ್ತಿದ್ದನು. ಆದ್ದರಿಂದ ಸದಾ ದಹರಾಕಾಶದಲ್ಲಿ ವಾಸಮಾಡುವನೆಂಬ ಮಾತು ಹೇಗೆ ಸಂಬಂಧಿಸುವದು ಅಂದರೆ....(ಸಮಾಧಾನ)....

ಅಷ್ಟಾವರಣವು ಚಿದಾಕಾರ ಸ್ವರೂಪವೇ ಮತ್ತು ಅಷ್ಟಾವರಣವನ್ನು ಕುರಿತು ಭಕ್ತನು ಆಚರಿಸುವ ಸತ್ಕ್ರಿಯ ಸಮ್ಯಜ್ಞಾನವೂ ಗುರುಲಿಂಗ ಜಂಗಮದ ದೆಸೆಯಿಂದ ಮಾಡತಕ್ಕ ಕೃಷಿವಾಣಿಜ್ಯ ಸೇವಾದಿ ಸತ್ಕಾಯಕಗಳೆಲ್ಲವೂ ಚಿದಾಕಾಶ (ಬಿಂದ್ವಾಕಾಶ) ಸ್ವರೂಪವೇ ಅಂದರೆ ಶಿವಸ್ವರೂಪವೇ ಆಗಿರುವದರಿಂದ ಬಸವೇಶ್ವರದೇವರು ಚಿದಾಕಾಶದಲ್ಲಿ ವಾಸಿಸುವರೆಂದು ಬೋಧಿಸಿರುವದು ಸಮಂಜಸವಿರುವದೆಂಬ ಭಾವವು. ಉದಾಹರಣೆ ...ಒಬ್ಬ ಸೇವಕನು ಧನಿಯ ಇಚ್ಛಾನುಸಾರ ಕೆಲಸವನ್ನು ಮಾಡುತ್ತ ತನ್ನ ಮನೆಯಲ್ಲಿದ್ದಾಗ್ಯೂ ನಾನು ಆ ಧನಿಕನ ಮನೆಯಲ್ಲಿರುವೆನೆಂದು ಹೇಳುವಂತೆ—

ಬಸವೇಶ್ವರನು ಸ್ವಾರ್ಥಿಯನಿಸದೇ ಶಿವಾಜ್ಞೆಗನುಸಾರವಾಗಿ ಮಂತ್ರಿಯ ಕಾರ್ಯವನ್ನು ಮಾಡಿದರೂ ದಹರಾಕಾಶಗತ ಶಿವಸಂಬಂಧಿ ಸೇವೆಯಲ್ಲಿ ನಿರತನಾಗಿದ್ದನೆಂದು ತಿಳಿಯತಕ್ಕದ್ದು. ಮತ್ತು ಸತ್ಯವನ್ನುದ್ದೇಶಿಸಿ ಹೊಲೆಯನಿಗಾಳಾದ ಹರಿಶ್ಚಂದ್ರನು ಆ ಹೊಲೆಯನಾಳೆನಿಸದೇ ಸತ್ಯಶೀಲನೆನಿಸಿದಂತೆ (ಸತ್ಯತೆಯ ಆಳೆನಿಸಿದಂತೆ) ಬಸವೇಶ್ವರನು ಮಂತ್ರಿಯಾಗಿದ್ದರೂ ಜ್ಞಾನಾಕಾಶದಲ್ಲಿ ವಾಸಮಾಡಿದ್ದನೆಂದು ತಿಳಿಯುವದು. ಜಯ ಸೋಮನಾಥ= ಬಿಂದುಶಕ್ತಿಗೆ (ವಿಮರ್ಶಶಕ್ತಿಗೆ ಅಥವಾ ಕುಂಡಲಿಗೆ) ಪ್ರಭುವೇ ಸರ್ವೋತ್ಕೃಷ್ಟನಾಗು ಜಯದೇವ=ಎಲೈ ಒಡೆಯನೇ ಸರ್ವೋತ್ತಮನಾಗು. ಅವಿರತಂ ಜಯ= ನನ್ನನ್ನು ಉದ್ಧರಿಸಿ ಯಾವಾಗಲೂ ಜಯಶೀಲನಾಗು. (ವಿಚಾರ) ನನ್ನನ್ನು ಕಾಡುತ್ತಿರುವ ಕಾಮಕಾಲಮಾಯೆಗಳನ್ನು ಸೋಲಿಸಿ ಸರ್ವೋತ್ಕೃಷ್ಟನಾಗೆಂಬ ಭಾವವು.

ವೃತ್ತ॥ ಬಸವಕುಮಾರಭಾಕ್ತಿಕಪುರಸ್ಸರ ಷಟ್‌ಸ್ಥಲಧೀರ ಚಿತ್ಸುಧಾ।
ರಸಭರಿತಾಂತರಂಗ ಸಕಲಾಕ್ಷ ಸಮರ್ಪಿತ ಲಿಂಗತತ್ಪ್ರಸಾ॥

---

* ಅವಕಾರಕ್ಕೂ ಮೂಲರೂಪಕ್ಕೂ ಭೇದಕಲ್ಪನೆಗೆ ಅವಕಾಶವಿಲ್ಲದ್ದರಿಂದ.

ದುಸುಖವಿಶೇಷತೃಪ್ತ ಶಿವಯೋಗಪಸ್ಯೈಕಸಮಾಪ್ತನೀನೆ ರ |
ಕ್ಷಿಸುಗಡ ಜೀಯ ಚನ್ನಬಸವಯ್ಯ ಕೃಪಾನಿಧಿಯೋ ಶಿವಾಧವಾ ॥ ೩ ॥

ಬಸವಕುಮಾರ=ಬಸವೇಶ್ವರನ ಪುತ್ರನೇ ಅಂದರೆ ಚಿದಾಕಾಶಾತ್ಮಕ ಚಿನ್ನಾದ ಚಿದ್ಬಿಂದು ಚಿತ್ಕಲಾಸ್ವರೂಪ ಪ್ರಸಾದದಿಂದುದ್ಭವಿಸಿದಾತನೇ ; (ವಿಚಾರ) ಈ ಬಸವ ಕುಮಾರತ್ವವು ಜನ್ಮರೂಪ ಸಂಸ್ಕಾರರೂಪ ಕ್ರಿಯಾರೂಪ ಯೋಗರೂಪ ಅವತಾರ ರೂಪ ವೃತ್ತಿರೂಪವೆಂದು ಆರು ಪ್ರಕಾರವೆಂದು ನಿಶ್ಚಯಿಸಲ್ಪಟ್ಟಿರುವದವುಗಳಲ್ಲಿ (೧) ಬಸವಕುಮಾರ–ತ್ರಿವಿಧಚಿದ್ರೂಪ ಪ್ರಣವಗಳಿಂದುಂಟಾದ ಕಕ್ಕಯ್ಯಗಳ ಮಿಕ್ಕ ಪ್ರಸಾದವನ್ನು ಅವತಾರ ಸ್ವರೂಪನಾದ ಬಸವೇಶ್ವರನು ಆವಧಾನದಿಂದ (ಎಚ್ಚರಿಕೆ ಯಿಂದ) ತಂದು ಕೊಡಲು ಅದರಿಂದ ಜನಿಸಿದವನು ಈ ಕುಮಾರತ್ವವು ಜನ್ಮರೂಪ ವಾದದ್ದು. (೨) ಬಸವಕುಮಾರ=ಪರಶಿವನ ಅಪರಾವತಾರಿಯಾದ ಬಸವೇಶ್ವರನು ಆದಿಗುರು ತತ್ವದೀಕ್ಷೆಯನ್ನೆಸಗಲು ಪುನರ್ಜಾತನಾದನು. ಈ ಕುಮಾರತ್ವವು ಸಂಸ್ಕಾರರೂಪವಾದದ್ದು (ಸದ್ಯೋನಿರ್ವಾಣ ಅಸದ್ಯೋನಿರ್ವಾಣ ದೀಕ್ಷೆಗಳ ವಿವೇಚನೆ ಮಾಡತಕ್ಕದ್ದು) (೩) ಬಸವಕುಮಾರ=ಬಸವ-ಚಿನ್ನಾದ ಚಿದ್ಬಿಂದು ಚಿತ್ಕಲಾತ್ಮಕ ಗುರುತ್ರಯ ಲಿಂಗತ್ರಯ ಜಂಗಮತ್ರಯಗಳ ಪ್ರಸಾದದಿಂದ-ಕುಮಾರ–ಕು=ಕಾಮ ಕಾಲಮಾಯಾಮಯವಾದ ದುರ್ಮಾರ್ಗಗಳನ್ನು–ಮಾರ=ಹೊಡೆದೋಡಿಸಿದವನು. ಇದು ಕ್ರಿಯಾರೂಪವಾದ ಕುಮಾರತ್ವವು (೪) ಬಸವಕುಮಾರ = ಚಿನ್ನಾದ ಚಿದ್ಬಿಂದು ಚಿತ್ಕಲಾತ್ಮಕತಾರಕ ಬ್ರಹ್ಮವನ್ನು ಚಿದ್ರೂಪಕಾರಕತ್ರಯಾ (ಲಕ್ಷ್ಯ ತ್ರಯ)ನುಸಂಧಾನರೂಪಸಾಧನದಿಂದ ಸಾಕ್ಷಾತ್ಕಾರಮಾಡಿಕೊಂಡು ಕುತ್ಸಿತವಾದ ಭವಮಾಲಿಯನ್ನು ಧಿಕ್ಕರಿಸಿದವನು. (ಕು=ಕುತ್ಸಿತವಾದದ್ದನ್ನು ಮಾರ=ಹೊಡೆ ದವನು) ಇದು ಯೋಗರೂಪ ಕುಮಾರತ್ವ (೫) ಬಸವಕುಮಾರ. ಬಸವ-ಶಿವನ ಚಿದ್ಧರ್ಮರೂಪು. ಈ ಚಿದ್ಧರ್ಮರೂಪನಾದ ಪರಶಿವನ ಕುಮಾರ ಪುತ್ರನಾದ ಸ್ಕಂದನು ಪಂಚವರ್ಣಸೂತ್ರಾಧಿಪತಿಗಳಾದ ವಿಶ್ವಾರಾಧ್ಯರ ಗೋತ್ರಾಧಿಪತಿಯು. ಈತನ ಅಪರಾವತಾರನೇ ಚನ್ನಬಸವೇಶ್ವರನು. (ಇದು ಅವತಾರ ರೂಪಕುಮಾರತ್ವ) (೬) ಬಸವಕುಮಾರ ಬಸವ ಅವಾಗ್ಜ ಪಸ್ವರೂಪ ಮೂಲಪ್ರಣವವು ಕುಮಾರ–ಷಣ್ಮುಖ ಸ್ವಾಮಿಯು ಅರ್ಥಾತ್ ಬಸವಕುಮಾರ ಅಂದರೆ ಅವಾಗ್ಜ ಪ್ರಣವದಿಂದುಂಟಾದ ಷಣ್ಮುಖಸ್ವಾಮಿಯ ಅವತಾರಸ್ವರೂಪನಾದ ಚನ್ನಬಸವನೆಂಬಭಿಪ್ರಾಯವು. (ವಿಶೇಷ ವಿಚಾರ) ಕಾರಣರೂಪವಾದ ಅವಾಗ್ಜಪ್ರಣವದಿಂದುಂಟಾದ ಚಿನ್ನಾದ ಚಿದ್ಬಿಂದು ಚಿತ್ಕಲಾಸ್ವರೂಪ ಸೂಕ್ಷ್ಮಪ್ರಣವತ್ರಯಗಳು, ಇವುಗಳಿಂದುಂಟಾದ ಸ್ಥೂಲ ಅಂಗ ಷಟ್ಪ್ರಣವ ಲಿಂಗಷಟ್ಪ್ರಣವಗಳು, ಈ ಪ್ರಣವಷಟ್ಕದಿಂದ ಭಗವದಾತ್ಮಕ (ಪರಶಿ ವಾತ್ಮಕ) ಷಣ್ಮುಖರೂಪಹಸ್ತಸ್ಪರ್ಶದಿಂದ ಭೂತಾಂಶವಳಿದು ಪೂತಾಂಶದಿಂದ ಜನಿಸಿದ ಪ್ರಸಾದರೂಪವೇ ಚನ್ನಬಸವನೆಂದು ತಾತ್ಪರ್ಯ.

ಕಾರಣರೂಪ ಅವಾಗ್ಜ ಪ್ರಣವದಲ್ಲಿ ಷಡಕ್ಷರೀ ಸಮಷ್ಟಿರೂಪ ಮೂಲಪ್ರಣವವೂ ಸೂಕ್ಷ್ಮರೂಪ ಚಿನ್ನಾದ ಚಿದ್ಬಿಂದು ಚಿತ್ಕಲಾ ಪ್ರಣವಗಳಲ್ಲಿ ನಾದ ಬಿಂದು ಕಲಾ ಪ್ರಣವತ್ರಯಗಳೂ ಸಂಭವಪ್ರಮಾಣದಿಂದ ಮಹಾ ಪ್ರಕಾಶದಲ್ಲಿ ಗೌಣ (ಅಲ್ಪ) ಪ್ರಕಾಶವು ಸಂಬಂಧವೆನಿಸಿದ್ದಂತೆ ಸಂಬಂಧಿಸಿರುವವು.

ಶರಣರ ಹಸ್ತವೇ ಷಟ್‌ಸ್ಥಲ ಸ್ವರೂಪಪ್ರಣವಗಳ ಸಂಬಂಧದಿಂದ ಶಿವಹಸ್ತ ವೆಂದರೆ ಷಣ್ಮುಖ ಸ್ವರೂಪವೆನಿಸುವದು. ಆ ಷಣ್ಮುಖಸ್ವರೂಪ ಹಸ್ತಸ್ಪರ್ಶದಿಂದ ಪದಾರ್ಥದ ಭೂತಾಂಶವಳಿದು ಪ್ರೇತಾಂಶದಿಂದುಂಟಾದ ಪ್ರಸಾದವೇ ಚನ್ನಬಸವೇಶ್ವರ ನೆಂದು ತಿಳಿಯತಕ್ಕದ್ದು. ಇದು ಷಟ್‌ಸ್ಥಲರೂಪ ಷಡಕ್ಷರಿಯಿಂದುಂಟಾದ ಕುಮಾರ ತ್ವವು. ಈ ಕುಮಾರತ್ವವು ವೃತ್ತಿರೂಪವಾದದ್ದು.

ಭಾಕ್ತಿಕಪುರಸ್ಸರ ಷಟ್‌ಸ್ಥಲಧೀರ=ಭಕ್ತಿಸ್ಥಲವೇ ಮೊದಲ್ಗೊಂಡು ಆರು ಸ್ಥಲ ಗಳ ಆಚರಣೆಯಲ್ಲಿ ವೀರನೆನಿಸಿದನು. (ಇಲ್ಲಿ ವಿಚಾರ)

ಚನ್ನಬಸವೇಶ್ವರದೇವರೊಬ್ಬರೇ ಷಟ್‌ಸ್ಥಲ ಪರಶಿವ ಸ್ವರೂಪಧೀರರೆನಿಸು ವರೋ? ಅಂದರೆ—ಷಟ್‌ಸ್ಥಲಾಚರಣೆಯನ್ನು ತಪ್ಪದೇ ನಡಿಸುವವರೆಲ್ಲರೂ ಧೀರರೇ, (ವೀರಶೈವರೇ) ಅವರೆಲ್ಲರೂ ಚನ್ನಬಸವೇಶ್ವರದೇವರ ಸ್ವರೂಪಿಗಳೆನಿಸುವರು. "ಶಿವ ನೊಳಗೆ ವಿಶ್ವಾಸ ಶಿವನೊಳಗೆ ನಂಬುಗೆಯು ಶಿವನೊಳಗೆ ಮೋಹವಿರೆ ತಾನೆ ಶಿವನು" ಎಂಬ ಪುರಾತನೋಕ್ತಿಯಂತೆ ಶಿವನಲ್ಲಿ ವಿಶ್ವಾಸಾದಿಗಳನ್ನಿಟ್ಟವರೆಲ್ಲರೂ ಶಿವಸ್ವರೂಪಿ ಗಳಾದ್ದರಿಂದ ಚನ್ನಬಸವೇಶ್ವರದೇವರೂ ಇನ್ನುಳಿದ ಪ್ರಮಥರೂ ಶಿವಸ್ವರೂಪಿಗಳೇ ಎಂದು ತಾತ್ಪರ್ಯವು. (ಧೀರರೆನ್ನುವಲ್ಲಿ ವಿಚಾರ) ಷಟ್‌ಸ್ಥಲಗಳಲ್ಲಿ ಒಂದಾದ ಭಕ್ತಿ ಸ್ಥಲದ ಆಚಾರವೆಂದರೆ ಭಕ್ತನು ತಾನು ಪಡೆದ ದ್ರವ್ಯವನ್ನು ಶಿವನಲ್ಲಿ ಭಕ್ತಿಯುಳ್ಳವರಿಗೆ ನಿರ್ವಂಚನೆಯಿಂದ ಕೊಡುವದೂ ಅವರಲ್ಲಿ ನಿರಹಂಕಾರದಿಂದ ವರ್ತಿಸುವದೂ ಭಕ್ತಿ ಸ್ಥಲವೆಂದು ಹೇಳಲ್ಪಡುವದು. ಇದು ಹೇಡಿಯ ಕೆಲಸವಲ್ಲ. "ಕೊಡುವದೂ, ಕಡಿಯುವದೂ, ವೀರನ ಕೆಲಸ" ಎಂದು ನಾಣ್ಣುಡಿಯುಂಟು.

ಆಶೆಯೊಂದನ್ನೇ ಬಿಟ್ಟವನಿಗೆ ವೀರನೆಂಬುವದು ಲೋಕಾನುಭವ ಪ್ರಸಿದ್ಧವು. ಆಶೆಯನ್ನು ಬಿಡುವದು ಸಾಮಾನ್ಯನ ಕೆಲಸವಲ್ಲ. ವೀರನ ಕೆಲಸವು. ಇದರಂತೆ ಅಹಂಕಾರವನ್ನು ಬಿಡುವದಕ್ಕೆ ಅತ್ಯಂತ ಶೂರತನವು ಬೇಕಾಗುತ್ತದೆ. ಭಕ್ತಿಸ್ಥಲದಲ್ಲಿ ಆಶಾ ಮತ್ತು ಅಹಂಕಾರ ಇವೆರಡನ್ನು ನಾಶಗೊಳಿಸುವದು ಕರ್ತವ್ಯವಾದ್ದರಿಂದ ಚನ್ನ ಬಸವೇಶ್ವರದೇವರಿಗೆ ಧೀರರೆಂದು ಹೇಳಿದ್ದು ಅತಿಶಯೋಕ್ತಿಯೆನಿಸದು. ಇದರಂತೆ ಮುಂದಿನ ಮಾಹೇಶ್ವರ ಸ್ಥಲವನ್ನು ವಿಚಾರಮಾಡಿದರೆ ಪರದ್ರವ್ಯಾಪೇಕ್ಷೆ ಪರಹಿಂಸೆ ಮೊದಲಾದ ದುರ್ಗುಣಗಳನ್ನು ದೂರದಲ್ಲಿಯೇ ಬಿಟ್ಟು ಏಕಲಿಂಗನಿಷ್ಠಾ (ಒಬ್ಬ ಶಿವ

ನಲ್ಲಿಯೇ ನಿಷ್ಠಾಪರನಾಗಿರಬೇಕೆಂದು ಹೇಳುವದು. "ಒಲ್ಲದಿಪ್ಪುದೇ ಶೀಲ; ಕೊಲ್ಲದಿಪ್ಪುದೇ ಧರ್ಮ"ವೆಂದು ಪುರಾತನ ಪ್ರವಚನ ಉಂಟು. ಮುಂದಿನ ಸ್ಥಲಗಳಲ್ಲಿ ಉತ್ತರೋತ್ತರ ಅಧಿಕವಾದ ವೀರತನವೇ ಕಂಡುಬರುವದರಿಂದ ಷಟ್‌ಸ್ಥಲಧೀರನೆಂದು ಬರೆದಿರುವದು ಸಯುಕ್ತಿಕವೆನಿಸುವದು.

"ತಿಳಿಯಲಹುದೊಲಿದು ಬಿಡಲಹುದು ಮೋಹಿಸದೆ ।
ಭೂತಳದೊಳಾನೆಂದಹಂಕರಿಸದಿಹುದರಿದು ।" ಎಂದು
"ಶತೇಷುಜಾಯತೇವೀರಃ ಸಹಸ್ರೇಷು ಚ ಪಂಡಿತಃ ।
ವಕ್ತಾದಶಸಹಸ್ರೇಷು ದಾತಾಭವತಿ ವಾ ನ ವಾ ॥

ಎಂದೂ ಪುರಾತನೋಕ್ತಿಗಳುಂಟು. ಚಿತ್ಸುಧಾರಸಭರಿತಾಂತರಂಗ= ಚಿದಾಕಾಶದಿಂದುಂಟಾದ ಅಮೃತರಸದಿಂದ ತುಂಬಿದ ಮನಸ್ಸುಳ್ಳಂಥ (ವಿಚಾರ) ಈ ಚಿದ್ರೂಪಾಮೃತರಸವು ಬಹಿರಂಗದಲ್ಲಿ ತುಂಬಿರುವದಿಲ್ಲವೇನು? ಅಂದರೆ ಬಹಿರಂಗವೂ ಚಿದ್ರೂಪಮಯವಾದದ್ದು. "ಮನ ಏವ ಮನುಷ್ಯಾಣಾಂಕಾರಣಂ" ಎಂಬಂತೆ ವೃಕ್ಷದ ಬೊಡ್ಡಿಗೆ ಹಾಕಿದ ನೀರು ಶಾಖೋಪಶಾಖೆಗಳಲ್ಲಿ ವ್ಯಾಪಿಸಿ ಪಲ್ಲವಿಸಿ ಫಲವೀಯುವಂತೆ ಶಿವಾಕಾರವಾದ ಮನಸ್ಸಿನ ಆನಂದಾಮೃತವು ಬಹಿರಂಗದ ಇಂದ್ರಿಯಾದಿಗಳಲ್ಲಿ ವ್ಯಾಪಕವಾಗಿರುವದೆಂಬ ಭಾವವು. ಸಕಲಾಕ್ಷಸಮರ್ಪಿತ ಲಿಂಗ=ಸರ್ವೇಂದ್ರಿಯಂಗಳನ್ನು ಅರ್ಪಿಸಲ್ಪಟ್ಟ ಇಷ್ಟಲಿಂಗವುಳ್ಳಂಥಾ (ವಿಚಾರ) ಎಲ್ಲ ಇಂದ್ರಿಯಂಗಳನ್ನು ಇಷ್ಟಲಿಂಗದ ಸೇವೆಯಲ್ಲಿ ತತ್ಪರತೆಯುಳ್ಳವುಗಳನ್ನಾಗಿ ಮಾಡಿದವನು. ಅರ್ಥಾತ್ ಚನ್ನಬಸವೇಶ್ವರದೇವರು ಅಥವಾ ಷಟ್‌ಸ್ಥಲ ಜ್ಞಾನಿಗಳು ಷಡಿಂದ್ರಿಯುಗಳನ್ನು ಲಿಂಗದಲ್ಲಿ ಸಂಬಂಧಿಸಿ ಆ ಲಿಂಗಮೂರ್ತಿಯನ್ನು ಆರು ಇಂದ್ರಿಯಂಗಳಲ್ಲಿ ಸಂಬಂಧ ಮಾಡಿದವರು. ಘಟದ ಬಹಿರ್ಭಾಗದಲ್ಲಿ ಸಂಬಂಧಿಸಿದ ಅಗ್ನಿಯಿಂದ ಘಟದೊಳಗಿರುವ ನೀರು ಕೂಡಿದ ಅಕ್ಕಿಯು ಪರಿಪಕ್ವ ಅನ್ನವಾದಂತೆ ಇಷ್ಟಲಿಂಗದಲ್ಲಿ ಸಂಬಂಧಿಸಿದ ಇಂದ್ರಿಯಂಗಳ ಸತ್ಕ್ರಿಯಾಪರಿಣಾಮವು ಅಂತರಂಗಕ್ಕೆ ವ್ಯಾಪಿಸುವದೆಂಬ ಭಾವವು. ಶಿವಶರಣರು ಭೂತಾಂಶವನ್ನು ಪೂತಾಂಶವನ್ನಾಗಿ ಮಾಡುವರೆಂಬ ಭಾಷಾಪ್ರಬಂಧದ (ವಚನಶಾಸ್ತ್ರ) ಅಭಿಪ್ರಾಯವಾದರೂ ಇದೇ ಇರುವದು.

ತತ್ಪ್ರಸಾದಸುಖ ವಿಶೇಷತೃಪ್ತ=ಆ ಲಿಂಗಪ್ರಸಾದ ಸುಖದಿಂದ ಹೆಚ್ಚಿನ ತೃಪ್ತಿಯನ್ನು ಹೊಂದಿದಂಥ. (ವಿಚಾರ)

ಶಿವಶರಣನು ಲಿಂಗಭೋಗೋಪಭೋಗಿಯಾಗಿರುವನು. ಹೇಗೆಂದರೆ ಸತ್ಕಾಯಕದಿಂದ ಸಂಪಾದಿಸಿ ತಯಾರಿಸಲ್ಪಟ್ಟ ಶುದ್ಧ ಪದಾರ್ಥವನ್ನು ವಿಶುದ್ಧಗೊಳಿಸಿ ಇಷ್ಟ ಪ್ರಾಣಭಾವ ಈ ಮೂರು ಲಿಂಗಗಳಿಗೆ ರೂಪು ರುಚಿ ತೃಪ್ತಿಗಳನ್ನು ಕ್ರಮವಾಗಿ ಅರ್ಪಿಸಿ ಆ ಅರ್ಪಿತ ಶಿವಸುಖಮಯವಾದ ಶುದ್ಧ ಸಿದ್ಧ ಪ್ರಸಿದ್ಧವೆಂಬ ಪ್ರಸಾದವನ್ನು ತಾನು ಅನುಭವಿಸುವದೇ ವಿಶೇಷ ತೃಪ್ತಿಯೆನಿಸುವದು. ವಿಶೇಷ ತೃಪ್ತನೆನ್ನುವಲ್ಲಿ–

ಲಿಂಗರೂಪಿಯಾದ ಶಿವನಿಗೆ ಪದಾರ್ಥಗಳಿಂದ ತೃಪ್ತಿಯಾಗುವದು ಶರಣನಿಗೆ ಶಿವಾನುಗ್ರಹರೂಪ ನಿತ್ಯಾನಂದಮಯವಾದ ಪ್ರಸಾದ ಸೇವನೆಯಿಂದ ವಿಶೇಷ ತೃಪ್ತಿಯಾಗುವದು

ನರರು ಮಾಯಾಮಯವಾದ ಪ್ರಾಕೃತ ಪದಾರ್ಥಗಳನ್ನು ಭುಂಜಿಸಿ ಕ್ಷಣಿಕಾನಂದವನ್ನು ಹೊಂದಿದ ತೃಪ್ತಿಗಿಂತಲೂ ಅತ್ಯಧಿಕವಾದ ಶಿವಪ್ರಸಾದ ತೃಪ್ತಿಯನ್ನು ಶರಣನು ಹೊಂದುವದರಿಂದ ವಿಶೇಷ ತೃಪ್ತನೆಂಬುದರ್ಥ. ಉದಾಹರಣೆ—

ಆನೆಯು ಅಕ್ಕಿಯನ್ನು ತಿಂದು ತೃಪ್ತಿಯನ್ನು ಹೊಂದುವದಕ್ಕಿಂತಲೂ ಅದೇ ಅಕ್ಕಿಯನ್ನೇ ಮನುಷ್ಯನು ಅಗ್ನಿಸಂಸಾರದಿಂದ ಪಾಕಮಾಡಿಕೊಂಡು ಭುಂಜಿಸುವದು ವಿಶೇಷ ತೃಪ್ತಿಯೆನಿಸಿದಂತೆ ಅಥವಾ ಆನೆಯಾಗಿ ಕಬ್ಬು ಮೇಯುವದಕ್ಕಿಂತ ಇರುವೆಯಾಗಿ ಸಕ್ಕರೆ ಮೇಯುವದು ಲೇಸೆಂಬ ಗಾದೆಯಂತೆ ಶರಣನ ವಿಶೇಷ ತೃಪ್ತಿ ಇರವದು. ಶಿವಯೋಗಪದೈಕ ಸಮಾಪ್ತ = ಶಿವಯೋಗ ಪದವನ್ನು ಮುಖ್ಯವಾಗಿ ಪೂರ್ಣಮಾಡಿದಂಥ. (ವಿಚಾರ)

ಅರಿವು, ಅನುಸಂಧಾನ, ವ್ರತ, ಆರ್ಚನೆಗಳೆಂಬ ಐದು ಅಂಗಗಳಿಂದ ಕೂಡಿದುದೇ ಶಿವಯೋಗವು. ಅಥವಾ ಮಂತ್ರಾದಿ ಪಂಚಯೋಗಗಳಿಂಗ ಕೂಡಿದ್ದು ಶಿವಯೋಗವು ಎಂಬದಾಗಿ ವೇದಾಗಮಗಳಲ್ಲಿ ಹೇಳಲ್ಪಟ್ಟಿರುವದರಿಂದ ಷಟ್‌ಸ್ಥಲ ಜ್ಞಾನಿಗಳಾದ ಶಿವಭಕ್ತರು. ಅಥವಾ ಚನ್ನಬಸವೇಶ್ವರದೇವರು. ಇಂಥ ಶಿವಯೋಗಾಂಗಗಳನ್ನೆಲ್ಲ ಸಾಂಗವಾಗಿ ಅರಿದು ಅರಿದಂತಾಚರಿಸಿ ಪೂರ್ಣಸಿದ್ಧತೆಯನ್ನು ಹೊಂದಿದವರೆಂಬ ಸಾರಾಂಶವು. ಕೃಪಾನಿಧಿಯೇ = ದಯಾಸಮುದ್ರನೇ—ಅಂದರೆ ಜಗತ್ತನ್ನು ಉದ್ಧರಿಸುವಲ್ಲಿ ಅ ಪಾ ರ ಪಾ ದ (ಅಳತೆಮೀರಿದ) ಕೃಪೆಯುಳ್ಳವನೆಂಬುದರ್ಥ. ಜೀಯಾ = ಒಡೆಯನೇ-ಅಂದರೆ ಮೇಲೆ ಹೇಳಿದ ಅಪಾರವಾದ ಕೃಪೆಯೇ ಮೊದಲಾದ ಚಿತ್ರಕಾಶ ಸ್ಥಿತಿಯೇ ಪೂರ್ಣಾಂಗಗೊಂಡ ಮಹಿಮನೇ ನಿಜವಾದ ಒಡೆಯನು. ಆತನೇ ಪೂಜ್ಯನೆಂಬ ಭಾವವು. ಚನ್ನಬಸವಯ್ಯ = ಚನ್ನಬಸವಯ್ಯನೆಂಬ ಹೆಸರುಳ್ಳ ಅಂದರೆ-ಚಿದ್ರೂಪದಿಂದುಂಟಾದ ಚಲ್ವಿಕೆಯುಳ್ಳಂಥ ಚಿನ್ನಾದ ಚಿದ್ಬಿಂದು ಚಿತ್ಕಲಾಧೀಶ್ವರನೆಂಬ ತಾತ್ಪರ್ಯವು. ನೀನೆ ರಕ್ಷಿಸುಗಡ = ನೀನೆ ಕಾಪಾಡು ಕಂಡೆಯಾ. (ಶಂಕಾ) ಇಲ್ಲಿ ಬಸವೇಶ್ವರ ಪ್ರಭುದೇವ ರೇಣುಕ ದಾರುಕ ಮುಂತಾದ ಪ್ರಮಥವರ್ಯರ ತಿರಸ್ಕಾರವು ಕಂಡುಬರುವದೆಂದರೆ-ಸಮಾಧಾನ-ನೀನೆ ಎಂದು ಹೇಳುವಲ್ಲಿ ಶಿವಸ್ವರೂಪಿ ಚನ್ನಬಸವೇಶ್ವರದೇವರೆಂದು ಅರ್ಥಗರ್ಭಿತವಾಗಿರುವದು ಅದು ಕಾರಣ ಎಲ್ಲ ಪ್ರಮಥರೂ ಶಿವಸ್ವರೂಪಿಗಳಾಗಿರುವದರಿಂದ ಪ್ರಮಥತಿರಸ್ಕಾರವಾಗದೆಂಬ ತಾತ್ಪರ್ಯವು. ಉದಾಹರಣೆ—ಚಿನ್ನವು ಆಭರಣತೆಯಿಂದ ಭೇದಾಭೇದವಾಗಿ ತೋರಿದಂತೆ ಚನ್ನಬಸವೇಶ್ವರನಿಗೂ ಮಿಕ್ಕ ಪ್ರಮಥರಿಗೂ ಅವತಾರರೂಪ ವ್ಯಕ್ತಿ ಮಾತ್ರದಿಂದ ಭೇದವೂ ಶಿವಸ್ವರೂಪ ನಿಜಸ್ಥಿತಿಯಿಂದ ಅಭೇದವೂ ಉಂಟೆಂಬಭಿಪ್ರಾಯವು.

———:·:———

# ಮಾಯಿದೇವ ವಿಭು

(ಕವಿ ಪರಿಚಯ)



ಶ್ರೀ ಜ. ಚ. ನಿ.

ಸಕಲರಿಗೆ ಪರಿಚಯವಿರುವ ಶತಕತ್ರಯ ಹೊತ್ತಗೆಯ ಕರ್ತ ಮುಗ್ಗಿಯ ಮಾಯಿದೇವ ವಿಭು. ಮಾಯಿದೇವ ಮಹಾನುಭಾವ; ಮಹಾಕವೀಶ್ವರ. ಆತನೂರು ಐಹೊಳೆ. ಅದನ್ನು ಬಳಕೆಯಲ್ಲಿ ಐವಳ್ಳಿ (ಪಂಚವಲ್ಲಿ) ಎಂದು ಕರೆಯುತ್ತಾರೆ. ಭಾಷೆಯಲ್ಲಿ ಅದನ್ನು 'ಐಪುರಿ–ಐಪುರ' ಎಂತಲೂ ಹೇಳುವರು. ಅದಿರುವುದು ವಿಜಾಪುರ ಜಿಲ್ಲೆಯಲ್ಲಿ; ಮಲಾಪಹಾರಿಣಿಯ ತೀರದಲ್ಲಿ! ಶಿವಯೋಗ ಮಂದಿರ ಸನಿಹದಲ್ಲಿ! ಈ ಊರು ಐತಿಹಾಸಿಕ ಪ್ರಸಿದ್ಧವಾಗಿದೆ. ಅನೇಕ ವೀರಶೈವ ಶಿವಾಚಾರ್ಯರಾಗಿ ಹೋದ ಪುಣ್ಯ ಇದಕ್ಕಿದೆ.

ಮಾಯಿದೇವ ವಿಭು ಉಪಮನ್ಯು ಶಿವಾಚಾರ್ಯರ ಅನುವಂಶಿಕನು. ಆತನ ಮನೆ ದೇವತೆ ಐಪುರೀಶ್ವರನಾದ ಸೋಮೇಶ್ವರ. ಸೋಮೇಶ್ವರನ ವರಪ್ರಸಾದವೇ ಕವಿಯ ಜನನಕ್ಕೆ ಮೂಲ. ಇದರಿಂದಾಗಿ ಆ ಸೋಮೇಶ್ವರನಲ್ಲಿ ಕವಿಗೆ ಅತ್ಯಂತಾದರ. ಭಕ್ತಿ ಅಪಾರ. ಮೂರನೆಯದಾದ ವೈರಾಗ್ಯಶತಕವು ಆತನಿಗಾಗಿ ಅಂಕಿತವಾಗಿದೆ. ಆ ಶತಕದ ಆರಂಭದ ಹತ್ತು ನುಡಿಗಳು ಸೋಮೇಶ್ವರನ ವರ್ಣನೆಗೆ ಮೀಸಲಾಗಿವೆ.

ವೀರಶಿವಾಗಮಗಳ ವಿಶಿಷ್ಟ ಸಂಸ್ಕಾರದಲ್ಲಿ ಬೆಳೆದು ಬೆಳಗಿದವನು ಮಾಯಿದೇವ ವಿಭು. ಶಿವಾಗಮಾನುಭವದಲ್ಲಿ ಶಿವಯೋಗ ಸಾಧನೆಯಲ್ಲಿ ಚೆನ್ನಾಗಿ ಪಳಗಿದಾತನು ಮಾಯಿದೇವ ವಿಭು. ಶಿವಾತ್ಮ ವಿದ್ಯಾಗುರು ಮುಗ್ಗಿಯ ಮಾಯಿದೇವ ವಿಭು. ಶಾಂತಿ ಕಳಾಗುರು ಶ್ರೀ ಮಾಯಿದೇವ ವಿಭು. ಶಿವಕವಿ ಶ್ರೀ ಮಾಯಿದೇವ. ಸಂಸ್ಕೃತ–

ಕರ್ನಾಟಕ ಭಾಷೆಗಳೆರಡರಲ್ಲಿಯೂ ಪಳಗಿದ ಪಂಡಿತ ಮಾಯಿದೇವ ವಿಭು. ಉಭಯ ಭಾಷಾಕವಿತ್ವ ಶಕ್ತಿ ಆವನಿಗಿತ್ತು. ಅಂತೆಯೇ ಆತನು 'ಶಿವಾನುಭವಸೂತ್ರ'ವನ್ನು ಸಂಸ್ಕೃತದಲ್ಲಿ 'ಶತಕತ್ರಯ'ವನ್ನು ಕನ್ನಡದಲ್ಲಿ ಬರೆದಿದಾನೆ. ಅವೆರಡೂ ಆತನ ದಿವ್ಯ ಕೃತಿಗಳು. ಅವೆರಡೇ ಸಾಕು ಆತನ ವ್ಯಕ್ತಿ ವೈಶಿಷ್ಟಕ್ಕೆ-ಕೀರ್ತಿ ಮಹೋನ್ನತಿಗೆ!

**ಕಾಲ :** ಕವಿಕಾಲ ವಿಜಯನಗರದ ಪ್ರೌಢದೇವರಾಯನ ಕಾಲ. ಹದಿನಯ್ದನೆಯ ಶತಮಾನ. ಅದು ವೀರಶೈವ ಸಾಹಿತ್ಯಕ್ರಾಂತಿಯ ಕಾಲ; ವಸಂತ ಕಾಲ. ಆ ವಸಂತಕಾಲದ ಕವಿ ಕೋಕಿಲ ಮಾಯಿದೇವ ವಿಭು. ತನ್ನದೇ ಆದ ಪ್ರತಿಭೆಯಿಂದ ಪಾಂಡಿತ್ಯದಿಂದ ಷಟ್‌ಸ್ಥಲ ತತ್ತ್ವವನ್ನು ಸರ್ವೋನ್ನತವಾಗಿ ಸುಂದರವಾಗಿ. ಸಾರವತ್ತಾಗಿ ಪ್ರತಿಪಾದಿಸಿದ ಪ್ರಭಾವಶಾಲಿ! ಈತನ ಆ ಪ್ರತಿಭೆಗೆ ಪ್ರೌಢದೇವರಾಯನು ಮನಮೆಚ್ಚಿದ್ದನು. ಮಾಯಿದೇವ ವಿಭುವನ್ನು ಮನ್ನಿಸಿದ್ದನು.

**ಕವಿನಾಮ :** ಮಾಯಿದೇವ ವಿಭು ಎಂಬುದು ಆತನ ಮೂಲ ನಾಮ. ಹೀಗಿದ್ದರೂ ಆತನನ್ನು ಮಾಯಿದೇವ, ಮಗ್ಗೆಯ ಮಾಯಿದೇವ ಎಂದು ಹೇಳುವ ವಾಡಿಕೆ ಬಂದಿದೆ. ಮೊದಲಿನವರಲ್ಲಿ ವಿಭು ಪದ ಬಿಟ್ಟುಹೋಗಿದ್ದರೆ ಎರಡನಯದರಲ್ಲಿ ಮಗ್ಗೆಯ ಪದ ಸೇರಿಕೊಂಡಿದೆ. ಮಗ್ಗೆ ಗ್ರಾಮವಾಸಿಯಾದ ಬಳಿಕ ಈ ಪದ ಇವರ ಹೆಸರಿಗೆ ಅಂಟಿಕೊಂಡು ಬಂತೆಂದು ಹೇಳುತ್ತಾರೆ. ಅಥವಾ ಇವರ ಮಠದ ಹೆಸರು 'ಮಗ್ಗೆಯ ಮಠ' ಎಂದಿದ್ದ ಕಾರಣ ಈ ಹೆಸರು ಬಂದಿದೆಯೆಂದು ಹೇಳುತ್ತಾರೆ. ಆದರೆ ಆ ಕವಿಯೆ ಹೇಳಿಕೊಂಡಿರುವ ಶತಕತ್ರಯಗಳಲ್ಲಿ "ಪ್ರಸಾದಾಕ್ಷರಾಸ್ಪದವಾಕ್ ಶ್ರೀ ಉಳ್ಳಾತನು **ಮಾಯಿದೇವ ವಿಭು**" ಎಂದು ಹೇಳಿದಾನೆ. ಇದರಿಂದ ಇದುವೇ ಕವಿಯ ಮುಖ್ಯ ನಾಮ.

**ಕೀರ್ತಿ :** ಕವಿ ಜೀವಿತಕಾಲದಲ್ಲಿಯೆ ಖ್ಯಾತಿ ಕೀರ್ತಿಗಳನ್ನು ಗಳಿಸಿದ್ದನು. ವಿಜಯನಗರದ ಅರಸನಾದ ಪ್ರೌಢದೇವನು ಇವನನ್ನು ರಾಜಸಭೆಯಲ್ಲಿ ಮನ್ನಿಸಿದನು. ಆ ಬಳಿಕ ೧೬ ನೆಯ ಶತಮಾನದಲ್ಲಿ ವಿರೂಪಾಕ್ಷ ಪಂಡಿತರು, ೧೭ ನೆಯ ಶತಕದಲ್ಲಿ ಶಾಂತಲಿಂಗದೇಶಿಕರು, ಸಿದ್ಧನಂಜೇಶ್ವರರು, ತೋಂಟದ ಸಿದ್ಧಲಿಂಗೇಶ್ವರರು ಇವರನ್ನು ಬಗೆಬಗೆಯಾಗಿ ಬಣ್ಣಿಸಿದ್ದಾರೆ.

'ಶಿವಭಕ್ತಸಂತತಿ ಶಿಖಾಮಣಿ'ಯೆಂದು, 'ಸಕಲಾಗಮ ಮಂಗಳ ನೆಲೆ' ಎಂದು, 'ಕುಮತ ವಿಭೇದಿ ಷಟ್‌ಸ್ಥಲ ಬ್ರಹ್ಮವಾದಿ' ಎಂದು, 'ಲಿಂಗವಂತರಿಗೆ ನರಕವಿಲ್ಲೆಂದು ಸಾರಿ ವಿದ್ಯಾನಗರಿಯಲ್ಲಿ ಸೆರೆಳಿಲ್ಲದ ಜಯಸ್ತಂಭಮಂ ನಿಲಿಸಿದಂ' ಎಂದು ಕವಿಗಳು ಕಲಾವಿದ ರಾಜರು ಕೊಂಡಾಡಿದರು. ಅಲ್ಲದೆ ಕಲ್ಯಾಣದ, ಕಳಾವಿಳಾಸ, ಚಿಕ್ಕಳಾಭಾಸ, ಮಂಜುಳ ಭಾಷಾವಿಳಾಸ, ಸಿದ್ಧಾಂತ ಸ್ಥಾಪನಾಚಾರ್ಯ, ಶಿವಯೋಗಿ ಜನ

ಮನೋನಿಲಯ, ಷಟ್‌ಸ್ಥಲ ಲಿಂಗಾಗಸಂಗ, ಭಕ್ತಿಭರಿತಾಂತರಂಗ, ವಾದಬೋಧ ಪ್ರವೀಣ, ವೀರಶೈವ ಸಿದ್ಧಾಂತಬೋಧಪಯಃ ಪಾರವಾರಪಾರೀಣ, ಪ್ರಭು, ವಿಭು, ಇತ್ಯಾದಿ ಬಿರುದಾಂಕಿತನು ಮಾಯದೇವ ವಿಭು. ಇವುಗಳಿಂದ ಈ ಕವಿಯ ಪ್ರಜ್ಞಾನ-ಪ್ರಭಾವಗಳು ವ್ಯಕ್ತವಾಗುತ್ತವೆ.

**ಕೃತಿಗಳು :** ಅನುಭವಸೂತ್ರ, ಏಕೋತ್ತರ ಷಟ್‌ಸ್ಥಲ-ಷಟ್ಪದಿ, ಪ್ರಭು ಗೀತೆ, ಮಗ್ಗೆಯ ಮಾಯಿದೇವ ವಚನ, ಶತಕತ್ರಯ, ಷಟ್‌ಸ್ಥಲಗದ್ಯ ಎಂಬುದಾಗಿ ಆರು ಗ್ರಂಥಗಳನ್ನು ಬರೆದಿದಾರೆ. ಇವುಗಳಲ್ಲಿ ಅನುಭವಸೂತ್ರ-ಶತಕತ್ರಯ ಗ್ರಂಥ ಗಳೆರಡೂ ಗಣ್ಯವಾಗಿವೆ; ಗಮನಾರ್ಹವಾಗಿವೆ. ಅದರಲ್ಲಿಯೂ ಕನ್ನಡ ನಾಡಿದಲ್ಲಿ ವೀರಶೈವರಲ್ಲಿ ಶತಕತ್ರಯದ ವಾಚನಾಭ್ಯಾಸ ವಿಶೇಷವಾಗಿದೆ. ಕೃತಿಯೂ ಉತ್ತಮ ವಾಗಿದೆ. ಅನೇಕರ ಮನಸ್ಸನ್ನು ಆಕರ್ಷಿಸಿದೆ. ತತ್ತ್ವಪ್ರತಿಪಾದಕವಾಗಿದೆ. ಅಂತೆಯೇ ಲಿಂ. ಶ್ರೀ ಹಾನಗಲ್ ಕುಮಾರ ಶ್ರೀಗಳವರೂ ಸಹ ಆ ಶತಕತ್ರಯ ಗ್ರಂಥಾಕರ್ಷಿತ ರಾಗಿ ಅದಕ್ಕೆ ವಿಶದವಾದ ಅನುಭವಪೂರ್ಣವಾದ ವ್ಯಾಖ್ಯಾನ ಬರೆಯಲು ಮನಸ್ಸು ಮಾಡಿ ಮೊದಲ್ಮಾಡಿ ಏಳೆಂಟು ಶ್ಲೋಕಗಳಿಗೆ ಮಾತ್ರ ಬರೆದಿರಿಸಿದಾರೆ. ಅದನ್ನು ಪೂಜ್ಯರೂ ಭಾಷ್ಯಾಚಾರ್ಯರೂ ಆದ ಶ್ರೀ ಸದಾಶಿವ ಶಿವಾಚಾರ್ಯರು ಸಂಗ್ರಹಿಸಿದ್ದಾರೆ. ಅದನ್ನು ನಮ್ಮ ವಶಕ್ಕೆ ಕೊಟ್ಟರು. ಅದು ಬಹು ಸೊಗಸಾಗಿ ಇರುವುದರಿಂದ ಅದರಲ್ಲಿ ಆ ಪೂಜ್ಯ ಹಾನಗಲ್ ಶ್ರೀಗಳವರ ಅನುಭವ ಅಖಂಡವಾಗಿ ಹರಿದು ಬಂದುದ ರಿಂದ ಮೊದಲಿನ ಮೂರು ಶ್ಲೋಕಗಳ ವ್ಯಾಖ್ಯಾನವನ್ನು ಎತ್ತಿಕೊಂಡು ಇಲ್ಲಿ ಪ್ರಕಟಿಸಲಾಗಿದೆ. ಇವು ತತ್ತ್ವಾಭ್ಯಾಸಿಗಳಿಗೆ ಶತಕತ್ರಯಾಭ್ಯಾಸಿಗಳಿಗೆ ತುಂಬಾ ಪ್ರಯೋಜನಕಾರಿಯಾಗಿದ್ದು ನವಪ್ರಭಾವಕಾರಿಯಾಗಿದ್ದು ಆ ಪೂಜ್ಯ ಶ್ರೀಗಳವರ ಅನುಭವದ ಅಗಾಧ ನೀಲವನ್ನು ತೋರುವಂತಿವೆ.

——::——

# ರವೀಂದ್ರರ ರಾಜಕೀಯ ವಿಚಾರಗಳು



**ಶ್ರೀ ಎಸ್. ಎಸ್. ಒಡೆಯರ,** ಎಂ.ಎ., ಎಲ್‌ಎಲ್.ಬಿ.,
ರಜಿಸ್ಟ್ರಾರ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

**ಕ**ವಿ ರವೀಂದ್ರನಾಥ ಠಾಕೂರರ ಸಾಹಿತ್ಯ ಪ್ರತಿಭೆಯನ್ನು ಬಲ್ಲಂತೆ, ಜನರು ಅವರ ರಾಜಕೀಯ ವಿಚಾರಗಳನ್ನು ಅಷ್ಟು ಚೆನ್ನಾಗಿ ಅರಿಯರು. ಸಾಹಿತ್ಯದಲ್ಲಿ ಅವರು ಗಳಿಸಿದ ಕೀರ್ತಿ ಉಳಿದ ರಂಗಗಳಲ್ಲಿ ಅವರ ಪ್ರತಿಭೆಯನ್ನು ಕೆಲಮಟ್ಟಿಗೆ ಮರೆ ಮಾಚಿತು. ಅವರ ಬರಹಗಳನ್ನು, ಭಾಷಣಗಳನ್ನು ಹಾಗೂ ಪತ್ರ ಸಾಹಿತ್ಯವನ್ನು ಸಮಗ್ರವಾಗಿ ಪರಿಶೀಲಿಸಿದರೆ, ಅವರ ರಾಜಕೀಯ ವಿಚಾರಗಳಲ್ಲಿಯೂ ನಿಚ್ಚಳ, ತೀಕ್ಷ್ಣ ಹಾಗೂ ದಾರ್ಶನಿಕನ ದೃಷ್ಟಿಯನ್ನು ನಾವು ಕಾಣಬಹುದು.

ರವೀಂದ್ರರು ಜನ್ಮ ತಳೆದಾಗ ಭಾರತ ಶತಮಾನಗಳ ಗುಲಾಮಗಿರಿಯಿಂದಾಗಿ ಅತ್ಯಂತ ಹೀನ ಸ್ಥಿತಿಯಲ್ಲಿದ್ದಿತು. ರವೀಂದ್ರರು ಯೌವನಾವಸ್ಥೆಗೆ ಬಂದಾಗ ಆದೇ ಆಗ ರಾಜಾರಾಮ ಮೋಹನರಾಯರಂಥ, ಬಂಕಿಮಚಂದ್ರ ಚಟರ್ಜಿಯವರಂಥ ಮೇಧಾವಿಗಳ, ಕ್ರಾಂತಿಕಾರರ ವಿಚಾರಗಳಿಂದಾಗಿ ಜನತೆ 'ಸ್ವತಂತ್ರ ಭಾರತ'ದ ಕನಸು ಕಾಣತೊಡಗಿದ್ದಿತು. ಆಳರಸರಾದ ಬ್ರಿಟಿಷರ ಬಗ್ಗೆ ಜನತೆಯಲ್ಲಿ ಆಗಲೇ ತೀವ್ರ ಅತೃಪ್ತಿ, ಅಸಂತೋಷ ಹಾಗೂ ದ್ವೇಷ ಉಂಟಾಗತೊಡಗಿದ್ದವು. ಭಾರತದ ಯಾವ ದುರ್ದೆಸೆಗೂ ಬ್ರಿಟಿಷರ ಕಡೆಗೆ ಕೈಮಾಡಿ ತೋರಿಸಿ, ಅದೆಲ್ಲಕ್ಕೂ ಅವರೇ ಕಾರಣರೆಂದು ಕೆಲವು ರಾಜಕಾರಣಿಗಳು ಹೇಳತೊಡಗಿದರು. ಬ್ರಿಟಿಷರ ದ್ವೇಷ, ದೇಶಾಭಿಮಾನವಾಗಿ ಮೆರೆಯಿತು. ಆದರೆ ರವೀಂದ್ರರು ನಮ್ಮ ದುರ್ದೆಸೆಗೆ 'ಪಾರತಂತ್ರ್ಯ'ಕ್ಕಿಂತ ಪ್ರಬಲ ಕಾರಣ ಬೇರೊಂದಿದೆ. ಅದೆಂದರೆ, ನಮ್ಮ ಸ್ವಾಭಿಮಾನ ಹೀನತೆ ಎಂದು ಪ್ರತಿಪಾದಿಸಿದರು. ಸ್ವಾತಂತ್ರ್ಯಕ್ಕಾಗಿ ಚಳುವಳಿ ಮಾಡುವದಕ್ಕಿಂತ ಮೊದಲು ಸ್ವಾತಂತ್ರ್ಯಕ್ಕೆ

ನಾವು ಅರ್ಹತೆಯನ್ನು ಪಡೆಯಬೇಕು. ಅವರೇ ಒಮ್ಮೆ, "ಇಂದು ನಾವು ಗುಲಾಮರಾಗಿರುವದು ಬ್ರಿಟಿಷರು ರಾಕ್ಷಸರಾಗಿರುವದರಿಂದಲ್ಲ–ನಾವು ಬಲಹೀನರಾಗಿರುವದರಿಂದ; ನಮ್ಮಲ್ಲಿ ಸ್ವಾಭಿಮಾನವಿಲ್ಲದ್ದರಿಂದ ನಮ್ಮ ಶಕ್ತಿಯಲ್ಲಿ ನಾವು ಶ್ರದ್ಧೆಯಿರಿಸುವದರ ಬದಲು ಪರರ ಕಸದ ಬುಟ್ಟಿಯಲ್ಲಿಯ ಹರಕು ಚಿಂದಿಗಳನ್ನು ಆರಿಸುವದರಲ್ಲಿ ನಾವು ತೊಡಗಿದ್ದೇವೆ" ಎಂದು ಉದ್ಗಾರ ತೆಗೆದದ್ದುಂಟು. "If to-day we are slaves, it is not because the British are devils, but because we are weaklings. We have ceased to believe in ourselves. Instead of tapping the fountain of our own creative energy, we are eternally picking rags from other people's dustbins." ಜೀವನಾದ್ಯಂತವೂ ರವೀಂದ್ರರು ಭಾರತೀಯರಲ್ಲಿ ಈ ಸ್ವಾಭಿಮಾನವನ್ನು ಕೆರಳಿಸಲು ಯತ್ನಿಸಿದರು.

ರವೀಂದ್ರರ ಈ ವಿಚಾರಗಳು ಮೊಟ್ಟಮೊದಲು ೧೯೦೫ರಲ್ಲಿ ವ್ಯಕ್ತವಾದವು. ಲಾರ್ಡ್ ಕರ್ಝನ್ ಅವರು ಆ ವರ್ಷ ಬಂಗಾಲ ಪ್ರಾಂತವನ್ನು ಇಬ್ಭಾಗಿಸುವ ನಿರ್ಣಯವನ್ನು ಘೋಷಿಸಿದರು. ಬಂಗಾಲಿಗಳು ಈ ನಿರ್ಣಯದಿಂದ ಕೆರಳಿ ಕೆಂಡವಾದರು. ದೇಶದಾದ್ಯಂತ ಸಭೆಗಳು ನೆರೆದವು. ಬಂಗಾಲದ ಇಬ್ಭಾಗವನ್ನು ನಿಷೇಧಿಸುವ ನಿರ್ಣಯವನ್ನು ಅನೇಕ ಸಭೆಗಳಲ್ಲಿ ಅಂಗೀಕರಿಸಲಾಯಿತು. ರವೀಂದ್ರರು ಸ್ವತಃ 'ಏಕತ್ರ ಬಂಗಾಲದ' ಚಳುವಳಿಯ ಮುಖಂಡತ್ವ ವಹಿಸಿದ್ದರು. ಕಲ್ಕತ್ತೆಯ ಪ್ರಚಂಡ ಸಭೆಯಲ್ಲಿ ಅವರು ಭಾಷಣಮಾಡಿ ಈ ನಿರ್ಣಯವನ್ನು ಖಂಡಿಸಿದರು. ರವೀಂದ್ರರ ಸ್ಫೂರ್ತಿದಾಯಕ ಕವಿತೆಗಳು ದೇಶದಾದ್ಯಂತ ಹಾಡಲ್ಪಟ್ಟವು. ಆದರೆ ಬ್ರಿಟಿಷ್ ಸರಕಾರ ತನ್ನ ನಿರ್ಣಯವನ್ನು ಬದಲಿಸಲಿಲ್ಲ. ಈ ಅನ್ಯಾಯವನ್ನು ಎದುರಿಸುವದೆಂತು? ಇಂಥ ಅನ್ಯಾಯಗಳಿಗೆ ಮೂಲಕಾರಣ ನಮ್ಮ 'ಪಾರತಂತ್ರ್ಯ'. ಇಂಥ ಅನ್ಯಾಯಗಳಿಗೆ ಕೊನೆ ಭಾರತ ಸ್ವಾತಂತ್ರ್ಯದಿಂದಲೇ. ಆದರೆ ಸ್ವಾತಂತ್ರ್ಯ ಹೋರಾಟ ಸಾಗಿಸುವದೆಂತು. ಅಸಹಕಾರದಿಂದಲೇ? ಹಿಂಸಾತ್ಮಕ ಚಳುವಳಿಯಿಂದಲೇ? ಕೆಲವು ಬ್ರಿಟಿಷ್ ಅಧಿಕಾರಿಗಳನ್ನು ಹಿಂಸಿಸಿದರೆ ಸ್ವಾತಂತ್ರ್ಯಕ್ಕಾಗಿ ಹೋರಾಡಿದಂತಾಯಿತೇ? ನಮ್ಮ ಸಮಾಜದಲ್ಲಿ ಅಜ್ಞಾನ, ಅನ್ಯಾಯ ತಾಂಡವವಾಡುತ್ತಿರುವಾಗ ಕೇವಲ ರಾಜಕೀಯ ಸ್ವಾತಂತ್ರ್ಯಕ್ಕೆ ಹೋರಾಡುವದರಲ್ಲಿ ಅರ್ಥವಿಲ್ಲ. ನಮ್ಮಲ್ಲಿಯ ನ್ಯೂನತೆಗಳನ್ನು ಮೊದಲು ಸರಿಪಡಿಸಿಕೊಳ್ಳಬೇಕು. ಅದು ಮೊದಲಿನ ಹೆಜ್ಜೆ. ಇದನ್ನು ಕಡೆಗಣಿಸಿ ರಾಜಕೀಯ ಸ್ವಾತಂತ್ರ್ಯಕ್ಕೆ ಹೋರಾಡಬೇಕೆನ್ನಿಸುವ ರಾಜಕಾರಣಿಗಳನ್ನು ಅವರು ಕಟುವಾಗಿ ಟೀಕಿಸಿದರು. "ಸಾಮಾಜಿಕ ಗುಲಾಮಗಿರಿಯ ಅಸ್ತಿತ್ವದ ಮೇಲೆ ರಾಜಕೀಯ ಸ್ವಾತಂತ್ರ್ಯವನ್ನು ಕಟ್ಟುವ ಹವ್ಯಾಸವನ್ನು ಅವರು ಮರಳಿನ ಮೇಲೆ ಕಟ್ಟಡ ಕಟ್ಟುವ ಹವ್ಯಾಸಕ್ಕೆ ಹೋಲಿಸಿದರು. "This is

the reason why we think that our task is to build a political miracle of freedom upon the quick sand of social slavery."

ರವೀಂದ್ರರು 'ಸ್ವದೇಶಿ ಚಳುವಳಿ'ಯಲ್ಲಿಯೂ ಕೂಡ ಮೊದಲು ಅತೀವ ಆಸ್ಥೆ ವಹಿಸಿದ್ದರು. ಭಾರತದ ಆರ್ಥಿಕ ಉನ್ನತಿಗೆ, ಹೆಚ್ಚು ಹೆಚ್ಚು ಉದ್ದಿಮೆಗಳು ಭಾರತೀಯರ ಕೈಯ್ಯಲ್ಲಿ ಬರಬೇಕು ಎಂಬುದನ್ನು ರವೀಂದ್ರರು ಅರಿತಿದ್ದರು. ಭಾರತೀಯ ಉದ್ದಿಮೆದಾರರನ್ನು ಇಂಥ ಪ್ರಯತ್ನಗಳಲ್ಲಿ ಪ್ರೋತ್ಸಾಹಿಸಿ ಸಹಾಯ ನೀಡಿದರು. ೧೯೦೫ರಲ್ಲಿ ರವೀಂದ್ರರು "ಭಾಂಡಾರ" ಪತ್ರಿಕೆಯ ಸಂಪಾದಕತ್ವ ವಹಿಸಿಕೊಂಡ ಕೂಡಲೇ ಈ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು. ಬ್ರಿಟಿಷ್ ಆಳಿಕೆಯಿಂದಾಗಿ ಭಾರತದಿಂದ ಬ್ರಿಟಿಷ್ ವ್ಯಾಪಾರಿಗಳಿಗೆ ಅಪಾರ ಹಣ ಒದಗುತ್ತಿದೆ. ಭಾರತೀಯರಿಗೆ ಬ್ರಿಟಿಷ್ ಆಳಿಕೆಯಿಂದ ಯಾವ ಕಲ್ಯಾಣವೂ ಆಗಿಲ್ಲ. ಆದ ಕಾರಣ ಇಲ್ಲಿ ಭಾರತೀಯ ಸಂಸ್ಥಾನಿಕರು ಸ್ವದೇಶ ಉದ್ದಿಮೆಗಳಿಗೆ ಎಲ್ಲ ಸಹಾಯ ನೀಡಬೇಕು ಎಂದು ಮನವಿ ಮಾಡಿದರು. ಆದರೆ ಮುಂದೆ ಕೆಲವೇ ದಿನಗಳಲ್ಲಿ 'ಸ್ವದೇಶ ಚಳುವಳಿ' ಹಿಂಸಾತ್ಮಕಮಾರ್ಗ ಅನುಸರಿಸತೊಡಗಿದ್ದರಿಂದ, ಅವರು ಅನುಸರಿಸಿದ ಮಾರ್ಗದ ಬಗ್ಗೆ ಅಸಹ್ಯಪಟ್ಟು, ಶಾಂತಿನಿಕೇತನಕ್ಕೆ ಮರಳಿ ತಮ್ಮ ರಚನಾತ್ಮಕ ಕಾರ್ಯದಲ್ಲಿ ತೊಡಗಿದರು. ರವೀಂದ್ರರ ಈ ಘನ ವಿಚಾರಗಳು ಅನೇಕರಿಗೆ ಹಿಡಿಸದೇ ಹೋದವು. ಕೆಲವರು ರವೀಂದ್ರರನ್ನು ದೇಶದ್ರೋಹಿಯೆಂದು ದೂರಿದರು. ಆದರೆ ರವೀಂದ್ರರು ಅಳುಕಲಿಲ್ಲ. ಈ ಸಮಸ್ಯೆಯ ಬಗ್ಗೆ ರವೀಂದ್ರರು ಆಳವಾಗಿ ವಿಚಾರಿಸಿ ಕೆಲವು ನಿರ್ದಿಷ್ಟ ಅಭಿಪ್ರಾಯಕ್ಕೆ ಬಂದಿದ್ದರು. ಜನ ಮೆಚ್ಚಿಗಾಗಿ ಅವರು ಆತ್ಮವನ್ನು ವಂಚಿಸಲಿಲ್ಲ. ಏಕಾಕಿಯಾಗಿಯಾದರೂ ಆ ಅಭಿಪ್ರಾಯಗಳಿಗೆ ಅವರು ಅಂಟಿಕೊಂಡರು. ಭಾವೋದ್ರೇಕದ ಬಿರುಗಾಳಿ ಬೀಸಿ ಹೋದನಂತರವೇ ಜನತೆ ಅವರ ಅಭಿಪ್ರಾಯಗಳ ಸತ್ಯತೆಯನ್ನು ಕಂಡುಕೊಂಡರು.

'ಸ್ವದೇಶಿ ಚಳುವಳಿ', 'ದೇಶಾಭಿಮಾನ' ಇವುಗಳ ಬಗ್ಗೆ ರವೀಂದ್ರರು ಕೆಲವು ಮೂಲಭೂತ ಪ್ರಶ್ನೆಗಳನ್ನೇ ಎತ್ತುತ್ತಾರೆ. "ಮನೆ ಮತ್ತು ಜಗತ್ತು" (The Home and the World" ಎಂಬ ಕಾದಂಬರಿಯಲ್ಲಿ ಈ ಸಮಸ್ಯೆಗಳ ಬಗ್ಗೆ ರವೀಂದ್ರರ ಅಭಿಪ್ರಾಯಗಳು ಸುಂದರವಾಗಿ ಒಡಮೂಡಿವೆ. ದೇಶಾಭಿಮಾನದ ಹೆಸರಿನಲ್ಲಿ ಜಯಘೋಷಗಳನ್ನು ಘೋಷಿಸುವ ಬಿಸಿರಕ್ತದ ತರುಣರಿಗೆ ಅವರು ಕೇಳುತ್ತಾರೆ—"ದೇಶವೆಂದರೆ ಅದೊಂದು ನಕಾಶವೆ? ಅಥವಾ ಮಣ್ಣು ನೀರಿನಿಂದ ಕೂಡಿದ ಒಂದು ಭೌಗೋಲಿಕ ವಸ್ತುವೇ?" ದೇಶವೆಂದರೆ ಇವುಗಳಲ್ಲ, ಆದರೆ ಅದನ್ನು ಸಂಘಟಿಸುವ ಜನತೆ ಎಂದು ಅವರು ಹೇಳುತ್ತಾರೆ. "The country does not mean its soil, but the men on it." ಜನತೆಯ ಸುಖ ಕಲ್ಯಾಣವನ್ನು ನಿರ್ಲಕ್ಷಿಸುವ ಯಾವದೇ ಕಾರ್ಯ ಅಥವಾ ಚಳುವಳಿ ದೇಶಾಭಿಮಾನವಾಗ

ಲಾರದು. ಹೀಗೆ ಭಾವೋದ್ರೇಕಗೊಳಿಸುವ ರಾಜಕಾರಣಿಗಳನ್ನು ರವೀಂದ್ರರು ಕಟು ವಾಗಿ ಟೀಕಿಸುತ್ತಿದ್ದರು. ಇಂಥ ರಾಜಕಾರಣಿಗಳ ಬಗ್ಗೆ "ದೇಶವನ್ನು ಅದು ಇದ್ದಂತೆಯೇ ಪ್ರೀತಿಸಲಾರದ, ಜನತೆಯ ಬಗ್ಗೆ ನಿಜವಾದ ಕಳಕಳಿಯಿಲ್ಲದ, ದೇಶಕ್ಕೆ ಒಂದು ದೈವೀಸ್ವರೂಪ ಕಲ್ಪಿಸಿ ಜನತೆಯಲ್ಲಿ ಭಾವೋದ್ರೇಕಗೈಯ್ಯುವ ಈ ರಾಜಕಾರಣಿಗಳಿಗೆ ಈ ಭಾವೋದ್ರೇಕವೇ ಮುಖ್ಯ-ಜನತೆಯ ಕಲ್ಯಾಣವಲ್ಲ" ಎಂದು ಟೀಕಿಸಿದ್ದಾರೆ. "Those who cannot find food for their enthusiasm in a knowledge of their country as it actually is, or those who cannot love men as they are, who needs must shout and deify their country in order to keep up their excitement, these love excitement more than their country." 'ಮನೆ ಮತ್ತು ಜಗತ್ತು' ಈ ಕಾದಂಬರಿಯಲ್ಲಿ ರವೀಂದ್ರರು ಆಗಿನ ಕಾಲದ ಓರ್ವ ಸುಶಿಕ್ಷಿತ ಬಂಗಾಲಿ ಮನೆತನದ ಚಿತ್ರ ನಿರೂಪಿಸಿದ್ದಾರೆ. ಓರ್ವ ಶ್ರೀಮಂತ ಮನೆತನದ ಸುಶಿಕ್ಷಿತ ಸುಸಂಸ್ಕೃತ ತರುಣ ನಿಖಿಲ. ಆತನ ಹೆಂಡತಿ ವಿಮಲೆ. ಹಿಂದುಸ್ಥಾನದಲ್ಲಿ ಆದು ಸ್ವದೇಶಿ ಚಳುವಳಿಯ ಕಾಲ. ಸಂದೀಪ ಎಂಬ ತರುಣ ಚಳುವಳಿಯ ನಾಯಕ. ಸಂದೀಪನ ಮೋಹಕರೂಪ, ಪ್ರಜ್ವಲ ದೇಶಾಭಿ ಮಾನ, ವಾಗ್ಝರಿ ಇವುಗಳಿಗೆ ವಿಮಲೆ ಮನಸೋಲುತ್ತಾಳೆ. ಸಂದೀಪನ ಸ್ವದೇಶಿ ಚಳುವಳಿಗೆ ಅವಳು ಎಲ್ಲ ರೀತಿಯ ಸಹಾಯ ನೀಡಲು ಒಪ್ಪುತ್ತಾಳೆ. ಸಂದೀಪ ನಿಖಿಲನ ಮನೆಯಲ್ಲಿ ಬಂದು ವಾಸವಾಗುತ್ತಾನೆ. ಸಂದೀಪ ವಿಮಲೆಯಲ್ಲಿ ಅನುರಕ್ತ ನಾಗುತ್ತಾನೆ. ಬರಬರುತ್ತ ವಿಮಲೆಯೊಡನೆ ಸಂದೀಪನ ನಡವಳಿಕೆ ಸಭ್ಯತೆಯ ಎಲ್ಲೆಯನ್ನು ಮೀರುತ್ತದೆ. ಆದರೂ ನಿಖಿಲ ಆತನೊಡನೆ ಕೋಪ ಮಾಡುವದಿಲ್ಲ. ಯಾಕೆಂದರೆ ತನ್ನ ಹೆಂಡತಿ ವಿಮಲೆಯೇ ಅದಕ್ಕೆ ಕಾರಣಳು. ವಿಮಲೆ ಹೀಗೆ ಮಾಡಬೇಕೇ? ಅದು ವಿಮಲೆಯ ಗೊಡವೆ. ಸಂದೀಪ ಚಳುವಳಿಯ ಹೆಸರಿನಲ್ಲಿ ದಬ್ಬಾಳಿಕೆ ಸುರುವು ಮಾಡುತ್ತಾನೆ. ಅವನಿಗೆ ಹಣದ ಕೊರತೆಯಾಗುತ್ತದೆ. ವಿಮಲೆ ಅವನಿಗಾಗಿ ಹಣ ಕಳವು ಮಾಡಬೇಕಾಗುತ್ತದೆ. ಅಮುಲನೆಂಬ ತರುಣನ ಮುಖಾಂ ತರ ಸಂದೀಪ ಬಡಬಗ್ಗರ ಸುಲಿಗೆ ಮಾಡತೊಡಗುತ್ತಾನೆ. ಕೊನೆಗೆ ವಿಮಲೆ, ಅಮುಲ ಇವರಿಬ್ಬರಿಗೂ ಸಂದೀಪನ ಬಗ್ಗೆ ತಿರಸ್ಕಾರ ಉಂಟಾಗುತ್ತದೆ. ಸಂದೀಪನ ಕಾಮುಕತೆ ವಿಮಲೆಗೆ ತಿಳಿಯುತ್ತದೆ. ಸಂದೀಪ ತನ್ನ ಚಳುವಳಿಗಾಗಿ ನಿಖಿಲನ ಒಕ್ಕಲಿಗರ ಮೇಲೆ ದಬ್ಬಾಳಿಕೆ ಸುರುವು ಮಾಡುತ್ತಾನೆ. ನಿಖಿಲ ಹಾಗೂ ಅಮುಲರು ಹೋಗಿ ಚಳುವಳಿಗಾರರನ್ನು ವಿರೋಧಿಸುತ್ತಾರೆ. ಆ ಬಡಿದಾಟದಲ್ಲಿ ಅಮುಲ ಗುಂಡಿನೇಟಿಗೆ ಆಹುತಿಯಾಗುತ್ತಾನೆ. ನಿಖಿಲನು ಗುಂಡಿನಿಂದ ಘಾಯಗೊಂಡು ಮನೆಗೆ ತರಲ್ಪಡು ತ್ತಾನೆ. ಇಲ್ಲಿಗೆ ಕತೆ ಮುಕ್ತಾಯವಾಗುತ್ತದೆ. ರವೀಂದ್ರರು ತಮ್ಮ ರಾಜಕೀಯ

ವಿಚಾರಗಳನ್ನು ನಿಖಿಲನ ಬಾಯಿಂದ ನುಡಿಸಿದಂತಿವೆ. ಅವನ ದೇಶಾಭಿಮಾನದಲ್ಲಿ ಮಾನವತೆಯಿದೆ. ಒಳ್ಳೆಯದನ್ನೇ ಒಳ್ಳೆ ರೀತಿಯಿಂದಲೇ ಮಾಡಬೇಕೆಂಬ ತತ್ವ ಆತನದು. ಸಂದೀಪನ ವಿಚಾರದಲ್ಲಿ ಸ್ವರಾಜ್ಯ ದೊರಕಿಸಲು ಯಾವ ಮಾರ್ಗವನ್ನನುಸರಿಸಿದರೂ ಸರಿ. "The end justifies the means" ಎನ್ನುವ ತತ್ವ ಆತನದು. ಸ್ವದೇಶಿ ಚಳುವಳಿಗೆ ಹಣ ಒದಗಿಸಬೇಕು. ಆ ಹಣ ಹೇಗೆ ಬಂದರೂ ಸರಿ. ಪರದೇಶಿ ಅರಿವೆ ಸುಟ್ಟು ಹಾಕಬೇಕು. ಇಂಥ ಭಾವೋದ್ರೇಕ ದೇಶಾಭಿಮಾನಕ್ಕೆ ಪ್ರಚೋದನೆ ಕೊಡುತ್ತದೆ ಎಂದು ಆತನ ವಾದ. ಇದನ್ನು ರವೀಂದ್ರರು "destructive excitement" ಎಂದು ಹೀಯಾಳಿಸಿದ್ದಾರೆ. ಸಂದೀಪ ಇಂಥ ಭಾವೋದ್ರೇಕ ಹೊಸದನ್ನು ಕಟ್ಟುವದಕ್ಕೆ ಶಕ್ತಿಯನ್ನು ಕೊಡುತ್ತದೆ ಎಂದು ವಾದಿಸುತ್ತಾನೆ. "such excitement will give energy to build." ಅದಕ್ಕೆ ನಿಖಿಲ ಸುಂದರವಾಗಿ ಉತ್ತರ ಕೊಡುತ್ತಾನೆ. "ನಾಶಮಾಡದ ಹೊರತು ಕ್ರಿಯಾತ್ಮಕ ಶಕ್ತಿಗೆ ನಮ್ಮಲ್ಲಿ ಸ್ಫೂರ್ತಿ ಬರುವದಿಲ್ಲ ಎಂದು ಹೇಳುವಸೆಂದರೆ ಒಂದು ಮನೆಯನ್ನು ಸುಟ್ಟು ಬೂದಿಮಾಡದ ಹೊರತು ಆ ಮನೆಗೆ ಬೆಳಕನ್ನು ಒದಗಿಸುವದು ಸಾಧ್ಯವಿಲ್ಲ" ಎಂದು ಹೇಳಿದಷ್ಟು ಮೂರ್ಖತನದ್ದಾಗಿದೆ—"That is as much as to say that you cannot light a house, unless you first set fire to it." ಒಂದಂಗುಲ ಅರಿವೆಯನ್ನು ಕೂತು ನೇಯುವ ಶಕ್ತಿಯಿಲ್ಲದ ಸಂದೀಪ ಪರದೇಶಿ ಬಟ್ಟೆಯನ್ನೆಲ್ಲಾ ಸುಟ್ಟುಹಾಕಬೇಕೆಂಬ ಪ್ರಚಾರವನ್ನು ನಿಖಿಲ ಒಪ್ಪುವದಿಲ್ಲ. ಸಂದೀಪನ ದೇಶಾಭಿಮಾನದಲ್ಲಿ ವಿನಾಶಕ ಶಕ್ತಿಯಿದೆ. ಇಂಥ ಅರೆಬೆಂದ ರಾಜಕಾರಣಿಗಳು ದೇಶಕ್ಕೆ ಎಷ್ಟೊಂದು ಅಕಲ್ಯಾಣವನ್ನು ಮಾಡಬಲ್ಲರು ಎಂಬುದನ್ನು ರವೀಂದ್ರರು ಚನ್ನಾಗಿ ಚಿತ್ರಿಸಿದ್ದಾರೆ. ಅವರೇ ಒಂದೆಡೆ, "ರಾಷ್ಟ್ರೀಯತೆಯನ್ನು ಕೆರಳಿಸುವದೆಂದರೆ ಬೆಂಕಿಯೊಡನೆ ಸರಸವಾಡಿದಂತೆ" ಎಂದು ಹೇಳಿದ್ದುಂಟು. ಇನ್ನೊಂದೆಡೆ, "ರಾಷ್ಟ್ರೀಯತೆ ಒಂದು ತರಹದ ಭಾವೋದ್ರೇಕ. ಆದರೆ ಈ ಭಾವೋದ್ರೇಕದಲ್ಲಿ ಪ್ರಚಂಡ ನಿರ್ಮಾಣದ ಹಾಗೂ ವಿನಾಶಕ ಶಕ್ತಿಗಳು ಅಡಗಿವೆ." "Nationality is a sentiment but it is a sentiment which creates and destroys." ರಾಷ್ಟ್ರೀಯತೆಯ ಅನಿಷ್ಟ ಪರಿಣಾಮಗಳನ್ನು ರವೀಂದ್ರರು "Nationalism" ಎಂಬ ಅವರ ಪುಸ್ತಕದಲ್ಲಿ ಕೂಲಂಕಷವಾಗಿ ಚರ್ಚಿಸಿದ್ದಾರೆ. ರಾಷ್ಟ್ರೀಯತೆಯಲ್ಲಿ ಅಚಲ ಶ್ರದ್ಧೆಯುಳ್ಳ ಒಂದು ದೇಶದ ಸರಕಾರದಲ್ಲಿ ಮುಖ್ಯತಃ ಮೂರು ದೋಷಗಳನ್ನು ಅವರು ಎತ್ತಿ ತೋರಿಸುತ್ತಾರೆ. ಅವೆಂದರೆ (೧) ಕೇವಲ ರಾಷ್ಟ್ರದ ಅಭ್ಯುದಯವನ್ನೇ ಗುರಿಯನ್ನಾಗಿಟ್ಟುಕೊಂಡಿರುವ ರಾಷ್ಟ್ರದಲ್ಲಿ ಸರಕಾರ ಒಂದು ನಿರ್ಜೀವ ಯಂತ್ರವಾಗಿ ಪರಿಣಮಿಸುತ್ತದೆ. ಆ ಯಂತ್ರ ಮುನ್ನುಗ್ಗಲು ಯಾವ ಶಕ್ತಿಯಾದರೂ, ಯಾವ ನೀತಿಯಾದರೂ ಸರಿ. (೨) ರಾಷ್ಟ್ರೀಯತೆಯಿಂದ

ಒಂದು ದೇಶದ ಸ್ವಾರ್ಥ ಮಹತ್ವದ್ದಾಗುತ್ತದೆ. ತಮ್ಮ ಸ್ವಾರ್ಥದಿಂದ ಉಳಿದ ದೇಶಗಳಿಗೆ ಆಗುವ ತೊಂದರೆ ಸಂಕಷ್ಟಗಳ ಕಡೆಗೆ ಈ ನೀತಿ ವಿಚಾರ ಮಾಡಗೊಡುವದಿಲ್ಲ. (೩) ರಾಷ್ಟ್ರದ ಅಭ್ಯುದಯವೇ ಏಕಮಾತ್ರ ಗುರಿಯಾಗಿರುವಾಗ ಸಾಮಾಜಿಕ ಅನ್ಯಾಯದ ಕಡೆಗೆ ಸರಕಾರ ಲಕ್ಷ್ಯ ಕೊಡುವದಿಲ್ಲ. ರವೀಂದ್ರರಿಗೆ ರಾಷ್ಟ್ರೀಯ ಬಲ ಒಂದು ಹುಚ್ಚು ರಾಕ್ಷಸನಂತೆ ಕಂಡಿತು. Marjorie Sykes ಹೇಳುವಂತೆ "National pride seemed to him like a mad devil, making men blind to the rights of other nations, and careless of justice and truth."

ಅವಕಾಶ ದೊರೆತಾಗಲೆಲ್ಲ ರವೀಂದ್ರರು ರಾಷ್ಟ್ರೀಯತೆಯನ್ನು ಕಟುವಾಗಿ ಖಂಡಿಸಿದರು. ೧೯೧೭ನಲ್ಲಿ ಅವರು ಜಪಾನ ದೇಶಕ್ಕೆ ಭೇಟಿಯಿತ್ತಾಗ, ಒಂದು ಪ್ರದರ್ಶನದಲ್ಲಿ ಚೀನಿಯರಿಂದ ಗೆದ್ದು ತಂದ ಕೆಲವು ಯುದ್ಧದ ಅವಶೇಷಗಳನ್ನು ಪ್ರದರ್ಶಿಸಲಾಗಿತ್ತು. ಅದನ್ನು ಕಂಡು ರವೀಂದ್ರರ ಮನಸ್ಸು ನೋಯಿತು. ಈ ವಿಷಯವನ್ನು ಜಪಾನದಲ್ಲಿ ಅವರು ಟೋಕಿಯೊ ವಿಶ್ವವಿದ್ಯಾನಿಲಯದಲ್ಲಿತ್ತ "Nationalism" ಎಂಬ ಭಾಷಣ ಒಂದರಲ್ಲಿ ಪ್ರಸ್ತಾಪಿಸಿ ಜಪಾನೀಯರು ನಾಚಿಕೆಪಡುವಂತೆ ಮಾಡಿದರು. ಜಪಾನದ ಈ ಉನ್ಮತ್ತ ರಾಷ್ಟ್ರೀಯತೆಯ ಫಲ ಅವರು ಒಂದು ದಿನ ಉಣ್ಣಬೇಕಾದೀತು ಎಂದು ಎಚ್ಚರಿಸಿದರು. "Never think for a moment that the hurts you inflict upon other races will not infect yours or that the enemities that you sow around your homes will be a wall of protection to you for all the time to come. To imbue the minds of a whole people with an abnormal vanity of its own superiority, to teach it to take pride in its moral callousness and ill-begotten wealth, to perpetuate humiliation of defeated nations by exhibiting trophies won from war and using these in schools in order to breed in children's minds contempt for others, is imitating the west where she has a festering sore, whose swelling is a swelling of disease eating into its vitality." ರವೀಂದ್ರರು ಜಪಾನದ ಆಕ್ರಮಣಶೀಲ ಪ್ರವೃತ್ತಿಯನ್ನು ಅನೇಕ ಸಲ ಖಂಡಿಸಿದ್ದುಂಟು. ೧೯೩೮ರಲ್ಲಿ ತಮ್ಮ ಮಿತ್ರರಾದ ಶಾಸ್ತ್ರಜ್ಞ 'ನಗೂಚಿ'ಯವರಿಗೆ ಬರೆದ ಪತ್ರದಲ್ಲಿ "I speak with utter sorrow for your people. I know that one day the

disillusionment of your people will be complete and through laborious centuries they will have to clear the debris of their civilisation wrought to ruin by their own war-lords run amuck...........wishing your people whom I love, not success but remorse" ಎಂದು ಆ ಪ್ರವೃತ್ತಿಯನ್ನು ಅಲ್ಲಗಳೆದರು. ಅಂದು ಅವರ ಕೊಟ್ಟ ಎಚ್ಚರಿಕೆ ೧೯೪೫ರಲ್ಲಿ ನಾಗಾಸಾಕಿಯಲ್ಲಿ ಸತ್ಯವಾಗಿ ಪರಿಣಮಿಸಿತು. ರವೀಂದ್ರರ ಈ ಮುನ್ನೆಚ್ಚರಿಕೆ ಪ್ರವಾದಿಯ ದರ್ಶನವಲ್ಲದೆ ಮತ್ತೇನು?

ಮಾನವತೆಯನ್ನು ಕಡೆಗಣಿಸಿ ಯಾವ ರಾಷ್ಟ್ರವೂ ಉತ್ಕರ್ಷ ಹೊಂದಲಾರದು. ಜಗತ್ತಿನ ಇತಿಹಾಸವೇ ಅದಕ್ಕೆ ನಿದರ್ಶನ. ತಮ್ಮ 'Nationalism' ಭಾಷಣದಲ್ಲಿ ಅವರು: "ಗ್ರೀಕ ಚಕ್ರಾಧಿಪತ್ಯ, ರೋಮ ಸಾಮ್ರಾಜ್ಯ ಇಂದು ಹೇಳಹೆಸರಿಲ್ಲದಾಗಿದೆ. ಆದರೆ ಚೀನಾ ಬದುಕಿದೆ. ಇದಕ್ಕೆ ಕಾರಣವೆಂದರೆ ಚೀನಾ ಮಾನವತೆಯನ್ನು ಬಿಟ್ಟು ಕೊಡಲಿಲ್ಲ" ಎಂದು ಹೇಳಿದ್ದಾರೆ. "Greece lived only a short while. Rome is now not heard. Yet china still lives. Her Government is not good, but her people and her culture are yet alive. That is because she aimed at being human." ಅವರು ಹೇಳಿದರು: "ಯಾವ ದೇಶದಲ್ಲಿ ಮಾನವೀಯತೆಗೆ ಬೆಲೆಯಿಲ್ಲವೋ, ಆ ದೇಶ ಹಲವು ಕಾಲ ಭೌತಿಕ ಸಂಪತ್ತನ್ನು ಅನುಭವಿಸಿದರೂ, ಜಯಗಳಿಸಿದಂತೆ ಕಂಡರೂ ಆ ಸಂಪತ್ತು ಆ ಸಮೃದ್ಧಿ ಶಾಶ್ವತವಾಗಿರಲಾರದು."

ರವೀಂದ್ರರು ಒಂದೆಡೆ, ೧೯೨೦ರಲ್ಲಿ, ತಮ್ಮ ಜರ್ಮನಿಯ ಪ್ರವಾಸದ ಬಗ್ಗೆ ಬರೆಯುತ್ತಾ ಒಂದು ಸುಂದರ ಸನ್ನಿವೇಶವನ್ನು ಉಲ್ಲೇಖಿಸಿದ್ದಾರೆ. ಅವರ ಪ್ರವಾಸದ ಒಂದು ದಿನ ಜರ್ಮನಿಯ ಪಟ್ಟಣವೊಂದರಲ್ಲಿ ಇಬ್ಬರು ಜರ್ಮನ್ ಬಾಲಿಕೆಯರು ಅವರ ಭೇಟಿಗೆ ಬಂದರು. ಅವರಲ್ಲಿ ಒಬ್ಬ ಚಿಕ್ಕ ಬಾಲಿಕೆ ರವೀಂದ್ರರ ಕೈಯ್ಯಲ್ಲಿ ಹೂವಿನ ಗೊಂಚಲನ್ನಿರಿಸಿ 'ನಾನು ಭಾರತವನ್ನು ಬಹುವಾಗಿ ಪ್ರೀತಿಸುತ್ತೇನೆ' ಎಂದು ನುಡಿದಳಂತೆ. ಆಗ ರವೀಂದ್ರರು 'ಅದೇಕೆ?' ಎಂದು ಪ್ರಶ್ನಿಸಿದರು. ಆಗ ಆ ಬಾಲಿಕೆ, 'ಯಾಕೆಂದರೆ, ನೀವು ಭಾರತೀಯರು ದೇವರನ್ನು ಪ್ರೀತಿಸುತ್ತೀರಿ' ಎಂದು ಉತ್ತರಿಸಿದಳಂತೆ. ರವೀಂದ್ರರು ಈ ಕತೆಯನ್ನು ಉಲ್ಲೇಖಿಸಿ ಈ ಚಿಕ್ಕಬಾಲಿಕೆಯ ಹೊಗಳಿಕೆ ಭಾರತಕ್ಕೆ ಬಹು ದೊಡ್ಡ ಉಡುಗೊರೆಯೆಂದು ಹೇಳುತ್ತಾರೆ. ತನಗಿಂತ ಹೆಚ್ಚಾಗಿ ದೇವರನ್ನು ಪ್ರೀತಿಸುವ ದೇಶವನ್ನು ಜಗತ್ತು ಕಾಣಲು ಇನ್ನು ಹಾತೊರೆಯುತ್ತಿದೆ! ಎಂದು ಅವರು ಉದ್ಗಾರ ತೆಗೆದರು.

ಜಪಾನದಲ್ಲಿ ಅವರು ರಾಷ್ಟ್ರೀಯತೆಯ ಬಗ್ಗೆ ವ್ಯಕ್ತಪಡಿಸಿದ ಅಭಿಪ್ರಾಯಗಳನ್ನೇ ಅಮೇರಿಕೆಯಲ್ಲಿ 'Nationalism in India' ಎಂಬ ಭಾಷಣದಲ್ಲಿ ಅವರು ಒಡನುಡಿದಿದ್ದಾರೆ. 'ನನ್ನ ದೇಶದಲ್ಲಿಯ ಜನತೆಗೆ ನನ್ನ ಮಾತಿನಲ್ಲಿ ವಿಶ್ವಾಸವಿಲ್ಲ; ಯಾಕೆಂದರೆ ನಾನು ದೇಶಕ್ಕಿಂತ ದೇವರು ಹೆಚ್ಚಿನವನೆಂದು ನಂಬಿದ್ದೇನೆ.' 'My countrymen have no patience with me-for I believe God to be higher than my country.' ಎಂದು ಹೇಳಿದರು.

ರಾಷ್ಟ್ರೀಯತೆಯ ಬಗ್ಗೆ ಅವರ ಈ ನಿರಂತರ ಟೀಕೆ ಅವರ ಬಗ್ಗೆ ಜನತೆಯಲ್ಲಿ ಅವರೊಬ್ಬ ದೇಶದ್ರೋಹಿ ಎಂಬ ಕಲ್ಪನೆಯನ್ನುಂಟು ಮಾಡಿದ್ದುಂಟು. ಆದರೆ ದೇಶಾಭಿಮಾನದಲ್ಲಿ ರವೀಂದ್ರರು ಯಾರಿಗೂ ಕಡಿಮೆಯಾಗಿರಲಿಲ್ಲ. ಅವರ ದೇಶಾಭಿಮಾನ, ಭಾವೋದ್ರೇಕಕ್ಕೆ ಎಡೆಗೊಡುವ ದುರಭಿಮಾನವಲ್ಲ-ಕ್ಷಣಿಕ ಫಲಗಳಿಗೆ ಮೋಸಹೋಗುವ ವಂಚನೆಯಲ್ಲ. ಅವರ ದೇಶಾಭಿಮಾನದಲ್ಲಿ ದೂರದರ್ಶಿತ್ವವಿದೆ. ಅವರ ಚರಿತ್ರಕಾರರಾದ ಮೆರ್ಜೊರಿ ಸಾಯಕ್ಸ (Marjorie Sykes) ಹೇಳುವಂತೆ 'ರವೀಂದ್ರರು ಭಾರತದ ಬಹುದಿನದ ಕಲ್ಯಾಣಕ್ಕಾಗಿ ದುಡಿದರು. 'Although Rabindranath opposed a false and narrow patriotism, he was himself the most enthusiastic of patriots. He worked all his life for India's real and lasting good.' ರವೀಂದ್ರರ ದೇಶಪ್ರೇಮಕ್ಕೆ ಉದಾಹರಣೆ ಬೇಕೇ? ಅವು ಒಂದೇ ಎರಡೇ–ಬಂಗಾಲ ವಿಭಜನೆಯ ಕಾಲದಲ್ಲಿ ಅವರು ಮಾಡಿದ ಪ್ರಚಂಡ ಕಾರ್ಯ– ಜಾಲಿಯನ್‌ವಾಲಾ ಭಾಗದ ಸುದ್ದಿ ಬಂದಾಗ ಅವರ ಧೀರೋದಾತ್ತ ನಿಲುಮೆ–ಸ್ವದೇಶ ಚಳುವಳಿಯಲ್ಲಿ ಅವರ ಪ್ರಥಮ ಆಸ್ಥೆ–ಇವೆಲ್ಲ ಅವರ ದೇಶಪ್ರೇಮದ ನಿದರ್ಶನಗಳಲ್ಲವೇ?

೧೯೧೯ನೇ ಏಪ್ರಿಲ್ ೧೩ನೇ ದಿನ ಅಮೃತಸರದ ಜಲಿಯನ್‌ವಾಲಾಬಾಗದಲ್ಲಿ ಬ್ರಿಟಿಷ್ ಆಳರಸರು ನಿರಪರಾಧಿ ಸ್ತ್ರೀ ಪುರುಷರ ಹಾಗೂ ಚಿಕ್ಕಮಕ್ಕಳ ಮೇಲೆ ಗುಂಡಿನ ಮಳೆಗರೆದರು. ಅನೇಕ ನಿರಪರಾಧಿಗಳು ಮಡಿದರು. ಬ್ರಿಟಿಷರ ದಬ್ಬಾಳಿಕೆಗೆ ಇಡೀ ದೇಶವೇ ತಲ್ಲಣಿಸಿತು. ಈ ಸುದ್ದಿ ಮುಟ್ಟಿದೊಡನೆ ರವೀಂದ್ರರು ಕಲಕತ್ತೆಗೆ ಧಾವಿಸಿದರು. ರಾಜಕೀಯ ಧುರೀಣರಿಗೆ ಅವರು ಬ್ರಿಟಿಷರ ಈ ಧೋರಣೆಯನ್ನು ಸಾಮೂಹಿಕವಾಗಿ ಖಂಡಿಸಲು ಸಭೆ ಕರೆಯಲು ಮನವಿ ಮಾಡಿದರು. ಅದು ಫಲಿಸದಾದ ಕೂಡಲೇ ರವೀಂದ್ರರು ಏಕಾಕಿಯಾದರೂ ಈ ಅನ್ಯಾಯವನ್ನು ಪ್ರತಿಭಟಿಸಬೇಕೆಂದು ನಿರ್ಧರಿಸಿದರು. ಅದಕ್ಕಾಗಿ ಅವರು ಐದು ವರ್ಷದ ಹಿಂದೆ ಬ್ರಿಟಿಷ್ ದೊರೆ ತಮಗೆ ಕೊಟ್ಟ 'ಸರ್' (Knightood) ಪದವಿಯನ್ನು ಬಿಟ್ಟುಕೊಡಲು ನಿರ್ಣಯಿಸಿದರು. ಈ ಸಂದರ್ಭದಲ್ಲಿ ಆಗ ವೈಸರಾಯರಾಗಿದ್ದ ಲಾರ್ಡ್ ಚೆಮ್ಸ್‌ಫರ್ಡ್‌ರಿಗೆ ಬರೆದ ಪತ್ರದಲ್ಲಿ ಬ್ರಿಟಿಷರಿಂದ ಭಾರತೀಯ ಜನತೆಗೆ ಆಗುತ್ತಿರುವ ಹೀನ

ಅವಹೇಳನದಿಂದ ಸರಕಾರ ಕೊಡುವ ಈ ಪದವಿ ಪ್ರಶಸ್ತಿಗಳು ಅಪಮಾನದ ದ್ಯೋತಕಗಳಾಗಿವೆ. ಇಂಥ ಪ್ರಶಸ್ತಿಗಳಿಂದ ಮುಕ್ತನಾಗಿ ಹಿಂಸೆಗೀಡಾದ ನನ್ನ ಬಂಧುಗಳ ದುಃಖದಲ್ಲಿ ನಾನು ಭಾಗಿಯಾಗಲಿಚ್ಛಿಸುತ್ತೇನೆ' ಎಂದು ತಿಳಿಸಿದರು. ಅನಂತರ ರವೀಂದ್ರರು ಆ ಪದವಿಯನ್ನು ಎಂದಿಗೂ ಧರಿಸಲಿಲ್ಲ. ಅವರು ಇದು ಕೇವಲ ಭಾರತೀಯರಿಗೆ ಆದ ಘೋರ ಅನ್ಯಾಯವೆಂದಲ್ಲ, ಆದರೆ ಮಾನವನಿಂದ ಮಾನವನಿಗೆ ಆದ ಹೇಯ ಅನ್ಯಾಯ ಎಂದು ಬಗೆದರು.

ರವೀಂದ್ರರು ದೇಶಾಭಿಮಾನದ ಭಾವೋದ್ರೇಕದ ಚಟುವಟಿಕೆಗಳಿಂದ ದೂರ ಉಳಿದರೂ ಭಾರತದ ನಿಜವಾದ ಕಲ್ಯಾಣ ಹೇಗೆ ಆದೀತು ಎಂಬುದನ್ನು ವಿಚಾರಿಸ ತೊಡಗಿದರು. ಭಾರತದ ಮುಂದೆ ಇದ್ದ ಸಮಸ್ಯೆಗಳನ್ನು ಗುರುತಿಸಿ ಅವುಗಳಿಗೆ ಪರಿಹಾರ ದೊರಕಿಸಲು ಅವರು ಯತ್ನಿಸತೊಡಗಿದರು. ಬಹುದಿನಗಳಿಂದ ರವೀಂದ್ರರು ಭಾರತದ ದುರ್ದೆಸೆಗೆ ಅಂದಿನ ಹಳ್ಳಿಗಳ ಹೀನಸ್ಥಿತಿ ಒಂದು ಮುಖ್ಯ ಕಾರಣ ಎಂಬುದನ್ನು ಅರಿತಿದ್ದರು. ಭಾರತ ಹಳ್ಳಿಗಳ ದೇಶ. ಹಳ್ಳಿಗರ ಜೀವನ ಸುಧಾರಿಸದ ಹೊರತು ಭಾರತದ ಉದ್ಧಾರವಾಗಲಾರದು. ಹಲವುಕಾಲ ಹಳ್ಳಿಗಳಲ್ಲಿ ವಾಸವಾಗಿ ಅವರ ಸಂಕಷ್ಟಗಳನ್ನು ಅರಿತರು. ಪಾಶ್ಚಿಮಾತ್ಯ ಸಂಸ್ಕೃತಿಯ ವ್ಯಾಮೋಹಕ್ಕೊಳಗಾಗಿ ದೊಡ್ಡ ಜಮೀನದಾರರು ಪಟ್ಟಣಗಳಲ್ಲಿ ವಾಸಿಸತೊಡಗಿದರು. ಹಳ್ಳಿಗಳಿಗೆ ಶತಮಾನಗಳವರೆಗಿದ್ದ ಅವರ ಮುಖಂಡತ್ವ-ಆಶ್ರಯ ಇಲ್ಲದಾಯಿತು. ಹಳ್ಳಿಗಳ ಸಾಮಾಜಿಕ ಹಾಗೂ ಆರ್ಥಿಕ ಜೀವನ ಹಾಳಾಯಿತು. ಬೇಸಾಯ, ಕೈಗಾರಿಕೆ ನಾಶವಾದವು. ಹಳ್ಳಿಯ ಕಲೆಗಳು ಕ್ಷೀಣಿಸಿದವು. ಸ್ವಾವಲಂಬಿಯಾಗಿದ್ದ ಹಳ್ಳಿ ಒಡೆದು ಚೂರಾಯಿತು. ಅದಕ್ಕಾಗಿಯೇ ಹಳ್ಳಿಗಳ ಪುನರುದ್ಧಾರವಾಗಬೇಕು. ಈ ಉದ್ದೇಶಕ್ಕಾಗಿಯೇ ಅವರು ಶ್ರೀನಿಕೇತನದಲ್ಲಿ ಹಳ್ಳಿಗಳ ಪುನರುದ್ಧಾರ ಕೇಂದ್ರ 'Rural reconstruction Centre' ವನ್ನು ಸ್ಥಾಪಿಸಿ ಹಳ್ಳಿಗರ ಜೀವನವನ್ನು ಸುಧಾರಿಸಲು ಯತ್ನಿಸತೊಡಗಿದರು. ಇಲ್ಲಿ ನಾವು ಕೇವಲ ವೈಚಾರಿಕನ ವಿಚಾರ ಸೃಷ್ಟಿಯಲ್ಲದೆ ಕರ್ಮಯೋಗಿಯ ಕಾರ್ಯ ಸಿದ್ಧಿಯನ್ನು ಕಾಣಬಹುದು.

ಭಾರತದ ಅಂದಿನ ದೊಡ್ಡ ಸಮಸ್ಯೆಗಳಲ್ಲಿ ಹಿಂದು-ಮುಸ್ಲಿಮರ ವೈಮನಸ್ಸು ಒಂದಾಗಿದ್ದಿತು. ಭಾರತದ ಸ್ವಾತಂತ್ರ್ಯ ಹೋರಾಟಕ್ಕೆ ಹಿಂದು-ಮುಸಲ್ಮಾನ ಐಕ್ಯತೆ ನಾಂದಿಯಾಗಬೇಕು ಎಂದು ಅವರು ನಂಬಿದ್ದರು. ಮುಸಲ್ಮಾನ ಧರ್ಮ ಹಾಗೂ ಸಂಸ್ಕೃತಿ ಭಾರತಕ್ಕೆ ಕೊಟ್ಟ ಕಾಣಿಕೆಗಳನ್ನು ಅವರು ನೆನೆದರು. "The Mahomedan has come to India from outside, laden with his own stores of knowledge, and his wonderful religious democracy. In our music, our architecture,

our picture Art, our Literature, the Mahomedans have made their precious and permanent contribution."

ಆದರೆ ಹಿಂದು ಮುಸಲ್ಮಾನರ ಐಕ್ಯತೆಗೆ ಹೆಣಗುವ ಸಮಾಜ ಸುಧಾರಕರಿಗೆ ಅವರು ಈ ಸಮಸ್ಯೆಯನ್ನು ಎದುರಿಸುವಾಗ ಸತ್ಯಸಂಗತಿಯ ಅರಿವು ಇರಬೇಕು ಎಂದು ಎಚ್ಚರಿಸಿದರು. ಹಿಂದು ಮುಸಲ್ಮಾನರಲ್ಲಿ ಇದ್ದ ಭಿನ್ನ ಭೇದಗಳನ್ನು ಮುಚ್ಚಿಡುವದರಲ್ಲಿ ಅರ್ಥವಿಲ್ಲ – ನಮ್ಮ ಭೇದಭಾವಗಳನ್ನು ಕಂಡು, ಅವುಗಳಿದ್ದಾಗಿಯೂ ಕೂಡ ಸಹಕಾರದಿಂದ ಹೇಗೆ ಬಾಳಲು ಸಾಧ್ಯವೆಂಬುದನ್ನು ಜನತೆಯಲ್ಲಿ ಬಿಂಬಿಸಬೇಕು. "It is no use to paint over a crack in a wall, and pretend that it is not there. Soon the crack will be seen plainly, in spite of the paint. In the same way, real differences between Hindus and Muslims must be honestly recognised. If we take the trouble to recognise and understand, then we shall be able to live together in a friendly way-inspite of the differences."

ಹಿಂದು-ಮುಸಲ್ಮಾನ ತಿಕ್ಕಾಟಗಳು ರವೀಂದ್ರರ ಮನಸ್ಸನ್ನು ಕದಡುತ್ತಿದ್ದವು. ೧೯೩೯ರಲ್ಲಿ ಒಂದೆಡೆ ಮಾತಾಡುತ್ತ ರವೀಂದ್ರರು 'ಹಿಂದು ಹಾಗೂ ಮುಸಲ್ಮಾನ ಸಮಸ್ಯೆಯ ಸಂಕೇತದಂತಿರುವ ಪುರಿಯಲ್ಲಿಯ ಒಂದರ ಮಗ್ಗಲಿಗೊಂದು ಇರುವ ಮುಸಲ್ಮಾನರ ಮಸೀದಿ ಹಾಗೂ ಜಗನ್ನಾಥ ದೇವಾಲಯಗಳು ಒಂದುದಿನ ರಶಿಯನ್ನರ ಬಾಂಬಿಗೆ ತುತ್ತಾಗಿ ಒಮ್ಮೆಲೇ ಎರಡೂ ಕಟ್ಟಡಗಳು ನಾಶವಾಗುವದನ್ನು ನೋಡುವ ಭಾಗ್ಯ ನನಗಿಲ್ಲ. ಅದಕ್ಕಾಗಿ ನಾನು ವ್ಯಥೆಪಡುತ್ತೇನೆ' ಎಂದು ಉದ್ಗಾರ ತೆಗೆದರು. "I am sorry that I will not live to see the Soviet Union conquer India, for it is the only power which can throw a bomb impartially on these two symbolically contiguous buildings the Muslim mosque and the temple of Jagannath at Puri." ಅವರ ಈ ಉದ್ಗಾರ ಈ ಸಮಸ್ಯೆಯ ಬಗ್ಗೆ ಅವರ ತೀವ್ರ ವಿವಂಚನೆಯನ್ನು ನಿದರ್ಶಿಸುತ್ತದೆ.

ಇವೆಲ್ಲಕ್ಕೂ ಹೆಚ್ಚಾಗಿ ರವೀಂದ್ರರು ಭಾರತೀಯರಿಗೆ ಇತ್ತ ಮಹತ್ತರ ಸಂದೇಶವೆಂದರೆ ಅವರ 'ವಿಶ್ವಬಂಧುತ್ವ'ದ ಸಂದೇಶ. ಅವರ ವಿಶಾಲ ಹೃದಯದ ದೃಷ್ಟಿಯಲ್ಲಿ ವಿಶ್ವವೇ ಒಂದು ಬಳಗವಾಗಿದ್ದಿತು. ಅವರು ಒಮ್ಮೆ ಸಿ. ಎಫ್. ಎಂಡ್ರ್ಯೂಜರಿಗೆ ಬರೆದ ಪತ್ರದಲ್ಲಿ 'I earnestly hope that I shall find my home anywhere in the world before I leave it.' ನಾನು ಈ

ಜಗತ್ತಿನಿಂದ ಅಗಲುವ ಮುನ್ನ ಈ ವಿಶ್ವದ ಯಾವ ಮೂಲೆಯಲ್ಲಿಯಾದರೂ ಕೇವಲ ಮನೆಯವನಾಗುವ ಭರವಸೆಯನ್ನು ತಾಳಿದ್ದೇನೆ' ಎಂದು ಬರೆದಿದ್ದರು. ಅವರು ಸ್ಥಾಪಿಸಿದ ವಿಶ್ವಭಾರತಿಯ ಮೂಲ ಉದ್ದೇಶವು ಕೂಡ ವಿಶ್ವಬಂಧುತ್ವದ ಪ್ರತೀಕವೇ ಆಗಿವೆ. ವಿಶ್ವಭಾರತಿಯ ಸಂಕೇತ 'ಎಲ್ಲ ವಿಶ್ವ ಒಂದೆಡೆ ಕೂಡುವದು' ಎಂದಾಗಿದೆ. ರವೀಂದ್ರರು ಒಂದೆಡೆ, 'ಜಗತ್ತಿನಲ್ಲಿ ಇತಿಹಾಸವೆಂದರೆ ಅದು ಒಂದೇ, ಅದು ಮಾನವತೆಯ ಇತಿಹಾಸ.' 'There is only one History, the History of Man.' ರಾಷ್ಟ್ರದ ಇತಿಹಾಸಗಳು ಅದರಲ್ಲಿ ಕೇವಲ ಅಧ್ಯಾಯಗಳು ಮಾತ್ರ. ಇಲ್ಲಿಯವರೆಗಿನ ಜಗತ್ತಿನ ಇತಿಹಾಸ ವಿಶ್ವಬಂಧುತ್ವದ ಪಾಠವನ್ನೇ ಹೇಳುತ್ತದೆ. ಮಾನವನು ದಿನಗಳೆದಂತೆ ಹೆಚ್ಚು ಹೆಚ್ಚು ದೊಡ್ಡ ದೊಡ್ಡ ಗುಂಪುಗಳಲ್ಲಿ ಸಹಜೀವನದ ಪಾಠವನ್ನು ಕಲಿಯುತ್ತ ಬಂದಿರುವ ಕತೆಯೇ ಜಗತ್ತಿನ ಇತಿಹಾಸದ ಕತೆ ಎಂದು ಅವರು ಹೇಳಿದರು. 'History is a record of how men learned to work together little by little in larger and larger groups.' ಭಾರತದಲ್ಲಿ ಎಂದಿನಿಂದಲೂ ಅನೇಕ ಭಾಷೆಯನ್ನಾಡುವ ಅನೇಕ ಮತ ಪಂಥಗಳ, ಅನೇಕ ಸಂಪ್ರದಾಯ ಸಂಸ್ಕೃತಿಗಳ ಜನರು ಕೂಡಿ ಸೌಹಾರ್ದತೆಯಿಂದ ಬಾಳುತ್ತ ಬಂದಿದ್ದಾರೆ. ಭಾರತದ ಇತಿಹಾಸದಲ್ಲಿ ವಿಶ್ವಕ್ಕೆ ಏನಾದರೂ ಸಂದೇಶವಿದ್ದರೆ ಅದು ಈ ಸಹಜೀವನದ ಸಂದೇಶ. ಪೌರ್ವಾತ್ಯ ರಾಷ್ಟ್ರಗಳನ್ನು ಹಾಗೂ ಪಾಶ್ಚಿಮಾತ್ಯ ರಾಷ್ಟ್ರಗಳನ್ನು ಭಾರತ ಯಾವಾಗಲೂ ಸ್ನೇಹದಿಂದ ಕಾಣುತ್ತ ಬಂದಿವೆ. ಜಗತ್ತಿನ ಇಂದಿನ ದ್ವೇಷಶಮನಕ್ಕೆ ಭಾರತದ ಈ ಶಾಂತಿಯ ಸಂದೇಶ ಮಹತ್ವದ್ದಾಗಿದೆ. ಅದಕ್ಕಾಗಿ ಜಗತ್ತು ಇಂದು ಭಾರತದೆಡೆಗೆ ಆಶಾಪೂರ್ಣ ದೃಷ್ಟಿಯಿಂದ ನೋಡುತ್ತಿದೆ.

ಒಂದು ಕಾಲ ಪಾಶ್ಚಿಮಾತ್ಯ ರಾಷ್ಟ್ರಗಳಿಂದ ಮಾನವತೆಯ ಕಲ್ಯಾಣವಾಗುವದೆಂದು ಅವರು ಭರವಸೆ ತಳೆದಿದ್ದರು. ಅವರು ರಶಿಯಾ ಹಾಗೂ ಪಾಶ್ಚಿಮಾತ್ಯ ರಾಷ್ಟ್ರಗಳು ಸಾಧಿಸಿದ ಪ್ರಗತಿಯನ್ನು ಬಹುವಾಗಿ ಮೆಚ್ಚಿದ್ದರು. ರಶಿಯಾ ದೇಶಕ್ಕೆ ಅವರು ಭೇಟಿಯಿತ್ತಾಗ ಆ ದೇಶವು ಅತ್ಯಲ್ಪ ಅವಧಿಯಲ್ಲಿ ಸಾಧಿಸಿದ ಪ್ರಗತಿಯನ್ನು ಶಿಕ್ಷಣ ಕ್ಷೇತ್ರದಲ್ಲಿ ಅದು ಕೈಕೊಂಡ ಕಾರ್ಯವನ್ನು ಅವರು ಪ್ರಶಂಶಿಸಿದರು. ಆದರೆ ಅವರು ರಶಿಯನ್ನರಿಗೂ ಕೂಡ ಅವರ ಸರಕಾರದ ನೀತಿಯಲ್ಲಿ ನ್ಯೂನತೆಗಳನ್ನು ಎತ್ತಿ ತೋರಿಸಿದರು. ಎಲ್ಲಕ್ಕಿಂತ ಹೆಚ್ಚಾಗಿ ಅವರು ರಶಿಯಾದಲ್ಲಿ ವಾಕ್‌ಸ್ವಾತಂತ್ರ್ಯವಿಲ್ಲದ್ದನ್ನು ಕಟುವಾಗಿ ಖಂಡಿಸಿದರು. ಪಾಶ್ಚಿಮಾತ್ಯ ರಾಷ್ಟ್ರಗಳ ಬಗ್ಗೆ ಮಾನವತೆಯ ಕಲ್ಯಾಣದ ಬಗ್ಗೆ ಅವರು ಇಟ್ಟ ಶ್ರದ್ಧೆ ಅವರನ್ನು ಅಂತ್ಯಕಾಲದಲ್ಲಿ ನಿರಾಶೆಗೊಳಿಸಿತು. ಪ್ರಜಾಪ್ರಭುತ್ವದ ಘನತತ್ವದಲ್ಲಿ ನಂಬಿಗೆಯುಳ್ಳ ಪಾಶ್ಚಾತ್ಯ ರಾಷ್ಟ್ರಗಳಿಂದ ವಿಶ್ವಕ್ಕೆ ಚಿರಶಾಂತಿ, ಕಲ್ಯಾಣ ಹಾಗೂ ಸಂಸ್ಕೃತಿಯ ಪ್ರಸಾರ ಆಗಬಹುದೆಂದು

ಅವರು ನಂಬಿದ್ದರು. ಆದರೆ ಮರಣಕಾಲಕ್ಕೆ ಆ ಆಶೆ ಬಯಲಾಯಿತು. ಅವರು ಸಾಯುವದಕ್ಕಿಂತ ಒಂದು ವರ್ಷ ಮುಂಚೆ "Crisis in Civilisation" ಎಂಬ ಚಿಕ್ಕ ಗ್ರಂಥದಲ್ಲಿ ಅವರು ತೀವ್ರ ನಿರಾಶೆಯನ್ನು ವ್ಯಕ್ತಪಡಿಸಿದ್ದಾರೆ: "I had at one time believed that the springs of civilisation would issue out of the heart of Europe. But to-day when I am about to quit the world, that faith has gone bankrupt altogether."

ಆದರೆ ರವೀಂದ್ರರು ನಿರಾಶಾವಾದಿಗಳಲ್ಲ. ಜಗತ್ತಿಗೆ ಶಾಂತಿ ಹಾಗೂ ಕಲ್ಯಾಣ ಪಾಶ್ಚಿಮಾತ್ಯ ರಾಷ್ಟ್ರಗಳಿಂದ, ಅದರಲ್ಲಿಯೂ ಭಾರತದಿಂದ ಆಗುವದೆಂಬ ಭರವಸೆಯನ್ನು ಅವರು ವ್ಯಕ್ತಪಡಿಸಿದ್ದಾರೆ. "The morning is waiting behind the patient dark of the East meek and slient."

ಭಾರತ ವಿಶ್ವದ ರಾಷ್ಟ್ರಗಳಿಗೆ ವಿಶ್ವಬಂಧುತ್ವದ ಸಂದೇಶವನ್ನು ನೀಡಬಲ್ಲದು ಎಂದು ಅವರು ಭರವಸೆಯಿಟ್ಟಿದ್ದರು. ನಾವು ಮಕ್ಕಳಿಗೆ ಶಿಕ್ಷಣ ಕೊಡುವಾಗ ಈ ಸಂದೇಶವನ್ನು ಆ ಮಕ್ಕಳ ಮನಸ್ಸಿನಲ್ಲಿ ಬಿಂಬಿಸಬೇಕು ಎಂಬುದು ಅವರ ಮನೀಷೆಯಾಗಿತ್ತು. ೧೯೧೩ರಲ್ಲಿ ಅವರು ಸಿ. ಎಫ್. ಎಂಡ್ರೂಜ ಅವರಿಗೆ ಬರೆದ ಪತ್ರದಲ್ಲಿ "We must have the widest possible out look for our boys and universal human interests" ಎಂದು ಬರೆದಿದ್ದಾರೆ. ವಿಶ್ವದಾದ್ಯಂತ ರಾಷ್ಟ್ರೀಯತೆಯು ರಕ್ಕಸ ತಾಂಡವವಾಡುತ್ತಿದ್ದಾಗ ರವೀಂದ್ರರು ಎಲ್ಲೆಡೆಗೆ ರಾಷ್ಟ್ರೀಯತೆಯನ್ನು ಖಂಡಿಸಿ 'ವಿಶ್ವಬಂಧುತ್ವ'ದ ಸಂದೇಶವನ್ನು ನೀಡಿದರು. ಅದಕ್ಕಾಗಿಯೇ ಅವರನ್ನು "ವಿಶ್ವಬಂಧುತ್ವದ ದ್ರಷ್ಟಾರ"ರೆಂದು "Prophet of Internationalism" ಎಂದು ಅನೇಕರು ಕರೆದದ್ದುಂಟು. ರವೀಂದ್ರರ ಎತ್ತರಕ್ಕೆ ಅವರ ವಿಶಾಲದೃಷ್ಟಿಗೆ ಪ್ರಾಂತ, ದೇಶ ಬಹಳ ಸಣ್ಣವಾಗಿದ್ದವು. ಅಖಿಲಪ್ರಪಂಚವೇ ಅದರ ಕಕ್ಷೆ. ಅಣುಬಾಂಬಿನ ಯುದ್ಧದಿಂದ, ಸರ್ವನಾಶದ ಭೀತಿಯಿಂದ ಮುಸುಕಿದ ಇಂದಿನ ವಿಶ್ವಕ್ಕೆ ರವೀಂದ್ರರ ವಿಶ್ವಬಂಧುತ್ವದ ಸಂದೇಶ ಅತ್ಯಂತ ಮಹತ್ವದ್ದಾಗಿದೆ.

ರವೀಂದ್ರರ ರಾಜಕೀಯ ವಿಚಾರಗಳ ಹಿರಿಮೆಯೆಂದರೆ ಅವು ಒಬ್ಬ ತೀಕ್ಷ್ಣಬುದ್ಧಿಯ ದೃಷ್ಟಾರನ ವಿಚಾರಪೂರ್ಣ ವಿವೇಚನೆಗಳಾಗಿವೆ. ಯಾವದೇ ವಿಷಯದ ಬಗ್ಗೆಯಾದರೂ ರವೀಂದ್ರರು ಸಮಗ್ರವಾಗಿ ವಿಚಾರಿಸತಕ್ಕವರು. ಆರ್ನಾಲ್ಡ ಕವಿ ಸೊಫೊಕ್ಲಿಸ್‌ನ ಬಗ್ಗೆ "He saw life steadily and saw it whole" ಎಂದು ಹೇಳಿದರು. ಅದೇ ಮಾತನ್ನು ನಾವು ರವೀಂದ್ರರ ರಾಜಕೀಯ ವಿಚಾರಗಳ ಬಗ್ಗೆ ಹೇಳಬಹುದು. ಅವರು ಭಾರತದ ರಾಜಕೀಯ ಸಮಸ್ಯೆಗಳನ್ನು ಸಮಾಧಾನಚಿತ್ತದಿಂದ, ಸ್ಥಿತಪ್ರಜ್ಞರಾಗಿ, ಸಮಗ್ರವಾಗಿ ವಿವೇಚಿಸಿದರು. ಅದರಿಂದಲೇ ಅವುಗಳಲ್ಲಿ ಮೇಧಾವಿಯ ತೀಕ್ಷ್ಣತೆಯಿದೆ, ನಿಜವಾದ ದೇಶಾಭಿಮಾನವಿದೆ,ದೃಷ್ಟಾರನ ದರ್ಶನವಿದೆ.

---

# ಬೆ ಳ ಕು



ಇನ್ನುಂಟೇ ಈ ಜಗದಲಿ
ತಿಳಿಬೆಳಕಿಗು ಮಿಗಿಲು ?
ನಿಚ್ಚದಲಿ ನಿಚ್ಚಳದಲಿ
ಬರೆವುದಿದಂ ಮುಗಿಲು.

ಇರುಳಿನಲಿ ಮುಗಿಲಿನಲಿ
ಮಿನುಮಿನುಗುವ ತಾರೆ
ಕಾಣದ ಕೈ ಜಾಣ್ಮೆಯಲಿ
ಬರೆದಕ್ಷರ ತಾನೆ !

ಹುಣ್ಣಿಮೆಯಿರುಳಲಿ ಇಳಿಯುವ
ಜೊನ್ನದ ಜೋಕಾಲಿ
ಜೋಗೈವುದು ಬಗೆಯನು ಉಲಿ
ಯುತ ಹೊಳಪಿನ ಲಾಲಿ.

ನರ್ತಿಸುವವು ಸಪ್ತರಾಗ
ತೈಜಸದೊಡಲಿನಲಿ
ಕಂಡು ಕುಣಿದು ನಲಿಯ ಬಲ್ಲ–
ವರಿಗಿದೆ ಸುಧೆಯಿಲ್ಲಿ.

ಬೆಳಗಿನಲಿ ಬೈಗಿನಲಿ
ಹೊಸಮೋಡಿಯ ಹೂಡಿ
ದೆಸೆಗಳ ಚುಂಬಿಸುವುದು ಪ್ರಭೆ
ರಸದೋಕುಳಿಯಾಡಿ.

ಹೊಳಪಿಲ್ಲದೆ ತಾನೆಲ್ಲಿದೆ
ಸೌಂದರ್ಯಕೆ ನಿಲುಮೆ ?
ತುಳುತುಳುಕಲಿ ಬಾಳಿನಲಿ
ಈ ಬೆಳಕಿನ ಚಿಲುಮೆ !

ಮುನ್ನಡೆಯಲಿ ಚೆನ್ನಡಿಯಿಡೆ
ಹೊಳೆವುದು ಬೆಳಕಿನೊಳಿಂದು
ಸದ್ಭಾವದಿ ಪ್ರಸ್ಫುರಿಸುವ
ಬುದ್ಧಿಯೆ ಪ್ರತಿಭೆಯ ಸಿಂಧು

—ಡಿ. ಎಸ್. ಕರ್ಕಿ.

# ಆ ಕಾಲ ಈ ಕಾಲ!



ಕಾಲಕ್ಕೆ ಕೊನೆಯಿಲ್ಲ, ಕಾಲಕ್ಕೆ ಮೊದಲಿಲ್ಲ.
ಕಾಲಕ್ಕೆ ಉದಯಾಸ್ತಮಯವೆಂಬುದಿಲ್ಲ ;
ಕಾಲವೆಂಬುದು ದೊಡ್ಡ ಜಲನಿಧಿಯ ತೆರದಲ್ಲಿ,
ಓಲಗಿಸುತಿಹುದಯ್ಯ ಸರ್ವ ಸಮತೆಯಲಿ. ೧

ಕೃತದಲ್ಲಿ ಸತ್ಯ, ತ್ರೇತಾಯುಗದಿ ಕರ್ತವ್ಯ,
ಗತಿಗೂಡಿ ದ್ವಾಪರದಿ ವಿಮಲ ಸದ್ಧರ್ಮ,
ಮತಿಸುವಡೆ ಸಮಸಹೋದರಭಾವ ಕಲಿಯಲ್ಲಿ
ಸತತ ರಾಜಿಸುತಿಹುದು ಮಹನೀಯರಲ್ಲಿ— ೨

ನಳ, ಹರಿಶ್ಚಂದ್ರ, ರಾಘವ, ಧರ್ಮರು ಮೊದಲು
ಕಲಿ ಗಾಂಧಿ–ಇವರಲ್ಲಿ ಭೇದವೆಲ್ಲಿಹುದು ?
ತಿಳಿಯೆ ರವಿ, ಶಶಿ, ತಾರೆ ಎಂದಿನಂತಿದೆ ಜಗದಿ,
ಗೆಲುವುಂಟೆ, ಸೋಲುಂಟೆ ; ಕಾಲವದು ಜಲಧಿ ! ೩

ಕಾಮಧನುವಿನ ತೆರದಿ ಏಳು ಬಣ್ಣದ ಬಾಳು
ಈ ಮಹೀತಳದಲ್ಲಿ ಬೆಳಗುತಿದೆ ತಾಳು ;
ಆ ಮಹಾ ಬಿಲ್ಲಿಹುದು ಕಾಲ ಜಲದಣಿಗೂಡಿ ;
ಮೈದುರೆಯದಿರು ಬಿಲ್ಲ ಮಾಯೆಯೊಡನಾಡಿ. ೪

ಆ ಕಾಲದಲ್ಲೇನು, ಈ ಕಾಲದಲ್ಲೇನು,
ಆ ಕಾಲ ಈ ಕಾಲವಾಗಿ ಬರುತಿಹುದು ;
ಬಾ ಕಾಲ ಸಾಗರದಿ ನಾವೆಲ್ಲ ತೆರಳೋಣ !
ಬಾ ಸತ್ಯ ಸಮಧರ್ಮ ಶಾಂತಿಯ ತರೋಣ— ೫

ಡಿ. ಆರ್. ರಾಮಯ್ಯ.

# ಮೂಡಿ ಬಾ ಚೈತನ್ಯವೆ!



ಮೂಡಿಬಾ, ಓಡಿಬಾ, ಚೈತನ್ಯವೇ!
ಕೂಡುಬಾ, ಆಡುಬಾ, ಚೈತನ್ಯವೇ !!

ತಂಗಾಳಿತೊನೆವಂತೆ, ಮುಂಗಾರು ಸುರಿವಂತೆ
ಕಾಮಿಕಂಗಳತುಂಬಿ ಸಿರಿ ಸೂಸುವಂತೆ !!
ಬಾಂದಳವು ಹೊಳೆವಂತೆ, ಚಂದಿರನು ನಲಿವಂತೆ
ಮಳೆಬಿಲ್ಲು ಮುಗಿಲೇರಿ ತೂಗುವಂತೆ.... ೧

ನಗುವ ಗಿರಿ, ವನದಂತೆ, ಚಿಗಿವ ತರುಲತೆಯಂತೆ
ಹೊಗರೇರಿ ಬಗೆಸೆಳೆವ ಫಲಪುಷ್ಪದಂತೆ !
ನಲಿವ ತೆರೆ, ತೊರೆಯಂತೆ; ಉಲಿವ ಶುಕ, ಪಿಕನಂತೆ.
ಬಗೆಬೀರಿ ಬರಸೆಳೆವ ಚಲುರೂಹಿನಂತೆ.... ೨

ಕಾರಿರುಳ ದಾರಿಯಲಿ, ಕೋಲ್ಮಿಂಚು ಹೊಳೆದಂತೆ
ತೋರಿಬಾರೈ ನಮ್ಮ ಎದೆಗೂಡಿಗೆ !
ಕಾಳಮೇಘದ ಹನಿಯು ಅಪ್ಪಳಿಸಿ ಬರುವಂತೆ
ಹಾರಿಬಾರೈ ನಮ್ಮ ನರನಾಡಿಗೆ.... ೩

ಸಪ್ತಸಾಗರವೆಲ್ಲ ಸುಪ್ತವಾಗುವದುಂಟು.
ಲೋಕ, ನಾಕಗಳೆಲ್ಲ ನೀನಿರದಿರೆ !
ಸಪ್ತಸ್ವರಗಳ ವೀಣೆ ನುಡಿಯಲಾರದು ತಾನೆ !
ನಿನ್ನ ದಿವ್ಯಾಂಗುಲಿಯನಾಡಿಸದಿರೆ.... ೪

ನಾಕದೊಳಗಿನ ಕೂಸು ಮೂಕವಾಗುವದಂತೆ,
ಚೈತನ್ಯದೇವಿ ನೀ ಮರೆಯಾದರೆ !
ನೂಕುನುಗ್ಗಲು ಇರಲಿ, ಲೋಕದೆಸೆದಪ್ಪಿರಲಿ
ದಾರಿ ತೋರದೆ ತಾನೆ! ನೀನಿಳಿದರೆ ? ೫

ಮೂಡಿ ಬಾ ! ಓಡಿ ಬಾ ! ಚೈತನ್ಯವೇ !!
ಕೂಡಿ ಬಾ ! ಆಡು ಬಾ ! ಚೈತನ್ಯವೇ !!

---

# ಹಾಡೊಂದು ಹಾಡಬೇಕು !

ನಾಡಿನಾ ನಾಡಿ ನರನರಗಳಲ್ಲಿ, ಮಿಡಿವಂತೆ ಹಾಡಬೇಕು !
ಹೃದಯವನೆ ಸೇರಿ ಮಂಗಳವ ಬೀರಿ, ನುಡಿವಂತೆ ಹಾಡಬೇಕು ೧

ಎದೆಮಿಂಚು ಮಿಂಚಿ ವಿಶ್ವಕೂ ಹಂಚಿ
ಬೆಳೆವಂತೆ ಮಿನುಗಬೇಕು !
ಗೀತೆಯೊಳಶಾಂತಿ ಪ್ರಶಾಂತವಾಗಿ
ಇಳಿವಂತೆ ಜಿನುಗಬೇಕು ೨

ಜೀವನದ ಝುರಿಯು ಧುಮ್ಮಿಕ್ಕಿಸಾಗಿ
ಸಾಗರವ ಸೇರಬೇಕು !
ಎತ್ತಲೂ ಸಾಗಿ ಸಮೃದ್ಧವಾಗಿ
ನವ್ಯತೆಗೆ ಬಾಗಬೇಕು ! ೩

ಹಿಮಗಿರಿಯನೇರಿ, ಜಗಕೆಲ್ಲ ಸಾರಿ
ಹಿರಿಹಾಡು ಹಾಡಬೇಕು !
ಅಂತವನೆ ತಟ್ಟಿ, ಅಂತ್ಯಕೂ ಮುಟ್ಟಿ
ಮಂಜುಳವ ಬೀರಬೇಕು ! ೪

ಅಂದು, ಇಂದು, ಎಂದೆಂದು ಮುಂದು
ಹೃತ್ಕಮಲವರಳಬೇಕು !
ಎಂದಾದರೊಮ್ಮೆ ಎನ್ನೆದೆಯು ತುಂಬಿ
ಹಾಡೊಂದು ಹಾಡಬೇಕು ! ೫

—ಹೊಸಮನಿ ಸಂಗಮೇಶ, ಹುನಗುಂದ.

# ಕರ್ನಾಟಕದ ಶಿಲ್ಪ ಕಲೆ



**ಶ್ರೀ ಶಂ. ಬ. ತೋಂಟದ,** ಬಿ.ಎ. (ಆನರ್ಸ್),
ಶಿಕ್ಷಕರು, ವಿಜಯ ಮಹಾಂತೇಶ ಮಾಧ್ಯಮಿಕ ಶಾಲೆ, ಹುನಗುಂದ.

ಆದಿಕಾಲದಿಂದಲೂ ಕರ್ನಾಟಕವು ಸೃಷ್ಟಿ ಸೌಂದರ್ಯದ ಬೀಡು, ಕಲೆಯ ಆಗರ, ಸಂಸ್ಕೃತಿಯ ತೊಟ್ಟಿಲು. ಇಂಥ ಪವಿತ್ರ ಪುಣ್ಯಭೂಮಿಯಲ್ಲಿ ಧರ್ಮ ನಿಷ್ಠರೂ, ಮತಸ್ಥಾಪಕರೂ, ಧರ್ಮ ಪುನರುಜ್ಜೀವಕರೂ, ಮಹಾ ತಪೋನಿಧಿಗಳೂ, ಕಾವ್ಯಪರಿಣತಿಯಲ್ಲಿ ಪಳಗಿದ "ರತ್ನತ್ರಯರೂ ಕವಿ ಚಕ್ರವರ್ತಿಗಳೂ" ಉದ್ಭವಿಸಿದಂತೆ, ಶಿಲ್ಪಕಲೆ ಸಾಕ್ಷಾತ್ಕಾರವನ್ನು ನೀಡುವ ಮಹಾನ್ ಶಿಲ್ಪಿಗಳೂ ಜನ್ಮವೆತ್ತಿ ನಾಡಿನ ಕೀರ್ತಿಯನ್ನ ಜಗದಲ್ಲಿ ಮೆರೆಯಿಸಿದುದುಂಟು. ತಮ್ಮ ಕಲೆಯಿಂದ ಕನ್ನಡ ನಾಡಿಗೆ ಉದಾತ್ತ ಹಾಗೂ ಅಮೋಘವಾದ ಹಿರಿಯ ಕಾಣಿಕೆಯನ್ನು ಸಲ್ಲಿಸಿದುದುಂಟು. ಇಂತಹ ಅಮರ ಕೃತಿಯನ್ನೆಸಗಿದ ಕರುನಾಡಿನ ಶಿಲ್ಪಿಗಳಿಗೆ ಸಮಗ್ರ ಭಾರತವೇ ಚಿರಋಣಿಯೆಂಬ ಮಾತನ್ನು ಹೇಳುವುದೇ ಬೇಡ. ಅಂತೆಯೇ ಕರ್ನಾಟಕದ ಶಿಲ್ಪಕಲೆಗೆ ಜಗದ ಮನ್ನಣೆಯುಂಟು.

ಗುಡಿಯೊಂದರ ಗೋಡೆಯಲ್ಲಿ ಅತೀ ಸೂಕ್ಷ್ಮವಾದ ಕೆತ್ತನೆಯ ಕೆಲಸವನ್ನು ಕಂಡು ಆದರಲ್ಲಿ ತನ್ಮಯರಾಗಿ ತದೇಕಚಿತ್ತದಿಂದ ಅದರ ಸೌಂದರ್ಯವನ್ನು ತಣಿದು ತೃಪ್ತರಾಗುತ್ತೇವೆ. ಅದು ಪಾಂಡಿತ್ಯ ಪ್ರದರ್ಶನವನ್ನು ತೋರಿಸಿಲ್ಲ, ಅದ್ಭುತವನ್ನು ತೋರಿಸಿಲ್ಲ, ಅದಕ್ಕಿಂತ ಶ್ರೇಷ್ಠವಾದುದುಂಟು, ಅದು ಯಾವುದೆಂದರೆ ಕಲೆ.

ಸೌಂದರ್ಯದ ಸ್ವರೂಪ ದರ್ಶನವೇ ಕಲೆಯು, ಆನಂದವೇ ಅದರ ಫಲ. ಸುತ್ತುಮುತ್ತಲಿನ ವಾತಾವರಣವು ಆಶೆಯುದ ಸಾಧನೆಗೆ ಸಹಾಯಕ ಸಾಮಗ್ರಿಯು.

ಕರ್ನಾಟಕವು ಹುಟ್ಟಿ ಹರಡಿದ ಧಾರ್ಮಿಕ ಚಲನೆಗಳಿಗೆಲ್ಲ ವಿಕಾಸಸ್ಥಾನವಾಗಿದೆ. ಕರ್ನಾಟಕದಲ್ಲಿ ಕಾಣಬರದ ಪ್ರಕೃತಿ ಸೌಭಾಗ್ಯ ವಿಶೇಷವೇ ಇಲ್ಲ. ರಾಜಕೀಯ ಸ್ಥೈರ್ಯವೂ, ಸಂಪದಭಿವೃದ್ಧಿಯೂ, ಅರಸರ ಧಾರ್ಮಿಕ ವ್ಯವಸ್ಥಾಚರಣೆಯೂ, ಶಾಂತಿಯೂ ಇದ್ದಾಗ ಕರ್ನಾಟಕವು ಜಗನ್ಮೋಹನಾಕಾರುಗಳಾದ ಕಲಾ ವಿಶೇಷಗಳನ್ನು ಸೃಷ್ಟಿಸಿತು. ಕರ್ನಾಟಕವನ್ನು "ಲಲಿತಕಲಾಖನಿ"ಯೆಂದರೆ ಅತಿಶಯವೆನಿಸಲಾರದು. ಪ್ರಕೃತ ವಾಸ್ತು, ಶಿಲ್ಪ ಚಿತ್ರ ಮತ್ತು ಸಂಗೀತಕಲೆಗಳಲ್ಲಿ ಕರ್ನಾಟಕವು ಮೊದಲಿನಿಂದಲೂ ಹಿರಿಯಸ್ಥಾನವನ್ನು ಪಡೆದಿವೆಯೆಂದು ಧಾರಾಳವಾಗಿ ಹೇಳಬಹುದು.

ಕರ್ನಾಟಕದ ಶಿಲ್ಪಕಲೆಯ ವೈಶಿಷ್ಟ್ಯವು ೧೨, ೧೩ ನೆಯ ಶತಮಾನದ ಕಟ್ಟಡಗಳಲ್ಲಿ ಚನ್ನಾಗಿ ಕಂಡುಬರುತ್ತದೆ.

ಬೌದ್ಧ, ಜೈನ, ಶೈವ, ವೀರಶೈವ, ಬ್ರಾಹ್ಮಣ ಇತ್ಯಾದಿ ಮತಗಳನ್ನನುಸರಿಸಿ ವಾಸ್ತು ಶಿಲ್ಪವಿಭಾಗ ಮಾಡುವುದು ಸಮಂಜಸವಾಗಿ ಕಾಣುವದಿಲ್ಲ. ಏಕೆಂದರೆ ಪ್ರಾಕೃತಿಕ ಭೇದಪ್ರಭೇದಗಳೇ ಬೇರೆ ಬೇರೆ ಮಾರ್ಗದಲ್ಲಿ ಕಾಣಬರುವ ವಿಶೇಷಕ್ಕೆ ಮೂಲಕಾರಣ. ಲಲಿತಕಲಾ ಸೌಂದರ್ಯವನ್ನು ನೋಡಿ ಕಣ್ಣ ತೃಷೆಯನ್ನು ಹಿಂಗಿಸಿಕೊಳ್ಳಬೇಕಾದರೆ, ಅಜಂತಾ, ವೆಲ್ಲೂರು, ಕಾರ್ಲಿ ವೊದಲಾದ ಗುಹೆಗಳನ್ನು ಸಂದರ್ಶಿಸಬೇಕು. ಇವೆಲ್ಲ ಕ್ರಿ. ಶ. ಮೊದಲನೆಯ ಶತಮಾನಕ್ಕೆ ಸೇರಿದುವು. ಇವುಗಳು ಬೌದ್ಧ ಸ್ಫೂರ್ತಿಯ ಸೃಷ್ಟಿಗಳು. ನೀಟಾದ ಸ್ತೂಪಗಳು, ಚತುರ್ಮುಖ, ಬಹುಮುಖ ಮತ್ತು ದುಂಡಾದ ಕಂಬಗಳ ಮೇಲೆ ನಿಂತಿರುವ ಸುತ್ತುಸೂರಿನ ಎತ್ತರವಾದ ಮಾಳಿಗೆಯಿಂದಲೂ, ರಚನಾ ವೈವಿಧ್ಯದಿಂದಲೂ ಕೂಡಿರುವುವೇ ಈ ಬೌದ್ಧ ವಾಸ್ತು ವಿಶೇಷಗಳ ಮುಖ್ಯ ಲಕ್ಷಣ. ಕಂಬಗಳ ಮೇಲೆ ಕೆತ್ತಲ್ಪಟ್ಟಿರುವ ಗೊಂಬೆಗಳಲ್ಲಿ ಬೌದ್ಧ ಸನ್ಯಾಸಿಗಳ ಆನಂದ ಜೀವನವು ಪ್ರತಿಬಿಂಬಿತವಾಗಿದೆ. ಈ ವಿಶೇಷವನ್ನು ಸಂಪೂರ್ಣವಾಗಿಯೂ, ವಿಸ್ತಾರವಾಗಿಯೂ ನೋಡಬೇಕಾಗಿದ್ದರೆ, ಅಜಂತದ ಚಿತ್ರಕರ್ಮದಲ್ಲಿಯೇ ನೋಡಬೇಕು.

ಬಹು ಪುರಾತನ ಕಾಲದ ಹಲವು ಶಿವಾಲಯದಲ್ಲಿ ಈ ಶಿಲ್ಪಕಲೆಯ ಸೌಂದರ್ಯವನ್ನು ನೋಡಬಹುದು. ಚಾಲುಕ್ಯ ಚಕ್ರವರ್ತಿಗಳ ಕಾಲದಲ್ಲಿ ಪ್ರತೀತಿಯನ್ನು ಪಡೆದ ಐಹೊಳೆಯ ದುರ್ಗಾದೇವಾಲಯದಲ್ಲಿ ಕೆತ್ತಿರುವ ನಟರಾಜ ಚಿತ್ರವೂ ಮತ್ತು ಅದರ ಸಮೀಪದಲ್ಲಿರುವ ಹುಚ್ಚಿ ಮಲ್ಲಿಯ ಗುಡಿಯೂ ಲಕ್ಕುಂಡಿ, ಗದುಗಿನಲ್ಲಿರುವ ದೇವಾಲಯಗಳೂ ಕಲೆಯ ಆಗರಗಳು. ಹಾಗೂ ಬಹು ಪುರಾತನ ಕಾಲದ ಕಲೆಯ ಸ್ವರೂಪದರ್ಶನಗಳು. ಅಲ್ಲದೆ ಇವುಗಳು ಕರ್ನಾಟಕದ ವಾಸ್ತುಶಿಲ್ಪದ ನೈಜರೂಪಗಳು. ಮತ್ತು ಜಾಗತಿಕ ಲಲಿತಕಲೆಯ ಮಾಲಿಕೆಯಲ್ಲಿ ಮಹೋನ್ನತ ಸ್ಥಾನವನ್ನು ಪಡೆದ ಕರ್ನಾಟಕದ ಕಲೆಯ ಉದಾತ್ತ ಕಾಣಿಕೆಗಳೂ ಆಗಿವೆ.

ಮಾನವನ ಆತ್ಮಸ್ಫುರಣದ ಲಲಿತಕಲಾ ಶಕ್ತಿಯನ್ನು ಅರಿಯಬೇಕಾದರೆ, ಪಶ್ಚಿಮ ಕನಾವಳಿಯಲ್ಲಿರುವ ಎಲ್ಲೋರದ ಒಕ್ಕಲಿನಲ್ಲಿ ಕೊರೆದಿರುವ ಕೈಲಾಸ ದೇವಾಲಯವನ್ನೂ ಸಂದರ್ಶಿಸಬೇಕು. ಇದು ಕೆತ್ತನೆಯ ಕೆಲಸದ ದೃಷ್ಟಿಯಿಂದ ಸ್ಥೂಲವಾಗಿ ವಿಚಾರಿಸಿದಲ್ಲಿ ಅತ್ಯಂತ ಶ್ರೇಷ್ಠವೂ ಜಗನ್ಮೋಹನಾಕಾರವೂ ಆದುದು. ಕಲಾ ವಿಮರ್ಶಕಾಚಾರ್ಯರು ಇದನ್ನು "ಜಗದಾಶ್ಚರ್ಯವಸ್ತು" ಎಂದು ಘಂಟಾಘೋಷವಾಗಿ ಹೇಳುತ್ತಾರೆ. ಈ ದೇವಾಲಯದಲ್ಲಿ ಕಾಣುವ ಚಪ್ಪಟೆಯಾದ ಮೇಲ್ಛಾವಣಿ ಮುಚ್ಚಿರುವ ಶಿಖರ, ವಿಮಾನ ಮೊದಲಾದ ಅಂಗವಿಶೇಷಗಳಿಂದ ಈ ಕಟ್ಟಡವು ದ್ರಾವಿಡ ಮಾರ್ಗವನ್ನೇ ಅವಲಂಬಿಸಿದೆಯೆಂದು ಹೇಳಬಹುದು. ಇಲ್ಲಿ ಕಾಣಬಹುದಾದ ಭಿತ್ತಿ ಚಿತ್ರಗಳಲ್ಲೆಲ್ಲ, ರಾವಣನು ಕೈಲಾಸಾದ್ರಿಯನ್ನು ಎತ್ತುವಿಕೆ, ದಶಾವತಾರ ಮತ್ತು ಭೈರವಾದಿಗಳು, ಕಲಾಕೋವಿದರ ಅಭಿಪ್ರಾಯಗಳಲ್ಲಿ ಉತ್ತಮೋತ್ತಮವಾದವುಗಳಾಗಿವೆ. ಈ ದೇವಾಲಯವು ರಾಷ್ಟ್ರಕೂಟ ಸಾಮ್ರಾಟನಾದ ಮೊದಲನೆಯ ಕೃಷ್ಣನಿಂದ ಕಟ್ಟಿಸಲ್ಪಟ್ಟಿತು.

ಬದಾಮಿಯ ಗುಡ್ಡದಲ್ಲಿ ಕೊರೆದಿರುವ ದೇವಾಲಯಗಳು ವೆಲ್ಲೂರ ದೇವಾಲಯಗಳಿಗಿಂತ ಕೊಂಚ ಕಾಲ ಹಿಂದಿನವು. ಬದಾಮಿಯ ಗುಹಾಂತರ್ದೇವಾಲಯಗಳಲ್ಲಿ ಉತ್ತಮವಾದ ಹಾಗೂ ಶ್ರೇಷ್ಠವಾದ ಕಲಾಚಿಹ್ನಗಳೆಲ್ಲವೂ ಇರುತ್ತವೆ. ಇಲ್ಲಿ ನಾಲ್ಕು ಗುಹೆಗಳುಂಟು. ಒಂದು ಶಿವಾಲಯ, ಮತ್ತೊಂದು ವಿಷ್ಣು ಆಲಯ, ಇನ್ನೊಂದು ಜಿನಾಲಯ. ಎಂತಹ ಧಾರ್ಮಿಕ ಉನ್ನತಿ, ಸಹಿಷ್ಣುತೆ, ಸಹಾನುಭೂತಿ ಕನ್ನಡಿಗರಿಗಿತ್ತೆಂನು ತೋರಿಸಲು ಮಹಾಸಾಧನಗಳಾಗಿ, ತಮ್ಮ ಕಲೆಯ ನೈಪುಣ್ಯದಿಂದ, ಶಿಲ್ಪಕಲೆಯ ಸೌಂದರ್ಯದಿಂದ ಕಲಾವಿಮರ್ಶಕರನ್ನು ತಮ್ಮೆಡೆಗೆ ಸೆಳೆದುಕೊಂಡು ಕನ್ನಡಿಗರ ಧರ್ಮ ಸಮನ್ವತೆಯ ಮಹಾಮಂತ್ರವನ್ನು ಬೀರುವ ನಿದರ್ಶನಗಳಾಗಿವೆ. ಎಂಥ ಸೂಕ್ಷ್ಮ ಕೆತ್ತನೆಯ ಕೆಲಸವನ್ನಾದರೂ ಮಾಡಬಹುದು. ಆದರೆ ಗುಡ್ಡವನ್ನೇ ಕೊರೆಯುವದು ಮತ್ತು ಅದರಲ್ಲಿ ಕೊರೆದ ಮೂರ್ತಿಗಳು ಜೀವಕಳೆಯಿಂದ ಲಕಲಕಿಸುವಂತೆ ಮಾಡುವುದು ಅದ್ಭುತ ಮತ್ತು ಅಸಂಭಾವ್ಯವಾದ ಕಾರ್ಯ. ಇಂಥ ಕಾರ್ಯವನ್ನು ಹಸ್ತಗತ ಮಾಡಿಕೊಂಡು ಕನ್ನಡಿಗರು ಕಲಾಕೌಶಲ್ಯದ ಧ್ವಜವನ್ನೇ ಹಿಡಿದರೆಂದು ಹೇಳಿದರೆ ಅತ್ಯುಕ್ತಿಯಾಗಲಿಕ್ಕಿಲ್ಲ.

ಚಾಲುಕ್ಯ ರಾಜರ ಧರ್ಮಸ್ಥಳವಾದ ಪಟ್ಟದ ಕಲ್ಲಿನಲ್ಲಿ ಸಂಗಮೇಶ್ವರ, ಲೋಕೇಶ್ವರ ಮುಂತಾದ ಮಹಾಮಂದಿರಗಳನ್ನೂ, ಸಣ್ಣ ಗುಡಿಗಳನ್ನೂ ಕಾಣಬಹುದು. ಲೋಕೇಶ್ವರ ದೇವಾಲಯವನ್ನು ಎರಡನೆಯ ವಿಕ್ರಮಾದಿತ್ಯನ ಅರಸಿಯಾದ ಲೋಕಮಹಾದೇವಿಯು ವಿಕ್ರಮಾದಿತ್ಯನು ಪಲ್ಲವರ ರಾಜಧಾನಿಯಾದ ಕಂಚಿಯನ್ನು ೩ ಸಾರಿ ಗೆದ್ದುದರ ಸ್ಮರಣಾರ್ಥವಾಗಿ ಕಟ್ಟಿಸಿ[illegible]ಟು. ಇದರಿಂದ ಆ ಮಹಾರಾಣಿಯವರಲ್ಲಿದ್ದ ಧಾರ್ಮಿಕ ಮಹೋನ್ನತಿಯು [illegible]. ಇದಲ್ಲದೆ ಪಾಪನಾಥ, ಕಾಶಿ,

ವಿಶ್ವನಾಥ, ಕಾಡಸಿದ್ಧೇಶ್ವರ, ಜಂಬುನಾಥ ಮೊದಲಾದವುಗಳು ಮಾನವನ ಮನಸ್ಸಿಗೆ ಉಚ್ಚಸಂಸ್ಕೃತಿಯನ್ನೀಯುವ ಮಹಾದೇವ ಮಂದಿರಗಳು. ಪೋರ್ತುಗಾಲದ ಶಿಲ್ಪಿಗಳು ಐಹೊಳೆ, ಪಟ್ಟದಕಲ್ಲುಗಳನ್ನು ಸಂದರ್ಶಿಸಿ ಆ ದೇವಾಲಯಗಳನ್ನು ಕಲೆಯ ದೃಷ್ಟಿಕೋನದಿಂದ ವಿಮರ್ಶಿಸಿ ಈ ಮಾತನ್ನು ಹೇಳಿದರು. "Aiholi is the centre of the Art which was Spread out in northern India." ಇದರಿಂದ ಐಹೊಳೆಯು ಶಿಲ್ಪಕಲೆಯ ಆಗರ, ಸೌಂದರ್ಯದ ಬೀಡು ಮತ್ತು ಉದಾತ್ತ ಸಂಸ್ಕೃತಿಯ ಮಾರ್ಗದರ್ಶನವೆಂಬುದು, ಆ ಕಲೆಯೇ ಸೂಚಿಸುವದು. Here we can say that the Art is the discovery of human personality. ಬದಾಮಿ, ಐಹೊಳೆ, ಪಟ್ಟದಕಲ್ಲುಗಳ ದೇವಾಲಯ ಹಾಗೂ ಗವಿಗಳನ್ನು ನೋಡಿದಾಗ ವಿಶ್ವಮಾನಸ ದೃಷ್ಟಿಯು (Cosmic Vision) ತಲೆದೋರದೆ ಇರದು. ಇದುವೇ ನಿಜವಾದ ಕಲೆಯ ಉದಾತ್ತಸ್ವರೂಪ ದರ್ಶನ.

ಬನವಾಸಿಯ ಮಧುಕೇಶ್ವರ ದೇವಾಲಯವನ್ನು ನೋಡಿದರೆ ಭೂಲೋಕದ ವೈಕುಂಠವೇನೋ ಎನ್ನುವಂತೆ ಕಂಡುಬರುವದು. ಏಕೆಂದರೆ ವೈಕುಂಠವು ಸುಖ ಸಂಪದವನ್ನಿತ್ತು ಮಾನವನನ್ನು ಆನಂದಸಾಗರದಲ್ಲಿ ತೇಲಿಸುವ ಮಹಾಮಾರ್ಗವನ್ನೀಯುವ ರಮಣೀಯ ಸ್ಥಳವೆಂಬ ಕಲ್ಪನೆಯು ಭಾರತೀಯರಿಗುಂಟು. ಅಂತೆಯೇ ಕಲೆಯ ದೃಷ್ಟಿಯಿಂದ ಬನವಾಸಿಯು ವೈಕುಂಠವೆಂದು ಶಿಲ್ಪಿಗಳು ಕರೆದುದುಂಟು. ಇಲ್ಲಿ ಸೂಕ್ಷ್ಮ ಕಲೆಯ ಸ್ವರೂಪ ದರ್ಶನವು ನಮಗಾಗದೆಯಿರದು. ಕಲೆಯ ಶ್ರೇಷ್ಠತೆಗೆ ಸುತ್ತಲಿನ ವಾತಾವರಣವೂ ಅವಶ್ಯ. ಬನವಾಸಿಯು ಸೃಷ್ಟಿಸೌಂದರ್ಯದ ನೆಲೆವೀಡು ಮತ್ತು ಕಲೆಯ ಆಗರವೆಂದು ಹೇಳಬಹುದು. ಅಂತೆಯೇ ಮಹಾಕವಿ ಆದಿಪಂಪನು ತನ್ನ "ವಿಕ್ರಮಾರ್ಜುನ ವಿಜಯದಲ್ಲಿ" "ಮಧುಮಹೋತ್ಸವವಾದಡೆ, ತೆಂಕಣಗಾಳಿ ಸೋಂಕಿದೊಡೆ, ಬಿರಿದ ಮಲ್ಲಿಗೆಗಳು ಕಂಡೊಡೆ ಆರಂಕುಶ ವಿಟ್ಟೊಡೆ ನೆನೆಯುವದೆನ್ನ ಮನಂ ಬನವಾಸಿ ದೇಶಮಂ" ಎಂದು ಹೇಳಿರುವನು. ಪಂಪನು ಕೂಡಾ ಇದರ ಸೌಂದರ್ಯಕ್ಕೆ ಮಾರುಹೋಗಿರುವನೆಂಬುದು ಕಂಡುಬರುವುದು. ಇದಲ್ಲದೆ ಕಲೆಯು ಸೌಂದರ್ಯದ ಸಾಕ್ಷಿವೆಂಬುದನ್ನು ಮಧುಕೇಶ್ವರ ದೇವಾಲಯವು ಸಾರಿ ಹೇಳುವುದುಂಟು. ಅಂತೆಯೇ ಬನವಾಸಿಯು ದಕ್ಷಿಣ ಭಾರತದಲ್ಲಿ ಶ್ರೇಷ್ಠತೆಯನ್ನು ಪಡೆದುದುಂಟು.

ಶ್ರವಣಬೆಳಗೊಳದ ಚಿಕ್ಕ ಬೆಟ್ಟದ ಮೇಲೆ "ಗೊಮ್ಮಟೇಶ್ವರನ" ವಿಗ್ರಹವಿರುವುದು. ಇದು 57⅓ ಅಡಿ ಎತ್ತರವಾಗಿದೆ. ಏಸಿಯಾ ಖಂಡದಲ್ಲೆಲ್ಲ ಇದಕ್ಕಿಂತ ಎತ್ತರವಾದ ವಿಗ್ರಹವೇ ಇಲ್ಲ. ಗಂಗವಂಶದ ರಾಚಮಲ್ಲನ ದಂಡನಾಯಕನಾದ ಚಾಮುಂಡರಾಯನು ಇದನ್ನು ಸ್ಥಾಪಿಸಿದನು. ಗೊಮ್ಮಟೇಶ್ವರನ ಭವ್ಯ ವಿಗ್ರಹವನ್ನು

ಸಂದರ್ಶಿಸಿದಾಗ್ಗೆ, ಕನ್ನಡಿಗರ ಲಲಿತಕಲೆಯ ಉದಾತ್ತತೆಯು ಕಾಣದೆ ಇರದು. ಈ ಗೊಮ್ಮಟೇಶ್ವರ ವಿಗ್ರಹವು ಕರ್ನಾಟಕದ ಕಲೆಯ ಹೆಮ್ಮೆಯ ಸೊತ್ತೆಂದೇ ಹೇಳ ಬಹುದು.

ಹಳೆಬೀಡಿನ ಹೊಯ್ಸಳೇಶ್ವರ ದೇವಾಲಯವು ಕಲೆಯ ಪರಮೋತ್ಕೃಷ್ಟವಾದ ಉದಾಹರಣೆಯೆಂದು ಹೇಳಬಹುದು. ಕರ್ನಾಟಕದಲ್ಲಿ ವಾಸ್ತುಶಿಲ್ಪವು ಹೊಯ್ಸಳ ಬಲ್ಲಾಳರ ಕಾಲದಲ್ಲಿ ಪರಿಪೂರ್ಣತೆಯ ಪರಮಾವಧಿಯನ್ನು ಹೊಂದಿತೆಂದು ಹೇಳ ಬೇಕು.

ವಿಜಯನಗರದ ಅರಸರ ಕಾಲದಲ್ಲಿ ಮೊದಲಿನಿಂದಲೂ ದೇವಮಂದಿರಗಳನ್ನು ನಿರ್ಮಿಸುವುದಕ್ಕೆ ಹೆಚ್ಚಿನ ಮನ್ನಣೆ, ಶ್ರದ್ಧೆ, ವಿಶ್ವಾಸಗಳಿದ್ದರೂ ಕೃಷ್ಣದೇವರಾಯನ ಕಾಲದಲ್ಲಿ ಅದು ಅಂತ್ಯಶಿಖರವನ್ನು ಮುಟ್ಟಿತು. ಸಾಮ್ರಾಜ್ಯದ ವಿಸ್ತರಣೆಯ ಜೊತೆಯಲ್ಲಿಯೇ ದೇವಮಂದಿರಗಳ ಬೆಳವಣಿಗೆಗಳೂ ಸಾಕಷ್ಟು ಆದವು. ಹಂಪೆಯ "ವಿಜಯ ವಿಠ್ಠಲ"ನ ಗುಡಿಯು ಆ ಕಾಲದ ವಾಸ್ತುಶಿಲ್ಪಕ್ಕೂ, ದ್ರಾವಿಡ ಮಾರ್ಗಕ್ಕೂ ಲಕ್ಷಣವಾದ ಉದಾಹರಣೆಯಾಗಿದೆ. ವಿಜಯನಗರದ ಸಾಮ್ರಾಜ್ಯ ಪತನ ಕಾಲದಲ್ಲಿ ಅನೇಕ ದೇವಮಂದಿರಗಳೂ ಮೂರ್ತಿಗಳೂ ಮಹಮ್ಮದಿಯರಿಂದ ಭಂಟಿಸಲ್ಪಟ್ಟಿದ್ದರೂ ಶ್ರೀ ಹಂಪೆಯರಸ, ವಿಜಯನಗರ ರಾಜರುಗಳ ಕುಲದೈವ ವಿರುಪಾಕ್ಷನ ಮಹಾ ಮಂದಿರವು ಕಲೆಯ ಸಂಕೇತವಾಗಿ ತುಂಗಭದ್ರೆಯ ದಂಡೆಯ ಮೇಲೆ ಕನ್ನಡಿಗರ ಕಲಾಸಾಕ್ಷಿಯನ್ನು ಸಾರಿ, ಸಾರಿ ಹೇಳುವಂತೆ ಅಚ್ಚಳಿಯದೆ ಹಾಗೆಯೇ ನಿಂತಿರುವುದು. ಇಂಥ ರಮಣೀಯ ಹಾಗೂ ಮನೋಹರವಾದ ಶ್ರೇಷ್ಠ ದೇವಾಲಯಗಳು ಹಲವಡೆಗೆ ಸಿಗುವವು. ಏಕ. ಸಾಸಿವೆಯ ಕಾಳು, ಕಡಲೆಯ ಕಾಳು ಗಣಪತಿಗಳನ್ನು ನೋಡಿದಾಗ್ಗೆ ಅಖಂಡ ಕಲ್ಲಿನಲ್ಲಿ ಕೆತ್ತಿದ ಕಲೆಯ ಮರ್ಮವು ಹೊಳೆಯದಿರದು. ಇದರಂತೆ ವಿಜಯವಿಠ್ಠಲನ ಮಂದಿರದ ಮುಂದಿರುವ ಅಖಂಡ ಕಲ್ಲಿನ ರಥವನ್ನು ಸಂದರ್ಶಿಸಿದಾಗ್ಗೆ ಕನ್ನಡಿಗರ ವಾಸ್ತು ಶಿಲ್ಪದ ಅರಿವಾಗದೆ ಇರದು. ಅನೇಕ ಗುಡಿಗೋಪುರಗಳಿಂದ ತುಂಬಿದ ಹಂಪೆಯು ಪುಣ್ಯಕ್ಷೇತ್ರವಾಗಿ ದಕ್ಷಿಣಕಾಶಿಯಾಗಿ ಕರೆಯಿಸಿಕೊಂಡಿತು. ಹಂಪೆಯನ್ನು ಸಂದರ್ಶಿಸಿದಾಗ್ಗೆ, ನೈಜರೂಪವಾದ ಕಲೆಯ ರಾಶಿಯೇ ಕಂಡುಬರುವುದು. ಈ ಪುಣ್ಯಕ್ಷೇತ್ರದ ದೇವಮಂದಿರಗಳ ಭಗ್ನಾವಶೇಷಗಳನ್ನು ನೋಡಿದಾಗ್ಗೆ ಜೀವನವು ಕ್ಷಣಭಂಗುರವೆಂಬುದು ತಾನ್ ತಾನೇ ಅರಿಕೆಯಾಗುವುದು. ಹಿಂದೆ ವೈಭವೋನ್ನತಿಯಿಂದ ಬಾಳಿಯಾಳಿದ ಕನ್ನಡ ರಾಜ್ಯದ ರಾಜಧಾನಿಯ ಅವಸ್ಥೆಯು ಇಂತಾಗಿರುವಾಗ್ಗೆ, ಎಂಥ ಕಲ್ಲೆದೆಯ ಕನ್ನಡಿಗನಿಗೂ ತನ್ನ ಪೂರ್ವಜರ ಸ್ಮರಣೆಯುಂಟಾಗದಿರದು. ಹಂಪೆಯು ಹಾಳಾದರೂ ಅದರ ಕಲೆಯು ಹಾಗೆಯೇ ಉಳಿದಿದೆ.

ಇಲ್ಲಿಯವರೆಗೆ ಹಿಂದೂ ಸಾಂಪ್ರದಾಯದ ಶಿಲ್ಪಕಲೆಯ ಬಗೆಗೆ ವಿವರಿಸಿದ್ದಾಯಿತು. ಇನ್ನು ಮಹಮ್ಮದೀಯರ ಕಲೆಯ ಕಡೆಗೆ ಹೊರಳಿದರೆ, ಅಲ್ಲಿಯೂ ನಿಷ್ಣಾ

ತತೆಯು ಕಂಡುಬರುವುದು. ವಿಜಾಪೂರದ ಮುಹಮ್ಮದಷಹನು ತನ್ನ ಸಮಾಧಿಗಾಗಿ ಗೋಳುಗುಮ್ಮಟನನ್ನು ಕಟ್ಟಿಸಿದನು. ಈ ಗುಮ್ಮಟವು ೧೯೮ ಅಡಿಗಳೆತ್ತರವಾಗಿದೆ. ಇದರ ವ್ಯಾಸವು ೧೨೦ ಅಡಿಗಳಿರುವುದು. ಇದರ ಮೇಲಿಂದ ಮಿಕ್ಕ ಅಂಗಾಂಗಗಳ ಪ್ರಮಾಣವನ್ನುಊಹಿಸಬಹುದು. ಈ ಗೋಳಗುಮ್ಮಟವು "One of the Seven wonders of the World" ಎಂದು ಕರೆಯಿಸಿಕೊಂಡಿದೆ. ಇದಲ್ಲದೆ ಜುಮ್ಮಾಮಶೀದಿಯಂತಹ ವಿಶಾಲ ಮಸೀದಿಯು ಕನ್ನಡ ನಾಡಿನಲ್ಲಿ ಎಲ್ಲಿಯೂ ಇಲ್ಲ. ಇಬ್ರಾಹಿಮ್ರೋಜವು ಶಿಲ್ಪಕಲೆಯ ಆಗರವೆಂದೆ. ಧಾರಾಳವಾಗಿ ಹೇಳಬಹುದು. ಏಕೆಂದರೆ ಸಮಗ್ರ ಕುರಾನವನ್ನೇ ಕಲ್ಲಿನಲ್ಲಿ ಕಡೆದಿರುವರು. ಈ ಕಟ್ಟಡವು ರಮಣೀಯತೆಯಲ್ಲಿ ಪ್ರತೀತಿಯನ್ನು ಪಡೆದಿದೆಯೆಂದರೆ ಅತಿಶಯೋಕ್ತಿಯೆನಿಸಲಾರದು.

ಮೇಲೆ ವಿಶದಪಡಿಸಿದ ಉದಾಹರಣೆಗಳಿಂದ ಕರ್ನಾಟಕವು ಶಿಲ್ಪಕಲೆಯ ಬೀಡು. ಕಲೆಗೆ ಉದಾತ್ತ ಮನ್ನಣೆಯನ್ನು ಪಡೆದ ನಾಡು. ಸೌಂದರ್ಯ ಸಾಕ್ಷಾತ್ಕಾರವನ್ನು ಸೂಚಿಸುವ ಸೌಂದರ್ಯದ ಬೀಡು. ಇಂತಹ ಉದಾತ್ತವಾದ ಶಿಲ್ಪಕಲೆಯ ಕಾಣಿಕೆಯನ್ನು ಹಿಂದಣ ಕನ್ನಡಿಗರು ದಯಪಾಲಿಸಿರುವುದರಿಂದಲೇ ಕನ್ನಡದ ಶಿಲ್ಪಕಲೆಯು ಅಮರವಾಗಿದೆ. ಈ ಅಮರ ಕಲಾಕೃತಿಯನ್ನು ಇಂದಿನ ಕನ್ನಡಿಗರೂ ಮುಂದುವರಿಸಲೆಂದೂ, ಕನ್ನಡ ರಾಜೇಶ್ವರಿಯು ಸಮಗ್ರ ಕನ್ನಡಿಗರಿಗೆ ವರಪ್ರದಾನವನ್ನೀಯಲೆಂದು ಆಶಿಸಿಸುವೆ. ಜಯ ಕನ್ನಡಾಂಬೆ ! !

---- :: ------

# ವರ್ಣಗ್ರಹಿಕೆ ಅಥವಾ ಬಣ್ಣದರಿವು



**ಡಾ|| ಸಿ. ವಿ. ರಾಮನ್**

ನಮ್ಮ ಜೀವನವೇ ವರ್ಣರಂಜಿತ ಪ್ರಪಂಚದಲ್ಲಿ ಸಾಗುತ್ತಿದೆ. ಪ್ರಕೃತಿ ಮಾತೆಯು ಜೀವಿ ನಿರ್ಜೀವಿಗಳನ್ನೆಲ್ಲಾ ತನ್ನ ವರ್ಣರಂಜಿತ ಸೆರಗಿನಿಂದ ಹೊದಿಸಿರುತ್ತಾಳೆ ಎಂಬ ವಿಷಯವು ಎಲ್ಲರಿಗೂ ತಿಳಿದ ವಿಷಯ. ಆ ಮಾತೆಯನ್ನು ಅಣಕಿಸುವ ಆಟದಲ್ಲಿ ನಾವೆಲ್ಲರೂ ತೊಡಗಿರುತ್ತೇವೆಂದರೆ ಆಶ್ಚರ್ಯವಿಲ್ಲ. ನಾವು ತೊಡುವ ಬಟ್ಟೆಯಲ್ಲಿ, ನಿತ್ಯ ಬಳಕೆಯಲ್ಲಿ ಉಪಯೋಗಿಸುವ ವಸ್ತುಗಳಲ್ಲಿ, ಗೋಡೆಯ ಮೇಲೆ ತಗಲು ಹಾಕುವ ಚಿತ್ರಗಳಲ್ಲಿ, ಪುಸ್ತಕಗಳ ರೊಟ್ಟಿನಲ್ಲಿ ಕಾಣುವ ಬಣ್ಣಗಳ ಆನಂದವನ್ನು ನಾವೆಲ್ಲರೂ ಆಸ್ವಾದಿಸುತ್ತೇವೆ.

ಪ್ರಕೃತಿ ನಮ್ಮ ಮುಂದೆ ಈ ರೀತಿ ಬಣ್ಣದ ವಸ್ತುಗಳನ್ನು ಇಡುವುದರ ರಹಸ್ಯವೇನು ಎಂಬುದನ್ನು ವಿಮರ್ಶಿಸೋಣ. ಪ್ರಕೃತಿಯ ರಂಗಮಂದಿರದಲ್ಲಿ ಚಳಿಗಾಲದಲ್ಲಿ ಎಲೆಗಳು ಉದುರಿ ವಸಂತ ಮಾಸದಲ್ಲಿ ಹೊಸ ಮಗ್ಗು ಚಿಗುರುವ ನಾಟಕದ ಒಂದು ದೃಶ್ಯವನ್ನು ಉದಾಹರಣೆ ತೆಗೆದುಕೊಳ್ಳಬಹುದೆಂದು ನನಗನಿಸುತ್ತದೆ.

ಋತು ಮುಂದುವರಿದಂತೆ, ಮರಗಳ ಮೇಲಿನ ಹಸರು ಬಣ್ಣ ನಮ್ಮ ಕಣ್ಣಿಗೆ ನಯನ ಮನೋಹರವಾಗಿ ಕಾಣುತ್ತದೆ. ಸಾವಯವ ಪ್ರಪಂಚದಲ್ಲಿ ಈ ಹಸರು ಎಲೆಗಳ ಪಾತ್ರ ವಿಶೇಷವಾಗಿರುತ್ತದೆ. ಈ ಎಲೆಗಳ ಮೂಲಕ ಸೂರ್ಯಕಿರಣ ಶಕ್ತಿ ಉಪಯೋಗಿಸಲ್ಪಟ್ಟು, ಸಸ್ಯ ಮತ್ತು ಪ್ರಾಣಿಗಳ ಜೀವನಕ್ಕೆ ಆಧಾರವಾಗಿದೆ ಈ ವಿಚಿತ್ರ ಪ್ರಕೃತಿಯಲ್ಲಿ ಹೇಗೆ ನಡೆಯುತ್ತಿದೆ ಎಂಬ ಅಂಶ ಈಗಿನ ವಿಷಯದ ಬೆಳವಣಿಗೆಗೆ ಹೆಚ್ಚು ಸಹಕಾರಿಯಾಗಿದೆ. ಪ್ರಕೃತಿಮಾತೆ ನಮ್ಮ ಸುತ್ತಲೂ ಬಣ್ಣವನ್ನು ಸೃಷ್ಟಿಸಿರುವಾಗ ಅದರಲ್ಲಿ ಅಡಗಿರುವ ಸೌಂದರ್ಯವನ್ನು ಆನಂದಿಸಿ ನಮ್ಮ ಮೆಚ್ಚಿಗೆಯನ್ನು

ವ್ಯಕ್ತಪಡಿಸಲು ಒಂದು ಸಾಧನವನ್ನೂ ಸಹ ಕಲ್ಪಿಸದೆ ಇರಲಾರಳಲ್ಲವೆ? ನಾವು ಹೇಗೆ ಬಣ್ಣವನ್ನು ನೋಡುತ್ತೇವೆ ಅಥವಾ ತಿಳಿಯುತ್ತೇವೆ ಎಂಬುದೇ ಈ ಲೇಖನದ ಉದ್ದೇಶ ಇದು ನಿಜಕ್ಕೂ ಒಂದು ಬೃಹತ್ ಪ್ರಶ್ನೆ. ನಾವು ಬೆಳಕನ್ನು ಹೇಗೆ ತಿಳಿಯುತ್ತೇವೆ ಮತ್ತು ಬೆಳಕಿನ ಮೂಲಕ ನಮ್ಮ ಸುತ್ತಮುತ್ತಲಿನ ವಸ್ತುಗಳನ್ನು ಹೇಗೆ ಪರಿಚಯ ಮಾಡಿಕೊಳ್ಳುತ್ತೇವೆ?

ವಿಜ್ಞಾನದ ವಿವಿಧ ಭಾಗಗಳ ಪರಿಚಯ ಬಹುಶಃ ಈ ಬೃಹತ್ ಪ್ರಶ್ನೆ ಬಿಡಿಸಲು ಸಹಕಾರಿಯಾಗಬಲ್ಲದು. ಬೆಳಕಿನ ಸ್ವಭಾವ, ಗುಣ ಲಕ್ಷಣಗಳನ್ನು ತಿಳಿಸುವ ಭೌತ ಶಾಸ್ತ್ರ, ಶರೀರದ ಚಾಕ್ಷುಷೇಂದ್ರಿಯಗಳ ರಚನೆ, ಕಾರ್ಯ, ಚಾಕ್ಷುಷೇಂದ್ರಿಯಕ್ಕೂ ಜ್ಞಾನೇಂದ್ರಿಯಕ್ಕೂ ಇರುವ ಸಂಭಂಧವನ್ನು ತಿಳಿಸುವ ಮಾನವ ಶರೀರಶಾಸ್ತ್ರ ಮತ್ತು ಮನಸ್ಸಿಗೂ ಶರೀರಕ್ಕೂ ಇರುವ ಸಂಭಂದವನ್ನು ತಿಳಿಸುವ ಮನಶ್ಶಾಸ್ತ್ರ, ಈ ಶಾಸ್ತ್ರಗಳ ಪೂರ್ಣ ಪರಿಚಯದಿಂದ ಬಣ್ಣದ ವೈಶಿಷ್ಟ್ಯವನ್ನು ತಿಳಿಯಲು ಸಾಧ್ಯವಾಗಬಹುದು. ಭೌತವಿಜ್ಞಾನ ಶಾಸ್ತ್ರ ಹಾಗೂ ಮನಶ್ಶಾಸ್ತ್ರ ಈ ಎರಡು ಶಾಸ್ತ್ರಗಳ ಆಧಾರದ ಮೇಲೆ ಈ ಸಮಸ್ಯೆಗೆ ಪರಿಹಾರ ಕಂಡುಹಿಡಿಯಲು ಸಾಧ್ಯವಾಗಬಹುದೆಂದು ಕೆಲವು ತಿಂಗಳಿಂದ ಪ್ರಯತ್ನಿಸಲು ಹೊರಟೆ

ಮಾನವಶರೀರದ ಶಾಸ್ತ್ರದ ದೃಷ್ಟಿಯಿಂದ ಈ ನೋಟದ ಪರಿಚಯ ತೆಗೆದು ಕೊಳ್ಳೋಣ- ಮನುಷ್ಯನ ಕಣ್ಣನ್ನು ಸಾಮಾನ್ಯವಾಗಿ ಬಿಂಬಗ್ರಾಹಕಕ್ಕೆ ಹೋಲಿಸುತ್ತಾರೆ. ಇವೆರಡಕ್ಕೂ ಹೋಲಿಕೆಗಳಿವೆ. ಇದು ಹಗುರವಾದ ಪೆಟ್ಟಿಗೆಯಂತಿದೆ (Photographic Camera). ಈ ಪೆಟ್ಟಿಗೆಯಲ್ಲಿ ಅನಾವಶ್ಯಕವಾದ ಬೆಳಕನ್ನು ಹೀರಲು ಒಂದು ಕಪ್ಪು ವರ್ಣ ದ್ರವ್ಯ ಇದೆ. ಬೇಡವಾದಾಗ ಬೆಳಕನ್ನು ತಡೆಗಟ್ಟಲು ಬಾಗಿಲಿದೆ. ಬೇಕಾದಾಗ ಬೆಳಕನ್ನು ತಾನೇ ತಾನಾಗಿ ಬಿಡುವ ವ್ಯವಸ್ಥೆ ಇದೆ. ಇವೆರಡರತಲ್ಲಿಯೂ ಹಿಂದಿನ ತೆರೆಯ ಮೇಲೆ ಪ್ರತಿಬಿಂಬ ಸ್ಪಷ್ಟವಾಗಿ ಬೀಳಲು ಅನುಕೂಲವಾಗುವಂತೆ ಸಂಗಮದೂರವನ್ನು ಸರಿಪಡಿಸಿಕೊಳ್ಳುವ ವ್ಯವಸ್ಥೆ ಇದೆ. ಈ ಕೆಲವು ರಚನೆಗಳ ಹೋಲಿಕೆಯಿಂದ ಇವೆರಡರ ಕಾರ್ಯ ಒಂದೇ ಎಂದು ತೀರ್ಮಾನಕ್ಕೆ ಬಂದರೆ ತಪ್ಪಾಗುತ್ತದೆ. ಕಾರಣ ಅವುಗಳ ಮೂಲದ ಸೃಷ್ಟಿಯೇ ಬೇರೆ ಬೇರೆ ಕಾರಣಗಳಿಗಾಗಿ. ಬಿಂಬಗ್ರಾಹಕದಲ್ಲಿ ರಾಸಾಯನಿಕ ತಟ್ಟೆಯ ಮೇಲೆ ಪ್ರತಿಬಿಂಬವನ್ನು ಪಡೆದು ನಂತರ ಸ್ಥಿರೀಕರಿಸಿ, ರಕ್ಷಿಸಿಡಲು ಅವಕಾಶವಿದೆ. ಆದರೆ ಕಣ್ಣಿನಲ್ಲಿ ಹಾಗಲ್ಲ. ಕಣ್ಣಿನ ಹಿಂದಿರುವ ಅಕ್ಷಿಪಟ (ರೆಟೀನಾ) ಶಕ್ತಿಯ ಗ್ರಾಹಕವಾಗಿ ಮತ್ತು ವಾಹಕವಾಗಿ ಕೆಲಸ ಮಾಡುತ್ತದೆ. ಅದು ಬೆಳಕಿನ ರೂಪದಲ್ಲಿರುವ ಶಕ್ತಿಯನ್ನು ಸ್ವೀಕರಿಸಿ, ಕೂಡಲೆ ಮೆದುಳಿಗೆ ರವಾನಿಸುತ್ತದೆ. ಹೀಗೆ ಮಾಡದೆ ಇದ್ದರೆ ಮನುಷ್ಯನಿಗೆ ವಸ್ತುವನ್ನು ನೋಡಿದ ಅನುಭವವೇ ಆಗುವುದಿಲ್ಲ. ಬಿಂಬಗ್ರಾಹಕದಲ್ಲಿ ರಸಾಯನಿಕ ತಟ್ಟೆಯನ್ನು ಒಂದೇ ಒಂದು ಸಾರಿ ಉಪಯೋಗಿಸಬಹುದು. ಕಣ್ಣಿನಲ್ಲಿರುವ ಅಕ್ಷಿಪಟ ಎಷ್ಟು

ಸಾರಿಯಾದರೂ ಯಾವ ಕ್ಷಣದಲ್ಲಾದರೂ ಉಪಯೋಗಕ್ಕೆ ಸಿದ್ಧವಿರುತ್ತದೆ. ಒಂದು ವೇಳೆ ಹೀಗೆ ಇರದಿದ್ದರೆ ಮನುಷ್ಯನಿಗೆ ನೋಟದ ಅನುಭವ ನಿಶ್ಪ್ರಯೋಜನವಾಗುತ್ತಿತ್ತು. ಈ ಕಾರಣಗಳಿಂದ ಕಣ್ಣಿನ ಅಕ್ಷಿಪಟವನ್ನ ಬಿಂಬಗ್ರಾಹಕ ರಸಾಯನಿಕ ತಟ್ಟೆಗೆ ಹೋಲಿಸುವುದು ಸಮಂಜಸವಾಗಿಲ್ಲ.

ವರ್ಣದ ವಿಷಯ ತಿಳಿಯಬೇಕಾದರೆ, ಕಣ್ಣಿನ ಅಕ್ಷಿಪಟದ ಆಳವಾದ ಜ್ಞಾನ ಮತ್ತು ಅದರ ಕಾರ್ಯದ ವಿವರಣೆ ತಿಳಿಯಬೇಕಾಗುತ್ತದೆ. ಹೆಲ್ಮೊಟ್ಜ್‌ನು ರಚಿಸಿದ ಆಪ್‌ತಾಲ್ಮಾಸ್ಕೋಪ್ ಎಂಬ ಯಂತ್ರದ ಸಹಾಯದಿಂದ ನಮ್ಮ ಕಣ್ಣನ್ನು ನಾವೇ ನೋಡಿ ತಿಳಿದುಕೊಳ್ಳಲು ಸಹಾಯ ಮಾಡಿದನು. ಈತನ ಈ ಕಾಣಿಕೆ ವಿಜ್ಞಾನ ರಂಗಕ್ಕೆ ಅತ್ಯಮೂಲ್ಯವಾದುದು. ಯಾವ ಯಂತ್ರದ ಸಹಾಯವೂ ಇಲ್ಲದೆ ತನ್ನ ಕಣ್ಣಿನ ಅಕ್ಷಿಪಟವನ್ನು ತಾನೇ ನೋಡಿಕೊಳ್ಳುವಂತಹ ವ್ಯವಸ್ಥೆಯನ್ನು ನಾನು ಕಂಡು ಹಿಡಿದಿದ್ದೇನೆ. ಈ ವ್ಯವಸ್ಥೆ ಅತಿ ಸುಲಭವಾದುದು. ಇದು ಹೀಗಿದೆ. ಅಕ್ಷಿಪಟವನ್ನು (Retina) ನೋಡಿಕೊಳ್ಳಬೇಕೆಂಬುವನು ಚೆನ್ನಾಗಿ ಬೆಳಕಿರುವ ಕೊಠಡಿಯಲ್ಲಿ ಕುಳಿತುಕೊಂಡು ಕಣ್ಣಿಗೆ ಸಮೀಪದಲ್ಲಿ ಹಿಡಿದಿರುವ ಶೋಧನ ಗಾಜಿನ ಮೂಲಕ (Filters) ಒಂದು ತೆರೆಯನ್ನು ನೋಡುತ್ತಿರಲಿ. ಸ್ವಲ್ಪ ಹೊತ್ತಾದ ಮೇಲೆ ಈ ಶೋಧನ ಗಾಜನ್ನು ತೆಗೆದುಬಿಡಲಿ. ಆಗ ತೆರೆಯ ಮೇಲೆ ತನ್ನ ಅಕ್ಷಿಪಟದ ಇನ್ನೂ ಹೆಚ್ಚಾದ ಪ್ರತಿಬಿಂಬವನ್ನು ನೋಡುತ್ತಾನೆ.

ತೆರೆಯ ಮೇಲೆ ಕಂಡ ಬಿಂಬದ ಸ್ವರೂಪ ಮತ್ತು ಅದರ ಬಣ್ಣ ಉಪಯೋಗಿಸಿದ ಬಣ್ಣದ ಶೋಧನ ಗಾಜನ್ನು (Colour Filter) ಅವಲಂಬಿಸಿರುತ್ತದೆ. ಕೆಲವು ಶೋಧಕ ಗಾಜಿನಲ್ಲಿ ಹೆಚ್ಚು ಸ್ಪಷ್ಟವೂ ಪರಿಣಾಮಕಾರಿಯೂ ಆಗಿರುತ್ತದೆ. ನೋಡಿದ ವ್ಯಕ್ತಿಯು ತನ್ನ ಅಕ್ಷಿಪಟದ Fovea ನ್ನು ಹೆಚ್ಚು ಬೃಂಹಣದಿಂದ ಕೂಡಿರುವುದನ್ನು ಕಾಣುವುದಲ್ಲದೆ, ಅದರ ಮಧ್ಯದಲ್ಲಿ ಒಂದು ಚುಕ್ಕೆಯನ್ನು ಸಹ ಕಾಣುತ್ತಾನೆ. Fovea ಕ್ಕೆ ಆವರಿಸಿಕೊಂಡು ಒಂದು ಬಣ್ಣದ ವೃತ್ತಪರಿಧಿಯೂ ಸಹ ಕಾಣುತ್ತದೆ. ಅಕ್ಷಿಪಟದಲ್ಲಿ Fovea ಅತಿ ಮುಖ್ಯವಾದ ಭಾಗ. ಅದು ಸುಮಾರು ಒಂದು ಮಿಲಿ ಮೀಟರ್ ವ್ಯಾಸವುಳ್ಳದ್ದು. ನಾವು ಯಾವುದಾದರೂ ವಸ್ತುವನ್ನು ನೋಡಿದಾಗ ಅದರ ಪ್ರತಿಬಿಂಬವು Fovea ದ ಮೇಲೆ ಬೀಳುತ್ತದೆ. ನಮ್ಮ ದೃಷ್ಟಿ ನೋಟವನ್ನು ಕೊಡುವ, ಸೂಕ್ಷ್ಮವಾದ ಅಚ್ಚನ್ನು ನೋಡುವ (Prime), ನೂರಾರು ವರ್ಣಗಳ ಹಿಂದಿನ ವಸ್ತುಗಳನ್ನು ಗುರುತು ಹಚ್ಚುವ ಶಕ್ತಿಯನ್ನು ಕೊಡುವ ಶಕ್ತಿಯುಳ್ಳದ್ದು Fovea.

ಅಕ್ಷಿಪಟದ ಎಲ್ಲಾ ವಿವರಗಳನ್ನು ಅದರ ವೈಶಿಷ್ಟ್ಯವನ್ನು, ವಿವರವನ್ನು ಕೊಡಲು ಸಾಧ್ಯವಿಲ್ಲ. ಆದರೆ ಒಂದು ವಿಷಯ ತಿಳಿಸಬೇಕಾಗುತ್ತದೆ. ಅಕ್ಷಿಪಟದಲ್ಲಿ ಮೂರು ರೀತಿಯ ವರ್ಣದ್ರವ್ಯಗಳಿವೆ. ಅವುಗಳನ್ನು ನೋಟದ ದ್ರವ್ಯಗಳೆಂದು ಕರೆಯಬಹುದು.

ಈ ನೋಟದ್ರವ್ಯಗಳ ಸಹಾಯದಿಂದಲೇ ವರ್ಣಪಟ್ಟಿಯನ್ನು (Spectrum) ನೋಡಲು ಸಾಧ್ಯವಿದೆ. ಊದಾ (ನೇರಿಳೆ) ಬಣ್ಣದಿಂದ ಕೆಂಪಿನವರೆಗಿನ (Violet to Red) ಬಣ್ಣಗಳನ್ನುಕೊಡುವ ಶಕ್ತಿ ಈ ಮೂರು ವರ್ಣದ್ರವ್ಯಗಳಿಗೆ ಇದೆ. ಊದಾಬಣ್ಣದಿಂದ ನೀಲಿಯವರೆಗೆ ಒಂದು ವರ್ಣದ್ರವ್ಯ ನೋಡಿಕೊಳ್ಳುತ್ತದೆ. ಎರಡನೆಯ ವರ್ಣದ್ರವ್ಯ ಹಸುರಿನಿಂದ ಹಸರು ಮಿಶ್ರಿತ ಹಳದಿಯವರೆಗಿನ ಬಣ್ಣದ ಪರಿಣಾಮ ಕೊಡಲು ಸಹಾಯಮಾಡುತ್ತದೆ. ವರ್ಣದ್ರವ್ಯದ ಮೂರನೆ ಭಾಗ ಕೆಂಪನ್ನು ನೋಡಲು ಸಹಾಯ ಮಾಡುವುದಲ್ಲದೆ ಕಿತ್ತಳೆ, ಹಳದಿಗಳ ಕಡೆಗೂ ದೃಷ್ಟಿ ಹರಿಸುತ್ತದೆ.

ಈ ಕಾರಣಗಳಿಂದ ನೋಟದ ವರ್ಣದ್ರವ್ಯಗಳು ನಮಗೆ ಬಣ್ಣದ ಅರಿವು ಮಾಡಿಕೊಳ್ಳಲು ಸಹಾಯ ಮಾಡುತ್ತದೆ. ಅಕ್ಷಿಪಟವು ಗ್ರಾಹಕವಾಗಿಯೂ (Receiver) ವಾಹಕ (Transmitter)ವಾಗಿಯೂ ಕೆಲಸ ಮಾಡುವುದೆಂದು ಈಗಾಗಲೇ ತಿಳಿಸಿದೆ. ಅಕ್ಷಿಪಟದಲ್ಲಿರುವ ವರ್ಣದ್ರವ್ಯ ಅದರ ಮೇಲೆ ಬೀಳುವ ಬೆಳಕಿನ ಕಿರಣವನ್ನು ಸ್ವೀಕರಿಸಿ, ಹೀರಿಕೊಳ್ಳುತ್ತದೆ. ಕೂಡಲೇ ಈ ವರ್ಣದ್ರವ್ಯದಲ್ಲಿರುವ ಅಣುಗಳು ಈ ಬೆಳಕಿನ ಶಕ್ತಿಯನ್ನು ನರಗಳಿಗೆ ರವಾನಿಸುತ್ತದೆ. ಹೀಗೆ ಸ್ವೀಕೃತಶಕ್ತಿಯನ್ನು ವಿದ್ಯುತ್ ಅಲೆಗಳಾಗಿ ಪರಿವರ್ತಿಸಲ್ಪಟ್ಟು ಚಾಕ್ಷುಸ ನರಗಳ ಮೂಲಕ ಮಿದುಳಿಗೆ ಒಯ್ಯಲ್ಪಡುತ್ತವೆ. ಅಂದ ಮೇಲೆ ಕಣ್ಣಿನ ಅಕ್ಷಿಪಟದಲ್ಲಿರುವ ವರ್ಣದ್ರವ್ಯ (Pigment) ನೋಟದಲ್ಲಿ ಪ್ರಾಮುಖ್ಯ ಪಾತ್ರವನ್ನು ವಹಿಸಿದೆ.

ನವೀನ ಭೌತಶಾಸ್ತ್ರ ತತ್ವದ ಪ್ರಕಾರ ಬೆಳಕಿನ ಶಕ್ತಿ, ಶಕ್ತಿಯ ಕ್ರಿಯಾರೂಪದ ವಾದವನ್ನವಲಂಬಿಸಿ (Discrete unit or Quante) ಅಕ್ಷಿಪಟದ ಅಣುಗಳು ಬೆಳಕಿನ ಶಕ್ತಿಯನ್ನು ಹೀರುವುದೆಂದು ಹೇಳಬಹುದು. ಈ ಕಾರಣಗಳಿಂದ ವರ್ಣಪಟ್ಟಿಯಲ್ಲಿರುವ ವಿವಿಧ ಬಣ್ಣಗಳ ಭಾಗಗಳ ಹೀರುವ ಶಕ್ತಿಯೂ ಬೇರೆ ಬೇರೆಯಾಗಿರುವುದರಿಂದ ಬೇರೆ ಬೇರೆ ಬಣ್ಣಗಳಿಂದ ಕಾಣುತ್ತದೆ ಎಂಬ ತೀರ್ಮಾನಕ್ಕೆ ಬರಬಹುದು. ಈ ರೀತಿಯ ಬದಲಾವಣೆ ನಿರಂತರವಾಗಿರುತ್ತದೆ. (Contineous) ಮತ್ತು ವರ್ಣಪಟ್ಟಿಯಲ್ಲಿ ಕಾಣುವ ಬಣ್ಣಗಳನ್ನು ಸಹ ಪ್ರತ್ಯೇಕವಾಗಿ ನೋಡುವ ಶಕ್ತಿ ಕಣ್ಣಿಗಿರುತ್ತದೆ. ಹೀಗೆ ನೋಡುವ ಸಂಖ್ಯೆ ೧೫೦ ರಿಂದ ೨೫೦ ರವರೆಗೆ ಇರುವುದೆಂದು ಹೇಳಲಾಗಿದೆ. ಅನೇಕ ವಿಜ್ಞಾನಿಗಳು ಕಣ್ಣು ಪತ್ತೆಹಚ್ಚಬಹುದಾದ ಕನಿಷ್ಠ ಸಂಖ್ಯೆಯನ್ನು ಕಂಡುಹಿಡಿದಿದ್ದಾರೆ. ವರ್ಣಪಟ್ಟಿಯಲ್ಲಿ ನೋಡಿದಂತೆಲ್ಲಾ ಈ ಸಂಖ್ಯೆ ಬದಲಾವಣೆ ಹೊಂದುತ್ತದೆ. ಬಣ್ಣಗಳ ವ್ಯತ್ಯಾಸವನ್ನು ಸೂಕ್ಷ್ಮವಾಗಿ ಪತ್ತೆಹಚ್ಚುವ ಗುಣ ಕಣ್ಣಿಗಿದೆ. ವರ್ಣಪಟ್ಟಿಯಲ್ಲಿನ ಶಕ್ತಿಯಲ್ಲಿ ಪ್ರಮಾಣದಲ್ಲಿ $\frac{1}{1000}$ ರಷ್ಟು ವ್ಯತ್ಯಾಸ ಕಂಡುಬಂದರೂ ಸಹ ಒಂದು ಬಣ್ಣ ಕಾಣುತ್ತದೆ. ಈ ಕಾರಣಗಳಿಂದ ಅಕ್ಷಿಪಟದಲ್ಲಿರುವ ವರ್ಣದ್ರವ್ಯ ಬೆಳಕನ್ನು ಹೀರುವುದರಿಂದ ಮತ್ತು ನರಗಳಿಗೆ ವರ್ಗಾವಣೆ ಮಾಡುವುದರಿಂದ ವಿವಿಧ ಬಣ್ಣಗಳು ನಮಗೆ ಅರಿವಾಗುತ್ತವೆ ಎಂಬ ತೀರ್ಮಾನಕ್ಕೆ ಬರಬಹುದು.

ಅಕ್ಷಿಪಟದಲ್ಲಿರುವ ವರ್ಣದ್ರವ್ಯ ಸಸ್ಯಗಳ ಹಸರು ಎಲೆಗಳಲ್ಲಿರುವ ಹಣ್ಣೆಲೆ ಹಳದಿಗೆ (Xanthophyll) ಸಂಬಂಧಿಸಿದ್ದು, ವರ್ಣಪಟ್ಟಿಯಲ್ಲಿರುವ ಊದಾ (Violet) ಮತ್ತು ನೀಲಿ ಬಣ್ಣಗಳನ್ನು ಹೀರುವ ಶಕ್ತಿ ಇದಕ್ಕಿದೆ. ಆದುದರಿಂದ ಆ ಬಣ್ಣಗಳನ್ನು ನೋಡಲು ಸಹಾಯ ಮಾಡುತ್ತದೆ. ಅದರಲ್ಲಿರುವ ಅಣುಗಳಿಗೆ ಒಂದು ವಿಶೇಷ ಗುಣವಿದೆ. ಬೆಳಕಿನ ವಿಕರಣಗಳ ಆಂದೋಳನ (Vibration) ಈ ಅಣುಗಳ ಉದ್ದಕ್ಕೆ ಸಮಾನಾಂತರವಾಗಿ ಬಂದು ಮುಟ್ಟಿದಾಗ ಬೆಳಕನ್ನು ಹೀರುತ್ತದೆ. Fovea ದಲ್ಲಿರುವ ನರಗಳೂ ಸಹ ಇದಕ್ಕನುಸಾರವಾಗಿ ಜೋಡಿಸಲ್ಪಟ್ಟಿವೆ.

ಅಕ್ಷಿಪಟದಲ್ಲಿನ ವರ್ಣದ್ರವ್ಯದಲ್ಲಿ ಹಣ್ಣೆಲೆ ಹಳದಿ (Xanthophyll) ಇದೆ ಮತ್ತು ಇದು ನೋಟಕ್ಕೆ ಸಹಾಯ ಮಾಡುವ ವರ್ಣದ್ರವ್ಯ ಎಂಬುದನ್ನು (ಕೆಲವು ಸಾಮಾನ್ಯ ಅವಲೋಕನದಿಂದ) ಪ್ರದರ್ಶನ ಮಾಡಬಹುದು. ಊದು ಮತ್ತು ನೀಲಿ ಬಣ್ಣಗಳನ್ನು ಬಿಡುವಂತಹ ಶೋಧಕವನ್ನು ತೆಗೆದುಕೊಳ್ಳಬೇಕು, ಇದರ ಜೊತೆಯಲ್ಲಿಯೇ ಒಂದು Polaroid (ಸಂಗ್ರಾಹಕ)ನ್ನು ಬೆಳಕಿನ ಕಿರಣಗಳು ಛಿದ್ರವಾಗದಂತೆ ಹಿಡಿಯಬೇಕು. ಆಗ ತನ್ನ Fovea ವನ್ನು ತಾನೇ ನೋಡಬಹುದು. ಇದರಲ್ಲಿ ಹೊಳೆಯುತ್ತಿರುವ ಮತ್ತು ಮಸಕಾದ ಎರಡು ಕುಂಚಗಳು (Brushes) ಒಂದನ್ನೊಂದು ಛೇದಿಸಿದಂತೆ ಕಾಣುತ್ತವೆ. Polaroidನ್ನು ಇಟ್ಟು ತೆಗೆದು ಮಾಡಿದರೆ ಈ ಎರಡು ಛೇಧಕ ಕುಂಚಗಳೂ ಸಹ ಹಿಂದಕ್ಕೆ ಮುಂದಕ್ಕೆ ಸಮಕೋನದಲ್ಲಿ ಚಲಿಸುತ್ತದೆ.

ಉಳಿದ ಬಣ್ಣಗಳ ಪರಿಣಾಮ ಕೊಡುವ ವರ್ಣದ್ರವ್ಯಗಳು ರಕ್ತದ Hence ನಲ್ಲಿರುವ ಪೆರಸ್ ಮತ್ತು ಪೆರಿಕ್‌ಗಳಿಗೆ ಸಂಬಂಧಿಸಿದುದಾಗಿದೆ. ಈ ವರ್ಣದ್ರವ್ಯಗಳ ಹೀರುವ ಶಕ್ತಿ ವರ್ಣಪಟ್ಟಿಯ ಹಸರು ಮತ್ತು ಕೆಂಪು ಭಾಗಕ್ಕೆ ಸಂಬಂಧಿಸಿದುದಾಗಿದೆ.

———::———

# ಚಂದ್ರಜ್ಞಾನಾಗಮ

**ಡಾ|| ಶಿ. ಚೆ. ನಂದಿಮಠ,** ಎಂ. ಎ., ಪಿ. ಎಚ್. ಡಿ. (ಲಂಡನ್)



ಭರತ ಖಂಡದಲ್ಲಿರುವಷ್ಟು ಧರ್ಮಗಳೂ ಪಂಥಗಳೂ ಪಂಥಪ್ರಭೇದಗಳೂ ಜಗತ್ತಿನಲ್ಲಿಯ ಮತ್ತಾವ ದೇಶದಲ್ಲಿಯೂ ಇಲ್ಲವೆಂದರೆ ತಪ್ಪಾಗದು. ಇಲ್ಲಿ ಜಗತ್ತಿನ, ಬಹುತರ ಎಲ್ಲ ಪ್ರಮುಖ ಧರ್ಮಗಳಿಗೆ ಸ್ಥಾನವಿದೆ. ಮಾನವ ಜನಾಂಗದ ಮಾನಸಿಕ ಬೆಳವಣಿಗೆಯನ್ನು ಅಭ್ಯಾಸ ಮಾಡಲು ಭಾರತವು ಬಲು ಅನುಕೂಲ ಸ್ಥಾನವಾಗಿದೆ. ಇಲ್ಲಿ ಆರ್ಯ, ದ್ರಾವಿಡ, ಸುಮ್ಮೇರು, ಮಂಗೋಲ್ ಮೊದಲಾದ ಜನಾಂಗಗಳ ಆಧ್ಯಾತ್ಮಿಕ ಪ್ರಗತಿಯ ಅವಶೇಷಗಳನ್ನೂ ಕಾಣಬಹುದು. ಈ ಎಲ್ಲ ವಿಷಯಗಳ ಕೂಲಂಕಷವಾದ ಸಂಶೋಧನೆ ಮತ್ತು ಅಭ್ಯಾಸ ಅವಶ್ಯವಾಗಿ ಆಗಬೇಕಾಗಿದೆ. ಇದು ಜಗತ್ತಿನಲ್ಲಿ ಶಾಂತಿ ಮತ್ತು ರಾಷ್ಟ್ರಗಳಲ್ಲಿ ಪರಸ್ಪರ ಸಂಬಂಧ ಬೆಳೆದಾಗ ಮಾತ್ರ ಸಾಧ್ಯ. ಜಗತ್ತಿನಲ್ಲಿ ಶಾಂತಿಯನ್ನು ಸ್ಥಾಪಿಸಿ ಪರಸ್ಪರ ವಿರೋಧವನ್ನು ವೈಮನಸ್ಸನ್ನೂ ಕಡಿಮೆ ಮಾಡಲು ಸಂಯುಕ್ತ ರಾಷ್ಟ್ರ ಸಂಘವು ಯತ್ನಿಸುತ್ತಿದೆ. ಕೆಲಮಟ್ಟಿಗೆ ಅದು ಯಶಸ್ಸನ್ನು ಸಂಪಾದಿಸಿದೆ. ಆದುದರಿಂದ ಮಾನವಜನಾಂಗದ ಬುದ್ಧಿವಿಕಾಸದ ಮೆಟ್ಟಲುಗಳನ್ನು ಕಂಡುಹಿಡಿಯಲು ಈಗ ಅನುಕೂಲ ವಾತಾವರಣ ಒದಗಹತ್ತಿದೆ.

ಮನುಷ್ಯ ವಿಜ್ಞಾನ ಶಾಸ್ತ್ರಜ್ಞರು (Anthropalogiots) ಭಾರತದಲ್ಲಿಯ ಜನರನ್ನು ಆರ್ಯ, ದ್ರಾವಿಡ ಎಂದು ಸಾಮಾನ್ಯವಾಗಿ ಎರಡು ಗುಂಪುಗಳನ್ನಾಗಿ ವಿಂಗಡಿಸಿರುವರು. ಆರ್ಯರ ಬಗೆಗೆ ನಮಗೆ ಬಹಳ ಗೊತ್ತಾಗಿದೆ. ಅವರ ಧರ್ಮ, ಆಚಾರ, ವಿಚಾರ, ಇತಿಹಾಸ ಇವೆಲ್ಲವುಗಳನ್ನೊಳಗೊಂಡ ಗ್ರಂಥಗಳು ವಿಪುಲವಾಗಿವೆ.

ಅನೇಕ ಸಹಸ್ರ ವರ್ಷಗಳಿಂದ ಆರ್ಯಧರ್ಮ ಭಾರತದಲ್ಲಿ ಬೇರು ಬಿಟ್ಟು ಬೆಳೆದು ಸರ್ವತ್ರ ವ್ಯಾಪಿಸಿ ಭಾರತೀಯರ ರಕ್ತನಾಳದಲ್ಲಿ ಹರಿಯುತ್ತಿದೆ. ದ್ರಾವಿಡರ ಬಗೆಗೆ ನಮಗೆ ಇನ್ನೂ ಸಾಕಷ್ಟು ವಿಷಯ ಸಂಗ್ರಹವಾಗಿಲ್ಲ. ದಕ್ಷಿಣ ಭಾರತದಲ್ಲಿ ಕೆಲ ಗುಂಪಿನ ಜನರ ವೈಕಟ್ಟು ಮತ್ತು ವಿಶೇಷವಾಗಿ ಇನ್ನೂ ಜೀವಿಸಿ ಬೆಳೆಯುತ್ತಿರುವ ಭಾಷೆಗಳೂ ಅವುಗಳಲ್ಲಿ ಒಡಮೂಡಿರುವ ಹಲಕೆಲವು ವಿಷಯಗಳೂ, ದ್ರಾವಿಡ ಗುಂಪಿನ ಅವಶೇಷಗಳೆಂದೂ, ಅವುಗಳಿಂದ ದ್ರಾವಿಡ ಸಂಸ್ಕೃತಿಯನ್ನು ತಿಳಿಯಲು ಸಾಧ್ಯವೆಂಮೂ ಕೆಲವರ ಮತ. ಉತ್ತರ ಭಾರತವಲ್ಲಿಯೂ ಕೂಡ ಅನೇಕ ಜನರಲ್ಲಿ ಈ ದ್ರಾವಿಡ ಸಂಸ್ಕೃತಿಯ ಗುರುತುಗಳು ಕಂಡುಬರುವವೆಂದೂ, ಅವರು ಈಗಲೂ ಅದನ್ನು ಪರಿಪಾಲಿಸುತ್ತಿರುವರೆಂದೂ, ಆದುದರಿಂದ ಒಂದು ಕಾಲಕ್ಕೆ ದ್ರಾವಿಡ ಸಂಸ್ಕೃತಿಯು ಭಾರತದ ತುಂಬ ವ್ಯಾಪಿಸಿತ್ತೆಂದೂ, ಆರ್ಯ ಸಂಸ್ಕೃತಿಯು ಅದನ್ನು ಮೂಲೆಗೆ ಒತ್ತಿತೆಂದೂ ಕೆಲ ಪಂಡಿತರ ಮತ. ಇದು ಬಹುಮಟ್ಟಿಗೆ ನಿಜವೆಂದು ಕಂಡರೂ ಸಾವಿರಾರು ವರ್ಷಗಳಿಂದ ಭಾರತದಲ್ಲಿ ಆರ್ಯರೂ ದ್ರಾವಿಡರೂ ಕೂಡಿ ಕೊಂಡು ಇರುವದರಿಂದ ಇವೆರಡೂ ಸಂಸ್ಕೃತಿಗಳು ಸಮ್ಮಿಲಿತವಾಗಿ ಗಂಗಾ ಯಮುನಾ ಪ್ರವಾಹದಂತೆ ಒಂದುಗೂಡಿ ಹರಿಯುತ್ತಿರುವವು. ಪ್ರಯಾಗದಲ್ಲಿ ಗಂಗೆಯಮುನೆ ಯರ ಸಂಗಮವಾಗಿ ಕೆಲ ಮೈಲುಗಳವರೆಗೆ ಎರಡೂ ಹೊಳೆಗಳ ನೀರು ಬೇರೆ ಬೇರೆಯಾಗಿ ಹರಿದು ಮುಂದೆ ಒಂದಾಗುವಂತೆ, ಆರ್ಯ-ದ್ರಾವಿಡ ಸಂಸ್ಕೃತಿ ಸಮ್ಮಿಲಿತ ವಾಗಿ ಸಾವಿರಾರು ವರ್ಷಗಳಿಂದ ಒಂದೇ ಆಗಿ ಹರಿಯುತ್ತಿರುವದು. ಇವೆರಡೂ ಸಂಸ್ಕೃತಿಗಳು ಕೂಡಿ ಒಂದೇ ಧರ್ಮವನ್ನು ಉಂಟುಮಾಡಿವೆ. ಅದು ಹಿಂದೂ ಧರ್ಮ. ಸಾವಿರಾರು ವರ್ಷಗಳಿಂದ ಭಾರತದಲ್ಲಿ ಅವ್ಯಾಹತವಾಗಿ ನಡೆಯುತ್ತ ಬಂದಿರುವ ಈ ಹಿಂದೂ ಧರ್ಮದ ಆಧಾರ ಗ್ರಂಥಗಳು ವೇದಾಗಮ ಪುರಾಣೇತಿಹಾಸ ಗಳೆಂದು ಒಪ್ಪಿತವಾಗಿದೆ. ವೇದ, ಪುರಾಣ, ಇತಿಹಾಸ ಇವುಗಳ ಬಗೆಗೆ ನಮಗೆ ಬಹಳವಾಗಿ ಗೊತ್ತಿದೆ. ಬಹು ಜನ ಪೌರ್ವಾತ್ಯ ಮತ್ತು ಪಾಶ್ಚಾತ್ಯ ಪಂಡಿತರು ವೇದೋಪನಿಷತ್ತುಗಳನ್ನು ಅಭ್ಯಸಿಸಿ ತಮ್ಮ ಅನುಭವಗಳನ್ನು ಬರೆದಿದ್ದಾರೆ. ಆದುದರಿಂದ ನಮಗೆ ವೇದೋಪನಿಷತ್ತು ಪುರಾಣೇತಿಹಾಸಗಳಲ್ಲಿರುವ ವಿಷಯ ಬಹುವಾಗಿ ತಿಳಿದಿವೆ. ಆದರೆ ಆಗಮಗಳ ಬಗೆಗೆ ಸಾಕಷ್ಟು ಪರಿಚಯವಾಗಿಲ್ಲ. ಈ ಕ್ಷೇತ್ರವಲ್ಲಿ ಯಾರೂ ಇನ್ನೂ ವಿಶೇಷ ಪರಿಶ್ರಮ ಮಾಡಿಲ್ಲ. ಈ ದಿಶೆಯಲ್ಲಿ ವಿಶೇಷ ಅಭ್ಯಾಸ ನಡೆಯಬೇಕಾಗಿದೆ.

ಹಿಂದೂ ಧರ್ಮಕ್ಕೆ ವೇದಗಳು ಪ್ರಮಾಣ ಗ್ರಂಥಗಳಾಗಿರುವಂತೆ ಭಾರತೀಯ ಪ್ರಮುಖ ಧರ್ಮಗಳಾದ ಶೈವ, ವೈಷ್ಣವ, ಶಾಕ್ತ ಮೊದಲಾದ ಧರ್ಮಗಳಿಗೆ ಆಗಮ ಗಳು ಪ್ರಮಾಣ ಗ್ರಂಥಗಳಾಗಿವೆ. ಇವುಗಳ ಸಂಖ್ಯೆ ವಿಪರೀತವಾಗಿದೆ. ಶೈವ, ವೈಷ್ಣವ ಮತ್ತು ಶಾಕ್ತ ಪಂಥಗಳಲ್ಲಿ ಆಗಮಗಳ ಪ್ರಭಾವ ವಿಶೇಷವಾಗಿದೆ. ಅದು ವೈದಿಕ ಧರ್ಮದ ಶ್ರೌತ-ಸ್ಮಾರ್ತ ವಿಧಿಗಳನ್ನು ಹಿಂದಕ್ಕಟ್ಟಿ ದೇವಾಲಯಗಳಲ್ಲಿ

ಮೂರ್ತಿ ಪೂಜೆಗೆ ಪ್ರಾಧಾನ್ಯವನ್ನುಂಟು ಮಾಡಿ ತನ್ನದೇ ಆದ ಕ್ರಿಯಾಕಾಂಡವನ್ನು ಬೆಳೆಸಿರುವದು. ಈಗ ಈ ಪಂಥಗಳ ದೇವಾಲಯಗಳಲ್ಲಿ ಪ್ರಜಾ-ಪುರಸ್ಕಾರಗಳು ಆಗಮಿಕ ಸಂಪ್ರದಾಯದಂತೆ ನಡೆಯುತ್ತಿರುವವು. ಶೈವ, ವೈಷ್ಣವ ಮತ್ತು ಶಾಕ್ತ ಪಂಥಗಳು ಅನುಯಾಯಿಗಳು ತಮ್ಮ ಧಾರ್ಮಿಕ ಜೀವನದಲ್ಲಿ ಆಗಮ ಮಾರ್ಗವನ್ನೇ ಅನುಸರಿಸುತ್ತಿರುವರು. ಆದರೆ ವೈದಿಕ ಧರ್ಮದ ಪ್ರಭಾವ ಭಾರತೀಯರ ಜೀವನದ ಮೇಲೆ ಬಹಳವಾಗಿದ್ದುದರಿಂದ ಆರ್ಯಭಾಷೆಯಾದ ಸಂಸ್ಕೃತವನ್ನೇ ಆಗಮಿಕ ವಿಷಯಗಳ ಪ್ರತಿಪಾದನೆಗಾಗಿ ಬಳಸಿಕೊಂಡಿರುವದು. ಈ ಸಂಸ್ಕೃತ ಕೆಲವೆಡೆಯಲ್ಲಿ ಅಷ್ಟು ಉಚ್ಚಮಟ್ಟದ್ದಲ್ಲ. ಅಲ್ಲಲ್ಲಿ ವ್ಯಾಕರಣ ದೋಷಗಳೂ, ಅಶುದ್ಧ ಶಬ್ದಗಳ ಪ್ರಯೋಗವೂ ಕಂಡುಬರುವದರಿಂದ ಆಗಮಗಳಲ್ಲಿ ಉಪಯೋಗಿಸಿದ ಸಂಸ್ಕೃತವನ್ನು ವೈದಿಕ ಪಂಡಿತರು ಗಣಿಸುವದಿಲ್ಲ. ಮೇಲಾಗಿ ಅವುಗಳಲ್ಲಿಯ ಹಲಕೆಲವು ವಿಷಯಗಳು ಉಚ್ಚತಮವಾದುವಲ್ಲವೆಂದೂ ಅವರ ಗ್ರಹಿಕೆ. ಆದುದರಿಂದ ಆಗಮಗಳು ಇನ್ನೂ ಅಜ್ಞಾತ ವಾಸವನ್ನು ಅನುಸರಿಸುತ್ತಿರುವವು. ಆದರೆ, ಒಂದು ಕಾಲದಲ್ಲಿ ಆಗಮಗಳು ಸರ್ವಮಾನ್ಯವಾಗಿ ಸರ್ವತ್ರ ವ್ಯಾಪಿಸಿದ್ದವು. ಬೌದ್ಧರೂ ಜೈನರೂ ತಮ್ಮ ಪ್ರಮಾಣ ಗ್ರಂಥಗಳನ್ನು ಆಗಮಗಳೆಂದು ಕರೆದಿರುವರು.

ಭಾರತೀಯ ಧರ್ಮಗಳಲ್ಲಿ ಶೈವಧರ್ಮವು ಅತಿ ಪ್ರಾಚೀನತಮವಾದುದೂ, ಪ್ರಭಾವಯುತವಾದುದೂ ಆಗಿದೆ. ಇದು ಒಂದು ಕಾಲದಲ್ಲಿ ಭಾರತವನ್ನೆಲ್ಲ ವ್ಯಾಪಿಸಿ ಭಾರತದ ಹೊರಗೂ ಹಬ್ಬಿತ್ತು ; ಜನತೆಯ ಪ್ರಗತಿಗೆ ಮತ್ತು ಮನಶ್ಶಾಂತಿಗೆ ಕಾರಣವಾಗಿದ್ದಿತು. ಎರಡು ಸಾವಿರ ವರ್ಷಗಳಿಗೂ ಮೇಲ್ಪಟ್ಟು, ಅತಿ ಪ್ರಾಚೀನ ಕಾಲದಿಂದ ಭಾರತದಲ್ಲಿ ಶೈವಧರ್ಮವೂ, ಶಿವಾರಾಧನೆಯೂ, ಶಿವಲಿಂಗಪೂಜೆಯೂ ನಡೆಯುತ್ತ ಬಂದಿರುವದು ಸರ್ವಸಿದ್ಧವಾದ ವಿಷಯ. ಅದು ಭಾರತರ ಮೂಲೆ ಮೂಲೆಗಳಲ್ಲಿಯೂ ವ್ಯಾಪಿಸಿ ಜನರ ಜೀವನದಲ್ಲಿ ಆಳವಾಗಿ ಬೇರೂರಿತ್ತೆಂಬುದು ನಿರ್ವಿವಾದವಾದ ಮಾತು. ಭಾರತದ ಹೊರಗೂ ಅದು ಪ್ರಸಾರಗೊಂಡಿತ್ತೆಂಬುದು ಅಸಂದಿಗ್ಧ ಪ್ರಮಾಣಗಳಿಂದ ಸಿದ್ಧವಾಗುವದು. ಕಟ್ಟಾ ಶೈವಧರ್ಮದ ಅಭಿಮಾನಿಗಳಾದ **ಕುಷಾಣ, ತ್ರೈಕೂಟ, ಭವನಾಗ** ಮೊದಲಾದ ಪ್ರಾಚೀನ ರಾಜ ಮನೆತನಗಳು ಶೈವಧರ್ಮದ ಪ್ರಸಾರಕ್ಕೂ ಅಭಿವೃದ್ಧಿಗೂ ಕಾರಣರಾಗಿದ್ದರು. ಅವರ ಕಾಲದಲ್ಲಿ ಶೈವಾಗಮಗಳು ಅಸ್ತಿತ್ವದಲ್ಲಿದ್ದವೆಂದು ಊಹಿಸಲು ಅವಕಾಶವಿದೆ. ಕುಷಾಣವಂಶದ **ಕುಜುಲ ಕಡಫಿಸಿಸ್** ಎಂಬವನ ತರುವಾಯ ಬಂದ **ಎಸ್. ಕಾವೊಚನ್** ಅಥವಾ **ವೀಮ ಕಡಫಿಸಿಸ್** (೨) ಎಂಬುವನು ತನ್ನ ಬಂಗಾರದ ನಾಣ್ಯಗಳ ಮೇಲೆ ಶಿವನ ಮೂರ್ತಿಯನ್ನು 'ಮಹೇಶ್ವರ' ಎಂಬ ಅಕ್ಷರಗಳನ್ನೂ ಕೊರೆಯಿಸಿರುವನು. ಈತನು ಸುಮಾರು ಕ್ರಿ. ಶ. ೧೮ರಲ್ಲಿ ಇದ್ದನೆಂದೂ ಈತನೇ ಶಕಕಾಲದ ಕರ್ತೃವೆಂದೂ ಕೆಲ ಇತಿಹಾಸಜ್ಞರ ಮತವಿದೆ. ಸು. ಕ್ರಿ. ಶ.

೩–೪ನೆಯ ಶತಕದಲ್ಲಿದ್ದ ಭವನಾಗರು ಶಿವಲಿಂಗಧಾರಿಗಳಾಗಿದ್ದರೆಂದೂ ಅವರ ಆಪ್ತರಾದ ವಾಕಾಟಕರು ಶೈವ ಮತಾವಲಂಬಿಗಳಾಗಿದ್ದರೆಂದೂ ಶಿಲಾಶಾಸನಗಳಿಂದ ಸ್ಪಷ್ಟವಾಗಿ ತಿಳಿಯುವದು. ಅಂದಿನಿಂದ ಇಂದಿನವರೆಗೆ ಭಾರತದಲ್ಲಿ ಶೈವಧರ್ಮ ನೆಲೆಸಿದೆ, ಮತ್ತು ಬೆಳೆಯುತ್ತಿದೆ; ಅನೇಕ ಆಘಾತಗಳನ್ನು ಅನುಭವಿಸಿ ಅವುಗಳಿಗೆ ಎದೆಯೊಡ್ಡಿ ನಿಂತಿದೆ.

ಭಾರತದ ಹೊರಗೂ ಸಾವಿರಾರು ಮೈಲು ದೂರದಲ್ಲಿರುವ ಪೂರ್ವ ಸಮುದ್ರ ದ್ವೀಪಗಳಲ್ಲಿ ಅದು ಒಂದು ಕಾಲದಲ್ಲಿ ಪ್ರಬಲವಾದ ರಾಷ್ಟ್ರೀಯ ಧರ್ಮವಾಗಿತ್ತು. **ಕಾಂಬೋಜ** ದೇಶದ ಶಾಸನವೊಂದರಲ್ಲಿ ಅಲ್ಲಿಯ ಅರಸು ಎರಡನೆಯ **ಜಯವರ್ಮನು** ಕ್ರಿ. ಶ. ೮೦೨ ರಲ್ಲಿ ದೇವರಾಜ ಎಂಬ ಹೆಸರಿನ ಶಿವಲಿಂಗವನ್ನು ಸ್ಥಾಪಿಸಿ ಅದಕ್ಕಾಗಿ ಒಂದು ವಿಶಾಲವಾದ ಶಿವಾಲಯವನ್ನು ಕಟ್ಟಿಸಿದನೆಂದೂ ತಿಳಿಯುವದು. ಈ ಶಾಸನ ಬಹಳ ದೊಡ್ಡದೂ ಐತಿಹಾಸಿಕ ದೃಷ್ಟಿಯಿಂದ ಮಹತ್ವವಾದುದೂ ಆಗಿದೆ. **ಜಯವರ್ಮ ರಾಜನು** ಯವದ್ವೀಪದ ಅಂದರೆ ಈಗಿನ ಜಾವಾ ನಡುಗಡ್ಡೆಯಿಂದ ಕಾಂಬೋಜ ದ್ವೀಪಕ್ಕೆ ಬಂದು ಅಲ್ಲಿ ರಾಜನಾಗಿ ಆಳುತ್ತಿದ್ದನು. ಅವನು ಅಲ್ಲಿ ಶೈವಧರ್ಮವನ್ನು ಸ್ಥಾಪಿಸಿ ಪ್ರಸಾರ ಮಾಡಿದನು. ಶಿವಕೈವಲ್ಯವೆಂಬ ಪುರೋಹಿತವನ್ನು ಶಿವಾಲಯದ ಸ್ಥಾನಾಧಿಪತಿ ಮತ್ತು ಶಿವಲಿಂಗದ ಪಾಲಕನನ್ನಾಗಿ ನೇಮಿಸಿದನು. ಈ ಶಿವಕೈವಲ್ಯನಿಗೆ ಜನಪದ ದೇಶದಿಂದ ಬಂದ ಹಿರಣ್ಯದಾಮನೆಂಬ ಮತ್ತೊರ್ವ ಶಿವಾಚಾರ್ಯನಿಂದ ಶಿವಶಾಸ್ತ್ರಗಳನ್ನು ಬೋಧಿಸುವಂತೆ ಏರ್ಪಡಿಸಿ ಶಿವಕೈವಲ್ಯನಿಗೆ ಶಿವದೀಕ್ಷೆಯನ್ನು ಶಿವಾಗಮಗಳನ್ನೂ ಕೊಡಿಸಿದನು. ಈ ದೇವರಾಜವೆಂಬ ಶಿವಲಿಂಗವು ಕಾಂಬೋಜ ದೇಶದಲ್ಲಿ ಪ್ರಸಿದ್ಧವಾದ ದೈವತವು. ಅದು ಅಲ್ಲಿಯ ಏಕಮಾತ್ರ ಮುಖ್ಯ ದೇವತೆ (National Deity) ಯಾಗಿ ಗಣಿಸಲ್ಪಡುತ್ತಿತ್ತು. ಕಾಂಬೋಜ ದ್ವೀಪದ ಸಮೀಪದಲ್ಲಿರುವ ಚಂಪಾದೇಶದಲ್ಲಿಯೂ ಶೈವಧರ್ಮವು ಮುಖ್ಯವೂ ರಾಷ್ಟ್ರೀಯವೂ ಆದ ಧರ್ಮವಾಗಿತ್ತು. ಅಲ್ಲಿ ಜನರು ಶಿವನನ್ನು ಲಿಂಗ ರೂಪದಿಂದ ಪೂಜಿಸುತ್ತಿದ್ದರು. ೪ನೆಯ ಶತಮಾನದ ಅಂತ್ಯದಲ್ಲಿ ಅಥವಾ ೫ನೆಯ ಶತಮಾನದ ಪ್ರಾರಂಭದಲ್ಲಿ ಇದ್ದ ಅಲ್ಲಿಯ ದೊರೆಯಾದ **ಭದ್ರವರ್ಮನು** ಒಂದು ಶಿವಲಿಂಗವನ್ನು ಸ್ಥಾಪಿಸಿದನು. ಅದನ್ನು ಶಂಭು, ಭದ್ರೇಶ್ವರ, ಶ್ರೀ ಶಾನ ಭದ್ರೇಶ್ವರ ಮೊದಲಾದ ಹೆಸರುಗಳಿಂದ ಕರೆಯುತ್ತಿದ್ದರು. ಈ ಶಿವಲಿಂಗವು ಚಂಪಾ ದೇಶದ ಜನರಿಗೆಲ್ಲ ಇಷ್ಟದೇವತೆಯಾಗಿತ್ತು. ಕಾಂಬೋಜ, ಚಂಪಾ, ಯವ, ಸುಮಾತ್ರಾ ಮೊದಲಾದ ದ್ವೀಪಗಳಲ್ಲಿ ಶೈವಧರ್ಮವು ಶಿವಲಿಂಗದ ಆರಾಧನೆಯೂ ಕ್ರಿ. ಶ. ೪ನೆಯ ಶತಕಕ್ಕೂ ಮೊದಲು ಮತ್ತು ಮುಂದೆ ಬಹು ಶತಮಾನಗಳವರೆಗೆ ಬಹಳವಾಗಿ ರೂಢಿಯಲ್ಲಿತ್ತು. ಅಲ್ಲಿಯ ಶಿಲಾಶಾಸನಗಳಲ್ಲಿ ಈ ವಿಷಯ ಪದೇ ಪದೇ

ಬರುತ್ತವೆ. ಕ್ರಿ. ಶ. ೭೯೯ ರಲ್ಲಿ ಹುಟ್ಟಿದ ಮೊದಲನೆಯ **ಇಂದ್ರವರ್ಮನ** ಒಂದು ಶಾಸನದಿಂದ* ಕೆಳಗಿನ ಶ್ಲೋಕಗಳನ್ನು ಉದ್ಧರಿಸಲಾಗಿದೆ:

ತಸ್ಯಾಪಿ ಪಾರ್ಥಿವಂ ಲಿಂಗಂ ಸ್ಥಾಪಿತಂ **ಶ್ರೀಂದ್ರವರ್ಮಣಾ** ।
ಇಂದ್ರಭದ್ರೇಶ್ವರೋ ನಾಮ್ನಾ ತತಶ್ಚಾಭೂತ್ ಸ ಏವ ವಾ ॥
ತಸ್ಯೈವ ಸ್ಥಾಪಿತಂ ತೇನ ದ್ವಯಂ ಕೋಶಶ್ಚನಸ್ಥಿರಂ ।
ಸಮುಖಂ ಚರಕೋಶಂ ಹಿ ಶಾಕೆ ಶಶಿಯ ಮಾದ್ರಿಗೆ ॥

"**ಇಂದ್ರವರ್ಮನು** ತನ್ನ ಹೆಸರಿನ ಪಾರ್ಥಿವಲಿಂಗವನ್ನು ಸ್ಥಾಪಿಸಿದನು. ಅದು ಇಂದ್ರಭದ್ರೇಶ್ವರವೆಂದು ಹೆಸರು ಪಡೆಯಿತು. ಅವನು ಶಶಿ – ಯಮ – ಅದ್ರಿ (೭೨೧) ಶಕ ವರ್ಷದಲ್ಲಿ ಎರಡು ಲಿಂಗಕೋಶಗಳನ್ನು ಸ್ಥಾಪಿಸಿದನು. ಒಂದು ಚರ ಮತ್ತೊಂದು ಸ್ಥಿರ. ಚರಲಿಂಗಕ್ಕೆ ಮುಖವಿತ್ತು" ಶಿವಾಗಮಗಳಲ್ಲಿ ಹೇಳಿದ ಮೃಣ್ಮಯ ಲಿಂಗ, ಮುಖಲಿಂಗ, ಸ್ಥಿರಲಿಂಗ ಮತ್ತು ಚರಲಿಂಗ ಇವುಗಳ ಉಲ್ಲೇಖ ಈ ಶಾಸನ ಶ್ಲೋಕಗಳಲ್ಲಿ ಬಂದಿದೆ.

ಈಗಲೂ ಕೂಡ ಶೈವಧರ್ಮವು ಬಹುಜನ ಭಾರತೀಯರ ಜೀವನಕ್ಕೂ ಮನಶ್ಶಾಂತಿಗೂ ಆಧಾರವಾಗಿದೆ. ಶೈವಧರ್ಮದ ಪ್ರಮಾಣ ಗ್ರಂಥಗಳು ಶಿವಾಗಮಗಳು ಅವುಗಳ ಸಂಖ್ಯೆ ೨೮. ಅವುಗಳು ಇಂತಿವೆ: ೧. ಕಾಮಿಕ, ೨. ಯೋಗಜ, ೩. ಚಿಂತ್ಯ, ೪. ಕಾರಣ, ೫. ಅಜೀತ, ೬. ದೀಪ್ತ್ಯ, ೭. ಸೂಕ್ಷ್ಮ, ೮. ಸಹಸ್ರ, ೯. ಅಂಶುಮಾನ್, ೧೦. ಸುಪ್ರಭೇದ, ೧೧. ವಿಜಯ, ೧೨. ವಿಶ್ವಾಸ, ೧೩. ಸ್ವಾಯಂಭುವ, ೧೪ ಅನಲ, ೧೫. ವೀರ, ೧೬. ರೌರವ, ೧೭. ಮಕುಟ, ೧೮. ವಿಮಲ, ೧೯. ಚಂದ್ರಜ್ಞಾನ, ೨೦. ಬಿಂಬ, ೨೧. ಪ್ರೋದ್ಗೀತ, ೨೨. ಲಲಿತ, ೨೩. ಸಿದ್ಧ, ೨೪. ಸಂತಾನ, ೨೫. ಶರ್ವೋತ್ತರ, ೨೬. ಪಾರಮೇಶ್ವರ, ೨೭. ಕಿರಣ, ೨೮. ವಾತಾಲ.[4] ಈ ಆಗಮಗಳ ಗ್ರಂಥ ಸಂಖ್ಯೆ ಅದ್ಭುತವಾಗಿದೆ. ಒಂದೊಂದು

---

*R. C. Majumdar-Champa-II n°23 viii and ix.
Bergaigne, Inscriptins the II P. 33-37-VIII-IX
The Yang Tikuh Inscription.

4 ಕಾಮಿತಂ ಯೋಗಜಂ ಚಿಂತ್ಯಂ ಕಾರಣಂ ತ್ವಜಿತಂ ತಥಾ ।
ದೀಪ್ತಂ ಸೂಕ್ಷ್ಮಂ ಸಹಸ್ರಂ ಚ ಹ್ಯಂಶುಮತ್ ಸುಪ್ರಭೇದಕಂ ॥
ವಿಜಯಂ ಚೈವ ವಿಶ್ವಾಸಂ ಸ್ವಾಯಂಭುವಮಥಾನಲಂ ।
ವೀರಂ ಚ ರೌರವಂ ಚೈವ ಮಕುಟಂ ವಿಮಲಂ ತಥಾ ॥
ಚಂದ್ರಜ್ಞಾನಂ ಚ ಬಿಂಬಂ ಚ ಪ್ರೋದ್ಗೀತಂ ಲಲಿತಂ ತಥಾ ।
ಸಿದ್ಧಂ ಸಂತಾನಶರ್ವೋತ್ತಂ ಪಾರಮೇಶ್ವರಮೇವ ಚ ॥
ಕಿರಣಂ ವಾತುಲಂ ತ್ವೇತಾ ಅಷ್ಟಾವಿಂಶತಿಸಂಹಿತಾಃ !
ಏಮನ್ಯಾನಿ ತಂತ್ರಾಣಿ ಶಿವಪ್ರೋಕ್ತಾನ್ಯನೇಕಶಃ ॥

—ಶಿವತತ್ತ್ವ ರತ್ನಾಕರ, ಕಲ್ಲೋಲ: ೧, ತರಂಗ: ೧, ಶ್ಲೋಕ: ೬೧–೬೪.

ಆಗಮ ಪರಾರ್ಧ, ಕೋಟಿ, ಲಕ್ಷಶ್ಲೋಕಸಂಖ್ಯೆಗಳುಳ್ಳದ್ದು. ಕಾಮಿಕದ ಸಂಖ್ಯೆ ಪರಾರ್ಧ, ಯೋಗಜದ ಸಂಖ್ಯೆ ಲಕ್ಷ, ಕಾರಣದ ಸಂಖ್ಯೆ ಕೋಟಿ, ಅಜಿತದ ಸಂಖ್ಯೆ ನಿಯುತ, ಸೂಕ್ಷ್ಮದ ಸಂಖ್ಯೆ ಪದ್ಮ, ಸಹಸ್ರದ ಸಂಖ್ಯೆ ಶಂಖ, ಸುಪ್ರಭೇದದ ಸಂಖ್ಯೆ ಮೂರು ಕೋಟಿ ಇತ್ಯಾದಿ ಅದ್ಭುತ ಶ್ಲೋಕ ಸಂಖ್ಯೆಗಳುಳ್ಳ ಆಗಮ ಗ್ರಂಥಗಳಿವೆ. ಮೇಲಾಗಿ ಶಿವಾಗಮಗಳ ಸಂಖ್ಯೆ ೨೮ ಎಂದಿದ್ದರೂ ಪ್ರತಿಯೊಂದೂ ಆಗಮಕ್ಕೆ ಉಪಾಗಮಗಳಿವೆ. ಕಾಮಿಕಾಗಮದಲ್ಲಿ ದೊರೆಯುವ ಶಿವಾಗಮ ಪಟ್ಟಿಯ ಪ್ರಕಾರ ಆಗಮಗಳೂ ಉಪಾಗಮಗಳೂ ಕೂಡಿ ೨೫೧ ಆಗುವವು. ಇದಲ್ಲದೆ ಶೈವಧರ್ಮ ಯಲ್ಲಿಯ ಅವಾಂತರ ಭೇದಗಳನ್ನನುಲಕ್ಷಿಸಿ ಬರೆದ ಮತ್ತು ಆಗಮಗಳೆಂದು ಪ್ರತೀತಿ ಇರುವ ಅನೇಕ ಗ್ರಂಥಗಳು ದೊರೆಯುವುವು. ಆದುದರಿಂದ ಈ ಶೈವಾಗಮ ಸಾಹಿತ್ಯ ಎಷ್ಟು ವಿಪುಲವಾಗಿತ್ತೆಂಬ ಕಲ್ಪನೆಯು ಬರುವದು. ಶಾಕ್ತ ಮತ್ತು ಪಾಂಚರಾತ್ರ ಪಂಥಗಳಲ್ಲಿಯೂ ಅವರವರ ಆಗಮಗಳು ಇವೆ. ಶೈವ, ಶಾಕ್ತ, ಪಾಂಚರಾತ್ರ ಆಗಮಗಳಲ್ಲಿ ಕೆಲವು ಆಗಮಗಳಿಗೆ ಒಂದೇ ಹೆಸರು ಇದೆ. ಪಾರಮೇಶ್ವರಾಗಮವು ಶೈವಾಗಮಗಳಲ್ಲಿ ಒಂದೆನಿಸುವದು. ಇದೇ ಹೆಸರಿನ ಆಗಮವು ಶಾಕ್ತರಲ್ಲಿದೆ. ಪಾಂಚ ರಾತ್ರ ಪಂಥದಲ್ಲಿಯೂ ಒಂದು ಪಾರಮೇಶ್ವರಾಗಮವಿದೆ. ಈಗ ನಮಗೆ ಈ ಹೆಸರುಗಳ ಆಗಮಗಳ ಅಲ್ಪಸ್ವಲ್ಪ ಭಾಗವು ಅಲ್ಲಲ್ಲಿ ದೊರೆಯುವದು. ಅವುಗಳ ಭಾಷೆ ಅಷ್ಟು ಪ್ರಾಚೀನವಾದುದಲ್ಲ. ಆದುದರಿಂದ ಭಾಷೆಯ ಮೇಲೆ ಅವುಗಳ ಕಾಲವನ್ನು ನಿರ್ಣಯಿಸಲು ಈಗ ಉಪಲಬ್ಧವಿದ್ದ ಅಲ್ಪಸ್ವಲ್ಪ ಭಾಗಗಳಿಂದ ಸಾಧ್ಯವಿಲ್ಲ. ಆಗಮಗಳು ಅತಿ ಪ್ರಾಚೀನ ಕಾಲದವೆಂದು ಪ್ರತೀತಿ ಇದೆ. ಅವು ಸಾಕ್ಷಾತ್ ಪರಮೇಶ್ವರನ ಮುಖದಿಂದ ಬಂದವಾದುದರಿಂದ ಕಾಲಾತೀತವಾದುವೆಂದು ನಂಬುಗೆ. ಆದರೂ ನಾವು ಈಗ ಶಿವಾಗಮಗಳ ಕಾಲವನ್ನು ನಿರ್ಣಯಿಸುವದು ಅಗತ್ಯವಾಗಿದೆ. ಶಿಲಾಶಾಸನಗಳಲ್ಲಿ ಆಗಮಗಳ ಹೆಸರು ಮತ್ತು ವಿಷಯ ಕಂಡು ಬರುವುದು. ಜನರ ಆಚಾರ-ವಿಚಾರಗಳಲ್ಲಿ ಶಿವಾಗಮಗಳ ತತ್ತ್ವ ಒಡಮೂಡಿರು ವುದು. ಆದುದರಿಂದ, ಈಗ ಉಪಲಬ್ಧವಿದ್ದ ಸಾಧನಗಳಿಂದ ಶಿವಾಗಮಗಳ ಕಾಲವನ್ನು ಕ್ರಿ. ಶ. ೧ನೆಯ ಶತಮಾನಕ್ಕೂ ಹಿಂದೆ ಒಯ್ಯಬಹುದು.

ಶಿವಧರ್ಮವನ್ನು ವಿವರಿಸುವ ಶಿವಾಗಮಗಳ ಪ್ರತಿಗಳು ನೇಪಾಳದಲ್ಲಿಯೂ, ದಕ್ಷಿಣ ಭಾರತದಲ್ಲಿಯೂ, ಕಾಶ್ಮೀರದಲ್ಲಿಯೂ ಈಗಲೂ ದೊರೆಯುವವು. ನೇಪಾಳ ದರ್ಬಾರ ಪುಸ್ತಕಾಲಯದಲ್ಲಿ ಮತ್ತು ಕೇಂಬ್ರಿಜ್ ವಿಶ್ವವಿದ್ಯಾಲಯದ ಪುಸ್ತಕಾಲಯ ದಲ್ಲಿ ಕೆಲವು ಶಿವಾಗಮಗಳ ತಾಡವೋಲೆಗರಿಗಳ ಕಟ್ಟುಗಳು ಮತ್ತು ಭೂರ್ಜಪತ್ರದ ಹೊತ್ತಿಗೆಗಳು ಇವೆ. ಅವುಗಳಲ್ಲಿ ಕೆಲವನ್ನು ಕ್ರಿ. ಶ. ೭ನೆಯ ಶತಮಾನದಲ್ಲಿ ಪ್ರತಿ ಮಾಡಿಕೊಂಡಂತೆ ಉಲ್ಲೇಖವಿದೆ. ಪ್ರಶಾಂತ ಮಹಾಸಾಗರ (Pacific Occan)ದಲ್ಲಿರುವ ದ್ವೀಪಗಳಾದ ಕಾಂಬೋಜ, ಜಾವಾ, ಚಂಪಾ, ಸುಮಾತ್ರಾ ಮತ್ತು ಬಲಿ ನಡುಗಡ್ಡೆ ಮೊದಲಾದವುಗಳಲ್ಲಿ ಈಗಲೂ ಉಪಲಬ್ಧವಿದ್ದ ಮತ್ತು ಸು.

ಕ್ರಿ. ಶ. ೮೦೦ಕ್ಕು ಮೊದಲು ಹುಟ್ಟಿದ ಶಿಲಾಶಾಸನಗಳಲ್ಲಿ ಶಿವಾಗಮಗಳ ಉಲ್ಲೇಖ ವಿದೆ.¹ ಆದುದರಿಂದ ಅವುಗಳ ಕಾಲವನ್ನು ಕ್ರಿ. ಶ. ಪ್ರಾರಂಭದವರೆಗೆ ಒಯ್ಯುರೆ ತಪ್ಪಾಗದು. ಶಿವಾಗಮಗಳು ಭಾರತದಲ್ಲೆಲ್ಲ ಪ್ರಚಾರದಲ್ಲಿದ್ದವೆಂಬುದು ಈಗ ದೊರೆ ಯುವ ಅವುಗಳ ಪ್ರತಿಗಳಿಂದ ಸ್ಪಷ್ಟವಾಗುವದು. ಅವು ನೇಪಾಳ, ಕಾಶ್ಮೀರ, ಬಂಗಾಲ, ಗುಜರಾತ, ಮಧ್ಯಪ್ರದೇಶ, ಕರ್ನಾಟಕ, ಆಂಧ್ರ, ತಮಿಳುನಾಡು ಗಳಲ್ಲಿ ದೊರೆಯುವವು. ಅವು ಪವಿತ್ರ ಗ್ರಂಥಗಳೆಂದು ಪ್ರಾಚೀನಕಾಲದಿಂದಲೂ ಜನರಿಂದ ಮನ್ನಣೆ ಪಡೆದಿರುವವು. ಭಾರತವನ್ನು ದಾಟಿ ಸಾವಿರಾರು ಮೈಲು ಸಮುದ್ರದ ಆಚೆಗಿರುವ ದ್ವೀಪಗಳಲ್ಲಿ ಪ್ರಸಾರಹೊಂದಿರುವವು. ಆದುದರಿಂದ, ಅವುಗಳ ಅಭ್ಯಾಸ ಸಾಂಸ್ಕೃತಿಕ ದೃಷ್ಟಿಯಿಂದ ಬಹಳ ಉಪಯುಕ್ತವಾದುದು. ಈಗ ೨೮ ಶಿವಾಗಮಗಳಲ್ಲಿ ಒಂದಾದ 'ಚಂದ್ರಜ್ಞಾನಾಗಮ'ದ ಪರಿಚಯವನ್ನು ಮಾಡಿಕೊಡಲು ಯತ್ನಿಸ ಲಾಗಿದೆ.

ಚಂದ್ರಜ್ಞಾನಾಗಮವು ೨೮ ಶಿವಾಗಮಗಳಲ್ಲಿ ೧೯ ನೆಯದೆಂದೂ ಅದರ ಶ್ಲೋಕ–ಸಂಖ್ಯೆ ೩ ಕೋಟಿ ಎಂದೂ ಅದು ಅನುಷ್ಟುಪ್ ಛಂದಸ್ಸಿನಲ್ಲಿದೆಯೆಂದೂ ಅವನ್ನು ಅನಂತರುದ್ರನು ಬೃಹಸ್ಪತಿಗೆ ಹೇಳಿದನೆಂದೂ ಕಾಮಿಕಾಗಮದಿಂದ ತಿಳಿಯು ವದು. ಚಂದ್ರಜ್ಞಾನಾಗಮಕ್ಕೆ ಸಂಬಂಧಿಸಿದ ೧೪ ಉಪಾಗಮಗಳು ಇಂತಿವೆ–೧ ಸ್ಥಿರ, ೨ ಸ್ಥಾನ, ೩ ಮಹತ್, ೪ ವರುಣ, ೫ ನಂದಿಕೇಶ್ವರ, ೬ ಏಕಪಾದ, ೭ ಶಂಕರ, ೮ ನೀಲರುದ್ರ, ೯ ಶಿವಭದ್ರ, ೧೦ ಕಲ್ಪಭೇದ, ೧೧ ಶ್ರೀಮುಖ, ೧೨ ಶಿವ ಶಾಸನ, ೧೩ ಶಿವಶೇಖರ, ೧೪ ದೇವೀಮತ.

ಶಿವಾಗಮಗಳ ಕಾಲವನ್ನು ಸ್ಥೂಲವಾಗಿ ಕ್ರಿ. ಶ. ೧ ನೆಯ ಶತಮಾನಕ್ಕೆ ಒಯ್ಯಬಹುದೆಂದು ಮೇಲೆ ವಿವರಿಸಲಾಗಿದೆ. ಆದರೆ ಈ ಆಗಮದ ಕಾಲವನ್ನು ನಿರ್ಣಯಿಸುವದು ಈಗ ನಮ್ಮ ಮುಂದಿರುವ ಮಹತ್ವದ ಪ್ರಶ್ನೆಗಳಲ್ಲಿ ಒಂದು. ಶರಣರು ತಮ್ಮ ವಚನಗಳಲ್ಲಿ ಶಿವಾಗಮಗಳಿಂದ ಶ್ಲೋಕಗಳನ್ನು ಅಲ್ಲಲ್ಲಿ ಉದ್ಧರಿಸಿರುವರು. ಅಂತಹ ಶ್ಲೋಕಗಳ ಮೂಲವನ್ನು ಕಂಡುಹಿಡಿಯುವದು ಈಗ ಅಗತ್ಯವಾಗಿದೆ. ಅದರಿಂದ ಶಿವಾಗಮಗಳ ಕಾಲವನ್ನು ನಿರ್ಣಯಿಸಲು ಬಹು ಪ್ರಯೋಜನವಾಗುವದು. ಇಂತಹ ವಚನಕಾರರ ಗ್ರಂಥಗಳಲ್ಲಿ ಗುಬ್ಬಿಯ ಮಲ್ಲಣಾರ್ಯರ 'ಗಣಭಾಷ್ಯ

---

¹ Inscriptions of Phnom Sandak of About 9 th century A. D. Inscritpions of Angkor Vat.

Bergaigne, Inscriptins de champa et du Cambodge II PP. 157, 392, 389, 392 etc.

ರತ್ನಮಾಲೆ'ಯು ಬಹು ಉಪಯುಕ್ತವಾದುದು. **ಅದರಂತೆ ಡಾ.** ಹಳಕಟ್ಟಿಯವರ ಮುದ್ರಣ ಮಂದಿರದಲ್ಲಿ ಮುದ್ರಿತವಾಗಿ ಇನ್ನು ಪ್ರಕಟವಾಗದಿರುವ "ಅ ಪ್ರ ಮಾ ಣ ಕೂಡಲಸಂಗಮದೇವಾ" ಎಂಬ ಅಂಕಿತವುಳ್ಳ 'ಸಕಲಾಗಮಶಿಖಾಮಣಿ' ಎಂಬ ವಚನ ಗ್ರಂಥವು ಬಹಳ ಮಹತ್ವದ್ದು. **ಬಸವಣ್ಣನವರು, ಪ್ರಭುದೇವರು, ಚನ್ನಬಸವಣ್ಣನವರು** ಮೊದಲಾದ ಇನ್ನೂ ಅನೇಕ ಶರಣ-ಶರಣೆಯರು ತಮ್ಮ ವಚನಗಳಲ್ಲಿ ಶಿವಾಗಮಗಳಿಂದ ಆಧಾರಗಳನ್ನು ಉದ್ಧರಿಸಿರುವರು. ಅವುಗಳನ್ನು ಶ್ರುತಿಗಳೆಂದು ಕರೆದಿರುವರು. ಆದುದರಿಂದ, ವಚನಕಾರರು ಶಿವಾಗಮಗಳನ್ನು ಪ್ರಮಾಣಗ್ರಂಥಗಳೆಂದು ಒಪ್ಪಿಕೊಂಡಿರುವರೆಂದೂ ಶಿವಾಗಮಗಳು ವಚನಗಳಿಗಿಂತಲೂ ಮೊದಲಿನವೆಂಬುದೂ ಸಿದ್ಧವಾಗುವದು. ವಚನಶಾಸ್ತ್ರಗಳಲ್ಲದೆ ಶಿವಾಗಮಗಳ ಶ್ಲೋಕಗಳನ್ನು ಉದ್ಧರಿಸಿದ ಗ್ರಂಥಗಳಲ್ಲಿ **ಬಸವಪುರಾಣದ ಮಲ್ಲಣಾರ್ಯ** (ಕ್ರಿ. ಶ. ೧೫೩೦)ನ ವೀರಶೈವಾಮೃತ ಮಹಾ ಪುರಾಣ, **ಸಂಪಾದನೆಯ ಸಿದ್ಧವೀರ** (ಕ್ರಿ. ಶ. ೧೬೦೦)ನ ವೀರಶೈವ ಸದಾಚಾರ ಸಂಗ್ರಹ, **ನಿಷ್ಠೂರು ನಂಜಣಾಚಾರ್ಯನ** ವೇದಾಂತ ಸಾರಸಂಗ್ರಹ, ಸಕಲಾಗಮ ಸಾರಸಂಗ್ರಹ ಮೊದಲಾದವು. ಇವುಗಳಲ್ಲಿ ವಿಪುಲವಾಗಿ ಶಿವಾಗಮಗಳ ಶ್ಲೋಕಗಳು ಬಂದಿವೆ. ಚಂದ್ರಜ್ಞಾನಾಗಮದಿಂದ ವೀರಶೈವ ವೇದಾಂತಸಾರ ಚಿಂತಾಮಣಿಯಲ್ಲಿ ಒಮ್ಮೆ, ಸಕಲಾಗಮಸಾರಸಂಗ್ರಹದಲ್ಲಿ ಹೀಗೆ ಆಧಾರಗಳನ್ನು ಹೇಳಲಾಗಿದೆ. **ನಿಷ್ಠೂರ ನಂಜಣಾಚಾರ್ಯನು** ಇತ್ತೀಚಿನವನು. ಸುಮಾರು ಕ್ರಿ. ಶ. ೧೭೨೫ ಇದ್ದಿರಬಹುದೆಂದು ಕವಿಚರಿತೆಕಾರರು ಹೇಳುತ್ತಾರೆ. ಸಕಲಾಗಮಸಾರಸಂಗ್ರಹದ ಕಾಲ ಮತ್ತು ಗ್ರಂಥಕಾರನ ಹೆಸರು ಗೊತ್ತಿಲ್ಲ. **ಈಶಾನಶಿವಗುರು** ದೇವಪದ್ಧತಿಯಲ್ಲಿ ಈ ಆಗಮದಿಂದ ಶ್ಲೋಕಗಳನ್ನು ಉದ್ಧರಿಸಲಾಗಿದೆ. ಅದರ ಗ್ರಂಥಕಾರ **ಈಶಾನಶಿವನು** ತಂಜಾವರದ ಬೃಹದೀಶ್ವರ ದೇವಾಲಯಲ್ಲಿ ಸ್ಥಾನಾಚಾರ್ಯನೂ ಅಲ್ಲಿಯ ಮಠದ ಅಧಿಪತಿಯೂ ಮೊದಲನೆಯ ರಾಜೇಂದ್ರಚೋಳನ ದೀಕ್ಷಾಗುರುವೂ ಆಗಿದ್ದನು. ಆದುದರಿಂದ ಈತನು ೧೧ನೆಯ ಶತಮಾನದಲ್ಲಿ ಜೀವಿಸಿದ್ದನು. ಈತನ ಗ್ರಂಥವಾದ 'ಈಶಾನ ಶಿವಗುರುದೇವ ಪದ್ಧತಿ'ಯಲ್ಲಿ ಚಂದ್ರಜ್ಞಾನಾಗಮದ ಉಲ್ಲೇಖ ಬಂದಿರುವದರಿಂದ ಈ ಆಗಮವು ಹನ್ನೊಂದನೆಯ ಶತಮಾನಕ್ಕೂ ಮೊದಲು ಇದ್ದಿತು.

**ನೇಪಾಳ** ದರ್ಬಾರ ಪುಸ್ತಕಾಲಯದಲ್ಲಿ ಬ್ರಹ್ಮಯಾಮಲ ಎಂಬ ಗ್ರಂಥವನ್ನು ಕ್ರಿ. ಶ. ೧೦೫೨ರಲ್ಲಿ ಪ್ರತಿಮಾಡಿಕೊಳ್ಳಲಾಗಿದೆ. ಅದರ ೩೯ ನೆಯ ಅಧ್ಯಾಯದಲ್ಲಿ ಕೆಲವು ಆಗಮಗಳ ಹೆಸರುಗಳು ಬಂದಿವೆ. ಅದು ಹೀಗಿದೆ —

[2] ವಿಜಯಂ ಚೈವ ನಿಶ್ವಾಸಂ ಸ್ವಾಯಂಭುವ ಮತಃ ಪರಂ |
ವಾತುಲಂ ವೀರಭದ್ರಂ ಚ ರೌರವಂ ಮಾಕುಟಸ್ತಥಾ ||
ವೀರೇಶಶ್ಚ ತಥಾಚಾನ್ಯಂ ತತ ಊರ್ಧ್ವಂ ನಿಬೋಧತ |
ಚಂದ್ರಜ್ಞಾನಂ ಚ ಪ್ರೋದ್ಗೀತಂ....ಲಲಿತಂ ತಥಾ ||
ಸಿದ್ಧಿಸತ್ವಾನಕಂ ಚೈವ ಸರ್ವೋದ್ಗೀತಮತಃ ಪರಂ |
ಕಿರಣಂ ಚ ಮಹಾದೇವಿ ಪಾರಮೇಶ್ವರ ಏವ ಚ ||

ಇದರಲ್ಲಿ ಚಂದ್ರಜ್ಞಾನಾಗಮದ ಹೆಸರಿದೆ. ಆದುದರಿಂದ ಅದು ಕ್ರಿ. ಶ. ೧೦೫೨ಕ್ಕೂ ಇತ್ತೆಂದು ತಿಳಿಯುವದು.

ಕಾಂಬೋಜ ದೇಶದ ಡೊಕ್‌ಕಕ್‌ಥೊಮ್ (Sdok Kok Thom) ಎಂಬ ಸಿಸೋಫೋನು ಪ್ರಾಂತದಲ್ಲಿ ದೊರೆತ ಮತ್ತು ಕ್ರಿ. ಶ. ೧೦೫೨ ರಲ್ಲಿ ಹುಟ್ಟಿದ ಶಾಸನದಲ್ಲಿ ಕೆಲವು ಆಗಮುಗಳ ಹೆಸರಿದೆ. ಅಂತಹ ಆಗಮುಗಳಿಗೆ ಚಂದ್ರ ಜ್ಞಾನಾಗಮಕ್ಕೂ ಸಂಬಂಧವಿದೆ. ಈ ಶಾಸನವು ಕಾಂಬೋಜ ದೇಶದಲ್ಲಿ ಶೈವ ಧರ್ಮದ ಅಸ್ತಿತ್ವವು ಕ್ರಿ. ಶ. ೮೦೦ ರಿಂದ ಇದ್ದುದನ್ನು ತಿಳಿಸುವುದು. ಚಂಪಾದೇಶ ದಲ್ಲಿ ಶಿವಾಗಮುಗಳ ಪ್ರಸಾರ ಇದ್ದುದು ಅಲ್ಲಿಯ ಶಾಸನಗಳಿಂದ ಸ್ಪಷ್ಟವಾಗುವದು.

ನೇಪಾಳ ದರ್ಬಾರ ಪುಸ್ತಕಾಲಯದಲ್ಲಿರುವ 'ನಿಶ್ವಾಸ ತತ್ವ ಸಂಹಿತೆ' ಎಂಬ ಆಗಮದ ಕೈಬರಹದ ಪ್ರತಿ ಇದೆ. ಇದನ್ನು ಗುಪ್ತಾಕ್ಷರಗಳಲ್ಲಿ ಬರೆಯಲಾಗಿದೆ. ಲಿಪಿಶಾಸ್ತ್ರದ ಆಧಾರದ ಮೇಲೆ ಈ ಗ್ರಂಥವನ್ನು ೮ನೆಯ ಶತಮಾನದಲ್ಲಿ ಪ್ರತಿಮಾಡಿ ಕೊಂಡಿರಬೇಕೆಂದು ನಿಶ್ಚಯಿಸಲಾಗಿದೆ. ಇದರಲ್ಲಿ ಶೈವಾಗಮುಗಳ ಉಲ್ಲೇಖವಿದೆ. ಪತ್ರ ೨೪ ಅ–೨೪ ಬ ಗಳಲ್ಲಿ ಬರೆದ ಶಿವತಂತ್ರಗಳ ಕೆಲ ಭಾಗವನ್ನು ಇಲ್ಲಿ ಉದ್ಧರಿಸ ಲಾಗಿದೆ:

[3] ಶಿವ ತಂತ್ರಸ್ಯ ಚೋತ್ಪತ್ತಿಂ ಕೀರ್ತ್ಯಮಾನಂ ನಿಬೋಧ ಮೇ |
ಅದೃಷ್ಟವಿಗ್ರಹೇ ಶಾಂತಿಃ ಶಿವೇ ಪರಮಕಾರಣೇ ||

ಕಾಮಿಕಂ ಯೋಗದಂ ದಿವ್ಯಂ ಕಾರಣಮಜಿತಂ ತಥಾ |
ದೀಪ್ತಂ ಸೂಕ್ಷ್ಮಂ ಚ ಸಾಹಸ್ರಂ ಅಪ್ತಮಾಂಸುಪ್ರಭೇದಿ ಚ ||
ಅನಂತಂ ಶಿವಶಾಸ್ತ್ರಂ ತು ದಶಧಾ ಪರಿಕೀರ್ತಿತಂ |
ಪುನಶ್ಚಾಷ್ಟಾದಶಭೇದಂ ರುದ್ರೇಣ ಪರಿಕೀರ್ತಿತಂ ||

---

[2] Harprasad Shastri, Nepal Darbar Catalo ue, Voll, II P. 60: Fol. 869 B.

[3] Haraprasad Shostri Nepal Darbar Librir Catalogve, Vol. 1 P. 137

ವಿಜಯಂ ಪ್ರಥಮಂ ಹ್ಯೇಷಾಂ ನಿಶ್ವಾಸಂ ತದನಂತರಂ ।
ಸ್ವಾಯಂಭುವಂ ಮತಶ್ಚೈವ ವಾತುಲಂ ತದನಂತರಂ ॥
ವೀರಭದ್ರಮಿತಿ ಖ್ಯಾತಂ ರೌರವಂ ಮಾಕುಟಸ್ತಥಾ ।
ವಿರಸಂ ಚಂದ್ರಹಾಸಂ ಚ ಜ್ಞಾನಂ ಚ ಮುಖಬಿಂಬಕಂ ॥

ಪ್ರೋದ್ಗೀತಂ ಲಲಿತಂ ಚೈವ ಸಿದ್ಧಸಂತಾನಮೇವ ಚ ।
ಸರ್ವೋದ್ಗೀತಂ ಚ ವಿಜ್ಞೇಯಂ ಕಿರಣಂ ಪಾರಮೇಶ್ವರಂ ॥
ಪಾರಮೇಶ್ವರ ತಂತ್ರೋಽಯಂ ಋಷಿದೇವೇಷು ಕೀರ್ತಿತಂ ।
ಅಷ್ಟಾವಿಂಶತಿ–ತಂತ್ರಾಣಿ ಪ್ರಸಿದ್ಧಾನಿ ಸಹಸ್ರಶಃ ॥

ಇದರಲ್ಲಿ ಉಲ್ಲಿಖಿತವಾದ ಶಿವಾಗಮಗಳು ಅನೇಯ ಶತಮಾನಕ್ಕೂ ಪೂರ್ವದಲ್ಲಿದ್ದವೆಂಬುದು ಸ್ಪಷ್ಟ. ಇವರಲ್ಲಿ ಹೆಸರಿಸಲಾದ ತಂತ್ರಗಳಲ್ಲಿ "ಚಂದ್ರಹಾಸಂ ಚ ಜ್ಞಾನಂ ಚ" ಎಂದು ಬಂದಿದೆ. ಇದು ತಪ್ಪಾಗಿದೆ. ಇದು ಪ್ರತಿಮಾಡಿಕೊಂಡವನ ದೋಷ. ಇದಕ್ಕೆ ಬದಲಾಗಿ 'ಚಂದ್ರಜ್ಞಾನ' ಎಂದಿರಬೇಕು. ಆದುದರಿಂದ ಚಂದ್ರಜ್ಞಾನಾಗಮದ ಕಾಲವು ಅನೆಯ ಶತಮಾನಕ್ಕೂ ಹಿಂದೆ ಹೋಗುವದು.

ಶ್ರೀ ಪ್ರಬೋಧ ಚಂದ್ರ ಬಾಗಚಿ ಅವರು ತಮ್ಮ 'ತಂತ್ರಗಳ ಅಭ್ಯಾಸ' ಎಂಬ ಪುಸ್ತಕದಲ್ಲಿ ೧ ವಿಜಯ, ೨ ನಿಶ್ವಾಸ, ೩ ಸ್ವಾಯಂಭುವಮತ, ೪ ವಾತುಲ, ೫ ವೀರಭದ್ರ, ೬ ರೌರವ, ೭ ಮಾಕುಟ, ೮ ವೀರೇಶ, ೯ ಚಂದ್ರಹಾಸ, ೧೦ ಜ್ಞಾನ, ೧೧ ಮುಖಬಿಂಬ, ೧೨ ಪ್ರೋದ್ಗೀತ, ೧೩ ಲಲಿತ, ೧೪ ಸಿದ್ಧ, ೧೫ ಸಂತಾನ, ೧೬ ಸರ್ವೋದ್ಗೀತ, ೧೭ ಕಿರಣ, ೧೮ ಪಾರಮೇಶ್ವರ ಇವು ಅನೆಯ ಶತಮಾನಕ್ಕೂ ಮೊದಲು ಇದ್ದವೆಂದು ಒಪ್ಪುತ್ತಾರೆ.[4] ಇಲ್ಲಿ ಡಾ. ಬಾಗಚಿಯವರು ಕೂಡ ನಿಶ್ವಾಸತಂತ್ರದ ಕೈಬರಹದ ಆಧಾರದ ಮೇಲೆ ತಪ್ಪು ಬರೆದಿರುವರು. ೯ ಚಂದ್ರಹಾಸ, ೧೦ ಜ್ಞಾನ ಇವೆರಡೂ ಕೂಡಿ 'ಚಂದ್ರಜ್ಞಾನ'ವೆಂದು ಒಂದೇ ಆಗಮದ ಹೆಸರು. ಆದುದರಿಂದ ಚಂದ್ರಜ್ಞಾನಾಗಮದ ಕಾಲ ಕ್ರಿ. ಶ. ೮೦೦ ಕ್ಕೂ ಮೊದಲು ಎಂಬುದು ಮೇಲಿನ ಆಧಾರಗಳಿಂದ ನಿರ್ವಿವಾದವಾಗಿ ಸಿದ್ಧವಾಗುವುದು.

ಈಗ ನಮಗೆ ಉಪಲಬ್ಧವಿರುವ ಚಂದ್ರಜ್ಞಾನಾಗಮದ ಭಾಗ ತೀರ ಸ್ವಲ್ಪ. ಅದನ್ನು ಶ್ರೀ ಕಾಶೀನಾಥ ಗ್ರಂಥಮಾಲೆಯಲ್ಲಿ ೪೦ನೆಯ ಪುಷ್ಪವಾಗಿ ಕೈ. ವಾ. ಪಂ. ಕಾಶೀನಾಥಶಾಸ್ತ್ರಿಗಳವರು ಪ್ರಕಟಿಸಿರುವರು. ಮುದ್ರಿಸಿದ ವರ್ಷ ೧೯೫೬. ಇದರಲ್ಲಿ ಕ್ರಾನ್ ಅಷ್ಟಪತ್ರ ಆಕಾರದ ೧೯೯ ಪುಟಗಳಿವೆ. ಈ ಗ್ರಂಥದಲ್ಲಿ ಕ್ರಿಯಾ ಮತ್ತು ಚರ್ಯಾ ಎಂದು ಎರಡು ಪಾದಗಳಿವೆ. ಕ್ರಿಯಾಪಾದದಲ್ಲಿ ೧೨ ಪಟಲಗಳೂ, ಚರ್ಯಾಪಾದದಲ್ಲಿ ೮ ಪಟಲಗಳೂ ಹೀಗೆ ೨೦ ಪಟಲಗಳು ಇವೆ. ಶ್ಲೋಕ ಸಂಖ್ಯೆ

[4]. Studies in the Tantros, Part I, P. 5.

ಒಟ್ಟು ೯೭೩; ಕ್ರಿಯಾಪಾದ-ಶ್ಲೋ. ೭೬೬, ಚರ್ಯಾಪಾದ ಶ್ಲೋ. ೨೦೭. ಬೃಹಸ್ಪತಿಯು ಮಹಾವೃಷಕೇತನೂ ಧರ್ಮಮೂರ್ತಿಯೂ ಆದ ಅನಂತರುದ್ರನ ಸನ್ನಿಧಿಗೆ ಹೋಗಿ ಸಾಷ್ಟಾಂಗ ಪ್ರಣಾಮ ಮಾಡಿ ಬದ್ಧಾಂಜಲಿಯಾಗಿ ಶಿವಶಾಸನವನ್ನು ವಿವರಿಸಬೇಕೆಂದು ಪ್ರಾರ್ಥಿಸುವನು. ಅವನ ಪ್ರಾರ್ಥನೆಯ ಮೇರೆಗೆ ಅನಂತರುದ್ರನು ಶಿವಶಾಸನವನ್ನು ಉಪದೇಶಿಸುವನು. ಪ್ರತಿಯೊಂದು ಪಟಲದ ಅಂತ್ಯದಲ್ಲಿ "ಇತಿ ಶ್ರೀ ಚಂದ್ರಜ್ಞಾನಾಗಮೇ ಉತ್ತರಭಾಗೇ ಅನಂತರುದ್ರ ಬೃಹಸ್ಪತಿ-ಸಂವಾದೇ ಶಿವಶಾಸನೇ....ಪಾದೆ....ನಾಮ "ಪಟಲಃ" ಎಂದಿದೆ. ಕ್ರಿಯಾಪಾದದ ಪ್ರಥಮ ಪಟಲದಲ್ಲಿ ಶಿವಾಧಿಕ್ಯ ನಿರೂಪಣ-ಶ್ಲೋಕ; ದ್ವಿತೀಯ ಪಟಲದಲ್ಲಿ ಗುರುಸ್ವರೂಪ ನಿರೂಪಣ-ಶ್ಲೋಕ ೯೭ ; ತೃತೀಯ ಪಟಲದಲ್ಲಿ ಲಿಂಗಸ್ವರೂಪ ನಿರೂಪಣ-ಶ್ಲೋಕ ೫೪ ; ಚತುರ್ಥ ಪಟಲದಲ್ಲಿ ಜಂಗಮಸ್ವರೂಪ ನಿರೂಪಣ-ಶ್ಲೋಕ ೩೮ ; ಪಂಚಮ ಪಟಲದಲ್ಲಿ ಪ್ರಸಾದಸ್ವರೂಪ ನಿರೂಪಣ-ಶ್ಲೋಕ ೩೬ ; ಷಷ್ಠಮ ಪಟಲದಲ್ಲಿ ಭಸ್ಮಸ್ವರೂಪ ನಿರೂಪಣ-ಶ್ಲೋಕ ೬೯ ; ಸಪ್ತಮ ಪಟಲದಲ್ಲಿ ರುದ್ರಾಕ್ಷಸ್ವರೂಪ ನಿರೂಪಣ-ಶ್ಲೋಕ ೪೯ ; ಅಷ್ಟಮ ಪಟಲದಲ್ಲಿ ಪಂಚಾಕ್ಷರ ಸ್ವರೂಪ ನಿರೂಪಣ-ಶ್ಲೋಕ ೯೫; ನವಮ ಪಟಲದಲ್ಲಿ ಪಂಚಾಚಾರ ಸ್ವರೂಪ ನಿರೂಪಣ-ಶ್ಲೋಕ ೧೨೮; ದಶಮ ಪಟಲದಲ್ಲಿ ಶೈವಭೇದಗಳು-ಶ್ಲೋಕ ೬೨; ಏಕಾದಶ ಪಟಲದಲ್ಲಿ ಆಹ್ನಿಕ ವಿಧಿ ಶ್ಲೋಕ ೨೩; ದ್ವಾದಶ ಪಟಲದಲ್ಲಿ ವರ್ಣಾಶ್ರಮ ಧರ್ಮಾವಶ್ಯಕತಾ ಕಥನ-ಶ್ಲೋಕ ೧೬ ಹೀಗೆ ೭೬೬ ಶ್ಲೋಕಗಳಲ್ಲಿ ವಿವರಿಸಲಾಗಿದೆ.

ಚರ್ಯಾಪಾದದ ಪ್ರಥಮಪಟಲದಲ್ಲಿ ಶಿವಬೋಧ ಪ್ರಶಂಸೆ-ಶ್ಲೋಕ ೧೪; ದ್ವಿತೀಯ ಪಟಲದಲ್ಲಿ ಉತ್ಕ್ರಾಂತಿ ಸಮಯಾಚಾರ ವರ್ಣನೆ-ಶ್ಲೋಕ ೨೭ ; ತೃತೀಯ ಪಟಲದಲ್ಲಿ ಉತ್ಕ್ರಾಂತಿ ಕಾರ್ಯಕರ್ತೃ-ಕ್ರಮ-ನಿರ್ಣಯ-ಶ್ಲೋಕ ೧೬ ; ಚತುರ್ಥ ಪಟಲದಲ್ಲಿ ಔರ್ಧ್ವ ದೈಹಿಕವಿಧಿಕಥನ-ಶ್ಲೋಕ ೪೫ ; ಪಂಚಮ ಪಟಲದಲ್ಲಿ ಪ್ರಕೀರ್ಣಕ ವಿಧಿಕಥನ-ಶ್ಲೋಕ ೩೪ ; ಷಷ್ಠಮ ಪಟಲದಲ್ಲಿ ಅಶೌಚಶುದ್ಧಿ ಕಥನ-ಶ್ಲೋಕ ೧೭ ; ಸಪ್ತಮ ಪಟಲದಲ್ಲಿ ಪ್ರಾಯಶ್ಚಿತ್ತ ಕಥನ-ಶ್ಲೋಕ ೩೧ ; ಅಷ್ಟಮ ಪಟಲದಲ್ಲಿ ಪ್ರಾಯಶ್ಚಿತ್ತವಿಧಿ ಕಥನ-ಶ್ಲೋಕ ೨೩ ಎಂಬುದಾಗಿ ೨೦೭ ಶ್ಲೋಕಗಳಲ್ಲಿ ವಿವರಿಸಲಾಗಿದೆ.

ಚಂದ್ರಜ್ಞಾನಾಗಮವು ಬಲು ದೊಡ್ಡದಿದ್ದರೂ ಈ ಸಂಗ್ರಹದಲ್ಲಿ ಎರಡೇ ಪಾದಗಳೂ ೨೦ ಪಟಲಗಳೂ ಅನುಷ್ಟುಪ್ ಛಂದಸ್ಸಿನ ೯೭೩ ಶ್ಲೋಕಗಳೂ ಇವೆ. ವೀರಶೈವರಿಗೆ ಉಪಯುಕ್ತವಾದ ವಿಷಯಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ ಆದುದರಿಂದ ಈ ಆಗಮವು ವೀರಶೈವರ ಆಚಾರ ವಿಚಾರಗಳ ಮೇಲೆ ಬೆಳಕನ್ನು ಕೆಡಹುವದು.

ಈ ಚಂದ್ರಜ್ಞಾನಾಗಮದ ಪ್ರತಿಪಟಲಾಂತ್ಯದಲ್ಲಿರುವ ವಾಕ್ಯಗಳಿಂದ ಇದು ಚಂದ್ರಜ್ಞಾನಾಗಮದ ಉತ್ತರ ಭಾಗವೆಂದೇ ತಿಳಿಯುವದು. ಇದು ಮೂಲಚಂದ್ರಜ್ಞಾನಾಗಮವನ್ನು ಎಷ್ಟರ ಮಟ್ಟಿಗೆ ಹೋಲುವದೆಂಬುದನ್ನು ಇನ್ನೂ ನಿರ್ಣಯಿಸ

ಬೇಕಾಗಿದೆ. ಆದರೆ ಒಂದು ಮಾತನ್ನು ಲಕ್ಷ್ಯದಲ್ಲಿಡಬೇಕು. ಮೂಲಚಂದ್ರಜ್ಞಾನಾಗಮಕ್ಕು ಇದಕ್ಕೂ ಇರುವ ಹೋಲಿಕೆಗಳಲ್ಲಿ (೧) ಎರಡರಲ್ಲಿಯೂ ಅನಂತರುದ್ರನು ಬೃಹಸ್ಪತಿಗೆ ಉಪದೇಶ ಮಾಡಿರುವನು; (೨) ಎರಡೂ ಅನುಷ್ಟುಪ್ ಛಂದಸ್ಸಿನಲ್ಲಿವೆ, ಎಂಬಿವು ಮಹತ್ವದವು. ಇವು ಇವೆರಡೂ ಒಂದೇ ಆಗಿರಬೇಕೆಂಬ ಮಾತಿಗೆ ಪೋಷಕವಾಗಿವೆ.

ಇದರ ಕಾಲವನ್ನು ಎಷ್ಟು ಹಿಂದೆ ಒಯ್ಯಬೇಕೆಂಬುದೂ ಒಂದು ಪ್ರಶ್ನೆ. ಈ ಚಂದ್ರಜ್ಞಾನಾಗಮದಲ್ಲಿ ಬಂದ–

[5] ಶಬ್ದಾದಯೋ ಅಪಿ ಗೃಹ್ಯಂತೇ ಕ್ರಿಯಂತೇ ವಚನಾದಯಃ |
ಅವಿಲಂಘ್ಯಾ ಹಿ ಸರ್ವೇಷಾಮಾಜ್ಞಾ ಶಂಭೋರ್ಗರೀಯಸೀ ||

ಈ ಶ್ಲೋಕವನ್ನು ಚೌಡದಾನಪುರದ ಶಿಲಾಶಾಸನದ ಪ್ರಾರಂಭದ ಸ್ತುತಿ ಪದ್ಯದಲ್ಲಿ ಕಾಣಬಹುದು.[6] ಈ ಶಾಸನದಲ್ಲಿ ಕ್ರಿ. ಶ. ೧೧೯೮, ೧೨೨೫, ೧೨೫೯, ೧೨೬೨ ಈ ವರ್ಷಗಳಲ್ಲಿ ಕೊಟ್ಟ ದಾನಗಳ ಉಲ್ಲೇಖವಿದೆ. ಈ ಶಾಸನವು ದೇವಗಿರಿ ಯಾದವ ವಂಶದ ಮಹಾದೇವನ ರಾಜ್ಯದ ಮೂರನೆಯ ವರ್ಷದಲ್ಲಿ ಹುಟ್ಟಿದೆ. ಆದುದರಿಂದ ಇದರ ಕಾಲ ಕ್ರಿ. ಶ. ೧೨೬೨. ಈ ಶ್ಲೋಕವನ್ನು ಆಗಮದಿಂದ ತೆಗೆದುಕೊಂಡ ಪಕ್ಷದಲ್ಲಿ ಈ ಆಗಮದ ಕಾಲ ಕ್ರಿ. ಶ. ೧೨೬೨ಕ್ಕೂ ಹಿಂದೆ ಹೋಗುವದು. ಈ ಆಗಮವು ಹಲವು ದೃಷ್ಟಿಯಿಂದ ಮಹತ್ವದ್ದಾಗಿದೆ. ಇದರಲ್ಲಿ ವೀರಶೈವರ ಅಷ್ಟಾವರಣ[7], ಪಂಚಾಚಾರಗಳ[8] ವಿವರ ಸಾಕಷ್ಟು ಬಂದಿದೆ. ಷಟ್‌ಸ್ಥಲದ ಉಲ್ಲೇಖವಿದೆ[9]; ಅರವತ್ತುನಾಲ್ಕು ಶೀಲಗಳನ್ನು ಹೇಳಿದೆ.[10] ವೀರಶೈವ ಶಬ್ದದ ವ್ಯಾಖ್ಯೆಯಿದೆ[11]; ಲಿಂಗಧಾರಿಗಳಾದ ವೀರಶೈವರನ್ನು ದಹನ ಮಾಡಬಾರದು,[12] ಭೂಮಿಯಲ್ಲಿ ಸಮಾಧಿ ಮಾಡಬೇಕು ಎಂದಿದೆ; ದೀಕ್ಷಾತ್ರಯದ ಉಲ್ಲೇಖವಿದೆ[13]; ಗುರುವಿನ ಮಹತ್ವ ಬಂದಿದೆ; ೧೪ ಹರ ಮುನಿದರೆ ಗುರು ಕಾಯುವನು, ಗುರು ಮುನಿದರೆ ಹರ ಕಾಯಲಾರನೆಂದಿದೆ; ೧೫ ವೀರಶೈವರಲ್ಲಿ ಈಗಲೂ ಬಳಕೆಯಲ್ಲಿರುವ ಅನೇಕ ವಿಷಯಗಳು ಬಂದಿವೆ.

೭. ಗುರುರ್ಲಿಂಗಂ ಜಂಗಮಶ್ಚ ತೀರ್ಥಂ ಚೈವ ಪ್ರಸಾದಕಃ
ಭಸ್ಮರುದ್ರಾಕ್ಷ ಮಂತ್ರಾಶ್ಚೇತ್ಯಷ್ಟಾವರಣ ಸಂಜ್ಞಿತಾಃ
ಇಮಾನಿ ಶಿವ ಭಕ್ತಾನಾಂ ಭವದೋಷತತೇಃ ಸದಾ ।
ನಿವಾರಣೈಕ ಕಾರ್ಯಾಣಿ ಖ್ಯಾತಾನ್ಯಾವರಣಾಖ್ಯಯಾ ||
—ಪಾದ ೧. ಪಟಲ ೨. ಶ್ಲೋಕ ೩-೪.

---

೫ ಪಟಲ-೧, ಶ್ಲೋಕ-೨೧.

೬. Studies in Inscriptions II, Journal of Karnatak University (Humamities) Vot· II, No· II P· 74 Text lines 2-3

೮. ಲಿಂಗಾಚಾರಃ ಸದಾಚಾರಃ ಶಿವಾಚಾರಸ್ತಥೈವ ಚ।
ಭೃತ್ಯಾಚಾರೋ ಗಣಾಚಾರಃ ಪಂಚಾಚಾರಾಃ ಪ್ರಕೀರ್ತಿತಾಃ ॥
ಗುರುಣಾ ದತ್ತಲಿಂಗಾದ್ವೈ ನಾಸ್ತಿ ದೈವಂ ಮಹೀತಲೇ।
ಇತಿ ಭಾವಾನುಸಂಧಾನಂ ಲಿಂಗಾಚಾರಃ ಸ ಉಚ್ಯತೇ ॥

—ಪಾದ ೧. ಪಟಲ ೯. ಶ್ಲೋಕ ೪-೫.

ಅಷ್ಟಾವರಣಗಳ ವಿವರವನ್ನು ಪಾದ ೧. ಪಟಲ ಎರಡರಿಂದ ಪಟಲ ಎಂಟರವರೆಗೆ, ಪಂಚಾಚಾರಗಳ ವಿವರವನ್ನು ಪಾದ ೧ ಪಟಲ ಒಂಬತ್ತರಲ್ಲಿ ಕೊಟ್ಟಿದೆ; ನೋಡಬೇಕು.

೯. ಲಿಂಗಾಂಗಸ್ಥಲ ಭೇದಜ್ಞಃ ಷಟ್‌ಸ್ಥಲಜ್ಞಾನ ತತ್ಪರಃ।
ದೀಕ್ಷಾಕರ್ಮಾದಿಕುಶಲಃ ಷಡಧ್ವಜ್ಞಾನವತ್ಸಲಃ ॥

—ಪಾದ ೧, ಪಟಲ ೨. ಶ್ಲೋಕ ೫೧.

೧೦. ಅನಂತರೂಪಂ ದೇವಸ್ಯ ಭಾವಯನ್ನಿಜರೂಪತಃ
ಶಿವಾನಂದವಶಾದ್ವಿಶ್ವಮಾತ್ಮಾನಂ ವಿಸ್ಮರನ್ನಪಿ ॥
ಯಸ್ತಿಷ್ಠತ್ಯಚಲಃ ಶೀಲಂ ಚತುಷ್ಷಷ್ಟಿಕ ಮೀರಿತಂ।
ಯಶ್ಚತುಷ್ಷಷ್ಟಿಕ ಶೀಲಾಢ್ಯಃ ಶಿವ ಏವ ನ ಚಾಪರಃ ॥

—ಪಾದ ೧. ಪಟಲ ೯, ಶ್ಲೋಕ ೧೨೨-೧೨೩.

೧೧. ಇಷ್ಟಲಿಂಗ ವಿಯೋಗೇ ವಾ ವ್ರತಾನಾಂ ವಾ ಪರಿಚ್ಯುತೌ।
ತೃಣವತ್ ಪ್ರಾಣಸಂತ್ಯಾಗ ಇತಿ ವೀರವ್ರತಂ ಮತಂ ॥
ಭಕ್ತ್ಯುತ್ಸಾಹ ವಿಶೇಷೋಽಪಿ ವೀರತ್ವಮಿತಿ ಕಥ್ಯತೇ।
ವೀರವ್ರತ ಸಮಾಯೋಗಾದ್ವೀರಶೈವಂ ಪ್ರಕೀರ್ತಿತಂ ॥

—ಪಾದ ೧, ಪಟಲ ೧೦. ಶ್ಲೋಕ ೩೩-೩೪.

೧೨. ಶಿವಲಿಂಗಧರೋ ವಿಪ್ರೋ ವಿಪನ್ನಸ್ತಂ ನ ದಾಹಯೇತ್।
ಯದಿ ವಾ ದಾಹಯೇತ್ತಸ್ಯ ಬ್ರಹ್ಮಹತ್ಯಾ ಸದಾ ಭವೇತ್ ॥
ಗೃಹೀ ವಾಥ ಯತಿರ್ವಾಪಿ ಲಿಂಗಧಾರೀ ತನುಂ ತ್ಯಜೇತ್।
ನ ದಹೇತ್ತಸ್ಯ ದೇಹಂ ತು ಸಮಾಧೌ ಗೋಪಯೇತ್ತದಾ ॥

—ಪಾದ ೨. ಪಟಲ ೧. ಶ್ಲೋ. ೯-೧೩.

೧೩. ಇಷ್ಟಂ ಸ್ಥೂಲತನೋಃ ಪ್ರೋಕ್ತಂ ಪ್ರಾಣಂ ಸೂಕ್ಷ್ಮತನೋಃ ಸ್ಮೃತಂ
ಭಾವಾಖ್ಯಂ ಕಾರಣಸ್ಯೈವಂ ತನುತ್ರಯಗತಂ ತ್ರಯಂ
ಆಣವಂ ಮಾಯಿಕಂ ಚೈವ ಕಾರ್ಮಿಕಂ ಚ ಯಥಾಕ್ರಮಂ
ಮಲತ್ರಯಮನಾದೀದಂ ತನುತ್ರಯಗತಂ ಭವೇತ್
ತನುತ್ರಯಗತಾನಾದಿ ಮಲತ್ರಯಮಿದಂ ಗುರುಃ
ದೀಕ್ಷಾತ್ರಯೇಣ ನಿರ್ದಗ್ಧ್ವಾ ಲಿಂಗತ್ರಯಮುಪಾದಿಶೇತ್

—ಪಾದ ೧. ಪಟಲ ೩. ಶ್ಲೋ. ೯೫, ೪೬, ೪೭.

ಶಾಂಭವ ದೀಕ್ಷೆಯ ವಿವರವನ್ನು ಇದೇ ಪಟಲದಲ್ಲಿ ನೋಡಬಹುದು.

೧೪-೧೫ ಶಿವೇ ರುಷ್ಟೇ ಗುರುಸ್ತ್ರಾತಾ ಸ ರುಷ್ಟೇ ನಿಜ ಸದ್ಗುರೌ
ತ್ರಾತಾ ಶಿವಸ್ತದೇತಸ್ಮಾದ್ಗುರು ಪೂಜಾರತೋ ಭವೇತ್
—ಪಾದ ೧. ಪಟಲ ೩. ಶ್ಲೋ. ೮೩,

ಆರ್ಯಧರ್ಮದ ಸಂಪ್ರದಾಯವನ್ನನುಸರಿಸುವ ಹಲಕೆಲವು ವಿಷಯಗಳು ಅಲ್ಲಲ್ಲಿ ಕಂಡುಬಂದರೂ ವಚನ ಶಾಸ್ತ್ರಕಾರರ ಉದಾರಮತವೂ ಪ್ರತಿಪಾದಿತವಾಗಿರುವದು. ಗುರುಗಳ ಲಕ್ಷಣವನ್ನು ಹೇಳುವಾಗ ಈಗ ಸಾಮಾನ್ಯವಾಗಿ ರೂಢಿಯಲ್ಲಿರುವ

ಗುರವೋ ಬಹವಃ ಸಂತಿ ಶಿಷ್ಯವಿತ್ತಾಪಹಾರಕಾಃ
ದುರ್ಲಭೋಽಯಂ ಗುರುರ್ಲೋಕೇ ಶಿಷ್ಯಹೃತ್ತಾಪಹಾರಕಃ ||

ಎಂಬ ಈ ಶ್ಲೋಕವು ಈ ಆಗಮದ ಪಟಲ ೨ ಶ್ಲೋಕ ೨೪ ರಲ್ಲಿ ಬಂದಿದೆ. ಸನಾತನ ಸಂಪ್ರದಾಯದಂತೆ ಆಹ್ನಿಕವಿಧಿ, ವರ್ಣಾಶ್ರಮಧರ್ಮಾವಶ್ಯಕತಾ, ಔರ್ಧ್ವದೇಹಿಕ ವಿಧಿ, ಪ್ರಕೀರ್ಣಕವಿಧಿ, ಅಶೌಚಶುದ್ಧಿ, ಪ್ರಾಯಶ್ಚಿತ್ತವಿಧಿ, ಮೊದಲಾದ ವಿಧಿಗಳು ಸನಾತನ ಆರ್ಯಧರ್ಮದ ಅವಶೇಷಗಳಾಗಿವೆ. ಆದುದರಿಂದ ಚಂದ್ರಜ್ಞಾನಾಗಮದ ಈ ಭಾಗವು ಬಸವಾದಿ ಪ್ರಮಥರ ಕಾಲಕ್ಕೂ ಹಿಂದಿನದಾಗಿರಬೇಕೆಂದು ಊಹಿಸಲವಕಾಶವಿದೆ. ಇದು ಆ ಕಾಲದ ವೀರಶೈವರ ಧರ್ಮದ ಬಗೆಗೆ ಕೆಲವು ಮಟ್ಟಿಗೆ ಪ್ರಕಾಶವನ್ನು ಚೆಲ್ಲುವದರಿಂದ ಮಹತ್ವದ್ದೂ ಮತ್ತು ಸಂಶೋಧನೆಗೆ ಅರ್ಹವಾದುದೂ ಆಗಿದೆ. ವೀರಶೈವ ಧರ್ಮದ ಕಾಲ, ಅದರ ಆಚಾರ-ವಿಚಾರಗಳ ಸಂಶೋಧನೆಯ ಕಡೆಗೆ ವೀರಶೈವ ವಿದ್ವಾಂಸರ ದೃಷ್ಟಿಯನ್ನು ಸೆಳೆಯಬೇಕೆಂಬ ಉದ್ದೇಶದಿಂದ ಈ ಚಿಕ್ಕ ಲೇಖನವನ್ನು 'ವಿಭೂತಿ'ಯ ಪ್ರೋತ್ಸಾಹವನ್ನು ಪಡೆದು ಬರೆಯಲಾಗಿದೆ.

"ತಂ ಸಂತಃ ಕ್ಷಂತುಮರ್ಹಂತಿ ಸದಸದ್ವ್ಯಕ್ತಿ ಹೇತವಃ"

---

|| ಓಂ ||

ಭಾಷ್ಯಾಚಾರ್ಯ, ಷಟಸ್ಥಲ ಬ್ರಹ್ಮ, ಘನಲಿಂಗ ಚಕ್ರವರ್ತಿ

# ಶ್ರೀ ಸದಾಶಿವ ಶಿವಾಚಾರ್ಯರು

**ಶ್ರೀ ಗುರು ಕುಮಾರಾಶ್ರಮ ಅವರ ದಿವ್ಯ ಸನ್ನಿಧಿಗೆ**

**ಚಿಕ್ಕಮಗಳೂರು ಜಿಲ್ಲಾ, ಕಡೂರು ತಾಲ್ಲೂಕು, ಗಿರಿಯಾಪುರ ಗ್ರಾಮದ ಶಿಷ್ಯಮಂಡಳಿಯು ಷಷ್ಟ್ಯಬ್ಧ ಮಹೋತ್ಸವದ ಶುಭ ಸಮಯದಲ್ಲಿ ಸಮರ್ಪಿಸಿದ**

**ಭಕ್ತಿ ಬಿನ್ನವತ್ತಳೆ**

●

ಪರಮ ಪೂಜ್ಯರೆ,

ಇಂದಿಗೆ ಇಪ್ಪತ್ತೈದು ವರುಷಗಳ ಹಿಂದೆ ಕಪ್ಪುಕತ್ತಲೆ ಕವಿದು ನಮ್ಮನ್ನು ನಾವೇ ಮರೆತಿರುವಾಗ, ಮಲಗಿ ನಿದ್ದೆ ಹೋಗಿರುವಾಗ, ನೀವು ಹುಣ್ಣಿಮೆಯ ಚಂದ್ರನಂತೆ ಮೈದುಂಬಿ ಕಳೆದುಂಬಿ ಗಿರಿಯಾಪುರಕ್ಕೆ ಆಗಮಿಸಿದಿರಿ. ಬೆಳುದಿಂಗಳ ಬೀರಿದಿರಿ. ಅಂದಿನಿಂದ ಇಂದಿನವರೆವಿಗೂ ಅಚ್ಚಳಿಯದೆ ಹೆಚ್ಚುತ್ತ ಸಚ್ಚಿದಾನಂದದ ಬೆಳಗಿನಲಿ ಬೆಳಗುತ್ತಿರುವಿರಿ.

ಈ ಅವಧಿಯಲ್ಲಿ ನಮ್ಮೆಲ್ಲರ ಬಾಳಬೇಗುದಿ ಆರಿಸುವ ತಂಗಾಳಿ ತೀಡಿದೆ. ಕಣ್ಣ ಕತ್ತಲೆಯ ಕಳೆವ ಮಿಂಚು ಸಂಚರಿಸಿದೆ. ದುರ್ಬಲತೆಯ ದೂಡುವ ಶಕ್ತಿ ಸಂಭವಿಸಿದೆ. ಆಚಾರ ವಿಚಾರಗಳ ಚೈತನ್ಯೋದಯವಾಗಿದೆ.

ತಾವಿಲ್ಲಿಗೆ ಬಿಜಯಂಗೈಸಿದ ಬಳಿಕ ಶಾಂತಿಧಾಮವಾದ **ಶ್ರೀ ಗುರು ಕುಮಾರಾಶ್ರಮದ** ಸ್ಥಾಪನೆಯಾಯಿತು. ಕನ್ನಡ ಸಾಹಿತ್ಯ ಕೃತಿಗಳ ನಿರ್ಮಾಣವಾಯಿತು. ಶೈವರತ್ನೋಪನಿಷತ್ ಸದಾಶಿವ ಭಾಷ್ಯವು ವೈದಾಳಿ ಮೇರುಕೃತಿಯಾಗಿ ಮೆರೆಯಿತು. ಶಿವಾದ್ವೈತ ತತ್ತ್ವ ಪ್ರಚಾರ ಸಮಿತಿ ರಚನೆಯಾಗಿ

ಹನ್ನೆರಡು.ವರ್ಷಗಳಿಂದ ಜ್ಞಾನಾನುಭವಗಳ ದಿವ್ಯಾರಾಧನೆಯೊಡನೆ ನಡೆದು ಬರುವಂತಾಯಿತು. ನಾಡಕಲೆ, ಸಾಹಿತ್ಯ, ಸಂಗೀತಾದಿಗಳ ಪ್ರೋತ್ಸಾಹ ಸಾಗುವಂತಾಯಿತು. **'ಕಾರಣಿಕ ಕುಮಾರಯೋಗಿ'** ಯಂತಹ ಬೇರೆ ಬೇರೆ ಗ್ರಂಥಗಳ ಪ್ರಚಾರವಾಯಿತು. ನೀತಿ ರೀತಿ ಶೀಲ ಸದಾಚಾರಗಳ ಅರಿವು ಅಳವಡುವಂತಾಯಿತು ಹೆಚ್ಚೇನು ಕುರುಡರಿಗೆ ಕಣ್ಣು ಬಂದವು. ಮೂಕರಿಗೆ ಬಾಯಿ ಬಂದವು. ಅನಾತ್ಮರಿಗೆ ಆತ್ಮಬಲವೊದಗಿತು. **ಗಿರಿಯಾಪುರ ಗ್ರಾಮವು** ಇಡೀ ನಾಡಿನ ತುಂಬ ತಮ್ಮಿಂದಾಗಿ ಗೌರವ ಪಡೆಯಿತು.

ಸದಾಶಿವ ಸ್ವರೂಪಿಗಳೆ,

ನಮಗಿಂದು ಒಂದು ಮಹಾ ಸಂಭ್ರಮದ ಸುದಿನವಾಗಿ ಪರಿಣಮಿಸಿದೆ. ತಮಗಿಂದಿಗೆ ಅರವತ್ತು ತುಂಬಿದ ಪರ್ವದಿನ. ಇದು ಈಗ ನಮಗೆಲ್ಲ ನವೋತ್ಸಾಹದ ದಿನ. ನವೋಲ್ಲಾಸದ ದಿನ. ನವ ಚೇತನದ ನವ ಪ್ರಾತಃಸ್ಮರಣೆಯ ದಿನ. ಮಂಗಳಮಯ ದಿನ.

ಶಾಂತಿ ಕಳಾಗುರುವೆ,

ಎಡೆಬಿಡದೆ ಜನತೆಯ ಮತ್ತು ಜೀವನದ ಉದ್ಧಾರಕ್ಕಾಗಿ ಉತ್ತಮೋತ್ತಮ ಮಾರ್ಗಗಳಿಂದ ಸಮರ್ಪಕವಾಗಿ ಶ್ರಮಿಸುತ್ತಿರುವ ನೀವೇ ನಿಜಕ್ಕೂ ಜಗದ್ಗುರುಗಳು. 'ಶಿವಾದ್ವೈತ ತತ್ತ್ವ ಪ್ರಚಾರಕ ಸಮಿತಿ' ಸಂಸ್ಥಾಪಕರಾಗಿ, ಸದ್ಗ್ರಂಥ ರಚಕರಾಗಿ, ಶಿವಾರ್ಚನರತರಾಗಿ ಜಾಗ್ರದವಸ್ಥೆಯನ್ನು ಜಯಿಸಿದ್ದೀರಿ. ಶೀಲಾಚರಣೆಯಿಂದ, ಕೇವಲ ಸಾತ್ವಿಕ ಪ್ರಸಾದಾರ್ಪಣದಿಂದ, ಸತ್ವಗುಣ ಸಂಪಾದನೆಯಿಂದ ಸ್ವಪ್ನಾವಸ್ಥೆಯ ಶುದ್ಧವಿಸಿದ್ದೀರಿ. ಶಿವಾನುಭಾವದ ಮನನ ನಿಧಿಧ್ಯಾಸನಾದಿಗಳಿಂದ ನಿದ್ರಾವಸ್ಥೆಯ ಗೆದ್ದಿರುವಿರಿ. 'ಅವಸ್ಥಾತ್ರಯಮಂ ಗೆದ್ದಾತನೆ ಜಗದ್ಗುರು ಪಕ್ಕುಂ'–ಎಂಬ ನಿಜಗುಣರ ನಲ್ನುಡಿ ನಿಜಕ್ಕೂ ನಿಮ್ಮಲ್ಲಿ ಸಾರ್ಥಕಗೊಂಡಿದೆ. ನೀವು ಶಿವಾತ್ಮವಿದ್ಯಾಗುರುವಾಗಿ ಜಗದ್ಗುರುವಾಗಿ ರಾರಾಜಿಸುತ್ತಿರುವಿರಿ.

ಇಂತಹ ತಮ್ಮನ್ನು ಪಡೆದ ನಾಡು ಧನ್ಯ; ನಾವು ಧನ್ಯ. ತಪೋಧನರಾದ ತಮ್ಮಿಂದ ನಾಡಿಗೆ ಭಾಗ್ಯ; ನಮಗೆ ಸೌಭಾಗ್ಯ. ತಮ್ಮಿಂದಲೇ ನಮ್ಮ ಎಲ್ಲ ಭಾಗ್ಯೋದಯ. ಎಂದೆಂದಿಗೂ ಬೇಡುವೆವು ತಮ್ಮ ಸೇವೆ ಸಲ್ಲಿಸುವ ಶಕ್ತಿ ಸೌಭಾಗ್ಯಗಳ ಅಭಯ.

ಶಿವಾತ್ಮ ವಿದ್ಯಾಗುರುವೆ,

ಇಂದಿನದು ವಿಜ್ಞಾನಯುಗ. ಈ ವಿಜ್ಞಾನವನ್ನು ವೀಕ್ಷಿಸುವ ವಿದ್ಯಾನೇತ್ರ ಜನತೆಗೆ ಅಗತ್ಯ. ಅದರಲ್ಲಿಯೂ ನಾಳಿನ ಹಿರಿಯರಾಗಲಿರುವ ಕಿರಿಯ ಮಕ್ಕಳಿಗೆ

ಇನ್ನೂ ಅತ್ಯಗತ್ಯ. ಇದಕ್ಕಾಗಿ ಇಂದು ನಮಗೊಂದು ಪ್ರೌಢಶಾಲೆ ಬೇಕೆಂದು ಪ್ರಭುಗಳವರಲ್ಲಿ ಪ್ರಾರ್ಥಿಸಿದ್ದೇವೆ. ಅದು ಆಶ್ರಮದಲ್ಲಿಯೆ ಆರಂಭವಾಗಿ ಅಭಿವೃದ್ಧಿಯಾಗಬೇಕೆಂದು ಆಶಿಸಿದ್ದೇವೆ. ಜೊತೆಗೆ **ಪ್ರಸಾದ ನಿಲಯ**ವೊಂದರ ಅನುಗ್ರಹವಾಗಬೇಕೆಂದು ಬೇಡುತ್ತೇವೆ. ನಮ್ಮೀ ಎರಡು ಬಯಕೆಗಳೂ ಈಡೇರಿವಂತೆ ಕರುಣಿಸಬೇಕಾಗಿ ತಮ್ಮಲ್ಲಿ ಕರಜೋಡಿಸಿ ಬೇಡಿಕೊಳ್ಳುತ್ತೇವೆ.

ತಮಗೀಗ ಅರುವತ್ತು ವರುಷ ತುಂಬಿತು. ನೂರು ವರುಷ ತುಂಬಿ ಬರಲಿ, ನಿಡುಗಾಲ ನಮಗೆ ಇದೇ ರೀತಿ ನವಪ್ರಕಾಶವೀಯುತ್ತ ಹರಸುವಂತಾಗಲಿ- ತಮ್ಮ ಚರಣಕಿರಣ ನಮ್ಮ ಹೃದಯಹರಣ ಸ್ಫುರಣಗೊಳಿಸಲಿ. ನಮ್ಮ ಹೃದಯಕೋಶಗಳಲಿ ತಮ್ಮ ಹಸಾದ ನಡೆನುಡಿ ಮುತ್ತುರನ್ನಗಳು ತುಂಬಿ ತುಳುಕಲಿ–ಎಂದು ಹೃದಯಾರೆ ಹರನಲ್ಲಿ ಪ್ರಾರ್ಥಿಸುತ್ತೇವೆ. ಇದುವೆ ನಮ್ಮ **ಭಕ್ತಿ ಭಿನ್ನವತ್ತಳೆ!**

**ಗಿರಿಯಾಪುರ ಗ್ರಾಮದ ಶಿಷ್ಯಮಂಡಳಿ.**

ಜಗದ್ಗುರು ಪಂಡಿತಾಚಾರ್ಯ ಪ್ರಸನ್ನ.

" ಮನದೊಡಯ ಮನೆಗೆ ಬಂದರೆ
ಕನಕದ ತೋರಣವ ಕಟ್ಟಿ, ಷಡು ಸಮ್ಮಾರ್ಜನೆಯ ಮಾಡಿ,
ಉಘೇ ಚಾಂಗು ಭಲಾ ಎಂಬೆನು
'ಓ ಭಾಷ್ಯಾಚಾರ್ಯ-ಗುರುವರ್ಯ, ನೀವು ಬಿಜಯಂಗೆಯ್ದರೆ'
ಉಬಿ ಕೊಬಿ ನಲಿನಲಿದಾಡುವೆ"

ಸಖರಾಯ ಪಟ್ಟಣ ಮಠಾಧ್ಯಕ್ಷರೂ ಗಿರಿಯಾಪುರ ಗುರುಕುಮಾರಾಶ್ರಮ
ನಿರ್ಮಾಪಕರೂ 'ಶಿವಾದ್ವೈತ ತತ್ವ ಪ್ರಚಾರ ಸಮಿತಿ' ಸಂಸ್ಥಾಪಕರೂ
ಸಂಚಾಲಕರೂ ಆದ

# ಶ್ರೀ ಮ. ಲಿಂ. ಚ. ಸದಾಶಿವ ಶಿವಾಚಾರ

## ಮಹಾಸ್ವಾಮಿಗಳವರ ಸನ್ನಿಧಿಗೆ



ಪರಮಪೂಜ್ಯರೇ,

ತಾವು ನಮ್ಮ ಕರುಳ ಕರೆಯನ್ನು ಅಂಗೀಕರಿಸಿ ಕರುಣಾಕಟಾಕ್ಷದಿಂದ ಇಲ್ಲಿಗೆ ಶಿಷ್ಯಮಂಡಳಿಯೊಡನೆ ಆಗಮಿಸಿ ಇಂದು ಈ "ಹದಿನಾರನೆಯ ವಾರ್ಷಿಕೋತ್ಸವ"ದ ಅಧ್ಯಕ್ಷ ಪೀಠವನ್ನು ಅಲಂಕರಿಸಿವುದು ನಮಗೂ ನಮ್ಮ ಸಂಸ್ಥಾನದ ಶಿಷ್ಯ ಸಮುದಾಯಕ್ಕೂ ಸಾತಿಶಯ ಸಂತೋಷವನ್ನುಂಟುಮಾಡಿದೆ.

ಎಲೆ ಮರೆಯ ಫಲದಂತಿರುವ ತಮ್ಮ ಜೀವನ ಮಹೋನ್ನತವಾದುದು; ಬಹುಮುಖವಾದುದು. ಯೋಗ ಶಿವಯೋಗಗಳಲ್ಲಿ ತಮಗಿರುವ ಆಸಕ್ತಿ–ಅಗಾಧ ಶಕ್ತಿಗಳನ್ನು ಬಣ್ಣಿಸಲಾರೆವು. ವೈದುಷ್ಯ–ವಿನಯ ಶ್ರೀಯನ್ನು ಅಳೆಯಲಾರೆವು;

ಶೀಲ-ಸತ್ಕ್ರಿಯೆಗಳ ಆಳವನ್ನು ಆಟುಕಿಸಲಾರೆವು. ಕ್ರಿಯಾಶಕ್ತಿ, ಇಂದ್ರಿಯ ಶುದ್ಧಿ, ಭಾವಸಿದ್ಧಿ ಸಮಾಜ-ಸಂಸ್ಕೃತಿ-ವಾತ್ಸಲ್ಯಗಳ ಎತ್ತರವೇನು, ಬಿತ್ತರವೇನು? ಬಿತ್ತರಿಸಲು ಸಾಧ್ಯವಿಲ್ಲ.

ಎಲ್ಲ ಶಿವಾಚಾರ್ಯರಂತೆ ತಮಗೂ ಮಠಮಾನ್ಯಗಳಿದ್ದರೂ ಅವುಗಳ ಹಂಗಿಗೊಳಗಾಗದೆ ಹಗರಣಕ್ಕೀಡಾಗದೆ ಏಕಾಂತತೆಯನ್ನು ಪ್ರಶಾಂತತೆಯನ್ನು ಬಯಸಿ ಗಿರಿಯಾಪುರದ ಬಳಿ 'ಗುರುಕುಮಾರಾಶ್ರಮ' ವೊಂದನ್ನು ಸ್ಥಾಪಿಸಿ ಸ್ಥಿತಪ್ರಜ್ಞರಾಗಿ ಅಲ್ಲಿಯೇ ನೆಲೆ ನಿಂತು ಘನತಪವಾಂತು ಶೋಭಿಸುತ್ತಿರುವುದೇ ತಮ್ಮ ಯೋಗ-ಶಿವಯೋಗಾಸಕ್ತಿ-ಶಕ್ತಿಗಳಿಗೆ ನಿದರ್ಶನವಾಗಿದೆ. ನೂರೆಂಟು ಉಪನಿಷತ್ತುಗಳಲ್ಲಿ ಒಂದಾದ 'ಕೈವಲ್ಯೋಪನಿಷತ್ತಿ'ಗೆ ಸಂಸ್ಕೃತ ಭಾಷೆಯಲ್ಲಿ ಭಾಷ್ಯವನ್ನು ಬಿತ್ತರಿಸಿದುದು ಮತ್ತು ಆ ಭಾಷ್ಯಾರಂಭದಲ್ಲಿ 'ವಿಜ್ಞಾಪನಾ' ಎಂದು ಬರೆದುದು ಇವು ತಮ್ಮ ವೈದುಷ್ಯ-ವಿನಯಗಳಿಗೆ ಹೆಗ್ಗುರುಹುಗಳಾಗಿವೆ. ಜನತೆಯ ನಡೆ-ನುಡಿಗಳನ್ನು ತಿದ್ದಲು ತಾವು ಕ್ರಿ. ಶ. ೧೯೫೦ ರಲ್ಲಿ "ಶಿವಾದ್ವೈತ ತತ್ವ ಪ್ರಚಾರ ಸಮಿತಿ" ಯೊಂದನ್ನು ರಚಿಸಿ ವರುಷಕ್ಕೊಮ್ಮೆ ನಾಡಿನ ವಿದ್ವಾಂಸರನ್ನು ಕಲಾವಿದರನ್ನು ಅನುಭಾವಿಗಳನ್ನು ಮಹಾನುಭಾವಿಗಳನ್ನು ಆಹ್ವಾನಿಸಿ, ಸೂಕ್ತ ಕಾರ್ಯಕ್ರಮಗಳನ್ನು ಆಚರಿಸಿ ಯಾವ ಕೊರತೆಯಿಲ್ಲದಂತೆ ಸಮ್ಮೇಳನವನ್ನು ಸಂತೃಪ್ತಿಕರವಾಗಿ ನಡೆಯಿಸಿಕೊಂಡು ಬರುತ್ತಿರುವ ತಮ್ಮ ಕ್ರಿಯಾಶಕ್ತಿ ಸಣ್ಣದಲ್ಲ.

ಶಿವಾಚಾರ್ಯರೇ,

ಸಂಸ್ಕಾರವೇ ಸಮಾಜದ ಜೀವನಾಡಿ. ಆ ಸಂಸ್ಕಾರಗಳನ್ನು ಉಗ್ಗಡಿಸುವ ವಿಧಿಗಳು ಪರಿಶುದ್ಧವಾಗಿ ಪರಿಪೂರ್ಣವಾಗಿ ಇರಬೇಕೆಂದು ಭಾವಿಸಿ, ಪೂಜಾವಿಧಿ, ದೀಕ್ಷಾವಿಧಿಗಳನ್ನು ಸಮಗ್ರ ಶುದ್ಧಿಯಿಂದ ಬರೆದು ಸಮಾಜವನ್ನು ಉದ್ಧರಿಸಿರುವಿರಿ. ಭಕ್ತಿಗೀತೆ, ವೀರಶೈವ ಸಂಸ್ಕೃತಿಗಳನ್ನು ಬರೆದು ಸಾಮಾಜಿಕರ ಮನ-ಬುದ್ಧಿಗಳಿಗೆ ಶಾಂತಿ-ಕ್ರಾಂತಿಗಳನ್ನು ಕಲ್ಪಿಸಿರುವಿರಿ. ಕೈವಲ್ಯೋಪನಿಷತ್ತಿಗೆ ಭಾಷ್ಯವನ್ನು ಬರೆದು ಭಾಷ್ಯಕಾರರಾಗಿರುವಂತೆ 'ಕುಮಾರೇಶ್ವರ ವಚನ' ಬರೆದು ಆಧುನಿಕ ವಚನಕಾರರೂ ಆಗಿರುವಿರಿ. ಅರುವಿನ ಬೋಧೆ, ನಡೆನುಡಿಯ ಪದ್ಯಮಾಲೆಗಳೆಂಬ ಪುಟ್ಟ ಪುಸ್ತಕಗಳನ್ನು ಬರೆದು ಹೆಣ್ಣು ಮಕ್ಕಳನ್ನು ಸಣ್ಣ ಮಕ್ಕಳನ್ನು ಬೋಧಿಸಿ ಅವರನ್ನು ಭವ್ಯ ಪ್ರಪಂಚಕ್ಕೆ ಸುಲಲಿತವಾಗಿ ಕರೆದೊಯ್ಯುವಿರಿ. ಪುರಾತನ ತ್ರಿವಿಧ-ರಗಳೆಗಳನ್ನು ಪರಿಶೋಧಿಸಿ ಪ್ರಕಟಿಸಿರುವಿರಿ. ಹೀಗೆ ತಮ್ಮ ಕರ್ತವ್ಯ ಬಹುವಾಗಿದೆ. ಸಾಹಿತ್ಯ, ಸಾಮಾಜಿಕ, ಆಧ್ಯಾತ್ಮಿಕ ಕ್ಷೇತ್ರಗಳಲ್ಲಿ ತಮ್ಮ ಕೃಷಿಕಾರ್ಯ ವಿಪುಲವಾಗಿ ವಿಶಾಲವಾಗಿ ಮುನ್ನಡೆಯುತ್ತಿದೆ. ಇವೆಲ್ಲ ಕಾರಣಗಳಿಂದ ಇಂದು ತಾವು ಯೋಗಿಗಳಾಗಿ ತಪಸ್ವಿಗಳಾಗಿ ವಿದ್ವಾಂಸರಾಗಿ ವಚನಕಾರರಾಗಿ ಎಲ್ಲಕ್ಕೂ ಹೆಚ್ಚಾಗಿ ಭಾಷ್ಯಕರ್ತರಾಗಿ ಅಖಂಡ ಅಸ್ಮಿತೆಯ ಜ್ಯೋತಿಯಾಗಿ ಬೆಳಗುತ್ತಿರುವಿರಿ.

“ ಉದಧೇರಿವ ರತ್ನಾನಿ ತೇಜಾಂಸೀವ ವಿವಸ್ವತಃ
ಸ್ತುತಿಭ್ಯೋ ವ್ಯತಿರಿಚ್ಯಂತೇ ದೂರಾಣಿ ಚರಿತಾನಿ ಥು ||” —ಕವಿದಾಸ.

ಪಜ್ವಳಿಸುವ ಪೇರ್ಗಡಲ ರನ್ನಗಳನ್ನು ಎಣಿಸಲು ಸಾಧ್ಯವಿಲ್ಲದಂತೆ ತಮ್ಮ ಪಾವನ ಚರಿತೆಯ ಪರಮಗುಣಮಣಿಗಳನ್ನು ವರ್ಣಿಸಲಾರೆವು.

**ಷಟಸ್ಥಲಾನುಭಾವಿಗಳೇ,**

ಆದರೂ ನಮ್ಮದೊಂದು ನಮ್ರ ಅರಿಕೆ : ತಾವು ಭಾಷ್ಯವನ್ನು ಬರೆದು ‘ ಆಚಾರ್ಯ ’ ಪದವನ್ನು ಸಾರ್ಥಕಪಡಿಸಿರುವಿರಿ. ಶಿವಾಚಾರ್ಯ ಸಂಕುಳಕ್ಕೆ ಸತ್ಕೀರ್ತಿಯನ್ನು ತಂದಿರುವಿರಿ. ಶಿವಾದ್ವೈತ ಸಿದ್ಧಾಂತವು ಭಾರತದಲ್ಲಿಲ್ಲ ಏಕೆ ವಿಶ್ವದಲ್ಲೆಲ್ಲ ಪ್ರಚಾರವಾಗುವ ಅನುಕೂಲವನ್ನುಂಟುಮಾಡಿರುವಿರಿ. ಇದರಿಂದ ಸಂತುಷ್ಟರಾದ ನಾವು ತಮ್ಮನ್ನು “ **ಭಾಷ್ಯಾಚಾರ್ಯ** ” ರೆಂದು ಹೃದಯಾರೆ ಕರೆದು ಜಯಘೋಷ ಮಾಡುವುದಲ್ಲದೆ ಮತ್ತೇನನ್ನೂ ಮಾಡದವರಾಗಿದ್ದೇವೆ. ಆ ತಮ್ಮ ಹಿರಿದಾದ ಬಾಳಿಗೆ ಸರಿಯಾಗಿ ಮುಯ್ಯವನ್ನು ಸಲ್ಲಿಸುವ ಶಕ್ತಿ ನಮಗಿಲ್ಲ. ನಮ್ಮೀ ಕಿರಿಯ ನುಡಿಕಾಣಿಕೆಯನ್ನೇ ಹಿರಿದಾಗಿ ಭಾವಿಸಬೇಕೆಂದು ಬೇಡುತ್ತೇವೆ. ಇದನ್ನು ನಾಡಿಗರೆಲ್ಲ ನೇಹದಿಂದ ಬಳಸಬೇಕೆಂದು ಭಕ್ತಿಯಿಂದ ಬಯಸುತ್ತೇವೆ. ಅಲ್ಲದೆ ತಮ್ಮಿಂದೊದಗುತ್ತಿರುವ ತತ್ವ, ಸಂಸ್ಕೃತಿಗಳ ಸೇವೆಯು ಇನ್ನೂ ಮಿಗಿಲಾಗಿ ನಾಡಿಗೆ ಸಲ್ಲಲೆಂದು ತಮ್ಮ ಆಯುರಾರೋಗ್ಯಗಳು ನಿಡುಗಾಲವಿರುವಂತೆ ಅನುಗ್ರಹಿಸಲೆಂದು ಜಗದ್ಗುರು ಪಂಡಿತಾಚಾರ್ಯರನ್ನು ಪ್ರಾರ್ಥಿಸುತ್ತೇವೆ.

೧೫–೬–೧೯೫೫ **ಶ್ರೀಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯರು,**
ಗೂಳೂರು ಶ್ರೀಶೈಲ ಸಂಸ್ಥಾನ ಶ್ರೀ ನಿ. ಶ್ರೀಶೈಲ ಸಂಸ್ಥಾನ ಮತ್ತು ಪೀಠದ ಶಿಷ್ಯ ಮಂಡಳಿ.

# ನಲ್ನುಡಿ

ಸಾಹಿತ್ಯ ಮಾನವ ಜೀವನ ಪುಷ್ಪ. ಸಂಸ್ಕೃತಿ ಮಾನವ ಜೀವನ ಫಲ. ಸಾಹಿತ್ಯ ಅರುಹಿನ ಕುರುಹು. ಸಂಸ್ಕೃತಿ ಅರುಹು ಆಚಾರಗಳೆರಡರ ಕುರುಹು. ಸಂಸ್ಕೃತಿಯುಲ್ಲಿನ ಅರುಹು ಭಾವಗತವಾಗಿರುತ್ತದೆ. ಸಾಹಿತ್ಯ – ಸಂಸ್ಕೃತಿಗಳೆರಡು ಮಾನವ ನಿಷ್ಠವಾದವು. ಮಾನವನಲ್ಲಿ ಅಭಿವ್ಯಕ್ತವಾಗತಕ್ಕವು. ಅವೆರಡನ್ನು 'ಸಂಭೂತಿ' ಎಂದು ಕರೆದರು ಋಷಿಗಳು. ಆ ಸಂಭೂತಿಯನ್ನು ಸಂಪಾದಿಸಿಕೊಂಡ ಪುರುಷನೆ ವಿಭೂತಿ !

ಸಂಭೂತಿಗಳಾದ ಸಾಹಿತ್ಯ ಸಂಸ್ಕೃತಿಗಳುಳ್ಳ ಒಬ್ಬ ಮಹಾ ವಿಭೂತಿ ಪುರುಷನ ಸಂಭಾವನೆಯಾಗಿ ಸಂಜನಿಸದೆ ಈ ಮಹಾ 'ವಿಭೂತಿ' ಕೃತಿ! ಹೀಗಿದ್ದರೂ ವ್ಯಷ್ಟಿ ಸಮಷ್ಟಿಗಳೆರಡರ ವಿಭೂತಿತ್ವವನ್ನು ಒಳಗೊಂಡಿರುವುದೇ ಈ ವಿಭೂತಿ ಕೃತಿಯ ಒಂದು ವೈಶಿಷ್ಟ್ಯ.

ಶಿವಶರಣರ ನೊಸಲಿಗೆ ಹೇಗೆ 'ವಿಭೂತಿ' ಯು ಶೃಂಗಾರವೋ ಹಾಗೆ ಸೂಕ್ಷ್ಮತನುವಿಗೆ ಅವರಲ್ಲಿಯೂ ಬುದ್ಧಿಗೆ ಸಾಹಿತ್ಯವೇ ಶೃಂಗಾರ. ಚೈತನಕ್ಕೆ ಸಂಸ್ಕೃತಿಯೆ ಶೃಂಗಾರ. ಈ ಸಮರ್ಪಣ ಕೃತಿಕರ್ತರು ಈ ತ್ರಿವಿಧ ಶೃಂಗಾರವುಳ್ಳ ಮಂಗಳ ಸ್ವರೂಪಿಗಳು.

ಆ ಮಂಗಳ ಸ್ವರೂಪಿಗಳನ್ನು ತೋರುವ ನಿಲುಗನ್ನಡಿ ಈ ಕೃತಿ. ಇದರಲ್ಲಿರುವ ವ್ಯಕ್ತಿ ಸಂದರ್ಶನ, ಸಮಾಜ ಮತ್ತು ಸಾಹಿತ್ಯ ದರ್ಶನ ರೂಪ ಮೂರು ದಳಗಳು ನಮ್ಮೀ ಮಾತಿಗೆ ಸತ್ಯ ಸಾಕ್ಷಿ !

ನಮ್ಮೀ 'ವಿಭೂತಿ' ಪುರುಷನ ಸಂಸ್ಕೃತಿಯನ್ನು, ಸಾಹಿತಿಗಳ ಸಾಹಿತ್ಯವನ್ನು ತನ್ನೊಡಲೊಳಗಿರಿಸಿಕೊಂಡ ಈ 'ವಿಭೂತಿ' ಕೃತಿ 'ಸಂಭೂತಿ' ಯಾಗಿ ಶೋಭಿಸಲಿ.

**ಶ್ರೀ ಜ. ಚ. ನಿ.**